ಅಖಿಲ ಭಾರತ ೭೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ರುದ್ರಭಟ್ಟ ವಿರಚಿತ

# ಜಗನ್ನಾಥ ವಿಜಯಂ

ಗದ್ಯಾನುವಾದ

ಆಸ್ಥಾನ ವಿದ್ವಾನ್ ಯಂ. ಆರ್. ವರದಾಚಾರ್ಯ



ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು-೧೮

ಅಖಿಲ ಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಕಟಣೆ

ರುದ್ರಭಟ್ಟ ವಿರಚಿತ

# ಜಗನ್ನಾಥ ವಿಜಯಂ

ಗದ್ಯಾನುವಾದ

ಆಸ್ಥಾನ ವಿದ್ವಾನ್ ಯಂ.ಆರ್. ವರದಾಚಾರ್ಯ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

Rudrabhatta Virachita JAGANNATHA VIJAYAM - Original with
Prose rendering by Sri Ashtana Vidwan M.R. Varadacharya
Published by : Kannada Sahitya Parishat
Pampa Mahakavi Road Chamarajapet Bangalore - 560 018
Pages : 658 + iv ; Price : **120-00,** 1999

**ಮುದ್ರಣ : ೧೯೯೯**

**ಬೆಲೆ : ರೂ. ೧೨೦-೦೦**





**ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,**
ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು - ೧೮

# ಅಧ್ಯಕ್ಷರ ನುಡಿ

ಅಖಿಲಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಕನಕಪುರದಲ್ಲಿ ೧೯೯೮ನೇ ಇಸವಿಯ ಫೆಬ್ರವರಿ ತಿಂಗಳ ಕೊನೆಯಲ್ಲಿ ಅತ್ಯಂತ ವೈಭವದಿಂದ ನೆರವೇರಿತು. ಸಮ್ಮೇಳನದ ಸವಿನೆನಪು ಬಹುಕಾಲ ಉಳಿಯುವಂತಹುದು. ಈ ಸಂದರ್ಭದಲ್ಲಿ ೬೭ ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸಬೇಕು, ಅವುಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರ ಕೈಯಲ್ಲಿಡಬೇಕು ಎಂಬುದು ಪರಿಷತ್ತಿನ ಸಂಕಲ್ಪವಾಗಿತ್ತು. ಆ ಸಂಕಲ್ಪದ ಸಾಕಾರವೇ ಈ ಪುಸ್ತಕ.

ಪರಿಷತ್ತು ಈ ಹಿಂದೆ ಮುದ್ರಿಸಿದ್ದ ಅನೇಕ ಉತ್ತಮ ಕೃತಿಗಳ ಮರುಮುದ್ರಣವನ್ನೂ ಒಳಗೊಂಡಂತೆ ೬೭ ಪುಸ್ತಕಗಳನ್ನು ಗ್ರಂಥ ಸಮಿತಿ ಆಯ್ಕೆ ಮಾಡಿತು. ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಗದ್ಯಾನುವಾದಗಳು, ಕನ್ನಡ ಭಾಷೆ, ಲಿಪಿ, ಸಂಸ್ಕೃತಿ ಬಗೆಗಿನ ಗ್ರಂಥಗಳು, ಕವಿ ಕಾವ್ಯ ವಿಚಾರಸಂಕಿರಣಗಳ ಪ್ರಬಂಧಗಳು, ಜೀವನಚರಿತ್ರೆ, ಜಾನಪದ, ಆರೋಗ್ಯವಿಚಾರ ಹೀಗೆ ಮುಂತಾಗಿ ವೈವಿಧ್ಯಮಯ ಪ್ರಕಾರದ ಪುಸ್ತಕಗಳು ಈ ಮಾಲೆಯಲ್ಲಿ ಸೇರಿವೆ.

ಸಮ್ಮೇಳನದ ಸಂದರ್ಭದಲ್ಲಿಯೇ ಈ ಎಲ್ಲ ೬೭ ಪುಸ್ತಕಗಳನ್ನು ಮುದ್ರಿಸಿ ಹೊರತರಲು ಪ್ರಯತ್ನಿಸಲಾಯಿತು. ಸಾಧ್ಯವಾಗಲಿಲ್ಲ. ಪರಿಷತ್ತು ಹೊಸದಾಗಿ ಸ್ಥಾಪಿಸಿದ ಆಫ್‌ಸೆಟ್ ಮುದ್ರಣಾಲಯದಲ್ಲಿಯೇ ಎಲ್ಲ ಪುಸ್ತಕಗಳನ್ನು ಮುದ್ರಿಸಬೇಕು, ತನ್ಮೂಲಕ ಬಿ.ಎಂ.ಶ್ರೀ ಅಚ್ಚುಕೂಟವನ್ನು ಅಭಿವೃದ್ಧಿಪಡಿಸಬೇಕು ಎಂಬ ಆಕಾಂಕ್ಷೆಯೇ ಈ ವಿಳಂಬಕ್ಕೆ ಕಾರಣ, ಸಮ್ಮೇಳನ ಮುಗಿದು ಮೂರುನಾಲ್ಕು ತಿಂಗಳುಗಳಲ್ಲಾದರೂ ಪುಸ್ತಕಗಳು ಹೊರಬರುತ್ತಿರುವುದು ಸಂತೋಷದ ಸಂಗತಿ. ಅರವತ್ತೇಳು ಪುಸ್ತಕಗಳ ಮುದ್ರಣಕ್ಕೆ ಅಗತ್ಯವಾದ ಕಾಗದವನ್ನು ಉಚಿತವಾಗಿ ಒದಗಿಸಿ ಮಹೋಪಕಾರವನ್ನು ಮಾಡಿದ ಅಖಿಲಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರೂ, ಅಂದಿನ ಸಾರಿಗೆ ಸಚಿವರೂ ಇಂದಿನ ಗೃಹ ಸಚಿವರೂ ಆಗಿರುವ ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರಿಗೆ ಹೃತ್ಪೂರ್ವಕ ಧನ್ಯವಾದಗಳು.

'ರುದ್ರಭಟ್ಟ ವಿರಚಿತ ಜಗನ್ನಾಥ ವಿಜಯಂ' ಗದ್ಯಾನುವಾದವನ್ನು ಆಸ್ಥಾನ ವಿದ್ವಾನ್ ಯಂ.ಆರ್. ವರದಾಚಾರ್ಯ ಅವರು ಮಾಡಿದ್ದು, ಅದು ಈಗ ಪುನರ್ ಮುದ್ರಣವಾಗುತ್ತಿದೆ. ಈ ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದಿರುವ ಬಿ.ಎಂ.ಶ್ರೀ. ಆಫ್‌ಸೆಟ್ ಅಚ್ಚುಕೂಟದ ಸಿಬ್ಬಂದಿ ವರ್ಗಕ್ಕೆ ಹಾಗೂ ಈ ಕಾರ್ಯದಲ್ಲಿ ಸಹಾಯ ಸಹಕಾರ ನೀಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

**ಎನ್. ಬಸವಾರಾಧ್ಯ**

ಅಧ್ಯಕ್ಷರು

# ವಿಷಯ ಸೂಚಿ

# ಉಪೋದ್ಘಾತ

ಶ್ರೀಜಗನ್ನಾಥ ವಿಜಯವೆಂಬ ಹಳಗನ್ನಡದ ಗದ್ಯಪದ್ಯಾತ್ಮಕವಾದ (ಚಂಪೂ) ಕಾವ್ಯವು ವ್ಯಾಸಮಹರ್ಷಿಯು ಸಂಸ್ಕೃತದಲ್ಲಿ ರಚಿಸಿರುವ ವಿಷ್ಣುಪುರಾಣದ ಐದು ಆರನೆಯ ಅಂಶಗಳಲ್ಲೂ ಭಾಗವತದ ದಶಮಸ್ಕಂಧದಲ್ಲೂ ಹೇಳಿರುವ ಕಥಾಂಶವನ್ನೊಳಗೊಂಡಿದೆ. ಈ ಕಾವ್ಯಕರ್ತೃವಾದ ರುದ್ರಭಟ್ಟನೇ

*"ಕಥೆ ವಿಷ್ಣುಪುರಾಣಂ ಸ*
*ತ್ಕೃತಿವೇಳ್ದಿಂ ಸುಕವಿರುದ್ರನೀ ಕೃತಿಗೆ ಕಥಾ ।*
*ಪತಿ ಕೃಷ್ಣಂ ಕೃತಿಯುಂ ಭೂ*
*ನುತಮೆ ಜಗನ್ನಾಥವಿಜಯಮೆನೆ ಮೆಚ್ಚದರಾರ್ ॥"*

ಎಂದು ಹೇಳಿರುವನು. ಈ ಮಹಾಕವಿ ತನ್ನ ದೇಶ ಕಾಲ, ಸ್ಥಿತಿಗತಿಗಳ ವಿಚಾರವನ್ನು ಯಾವುದನ್ನೂ ಗ್ರಂಥದಲ್ಲಿ ಹೇಳಿಕೊಂಡಿಲ್ಲ.

ಕ್ರಿ.ಶ. ೧೬೦೪ರಲ್ಲಿ ಭಟ್ಟಾಕಲಂಕದೇವನು ಶಬ್ದಾನುಶಾಸನವೆಂಬ ಕರ್ಣಾಟಕ ವ್ಯಾಕರಣದಲ್ಲಿ ಜಗನ್ನಾಥವಿಜಯದ ಆದಿಯ ಮಂಗಳ ಪದ್ಯವನ್ನೂ ಇನ್ನೂ ಅನೇಕ ಪದ್ಯಗಳನ್ನೂ ಉದಾಹರಿಸಿರುವನು. ಶಬ್ದಮಣಿದರ್ಪಣಕಾರ ಕೇಶಿರಾಜನ ತಂದೆಯಾದ ಮಲ್ಲಿಕಾರ್ಜುನನು (೧೨೪೮-೧೨೫೪) ತನ್ನ ಸೂಕ್ತಿ ಸುಧಾರ್ಣವದಲ್ಲಿ ಜಗನ್ನಾಥ ವಿಜಯದ ಅನೇಕ ಪದ್ಯಗಳನ್ನು ಸೇರಿಸಿರುವನು. ಸೂಕ್ತಿಸುಧಾರ್ಣವದಲ್ಲಿ ಕುಸುಮಾವಳಿಯೆಂಬ ಗ್ರಂಥದಿಂದ ಅನೇಕ ಪದ್ಯಗಳು ಉದ್ಧೃತವಾಗಿವೆ. ಕುಸುಮಾವಳಿಗ್ರಂಥವನ್ನು ಬರೆದ ದೇವಕವಿಯು ರುದ್ರಭಟ್ಟನನ್ನು ಸ್ತುತಿಸಿ, "ರುದ್ರಭಟ್ಟನೊಳ್ ಪುದಿದ ಪದಪ್ರಗಲ್ಭಗುಣಂ" ಎಂದಿರುವನು. ದೇವಕವಿ ಕ್ರಿ.ಶ. ೧೩೦೦ರಲ್ಲಿ ಇದ್ದನೆಂದು ಊಹಿಸಿದ್ದಾರೆ. ಇವನಿಂದ ಸ್ತುತನಾದ ರುದ್ರಭಟ್ಟನು ೧೩೦೦ಕ್ಕೂ ಹಿಂದೆಯೋ ಅದೇ ಕಾಲದಲ್ಲೋ ೧೨೪೫ಕ್ಕೆ ಹಿಂದೆಯೇ ಇದ್ದನೆಂದು ನಿರ್ಧರವಾಗುವುದು. ಅಲ್ಲದೆ ರುದ್ರಭಟ್ಟನೇ ಜಗನ್ನಾಥವಿಜಯದಲ್ಲಿ ಪೂರ್ವಕವಿಗಳೊಡನೆ ಕರ್ಣಪಾರ್ಯನೆಂಬ ಕವಿಯನ್ನೂ ಸ್ತುತಿಸಿರುವನು. ಕರ್ಣಪಾರ್ಯನು ಕ್ರಿ.ಶ. ೧೧೪೦ರ ಸುಮಾರಿನಲ್ಲಿದ್ದನೆಂದು ತಿಳಿದಿದೆ. ಆದುದರಿಂದ ರುದ್ರಭಟ್ಟನು ೧೧೪೦ಕ್ಕಿಂತ ಈಚೆಗೆ ಇದ್ದವನೆಂದು ನಿರ್ಧರವಾಗುತ್ತದೆ.

ಅಲ್ಲದೆ ರುದ್ರಭಟ್ಟನು ಜಗನ್ನಾಥ ವಿಜಯದಲ್ಲೇ "ಚಂದ್ರಮೌಳಿ ಪ್ರಮುಖ ನಿಖಿಳ ವಿದ್ವಜ್ಜನಂ ಮೆಚ್ಚೆ ರುದ್ರಾಂಕನೆ ಪೇಳ್ದಂ" ಎಂದು ಹೇಳಿರುವನು. ಈ ಚಂದ್ರಮೌಳಿಯೆಂಬ ವಿಖ್ಯಾತಪಂಡಿತನು ೧೧೭೨ ರಿಂದ ೧೨೧೯ರವರೆಗೆ ಆಳಿದ ವೀರಬಲ್ಲಾಳರಾಜನ ಮಂತ್ರಿಯಾಗಿದ್ದನೆಂದು ೧೧೮೨ರಲ್ಲಿ ಬರೆದ ಶ್ರವಣಬೆಳಗೊಳದ ೧೨೪ನೆಯ ಶಾಸನದ ಪದ್ಯಗಳಿಂದ ತಿಳಿಯುತ್ತದೆ. ರುದ್ರಭಟ್ಟನು ವೀರಬಲ್ಲಾಳನ ಹೆಸರನ್ನು ಸ್ಪಷ್ಟವಾಗಿ ಹೇಳದಿದ್ದರೂ, "ಅರಿಕಾಮಧ್ವಂಸಿ, ರಾಜರಾಜಪ್ರತಿಷ್ಠಾನಿರತಂ,

ಉಮಾಕಾಮಿನೀಜೀವಿತೇಶಂ" ಮೊದಲಾದ ಈಶ್ವರನಿಗೂ ಬಲ್ಲಾಳರಾಜನಿಗೂ ಅನ್ವಯಿಸುವ ವಿಶೇಷಣಗಳನ್ನು ಹೇಳಿ ಅವನು ವಸುಧೆಯನ್ನು ರಕ್ಷಿಸುಗೆ ಎಂದು ಪ್ರಾರ್ಥಿಸಿರುವನು. ಚೋಳರಾಜರಿಗೆ 'ರಾಜರಾಜ' ಎಂಬ ಹೆಸರೋ ಬಿರುದೋ ಇದ್ದಿತೆಂದೂ ಅವರು ಬಲ್ಲಾಳರಾಜರಿಗೆ ಅಧೀನರಾಗಿದ್ದುದರಿಂದ ಬಲ್ಲಾಳರಿಗೆ "ಚೋಳರಾಜ ಪ್ರತಿಷ್ಠಾಚಾರ್ಯ" ಎಂಬ ಬಿರುದು ಇದ್ದಿತೆಂದೂ ಅನೇಕ ಶಾಸನಗಳಿಂದ ತಿಳಿಯುತ್ತದೆ. ಆದುದರಿಂದ ರುದ್ರಭಟ್ಟನು ೧೧೮೨ರ ಹಿಂದು ಮುಂದಿನ ವರ್ಷಗಳಲ್ಲಿ ವೀರಬಲ್ಲಾಳರಾಜನ ರಾಜಧಾನಿಯಾದ ದ್ವಾರಸಮುದ್ರದಲ್ಲೇ ಇದ್ದಿರಬಹುದೆಂದೂ ಕವಿಚರಿತ್ರಕಾರರು ನಿರ್ಧರಿಸಿರುವರು.

ಬ್ರಾಹ್ಮಣರು ದೇಶಭಾಷಾಪ್ರೇಮಿಗಳಾಗಿಲ್ಲದ ಆ ಕಾಲದಲ್ಲಿ ಕನ್ನಡದಲ್ಲಿ ಕಾವ್ಯವನ್ನು ಬರೆದುದರಿಂದಲೇ ರುದ್ರಭಟ್ಟನು ಕರ್ಣಾಟಕದೇಶದವನೆಂಬುದು ವ್ಯಕ್ತವಾಗುತ್ತದೆ. ಆಸ್ಥಾನಕವಿಯಾಗಿದ್ದನೋ ಇಲ್ಲವೋ ತಿಳಿಯದು. "ಚಂದ್ರಮೌಳಿಯೇ ಮೊದಲಾದ ವಿದ್ವಾಂಸರು ಮೆಚ್ಚುವಂತೆ ಕಾವ್ಯವನ್ನು ಶಾರದಾಭ್ರ ಚಂದ್ರಾತಪರುದ್ರ ! ಕೃಷ್ಣನ ಕಥೆಯನ್ನು ಹೇಳು. ನಿನ್ನ ಕವಿತಾರಸವು ಸಜ್ಜನರ ಮನಸ್ಸನ್ನು ವಶಪಡಿಸಿಕೊಳ್ಳುವುದು" ಎಂದು ಹೊಗಳಿ ಹೇಳಿದಂತೆ ಜಗನ್ನಾಥವಿಜಯವನ್ನು ಬರೆದುದಾಗಿ ಹೇಳಿಕೊಂಡಿರುವುದರಿಂದ ಆ ಕಾಲದ ವಿದ್ವನ್ಮಂಡಲಿಯ ಗೌರವಕ್ಕೆ ಪಾತ್ರನಾಗಿದ್ದನೆಂದು ತೋರುತ್ತದೆ.

ಆರ್ಯರ ಪುರಾಣವನ್ನು ಕನ್ನಡದಲ್ಲಿ ಕಾವ್ಯವಾಗಿ ಬರೆದಿರುವ ಬ್ರಾಹ್ಮಣ ಕವಿಗಳಲ್ಲಿ ರುದ್ರಭಟ್ಟನೇ ಮೊದಲನೆಯವನು. ಸಂಸ್ಕೃತ ಕರ್ಣಾಟ ಭಾಷೆಗಳೆರಡರಲ್ಲೂ ಉದ್ದಾಮ ಪಂಡಿತನೂ ಮಹಾಕವಿಯೂ ಆಗಿದ್ದನೆಂಬುದನ್ನು ಈತನ ಕಾವ್ಯವನ್ನು ಓದಿದವರೆಲ್ಲರೂ ಅರಿಯುವರು. ರುದ್ರಭಟ್ಟನು ರಸಕಲಿಕೆ, ಜಗನ್ನಾಥ ವಿಜಯ ಎಂಬ ಎರಡು ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾನೆ. ಆದರೆ ರಸಕಲಿಕೆಯ ಮೂಲಗ್ರಂಥವು ಇದುವರೆಗೆ ದೊರೆತಿಲ್ಲ.

ರುದ್ರಭಟ್ಟನನ್ನು ದೇವಕವಿ, ಚಿಕ್ಕಉಪಾಧ್ಯಾಯರೇ ಮೊದಲಾದ ಕರ್ಣಾಟ ಕವಿ ಶ್ರೇಷ್ಠರು ಶ್ಲಾಘಿಸಿರುವರು. ಸಾಳ್ವನೆಂಬ ಕವಿ ತನ್ನ ರಸರತ್ನಾಕರದಲ್ಲಿ ರುದ್ರಭಟ್ಟನ ರಸಕಲಿಕೆ ಎಂಬ ಗ್ರಂಥದಿಂದ ಅನೇಕ ಅಂಶಗಳನ್ನು ತೆಗೆದುಕೊಂಡಿರುತ್ತಾನೆ. ಮಲ್ಲಿಕಾರ್ಜುನದೇವನು ತನ್ನ ಸೂಕ್ತಿಸುಧಾರ್ಣವದಲ್ಲೂ, ಅಭಿನವವಾದಿವಿದ್ಯಾನಂದನು ತನ್ನ ಕಾವ್ಯಸಾರದಲ್ಲೂ, ರುದ್ರಭಟ್ಟನ ಗ್ರಂಥದ ಅನೇಕ ಪದ್ಯಗಳನ್ನು ಸೇರಿಸಿಕೊಂಡಿರುವರು. ಹಳಗನ್ನಡಕ್ಕೆ ಸಂಸ್ಕೃತದಲ್ಲಿ ವ್ಯಾಕರಣವನ್ನು ಬರೆದಿರುವ ಜೈನ ಮಹಾಪಂಡಿತನಾದ ಭಟ್ಟಾಕಲಂಕದೇವನು ರುದ್ರಭಟ್ಟನ ಜಗನ್ನಾಥವಿಜಯದ ಮಂಗಳಶ್ಲೋಕವನ್ನೂ ಬೇರೆಯ ಅನೇಕ ಶ್ಲೋಕಗಳನ್ನೂ ಉದಾಹರಣೆಯಾಗಿ ಬರೆದಿರುವನು ಎಂದು ಹಿಂದೆಯೇ ಹೇಳಿದೆ.

ರುದ್ರಭಟ್ಟನು ಬ್ರಾಹ್ಮಣರಲ್ಲಿ ಅದ್ವೈತಿ, ಸ್ಮಾರ್ತ, ಶ್ರೋತ್ರಿಯ. ಸ್ಮಾರ್ತರು ಪಂಚಾಯತನ ಪೂಜೆಯನ್ನು ಮಾಡುವಂತೆ ಈತನು ಕಾವ್ಯದ ಆದಿಯಲ್ಲಿ, ವಿಷ್ಣು, ಶಿವ, ಅಂಬಿಕೆ,ಸೂರ್ಯ, ಗಣಪತಿ ಸ್ತುತಿಯನ್ನು ಮಾಡಿರುವನು. ಆದರೂ ವಿಷ್ಣುವಿನಲ್ಲಿ ಈತನಿಗೆ

ಅತಿಶಯವಾದ ಭಕ್ತಿ. ಸೃಷ್ಟಿ ಸ್ಥಿತಿಲಯಗಳಿಗೆ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳು ಕರ್ತೃಗಳಾದರೂ -

"ಉದಯಸ್ಥಿತಿ ಸಂಹಾರ
ಪ್ರದಂಜ(ಗ)ನಕ್ಕೆನಿಪ ಕಮಲಭವ ಹರಿಹರನಾ ।
ಮದ ಪುರುಷಾಕಾರತ್ರಯ
ಮದು ನಿನ್ನಾ ವಿಡಂಬಮಲ್ತೆ ಪರಮಜ್ಯೋತೀ ॥" (ಆ. ೩ ಪದ್ಯ ೧೦೫)

ಎಂದು ವಿಷ್ಣುವೇ ತ್ರಿಮೂರ್ತಿಗಳಿಗೂ ಮೂಲಪುರುಷನೆಂದು ಅನೇಕ ಕಡೆಗಳಲ್ಲಿ ಹೇಳಿದ್ದಾನೆ. ಪೂರ್ವಸಮುದ್ರತೀರದಲ್ಲಿರುವ, ಪುರಿಯ ಪ್ರಸಾದ ಪಾವನ ಕ್ಷೇತ್ರದ ಶ್ರೀಜಗನ್ನಾಥಸ್ವಾಮಿ, ರುದ್ರಭಟ್ಟನ ಇಷ್ಟ (ಕುಲ) ದೈವವಾಗಿದ್ದುದರಿಂದ ಕೃಷ್ಣಚರಿತಾಮೃತಕ್ಕೆ ಜಗನ್ನಾಥವಿಜಯವೆಂದು ನಾಮಕರಣಮಾಡಿರಬಹುದೆಂದು ಮದ್ರಾಸ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಕರ್ಣಾಟಕಪಂಡಿತರಾಗಿದ್ದ, ಬ್ರಹ್ಮಶ್ರೀ ಚಾವಲಿ ರಾಮಸ್ವಾಮಿಶಾಸ್ತ್ರಿಗಳು ಅವರಿಂದ ಸಂಪಾದಿತವಾದ ಜಗನ್ನಾಥವಿಜಯ ಗ್ರಂಥದ ಪೀಠಿಕೆಯಲ್ಲಿ (ಕ್ರಿ.ಶ. ೧೮೯೬ರಲ್ಲಿ) ಬರೆದಿರುವರು.

ರುದ್ರಭಟ್ಟನು /ನಿರಹಂಕಾರಿ. ಕಾವ್ಯವನ್ನು

**ಪೊಸತೆನೆ ಪೇಳ್ವ ತಿರ್ದುವಳಿವೆನ್ನೊಳೆ ಸನ್ನಿದಮಾದೊಡಂ ಕರಂ**
**ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ತಮಂತೆ ತಿ ।**
**ರ್ದಿಸುವುದೆ ನಲ್ ನಯಂ ಬೆಳಗೆ ಕನ್ನಡಿ ಸೋದಿಸೆ ಪೊನ್ ವಿರಾಜಿಪಂ**
**ತೆಸೆದು ಬಟಿಕ್ಕೆ ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ ॥ (ಆ. ೧ ಪ. ೧೫)**

ಎಂದು ಹೇಳಿರುವನು. ಅಲ್ಲದೆ *'ಅತರ್ಕ್ಯಮಲ್ಲವೆ ಮಹತ್ವಂ ವಿಷ್ಣು ಸರ್ವಜ್ಞನಾ॥' 'ವೇದಶಾಸ್ತ್ರಾರ್ಥಂ ರಹಸ್ಯಾಚಿಂತ್ಯಸಾಮರ್ಥ್ಯ ಮುರಹರನಂ ಬಣ್ಣಿಸಲ್ ಬಲ್ಲನಾವಂ ।" 'ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ ।'* ಎಂದೂ ಹೇಳಿ *"ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಲತತ್ತ್ವ ಬೋಧಂ ಉದ್ಯೋತಿಪುದೆಂಬುದಂ ಬಯಸಿ ಪೇಟಿಲೊಡರ್ಚಿದೆಂ ; ವೈಷ್ಣವಕಾವ್ಯರಸಂ ತುಳುಂಕಾಡುಗೆ"* ಎಂದು ಹೇಳಿರುವನು.

ಜಗನ್ನಾಥವಿಜಯದ ವಿಷಯವು ಕೃಷ್ಣಚರಿತೆಯಾಗಿದೆ. ಕವಿ ವಿಷ್ಣುಪುರಾಣದಲ್ಲಿರುವ ವರ್ಣನೆಗಳ ಕಥೆಯ ವಾಕ್ಯಗಳನ್ನು ಕನ್ನಡಕ್ಕೆ ಪರಿವರ್ತಿಸಿರುತ್ತಾನೆ. ಕೆಲವು ಕಡೆಗಳಲ್ಲಿ ಅಲ್ಲಿರುವ ವರ್ಣನೆಯನ್ನೂ ಆನುಪೂರ್ವಿಯನ್ನೂ ಬದಲಾಯಿಸಿದ್ದಾನೆ. ವರ್ಣನೆಯಲ್ಲಿ ಅನೇಕವನ್ನು ಸ್ವಪ್ರತಿಭೆಯಿಂದ ಕಲ್ಪಿಸಿ ಹೇಳಿದ್ದಾನೆ. "ಅಲಂಕಾರಪ್ರಿಯೋ ವಿಷ್ಣುಃ" ಎಂದಿರುವಂತೆ, ಈ ವಿಷ್ಣು (ಕೃಷ್ಣ) ಚರಿತೆಯೂ ಶಬ್ದಾರ್ಥಾದಿ ಸರ್ವಾಲಂಕಾರಗಳಿಂದಲೂ ಅಲಂಕೃತವಾಗಿದೆ. ಸಂಸ್ಕೃತ ಕರ್ಣಾಟ ಭಾಷೆಗಳಲ್ಲಿ ಹೆಚ್ಚಾಗಿ ಪರಿಶ್ರಮವಿಲ್ಲದ ಸಾಮಾನ್ಯರಿಗೆ ಅರ್ಥವಾಗಲಾರದು. ಕವಿಯೇ "ಅನವದ್ಯ ರೀತಿಚೋದ್ಯಂ ವಿಬುಧಜನಹೃದ್ಯಂ" ಎಂದು ಹೇಳಿರುವನು. ಶೈಲಿ ಪಂಪಾದಿ ಜೈನಮಹಾಕವಿಗಳ ಶೈಲಿಯಂತೆ ಇದೆ. ಮಹಾ

ಕಾವ್ಯಕ್ಕಿರಬೇಕಾದ ಸರ್ವಲಕ್ಷಣಗಳೂ ಈ ಕಾವ್ಯದಲ್ಲಿ ಪೂರ್ಣವಾಗಿವೆ. ಶ್ರೀಕೃಷ್ಣನ ಜನನ ವಿಚಾರದಿಂದ ಆರಂಭವಾದ ಕಥೆಯು ಸಾಲ್ವನೆಂಬ ರಾಕ್ಷಸನ ವಧೆಯವರೆಗಿನ ಕೃಷ್ಣನ ಕಥಾಮೃತವು ಉಕ್ಕಿ ಹರಿಯುತ್ತಿದೆ. ಕಾವ್ಯವು ಪ್ರೌಢವಾದುದು. ನವರಸಭಾವಭರಿತವಾದುದು. ಕೃಷ್ಣನ ಮಹಿಮೆಯ ವರ್ಣನೆ ಅಮಿತವಾಗಿದೆ. ಕವಿ, ತಾನು ತನ್ನ ಮಾತಿನಿಂದಲೂ ಕೃಷ್ಣನನ್ನು ಸ್ತುತಿಸಿರುವನು. ಅಲ್ಲದೆ ಭಕ್ತಾಗ್ರೇಸರರೂ ತತ್ತ್ವಜ್ಞರೂ ಆದ ಅಕ್ರೂರ, ಅದಿತಿ ಬ್ರಹ್ಮನೇ ಮೊದಲಾದ ಪಾತ್ರಗಳಿಂದ ಅತಿಶಯವಾಗಿ ಸ್ತೋತ್ರಮಾಡಿಸಿರುವನು. ವಿಷ್ಣುವಿನ ದಶಾವತಾರಗಳನ್ನು ಬ್ರಹ್ಮನಿಂದಲ್ಲದೆ ಜರಾಸಂಧ, ಸಾಲ್ವಾದಿ ವಿರೋಧಿ ರಾಕ್ಷಸರಿಂದಲೂ ವರ್ಣನೆ ಮಾಡಿಸಿರುವನು. ಗ್ರಂಥದ ಕಡೆಯಲ್ಲಿ ಸಂಸ್ಕೃತದಲ್ಲಿ "ಕಾವ್ಯನಾಟಕ ತರ್ಕವ್ಯಾಕರಣ ಛಂದೋಲಂಕರಾದ್ಯನೇಕ ಶಾಸ್ತ್ರಪಾರಾವಾರ ಪಾರಗ ಶ್ರೀಮತ್ಸುಕವೀಂದ್ರರುದ್ರಭಟ್ಟಪ್ರಣೀತ ಶ್ರೀಜಗನ್ನಾಥವಿಜಯ ಮಹಾಪ್ರಬಂಧ" ಎಂದು ಹೇಳಿ ವಿಷಯ ಸೂಚಿಕೆಯನ್ನು ಪಂಡಿತರಾರೊ ಬರೆದಿದ್ದಾರೆ. ಪಂಡಿತರು ಹೇಳಿರುವುದು ಹೊಗಳಿಕೆಯ ಮಾತಲ್ಲ, ಸತ್ಯೋಕ್ತಿಯೆಂಬುದು ಜಗನ್ನಾಥ ವಿಜಯದ ಆರಂಭದ ಕೆಲವು ಪದ್ಯಗಳನ್ನು ಮಾತ್ರವೇ ಓದುವ ಉದ್ದಾಮಪಂಡಿತರಿಗೆ ವ್ಯಕ್ತವಾಗುವುದು. ಸಾಮಾನ್ಯ ಪಂಡಿತರಿಗೂ ಅರ್ಥವು ಪೂರ್ಣವಾಗಿ ಆಗದಂತಿರುವುದರಿಂದಲೇ ಯಾರೋ ಅತ್ಯುದ್ದಾಮಗೀರ್ವಾಣ ಕರ್ಣಾಟೋಭಯ ಭಾಷಾಪಂಡಿತರು - ಆರಂಭದ ಮಂಗಳ ಶ್ಲೋಕಗಳೈದಕ್ಕೆ ಪಂಚಪಾಷಾಣವ್ಯಾಖ್ಯಾನವೆಂಬ ಹೆಸರಿನ ಅತ್ಯುದಾತ್ತವೂ ಅತಿವಿಸ್ತಾರವೂ ಆದ ವ್ಯಾಖ್ಯಾನವನ್ನು ಸಂಸ್ಕೃತದಲ್ಲಿ ಬರೆದಿರುವರು. ರುದ್ರಭಟ್ಟನು ಈ ಪದ್ಯದಲ್ಲಿ ಶ್ರೀಕೃಷ್ಣನಿಗೆ ಹೇಳಿರುವ ಒಂದೊಂದು ವಿಶೇಷಣ ಪದಕ್ಕೂ ವ್ಯಾಖ್ಯಾನಕಾರರು ಹೇಳಿರುವ ಬಹುಸಂಖ್ಯೆಯ ಅರ್ಥಗಳಲ್ಲಿ ಸುಲಭವಾದ ಕೆಲವನ್ನು ಮಾತ್ರವೇ ತೆಗೆದುಕೊಂಡು ಅನುವಾದವನ್ನು ಬರೆದುದಾಗಿದೆ. ಹೀಗೆಂದ ಮಾತ್ರಕ್ಕೇ, ರುದ್ರಭಟ್ಟನ ಭಾಷೆ ಶೈಲಿಗಳು ಅತಿ ಕಠಿನವೆಂದು ಭಾವಿಸಬೇಕಾಗಿಲ್ಲ. ಪರಮಾತ್ಮನ, ವನದ, ಸಮುದ್ರದ ವರ್ಣನೆಗಳು ವೀರಾದ್ಭುತರಸಗಳಿರುವೆಡೆಯುಲ್ಲೂ ಶೈಲಿಯು ಕಠಿನವಾಗಿದ್ದರೂ ಶೃಂಗಾರ, ಕರುಣರಸಗಳಿರುವೆಡೆಯಲ್ಲಿ ಕೇವಲ ಮೃದುಲಲಿತವಾದ ಶಬ್ದಗಳೂ ಶೈಲಿಯೂ ಸುಲಭವಾಗಿ ಅರ್ಥವಾಗುವಂತೆಯೇ ಇವೆ. ಈ ಕಾವ್ಯದಲ್ಲಿ ನಾರಿಕೇಳ ಕದಳೀ ದ್ರಾಕ್ಷಾಪಾಕಗಳೆಲ್ಲವೂ ರಸಭಾವ ಸಂದರ್ಭಕ್ಕೆ ತಕ್ಕಂತೆ ಇವೆಯೆಂಬುದನ್ನು ಅನುವಾದವನ್ನು ಓದುವ ರಸಿಕರು ಅರಿಯಬಹುದು. ಕರ್ಣಾಟಕದ ಚೇತನಾತ್ಮಸ್ವರೂಪವಾದ ಪ್ರಾಚೀನ ಕರ್ಣಾಟ ಮಹಾಕಾವ್ಯ ಸಾಹಿತ್ಯಸಂಪತ್ತು ಅಮಿತವಾಗಿದೆಯಾದರೂ ಅದು ಹೂತಿಟ್ಟ ನಿಧಿಯಂತೆ ಅಥವಾ ಬೀಗದ ಕೈ ಸಿಕ್ಕದ ಗಟ್ಟಿಯಾದ ಪೆಟ್ಟಿಗೆಗಳಲ್ಲಿರುವ ದ್ರವ್ಯದಂತೆ ಆಗಿದೆ. ಈಗಿನ ಕನ್ನಡ ಜನತೆ ಆ ಸಂಪತ್ತನ್ನು ಅನುಭವಿಸುವುದು ಅಗತ್ಯವಾದರೂ, ದುಸ್ಸಾಧ್ಯವಾಗಿದೆ. ಪ್ರಾಚೀನ ಕನ್ನಡ ಕಾವ್ಯಗಳು ಕಠಿನವಾಗಿ ತೋರುತ್ತಿರುವುದರಿಂದ ಅವುಗಳ ವ್ಯಾಸಂಗದಲ್ಲಿ ಉತ್ಸಾಹದ ಪ್ರವೃತ್ತಿಯೇ ಕಂಡುಬರುತ್ತಿಲ್ಲ. ಕೆಲವು ಪ್ರಾಚೀನ ಗ್ರಂಥಗಳು ಈಗ ದೊರೆಯುವುದೂ ಕಷ್ಟವಾಗಿದೆ.

ಈ ಕೊರತೆಯನ್ನು ನಿವಾರಣೆಮಾಡಿ ಓದಬಲ್ಲ ಕನ್ನಡಿಗರೆಲ್ಲರೂ ನಮ್ಮ ಕಾವ್ಯ ಸಂಪತ್ತನ್ನು ಅನುಭವಿಸುವಂತಾಗಬೇಕೆಂಬ ಉದ್ದೇಶದಿಂದ ಪ್ರಾಚೀನ ಕರ್ಣಾಟ ಮಹಾಕಾವ್ಯಗಳಿಗೆ ಹೊಸಗನ್ನಡದಲ್ಲಿ ಗದ್ಯಾನುವಾದವನ್ನು ಮೂಲಸಹಿತವಾಗಿ ಬರೆಯಿಸಿ ಪ್ರಕಟಿಸುವ ಕಾರ್ಯವನ್ನು ಶ್ರೀ ಜಿ. ನಾರಾಯಣರ ಅಧ್ಯಕ್ಷತೆಯಲ್ಲಿ ಸಾಹಿತ್ಯ ಪರಿಷತ್ತು ಕೈಗೊಂಡಿರುವುದು ಸರ್ವಶ್ಲಾಘ್ಯವಾಗಿದೆ.

ಹೀಗೆ ಗದ್ಯಾನುವಾದ ಮಾಡಿಸುವ ಅನೇಕ ಮಹಾ ಪ್ರಾಚೀನ ಕಾವ್ಯಗಳಲ್ಲಿ ರುದ್ರಭಟ್ಟನೆಂಬ ಉದ್ದಾಮಕವಿಯಿಂದ ರಚಿತವಾದ ಶ್ರೀಜಗನ್ನಾಥ ವಿಜಯವೆಂಬುದು ಒಂದಾಗಿದೆ. ನಾಲ್ಕೈದು ಸಾರಿ ಮುದ್ರಿತವಾಗಿದ್ದರೂ ಮೊದಲಿನ ಕೆಲವು ಮುದ್ರಣಗಳಲ್ಲಿ ದೋಷಗಳು ಹೆಚ್ಚಾಗಿವೆ. ಕ್ರಿ.ಶ. ೧೯೦೪ರಲ್ಲಿ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಶ್ರೀ ಎಸ್.ಜಿ. ನರಸಿಂಹಾಚಾರ್ಯರಿಂದ ಶೋಧಿತವಾಗಿ ಮುದ್ರಿತವಾದ ಗ್ರಂಥವು ಶುದ್ಧವಾದುದಾಗಿರುವಂತಿದೆ. ಈಚೆಗೆ ೧೯೭೩ ರಲ್ಲಿ ಅದೇ ಲೈಬ್ರರಿಯವರು ಎರಡನೆಯ ಸಾರಿ ಪರಿಶೋಧಿಸಿ ಮುದ್ರಿಸಿರುವುದು ಪೂರ್ಣವಾಗಿ ಶುದ್ಧವಾಗಿದೆ. ಈ ಮುದ್ರಣದಲ್ಲಿರುವ ಮೂಲವನ್ನೇ ಅನುವಾದಕ್ಕೆ ಮೂಲವನ್ನಾಗಿಟ್ಟುಕೊಳ್ಳಲಾಗಿದೆ. ಈ ಮೂಲವು ಪರಿಶುದ್ಧವಾಗಿದೆಯೆಂದರೂ ಗ್ರಂಥದ ಅಡಿಟಿಪ್ಪಣಿಯಲ್ಲಿ ಪರಿಶೋಧಕರು ಓಲೆಪ್ರತಿಗಳಲ್ಲಿದ್ದ ಪಾಠಾಂತರಗಳನ್ನು ಬರೆದಿರುತ್ತಾರೆ. ಆ ಪಾಠಾಂತರಗಳನ್ನು ಅನುವಾದ ಗ್ರಂಥದ ಅಡಿಟಿಪ್ಪಣಿಯಲ್ಲಿ ಬರೆದಿರುವುದಾಗಿದೆ.

ಅನುವಾದವನ್ನು ಮೂಲಕ್ಕೆ ಅನುಸಾರವಾಗಿಯೇ ಬರೆದಿದೆಯಾದರೂ ಒಂದು ಒಂದೂವರೆ ಪುಟಗಳಷ್ಟು ಇರುವ ಮಹಾವಾಕ್ಯಗಳನ್ನು ಚಿಕ್ಕಚಿಕ್ಕದಾದ ವಾಕ್ಯಗಳಾಗಿ (ಅನುವಾದಕ ಮಂಡಲಿಯ ಅಭಿಮತದಂತೆ) ಮಾಡಿ ಬರೆದುದಾಗಿದೆ. ಅನುವಾದವನ್ನು ಬರೆಸಿದವರಿಗೂ ಬರೆದವರಿಗೂ ಓದುವವರಿಗೂ ಜಗನ್ನಾಥ ವಿಜಯ ಗ್ರಂಥದ ಕವಿಯೇ ಹೇಳಿರುವಂತೆ ಆತ್ಯಂತಿಕ ಸುಖವು ಲಭಿಸಲಿ.

**ಆಸ್ಥಾನ ವಿದ್ವಾನ್ ಯಂ. ಆರ್. ವರದಾಚಾರ್ಯ**

# ಪ್ರಥಮಾಶ್ವಾಸಂ

ಶ್ರೀರಾಮಾನಟಿ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೇಪ ವ
ಕ್ಷೋರಂಗಸ್ಥಿತೆಯಾದ ಪಾದನಖರೋಚಿರ್ಗಂಗೆ ಪೃಥ್ವೀಶ ಕೋ
ಟೀರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂ
ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ ॥ ೧

ಜನನುತ ರಾಜಹಂಸನಯನಂ ಕಮಳಾವಸಥಂ ಕಳಾನಿಕೇ
ತನನೆನಿಸಿರ್ದ ಪೆಂಪುಪಮೆವೆತ್ತೊಡಮೇನೋ ಹಿರಣ್ಯಗರ್ಭನೆಂ
ದೆನಿಸಿಯುದಾರನೆಂಬ ರಜಮೊಂದಿಯೆ ಸತ್ವನಿಧಾನನೆಂಬ ಪೆಂ
ಪನುಗುಣಮಾದ ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ ॥ ೨

೧. (i) ಶ್ರೀ ಲಕ್ಷ್ಮೀದೇವಿಯೆಂಬ ಸುಂದರಿ ನಟಿಯು -ಕೌಸ್ತುಭಮಣಿಯ ದಿವ್ಯಕಾಂತಿಯೆಂಬ ಪುಷ್ಪೋಪಹಾರದಿಂದೊಪ್ಪುವ ಯಾರ ಹೃದಯ ರಂಗಸ್ಥಳದಲ್ಲಿರುವಳೋ, ಯಾರ ಕಾಲುಗುರಿನ ಕಾಂತಿಗಂಗೆಯು ಶಿವನ ಮತ್ತು ರಾಜಾಧಿರಾಜರ ಕಿರೀಟಾಗ್ರದಲ್ಲಿ ವ್ಯಾಪ್ತವೋ ಯಾರ ಚಕ್ರ(ವೆಂಬ) ಸೂರ್ಯನು ರಾಕ್ಷಸ ಸಮೂಹವೆಂಬ ಕಗ್ಗತ್ತಲೆಯನ್ನು ನಾಶಮಾಡಿದನೋ ಆ ಭೂಭಾರಹರಣವಿನೋದಿಯಾದ ಶ್ರೀಕೃಷ್ಣನು ನಮಗೆ ಆನಂದಪರಂಪರೆಯನ್ನು ದಯಪಾಲಿಸಲಿ. (ii) ರಾಜ್ಯಲಕ್ಷ್ಮಿಯೆಂಬ ನರ್ತಕಿಯು ರಾಜ್ಯಪಟ್ಟಾಭಿಷೇಕ ಸಮಯದಲ್ಲಿ ಧರಿಸಿದ ಆಧಿಪತ್ಯಸೂಚಕವಾದ ಆಭರಣ ವಿಶೇಷಗಳ ಕಾಂತಿಯಿಂದ ಕೂಡಿದ ಯಾರ ಹೃದಯರಂಗದಲ್ಲಿರುವಳೋ ಯಾರ ಕಾಲುಗುರುಗಳ ಕಾಂತಿಯೆಂಬ ಗಂಗೆಯು ನಮಸ್ಕರಿಸುವ, ಸಾಮಂತರಾಜರ ಕಿರೀಟಾಗ್ರದಲ್ಲಿ ವ್ಯಾಪ್ತವೋ ಯಾರ ಸೇನಾಸೂರ್ಯನು ರಾಕ್ಷಸರಂತಿರುವ ಕ್ರೂರಶತ್ರುಸಮೂಹವೆಂಬ ಕತ್ತಲೆಯನ್ನು ಛೇದಿಸಿತೋ, ಯಾರು ಭೂಭಾರಪರಿಹಾರವಿನೋದಿಯಾದ ಶ್ರೀಕೃಷ್ಣನ ಭಕ್ತನೋ ಆ (ಬಲ್ಲಾಳ) ರಾಜನು ನಮಗೆ ಸಕಲ ಸುಖಗಳನ್ನೂ ಉಂಟುಮಾಡಲಿ.
೨. (i) ಜನಸ್ತುತನಾದ ರಾಜಹಂಸನನ್ನು ವಾಹನವಾಗಿ ಪಡೆದಿರುವವನು, ಕಮಲಾಸನ, ಲೋಕನಿರ್ಮಾಣ(ಸೃಷ್ಟಿ) ಕಲಾನಿಪುಣ, ಮೇರುವಿನಂತೆ ಉನ್ನತ, ಸ್ವಯಂಭು, ಉದಾರಿ, ರಜೋಗುಣಯುತನಾದರೂ ಸತ್ವನಿಧಾನ ಪ್ರಾಣಿಗಳಿಗೆ ಆಶ್ರಯ ಎಂಬ ಹಿರಿಮೆಯನ್ನು ಸಾರ್ಥಕವಾಗಿ ಪಡೆದಿರುವ ಚತುರ್ಮುಖಬ್ರಹ್ಮನು ನಮಗೆ ಸಂತೋಷವನ್ನುಂಟುಮಾಡಲಿ (ii) ಸ್ತುತ್ಯರಾದ ಚಂದ್ರಸೂರ್ಯರನ್ನು ಕಣ್ಣುಗಳಾಗಿ ಪಡೆದಿರುವವನೂ, ಲಕ್ಷ್ಮೀನಿವಾಸನೂ, ಜನರ ಸ್ತುತಿಗೆ ಪಾತ್ರರಾದ ಯೋಗೀಶ್ವರರನ್ನು ಪರಮಪದಕ್ಕೆ ಒಯ್ಯುವವನೂ ಗರುಡಧ್ವಜನೂ (ಕಳಾನಿ-ಗರುಡ) ಸ್ವಯಂಭು, ದಾತೃದುಷ್ಟಕ್ಷತ್ರಿಯವಿದಾರಿ, ಸತ್ವಗುಣ ಪೂರ್ಣ, ಬಲಾಢ್ಯ ಎಂಬ ಸಾರ್ಥಕವಾದ ಮಹಿಮೆಯುಳ್ಳ ಲೋಕಪಿತನೂ ಚತುರ್ಯುಗ ಮುಖ್ಯನೂ ಆದ ವಿಷ್ಣುವು ನಮಗೆ ಸಂತೋಷವನ್ನೀಯಲಿ, (iii) ಜನಸ್ತುತರಾದ

ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾ
ನಿರತಂ ಲೀಲಾಪ್ರಮೋದಂಚಿತನಿರವಧಿಗಾಂಗೇಯಕಂ ದ್ವಿಟ್ಪುರಧ್ವಂ
ಸರತಕ್ರೋಧಂ* ವೃಷಾಂಕಂ ವಿಬುಧನುತನುಮಾಕಾಮಿನೀಜೀವಿತೇಶಂ
ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ ॥ ೩

ರಾಜಶೇಷ್ಠರ ನಾಯಕ, ಐಶ್ವರ್ಯಲಕ್ಷ್ಮೀನಿವಾಸ, ಅರವತ್ತುನಾಲ್ಕು ಕಲೆಗಳಿಗೂ ಆಶ್ರಯವನ್ನು ಕೊಟ್ಟಿರುವವನು, ಸುವರ್ಣನಿಧಿ ಉದಾರಿ, ರಜೋಗುಣಯುತ ಬಲಾಢ್ಯ, ಎಂಬ ಸಾರ್ಥಕ ವಿಶೇಷಣಗಳನ್ನು ಪಡೆದು, ಸಾಮಾದಿ ಚತುರುಪಾಯಗಳಲ್ಲಿ ದೃಷ್ಟಿಯುಳ್ಳ ಬಲ್ಲಾಳರಾಜನು ನಮಗೆ ಸಂತೋಷವನ್ನುಂಟುಮಾಡಲಿ. ೩. (i) ವೈರಿಯಾದ ಕಾಮನನ್ನು ಧ್ವಂಸಮಾಡಿದವನು ಸರ್ಪಸಮೂಹ ಭೂಷಣ ಕುಬೇರನ ಸ್ಥಿರತೆಯಲ್ಲಿ ಆಸಕ್ತನಾದವನು (ಕುಬೇರಸಖ) ಮತ್ತು ಚಂದ್ರನಿಗೆ ಮೇಲ್ಮೆಯನ್ನುಂಟುಮಾಡುವುದರಲ್ಲಿ ನಿರತ (ಚಂದ್ರಶೇಖರ) ಕ್ರೀಡೆಯಲ್ಲಿ ಹೆಚ್ಚಾದ ಸಂತೋಷದಿಂದ ನಿರತನಾದ ಷಣ್ಮುಖನನ್ನು ಕುಮಾರನನ್ನಾಗಿ ಪಡೆದಿರುವವನು, ತ್ರಿಪುರಾದಿ ಶತ್ರುಶರೀರ ಪುರಗಳ ಧ್ವಂಸದಲ್ಲಿ ಆಸಕ್ತವಾದ ಕೋಪವುಳ್ಳವನು, ವೃಷಭಧ್ವಜ, ದೇವತೆಗಳಿಂದಲೂ ವಿದ್ವಾಂಸರಿಂದಲೂ ಸ್ತುತ್ಯನಾದವನು, ಉಮಾ (ಪಾರ್ವತೀ) ಪ್ರಾಣವಲ್ಲಭ ಅಣಿಮಾದಿ ಪರಮೈಶ್ವರ್ಯಾಶ್ರಯ, ಯುದ್ಧರಂಗದಲ್ಲಿ ವೈರಿಗಳನ್ನು ಸುಡಲು ಮೂರನೆಯ ಅಗ್ನಿನೇತ್ರವನ್ನು ತೆರೆಯುವವನು ಎನಿಸಿಕೊಂಡಿರುವ ಈಶ್ವರನು ಭೂಮಿಯನ್ನು ರಕ್ಷಿಸಲಿ. (ii) ಶತ್ರುಗಳ ದುರಾಸೆಯನ್ನು ಧ್ವಂಸಮಾಡುವವನು, (ರಾಮಾವತಾರದಲ್ಲಿ) ಕಪಿಸಮೂಹಮಯವಾದ ಸೇನೆಯುಳ್ಳವನು, ಬ್ರಹ್ಮೇಂದ್ರಾದಿಗಳ ಮತ್ತು ಧರ್ಮರಾಯನ ರಾಜ್ಯಸ್ಥಾಪನೆಯಲ್ಲಿ ನಿರತ ಲೀಲೆಯಂತೆ ನಿಶ್ಚಿತವೂ ಪ್ರವೃದ್ಧವೂ ಆದ ಭಕ್ತಿಯ ಭೀಷ್ಮನುಳ್ಳವನು, ವೈರಿಪುರಶರೀರ ಧ್ವಂಸದಲ್ಲಿ ಆಸಕ್ತವಾದ ಕೋಪವುಳ್ಳವನು, ಧರ್ಮಭೂಷಣ, ದೇವಪಂಡಿತಸ್ತುತ, ಸ್ತುತ್ಯಳಾದ ಆ ಲಕ್ಷ್ಮೀಪತಿ, ಪರಮಜ್ಞಾನೈಶ್ವರ್ಯಯುತ, ಯುದ್ಧರಂಗದಲ್ಲಿ ರುದ್ರ ಎನಿಸಿಕೊಂಡಿರುವ ವಿಷ್ಣುವು ಭೂಮಿಯನ್ನು ರಕ್ಷಸಲಿ. (iii) ಕಾಮಾದ್ಯರಿ ಷಡ್ವರ್ಗವಿಜಾಯಿಯೂ ಗಜಮಯಸೇನೆಯುಳ್ಳವನೂ, ರಾಜರಾಜರೆಂಬ ಬಿರುದುಳ್ಳ ಚೋಳರಾಜರ ಪ್ರತಿಷ್ಠೆಯಲ್ಲಿ ನಿರತನೂ, ಲೀಲಾಪ್ರಮೋದನೂ, ಅಮಿತ ಸುವರ್ಣ ಭಂಡಾರವುಳ್ಳವನೂ, ವೈರಿಪುರಧ್ವಂಸಾಸಕ್ತಕೋಪನೂ ಧರ್ಮಾತ್ಮನೂ, ವಿದ್ವಜ್ಜನ ನುತನೂ ಉಮಾದೇವಿಯೆಂಬ ಹೆಸರಿನ ರಮಣಿಯ ಪ್ರಾಣಪ್ರಿಯನೂ ಪರಮೇಶ್ವರ ಭಕ್ತನೂ ಯುದ್ಧರಂಗರುದ್ರನೂ ಆದ ಬಲ್ಲಾಳರಾಜನು ಭೂಮಿಯನ್ನು ರಕ್ಷಿಸಲಿ.

* ಕ-ಕ್ರೋಡಂ

ಜನಚಿತ್ತಾಹ್ಲಾದಪಾದಂ ಸಕಲ ಧರಣಿಭೃನ್ಮಸ್ತಕನ್ಯಸ್ತಮಾಗಿ
ರ್ಪಿನಮುಚ್ಚಂಡಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿ
ರ್ಪಿನಮುದ್ಯನ್ಮಂಡಲಾಗ್ರಂ ಸಲೆ ಘನಪದವೀ ಶೋಭೆಯಂ ಪೆರ್ಚಿಸುತ್ತಿ
ರ್ಪಿನಮೊಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ ॥* ೪

ಅರಿರೌದ್ರಂ ಕರದೈರ್ಘ್ಯಮುಲ್ಲಸದಹೀನಾಲಂಕೃತಂ ಮೂರ್ತಿ ಸಾ
ಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ
ವರದಾನಂ ನತಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾ
ಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ ॥ ೫

೪. (i) ಜನಚಿತ್ತಾಹ್ಲಾದಕವಾದ ತನ್ನ ಕಿರಣಗಳನ್ನು ಯಾರು ಸಕಲ ಪರ್ವತಾಗ್ರಗಳಲ್ಲೂ ಹರಡುವನೋ ಯಾರ ಅತಿ ಕ್ರೂರವಾದ ತಾಪಪ್ರಸರಣವು ಅರಿಯಾದ ನೈದಿಲೆಯ ಪರಿಪೂರ್ಣತೆ ಅಥವಾ ವಿಕಾಸವನ್ನು ವಿಧ್ವಂಸಮಾಡುವುದೋ ಯಾರ ಉತ್ಕೃಷ್ಟವಾದ ಮಂಡಲದ ಅಗ್ರವು ಆಕಾಶ (ಮಾರ್ಗ)ದ ಕಾಂತಿಯನ್ನು ಹೆಚ್ಚಿಸುವುದೋ ಆ ಉದಾತ್ತನೂ ಭೂಜನನೇತ್ರಾದಿ ರಕ್ಷಕನೂ ಆದ ಸೂರ್ಯದೇವನು ಜಗತ್ತನ್ನು ಬೆಳಗಲಿ. (ii) ಭಕ್ತ ಜನಮನೋನುರಾಗಕರವಾದ ಯಾರ ಪಾದಗಳು ರಾಜಾಧಿರಾಜರೆಲ್ಲರ ಶಿರೋಭೂಷಣಗಳಾಗಿರುವುವೋ ಯಾರ ಅದ್ಭುತವಾದ ಪಾದವು ಪೂರ್ಣ ಭೂಮಂಡಲಕ್ಕೆ ಅಧಿಪತಿಯಾದ ಬಲಿಚಕ್ರವರ್ತಿಯ ಶಿರಸ್ಸಿನ ಮೇಲೆ ಇಡಲ್ಪಟ್ಟಿತೋ ಯಾರ ಉಚ್ಚಂಡ ಪ್ರತಾಪವು ಅರಿಗಳ ಕುಸಂತೋಷಾಧಿಕ್ಯವನ್ನು ವಿಧ್ವಂಸಮಾಡುವುದೋ ಯಾರ (ನಂದಕವೆಂಬ) ಖಡ್ಗವು ಮೇಘಮಾರ್ಗಸುಪ್ರಕಾಶವೋ ಆಶ್ಲಾಘ್ಯನೂ ಧೀರೋದಾತ್ತನೂ ಗೋಪಾಲಕನೂ ಆದ ಆ ಜಗನ್ನಾಥ ಸೂರ್ಯದೇವನು ಲೋಕವನ್ನು ಬೆಳಗಲಿ. (iii) ಪ್ರಜೆಗಳ ಚಿತ್ತಕ್ಕೆ ಆಹ್ಲಾದವನ್ನುಂಟುಮಾಡುವ ಯಾರ ಪಾದಗಳು ಆಶ್ರಿತರಾಜರ ಶಿರೋಭೂಷಣಗಳಾಗುವವೋ ಯಾರ ಪ್ರತಾಪೋದಯವು ಶತ್ರುಗಳ ಕುತ್ಸಿತವಾದ ಸಂತೋಷವನ್ನು ನಾಶಗೊಳಿಸುವುದೋ ಹೊಳೆಯುವ ಯಾರ ಖಡ್ಗವು ಆತನ ಉನ್ನತ ಪದವಿಯನ್ನು ಪ್ರಕಟಿಸುವುದೋ ಆ ಉದಾತ್ತನಾದ ಬಲ್ಲಾಳರಾಜನು ಜಗತ್ತನ್ನು ಬೆಳಗಲಿ.
೫. (i) ಅರಿಭಯಂಕರವೂ ಬಹಳ ಉದ್ದವೂ ಆದ ಸೊಂಡಿಲೂ ಸರ್ಪರಾಜಾಲಂಕೃತವಾಗಿ ಅಧಿಕವಾಗಿ ಹೊಳೆಯುರ ಮೂರ್ತಿಯೂ, ಆಸಕ್ತರೂ ವಿದ್ವಾಂಸರೂ ಆದ ಭಕ್ತರಿಂದ ಪರಿಗ್ರಾಹ್ಯವಾದ ಸಹಜ ವಿದ್ಯೆಯೂ ವಿಶ್ವವಿನುತವಾದ ಪಾದವೂ, ಸತ್ಪುರುಷರಿಗೆ ಪ್ರಿಯವಾದ ವರದಾನವೂ, ಸದಾ ತುಂಬಿಗಳಿಗೆ ಪ್ರಿಯವಾದ ಉತ್ತಮವಾದ ಮದೋದಕವೂ, ನಮಸ್ಕಾರ ಮಾಡುವವರಿಗೆ ಮಂಗಳವನ್ನುಂಟುಮಾಡುವ ಭದ್ರಗಜಲಕ್ಷಣದ ಮುಖವೂ, ಕಮಲಧಾರಣವೂ, ಆಶ್ಚರ್ಯಕರವಾದ ಮಹಿಮೆಯೂ ಉಳ್ಳ ಗಣಪತಿದೇವನು ಭೂಮಂಡಲವನ್ನು ರಕ್ಷಿಸಲಿ. (ii) ಆಜಾನುಬಾಹುವೂ ಶತ್ರುಭಯಂಕರವೂ, ಹೊಳೆಯುವ ಶ್ರೇಷ್ಠವಾದ ಕೌಸ್ತುಭಾದ್ಯಾಭರಣಗಳಿಂದಲಂಕೃತವೂ

* ಕ. ಶ್ರೀ ಜಗನ್ನಾಥದೇವಂ, ಗ. ಶ್ರೀ ಜಗನ್ನಾಥಸೂರ್ಯಂ

ಕೆಸಱೊಳ್ ಪುಟ್ಟಿದುದಂತುಮಲ್ಲದೆ ರಜಸ್ಸಂಲೀಢಮೆಂತುಂ ಜಡಾ
ವಸಥಂ ಚೀಃ ಮಧುಪಪ್ರಸಂಗಿ ಖರದಂಡಂ ಮತ್ತೆನುತ್ತಬ್ಜಮಂ
ಬಿಸುಟತ್ಯುತ್ತಮಮಿಂತುಟೆಂದು ಪಿರಿದುಂ ಸಂತೋಷದಿಂ ವಾಣಿ ಬಂ
ದು ಸಮಂತಿರ್ಕೆ ನವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ ॥ ೬

ಕೋಕನದಗರ್ಭನಿಂ ವಾ
ಲ್ಮೀಕಿಯೆ ಕವಿ ಮುನಿನಿಕಾಯದೊಳ್ ಸಂದತ್ತೀ
ಲೋಕಕ್ಕೆ ನಾನೃಷಿಃ ಕುರು
ತೇಕಾವ್ಯಮೆನಿಪ್ಪ ಮಹಿಮೆ ತನ್ಮುನಿವರನಾ ॥ ೭

ಸ್ತುತಿಗೆಯ್ವೆಂ ಕೃತಪಂಚಮಶ್ರುತಿಪುರಾಣ ವ್ಯಾಸನಂ ವ್ಯಾಸನಂ
ಕೃತಿಲೋಕಶ್ರುತಿಪೂರಕಲ್ಪಕವಿತಾಗೀರ್ಬಾಣನಂ ಬಾಣನಂ
ಚತುರೋಕ್ತಿಪ್ರಚುರಾರ್ಥಕಾವ್ಯಜನಿತೋರ್ವೀಹರ್ಷನಂ ಹರ್ಷನಂ
ಶತಪತ್ರಾಕ್ಷ ಕಥಾಮೃತಚ್ಯುತ ಬುಧಸ್ತೋಮಾಘನಂ ಮಾಘನಂ ॥ ೮

ಹೆಡೆಯೆತ್ತಿದ ಆದಿಶೇಷನಿಗೆ ಅಲಂಕಾರವೂ ಆದ ಮೂರ್ತಿಯೂ, ಯೋಗಿಧ್ಯಾನಗಮ್ಯವೂ ಅನುಭಾವ್ಯವೂ ಆದ ನಿತ್ಯಾನಂದಪರಬ್ರಹ್ಮರೂಪವೂ, ಚತುರ್ದಶ ಲೋಕಸ್ತುತಪಾದವೂ, ಸಭ್ಯಸಮೂಹಪ್ರಿಯವಾದ ಸ್ಥಾನವೂ, ಭಕ್ತಾಭೀಷ್ಟವರದಾತೃತ್ವವೂ ಉಳ್ಳ ದೇವಸಮೂಹಪಾಲಕನೂ ಮಂಗಳಕರನೂ ಶ್ರೀಲಕ್ಷ್ಮೀಸಮೇತನಾಗಿ ಆಶ್ಚರ್ಯಕರ ಮಹಿಮೆಯುಳ್ಳವನೂ ಆದ ವಿಷ್ಣುವು ಭೂಮಂಡಲವನ್ನು ರಕ್ಷಿಸಲಿ. ೬. ಸರಸ್ವತಿಯು ತನ್ನ ನೆಲೆಯಾದ ಕಮಲವು ಕೆಸರಿನಲ್ಲಿ ಹುಟ್ಟಿದುದು, ಧೂಳಿನಿಂದ ದೋಷದಿಂದ ಕೂಡಿದುದು ಅಲ್ಲದೆ ಜಡ (= ಜಲ) ಜೀವಿ ಛೀ! ಮಧುಪಪ್ರಸಂಗಿ, ಮದ್ಯಪಾಯಿಗಳಿಗೆ, ತುಂಬಿಗಳಿಗೆ ಆಶ್ರಯವಾದುದು. ಖರದಂಡ (ಒರಟಾದ ನಾಳವುಳ್ಳುದು) ವುಳ್ಳುದು, ಎಂದು ತಿಳಿದಿರುವುದರಿಂದ ಆ ಕಮಲವಾಸವನ್ನು ತ್ಯಜಿಸಿಬಿಟ್ಟು, ಬಂದು ದೋಷರಹಿತವಾಗಿ ಅತ್ಯುತ್ತಮವಾಗಿರುವ ರುದ್ರಭಟ್ಟನ ಮುಖಕಮಲದಲ್ಲಿ ದಳಪೀಠದಂತಿರುವ ನಾಲಗೆಯ ಅಗ್ರದಲ್ಲಿ ಹೊಸದಾದ ಸುಗಂಧದಂತೆ ಅತಿ ಸಂತೋಷದಿಂದ ನೆಲೆಸಲಿ. ೭. ಬ್ರಹ್ಮನು ಉಪದೇಶಿಸಿದಂತೆ ಋಷಿಗಳಲ್ಲೊಬ್ಬನಾದ ವಾಲ್ಮೀಕಿಯು ಆದಿಕಾವ್ಯ ರಾಮಾಯಣವನ್ನು ಬರೆದುದರಿಂದ ವಾಲ್ಮೀಕಿಯೆ ಕವಿ, "ನಾನೃಷಿಃ ಕುರುತೇ ಕಾವ್ಯಂ = ಋಷಿಯಲ್ಲದ್ದವನು ಕಾವ್ಯವನ್ನು ಬರೆಯಲಾರನು." ಎಂದು ಆ ಋಷಿಯ ಮಹಿಮೆಯು ಬ್ರಹ್ಮನಿಂದ ಲೋಕದಲ್ಲಿ ಪ್ರಸಿದ್ಧವಾಯಿತು. ೮. ಐದನೆಯ ವೇದ ಎನಿಸಿಕೊಂಡಿರುವ ಮಹಾಭಾರತವನ್ನೂ ಪುರಾಣೋಪಪುರಾಣಗಳನ್ನೂ ವಿಸ್ತಾರವಾಗಿ ರಚಿಸಿರುವ ವ್ಯಾಸಮಹರ್ಷಿಯನ್ನೂ, ಕಾವ್ಯಪ್ರಪಂಚದಲ್ಲಿ ಕರ್ಣಾಭರಣದಂತಿರುವ ಕಾದಂಬರಿಯನ್ನು ಬರೆದಿರುವ ಕವಿತಾವಾಗ್ಬಾಣಧರನಾದ ಬಾಣಕವಿಯನ್ನೂ ಚಮತ್ಕಾರಶಬ್ದಯುತವೂ ಸ್ಪಷ್ಟವೂ ಪ್ರಸಿದ್ಧವೂ ಆದ ಅರ್ಥವುಳ್ಳುದೂ ಆದ ನಾಗಾನಂದ, ರತ್ನಾವಳಿ ನಾಟಕಗಳ ಕವಿತೆಯಿಂದ ಪ್ರಪಂಚಕ್ಕೆ ಹರ್ಷವನ್ನುಂಟು ಮಾಡಿದ ಶ್ರೀಹರ್ಷನನ್ನೂ, ಕಮಲನಯನ ಕೃಷ್ಣನ ಕಥಾಮೃತದಿಂದ ವಿದ್ವಾಂಸರ,

ಸುಕವಿಗಣನೆಯೊಳ್ ದ
ತ್ತ ಕನಿಷ್ಠಿಕನಾಗೆ ಕಾಳಿದಾಸಂ ಮೊದಲೆಂ
ದು ಕರಂ ಬಣ್ಣಿಪರದಱಿಂ
ದೆ ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ ॥ ೯

ಇನಿತುಮವಿರ್ಕೆ ಮತತಿಯೊಳೀ ಧರೆ ಬಣ್ಣಿಸೆ ಸಂದ ಶಂಖವ
ರ್ಮನ ಬಗೆ ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ
ಮನಸಿಜನೋಜೆ ಕಣ್ಣಮನ ಜಾಣ್ನುಡಿ ಪಂಪನ ರೀತಿ ಚಂದ್ರಭ
ಟ್ಟನ ಜತಿ ಪೊನ್ನಮಯ್ಯನ ಬೆಡಂಗು ಗಜಾಂಕುಶನುಳ್ಳ ಬಿನ್ನಣಂ ॥ ೧೦

ಉತ್ಸವಕರಮೆನೆ ಬೆಳಪ ಶ
ರತ್ಸಮಯದೊಳಿಂದುಕಾಂತಿ ದಳವೇಱುವವೊಲ್
ವತ್ಸಳರೆನಿಸುವ ಬುಧರಿನ
ಮತ್ಸರರಿಂ ಕೃತಿ[1]ಕೃತಾರ್ಥಮಕ್ಕುಮಮೋಘಂ ॥ ೧೧

ತುಡುಕಿದ ದೋಷಿಯನಲ್ಲದೆ
ಪಿಡಿಯದು ಘಟಸರ್ಪನಂತುಟಲ್ಲದೆ ತನ್ನಂ
ತುಡುಕದ ನಿರ್ದೋಷಿಯುಮಂ
ಪಿಡಿವುದು ಖಳಮುಖಘಟೋಗ್ರಜಿಹ್ವಾಸರ್ಪಂ ॥ ೧೨

ದೇವತೆಗಳ ಸಮೂಹದ ಪಾಪವನ್ನು ನಾಶಗೊಳಿಸಿದ ಮಾಘಕವಿಯನ್ನೂ ಸ್ತುತಿಸುವೆನು. ೯. ಕವಿಗಳನ್ನು ಎಣಿಕೆಮಾಡುವಾಗ (ಬಲಗಯ್ಯಿನ) ಕಿರುಬೆರಳಿನಿಂದ ಒಂದನೆಯವನು ಎಂದು [2] ಆರಂಭಿಸಿ, ಕಾಳಿದಾಸನ ಹೆಸರು (ಮೊದಲನೆಯವನು ಎಂದು) ಹೇಳುತ್ತಾ ಆ ಕಿರುಬೆರಳನ್ನು ಮಡಿಸಿಕೊಂಡು ಎಲ್ಲರೂ ಶ್ಲಾಘಿಸಿದರು. ಆದುದರಿಂದ ಇತರ ಕವಿಗಳೆಲ್ಲರೂ ಕಾಳಿದಾಸನ ದಾಸರೆನಿಸಿಕೊಳ್ಳುವರು. ೧೦. ನನ್ನ ಕಾವ್ಯವನ್ನು ಲೋಕವು ವರ್ಣಿಸುವಂತೆ ಆಗಲು, ಇದರಲ್ಲಿ ಪ್ರಸಿದ್ಧನಾದ ಶಂಖವರ್ಮನ ಬಗೆ ಶಾಂತಿವರ್ಮನ ನಯ ಗುಣವರ್ಮನ ಬಂಧಗೌರವ ಮನಸಿಜನ ಓಜೆ ಕರ್ಣಪಾರ್ಯನ ಜಾಣತನದ ಮಾತು, ಪಂಪನ ರೀತಿ ಚಂದ್ರಭಟ್ಟನ ಯತಿ ಪೊನ್ನಮಯ್ಯನ ಬೆಡಗು ಗಜಾಂಕುಶನ ವಿಜ್ಞಾನ ಇವಿಷ್ಟೂ ಬಂದಿರಲಿ. ೧೧. ಸಂತೋಷಕರವಾಗಿ, ಬೆಳಗುವ ಶರತ್ಕಾಲದಲ್ಲಿ ಚಂದ್ರಕಾಂತಿಯು ಹೆಚ್ಚುವಂತೆ ಮಾತ್ಸರ್ಯವಿಲ್ಲದೆ ಕವಿಕಾವ್ಯದಲ್ಲಿ ವಾತ್ಸಲ್ಯವುಳ್ಳ ವಿದ್ವಾಂಸರಿಂದ (ನನ್ನ) ಕಾವ್ಯವು ನಿಜವಾಗಿಯೂ ಸಾರ್ಥಕ (ಸ್ತುತ್ಯ)ವಾಗುವುದು. ೧೨. ಘಟಸರ್ಪವು ತನ್ನನ್ನು ಹಿಡಿಯಲು ಕೈ ಹಾಕಿದ ದೋಷಿಯನ್ನು ಮಾತ್ರವೇ ಹಿಡಿದು ಕಚ್ಚುವುದು. ನಿರ್ದೋಷಿಯನ್ನು

---

೧. ಕ-ಅಮತ್ಸರ ಮತ್ಕೃತಿ

೨. ಪುರಾಕವೀನಾಂ ಗಣನಾ ಪ್ರಸಂಗೇ । ಕನಿಷ್ಠಿಕಾಧಿಷ್ಠಿತ ಕಾಳಿದಾಸಾ । ಅದ್ಯಾಪಿ ತತ್ತುಲ್ಯ ಕವೇರಭಾವಾತ್ । ಅನಾಮಿಕಾ ಸಾರ್ಥವತೀ ಬಭೂವ ॥ ಎಂಬ ಶ್ಲೋಕವು ಪ್ರಸಿದ್ಧವಾಗಿದೆ. ಎರಡನೆಯ ಬೆರಳಿಗೆ ಸಂಸ್ಕೃತದಲ್ಲಿ ಅನಾಮಿಕ ಎಂದು ಹೆಸರು. ಅವನಿಗೆ ಸಮಾನರಾದ ಕವಿಗಳಾರೂ ದೊರೆಯದುದರಿಂದ ಕಿರುಬೆರಳಿನ ಪಕ್ಕದ ಎರಡನೆಯ ಬೆರಳಿಗೆ ಅನಾಮಿಕಾ-ಹೆಸರನ್ನು ಪಡೆಯದುದು ಎಂದು ಹೆಸರಾಯಿತು.

ಕವಿತಾಪ್ರೌಢನೆ ಸೋಲ್ವವೊಲ್ ಕೃತಿಯೊಳಜ್ಞಂ ಸೋಲ್ವನೇ ಚಂದ್ರಕಾಂ
ತವೊಲಿರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ ತುಂಬಿ ಪೀ
ರ್ವವೊಲೇಂ ಪೀರ್ದಪುದೆ ಕಡಂದುಱತೆ ನವ್ಯಾಮೋದಮಂ ಪೂಗಳೊಳ್
ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ ॥ ೧೩

ಅರ್ಥಾಭಾಸದಿನಕ್ಷರ
ಸಾರ್ಥಮನುಚ್ಚರಿಸೆ ಕಾವ್ಯವೆಂತೆಸೆಗುಂ ತ
ತ್ಸಾರ್ಥಮನಱಿಯದ ಮುನ್ನಮೆ
ಪಾರ್ಥಂ ರಂಜಿಸದ ಪಳಿಕುಮಣಿವೊಲಿರದೇ ॥ ೧೪

ಪೊಸತೆನೆ ಪೇಳ್ವ ತಿರ್ದುವಱಿವೆನ್ನೊಳೆ ಸನ್ನಿದಮಾದೊಡಂ ಚಿರಂ
ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ತಮಂತೆ ತಿ
ರ್ದಿಸುವುದೆ ನಲ್ ನಯಂ ಬೆಳಗೆ ಕನ್ನಡಿ ಸೋದಿಸೆ ಪೊನ್ ವಿರಾಜಿಪಂ
ತೆಸೆದು ಬಟಿಕ್ಕೆ ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ ॥ ೧೫

ಮುಟ್ಟುವುದೇ ಇಲ್ಲ. ಆದರೆ ನೀಚರ ಮುಖವೆಂಬ ಗಡಿಗೆಯಲ್ಲಿರುವ ನಾಲಗೆಯೆಂಬ ಕ್ರೂರಸರ್ಪವು ತನ್ನ ತಂಟೆಗೇ ಬಾರದ ನಿರ್ದೋಷಿಯನ್ನೂ ಹಿಡಿದು ಕಚ್ಚುವುದು.* ೧೩. ಒಬ್ಬ ಕವಿ ಬರೆದುದು ಸತ್ಕಾವ್ಯವಾಗಿದ್ದರೂ ಅದನ್ನು ಪ್ರೌಢನಾದ ಮತ್ತೊಬ್ಬ ಕವಿಯು ಮೆಚ್ಚಿ ಪರವಶನಾಗುವಂತೆ ಅಜ್ಞನು ಮೆಚ್ಚಿ ಮನಗರಗುವನೆ । ಬೆಳುದಿಂಗಳಲ್ಲಿ ಚಂದ್ರಕಾಂತಶಿಲೆಯು ದ್ರವಿಸುವಂತೆ ಗೋರಿಕಲ್ಲು ದ್ರವಿಸುವುದೇ? ಹೂಗಳಲ್ಲಿರುವ ಹೊಸದಾದ ಸುವಾಸನೆಯನ್ನು ತುಂಬಿಯು ಹೀರುವಂತೆ ಕಣಜ (ಹುಳು)ವು ಹೀರುವುದೇ? ಚೈತ್ರಮಾಸದಲ್ಲಿ ಎಳೆಯ ಮಾವಿನ ಮರವು ಚಿಗುರುವಂತೆ ಮೋಟುಮರಗಳು ಚಿಗುರುವುವೆ? ೧೪. ಕಾವ್ಯವನ್ನು ರಚಿಸುವವನು ಅರ್ಥವು ಸ್ವಲ್ಪ ಮಾತ್ರ ತೋರುವ ಹಾಗೆ ಸುಮ್ಮನೆ ಅನೇಕ ಅಕ್ಷರಗಳನ್ನು ಉಚ್ಚರಿಸಿದ ಮಾತ್ರಕ್ಕೆ ಕಾವ್ಯವು ಚೆನ್ನಾಗಿರುವುದೇ? ಕಾವ್ಯವನ್ನು ಓದುವವನೂ ಪ್ರೌಢನಲ್ಲದೆ ಸರಿಯಾಗಿ ಅರ್ಥವಾಗದಂತೆ ಅಕ್ಷರಗಳನ್ನು ಉಚ್ಚರಿಸಿದರೆ ಒಳ್ಳೆಯ ಕಾವ್ಯವು ಕೂಡ ಅವನಿಗೂ ಕೇಳುವವರಿಗೂ ಚೆನ್ನಾಗಿ ಕಾಣಿಸುವುದೆ? ಶುದ್ಧಿಯಾಗದ ಸ್ಫಟಿಕಮಣಿಯಂತೆ ಸರಿಯಾದ ಅರ್ಥವು ಹೊಳೆಯದೆ ಅಪಾರ್ಥವಾಗುವುದು. ೧೫. ವಾಚಕರು ಈ ಕಾವ್ಯವು ಹೊಸದು, ಚೆನ್ನಾಗಿದೆ. ಎಂದು ಹೇಳುವಂತೆ ಕಾವ್ಯವನ್ನು ಬರೆಯುವ ಮತ್ತು ನನ್ನ ಮತ್ತು ಬೇರೆ ಕವಿಗಳ ಕಾವ್ಯವನ್ನು ತಿದ್ದುವ ಅರಿವು ನನ್ನಲ್ಲಿದೆ. ಆದರೂ ನನ್ನ ಕಾವ್ಯವನ್ನು ರಸಿಕರಾದ ವಿದ್ವಾಂಸರಿಂದ ತಿದ್ದಿಸಿದ ಹೊರತು ನನ್ನ ಚಿತ್ತವು ಸಮಾಧಾನಗೊಳ್ಳುವುದಿಲ್ಲ. ಆದುದರಿಂದ ಹಾಗೆ ತಿದ್ದಿಸುವುದೇ ಸರಿಯಾದ ನೀತಿ ಸದುಪಾಯ. ಬೆಳಗಿದರೆ ಕನ್ನಡಿಯೂ ಪುಟಕ್ಕೆ ಹಾಕಿ ಶೋಧಿಸಿದರೆ ಹೊನ್ನೂ ಹೆಚ್ಚಾಗಿ

---

*ನೀಚರು ಸತ್ಕಾವ್ಯವನ್ನೂ ಕವಿಯನ್ನೂ ನಿಷ್ಕಾರಣವಾಗಿ ದ್ವೇಷಿಸಿ, ದೂಷಿಸುವರು ಎಂಬುದು; ಕವಿಯ ಅಭಿಪ್ರಾಯ. ಶಂಖವರ್ಮನೇ ಮೊದಲಾದ ಕವಿಗಳ ವಿಚಾರವನ್ನೂ, ಘಟಸರ್ಪ ವಿಚಾರವನ್ನೂ ಅನುಬಂಧದಲ್ಲಿ ನೋಡಿ.

ಇನಿಯಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ
ದನರಸದಣ್ಪಿನಂತೆ ನನೆಯೇಱಿದ ಮಲ್ಲಿಗೆಯಂತೆ ಪೂರ್ಣಚಂ
ದ್ರನ ಸಿರಿಯಂತೆ ಬಂದೆಸಪ ತೆಂಕಣ ತಂಬೆಲರಂತೆ ರುದ್ರಭ
ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ ॥ ೧೬

ಈ ತೆಱದಿಂ ಬುಧರ್ ಪೊಗೞ್ದು ಮತ್ಕೃತಿಯಂ ನೆಱೆ ಶಾರದಾಭ್ರಚಂ
ದ್ರಾತಪರುದ್ರ ಕೃಷ್ಣಕಥೆವೇೞೆನೆ ಕಾವ್ಯಸಮಾಧಿಯಿಂ ಪರಂ
ಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳತತ್ತ್ವಬೋಧಮು
ದ್ದ್ಯೋತಿಪುದೆಂಬುದಂ ಬಯಸಿ ಪೇೞಲೊಡರ್ಚಿದೆನೀ ಪ್ರಬಂಧಮಂ ॥ ೧೭

ಅಳವಲ್ಲೀ ಸ್ತುತಿಯೆನ್ನ ಚಿತ್ತವಣುಮಾತ್ರಂ ಜಿಹ್ವೆಯೊಂದಕ್ಕರಂ
ಗಳುಮೈವತ್ತೆರಡೆಂಬ ಚಿತ್ತವಖಿಳೋರ್ವೀವ್ಯಾಪಕಂ ಜಿಹ್ವೆ ಕೇ
ವಳಮಲ್ತೇನುಮನೆಂಬುದಕ್ಕರಮುಮೆಲ್ಲಾ ವೇದ ಶಾಸ್ತ್ರಂಗಳಂ
ಬಳಸಿತ್ತಂತುಮತರ್ಕ್ಯಮಲ್ಲವೆ ಮಹತ್ತ್ವಂ ವಿಷ್ಣು ಸರ್ವಜ್ಞನಾ ॥ ೧೮

ಪಿರಿಯಂ ಬ್ರಹ್ಮಾದಿದೇವರ್ಕಳಿನೆನುತುಮದೇಂ ವಿಷ್ಣುಗಶ್ಲಾಘೆಯಂ* ಬಿ
ತ್ತರಿಪೆಂ ಕುಂಭಾಂಬುವಿಂದಂಬುಧಿಜಳಮಣುವಿಂ ಪರ್ವತಂ ಕ್ಷುದ್ರ ಶಂಖೋ
ದರದಿಂ ಬ್ರಹ್ಮಾಂಡಗರ್ಭಂ ಪಿರಿದೆನೆ ಪೊಗೞ್ವಂದಂದಮೇ ವೇದಶಾಸ್ತ್ರಾ
ರ್ಥರಹಸ್ಯಾಚಿಂತ್ಯಸಾಮರ್ಥ್ಯದ ಮುರಹರನಂ ಬಣ್ಣಿಸಲ್ ಬಲ್ಲನಾವಂ ೧೯

ಹೊಳೆಯುವಂತೆ ಪ್ರಾಜ್ಞರಿಂದ ತಿದ್ದಿಸಿದ ಮೇಲೆ ನನ್ನ ಕಾವ್ಯವು ಪ್ರಪಂಚಕ್ಕೇ ಚಮತ್ಕಾರವನ್ನುಂಟುಮಾಡುವುದಾಗುತ್ತದೆ. ೧೬. ಪ್ರಿಯೆಯ ಆಲಿಂಗನದಂತೆಯೂ ಗಂಧರಸಲೇಪನದಂತೆಯೂ ಹೂಗಳಿಂದ ತುಂಬಿದ ಮಲ್ಲಿಗೆಯ ಬಳ್ಳಿಯಂತೆಯೂ ಪೂರ್ಣಚಂದ್ರನ ಕಾಂತಿಯಂತೆಯೂ ರುದ್ರಭಟ್ಟನ ಕವಿತಾರಸವು ಸಜ್ಜನರ ಮನಸ್ಸನ್ನು ಹಿಡಿದು ಸ್ವಾಧೀನಪಡಿಸಿಕೊಳ್ಳುವುದು. ೧೭. ಎಂದು ಹೀಗೆ ವಿದ್ವಾಂಸರು ನನ್ನ ಕಾವ್ಯವನ್ನು ಚೆನ್ನಾಗಿ ಹೊಗಳಿದರು. ಶಾರದಾಭ್ರಚಂದ್ರಾತಪರುದ್ರ = ಶರತ್ಕಾಲದ ಮೋಡದ ಮೇಲೆ ಬೀಳುವ ಬೆಳುದಿಂಗಳಂತೆ ಇರುವ ರುದ್ರಭಟ್ಟನೇ ಕೃಷ್ಣನ ಕಥೆಯನ್ನು ಹೇಳು! ಎಂದರು. ಕಾವ್ಯರಚನೆಯ ಯೋಗಸಮಾಧಿ ಸ್ಥಿತಿಯಲ್ಲಿ ಪರಂಜ್ಯೋತಿ ವಿಷ್ಣುವು ನನ್ನ ಚಿತ್ತದಲ್ಲಿ ನೆಲಸುವುದರಿಂದ ನಿರ್ಮಲವಾದ ತತ್ತ್ವಜ್ಞಾನವು ಸುಪ್ರಕಾಶಗೊಳ್ಳುವುದು ಎಂದು ಬಯಸಿ ಈ ಪ್ರಬಂಧವನ್ನು ಹೇಳಲು ತೊಡಗಿದೆನು. ೧೮. ಆದುದರಿಂದ ಈ ಕೃಷ್ಣಸ್ತುತಿಯು ನನಗೆ ಸಾಧ್ಯವಿಲ್ಲ. ನನ್ನ ಚಿತ್ತವು ಅಣು ಮಾತ್ರವಾದುದು. ನಾಲಗೆ ಒಂದೇ, ಅಕ್ಷರಗಳು ಐವತ್ತೆರಡು ಎಂದುಕೊಳ್ಳುವ ಈ ಚಿತ್ತವು ಭೂಮಿಯನ್ನೆಲ್ಲಾ ವ್ಯಾಪಿಸುವುದಾಗುವುದು. ನಾಲಗೆ ಸಾಮಾನ್ಯವಾದುದಾಗಿರದೆ ಏನನ್ನು ಬೇಕಾದರೂ ಹೇಳುವುದಾಗುತ್ತದೆ. ಅಕ್ಷರಗಳು ೫೨ ಆದರೇನು? ಎಲ್ಲಾ ವೇದಶಾಸ್ತ್ರಗಳನ್ನು ಅವು ಆವರಿಸಿವೆಯಲ್ಲವೆ? ಆದರೂ ಸರ್ವಜ್ಞನಾದ ವಿಷ್ಣುವಿನ ಮಹಿಮೆಯು ಊಹಿಸಲಾಗದುದು. ೧೯. 'ವಿಷ್ಣುವು ಬ್ರಹ್ಮಾದಿದೇವತೆಗಳಿಗಿಂತ ಹಿರಿಯನು' ಎಂದು ಹೇಳಿ, ಅವನಿಗೆ ಅಶ್ಲಾಘ್ಯತೆಯನ್ನು (ಕಲ್ಪಿಸಿ),

---

* ಕ, ಖ. ನೆನೆಯುಮದೇಂ ವಿಷ್ಣುಗಶ್ಲಾಘ್ಯವಾಂ

[1]ಏದೊರೆ ಪೆಂಪೊ ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪ
ದ್ಮೋದಕಮಿಂದ್ರಮುಖ್ಯದಿವಿಜರ್ ಸ್ವಪರಿಗ್ರಹಮಬ್ಜಜಂ ಸ್ವಕೀ
ಯೋದರಪದ್ಮಯೋನಿಭವನಾತ್ಮತನೂಭವನೆಂದೆನಿಪ್ಪ ದು
ಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ ೨೦

ಕತೆ ವಿಷ್ಣುಪುರಾಣಂ ಸ
ತ್ಕೃತಿವೇಳ್ದಂ ಸುಕವಿರುದ್ರನೀ ಕೃತಿಗೆ ಕಥಾ
ಪತಿ ಕೃಷ್ಣಂ ಕೃತಿಯುಂ ಭೂ
ನುತಮೆ ಜಗನ್ನಾಥವಿಜಯಮೆನೆ ಮೆಚ್ಚದರಾರ್ ೨೧

ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ ವಚಸ್ಸುಂದರೀ ನೃ
ತ್ಯ ನಿವಾಸಂ ಚಂದ್ರಮೌಳಿ ಪ್ರಮುಖ ನಿಖಿಲ ವಿದ್ವಜ್ಜನಂ ಮೆಚ್ಚೆ ರುದ್ರಾಂ
ಕನೆ ಪೇಳ್ದಂ ದೇವಚೂಡಾಮಣಿ ಮಣಿ ಮುಕುರಂ ವಿಷ್ಣು ಕೈಕೊಳ್ವನೆಂದಂ
ದನವದ್ಯಂ ರೀತಿಚೋದ್ಯಂ ಸಕವಿಬುಧಹೃದ್ಯಂ ಸಮಂತೀ ಪ್ರಪದ್ಯಂ ೨೨

ವ॥ ಅದೆಂತೆಂದೊಡೆ

ವಿಸ್ತರಿಸಲೇ!! ಹಾಗೆ ಹೇಳಿ ಹೊಗಳುವುದು-ಕೊಡ ಅಥವಾ ಕಲಶದ ನೀರಿಗಿಂತಲೂ ಸಮುದ್ರದ ನೀರು ಹೆಚ್ಚು, ಅಣುವಿಗಿಂತಲೂ ಪರ್ವತವು ದೊಡ್ಡದು, ಶಂಖದ ಒಳಭಾಗಕ್ಕಿಂತ ಬ್ರಹ್ಮಾಂಡದೊಳ ಭಾಗವು ವಿಸ್ತಾರವಾದುದು ಎಂದು ಹೇಳಿ, ಹೊಗಳುವಂತೆಯೇ ಸರಿ. ವೇದಶಾಸ್ತ್ರ ರಹಸ್ಯದಿಂದಲೂ ಅಚಿಂತ್ಯವಾದ ಸಾಮರ್ಥ್ಯವುಳ್ಳ ಮುರಹರನನ್ನು ವರ್ಣಿಸಲು ಬಲ್ಲವನು ಯಾರಿರುವನು? ೨೦. ಅದೇನು ಮಹಿಮೆಯೋ! ಲಕ್ಷ್ಮೀದೇವಿ, ಆತನ ವಲ್ಲಭೆಯೂ ಗಂಗೆ ಆತನ ಪಾದೋದಕವೂ ಇಂದ್ರನೇ ಮೊದಲಾದ ದೇವತೆಗಳು ಆತನ ಪರಿವಾರದವರೂ, ಬ್ರಹ್ಮನು ಆತನ ನಾಭಿಕಮಲದಲ್ಲುದಿಸಿದ ಮಗನೂ ಆಗಿರುವಾಗ ಕ್ಷೀರಸಮುದ್ರಶಯನನಾದ ಅವನನ್ನು ಮನುಜನೊಬ್ಬನು ವರ್ಣಿಸಿ, ಸ್ತುತಿಸಲು ಯತ್ನಿಸುವುದು ದಿಟ್ಟತನವಲ್ಲವೆ ೨೧. ಈ ಕಥೆ ವಿಷ್ಣು ಪುರಾಣ, ಈ ಸತ್ಕಾವ್ಯವನ್ನು ಬರೆದವನು ಶ್ರೇಷ್ಠ ಕವಿ ರುದ್ರಭಟ್ಟ, ಕಾವ್ಯದ ಕಥಾನಾಯಕನೋ ಶ್ರೀಕೃಷ್ಣ, ಕಾವ್ಯವೋ, ಲೋಕಸ್ತುತವಾದ ಜಗನ್ನಾಥ ವಿಜಯ, ಎಂದ ಮೇಲೆ ಇದನ್ನು ಮೆಚ್ಚದವರಾರು! ೨೨. ಕಮಲಾಕ್ಷನ ಕೀರ್ತಿಯಿಂದ ಪವಿತ್ರವಾದುದು, ಈ ಗ್ರಂಥದ ಕಥೆ. ಕವಿರಾಜ, ವಚಸ್ಸುಂದರೀನೃತ್ಯನಿವಾಸ ವಾಗ್ದೇವಿಯ ನರ್ತನರಂಗ ಎಂಬ ಬಿರುದಾಂಕಿತನಾದ ರುದ್ರಭಟ್ಟ ಕವಿ, ಚಂದ್ರಮೌಳಿಯೇ ಮೊದಲಾದ ವಿದ್ವಜ್ಜನರು ಮೆಚ್ಚುವಂತೆ ಕಥೆಯನ್ನು ಹೇಳಿದವನು. ದೇವಶಿರೋಮಣಿ ರತ್ನದ ಕನ್ನಡಿಯಾದ ವಿಷ್ಣುವು ಇದನ್ನು ಸ್ವೀಕರಿಸುವನು ಎಂದ ಬಳಿಕ ರೀತಿಯಲ್ಲಿ ಆಶ್ಚರ್ಯಕರವೂ ಸರ್ವಪಂಡಿತಹೃದ್ಯವೂ ಆದ ಈ ಉತ್ತಮ ಪದ್ಯ (ಕಾವ್ಯ)ವು

---

೧. ಕ-ಮೋದಮೆ ಮೂರ್ತಿ (ಕ)

ನಳಿನೀಗರ್ಭಾಂಡಮಾಲಾಫಲಿತಮೆನಿಪ ಪೃಥ್ವೀ ಮಹಾವಲ್ಲಿಯಂ ತಾಂ
ಬಳಸಿರ್ದಾವಾಲದಂತಿರ್ಪುದು ಜಲಚರಸಂಭೂತ ಸಂಪದ್ವಿಧಾನಂ
ವಿಳಸದ್ರತ್ನಪ್ರತಾನಂ ಕುಲಗಿರಿಶರಣಸ್ಥಾನಮುತ್ಕೀರ್ಣಫೇನಂ
ಬಳವದ್ವೀಚೀವಿತಾನಂ ಪ್ರಬಳಘುಳುಘುಳುಧ್ವಾನಮಂಭೋನಿಧಾನಂ ೨೩

ಆ ನೆಗಟ್ದ ಮಹಾವಾರಿನಿ
ಧಾನಂ ಪರಿವೇಷ್ಟಿಸಿರ್ದ ಜಂಬೂದ್ವೀಪಂ
ತಾನೆಸೆದುದು ವೃತ್ತತೆಯಿಂ
ದಾನವಮರ್ದನನ ಕೂರ್ಮಮೂರ್ತಿಯ ತೆಱದಿಂ ೨೪

ನೆಗಟ್ದಾ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ ಪಲ್ಲವಂ
ಭಗಣಂ ಪಂಜರಮಂಬುದಾಳಿಯೆನೆ*ಪೂಣ್ದಬ್ಜಾಸನಂ ಪ್ರೀತಿ ಕೈ
ಮಿಗೆ ದೈತ್ಯಾಂತಕನಾಮದಿಂದೆಸೆವ ಲಕ್ಷ್ಮೀವಲ್ಲಭಂಗೆತ್ತಿದಾ
ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ ॥ ೨೫

ವ॥ ಆ ಮೇರುಗಿರಿಯ ಶಿಖರನಿವಾಸದೊಳ್,

ನತನಾನಾಮರಮೌಳಿರತ್ನಕಿರಣಂ ನಾನಾಪ್ಸರಃ ಕೇಕರ
ದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ತೊಪ್ಪುತಿರ್ದಂ ಜಗ
ತ್ಪತಿಯೊಡ್ಡೋಲಗದೊಳ್ ಚತುರ್ಮುಖನತರ್ಕ್ಯ ಬ್ರಹ್ಮತೇಜಶ್ಶಿಖಂ
ಶ್ರುತಿಗಾನೈಕಸುಖಂ ನಮಚ್ಛತಮುಖಂ ವಾಣೀವಧೂಟೀಸಖಂ ೨೬

ಸ್ತುತ್ಯವಾದುದು. ೨೩. ಜಲಚರಗಳಿಂದುಂಟಾದ ಸಂಪತ್ತಿಗೆ ನೆಲೆಯೂ ಹೊಳೆಯುವ ರತ್ನ ರಾಶಿಯುಳ್ಳುದೂ, ಕುಲಗಿರಿಗಳ ರಕ್ಷಣಸ್ಥಾನವೂ ಹೆಚ್ಚಾಗಿ ಹರಡಿರುವ ನೊರೆಯ ರಾಶಿಗಳುಳ್ಳುದೂ, ಬಲವಾದ ಅಲೆಗಳ ಸಾಲುಳ್ಳುದೂ, ಪ್ರಬಲವಾದ ಘುಳು ಘುಳು ಧ್ವನಿಯುಳ್ಳುದೂ ಆದ ಸಮುದ್ರವು, ಬ್ರಹ್ಮಾಂಡಮಾಲೆಯ ಫಲವೆನಿಸಿಕೊಂಡಿರುವ ಪೃಥ್ವಿಯ ದೊಡ್ಡ ಬಳ್ಳಿಯನ್ನು ಸುತ್ತುವರಿದಿರುವ ಪಾತಿಯಂತಿರುವುದು. ೨೪. ಪ್ರಸಿದ್ಧವಾದ ಆ ಮಹಾಸಾಗರವು ಸುತ್ತಿಕೊಂಡಿರುವ ಜಂಬೂದ್ವೀಪವು ವೃತ್ತಾಕಾರದಿಂದ ವಿಷ್ಣುವಿನ ಕೂರ್ಮಾವತಾರಮೂರ್ತಿಯಂತೆ ಹೊಳೆಯುವುದು. ೨೫. ಪ್ರಸಿದ್ಧವಾದ ಆ ದ್ವೀಪದ ಮಧ್ಯದಲ್ಲಿ ಮೇರುಪರ್ವತವು ಸೂರ್ಯನೇ ಕಲಶ, ನಕ್ಷತ್ರಗಳೇ ಚಿಗುರು, ಕುಚ್ಚುಗಳು, ಮೋಡಗಳ ಗುಂಪೇ ಹಂಜರ ಎನ್ನುವಂತಿರಲು ಬ್ರಹ್ಮನು ಅತಿಭಕ್ತಿಯಿಂದ ಪ್ರತಿಜ್ಞೆಯನ್ನು ಮಾಡಿ, ರಾಕ್ಷಸಾಂತಕ ನಾಮದಿಂದ ಪ್ರಸಿದ್ಧನಾಗಿರುವ ಲಕ್ಷ್ಮೀವಲ್ಲಭನಿಗೆ ಎತ್ತಿ ಹಿಡಿದ ಆಕಾಶವೆಂಬ ಛತ್ರಿಯ ಚಿನ್ನದ ಕೋಲು (ಕಾವು) ಎನಿಸಿಕೊಳ್ಳಲು ತಕ್ಕದ್ದಾಗಿದ್ದಿತು. ವ॥ ಆ ಮೇರುಗಿರಿಯ ಶಿಖರನಿವಾಸದಲ್ಲಿ- ೨೬. ನಮಸ್ಕರಿಸುವ ನಾನಾ ದೇವತೆಗಳ ಶಿರೋರತ್ನ ಕಿರಣವೂ ಬಗೆಬಗೆಯ ಅಪ್ಸರೆಯರ ಕಡೆಗಣ್ಣಿನ ಕಾಂತಿಯೂ ಹಲವು ಬಗೆಯ ಚಾಮರದ ಬೀಸುಗಾಳಿಯೂ ಸಭೆಯನ್ನು ವ್ಯಾಪಿಸುತ್ತಿದ್ದಿತು. ಜಗತ್ಪತಿಯೂ ಊಹಿಸಲಸಾಧ್ಯನಾದ

* ಕ. ಖ. - ಪಂಜರ ಭಗಣಂ, ಪಲ್ಲವಮಂಬುರಾಶಿಯೆನೆ.

ವ|| ಅಂತಿರ್ಪನ್ನೆಗಂ[೧]

ಗರ್ವಿತ ನೃಪಾಲಕಾಧಮ
ದುರ್ವಿಳಸನಜನಿತ ಭೂರಿಭಾರದೊಳಿನಸುಂ
ನಿರ್ವಿಣ್ಣೆಯಾಗಿ ಭೂವಧು
ಗೀರ್ವಾಣಾವೃತ ವಿರಿಂಚಿಸಭೆಯಂ ಪೊಕ್ಕಳ್ ೨೭

ವ|| ಅಂತು ಪೊಕ್ಕು ಮುಕುಲಿತಾಂಜಲಿಯಾಗಿ ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ,

ಹೃದಯದಯಾಮೃತವಾಹಿನಿ
ವದನದೆ ಕಡೆಗೋಡಿವರಿದುದೆನೆ ನಿಜದಶನೌ
ಘದ ವಿಶದಪ್ರಭೆ ಸಭೆಯಂ
ಪುದಿಯೆ ಮಹೀವಧುಗೆ ವನಜಭವನಿಂತೆಂದಂ ೨೮

ಇನಿತೊಂದುದ್ವೇಗಮೇವಂ ಮರುಕಮದವಳಲ್ಬೇವಸಂ ನಿನ್ನೊಳೇಕಾ
ಯ್ತನಿಮಿತ್ತಂ ಪುಟ್ಟಿತೇಕಾರಣದಿನುದಯಿಸಿತ್ತೇತಱಿಂ ಪ್ರಾಪಿಸಿತ್ತಾ
ವನಿನಾದತ್ತೆಂತು ಪೊಣ್ಮಿತ್ತೆನೆ ವನರುಹಗರ್ಭ ಪ್ರಸಾದೋಕ್ತಿಯಂ ಕೇ
ಳ್ದಿನಿತಾನುಂ ಗದ್ಗದತ್ವಂ ನೆಗಳೆ ವಸುಮತೀಕಾಂತೆಯಿಂತೆಂದಳಾಗಳ್ ೨೯

ಬ್ರಹ್ಮತೇಜಸ್ಸೇ ಶಿಖೆಯಾಗಿರುವವನೂ ವೇದಗಾನಾಮೃತಾನಂದನೂ ಇಂದ್ರವಂದಿತನೂ ಸರಸ್ವತೀದೇವೀಯುತನೂ ಆದ ಚತುರ್ಮುಖ(ಬ್ರಹ್ಮ)ನು ಒಪ್ಪುತ್ತಿದ್ದನು. ವ|| ಹಾಗಿರುತ್ತಿರಲು- ೨೭. ಗರ್ವಿತರಾದ ರಾಜಾಧಮರ ದುರ್ವಿಳಾಸದಿಂದುಂಟಾದ ಭಾರಾಧಿಕ್ಯದಿಂದ ಅತಿದುಃಖಿತೆಯಾದ ಭೂದೇವಿಯು ದೇವತೆಗಳು ತುಂಬಿರುವ ಬ್ರಹ್ಮಸ್ಸಭೆಯನ್ನು ಹೊಕ್ಕಳು. ವ|| ಹಾಗೆ ಹೊಕ್ಕು ಕೈಮುಗಿದುಕೊಂಡು ಮುಂದೆ ನಿಂತಿರುವ ಭೂದೇವಿಯ ದೈನ್ಯಭಾವವನ್ನು ಬ್ರಹ್ಮನು ಕರುಣಾಯತಚಿತ್ತನಾಗಿ ನೋಡಿ, ೨೮. ಬ್ರಹ್ಮನ ಹೃದಯದ ದಯಾಮೃತ ಪ್ರವಾಹವು ಮುಖದಿಂದ ಕಡೆಗೋಡಿಯಾಗಿ ಹರಿಯಿತೆನ್ನುವಂತೆ ಆತನ ಹಲ್ಲುಗಳ ಶುಭ್ರಕಾಂತಿಯು ಸಭೆಯನ್ನು ವ್ಯಾಪಿಸುತ್ತಿರುವಲ್ಲಿ ಭೂದೇವಿಗೆ ಹೀಗೆಂದನು ೨೯. ಇಷ್ಟೊಂದು ಉದ್ವೇಗವೂ, ಚಿಂತೆಯೂ, ಮರುಕವೂ, ಸಂಕಟವೂ, ಬೇಸರವೂ ನಿನಗೇಕಾಯಿತು; ನಿಷ್ಕಾರಣವಾಗಿಯೇ ಆಯಿತೆ? ಯಾವ ಕಾರಣದಿಂದ ಉದಯಿಸಿತು? ಯಾವ ರೀತಿಯಿಂದೊದಗಿತು? ಯಾರಿಂದಾಯ್ತು ಹೇಗೆ ಹೆಚ್ಚಿತು?" ಎಂದು ಕೇಳಿದನು. ಬ್ರಹ್ಮನ ಆ ಪ್ರಸಾದೋಕ್ತಿಯನ್ನು ಕೇಳಿದ ಭೂದೇವಿಯು ಅತಿ ಗದ್ಗದತೆಯುಳ್ಳವಳಾಗಿ

೧. ಕಥಾವತಾರಮೆಂತೆಂದೊಡೆ ಅಂಬುಧಿಪರಿವೃತ ಜಂಬೂದ್ವೀಪಮಧ್ಯದ ಮೇರುಗಿರಿಯ ಶಿಖರದ ನಿಜನಿವಾಸದೊಳ್ ಸಕಲ ದೇವಗಣ ಪರಿವೃತನಾಗಿ ಲೀಲೆಯಿಂದೊಡ್ಡೋಲಗದೊಳಿರ್ದ ಪಿತಾಮಹಂಗೆ ಪೇಳಲೆಂದು ಭೂಕಾಂತೆ ತಳರ್ದು - ಎಂಬ ಗದ್ಯವು ಕ. ಘ. - ಪುಸ್ತಕಗಳಲ್ಲಿದೆ.

ತಿದಿವೊಲ್ ದಿಗ್ಗಜರಾಜಿ ಗೋಣ್ಬುಗಿದು ವಕ್ತ್ರಶ್ವಾಸಮಂ ಬೀಱುತಿ
ರ್ಪುದು ನಾಲ್ಬಟ್ಟೆಯ ಪಿಟ್ಟೆವೊಲ್ ಕುಲನಗೌಘಂ ನುರ್ಗಿದತ್ತಾನೆ ಮೆ
ಟ್ಟಿದೆಸಮುರ್ಚೆವೊಲಾಗಿ ಕೂರ್ಮನೊಡೆದಂ ಶೇಷಂ ಫಣಂ ಬಳ್ಕಿಸು
ರ್ಕಿದಪಂ ಸೀರೆಯ ಸಿಂಬಿವೊಲ್ ಖಳನೃಪಾಲಾಕ್ಷೌಹಿಣೀ ಭಾರದಿಂ ೩೦

ಪ್ರಕಟಂ ವಾರಿಧಿವೇಲೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯ ಬಾ
ಧಕ ಭಾವಂ*ನೆಗೞಲ್ಕೆ ನಿಲ್ವ ತೆಱದಿಂದೀ ಸೃಷ್ಟಿಗನ್ಯೋನ್ಯ ಸೈ
ನಿಕ ಸಂಗ್ರಾಮದೆ ಬಾಧ್ಯಬಾಧಕತೆ ಪುಟ್ಟಲ್ ನಿಲ್ವೆನಾನಿಂತು ಸೃ
ಷ್ಟಿ ಕರಂ ಪೆರ್ಚಿದೆ ದೇವ ತಾಳ್ದು ನಿಲಲಾಱೆಂ ತನ್ಮಹಾಭಾರಮಂ ೩೧

ವ॥ ಎಂದು ಮೇದಿನೀದೇವಿ ಬಿನ್ನಪಂಗೆಯ್ಯೆ ಸರೋಜಸಂಭವಂ ದೇವೇಂದ್ರಮಂತ್ರಿಯಪ್ಪ ಬೃಹಸ್ಪತಿಯ ಮೊಗಮಂ ನೋಡಲಾಂಗಿರಸಂ ಕರಕಮಲಂಗಳಂ ಮುಗಿದು.*

ಪಾವಕನೇತ್ರನಾಗಿ ತಮದಿಂ ರಜದಿಂದಜನಾಗಿ ಸತ್ವದಿಂ
ಶ್ರೀವರನಾಗಿ ತೋಱುವ ಗುಣತ್ರಯಧಾಮನಮೇಯನವ್ಯಯಂ
ದೇವರದೇವನಾದಿಪುರುಷಂ ಜಳಶಯ್ಯೆಯೊಳಿರ್ದಪಂ ತ್ರಿಲೋ
ಕಾವನನಾಮಹಾವಿಭುಗೆ ಪೇೞದೆ ಪದ್ಮಜ ತೀಱದಾರೊಳಂ ೩೨

ಹೀಗೆಂದಳು. ೩೦. "ನೀಚ ರಾಜರ ಅಕ್ಷೌಹಿಣಿ ಭಾರದಿಂದ (ಸೇನೆಯ) ದಿಗ್ಗಜಗಳು ಕತ್ತನ್ನು ಬಗ್ಗಿಸಿ, ತಿದಿಯಂತೆ ಬಾಯ ಉಸಿರನ್ನು ಬೀರುತ್ತಿವೆ. ಕುಲಗಿರಿಗಳ ಗುಂಪು ನಾಲ್ಕು ದಾರಿಯ ಚೌಕದ ಮಧ್ಯದಲ್ಲಿರುವ ಸಣ್ಣ ಮಣ್ಣಿನ ದಿಣ್ಣೆಯಂತೆ ನುಗ್ಗಿ ಹೋಯಿತು. ಆದಿ ಕೂರ್ಮನು ಆನೆಯು ತುಳಿದ ಮಣ್ಣಿನ ಮುಚ್ಚಲಿನಂತೆ ಒಡೆದು ಹೋದನು. ಆದಿಶೇಷನು ಹೆಡೆಯನ್ನು ಬಾಗಿಸಿ ಸೀರೆಯ ಸಿಂಬಿಯಂತೆ ಸುಕ್ಕಿರುತ್ತಾನೆ. ೩೧. ಸಮುದ್ರದ ತೀರಕ್ಕೂ ಸಮುದ್ರಕ್ಕೂ ಜಲರಾಶಿಯ ನುಗ್ಗುವ ಸ್ಪರ್ಧೆಯಲ್ಲಿ ಅನ್ಯೋನ್ಯ ಬಾಧ್ಯಬಾಧಕಭಾವವು ಇರುವುದರಿಂದ ಜಗತ್ತು ಉಳಿದಿದೆ. ಹಾಗೆ ಈ ಸೃಷ್ಟಿಗೆ ಪರಸ್ಪರ ಸೇನಾ ಯುದ್ಧದಲ್ಲಿ ಬಾಧ್ಯಬಾಧಕಭಾವವು ಹುಟ್ಟಿದಲ್ಲಿ ನಾನು ಉಳಿಯಬಲ್ಲೆ. ಹಾಗಾಗದೆ ಸೃಷ್ಟಿ ಬಹಳ ಹೆಚ್ಚಿದೆ. ಈಗ ಅದರ ಭಾರವನ್ನು ಹೊತ್ತು ಸಹಿಸಿ ನಿಲ್ಲಲಾರೆನು ದೇವ ವ॥ ಎಂದು ಭೂದೇವಿ ವಿಜ್ಞಾಪಿಸಿದಳು. ಬ್ರಹ್ಮನು ದೇವೇಂದ್ರನ ಮಂತ್ರಿಯಾದ ಬೃಹಸ್ಪತಿಯ ಮುಖವನ್ನು ನೋಡಿದನು. ಬೃಹಸ್ಪತಿಯು ಕರಕಮಲವನ್ನು ಮುಗಿದುಕೊಂಡು, ೩೨. "ಬ್ರಹ್ಮಾ! ತಮೋಗುಣದಿಂದ ಅಗ್ನಿ ನೇತ್ರ (ರುದ್ರ) ನಾಗಿಯೂ, ರಜೋಗುಣದಿಂದ ಬ್ರಹ್ಮನಾಗಿಯೂ ಸತ್ತ್ವಗುಣದಿಂದ ಶ್ರೀವರ (ವಿಷ್ಣು)ನಾಗಿಯೂ ಕಾಣುವ ಗುಣತ್ರಯನಿಧಿಯೂ, ಅಪ್ರಮೇಯನೂ, ನಾಶರಹಿತನೂ, ದೇವರ ದೇವನೂ ಆದ ಆ ಮಹಾವಿಭುವಿಗೆ ಹೇಳದೆ

---

* ಕ, ಖ, - ಭಾರಂ  * ಇದು ಫ - ಪುಸ್ತಕದಲ್ಲಿ ಮಾತ್ರ ದೊರೆಯುತ್ತದೆ.

ಸುರರ್ಗೆ ಗುರು ವಜ್ರಿ ವಜ್ರಿಗೆ
ಗುರುವಾನೆನಗಬ್ಜಗರ್ಭ ನೀ ಗುರು ನಿನಗಂ
ಪರಮಗುರು ವಿಷ್ಣು ವಿಷ್ಣುಗೆ
ಪಿರಿಯರ್ ಮತ್ತಿಲ್ಲ ದೇವರಿದುವೆ ಯಥಾರ್ಥಂ ೩೩

ವ|| ಎನೆ ವನಜಸಂಭವನದಂ ಮನದೆಕೊಂಡು,

ಜನಕನೆ ನಾನಂ ನಿನಗೆನಗಾ
ದನುಜಹರಂ ಜನಕನದಱಿನಾನಭಿಮತಮಂ
ನಿನಗೆನಗಭಿಮತಮಂ ವಿ
ಷ್ಣು ನೆಗಳ್ಚದೊಡೆಮಗದಾರ[1]ಚರಣಂ ಶರಣಂ ೩೪

ವ|| ಎಂದು ತಮ್ಮೊಳಾಳೋಚಿಸಿ, ಮೇದಿನೀದೇವಿಗತಿಪ್ರಮೋದಮಂ ಪಡೆದುಂ, ಕಳಿಪಿ ತದೀಯಖೇದಮಂ ತನಗಪ್ಪುಕೆಯ್ದಿರ್ಪುದಂ ಕಂಡು,

ನವಗಾದೀ ಖೇದಮಂ ಬಿನ್ನವಿಪವಹಿಪ[2]ತಲ್ಪಂಗೆ ದರ್ಪೋನ್ನಿಳದ್ದಾ
ನವ [3]ಸೇನಾಕಾಲಕಲ್ಪಂಗಘಕುಲವನದಾವಂಗೆ ರಕ್ಷಾರ್ಥಮೊಂದೊಂ
ದವತಾರಂಗೆಯ್ದ ದೇವಂಗೆನುತೆ ತೆರಲುದ್ಯುಕ್ತರಾದರ್ ಭೂಭಾ
ರವಿಷಾದರ್ ದೈತ್ಯಪೀಡಾಕುಪಿತನಿಜಮನಃಪದ್ಮರಾ ನಾಕಸದ್ಮರ್ ೩೫

ವ|| ತದನಂತರಂ

ಮತ್ತಾರಲ್ಲೂ ಇದು ತೀರುವುದಿಲ್ಲ. ೩೩. ಸುರರಿಗೆ ಗುರು ಇಂದ್ರ, ಇಂದ್ರನಿಗೆ ಗುರು ನಾನು. ನನಗೆ ಬ್ರಹ್ಮನಾದ ನೀನು ಗುರು, ನಿನಗೆ ಪರಮಗುರು ವಿಷ್ಣುವಿಗೆ ಹಿರಿಯರಾದ ದೇವರು ಬೇರೆ ಯಾರೂ ಇಲ್ಲ. ಇದು ಸತ್ಯ. ವ|| ಎನ್ನಲು ಅದನ್ನು ಬ್ರಹ್ಮನು ಮನಸ್ಸಿಗೆ ತಂದುಕೊಂಡು, ೩೪. ನಾನು ನಿನಗೆ ಜನಕ, ನನಗೆ ವಿಷ್ಣು ಜನಕನು. ಆದುದರಿಂದ ನಿನಗೆ ಅಭಿಮತವನ್ನು ನಾನೂ ನನಗೆ ಅಭಿಮತವನ್ನು ವಿಷ್ಣುವೂ ಮಾಡದಿದ್ದರೆ ನಮಗೆ ಇನ್ನು ಯಾರ ಚರಣವು ರಕ್ಷಕವಾದೀತು? ವ|| ಎಂದು ತಮ್ಮಲ್ಲೇ ಆಲೋಚಿಸಿ, ಭೂದೇವಿಗೆ ಅತಿಸಂತೋಷವನ್ನುಂಟುಮಾಡಿ ಕಳುಹಿಸಿ, ಆಕೆಯ ಖೇದವು ತನ್ನನ್ನು ಅಪ್ಪಿಕೊಂಡಿರುವುದನ್ನು ಕಂಡು, ೩೫. ಭೂಭಾರದ ವಿಷಾದವುಳ್ಳವರೂ ರಾಕ್ಷಸರ ಪೀಡೆಯಿಂದ ಕೋಪಗೊಂಡ ಮನಃಪದ್ಮರೂ, ಆದ ಆ ದೇವತೆಗಳು, "ನಮಗಾದ ಈ ಖೇದವನ್ನು ಹೆಚ್ಚಾಗಿ ಕೊಬ್ಬಿರುವ ರಾಕ್ಷಸಸೇನೆಗೆ ಪ್ರಳಯಕಾಲಯಮನಂತಿರುವವನೂ, ಲೋಕರಕ್ಷಣಾರ್ಥವಾಗಿ ಒಂದೊಂದು ಅವತಾರವನ್ನು ಮಾಡಿದವನೂ, ಪಾಪಸಮೂಹವೆಂಬ ವನಕ್ಕೆ ದಾವಾಗ್ನಿಯಾಗಿರುವವನೂ ಶೇಷಶಯನನೂ ಆದ ದೇವದೇವನಿಗೆ ವಿಜ್ಞಾಪಿಸೋಣ" ಅವನ ಹತ್ತಿರಕ್ಕೆ ಹೊರಡಲುದ್ಯುಕ್ತರಾದರು. ವ|| ಆಮೇಲೆ

---

೧. ಕ - ಡೆಂಕುಮಾರ ೨. ಕ, ಖ, ಗ-ಬಿನ್ನವಿಪಪುಣಿಪ, ೩. ಕ, ಖ - ದರ್ಪೋನ್ಮದದ್ದಾನವ,

ಭೋರೆನೆ ತೂರ್ಯವಂಚಿಯನಜಂ ಗಜಮಂ ಬಳವೈರಿ ಮೇಷಮಂ
ಮಾರುತಬಂಧು ಸೈರಿಭಮನಂಬುಜಮಿತ್ರಸುತಂ ನೃವಾಹಮಂ
ನೈರುತಿಯಬ್ಧಿಪಂ ಮಕರಮಂ ಮೃಗಮಂ ಪವನಂ ವಿಮಾನಮಂ
ಮಾರಹರಪ್ರಿಯಂ ವೃಷಭನಂ ಹರನೇಱೆ ನಭಕ್ಕೆ ಸಲ್ವುದುಂ ೩೬

ಧವಳಾಬ್ಜ ಗೌರ ಹಂಸ
ಪ್ರವರನ ಮೇಲಬ್ಜರಾಗರುಚಿಯೆನಿಪಬ್ಜೋ
ದ್ಭವನೇಂ ಬೆಳಗುತ್ತಿರ್ದನೊ
ಧವಳಾಭ್ರದ ಮೇಲೆ ಬೆಳಗುವೆಳನೇಸಱವೊಲ್ ೩೭

ಅಮರನದೀ ಹಂಸಕುಳಂ
ಕಮಳಜಹಂಸೇಂದ್ರ ಸೇವೆಗೆಟ್ಟಿರ್ಪ ವಿಳಾ
ಸಮದೆನಿಸಿ ದೇಸೆವೆತ್ತುವು
ಕಮಲಭವಂಗಿಕ್ಕುವಮಳ ಚಮರರುಹಂಗಳ್ ೩೮

ವಳಯರವಂಗಳುಣ್ಮೆ ಸುರಕನ್ಯೆಯರಿಕ್ಕುವ ಚಾಮರಂ ತೆಱಂ
ಬೊಳೆಯೆ ಸುರೇಭಕಂಧರದೊಳಿರ್ದ ಸಹಸ್ರವಿಳೋಚನಂ ಮನಂ
ಗೊಳಿಸಿದನಿಂಚರಂ ಬೆರಸಿದಂಚೆಗಳಾಡುವ ಗಾಂಗತುಂಗನಿ
ರ್ಮಳ ಪುಳಿನಾಗ್ರದೊಳ್ ಮಿಸುಪ ನೀಳಸರೋಜವನಾಳಿಯಂದದಿಂ ೩೯

ವ|| ಆಗಳುಂ

೩೬. ಮಂಗಳವಾದ್ಯವು ಜಯಜಯ ಎನ್ನುತ ಭೋರ್ಗರೆಯುತ್ತಿರಲು ಬ್ರಹ್ಮನು ಹಂಸವನ್ನೂ, ಇಂದ್ರನು ಆನೆಯನ್ನೂ, ಅಗ್ನಿಯು ಟಗರನ್ನೂ, ಯಮನು ಕೋಣನನ್ನೂ, ನೈಋತಿಯು ನರವಾಹನವನ್ನೂ, ವರುಣನು ಮೊಸಳೆಯನ್ನೂ, ವಾಯುವು ಜಿಂಕೆಯನ್ನೂ ಕುಬೇರನು ವಿಮಾನವನ್ನೂ, ಹರನು ವೃಷಭವನ್ನೂ ಏರಿ ಆಕಾಶಮಾರ್ಗದಲ್ಲಿ ನಡೆದರು. ೩೭. ಬಿಳಿಯ ತಾವರೆಯಂತೆ ಬೆಳ್ಳಗಿರುವ ರಾಜಹಂಸನ ಮೇಲೆ ಏರಿದ ಕೆಂದಾವರೆಯ ಕಾಂತಿಯ ಬ್ರಹ್ಮನು-ಬಿಳಿಯ ಮೋಡದ ಮೇಲೆ ಹೊಳೆಯುವ ಬಾಲಸೂರ್ಯನಂತೆ ಅದೆಷ್ಟು ಪ್ರಕಾಶಿಸುತ್ತಿದ್ದನೊ! ೩೮. ಆಗ ಆ ಬ್ರಹ್ಮನಿಗೆ ಬೀಸುತ್ತಿದ್ದ ಬಿಳಿಯ ಚಾಮರಗಳು ದೇವಗಂಗೆಯ ಹಂಸಗಳ ಗುಂಪು ಬ್ರಹ್ಮನ ಹಂಸದ ಸೇವೆಗೆ ಬರುತ್ತಿರುವ ಅದೊಂದು ವಿಲಾಸವೆನ್ನುವಂತೆ ಸೊಗಸನ್ನು ಪಡೆದವು. ೩೯. ಐರಾವತದ ಕತ್ತಿನ ಮೇಲೆ ಕುಳಿತಿದ್ದ ದೇವೇಂದ್ರನು, ದೇವಕನ್ಯೆಯರು ತಮ್ಮ ಬಳೆಗಳು ಹೆಚ್ಚಾಗಿ ಶಬ್ದಮಾಡುವಂತೆ ಬೀಸುವ ಚಾಮರಗಳು ಚೆನ್ನಾಗಿ ಹೊಳೆಯುತ್ತಿದುದರಿಂದ, ಇಂಪಾಗಿ ಧ್ವನಿಮಾಡುತ್ತಾ ಹಂಸಗಳಾಡುತ್ತಿರುವ ಎತ್ತರವಾಗಿ ನಿರ್ಮಲವಾಗಿರುವ ಗಂಗಾನದಿಯ ಮಳಲ ದಿಣ್ಣೆಯ ಮೇಲೆ ಹೊಳೆವ ಕನ್ನೈದಿಲೆಯ ಸಮೂಹದಂತೆ ಮನೋಹರನಾಗಿದ್ದನು. ವ|| ಹಾಗೂ

ಹಿಮಶೈಲೇಂದ್ರಮೆಱಂಕೆಯಂ ತಳೆದು ಬಂದಾಕಾಶದೊಳ್ ನೋಡೆ ಮೇ
ರುಮಹಾಶೈಲಮನಾಂತು ಪಾಱೆದಪುದೆಂಬನ್ನಂ ಮಹಾಪಾಂಡುದೇ
ಹಮುಮುಜ್ಜೃಂಭಿಪೆಱಂಕೆಯುಂ ಬಗೆಗೊಳಲ್ ಪದ್ಮೋದ್ಭವಂ ಭೂರಿರಾ
ಗಮಯಾಂಗಂ ತನಗೊಪ್ಪಲಬ್ಜಭವಹಂಸಂ ಪಾಱೆತಬ್ಧಾದ್ವದೊಳ್ ೪೦

ನಿಜನಿಜರಾಜಚಿಹ್ನನಿವಹಂ ಪರಿರಂಜಿಸೆ ಶಂಖಕಾಹಳಾ
ವ್ರಜವಿಜಯಾನಕಧ್ವನಿ ವಿಜೃಂಭಿಸೆ ಕಿನ್ನರಗೇಯನಿಸ್ವನಂ
ವಿಜಯಿಸೆ [1]ದಿವ್ಯಭೂಷಣಮರೀಚಿರವಿಪ್ರಭೆಯಂ ಪಳಂಚಿ ನಾ
ಕಜರಜನಿರ್ಕೆಲಂಬಿಡದದೇಂ ನಡೆಗೊಂಡರೊ ಮೇಘಮಾರ್ಗದೊಳ್ ೪೧

ಪವನಪಥಾಂತರದೊಳ್ ಪವ
ನವೇಗದಿಂ ಸಾಮಜಾದಿವಾಹನ ಸಹಿತರ್[2]
ದಿವಿಜರನೇಕದ್ವೀಪಾ
ರ್ಣವಂಗಳಂ ಕಳಿದು ಮುಟ್ಟುವರ್ಪವಸರದೊಳ್ ೪೨

ಒಳಪೊಯ್ದಾಗಸಮಂ ಸಮುದ್ರವೆಸೆದತ್ತಾಕಾಶಮಾರ್ಗಶ್ರಮಂ
ಗಳನೊಲ್ದಾಱೆಸಲುಷ್ಣರೋಚಿಗೆ ನಿಜೋತ್ಫೇನಾತಪತ್ರಂಗಳಂ
ಕಳಿವುಚ್ಛೀಕರಪುಷ್ಪಮಂ ಕೆದಱುವುನುಕ್ತಾಕ್ಷತವ್ರಾತಮಂ
ತಳಿವುದ್ವೀಚಿವಿಲೋಲಚಾಮರಮನೆತ್ತಂ ಬೀಸುವೊಂದಂದದಿಂ ೪೩

೪೦. ಹಿಮಶೈಲೇಂದ್ರನು ರೆಕ್ಕೆಯನ್ನು ಪಡೆದು ಬಂದು, ಮೇರುಮಹಾಪರ್ವತವನ್ನು ಏರಿಸಿಕೊಂಡು, ಆಕಾಶದಲ್ಲಿ ಹಾರುತ್ತಿದ್ದಾನೆ ಎನ್ನುವಂತೆ ಬ್ರಹ್ಮನ ಅಂಶವು ಬಹಳ ಬಿಳುಪಾದ ದೇಹವು ಹೆಚ್ಚಾಗಿ ಹೊಳೆಯುವ ರೆಕ್ಕೆಯೂ ಮನಮೋಹಕವಾಗಿದ್ದು ಹೆಚ್ಚು ಕೆಂಪಾದ ದೇಹವುಳ್ಳ ಬ್ರಹ್ಮನು ತನ್ನ ಮೇಲೇರಿ ಒಪ್ಪುತ್ತಿರಲು ಆಕಾಶದಲ್ಲಿ ಹಾರಿತು. ೪೧. ದೇವತೆಗಳನೇಕರು ತಮ್ಮ ತಮ್ಮ ರಾಜಚಿಹ್ನೆಗಳು ಹೊಳೆಯುತ್ತ ಶಂಖ ಕಹಳೆಗಳ ಸಮೂಹದ ವಿಜಯವಾದ್ಯ ಧ್ವನಿಯು ಹೆಚ್ಚುತ್ತ ಕಿನ್ನರರ ಗಾನಧ್ವನಿಯು ಅಧಿಕವಾಗುತ್ತ ತಮ್ಮ ದಿವ್ಯಾಭರಣಗಳ ಕಾಂತಿಯು ಸೂರ್ಯಪ್ರಭೆಯನ್ನು ಸಂಘಟಿಸುತ್ತ ಇರಲು, ಬ್ರಹ್ಮನ ಎರಡು ಪಕ್ಕಗಳನ್ನು ಬಿಡದೆ ಆಕಾಶದಲ್ಲಿ ಅದೆಷ್ಟು ಚೆನ್ನಾಗಿ ನಡೆದರೊ! ೪೨. ದೇವತೆಗಳು ವಾಯುಮಾರ್ಗದಲ್ಲಿ ವಾಯುವೇಗದಿಂದ ಆನೆಯೇ ಮೊದಲಾದ ವಾಹನಸಮೇತರಾಗಿ ಹತ್ತಿರ ಬರುವಷ್ಟರಲ್ಲಿ ೪೩. ಸಮುದ್ರವು ಆಕಾಶವನ್ನು ಒಳಹಾಕಿ, ಸೂರ್ಯನ ಆಕಾಶಗಮನ ಶ್ರಮವನ್ನು ಪರಿಹರಿಸಲು ಪ್ರೀತಿಯಿಂದ ತನ್ನ ಉಬ್ಬಿದ ನೊರೆಯ ಕೊಡೆಯನ್ನು ಹಿಡಿದು ಮೇಲೆ ಹಾರುವ ನೀರಿನ ತುಂತುರುಹನಿಯ ಹೂವನ್ನು ಎರಚುತ್ತ ಉತ್ತಮವಾದ ಮುತ್ತುಗಳೆಂಬ ಅಕ್ಷತೆಗಳನ್ನು ತಳಿದು, ಮೇಲೇರುವ ಚಂಚಲವಾದ ಅಲೆಗಳ ಚಾಮರವನ್ನು ಎಲ್ಲ ಕಡೆಯಲ್ಲೂ ಬೀಸುತ್ತಿರುವಂತೆ ಕಾಣಿಸುತ್ತಿದ್ದಿತು.

೧. ಕ, ಖ-ಭಜಿಯಿಸೆ  ೨. ಖ-ಕಾಮಗಾಮಿವಾಹನ ಸಹಿತರ್

ಚಕಿತತರಂಗ ಸಂಘಹತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂ
ನಿಕರದ ತೊಟ್ಟ ಮುತ್ತಿನೊಳೊಡಂಬಡೆ ಸೂಸುವ ಶೀಕರಾಳಿ ತಾ
ರಕಗಣದೊಳ್ ಸಮಂಬಡೆಯೆ ತೆಂಕುವ ಮೌಕ್ತಿಕರತ್ನಗರ್ಭಶು
ಕ್ತಿಕೆ ಪೆಱೆಯೊಳ್ ತಡಂಬಡೆ ಸುಧಾರ್ಣವಮೊಪ್ಪಿದುದುದ್ಗತಾರ್ಣವಂ ೪೪

ವ॥ ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ; ಭಂಗವ್ಯಾಕುಳಿತಮಾಗಿಯುಮಚ್ಯುತಪ್ರಭಾವ ಭಾಸುರಮುಂ; ಅಪ್ರತಿಷ್ಠಿತಮಾಗಿಯುಂ ಲಕ್ಷ್ಮೀಜನ್ಮಭವನಮುಂ; ಮದ್ಯಜನ್ಮಸ್ಥಾನಮಾಗಿಯಂ ಬಾಡಬೋಪಭೋಗಯೋಗ್ಯಮುಂ; ಕಾಲಕೂಟ ಪ್ರಭವಮಾಗಿಯುಂ ಅಮೃತೋದಯಕ್ಷೇತ್ರಮುಂ; ಜಡಪ್ರಕೃತಿಯಾಗಿಯುಮುದಾತ್ತ ಸತ್ತ್ವಮುಂ; ವಜ್ರಾವಲಂಬಿಯಾಗಿಯುಂ ಕುಲಶೈಲಪಾಲನ ಸ್ವಭಾವಯುಕ್ತಮುಂ; ಮುಕ್ತಾಧಾರಮಾಗಿಯುಮಸಂತಾಧಾರಮುಂ ಮತ್ತಮದು ರಸಾತಳದಂತೆ ವಿಷಧರಸೇವ್ಯಮುಂ; ಸಾರ್ವಭೌಮ ಭವನಾಂಗಣದಂತೆ ಅನೇಕ ವಾಹಿನೀ ಪ್ರಸಂಗಿಯುಂ; ಗಾಣಿಕ್ಯಗೇಹರಾಜಿಯಂತೆ ಪಲ್ಲವಿಕಸಂತಾನಕ್ರೀಡಾಪ್ರಪಂಚಿಯುಂ ; ಅರಣ್ಯದಂತಗಣ್ಯವಿದ್ರುಮವಲ್ಲರೀ

೪೪. ಉಕ್ಕೇರಿದ ಕ್ಷೀರಸಮುದ್ರವು ಚಂಚಲವಾದ ಅಲೆಗಳ ಸಾಲಿನ ಹೊಡತದಿಂದ ಹೊರಹೊಮ್ಮುವ ಮುತ್ತು ದಿಗ್ವನಿತೆಯರು ಧರಿಸಿದ ಮುತ್ತಿಗೆ ಸಮನಾಗಿಯೂ, ಚೆಲ್ಲುವ ತುಂತುರು ಹನಿಗಳ ಗುಂಪು ನಕ್ಷತ್ರಗಳ ಸಮೂಹದಂತೆಯೂ, ಮುತ್ತಿನ ಮಣಿಯನ್ನೊಳಗೊಂಡು, ತೇಲುತ್ತಿರುವ ಮುತ್ತಿನ ಚಿಪ್ಪು ಚಂದ್ರನಂತೆಯೂ ಇರುತ್ತಿರಲು ಚೆನ್ನಾಗಿ ಕಾಣಿಸುತ್ತಿದ್ದಿತು. ವ॥ * ಆ ಮಹಾಸಾಗರವು ಸಮುದ್ರವಾಗಿಯೂ ಅಪಾರ ವಿಸ್ತಾರಿಯೂ ಮುದ್ರೆಯಿಂದ ಕೂಡಿದುದು ಎಂದರೆ ಮಿತಿ (ಅವಧಿ) ಯುಳ್ಳುದಾದರೂ (ಅಮಿತ) ಅನವಧಿಕ ವಿಸ್ತಾರವುಳ್ಳುದು. ಸಮುದ್ರವೆಂಬ ಹೆಸರುಳ್ಳುದಾಗಿ ಅಪಾರ ವಿಸ್ತಾರವುಳ್ಳುದು. ೧. ನಾಶಕ್ಕೆ ಒಳಗಾದುದಾದರೂ ನಾಶವಾಗದ ಮಹಿಮೆಯಿಂದ ಹೊಳೆಯುವುದು. ೨. ಅಲೆಗಳಿಂದ ಕೂಡಿದುದೂ ನಾಶರಹಿತವಾದ ಮತ್ತು ಅಚ್ಯುತ ವಿಷ್ಣುವಿನ ಮಹಿಮೆಯಿಂದ ಹೊಳೆಯುವುದೂ ಅಪ್ರತಿ.... ಲಕ್ಷ್ಮೀಜನ್ಮಭವನಮುಂ = (೧) ನೆಲೆಯಿಲ್ಲದುದೂ ಹಿರಿಮೆಯಿಲ್ಲದುದಾಗಿಯೂ ಲಕ್ಷ್ಮೀದೇವಿಯ ತೌರುಮನೆಯೂ (೨) ನೀರಿಗೆ ಸ್ಥಿರವಾದ ನೆಲೆಯಾಗಿಯೂ ಲಕ್ಷ್ಮಿಗೆ ತೌರೂ, ಮದ್ಯಜನ್ಮಸ್ಥಾನವಾಗಿದ್ದರೂ ಬಾಡಬೋಪಭೋಗಯೋಗ್ಯವೂ = (೧) ಕಳ್ಳು ಹುಟ್ಟಿದ ಸ್ಥಳವಾಗಿದ್ದರೂ ಬ್ರಾಹ್ಮಣೋಪಭೋಗಕ್ಕೆ ಯೋಗ್ಯವಾದುದು ಮತ್ತು (೨) ಬಡಬಾಗ್ನಿಗೆ ಉಪಭೋಗಕ್ಕೆ ಯೋಗ್ಯವಾದುದು; ಕಾಲಕೂಟಪ್ರಭವಮಾಗಿದ್ದರೂ ಅಮೃತೋದ್ಭವ ಕ್ಷೇತ್ರವೂ ಆಗಿದೆ. ೧. ಕಾಲಕೂಟವೆಂಬ ವಿಷೋತ್ಪತ್ತಿ ಸ್ಥಾನವಾಗಿದ್ದರೂ ಅಮೃತವೂ ಉದಿಸಿದ ಸ್ಥಳವಾಗಿದೆ. ಜಡಪ್ರಕೃತಿಯಾಗಿಯೂ ಉದಾತ್ತ ಸತ್ತ್ವ (೧) ಜಡ (ತಮೋಗುಣ) ಸ್ವಭಾವವುಳ್ಳದಾಗಿದ್ದೂ, ಮಹಾಸತ್ವಗುಣವುಳ್ಳ ಆಗಿದೋ (೨) ಜಲಸ್ವಭಾವವುಳ್ಳುದೂ, ಹೆಚ್ಚಾದ ಬಲವುಳ್ಳುದೂ

* ಈ ವಚನ ಬೃಂದದ ಒಂದೊಂದು ವಿಶೇಷಣವೂ ಪೂರ್ಣವಾಕ್ಯಕ್ಕೂ ಎರಡು ಅರ್ಥಗಳಾಗುವುವು. ೧ನೆಯದು ವಿರೋಧವಾಗುವ ಅರ್ಥ ೨ನೆಯದು ವಿರೋಧ ಪರಿಹಾರಕವಾದ ಸರಿಯಾದ ಅರ್ಥ.

**ವೇಲ್ಲಿತಮುಂ ; ತಾರಾಧ್ವದಂತೆ ದುರ್ಧರಗ್ರಹನಿರುದ್ಧಮುಂ; ನಾಕಲೋಕದಂತನಿಮಿಷ ಪ್ರಕೀರ್ಣಕಮುಂ; ಕಂದರ್ಪನಂತೆ ಶಂಬರಮದವಾರಣೋದಾರಮುಂ; ಐರಾವತದಂತೆ ಪುಷ್ಕರಶೀಕರೋದಾರಮುಂ; ತ್ರಿಪುರಾರಿಯಂತೆ ವಿಷೋರಗಧಾರಿಯುಂ; ಪುರುಷೋತ್ತಮನಂತೆ ಶಂಖ ಚಕ್ರಾಂಕಿತಮುಂ; ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು**

ದೊಡ್ಡದೊಡ್ಡದಾದ ಜಲಚರಪ್ರಾಣಿಗಳುಳ್ಳುದಾಗಿದೆ. ವಜ್ರಾವಲಂಬಿಯಾಗಿಯೂ ಶೈಲಪಾಲನ ಸ್ವಭಾವಯುಕ್ತವಾಗಿಯೂ (೧) ವಜ್ರಾಯುಧಧಾರಿಯಾದ ಇಂದ್ರನಾಗಿದ್ದರೂ ಕುಲಪರ್ವತಗಳ ರಕ್ಷಣಸ್ವಭಾವವುಳ್ಳವನು (೨) ವಜ್ರವೆಂಬ ರತ್ನಗಳನ್ನುಳ್ಳುದಾಗಿರುವುದಲ್ಲದೆ ಕುಲಗಿರಿಗಳಿಗೆ ಆಶ್ರಯವಾಗಿದೆ. ಮುಕ್ತಾಧಾರವಾಗಿದ್ದರೂ, ಅನಂತಾಧಾರವಾಗಿದೆ (೧) ಆಧಾರ ಆಶ್ರಯವಾಗಿರುವಿಕೆಯನ್ನು ಬಿಟ್ಟಿದ್ದರೂ, ಅನಂತಜೀವಿ ವಸ್ತುಗಳಿಗೆ ಆಧಾರವಾಗಿದೆ (೨) ಮುತ್ತುಗಳಿಗೆ ಮತ್ತು ಮುಕ್ತರಿಗೆ ಆಶ್ರಯವಾಗಿಯೂ, ಆದಿಶೇಷನಿಗೂ ಅನಂತ ಜೀವಿ ವಸ್ತುಗಳಿಗೂ ಆಶ್ರಯವಾಗಿರುವುದು. ಮತ್ತು ಆ ಸಾಗರವು ಪಾತಾಳದಂತೆ ವಿಷಧರನಿಷೇವ್ಯ (೧) ಸರ್ಪಗಳಿಗೆ ಆಶ್ರಯ (೨) ಮೇಘಗಳಿಗೆ, ನೀರಿಗೆ ಆಶ್ರಯ, ಸಾರ್ವಭೌಮ ಭವನದ ಅಂಗಳದಂತೆ ಅನೇಕ ವಾಹಿನೀ ಪ್ರಸಂಗಿ (೧) ಸಾರ್ವಭೌಮಾಂಗಳವು ಅನೇಕ ಸೇನೆಗಳಿಂದ ಕೂಡಿರುವುದು (೨) ಅನೇಕ ನದಿಗಳ ಸೇರುವೆಯುಳ್ಳುದು (ಸಮುದ್ರ); ಗಾಣಿಕ್ಯಗೇಹರಾಜಿಯಂತೆ = ವೇಶ್ಯಾಗೃಹಪಜ್ತಿಯಂತೆ ಪಲ್ಲವಿಕ ಕ್ರೀಡಾ ಪ್ರಪಂಚವುಳ್ಳುದು = (೧) ವಿಟರ ಗುಂಪಿನ ಅನೇಕ ವಿಧ ಕ್ರೀಡೆಗಳಿಗೆ ನೆಲೆಯಾದುದು (೨) ಚಿಗುರುಗಳಿಂದ ಕೂಡಿದ ಕಲ್ಪವೃಕ್ಷದ ವಿಲಾಸಾತಿಶಯವುಳ್ಳದು; ಅರಣ್ಯದಂತೆ ಅಗಣ್ಯವಿದ್ರುಮವಲ್ಲರೀವೇಲ್ಲಿತವಾದುದು = (೧) ಲೆಕ್ಕಮಾಡಲಾಗದ ಬಗೆಬಗೆಯ ಮರಬಳ್ಳಿಗಳಿಂದ ತುಂಬಿದುದು (ಅರಣ್ಯ), (೨) ಸಮುದ್ರವು ಲೆಕ್ಕವಿಲ್ಲದಷ್ಟು ಹವಳಗಳ ಬಳ್ಳಿಯಿಂದ ಕೂಡಿದುದು. ತಾರಾಧ್ವ (ಆಕಾಶ)ದಂತೆ ದುರ್ಧರಗ್ರಹ ನಿರುದ್ಧವಾದುದು. (೧) ಆಕಾಶವು ಧರಿಸಲು, ಕಷ್ಟವಾಗುವಂತೆ ಇರುವ ಸೂರ್ಯಾದಿಗ್ರಹಗಳಿಂದ ವ್ಯಾಪ್ತವಾದುದು, (೨) ಸಾಗರವು ಧರಿಸಲು ಕಷ್ಟವಾದ ದೊಡ್ಡ ದೊಡ್ಡ ಮೊಸಳೆಗಳೇ ಮೊದಲಾದವುಗಳಿಂದ ತುಂಬಿದುದು ಸ್ವರ್ಗ..... ಅನಿಮಿಷ ಪ್ರಕೀರ್ಣ (೧) ದೇವತೆಗಳಿಂದ ತುಂಬಿದುದು (೨) ಮೀನುಗಳಿಂದ ತುಂಬಿರುವುದು. ಕಂದರ್ಪ (ಮನ್ಮಥ)ನಂತೆ ಶಂಬರಮದ ವಾರಣೋದಾರಮುಂ = (೧) ಮನ್ಮಥನು ಶಂಬರಾಸುರನ ಮದವನ್ನು ನಿವಾರಿಸಿ ಹಿರಿಮೆಯನ್ನು ಪಡೆದವನು. (೨) ಶಂಬರಮದವಾರ.... ದಾರಮುಂ = ಮದಿಸಿದ ನೀರಾನೆಗಳಿಂದ ಪಡೆಯುವುದೂ ಐರಾವತ... ಪುಷ್ಕರಶೀಕರೋದಾರಮುಂ = (೧) ಸೊಂಡಿಲಿನ ತುದಿಯಿಂದ ನೀರಿನ ಕಣಗಳನ್ನು ಹೆಚ್ಚಾಗಿ ಸುರಿಸುವುದೂ (೨) ನೀರಿನ ತುಂತುರನ್ನು ಹೆಚ್ಚಾಗಿ ಹರಡುವುದೂ ತ್ರಿಪುರಾರಿ ವಿಷೋರಗಧಾರಿಯಂ = (೧) ಈಶ್ವರನಂತೆ ವಿಷಸರ್ಪಧಾರಿ; ,, = (೨) ನೀರು ಮತ್ತು ನೀರುಹಾವುಗಳನ್ನು ಪಡೆದಿರುವುದೂ ವಿಷ್ಣುವಿನಂತೆ ಶಂಖಚಕ್ರಾಂಕಿತಮುಂ = (೧) ವಿಷ್ಣು ಶಂಖಚಕ್ರಧಾರಿಯಾಗಿರುವವನು (೨) ಶಂಖಗಳ ಸಮೂಹದಿಂದ ಕೂಡಿದುದೂ; ಚತುರ್ಮುಖನಂತೆ ಸರಸ್ವತೀಪತಿಯು = (೧) ಬ್ರಹ್ಮನು ಸರಸ್ವತಿದೇವಿಯ

ಪದಿನಾಲ್ಕುಲೋಕಮಂ ಕಿಟಿಕ್ರೋಡೆಯೊಳ್ ತಳೆದಾ ವಿಷ್ಣು ತನ್ನೇಕದೇಶಾ
ಗ್ರದೊಳಿರ್ಪಂ ವಾರಿದಂ ತನ್ನೊಳೆ ಕತಿಪಯವಾರ್ಬಿಂದುವಂ ಪೇಱೆತಂದಂ
ತದಱಿಂದಂ ಲೋಕಮಂ ತೀವುವುದು ಪವಿಭಯವಿಭ್ರಾಂತಿಯಿಂದಂ ಶರಣ್ಬೊ
ಕ್ಕುದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪಱ್ಣವಕ್ಕೇನೊ ಚೋದ್ಯಂ ೪೫

ವ॥ ಎಂದು ಸುಧಾರ್ಣವಮಂ ಪೊಗೞುತ್ತರವಿಂದನಾಭನಂ ಪುರಂದರಾದಿ ವೃಂದಾರಕ ವೃಂದವಾನಂದದಿಂ ನೋಡುತ್ತುಂ ಬರೆವರೆ

ಸುರಯೋಗೀಂದ್ರ ಸಮಾಜ ಸಂಸ್ತವ ಜಯಧ್ವಾನಂ ಚಳಚ್ಚಾಮರಾ
ಮರಕಾಂತಾಜನರತ್ನಂ ಕಂಕಣ ಝಣತ್ಕಾರಸ್ವನಂ ಕಿನ್ನರೋ
ತ್ತರವೀಣಾಕ್ವಣಿತಾರವಂ ವಿಬುಧವಂದಿವ್ರಾತ ಮಾಂಗಲ್ಯ ಪಾ
ಠರವಂ ಭೋಂಕನೆ ಕೇಳಲಾಯ್ತು ಗೆಲೆವಂದಂಬೋಧಿನಿರ್ಘೋಷಮಂ ೪೬

ವ॥ ಆ ಪ್ರಘೋಷದೊಳ್

ಶೀತೋಷ್ಣ ಭಾವರಹಿತ
ಜ್ಯೋತಿರ್ಮಂಡಲವನಂತಕೋಟಿ ದಿನೇಶ
ದ್ಯೋತಾಭಮಿರ್ದುದನಿಮಿಷ
ಜಾತಂ ಚಿರನಿಮಿಷಮಾಗೆ ಕಣ್ಣುಳ್ಳುವಿನಂ ೪೭

ಪತಿಯಾಗಿರುವವನು (೨) ಸರಸ್ವತೀನದಿಗೆ ಪತಿ ಎನಿಸಿಕೊಂಡಿರುವುದು. ೪೫. ಹಾಗೂ ಅಲ್ಲದೆ ಹದಿನಾಲ್ಕು ಲೋಕಗಳನ್ನೂ ತನ್ನ ಕೆಳಹೊಟ್ಟೆಯಲ್ಲಿ ಧರಿಸಿರುವ ಆ ವಿಷ್ಣು ಆ ಕ್ಷೀರಸಾಗರದ ಅಲ್ಪಪ್ರದೇಶದ ಮೇಲೆ ನೆಲೆಸಿರುವನು-ಮೋಡವು ಸಮುದ್ರದಿಂದ ಕೆಲವು ನೀರಿನ ತೊಟ್ಟುಗಳನ್ನು ಹೊತ್ತು ತಂದು ಅದರಿಂದ (ಮಳೆಯನ್ನು ಸುರಿಸಿ) ಲೋಕವನ್ನು ತುಂಬುವುದು. ವಜ್ರಾಯುಧದ ಭಯಭ್ರಾಂತಿಯಿಂದ ಕುಲಪರ್ವತಗಳ ಸಮೂಹವು ಅದನ್ನು ಮರೆಹೊಕ್ಕಿದೆ. ಎಂದ ಬಳಿಕ ಸಮುದ್ರಕ್ಕೆ ಹಿರಿಮೆಯುಂಟಾಗಿರುವುದರಲ್ಲಿ ಆಶ್ಚರ್ಯವೇನು? ವ॥ ಎಂದು ಕ್ಷೀರಸಮುದ್ರವನ್ನು ಹೊಗಳುತ್ತ ಇಂದ್ರನೇ ಮೊದಲಾದ ದೇವತೆಗಳ ಸಮೂಹವು-ಪದ್ಮನಾಭ (ವಿಷ್ಣು)ನನ್ನು ಆನಂದದಿಂದ ನಿರೀಕ್ಷಿಸುತ್ತ ೪೬. ಸುರಯೋಗೀಂದ್ರ ಸಮೂಹದ ಸಂಸ್ತುತಿಯ ಜಯಕಾರ ಧ್ವನಿಯೂ ಚಾಮರವನ್ನು ಬೀಸುತ್ತಿರುವ ದೇವಕಾಂತಾಜನದ ರತ್ನಕಂಕಣಗಳ ಝಣತ್ಕಾರಶಬ್ದವೂ ಕಿನ್ನರ ಗಣದ ವೀಣಾಗಾನನಾದವೂ ಸ್ತುತಿಪಾಠಕರಾದ ದೇವತೆಗಳ ಗುಂಪಿನ ಮಂಗಳ ಪಠನ ಧ್ವನಿಯೂ ಸಾಗರದ ಮೊರೆತವನ್ನೂ ಮೀರಿ ತಟ್ಟನೆ ಕೇಳಿಸಿತು. ವ॥ ಆ ಪ್ರಘೋಷದಲ್ಲಿ-೪೭. ಶೀತೋಷ್ಣಭಾವರಹಿತವೂ ಅನೇಕ ಕೋಟಿ ಸೂರ್ಯಪ್ರಕಾಶಕ್ಕೆ ಸಮವಾದುದೂ ಆದ ತೇಜೋಮಂಡಲವು, ಕಣ್ಣನ್ನು ಕುಕ್ಕುತ್ತಿರಲು ಕಣ್ಣಿನ ರೆಪ್ಪೆಯನ್ನು ಪಡೆಯದ ದೇವತೆಗಳ ಸಮೂಹವು ತಾನೂ ಸ್ಥಿರವಾದ ರೆಪ್ಪೆಯನ್ನು ಪಡೆಯಬೇಕೆನ್ನುವಂತೆ ಇದ್ದಿತು.

ವII ಆ ಮಹಾಪ್ರಕಾಶಮಂ ಕುಶೇಶಯಗರ್ಭಂ ನೋಡಲಳ್ಕಿ ಬಳ್ಕುತ್ತುನ್ಮೀಲಿತನೇತ್ರನಾಗಿ ನಿಜಾಂತರಂಗದೊಳ್,

ಅತಿದುರ್ನಿರೀಕ್ಷ್ಯಮಾದೀ
ದ್ಯುತಿಯಂ ತೊಲಗಿಪುದು ತೋರ್ಪುದಾಕಾರಮನ
ಚ್ಯುತ ನೀನೆಂದಾ ಬ್ರಹ್ಮಂ
ಸ್ತುತಿಯಿಸೆ ತೊಲಗಿದುದು ತತ್ಪ್ರಕಾಶವಿಶೇಷಂ ೪೮

ವII ಅಂತುಮಲ್ಲದೆ,

ನವನೀಲೋತ್ಪಲ ಸನ್ನಿಭಾಂಗರುಚಿಯಿಂ ಸತ್ಕಿಂಕಿರಾತೋದ್ಗಮ
ಚ್ಛವಿ ಪೀತಾಂಬರಕಾಂತಿಯಿಂ ಸಮುದಿತಾರ್ಕಾಕಾರಚಕ್ರಾಂಶುವಿಂ
ಧವಳಾಂಶೂಜ್ವಳಶಂಖದೀಧಿತಿಯಿನಾ ರತ್ನಾಕರಂ ಕೂಡೆ ಬ
ಣ್ಣವುರಂ ತೀವಿದ ಮಾಳ್ಕೆಯಿಂದೆಸೆವಿನಂ ಚೆಲ್ವಾದನಬ್ಜೋದರಂ ೪೯

ವII ಮತ್ತಮಂತಂತೆ ನಡೆಯೆ

ಲಲಿತವೃತ್ತಂ (ಲಯಗ್ರಾಹಿ) II

ಶ್ರೀ ಸ್ತನಸುಕುಂಕುಮ ರಜಸ್ತತಿ ವಿಲೇಪನ ಗ
ಭಸ್ತಿಪರಿರಂಜಿತನಿಜೋನ್ನತ ವಿಶಾಲೋ
ರಸ್ತಲಪರಿಸ್ಫುರಿತ ಕೌಸ್ತುಭ ವಿಭೂಷಣರು
ಚಿಸ್ತಬಕಿತಾಖಿಳನಭಂ ದಿವಿಜಕಾಂತಾ
ಹಸ್ತಚಮರಾನಿಳ ಮುಹುಸ್ತರಳಿತಪ್ರಥಿತ
ವಸ್ತು ಚಯಕುಂಡಲ ವಿಮಂಡಿತ ಕಪೋಲಂ
ಧ್ವಸ್ತದಿತಿಜಂ ನತಸಮಸ್ತ ವಿಬುಧಂ ಭುವನ
ವಿಸ್ತರಣ ಪಾದನೆಸೆದಂ ಫಣಿಪತಲ್ಪಂ ೫೦

ವII ಬ್ರಹ್ಮನು ಆ ಮಹಾಪ್ರಕಾಶವನ್ನು ನೋಡಲು ಅಂಜಿ ಬಳುಕುತ್ತ ಕಣ್ಣನ್ನು ತೆರೆದು ತನ್ನ ಅಂತರಂಗದಲ್ಲಿ ೪೮. "ಅಚ್ಯುತಾ! ನೋಡಲು ಅತಿಕಷ್ಟಕರವಾದ ಈ ಕಾಂತಿಯನ್ನು ನೀನು ತೊಲಗಿಸಿ, ನಿನ್ನ ರೂಪವನ್ನು ತೋರಿಸು" ಎಂದು ಸ್ತುತಿಸಲು, ಆ ಪ್ರಕಾಶ ವಿಶೇಷವು ತೊಲಗಿತು. ವII ಅದೂ ಅಲ್ಲದೆ ೪೯. ಆ ಪದ್ಮನಾಭನು-ಹೊಸ ಕನ್ನೈದಿಲೆಯಂತಿರುವ ತನ್ನ ಅಂಗಕಾಂತಿಯಿಂದಲೂ, ಉತ್ತಮವಾದ ಮುತ್ತುಗದ ಹೂವಿನಂತೆ ಹೊಳೆಯುವ ಪೀತಾಂಬರ ಕಾಂತಿಯಿಂದಲೂ ಉದಿಸಿದ ಸೂರ್ಯನಂತಿರುವ ಚಕ್ರದ ಕಾಂತಿಯಿಂದಲೂ ಬೆಳ್ಳಗೆ ಹೊಳೆಯುವ ಶಂಖಕಾಂತಿಯಿಂದಲೂ ಒಡನೆಯೇ ಆ ಸಮುದ್ರವು ಬಣ್ಣಬಣ್ಣದ ಪಟ್ಟಿಗಳಿಂದ ತುಂಬಿ ಹೊಳೆಯುವಂತೆ ಮಾಡುತ್ತ ಚೆಲುವಾಗಿ ಕಾಣಿಸಿದನು. ೫೦. ಲಲಿತವೃತ್ತ II (ಲಯಗ್ರಾಹಿ) ಶ್ರೀದೇವಿಯ ಸ್ತನಸುಕುಂಕುಮ ರಜಸಮೂಹದ ಲೇಪನದ ಕಾಂತಿಯಿಂದ ಹೆಚ್ಚಾಗಿ ಹೊಳೆಯುವ ಕೌಸ್ತುಭಾಭರಣವು ವಿಶಾಲವೂ ಉನ್ನತವೂ ಆದ ಎದೆಯಲ್ಲಿ ಪ್ರಕಾಶಿಸುತ್ತಿದ್ದಿತು. ಆ ಪ್ರಕಾಶವು ಆಕಾಶವನ್ನೆಲ್ಲಾ ಹೂಗೊಂಚಲುಗಳಿಂದ ತುಂಬಿರುವಂತೆ ಮಾಡುತ್ತಿದ್ದಿತು. ರಾಕ್ಷಸನಾಶಕನೂ ಸಕಲ

ವ|| ಮತ್ತಮನಂತರಮಾ ಕಮಳನಾಭನಭಿಮುಖದೊಳಿರ್ದ ವೈನತೇಯನಂ ಕಂಡು,

ವಿನತಾನಂದನನಿಂದಮಕ್ಕೆ ವಿನತಾನಂದಂ ಪದಂ ಚಾರುಕಾಂ
ಚನವರ್ಣಂ ಸ್ಫಟಿಕಾಶ್ಮವರ್ಣಮುದರಂ ಮಾಣಿಕ್ಯವರ್ಣಂ ಕೊರಲ್
ಘನನೀಲೋತ್ಪಲವರ್ಣಮಾಸ್ಯಮೆಸೆದತ್ತೀ ವರ್ಣಮೀ ವರ್ಣಶೂ
ನ್ಯನ ಭೃತ್ಯಂಗೆಸೆವಂದಮಚ್ಚರಿಯೆನುತ್ತುಂ ಬಂದು ವೃಂದಾರಕರ್ ೫೧

ತಮಗಿದಿರ್ವಂದುದಧಿಪನಿ
ತ್ತಮಳ ಮಣಿವ್ರಜದೆ ಕಲ್ಪಕುಜಮಿತ್ತ ಮಹಾ
ಸುಮನಃಪುಂಜದೆ ಹರಿಗ
ರ್ಘ್ಯಮನಿತ್ತರ್ ಜಯ ಜಯಾನ್ವಿತರ್ ಬ್ರಹ್ಮಾದ್ಯರ್ ೫೨

ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವಿ ನಿದ್ರಾಂಗನಾ ನಿ
ರ್ಭರ ಸಂಭೋಗಾಂತ್ಯದೊಳ್ಪೊಣ್ಮಿದ ಬೆಮರ್ವನಿಯಂ ಪೋಲೆ ವಾರಾಶಿಧೀರ
ಸ್ವರಮಂ ತಳ್ವೊಯ್ವ ಜೇಂದ್ರಾದ್ಯಮರ ಜಯಜಯಧ್ವಾನದಿಂದಾಗಳೆಟ್ಟಾ
ದರದಿಂ ಕುಳ್ಳಿರ್ದನಾಲೋಕನಕೃತವಿಬುಧಾನಂದಕಂದಂ ಮುಕುಂದಂ ೫೩

ವ|| ತದನಂತರಂ

ದೇವತೆಗಳಿಂದಲೂ ನಮಸ್ಕೃತನೂ ಪ್ರಪಂಚವು ತನ್ನ ಒಂದೇ ಹೆಜ್ಜೆಯಾಗುವಂತೆ ವಿಸ್ತರಿಸಿದ ಪಾದವುಳ್ಳವನೂ ಆದ ಶೇಷಶಯನನು (ವಿಷ್ಣುವು) ದೇವಕಾಂತೆಯರ ಬೀಸುವ ಚಾಮರದ ಗಾಳಿಯಿಂದ ಅಡಿಗಡಿಗೆ ತೂಗಾಡುವ ಪ್ರಸಿದ್ಧ ರತ್ನಸಮೂಹ ಖಚಿತವಾದ ಕರ್ಣಾಭರಣದಿಂದ ಅಲಂಕೃತನಾದ ಕೆನ್ನೆಯುಳ್ಳವನಾಗಿ ಪ್ರಕಾಶಿಸುತ್ತಿದ್ದನು. ವ|| ಅನಂತರ ಆ ಕಮಲನಾಭನ ಎದುರುಗಡೆಯಲ್ಲಿದ್ದ ಗರುಡನನ್ನು ಕಂಡು, ೫೧. ವಿನತೆಯ ನಂದನ (ಗರುಡ)ನಿಂದ ವಿನತರಿಗೆ (ನಮಸ್ಕೃತರಿಗೆ) ಆನಂದವಾಗಲಿ. ಈತನ ಪಾದವು ಮನೋಹರವಾದ ಚಿನ್ನದ ಬಣ್ಣವುಳ್ಳದು, ಉದರವು ಸ್ಫಟಿಕಶಿಲೆಯ ಬಣ್ಣವುಳ್ಳದು. ಕೊರಳು ಕೆಂಪಿನ ಬಣ್ಣವುಳ್ಳದು, ಮುಖವು ಶ್ರೇಷ್ಠವಾದ ಕನ್ನೈದಿಲೆಯ ಬಣ್ಣದಿಂದ ಹೊಳೆಯುತ್ತಿದೆ. ವರ್ಣಶೂನ್ಯನ ಭೃತ್ಯನಾದವನಿಗೆ ಈ ವಿವಿಧ ವರ್ಣವು ಒಪ್ಪುತ್ತಿರುವುದು ಆಶ್ಚರ್ಯವೆನ್ನುತ್ತ ಆ ದೇವತೆಗಳು ಬಂದರು. ೫೨. ತಮಗೆ ಇದಿರುಗೊಂಡು ಬಂದ ಸಮುದ್ರರಾಜನು ಕೊಟ್ಟ ಪರಿಶುದ್ಧವಾದ ರತ್ನಗಳಿಂದಲೂ ಕಲ್ಪವೃಕ್ಷವು ಕೊಟ್ಟ ಉತ್ತಮವಾದ ಹೂಗಳಿಂದಲೂ ಬ್ರಹ್ಮಾದಿಗಳು ಜಯಜಯ ಧ್ವನಿಯೊಡನೆ ಹರಿಗೆ ಅರ್ಘ್ಯವನ್ನು ಕೊಟ್ಟರು. ೫೩. ತೆರೆಯ ಹೊಡೆತದಿಂದ ಆದ ತುಂತುರು ಹನಿ ತನ್ನ ದೇಹವನ್ನು ತುಂಬಿ, ನಿದ್ರಾಂಗನೆಯ ಪರಿಪೂರ್ಣಸಂಭೋಗದ ಕಡೆಯಲ್ಲಿ ಉದಿಸಿದ ಬೆವರುಹನಿಯಂತಿರಲು, ಬ್ರಹ್ಮಾದಿದೇವತೆಗಳ, ಸಮುದ್ರದ ಗಂಭೀರ ಧ್ವನಿಯನ್ನು ಪ್ರತಿಭಟಿಸುವ ಜಯ ಜಯ ಧ್ವನಿಯಿಂದ ಆಗ ಎದ್ದು ದರ್ಶನದಿಂದ ದೇವತೆಗಳ ಆನಂದವನ್ನುಕ್ಕಿಸಿದ ವಿಷ್ಣುವು ಆದರದಿಂದ ಕುಳಿತಿದ್ದನು. ವ|| ಆಮೇಲೆ

ತಾರಗೆದುಱುಗಲ್ ನವಸಂ
ಧ್ಯಾರಾಗದೊಳೆಸೆವ ತೆಱದೆ ಪದನಖರುಚಿಗಳ್
ಚಾರುಮಣಿಮಕುಟರುಚಿಯೊಳ್
ರಾರಾಜಿಸೆ ವಿಷ್ಣುಗೆಱಗಿ ನುಡಿದಂ ಬ್ರಹ್ಮಂ ೫೪

ಸುಮನಸ್ಸಿಂಧುವ ರೂಪದಿಂ ಮೞೆಯ ಪಾಂಗಿಂದಿನ್ನುವೆಟ್ಟಿರ್ಪುದಂ
ದು ಮಹಾವಾಲದ ಪೊಯ್ಲೊಳುಚ್ಚಲಿಸಿದಾ ಮುನ್ನೀರ ನೀರೆಂಬಿನಂ
ತಮನಂ ದೈತ್ಯಕಂದಬವೀರತಮನಂ ನಿರ್ಧೂತ ಬೃಂದಾರಕೋ
ತ್ತಮನಂ ಮರ್ದಿಸಿ ಮತ್ಸ್ಯರೂಪದೊಳೆ ತಂದ್ಯೆ ವೇದಮಂ ಮಾಧವಾ ೫೫

ಬಸಿಱೊಳ್ ಸರ್ವಾಂಗಮಂ ಬೈತಿಡುವುದಿತರ ಕೂರ್ಮಕ್ಕಮೀಗಳ್ ನಿಜಂಬೆ
ತ್ತೆಸೆದತ್ತಂತಾತ್ಮ ಕೂರ್ಮಾಕೃತಿಗುದಧಿತಳಂ ಸಾಲದಂಗಂಗಳಂ ನೀಂ
ಬಸಿಱೊಳ್ ಬೈತಿಟ್ಟಭಿಪ್ರಾಯದಿನೆನೆ ಕಮಠಾಕಾರಮಂ ತಾಳ್ದಿದೈ ರಾ
ಕ್ಷಸವಂಶಧ್ವಂಸಿ ನೀನಂದುದಧಿಮಥನದೊಳ್ ಮಂದರೋದ್ಧಾರಣಾರ್ಥಂ ೫೬

ಭುವನಂ ತಾಂ ಭುವನಾತ್ಮಮಾಗೆ ಧರೆಯಂ ಕಳ್ದಾ ಹಿರಣ್ಯಾಕ್ಷನಂ
ದಿವಿಜಾಧೀಶ್ವರರೂಕ್ಷನಂ ಸಕಲ ಲೋಕಾಸ್ಫೋಟನಾಪೇಕ್ಷನಂ
ತವೆ ಕೊಂದಾದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀ
ಧವ ದಂಷ್ಟ್ರಾಗ್ರದ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ ೫೭

೫೪. ಹೊಸ ಸಂಜೆಗೆಂಪಿನಲ್ಲಿ ನಕ್ಷತ್ರಗಳ ಸಮೂಹವು ಹೊಳೆಯುವ ಹಾಗೆ ಬ್ರಹ್ಮನು ತನ್ನ ಮನೋಹರವಾದ ರತ್ನಕಿರೀಟದ ಕಾಂತಿಯಲ್ಲಿ ವಿಷ್ಣುವಿನ ಕಾಲಿನ ಉಗುರುಗಳ ಕಾಂತಿಯು ಹೆಚ್ಚಾಗಿ ಹೊಳೆಯುತ್ತಿರಲು ಅವನಿಗೆ ಎರಗಿ ಮಾತನಾಡಿದನು. ೫೫. "ಮಾಧವಾ! ನೀನು ಮತ್ಸ್ಯಾವತಾರದಲ್ಲಿ ರಾಕ್ಷಸ ಸಮೂಹದಲ್ಲೇ ವೀರತಮನೆನಿಸಿಕೊಂಡು, ದೇವಶ್ರೇಷ್ಠರನ್ನೂ ಹೆಚ್ಚಾಗಿ ನಡುಗಿಸಿದ ತಮನೆಂಬ ಅಸುರನನ್ನು ಮರ್ದಿಸಿ, ವೇದವನ್ನು ತಂದೆಯಷ್ಟೆ. ಆಗ ಬಹಳ ಉದ್ದವಾದ ನಿನ್ನ ಬಾಲದ ಹೊಡೆತದಿಂದ ಮೇಲೆ ಹಾರಿದ ಸಮುದ್ರದ ನೀರು ದೇವಗಂಗೆಯ ರೂಪದಿಂದಲೂ ಮಳೆಯ ರೂಪದಿಂದಲೂ ಇನ್ನೂ ಬರುತ್ತಲೇ ಇದೆ! ೫೬. ರಾಕ್ಷಸವಂಶಧ್ವಂಸೀ! ನೀನು ಹಿಂದೆ ದೇವತೆಗಳು ಸಮುದ್ರವನ್ನು ಕಡೆಯುವಾಗ ಮಂದರಪರ್ವತವನ್ನು ಧರಿಸುವುದಕ್ಕಾಗಿ ಸ್ವೀಕರಿಸಿದ ನಿನ್ನ ಕೂರ್ಮಾಕೃತಿಗೂ ಆ ಸಮುದ್ರತಳವು ಸಾಲದೆ ಹೋದುದರಿಂದ ನಿನ್ನ ಅಂಗಗಳನ್ನೆಲ್ಲಾ ನೀನು ಸದಭಿಪ್ರಾಯದಿಂದ ಬಸಿರಿನಲ್ಲಿ ಬಚ್ಚಿಟ್ಟು ಕೂರ್ಮಾವತಾರವನ್ನು ತಾಳಿದೆ. ಆದುದರಿಂದ ಬೇರೆಲ್ಲಾ ಕೂರ್ಮ (ಆಮೆ)ಗಳಿಗೂ ಹೊಟ್ಟೆಯೊಳಗೆ ತಮ್ಮ ಸರ್ವಾಂಗವನ್ನೂ ಬಚ್ಚಿಡುವುದು ಈಗಲೂ ಸಹಜವಾಗಿ ಕಾಣುತ್ತಿದೆ. ೫೭. ಭೂಕಾಂತಾ! ಪ್ರಪಂಚವು ಜಲಮಯವಾಗುವಂತೆ ಭೂಮಿಯನ್ನು ಕದ್ದವನೂ, ದೇವಾಧಿಪತಿಗೂ ಕ್ರೂರಿಯಾದವನೂ, ಸಕಲಲೋಕವನ್ನೂ ಅಸ್ಫೋಟಿಸಲಪೇಕ್ಷೆಯುಳ್ಳವನೂ ಆಗಿದ್ದ ಆ ಹಿರಣ್ಯಾಕ್ಷನನ್ನು ಆದಿ ವರಾಹಾವತಾರದಿಂದ ಕೊಂದು, ಅಂದು ಭೂಗೋಳವನ್ನು ನಿನ್ನ ಕೋರೆದಾಡೆಯ ತುದಿಯಲ್ಲಿರುವ ನೀಲಮಣಿಯೆನ್ನುವಂತೆ ಆಗಿಸಿ ಎತ್ತಿದೆ.

ಘನಮಾರ್ಗಂ ನಖಟಂಕಭಿನ್ನದಿತಿಜಾಸೃಕ್ಪಂಕದಿಂ ಕೆಂಕಮಾ
ಗಿ ನಿಲಲ್ ಸಂಜೆಯೊಳಂದಿನಿಂ ಬಟಕೆ ನಿಚ್ಚಂ ಸಂಜೆಗೆಂಪೆಂಬುದಾ
ಯ್ತನೆ ದೈತ್ಯಾಂತಕ ನೀಂ ನಿರಸ್ತಜಗದಂಹಂ ರೌದ್ರರಂಹಂ ನೃಸಿಂ
ಹನೆನಿಪ್ಪಾಕೃತಿಯಿಂ ಹಿರಣ್ಯಕಶಿಪು ಪ್ರಧ್ವಂಸಮಂ ಮಾಡಿದೈ ೫೮

ಜಲದಾಧ್ವಂಬರಮೆತ್ತಿದಂಘ್ರಿಯ ನಖಾಂಶುಶ್ರೇಣಿ ತಾರಾಗಣ
ಚ್ಛಲದಿಂದಿರ್ಪಿನಮಿನ್ನುಮಂದವನಿಚಕ್ರಂ ವಿಕ್ರಮಕ್ಕೆಯ್ದದಾ
ಬಲಿಯಂ ದೈತ್ಯಕದಂಬಕೈಕಬಲಿಯಂ ಯತ್ನೀಕೃತಶ್ಮಶ್ರುಭೃ
ದ್ಬಲಿಯಂ ಮೆಟ್ಟಿ ರಸಾತಳಕ್ಕಿಟಿಪಿದೈ ನೀಂ ವಾಮನಾಕಾರದಿಂ ೫೯

ಪರಶುಸ್ಪರ್ಶಶತಂಗಳಿಂ ನೆಗಟ್ದುವೀ ಪೊಂದೋಳ್ಗಳೀತಂಗೆನಲ್
ಪರಶುತ್ರುಟ್ಟದಯಃಕಠೋರ ಭುಜಮೂಲಾಸೃಕ್ಪಯೋಧಾರೆ ಸಾ
ಸಿರಮುಣ್ಮಲ್ ತಟಿದೈ ಸಹಸ್ರಭುಜನಂ ಮತ್ತಿರ್ಪತೊರ್ಸೂಟ್ಟನರೇ
ಶ್ವರರಂ ನೀಂ ತಟಿದೊಟ್ಟಿದೈ ಪರಶುರಾಮಾಕಾರದಿಂದಚ್ಯುತಾ ೬೦

ದೇವ ನಿಜೋಗ್ರಬಾಣಹತಿಯಿಂ ತಲೆಗಳ್ ಗಗನಕ್ಕೆ ವೀರಲ
ಕ್ಷ್ಮೀವಧುವಾಡುತಿರ್ಪ ತಿಱಿಕಲ್ಲೆನೆ ಸೂಱಿಱೊಳೆ ಪಾಱುತಿರ್ಪಿನಂ
ರಾವಣನಂ ಜಗತ್ತ್ರಿತಯರಾವಣನಂ ವಿಜಿತೋರುಪೀಡಿತೈ
ರಾವಣನಂ ಜಗತ್ತ್ರಿತಯರಾವಣನಂ ಮರ್ದಿಸಿದೈ ಜನಾರ್ದನಾ ೬೧

೫೮. ರಾಕ್ಷಸಾಂತಕಾ! ಜಗತ್ಪಾಪಪರಿಹಾರಕನೂ ಭಯಂಕರ ವೇಗವುಳ್ಳವನೂ ಆದ ನೀನು ನರಸಿಂಹಾಕಾರದಿಂದ ಹಿರಣ್ಯಕಶಿಪನನ್ನು ಪ್ರಧ್ವಂಸಮಾಡಿದೆ. ಅಂದು ಸಂಜೆ ಆಕಾಶವು ನಿನ್ನ ಉಗುರೆಂಬ ಕಲ್ಲುಳಿಯಿಂದ ಒಡೆದ ಆ ರಾಕ್ಷಸನ ಉದರರಕ್ತದ ಕೆಸರಿನಿಂದ ಕೆಂಪಾಗಿ ನಿಂತಿತು. ಆದುದರಿಂದ ಅಂದಿನಿಂದೀಚೆಗೆ ನಿತ್ಯವೂ ಸಂಜೆಗೆಂಪೆಂಬುದು ನಿಯತವಾಯಿತು. ನೀನು ಅಂದು ವಾಮನಾವತಾರದಲ್ಲಿ ರಾಕ್ಷಸಸಮೂಹದಲ್ಲೇ ಏಕೈಕಬಲಶಾಲಿಯನ್ನು ಹೊತ್ತು ವೀರರ ಬಲವನ್ನು ಪ್ರಯತ್ನದಿಂದ ಅಡಗಿಸಿದವನೂ ಆದ ಬಲಿಚಕ್ರವರ್ತಿಯನ್ನು ಮೆಟ್ಟಿ ಪಾತಾಳಕ್ಕಿಳಿಸಿದೆ. ಆಗ (ತ್ರಿವಿಕ್ರಮನಾದ) ಎರಡನೆಯ ಪಾದವನ್ನಿಡಲು ಭೂಮಂಡಲವು ಸಾಲದೆ ಹೋದುದರಿಂದ ಆಕಾಶಕ್ಕೆತ್ತಿದ ಆ ಪಾದ ಉಗುರುಗಳ ಕಾಂತಿ ಸಮೂಹವು ನಕ್ಷತ್ರಗಣವೆಂಬ ವೇಷದಿಂದ ಇನ್ನೂ ಇರುವಂತಾಗಿದೆ! ೬೦. ಅಚ್ಯುತಾ! ನೀನು ಪರಶುರಾಮಾವತಾರದಲ್ಲಿ ನಿನ್ನ ಪರಶು(ಗಂಡುಗೊಡಲಿ)ವೆಂಬ ಸ್ಪರ್ಶಶಿಲೆಯ ನೂರಾರು ಏಟುಗಳಿಂದ, ಇವನಿಗೆ ಈ ಚಿನ್ನದ ತೋಳುಗಳು ಹುಟ್ಟಿ ಪ್ರಸಿದ್ಧಿಗೆ ಬಂದುವು ಎನ್ನುವಂತೆ ನೀನು ಗಂಡುಗೊಡಲಿಯಿಂದ ಕತ್ತರಿಸಿದ ಉಕ್ಕಿನಂತೆ ಕಠಿನವಾದ ತೋಳುಗಳ ಬುಡದಿಂದ ಸಾವಿರಾರು ರಕ್ತಧಾರೆಗಳು ಹೊರಡುವಂತೆ ಸಹಸ್ರ ಭುಜ ಕಾರ್ತವೀರ್ಯಾರ್ಜುನನನ್ನೂ ಮತ್ತೆ ಇಪ್ಪತ್ತೊಂದು ಸಾರಿ ಬೇರೆ ರಾಜರನ್ನೂ ತರಿದೊಟ್ಟಿದೆ. ೬೧. ದೇವ ಜನಾರ್ದನಾ! ನೀನು ರಾಮಾವತಾರದಲ್ಲಿ ನಿನ್ನ ಉಗ್ರವಾದ ಬಾಣದ ಹೊಡೆತದಿಂದ ರಾವಣನ ತಲೆಗಳು ವೀರಲಕ್ಷ್ಮಿಯು ಆಡುತ್ತಿರುವ ತಿರಿಕಲ್ಲೆನ್ನುವಂತೆ ಸರದಿಯಿಂದ ಗಗನಕ್ಕೆ ಹಾರುತ್ತಿರಲು, ಮೂರು ಲೋಕವನ್ನೂ ಕೂಗಿಡಿಸಿ, ಇಂದ್ರನನ್ನೂ

ಅರಿಯಂತೀಯರಿಯಂ ಕಱುತ್ತರಿಯೆನುತ್ತಾರ್ದಿಟ್ಟಮತ್ರಂ ನಭೋಂ
ತರದೊಳ್ ತಾಂ ಶಿಶುಪಾಲಮಸ್ತಕಸಮೇತಂ ಪಾಱೆ ಧರ್ಮಾತ್ಮಜಾ
ಧ್ವರದೊಳ್ ಬಾಯಿನಮಂ ಸುರಾಂಗನೆಯರೀವಂತಾಯ್ತೆನಿಪ್ಪಂಬುಜೋ
ದರ ನೀಂ ತನ್ನನು[೧] ಜಾತನಾದ ಬಲಭದ್ರಾಕಾರಮೇಂ ವಂದ್ಯಮೋ ೬೨

ಜಗಮೆಲ್ಲಂ ನಿಜಬೋಧದೃಷ್ಟಿಯೊಳ್ ಕಾಣಲ್ಪಂದುದೀ ಚರ್ಮಚ
ಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ ನೀರಾಗುಕ್ಕುತಿರ್ದತ್ತು ದೃ
ಗ್ಯುಗಳಂ ವ್ಯರ್ಥತೆಯಿಂದಮೆಂಬಿನೆಗಮಾನಂದಾಶ್ರುಧಾರಾಳಿ ಕೈ
ಮಿಗೆ ಬೌದ್ಧಾಕೃತಿಯಿಂದೆ ಯೋಗದೊಳೆ ಕೂಡಿರ್ದೈ ಸರೋಜಾಂಬಕಾ ೬೩

ಅತಿಮಲಿನಾಂಗಮಾದ ಜಗಮಂ ಭವದೀಯಹಯಸ್ಫುರತ್ಖುರಾ
ಹತಿಯಿನುದಗ್ರಖಡ್ಗಹತಿಯಿಂ ಲಯಮೆಯ್ದಿಸುವಲ್ಲಿ ನಿನ್ನ ಸಂ
ಗತಿಯೊಳ್ ಕಿಲ್ಬಿಷಂ [೨]ಕಿಡುವುದುಂ ಕಲಿಕಾಲಮನೊಕ್ಕು ಭೂತಳಂ
ಕೃತಯುಗದಂತೆ ವರ್ತಿಸುವುದೇವೊಗಟ್ವೆಂ ನಿಜಕಲ್ಕಿಮೂರ್ತಿಯಂ ೬೪

ಆ ನಿನ್ನವತಾರಂಗಳ
ದಾನವರುಂ ಮುನ್ನಿನವರೆ ಮಗುಟ್ದರ್ [೩]ಗಡಮೇಂ
ನೀನಳವಡಿಸಿದ ಕಾರ್ಯವಿ
ಧಾನಂಗಳಿವೆಮಗೆ ಪೊಸತೆ ಪೇಬಬ್ಜಾಕ್ಷಾ ೬೫

ಜಯಿಸಿ, ಐರಾವತವನ್ನು ಏರಿದ್ದ ರಾವಣನನ್ನು ಮರ್ದಿಸಿದೆ. ೬೨. ನೀನು ಈ ಅರಿಯನ್ನು ಚಕ್ರದಂತೆ ಗುರಿಯಿಟ್ಟು ಕತ್ತರಿಸು ಎಂದು ಆರ್ಭಟಿಸಿ, ಎಸೆದ ತಟ್ಟೆಯು ಶಿಶುಪಾಲನ ತಲೆಯ ಸಮೇತವಾಗಿ ಆಕಾಶದ ಮೇಲೆ ದೂರ ಹಾರಿ ಬರಲು ಧರ್ಮರಾಯನ ಯಜ್ಞದಲ್ಲಿ ಸುರಾಂಗನೆಯರು ಕೊಡುವ ಬಾಗಿನದಂತೆ ಆಯಿತು. ಪದ್ಮನಾಭನೇ! ನಿನ್ನನ್ನು ತಮ್ಮನನ್ನಾಗಿ ಪಡೆದ ಬಲರಾಮಾವತಾರವು ಎಷ್ಟು ವಂದ್ಯವಾದುದೋ! ೬೩. ಕಮಲನೇತ್ರಾ! ಜಗತ್ತೆಲ್ಲವೂ ನಿನ್ನ ಜ್ಞಾನದೃಷ್ಟಿಗೇ ಕಾಣಬಂದಿತು. ಈ ಚರ್ಮದ ಕಣ್ಣುಗಳಿಂದ ನೋಡಬೇಕಾದ ಪದಾರ್ಥವಿಲ್ಲ. ಈ ಕಣ್ಣುಗಳೆರಡೂ ವ್ಯರ್ಥವೆಂಬುದರಿಂದ ನೀರಾಗಿ ಉಕ್ಕುತ್ತಿವೆಯೋ ಎನ್ನುವಂತೆ ಆನಂದದ ಕಣ್ಣೀರಿನ ಧಾರೆಯ ಪ್ರವಾಹವು ಹೆಚ್ಚುತ್ತಿರಲು ನೀನು ಬೌದ್ಧಾವತಾರದಿಂದ ಯೋಗಿಯಾಗಿದ್ದೆ. ೬೪. ನಿನ್ನ ಕಲ್ಕಿಮೂರ್ತಿಯನ್ನು ಎಷ್ಟು ಹೊಗಳಲಿ? ಅತಿ ಮಲಿನವಾದ ಜಗತ್ತನ್ನು ನಿನ್ನ ಕುದುರೆಯ ಗೊರಸಿನ ಹೊಡೆತದಿಂದಲೂ ಉದ್ದವಾದ ಕತ್ತಿ ಹೊಡೆತದಿಂದಲೂ ನೀನು ನಾಶಮಾಡುವಲ್ಲಿ ನಿನ್ನ ಸಂಪರ್ಕದಿಂದ ಪಾಪವು ನಾಶಹೊಂದುವುದರಿಂದ ಭೂತಲವು ಕಲಿಕಾಲವನ್ನು ತ್ಯಜಿಸಿ ಕೃತಯುಗದಂತೆ ವರ್ತಿಸುವುದು. ೬೫. ಮುಂಚೆ ಆ ನಿನ್ನ ಅವತಾರಗಳ ಕಾಲದಲ್ಲಿದ್ದ ಹಿಂದಿನ ರಾಕ್ಷಸರೇ ಈಗ ತಿರುಗಿ ಬಂದಿರುವರಲ್ಲವೆ? ಕಮಲಾಕ್ಷ! ನೀನು ಸಿದ್ಧಪಡಿಸಿದ ಈ ಕಾರ್ಯಕ್ರಮ

೧ ಜಾತಮಾದ (ಕಖ) ೨. ಕಿಡುವುದೇಂ (ಕಖ) ೩. ಗಡ ಮೇಣ್ (ಮೂಲ)

[1]ವಿದಿತವ್ಯಾಪಾರ ನೀಂ ಭಾವಿಸು ಕೃತಯುಗದಿಂದಾದವರ್ ತ್ರೇತೆಯೊಳ್ ಪು
ಟ್ಟಿದವರ್ ಮತ್ತೀಗಳೀ ದ್ವಾಪರದೊಳೊಗೆದವರ್ ದೈತ್ಯರಿರ್ದಪ್ಪರಾ ದು
ರ್ಮದರಾರೆಂತಪ್ಪರಾರ್ಗಾವುದು ಪೆಸರವರಿಂದಾದುದುದ್ವೃತ್ತವೇನೆಂ
ಬುದನಾನಿಂ ಪೇೞ್ವೆನಲ್ಲೆಂ ವಿಭುಗಪರಿಮಿತಾಳಾಪಮಶ್ಲಾಘ್ಯಮಲ್ತೇ ೬೬

ವ|| ಎಂದು ಭಾರತೀಪತಿ ಚತುರಪರಿಮಿತೋದಾರಗಂಭೀರಭಾಷಿತಂಗಳಿಂ ಬಿನ್ನಪಂಗೆಯ್ಯೆ ತದೀಯಹೃದಯಾಭಿಪ್ರಾಯಮಂ ಸಕಲಲೋಕವೃತ್ತಾಂತಮಂ ನಿಜಸ್ವಾಂತದೊಳ್ ತಿಳಿದು

ಉದರಾಬ್ಜದಿಂ ನಿಜಾಸ್ಯಾ
ಬ್ಜದ [2]ಕಂಪಿಂಗೆಱಗುವಳಿಕುಲಂ ಬೆಳ್ಪಡರ್ವಂ
ತೊದವೆ ದಶನಾಂಶು ಪಾಲ್ಗಡ
ಲಿದೊಂದೆನಲ್ ಪುದಿಯೆ ಹರಿ ವಿರಿಂಚಿಗೆ ನುಡಿದಂ ೬೭

ಭಯಮಂ ದೇವಗಣಕ್ಕೆ ಮಾಡಿ ಪದಿನಾಲ್ಕುಂ ಲೋಕಮಂ ದೈತ್ಯನಾ
ಜ್ಞೆಯೊಳಿಟ್ಕೊಂಡಿರೆ ನಾಕಿಗಳ್ಗಭಯಮಂ ಕೊಟ್ಟೇಱಿ ತೇಱಂ [3]ಜಗ
ತ್ರಯಮಂ ಕಾದು ಸುರಾಸುರಾಹವದೊಳಾಂ ಕೊಂದಂದಿನಾ ಕಾಲನೇ
ಮಿಯೆ ಕಂಸಾಸುರನಾಗಿ ಪುಟ್ಟಿದುದನಾಂ ಬಲ್ಲೆಂ ವಚೋವಲ್ಲಭಾ ೬೮

ವಿಧಾನಗಳು ನಮಗೆ ಹೊಸದೆ? ಹೇಳು. ೬೬. ಲೋಕವ್ಯಾಪಾರವನ್ನು ತಿಳಿದಿರುವ ನೀನೇ ಯೋಚಿಸು. ಕೃತಯುಗದಲ್ಲೂ ತ್ರೇತಾಯುಗದಲ್ಲೂ ಈ ದ್ವಾಪಯುಗದಲ್ಲೂ ಉದಿಸಿದ ರಾಕ್ಷಸರಿರುವರು. ಆ ದುರ್ಮದರು ಯಾರು ಯಾರು? ಎಂತಹವರು? ಅವರಲ್ಲಿ ಯಾರಿಗೆ ಯಾವ ಹೆಸರು? ಅವರ ದುರ್‌ವೃತ್ತ ಕಾರ್ಯಗಳೇನು? ಎಂಬುದನ್ನು ಇನ್ನು ನಾನು ಹೇಳುವನಲ್ಲ, ವಿಭುವಿನೊಡನೆ ಹೆಚ್ಚಾಗಿ ಮಾತನಾಡುವುದು ಅನುಚಿತವಲ್ಲವೆ? ವ|| ಎಂದು ಸರಸ್ವತೀಕಾಂತನು-ಚತುರವೂ ಪರಿಮಿತವೂ ಉದಾರವೂ ಗಂಭೀರವೂ ಆದ ಮಾತುಗಳಿಂದ ವಿಜ್ಞಾಪಿಸಿದನು. ವಿಷ್ಣು - ಆತನ ಹೃದಯಾಭಿಪ್ರಾಯವನ್ನೂ ಸಕಲ ಲೋಕವೃತ್ತಾಂತವನ್ನೂ ತನ್ನ ಮನದಲ್ಲಿ ತಿಳಿದು. ೬೭. ತನ್ನ ಉದರಕಮಲದಿಂದ ಸುವಾಸನೆಗಾಗಿ ಮುಖಕಮಲಕ್ಕೆ ಎರಗುವ ತುಂಬಿಗಳ ಸಮೂಹವು ಬೆಳ್ಳಗಾಗುವಂತೆ ಹಲ್ಲಿನ ಹೊಳಪು ಇದೊಂದು ಹಾಲಿನ ಕಡಲು ಎನ್ನುವಂತೆ ಹರಡುತ್ತಿರಲು ಆ ಹರಿಯು ಬ್ರಹ್ಮನಿಗೆ ಹೇಳಿದನು. ೬೮. "ದೇವತೆಗಳ ಸಮೂಹಕ್ಕೆ ಭೀತಿಯನ್ನುಂಟುಮಾಡಿದ ಆ ದೈತ್ಯನು ಹದಿನಾಲ್ಕು ಲೋಕವನ್ನೂ ತನ್ನ ಆಜ್ಞೆಗೆ ಅಧೀನವನ್ನಾಗಿ ಮಾಡಿಕೊಂಡಿರಲು ನಾನು ದೇವತೆಗಳಿಗೆ ಅಭಯವನ್ನು ಕೊಟ್ಟು, ತೇರನ್ನೇರಿ, ಮೂರು ಲೋಕವನ್ನೂ ಕಾದು, ದೇವಾಸುರ ಯುದ್ಧದಲ್ಲಿ ಕೊಂದ ಅಂದಿನ ಆ ಕಾಲನೇಮಿಯೇ ಕಂಸಾಸುರನಾಗಿ ಹುಟ್ಟಿರುವುದನ್ನು ನಾನು ಬಲ್ಲೆನು, ವಾಣೀವಲ್ಲಭಾ!

---

೧. ವಿದಿತವ್ಯಾಪಾರನೆಂ ಭಾವಿಸು (ಕ) ವಿದಿತವ್ಯಾಪಾರನೆಂ ಭಾವಿಸೆ (ಮೊಅ).

೨. ಸೊಂಪಿಂಗೆಱಗುವಂಚಿವಿಂಡುಗಳಿನೆ ಬೆಳ್ಪೊದವೆ (ಮೊಅ) ೩. ಜಗನ್ಮಯಮಂ (ಕಖ).

ಮೊದಲೊಳ್ ದಾನವನುಯ್ದು ತದ್ಭುಜಗಸದ್ಮಕ್ಕೈದಿಸಲ್ ಕ್ರೋಡರೂ
ಪದಿನಾಂ ಧಾತ್ರಿಯನೆತ್ತಲಾ ವಸುಮತೀಸ್ತ್ರೀಗೆನ್ನ ಸಂಭೋಗಕಾ
ಲದ ಸಂಸರ್ಗದೆ ಪುಟ್ಟಿದಂ ನರಕನಾತಂ ಲೋಕಸಂಸಾರಮೂ
ರ್ತಿ ದಶಾಸ್ಯಾದಿಗಳಿಂ ಬಲಾಧಿಕನದಂ ಬಲ್ಲೆಂ ಸರೋಜಾಸನಾ ೧೯

ಗಿರಿಗಳನೆತ್ತಿ ಪೆರ್ಮರಗಳಂ ಪಿಡಿದಾಂತ ಮಹಾಬಲಸ್ಥ ವಾ
ನರಭಟಕೋಟಿಯಂ ಶ್ವಸಿತವಾತದೆ ಪಾಱಿಸುವಂಘ್ರಿಯುಗ್ಮದಿಂ
ದೊರಸುವ ಕೈಗಳಿಂ ಪೊಸೆದು ಮುಕ್ಕುವಗುರ್ವಿನ ಕುಂಭಕರ್ಣನೀ
ಧರಣಿಗೆ ದಂತವಕ್ರನೆನಿಸಿರ್ದು(ರ್ಪ)ದನಾನಱಿವೆಂ ಚತುರ್ಮುಖಾ ೨೦

ಹರಸಖನಲ್ಲಿ ಪುಷ್ಪಕಮನಿಟ್ಟುಳಿಗೊಂಡು ಹರಾದ್ರಿಯಂ ಹರಂ
ಬೆರಸು ಭುಜಂಗಳಿಂ ನೆಗಪಿ ಶಕ್ರನುಮಂ ಸೆಱೆಗೆಯ್ದಜಯ್ಯನಾ
ಗಿರೆ ಬಹುಯತ್ನಗೌರವದಿನಾಂ ಪೊಣರ್ದಿಕ್ಕಿದ ರಾವಣಂ [೧]ವಚೋ
ಧರ ಶಿಶುಪಾಲನೆಂಬಸುರನಾದುದನಾಂ ತಿಳಿದೆಂ ನಿರಾಕುಳಂ ೨೧

ಕ್ರಮದೆ ವಿಜೃಂಭಣಕ್ರಮದೆ ಕೊಂಡು ಧರಾತಳಮಂ ರಸಾತಳ
ಕ್ಕಮರವಿರೋಧಿಯಂ ಕಳುಪಿದೆಂ ಬಳಿಯಂ ಬಳಿಯಂ ತದಾತ್ಮಜಂ
ಯಮಸಮಭೀಕರಂ ಯಮಸಮಾಧಿಯನೀಶ್ವರನಿಂ ವರಂ ವರಂ
ಸಮನಿಪ ಬಾಣನೀ ಸುರರ್ಗೆ ಹೃದ್ಗತಬಾಣನೆ ಬಲ್ಲೆನಬ್ಜಜಾ ೨೨

೧೯. ಆದಿಯಲ್ಲಿ ರಾಕ್ಷಸನು ಭೂಮಿಯನ್ನು ಎತ್ತಿಕೊಂಡು ಹೋಗಿ ಪಾತಾಳಲೋಕಕ್ಕೆ ಸೇರಿಸಿದನು. ನಾನು ಆದಿವರಾಹ ರೂಪದಿಂದ ಆಕೆಯನ್ನು ಎತ್ತಿಕೊಂಡು ಬರುವಾಗ ಆ ಭೂದೇವಿಗೆ ನನ್ನ ಸಂಭೋಗ ಕಾಲದ ಸಂಬಂಧದಿಂದ ನರಕಾಸುರನು ಹುಟ್ಟಿದನು. ಆತ ಲೋಕ ಸಂಹಾರಕ ಮೂರ್ತಿ ರಾವಣಾದಿಗಳಿಗಿಂತ ಹೆಚ್ಚಾದ ಬಲವುಳ್ಳವನು, ಎಂಬುದನ್ನು ನಾನು ಬಲ್ಲೆನು, ಕಮಲಾಸನಾ! ೨೦. ಚತುರ್ಮುಖಾ! ಗಿರಿಗಳನ್ನೆತ್ತಿ ದೊಡ್ಡ ದೊಡ್ಡ ಮರಗಳನ್ನು ಹಿಡಿದು ಎದುರಿಸಿದ ಬಹುಬಲಶಾಲಿಗಳಾದ ವಾನರಭಟಕೋಟಿಯನ್ನು ಉಸಿರಿನ ಗಾಳಿಯಿಂದ ಹಾರಿಸುವ ಕಾಲುಗಳಿಂದ ಒರಸುವ ಕೈಗಳಿಂದ ಹೊಸೆದು ಮುಕ್ಕುವ ಅತಿಶಯ ಭಯಂಕರನಾದ ಕುಂಭಕರ್ಣನೇ ಈಗ ಭೂಮಿಯಲ್ಲಿ ದಂತವಕ್ರನೆಂಬುವನಾಗಿರುವುದನ್ನು ನಾನು ತಿಳಿದಿರುವೆನು. ೨೧. ವಾಣೀಧರನೇ! ಕುಬೇರನಿಂದ ಪುಷ್ಪಕವಿಮಾನವನ್ನು ಕಿತ್ತುಕೊಂಡು ಕೈಲಾಸ ಪರ್ವತವನ್ನು ಹರನೊಡನೆಯೇ ತೋಳುಗಳಿಂದೆತ್ತಿ ಇಂದ್ರನನ್ನೂ ಸೆರೆಹಿಡಿದು ಅಜೇಯನಾಗಿರುತ್ತಿರಲು ಅತಿಶಯ ಪ್ರಯತ್ನದಿಂದ ನಾನು ಯುದ್ಧಮಾಡಿ ಕೊಂದ ಆ ರಾವಣನು ಈಗ ಶಿಶುಪಾಲನೆಂಬ ಅಸುರನಾಗಿರುವುದನ್ನು ಸುಲಭವಾಗಿ ಸರಿಯಾಗಿ ತಿಳಿದೆನು. ೨೨. ಕಮಲಜಾ! ಕ್ರಮಕ್ರಮವಾಗಿ ಅತ್ಯುನ್ನತ ದೇಹವುಳ್ಳವನಾಗಿ ಹೆಜ್ಜೆಯಿಡುವುದರಿಂದ ಭೂತಲವನ್ನು ಆಕ್ರಮಿಸಿ ತೆಗೆದುಕೊಂಡು, ದೇವವಿರೋಧಿಯೂ ಬಲಶಾಲಿಯೂ ಆದ

೧. ವಚೋವರ (ಮೊಅ)

ಚಕ್ರಧರತ್ವಮಂದು ಸಫಲಂ ಭುಜಸಾಹಸಮಂದು ಧನ್ಯಮಾ
ಜಿಕ್ರತುವಂದು ಪೂರ್ಣಮಸುರಾಂತಕನಾಮಮದಂದು ಸಾರ್ಥಕಂ
ಶಕ್ರವಿರಿಂಚಿಮುಖ್ಯಸುರರಕ್ಷಣಮಂದು ಕೃತಾರ್ಥಮೆನ್ನೊಳಾ
ವಿಕ್ರಮಸಾಲ್ವನಂ ತವಿಸಿದಂದಿದನಾನಱಿದೆಂ ಪಿತಾಮಹಾ ೭೩

ಇವರಂ ಕೊಲ್ವ [1]ಸಮೀಪದೊಳ್ ಮಗಧಭೂಭೃದ್ಯುದ್ಧದೊಳ್ ಷಟ್ಪುರಾ
ಹವದೊಳ್ ಪಾಂಡವಕೌರವಾಜಿಯೊಳನೇಕಾಕ್ಷೋಹಿಣೀಸೈನ್ಯಸಂ
ಘವನುನ್ಮೂಲಿಸಿ [2]ಭೂಮಿಭಾರವನಮೋಘಂ ಪಿಂಗಿಸಲ್ವೇಟ್ಪುದೀ
ಭುವನವ್ಯಾಪ್ತಿಯನೆಲ್ಲಮಂ ತಿಳಿದೆನಾಂ ವಾಣೀವಧೂವಲ್ಲಭಾ ೭೪

ಆದಿತ್ಯನ ಪಿತೃಮಾತೃಗ
ಳಾದಾ ಕಶ್ಯಪನುಮದಿತಿಯುಂ ವರುಣನ ಶಾ
ಪಾದೇಶದೆ ಯದುವಂಶಜ
ರಾದರ್ ವಸುದೇವ ದೇವಕೀಸಂಜ್ಞೆಗಳಿಂ ೭೫

ಗೋಸಂಬಂಧದ ತೋಟಿಯೊ
ಳಾ ಸಾಗರನಾಥನಿತ್ತ ಶಾಪದಿನವರ್ಗಾ
ದಾ ಸುತರುಂ ಗೋಪಾಲ
ವ್ಯಾಸಂಗದೆ ಕೆಲವುಕಾಲಮಿರ್ಕುಂ ವ್ರಜದೊಳ್ ೭೬

ಬಲಿಚಕ್ರವರ್ತಿಯನ್ನು ರಸಾತಳಕ್ಕೆ ಕಳುಹಿಸಿದೆನು. ಬಳಿಕ ಅವನ ಮಗನೂ ಯಮನಂತೆ ಭಯಂಕರನೂ, ಯಮ ನಿಯಮಾದಿ ಯೋಗಸಮಾಧಿಯಿಂದ ಈಶ್ವರನಿಂದ ವರವನ್ನು ಪಡೆದವನೂ ಆದ ಬಾಣಾಸುರನು ಈ ದೇವತೆಗಳಿಗೆ ಹೃದ್ಗತಬಾಣನಾಗಿರುವನು. ನಾನು ಬಲ್ಲೆ. ೭೩. ಪಿತಾಮಹಾ, ಪರಾಕ್ರಮಿಯಾದ ಆ ಸಾಲ್ವರಾಜನನ್ನು ನಾಶಮಾಡಿದ ದಿನ ನನ್ನ ಚಕ್ರಧರತ್ವವು ಸಫಲ; ಭುಜಸಾಹಸವು ಆ ದಿನ ಸಾರ್ಥಕ; ಯುದ್ಧ ಯಜ್ಞವು ಪೂರ್ಣ; ಅಸುರಾಂತಕನೆಂಬ ಹೆಸರು ಸಾರ್ಥಕ. ಇಂದ್ರ ಬ್ರಹ್ಮಾದಿ ದೇವರಕ್ಷಣೆಯೂ ಕೃತಾರ್ಥ. ೭೪. ವಾಣೀವಧೂವಲ್ಲಭಾ, ಇವರನ್ನು ಕೊಲ್ಲುವ ಸಂದರ್ಭದಲ್ಲಿ ಮಗಧರಾಜ ಯುದ್ಧದಲ್ಲಿ ಷಟ್ಪುರ ಯುದ್ಧದಲ್ಲಿ ಪಾಂಡವ ಕೌರವ ಯುದ್ಧದಲ್ಲಿ ಅನೇಕ ಅಕ್ಷೌಹಿಣೀ ಸೈನ್ಯ ಸಮೂಹವನ್ನು ಬೇರು ಸಹಿತ ಕಿತ್ತುಹಾಕಿ, ಭೂಭಾರವನ್ನು ನಿಜವಾಗಿ ಹೋಗಲಾಡಿಸ ಬೇಕು. ಈ ಭುವನ ವ್ಯಾಪಾರವೆಲ್ಲವನ್ನೂ ನಾನು ತಿಳಿದೆನು. ೭೫. ಇಂದ್ರನ ತಂದೆ-ತಾಯಿಗಳಾದ ಕಶ್ಯಪನೂ ಅದಿತಿಯೂ ವರುಣನ ಶಾಪ ನಿಯಮದಿಂದ ವಸುದೇವ, ದೇವಕಿ ಎಂಬ ಹೆಸರಿನಿಂದ ಯದುವಂಶದಲ್ಲಿ ಹುಟ್ಟಿದರು. ೭೬. ಗೋಸಂಬಂಧದ ಸ್ಪರ್ಧೆಯಲ್ಲಿ ಆ ವರುಣನು ಕೊಟ್ಟ ಶಾಪದಿಂದ ಅವರಿಗಾದ ಆ ಮಕ್ಕಳೂ ಗೋಪಾಲನಾವ್ಯವಹಾರವನ್ನು ನಡೆಸುತ್ತ ಕೆಲವು ಕಾಲ ಗೋಕುಲದಲ್ಲಿರುವರು.

---

೧ ಸಮೀಕದೊಳ್ (ಮೂಲ) ೨ ಭೂರಿಭಾರವನಮೋಘಂ (ಮೂಲ)

ಆ ಗೋಪತನಯರೊಡನುಪ
ಭೋಗಿಸಲೆಂದಪ್ಸರೋಗಣಂ ದಿವದಿಂ ಬಂ
ದಾ ಗೋಕುಲದೊಳ್ ಗೋಪ
ಸ್ತ್ರೀಗಣವಾಗಿರ್ದು(ರ್ಪು)ದೀಗಳಂಬುಜಗರ್ಭಾ ೭೭

ಶ್ರೀವೇದದುಪನಿಷದ್ವಾ
ಕ್ಯಾವಳಿ ಗೋವೃಂದಮಾಯ್ತು ಗೋಕುಲದೊಳದಂ
ಕಾವ ಬಿನದಮೆ ಪವಿತ್ರಂ
ಕೇವಲಮೇ ಕಾರ್ಯಸೂತ್ರಮಿಂತಿದು ಚಿತ್ರಂ ೭೮

ಸುತನಪ್ಪೆಂ ದೇವಕಿಗಾಂ
ಕತಿಪಯದಿನಮೊಲ್ದು ರಮಿಯಿಪೆಂ ಗೋಕುಲದೊಳ್
ದಿತಿಸುತರಂ ಕಂಸಾದ್ಯರ
ನತಿಬಲರಂ ಕೊಲ್ವೆನಿಳಿಪುವೆಂ ಭೂಭರಮಂ ೭೯

ಪುಳಕಂ ತಟ್ಟೊಯ್ವಿನಂ ತತ್ಸಭೆಗಭಯಮನಿಂತಿತ್ತು ನೀಮುಂ ನಿಜಾಂಶಂ
ಗಳಿನೀ ಭೂಭಾಗದೊಳ್ ಬಂದವತರಿಸುವುದೆಂದಾಜ್ಞೆಯಂ ಮಾಡಿ ಗಂಡ
ಸ್ಥಳದೊಳ್ ಶ್ರೀಕುಂಡಲಂ ಮೆಲ್ಲನೆ ತೊನೆಯೆ ಚಲದ್ಭ್ರೂಲತಾಕೋಟಿಯಿಂ ಬೀ
ಳ್ಕೊಳವೇಟ್ಟೆಂದ್ರಾದಿ ಗೀರ್ವಾಣರನವತರಿಪುದ್ಯೋಗದಿಂ ದೇವನಿರ್ದಂ ೮೦

೭೭. ಆ ಗೋಪತನಯರೊಡನೆ ಸುಖಿಸಬೇಕೆಂದು ಅಪ್ಸರಸಮೂಹವು ಸ್ವರ್ಗದಿಂದ ಬಂದು ಆ ಗೋಕುಲದಲ್ಲಿ ಈಗ ಗೋಪಸ್ತ್ರೀಗಣವಾಗಿದೆ. ಬ್ರಹ್ಮಾ ೭೮. ಶ್ರೀವೇದದ ಉಪನಿಷದ್ವಾಕ್ಯಾವಳಿಯು ಗೋಕುಲದಲ್ಲಿ ಗೋಸಮೂಹವಾಗಿದೆ. ಅದನ್ನು ಕಾಯುವ ವಿನೋದವೆ ಪವಿತ್ರವಾದುದು. ಹೀಗೆ ಈ ಕಾರ್ಯಸೂತ್ರವು ಸಾಮಾನ್ಯವಾದುದೇ! ವಿಚಿತ್ರವಾದುದು. ೭೯. ನಾನು ದೇವಕಿಗೆ ಮಗನಾಗುವೆನು. ಕೆಲವು ದಿನ ಪ್ರೀತಿಪೂರ್ವಕವಾಗಿ ಗೋಕುಲದಲ್ಲಿ ರಮಿಸುವೆನು. ಅತಿಬಲರಾದ ಕಂಸಾದಿ ರಾಕ್ಷಸರನ್ನು ಕೊಲ್ಲುವೆನು. ಭೂಭಾರವನ್ನಿಳಿಸುವೆನು. ೮೦. ಆ ದೇವನು-ಆ ಸಭೆಗೆ ರೋಮಾಂಚನ ವಾಗುವಂತೆ ಹೀಗೆ ಅಭಯವನ್ನು ಕೊಟ್ಟು ನೀವೂ ನಿಮ್ಮ ಅಂಶಗಳಿಂದ ಭೂಭಾಗಕ್ಕೆ ಬಂದು, ಅವತರಿಸಬೇಕು". ಎಂದು ಆಜ್ಞೆಯನ್ನು ಮಾಡಿ, ಕೆನ್ನೆಯ ಮೇಲೆ ಶ್ರೀಕುಂಡಲವು ಮೆಲ್ಲನೆ ತೂಗಾಡುತ್ತಿರುವಲ್ಲಿ ಚಲಿಸುತ್ತಿರುವ ಬಳ್ಳಿಹುಬ್ಬಿನ ಕೊನೆಯಿಂದ ಇಂದ್ರಾದಿ ದೇವತೆಗಳನ್ನು ಹೊರಟುಹೋಗಿಬರುವಂತೆ ಹೇಳಿ ಕಳುಹಿಸಿ, ತಾನು ಅವತರಿಸುವ

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥ ವಿಜಯ ಮಹಾಪ್ರಬಂಧದೊಳ್ ಸುರಜ್ಯೇಷ್ಠ
ವಿಜ್ಞಾಪನಾಕರ್ಣನ ಸುಧಾರ್ಣವಾವತರಣೋ
ದ್ಯೋಗವರ್ಣನಂ ಪ್ರಥಮಾಶ್ವಾಸಂ

ಉದ್ಯೋಗದಲ್ಲಿ ಇದ್ದನು. ಇದು ಸಮಸ್ತ ಬ್ರಹ್ಮಾಂಡಮಾಲೆಯೆಂಬ ಗಡಿಗೆಗಳ ಸಾಲನ್ನು ಧರಿಸಿರುವ ರಾಟಳವನ್ನು ತಿರುಗಿಸುವ ಕಾರ್ಯದಲ್ಲಿ ಸ್ವತಂತ್ರನೂ ತನ್ನ ಸ್ವರೂಪವನ್ನು ನಿರೂಪಿಸುವುದರಲ್ಲಿ ಭಯಗೊಂಡ ಸಕಲ ವೇದತಂತ್ರಸಿದ್ಧಾಂತಗಳುಳ್ಳವನೂ ಆದ ಲಕ್ಷ್ಮೀಕಾಂತನ ಶ್ರೀಪಾದಭಕ್ತಿಯುತನಾದ ಸುಕವೀಂದ್ರ ರುದ್ರಭಟ್ಟನಿಂದ ವಿರಚಿತವಾದ ಶ್ರೀಜಗನ್ನಾಥವಿಜಯ ಮಹಾಪ್ರಬಂಧದಲ್ಲಿ ವಿಷ್ಣುವಿನಿಂದ ಬ್ರಹ್ಮವಿಜ್ಞಾಪನ ಶ್ರವಣ ಕ್ಷೀರಸಮುದ್ರದಿಂದ ಅವತರಿಸುವ ಉದ್ಯೋಗಗಳ ವರ್ಣನೆಯ ಮೊದಲನೆಯ ಆಶ್ವಾಸ.

# ದ್ವಿತೀಯಾಶ್ವಾಸಂ

ಶ್ರೀವರನ ಚರಣಮಂ ಕ
ಲ್ಪಾವನಿಜಪ್ರಸವಚಯದಿನರ್ಚಿಸಿ ಬೀಟ್ಕೊಂ
ಡಾ [1]ವಿಬುಧರ್ ಮುದದಿಂ ನಾ
ನಾವಿಧ ವಾಹನದೆ ಮೇರುಗಿರಿಗೆಟ್ಟಿಂದರ್ ೧

ವ|| ಆ ಮೇರುಗಿರಿಯ ದಕ್ಷಿಣದಿಶಾಭಾಗದೊಳನೇಕನಗರನಿಗಮಾಗ್ರಹಾರಗ್ರಾಮ ನಿಕರ ಖೇಟಖರ್ವಟಮಟಂಬಪತ್ತನದ್ರೋಣಾಮುಖಸಂವಾಹನಿಚಯನಿಚಿತಮುಂ, ಹರಿಹರಹಿರಣ್ಯಗರ್ಭಾದಿ ಸಕಲಗೀರ್ವಾಣಮಣಿಭವನವಾಪೀಕೂಪದೀರ್ಘಿಕಾತಟಾಕತಟನೀನಿಕರಶೋಭಾಕರಮುಂ ಅಗಣ್ಯಪುಣ್ಯಾರಣ್ಯಪುಣ್ಯಾಶ್ರಮಪುಣ್ಯಶೈಲಪುಣ್ಯಹ್ರದಸಮಾಜವಿಭ್ರಾಜಿತಮುಂ, ಸಿತಾಸಿತೇಕ್ಷುವಾಟೀ ನಾನಾಪುಷ್ಪವಾಟಬಹುವಿಧಸುಗಂಧಬಂಧುರ ಗಂಧಶಾಲಿವನಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು. ಅದಱ ಪೆಂಪನಭಿವರ್ಣಿಸುವೊಡೆ ವರ್ಣಸಂಕರಂ ಚಿತ್ರದೊಳ್,

೧. ಶ್ರೀಕಾಂತನ ಪಾದವನ್ನು ಕಲ್ಪವೃಕ್ಷದ ಹೂಗಳ ರಾಶಿಯಿಂದ ಅರ್ಚಿಸಿ ಅವನಿಂದ ಹೊರಡಲನುಮತಿಯನ್ನು ಪಡೆದ ಆ ದೇವತೆಗಳು ಸಂತೋಷದಿಂದ ನಾನಾ ವಿಧದ ವಾಹನಗಳನ್ನೇರಿ ಮೇರುಗಿರಿಗೆ ಬಂದರು. ವ|| ಆ ಮೇರುಗಿರಿಯ ದಕ್ಷಿಣ ದಿಗ್ಭಾಗದಲ್ಲಿ ಅನೇಕ ನಗರ ನಿಗಮ ಅಗ್ರಹಾರ ಗ್ರಾಮ ಸಮೂಹ ಖೇಟ ಖರ್ವಟ ಮಟಂಬ ಪತ್ತನ ದ್ರೋಣಾಮುಖಗಳ ಗುಂಪಿನಿಂದ ತುಂಬಿದುದೂ ಹರಿಹರ ಬ್ರಹ್ಮಾದಿ ಸಕಲದೇವತೆಗಳ ಮಣಿಮಂದಿರಗಳ, ಕೆರೆ ಕೊಳ ಬಾವಿ, ಸರೋವರ ನದಿಗಳ ಸೊಗಸಿನಿಂದ ಕೂಡಿದುದೂ ಲೆಕ್ಕಿಸಲಾಗದ ಪುಣ್ಯಾರಣ್ಯ ಪುಣ್ಯಾಶ್ರಮ ಪುಣ್ಯಶೈಲ ಪುಣ್ಯಹ್ರದಸಮೂಹದಿಂದ ಹೊಳೆಯುತ್ತಿರುವುದೂ ಬಿಳಿಯ ಕರಿಯ ರಸದಾಳಿಯ ಕಬ್ಬಿಣ ತೋಟಗಳ, ಬಗೆಬಗೆಯ ಹೂದೋಟಗಳ, ಹಲವು ಬಗೆಯ ಸುಗಂಧದ ಬತ್ತದ ಗದ್ದೆಗಳ ಸಮೂಹದಿಂದ ಮನೋಹರವಾದುದೂ ಆದ ಭರತಕ್ಷೇತ್ರದ ಮಧ್ಯದಲ್ಲಿ ಮಧ್ಯದೇಶವೆಂಬುದೊಂದುಂಟು. ಅದರ ಹಿರಿಮೆಯನ್ನು ಅಭಿವರ್ಣಿಸುವುದಾದರೆ-ವರ್ಣಸಂಕರವು= ೧. ಬಣ್ಣಗಳ ಸೇರುವೆ ಬೆರಕೆಯು ಚಿತ್ರಗಳಲ್ಲಿ ಮಾತ್ರವೇ ಇದ್ದಿತೇ ಹೊರತು, ವರ್ಣ ಸಂಕರ = ೨. ಜಾತಿ ಸಾಂಕರ್ಯವೆಂಬುದು ದೇಶದ ಜನರಲ್ಲಿರಲಿಲ್ಲ. ದೋಷಾಭಿಸಂಧಿ = ೧, ರಾತ್ರಿಯ ಸೇರುವೆಯು, ಹಗಲಿನ ವಿರಾಮದಲ್ಲಿ ಮಾತ್ರವೇ ಇದ್ದಿತೇ ಹೊರತು, ದೋಷಗಳ = ೨. ಪಾಪಗಳ, ಅಪರಾಧಗಳ ಸಂಪರ್ಕವೆಂಬುದು ಜನರಲ್ಲಿರಲಿಲ್ಲ. ಅವ್ಯವಸ್ಥೆ = ೧. ಕುರಿಗಳಂತೆ ದಡ್ಡತನದ ಸ್ಥಿತಿ ಜಡರಲ್ಲಿ ಮಾತ್ರ ಇದ್ದಿತೇ ಹೊರತು ೨ ನಿಯಮವಿಲ್ಲದಿರುವಿಕೆಯು ಜನರಲ್ಲಿರಲಿಲ್ಲ. ಪರಾಭವವು = ೧ ಪರಾಭವವೆಂಬ ಹೆಸರಿನ ಸಂವತ್ಸರವು ರೂಢಿಯಲ್ಲಿದ್ದಿತೇ ಹೊರತು, ಪರಾಭವ- ಅಪಜಯವೆಂಬುದು ಆ

---

೧. ವಿಬುಧಸಂಕುಲಂ (ಕ)

**ದೋಷಾಭಿಸಂಧಿ ದಿವಸವಿರಾಮದೊಳ್, ಅವ್ಯವಸ್ಥೆ ಜಡಾಶ್ರಯದೊಳ್, ಪರಾಭವಂ ಸಂವತ್ಸರದೊಳ್, ಆಕ್ರೋಶಂ ಪಥಪ್ರಮಾಣಂಗಳೊಳ್, ಉಪಪ್ಲವಂ ಚಂದ್ರಾರ್ಕಬಿಂಬಂಗಳೊಳ್ [೧]ಉತ್ತುಂಗಭಂಗಂ ಕಡಲೊಳ್, ವಿಶ್ವಾಸಘಾತಂ ೨ ವನದ್ರುಮನೀಡದೊಳ್, ಸ್ವಾಮಿವಿರೋಧಂ ತಾರಕಚಿತ್ರಕಥೆಯೊಳ್,**

ಕ್ಷೇತ್ರದಲ್ಲಿರಲಿಲ್ಲ, ಆಕ್ರೋಶ=೧. ಪ್ರಸಿದ್ಧವಾಗಿರುವ (ಆ) ಕ್ರೋಶವೆಂಬ ದಾರಿಯ ಅಳತೆಯನ್ನು ತಿಳಿಸುವ ಶಬ್ದವು, ಪಥಪ್ರಮಾಣ = ದಾರಿಯ ಅಳತೆಯಲ್ಲಿ ಮಾತ್ರವೇ ಪ್ರಯೋಗದಲ್ಲಿದ್ದಿತೇ ಹೊರತು-ಆಕ್ರೋಶವು=೨. ಅತಿ ರೋಷವು, ಆ ಕ್ಷೇತ್ರದ ಜನಗಳಲ್ಲಿರಲಿಲ್ಲ. ಉಪಪ್ಲವ = ೧. ಉತ್ಪಾತವು ಆ ಜನಪದದ ಜನರಿಗಿರಲಿಲ್ಲ, ಉಪಪ್ಲವವು = ೨. ರಾಹು (ಗ್ರಹಣ)ವು ಚಂದ್ರ ಸೂರ್ಯ ಬಿಂಬಗಳಿಗೆ ಮಾತ್ರವೇ ಇರುತ್ತಿದ್ದಿತು. ಉತ್ತುಂಗಭಂಗವು = ೧, ಅತ್ಯುನ್ನತವಾದ ಅಲೆಯು ಸಮುದ್ರದಲ್ಲಿ ಮಾತ್ರ ಇದ್ದಿತು. ಉತ್ತುಂಗ ಭಂಗ = ೨. ಪೂರ್ಣವಾದ ಸೋಲು, ಜನಗಳಲ್ಲಿರಲಿಲ್ಲ, ವಿಶ್ವಾಸ ಘಾತ = ೧. ನಂಬಿಕೆಗೆ ದ್ರೋಹವು ಜನಗಳಲ್ಲಿರಲಿಲ್ಲ ವಿಶ್ವಾಸ ಘಾತ = ೧. (ವಿ = ಪಕ್ಷಿ) ಪಕ್ಷಿಗಳ ಉಸಿರಾಟದ ಹೊಡೆತವು-ವನದ ಮರಗಳಲ್ಲಿರುವ ಪಕ್ಷಿಗಳ ಗೂಡಲ್ಲಿದ್ದಿತು. ಸ್ವಾಮಿದ್ರೋಹವಿಚಾರವು ನಕ್ಷತ್ರಗಳ ಚಿತ್ರಕಥೆಯಲ್ಲಿ ಮಾತ್ರವೇ ಬರುತ್ತಿದ್ದಿತೇ ಹೊರತು, ಅಧಿಪತಿ, ಗುರು ಮೊದಲಾದ ಪೂಜ್ಯರಿಗೆ ದ್ರೋಹವು ಜನಗಳಲ್ಲಿರಲಿಲ್ಲ. ಪರಾರ್ಥ ಸ್ಪೃಹೆ = ೧. ಉತ್ತಮವಾದ ಅರ್ಥವನ್ನು ತಿಳಿದುಕೊಳ್ಳುವುದರಲ್ಲಿ ಆಸೆಯು ಜನಗಳಿಗೆ ಗುಣವಿಶೇಷಗಳಲ್ಲಿ ಇದ್ದಿತೇ ಹೊರತು, ಪರಾರ್ಥಸ್ಪೃಹೆ = ೨ ಇತರರ ಧನದಲ್ಲಿ ಆಸೆಯು ಜನಗಳಲ್ಲಿರಲಿಲ್ಲ. ಅಸತ್ಕಾರ = ೧. ಅನಾದರವು ಮರುಭೂಮಿಗಳಲ್ಲೇ ಹೊರತು, ಅಸತ್ಕಾರ = ೨. ಅನಾದರವು ಬಂಧುಮಿತ್ರರೇ ಮೊದಲಾದ ಜನರಲ್ಲಿರಲಿಲ್ಲ, ಪವಮಾನವಿಸ್ತಾರ = ೧. ವಾಯುವಿಶಾಲತೆಯು ಆಕಾಶದಲ್ಲಿದ್ದಿತೇ ಹೊರತು; ೨. ವಾತರೋಗಾಧಿಕ್ಯವು ಜನರಲ್ಲಿರಲಿಲ್ಲ. ಕೃತಘ್ನಭಾವವು = ೧. ಕೃತಯುಗದ ಕೋಟೆಯು, ತ್ರೇತಾಯುಗ ಪ್ರವೇಶಕಾಲದಲ್ಲೇ ಹೊರತು, ಕೃತಘ್ನಭಾವ = ೨. ಮಾಡಿದ ಉಪಕಾರವನ್ನು ಮರೆಯುವ ಸ್ವಭಾವವು ಜನರಲ್ಲಿರಲಿಲ್ಲ, ವಕ್ರವಾಕ್ಯ = ೧. ವಿಚಿತ್ರವಾದ ಧ್ವನಿಯು ಕೋಗಿಲೆಗಳಲ್ಲಿದ್ದಿತು. ೨. ಸರಳವಲ್ಲದ ವಿಕಾರವಾದ ಮಾತು ಜನರಲ್ಲಿರಲಿಲ್ಲ; ಉತ್ಕಂಠತೆ = ೧. ಕತ್ತನ್ನೆತ್ತಿಕೊಂಡಿರುವುದು ಮತ್ತು ಗಟ್ಟಿಯಾಗಿ ಕೂಗುವುದು ನವಿಲುಗಳಲ್ಲಿದ್ದಿತು ೨. ಉತ್ಕಂಠತೆ = ೨. ಉದ್ದವಾದ ಕತ್ತು ಜನರಲ್ಲಿರಲಿಲ್ಲ. ಆಱಡಿ = ೧. ಆರುಕಾಲು ತುಂಬಿಗಳಿಗಿದ್ದಿತು. ಆಱಡಿ = ೨. ವೈರವು ಜನರಲ್ಲಿರಲಿಲ್ಲ. ಅಭಿಮಾನಹಾನಿ = ೧. ಗರ್ವದ ನಷ್ಟವು ಪರಸ್ಪರ ಅಗಲಿದ್ದ ಪ್ರಿಯರಲ್ಲಿ ಆಗುತ್ತಿದ್ದಿತು. ಅಭಿಮಾನಹಾನಿ=೨. ಆತ್ಮಗೌರವವನ್ನು ಕಳೆದುಕೊಳ್ಳುವುದು ಜನರಲ್ಲಿರಲಿಲ್ಲ. ಹಾಹಾಕಾರ = ೧. ಹಾ ಹಾ ಎಂಬ ಶಬ್ದವು 'ಸ್ವಾಹಾ, ಸ್ವಾಹಾ' ಎಂಬ ಹೋಮಾಕ್ಷರದ ಕಡೆಯ ಸ್ವಾಹಾ ಸ್ವಾಹಾ ಎಂಬುದರಲ್ಲಿ ಮಾತ್ರ ಇದ್ದಿತು. ಹಾಹಾಕಾರ =೨. ಹೊಟ್ಟೆಬಟ್ಟೆಗಳಿಗೆ ಗತಿಯಿಲ್ಲದೆ ಸಂಕಟದಿಂದ ಬೇಡುವ ಹಾಹಾಕಾರವು ಜನರಲ್ಲಿರಲಿಲ್ಲ. ವಂಶಚ್ಛೇದವು = ೧ ಬಿದಿರನ್ನು

---

೧. ಭಂಗತರಂಗಂ (ಕ ಖ)೨ ವನದ್ರುಮನಿಬಿಡದೊಳ್ (ಕ ಖ)

ಪರಾರ್ಥಸ್ಪೃಹೆ ಗುಣವಿಶೇಷದೊಳ್, ಅಸತ್ಕಾರಂ ನೀರಸಕ್ಷೇತ್ರದೊಳ್, ಪವಮಾಸವಿಸ್ತಾರಂ ವ್ಯೋಮದೊಳ್, ಕೃತಘ್ನಭಾವಂ ತ್ರೇತಾಪ್ರವೇಶದೊಳ್, ವಕ್ರವಾಕ್ಯಂ ಕೋಕಿಳಂಗಳೊಳ್, ಉತ್ಕಂಠತೆ ಮಯೂರಂಗಳೊಳ್, ಆಱಿಡಿ ತುಂಬಿಯೊಳ್, ಅಭಿಮಾನಹಾನಿ ವಿರಹಿಂಗಳೊಳ್, ಹಾಹಾಕಾರಂ ಹೋಮಮನ್ತ್ರಾಕ್ಷರಾಂತ್ಯದೊಳ್, ವಂಶಚ್ಛೇದಂ ಮೇದರೊಳ್, ನಿಷ್ಕಾರುಣ್ಯಂ ಭೂಷಣಂಗಳೊಳ್, ನಿರ್ಗುಣತ್ವಂ ಬಿಡುವೂಗಳೊಳ್, ಅಗ್ರಹಾರಪೀಡೆ ಯುವತೀಕುಚಂಗಳೊಳ್, ನಿಗಳನಿರೋಧಂ ಮದಗಜಂಗಳೊಳ್ ಉನ್ಮಾರ್ಗತೆ ಜಾತ್ಯಶ್ವಂಗಳೊಳ್, ವಕ್ರಚಾರಂ ಸರ್ಪಂಗಳೊಳ್, ಪಙ್ಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ, ಅದಲ್ಲದೆಯುಂ

ದಳಿತಾಬ್ಜಪ್ರಸರಂ ಸರಂ ಕುಸುಮಮಾಳಾರಾಮಮಾರಾಮಮು
ಜ್ಜ್ವಳರತ್ನಾರ್ಚಿರಲಂಕೃತಂ ಕೃತಕಶೈಲಂ ರಾಜಕೀರಚ್ಛದಾ
ನಿಳಲೋಲತ್ಕಣಿಶಾಲಿ ಶಾಲಿ [1]ಜನ ಚೇತೋನಂದನಂ ನಂದನಂ
ಲಲಿತಶ್ರೀಪರಿರಂಜನಂ ಜನಮೆನಲ್ ಚೆಲ್ವಾದುದುರ್ವೀತಳಂ ೨

ಕತ್ತರಿಸುವುದು ಮೇದರಲ್ಲಿ ಇದ್ದಿತು. ೨. ವಂಶನಾಶವು ಜನರಲ್ಲಿರಲಿಲ್ಲ. ನಿಷ್ಕಾರುಣ್ಯವು = ಸುವರ್ಣನಾಣ್ಯದ ಕೆಂಪು, ಆಭರಣಗಳಲ್ಲಿತ್ತು. ೨ ನಿಷ್ಕಾರುಣ್ಯ = ಕರುಣಾಹೀನತೆ ಜನರಲ್ಲಿರಲಿಲ್ಲ, ನಿರ್ಗುಣತ್ವ = ೧. ದಾರವಿಲ್ಲದಿರುವುದು ಬಿಡಿ ಹೂಗಳಲ್ಲಿತ್ತು. ೨. ಗುಣಹೀನತೆ ಜನರಲ್ಲಿರಲಿಲ್ಲ. ೧. ಅಗ್ರಹಾರಪೀಡೆ = ೧. ಮೇಲುಗಡೆಯಲ್ಲಿ ಮುತ್ತುರತುನಗಳ ಹಾರಗಳಿಂದ ಪೀಡೆಯು, ಯುವತಿಯರ ಸ್ತನಗಳಿಗಾಗುತ್ತಿದ್ದಿತೇ ಹೊರತು ಅಗ್ರಹಾರ=೨. ಶ್ರೋತ್ರಿಯರಿಗೆ ಉಂಬಳಿಯಾಗಿ ರಾಜರು ಕೊಟ್ಟ ಗ್ರಾಮಗಳಿಗೆ ಯಾವ ಪೀಡೆಯೂ ಇರಲಿಲ್ಲ. ನಿಗಳ ವಿರೋಧವು = ೧. ಸರಪಣಿಗಳ ಬಂಧನವು ಮದ್ದಾನೆಗಳಿಗೆ ಮಾತ್ರವಿದ್ದಿತು. ನಿಗಳನಿರೋಧವು =೨. ಸರಪಣಿಗಳ ಬೇಡಿಗಳಿಂದ ಬಂಧಿಸುವುದು, ಜನರಲ್ಲಿರಲಿಲ್ಲ. ಉನ್ಮಾರ್ಗತೆ =೧. ದಾರಿಯಲ್ಲಿ ನೆಗೆದು ಹಾರಿ ಓಡುವುದು ಜಾತ್ಯಶ್ವಗಳಲ್ಲಿ, ಉತ್ತಮಜಾತಿಯ ಕುದುರೆಗಳಲ್ಲಿದ್ದಿತು. ೨. ದಾರಿತಪ್ಪಿ ನಡೆಯುವುದು ಜನರಲ್ಲಿ ಇರಲಿಲ್ಲ. ವಕ್ರಚಾರವು ೧. ಡೊಂಕುಡೊಂಕಾಗಿ ಸಂಚರಿಸುವಿಕೆಯು (ಹರಿಯುವುದು) ಸರ್ಪಗಳಲ್ಲಿದ್ದಿತು. (೨) ವಿಕಾರವಾದ ನಡತೆ ನಡಿಗೆಗಳು ಜನರಲ್ಲಿರಲಿಲ್ಲ. ಪಙ್ಕ್ತಿಭೇದವು =೧. ಬೇರೆಬೇರೆ ಸಾಲಾಗಿ ಬರೆಯುವುದು ಬರವಣಿಗೆಯಲ್ಲಿ ಶಾಸನಗಳಲ್ಲಿ ಇದ್ದಿತು. ೨. ಭೋಜನಕ್ಕೆ ಸಾಲಾಗಿ ಕುಳಿತಿರುವವರಲ್ಲಿ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಬಡಿಸುವುದು ಆ ಜನಪದ ಜನಗಳಲ್ಲಿ ಇರಲಿಲ್ಲ. ಅದೂ ಅಲ್ಲದೆ ೨. ತನ್ನ ಸರೋವರವು ಅರಳಿದ ತಾವರೆಗಳಿಂದ ನಿಬಿಡವಾದುದೂ, ಉದ್ಯಾನವನವು ಪುಷ್ಪಮಾಲೆಗಳಿಂದ ಮನೋಹರವಾದುದೂ ಕೃತಕಶೈಲವು ಹೊಳೆಯುವ ರತ್ನಕಾಂತಿಗಳಿಂದ ಅಲಂಕೃತವಾದುದೂ ಬತ್ತದ ಬೆಳೆಯು ಅರಗಿಳಿಗಳ ರಕ್ಕೆಗಳ ಗಾಳಿಯಿಂದ ಚಂಚಲವಾಗಿ ತೂಗಾಡುವ ತೆನೆಗಳುಳ್ಳದ್ದೂ, ನಂದನವು ಜನಮನೋರಂಜಕವಾದುದೂ ಜನವು ಲಲಿತವಾದ ಶ್ರೀಯಿಂದ ಪರಿರಂಜಿತವಾದುದೂ ಆಗಿದ್ದುದರಿಂದ ಭೂಮಂಡಲವು

೧ ವನ (ಕ) ವರ (ಗ)

ಬಲಿರಾಜ್ಯಂ ಸತತಂ ಪ್ರಜಾಪ್ರತತಿಗೆಲ್ಲಂ ಯೌವನಶ್ರೀಭರಂ
ಸಲೆ ಕಾಂತಾತತಿಗೆಲ್ಲಮೂರ್ಜಿತವಸಂತಂ ಸಂತತಂ ನಂದನಾ
ವಲಿಗೆಲ್ಲಂ ರತಕೇಳಿರಾಗವನಿಶಂ ಸ್ತ್ರೀಪುಂವ್ರಜಕ್ಕೆಲ್ಲಮು
ಜ್ಜ್ವಲಚಂದ್ರಾತಪ[೧]ಮೊಪ್ಪುಗುಂ ರಜನಿಜಾತಕ್ಕೆಲ್ಲಮಾ ದೇಶದೊಳ್ ೩

ದಾರಿಯ ನಂದನಂಬಿಡಿದು ಪೂತ ಕೊಳಂ ಕೊಳದೊಳ್ ಬಟಲ್ಕೆಯಂ
ಬಾರಿಸಲೆಂದು ಬಂದ ಪಥಿಕರ್ ಪಥಿಕಾನಯನಪ್ರಭಾಮೃತಾ
ಸಾರದೆ ತೀವಿ ಬರ್ಪ ಪರಿಕಾಲ್ ಪರಿಕಾಲ್ಗಳ ನೀರನುಣ್ಬ ಕೇ
ದಾರವನಂ ಮನಂಗೊಳಿಸುತಿರ್ಪುದು ಭೂವನಿತಾವಿಭೂತಿವೋಲ್ ೪

ಸಲೆ ಕಾಲಂ ಪಿಡಿದೆಟ್ಟಿರಲ್ ಭುವನಮೆನ್ನಿರ್ದಲ್ಲಿಗಾಂ ಮುನ್ನವಾ
ದೊಲವಿಂದಂ ತಲೆಗೊಯ್ಸಿಕೊಂಡೆನೆನುತುಂ ಲಜ್ಜಾಮಹಾಭಾರದಿಂ
ತಲೆವಾಗಿತ್ತೆನೆ ಪಕ್ವಶಾಳಿ ಕಣಿಶಾಳೀನಮ್ರಮೊಪ್ಪಿರ್ದದೇಂ
ಗೆಲೆವಂದತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆವೋಲ್ ೫

ಕಳಮಕ್ಷೇತ್ರದುಪಾಂತನಂದನದೊಳಿರ್ದಾನಂದದಿಂ ಪಕ್ಕಿಸೋ
ವ ಳತಾಂಗೀಜನದೊಂದು ಮೆಲ್ಲುಲಿಪುಮಂ ಕೇಳ್ದಂತದಂ ತದ್ವನಾಂ
ತಳತಾನೀಕದಿನುಣ್ಮುತಿರ್ಪ ಕಳಕಂಠಧ್ವಾನಸಂತಾನಮೆಂ
ದಿಟಿಕೆಯ್ದೆಂತುಮಗಲ್ದು ಪೋಗವು ರುವತ್ಕೀರಾಳಿ ಕೇದಾರದಿಂ ೬

ಚೆಲುವಾಗಿದ್ದಿತು. ೩. ಆ ದೇಶದಲ್ಲಿ ಪ್ರಜಾವರ್ಗಕ್ಕೆಲ್ಲಾ ಸಂತತವಾಗಿ ಬಲಿಷ್ಠವಾದ ರಾಜ್ಯಾಡಳಿತ, ಸ್ತ್ರೀಸಮೂಹಕ್ಕೆಲ್ಲಾ ಯೌವನಶ್ರೀಯ ಭಾರ, ನಂದನವನಸಮೂಹಕ್ಕೆಲ್ಲಾ ಸತತವಾಗಿ ವಸಂತದೇಳಿಗೆ. ಸ್ತ್ರೀಪುರುಷವರ್ಗಕ್ಕೆಲ್ಲಾ ಯಾವಾಗಲೂ ರತಿಕೇಳಿಯಲ್ಲಿ ಅನುರಾಗ, ರಾತ್ರಿಯ ಸಮೂಹಕ್ಕೆಲ್ಲಾ ಪ್ರಕಾಶಮಾನವಾದ ಬೆಳುದಿಂಗಳು. ೪. ದಾರಿಯ ನಂದನವನ್ನನುಸರಿಸಿರುವ ಹೂವಿನ ಕೊಳವೂ ಕೊಳದಲ್ಲಿ ಬಳಲಿಕೆಯನ್ನು ಕಳೆಯಲೆಂದು ಬಂದಿರುವ ದಾರಿಗರೂ ದಾರಿಗರ ಆಗಮನವನ್ನು ಸೆಳೆಯುವ ಪ್ರಭೆಯಿಂದ ಕೂಡಿದ ಅಮೃತಪ್ರವಾಹಪೂರ್ಣವಾದ ಕಾಲುವೆಗಳೂ ಕಾಲುವೆಗಳ ನೀರನ್ನು ಕುಡಿಯುವ ಗದ್ದೆಗಳೂ, ಭೂದೇವಿಯ ಐಶ್ವರ್ಯದಂತೆ ಮನೋಹರವಾಗಿರುವುವು. ೫. ನೀರು ಕಾಲುವೆಯಲ್ಲಿ ತಾನಿದ್ದೆಡೆಗೆ ಬಂದುದೇ ಲೋಕವು ತಾನಿದ್ದೆಡೆಗೆ ಬಂದು ಕಾಲು ಹಿಡಿದಂತಾಯಿತು. ಅದರಿಂದುಂಟಾದ ಪ್ರೀತಿಯಿಂದ ಹಿಂದೆ ನಾನು ತಲೆ (ತೆನೆ)ಯನ್ನು ಕೊಯ್ಯಿಸಿಕೊಂಡೆನು' ಎಂದು, ಬಹಳವಾದ ನಾಚಿಕೆಯ ಭಾರದಿಂದ ತಲೆಯನ್ನು ಬಾಗಿಸಿದೆಯೋ ಎಂಬಂತೆ ಬಲಿತ ತುಂಬುದೆನೆಯು ಬಾಗಿರುವ ಕೊಯ್ಲಿಗೆ ಸಿದ್ಧವಾಗಿರುವ ಬತ್ತದ ಪೈರು ಹೊನ್ನಿನ ಬಣ್ಣದಿಂದ ಭೂದೇವಿಯು ಉಟ್ಟುಕೊಂಡಿರುವ ಪೀತಾಂಬರದಂತೆ ಒಪ್ಪುತ್ತಿದ್ದಿತು. ೬. ಬತ್ತದ ಗದ್ದೆಗಳ ಸಮೀಪದ ನಂದನವನದಲ್ಲಿ ಆನಂದದಿಂದ ಇದ್ದುಕೊಂಡು, ಹಕ್ಕಿಗಳನ್ನು ಅಟ್ಟುವ ಲತಾಂಗಿಯರ ಮೆತ್ತನೆಯ ಧ್ವನಿಯು ಕೇಳಿದರೂ

---

೧. ಮೊರ್ಮೆಯುಂ (ಕಖ)

ಭೋಂಕನೆ ಬಂದುವಂದು [1]ತೊನೆದಿಕ್ಕೆಯನಿರ್ಕಲದೊಳ್ ಕಲಂಕುವ
ನ್ನಂ [2]ಕುಡುಕಿಂಗೆ ಪಾಯ್ದುಲಿವ ತಮ್ಮುಲಿಪಿಂ ಗಿಳಿಸೋವ ಪಾಮರೀ
ಸಂಕುಳದೊಂದು ಮೆಲ್ಲುಲಿಪುಮಂ ನಸುಗೇಳದೆ ನಿಂದ ಕೀರವ್ರಂ
ದಂ ಕಳಕೂಜಿತಾನುಮಿತಮಾದುದು ಶಾಡ್ವಲ ಗಂಧಶಾಲಿಯೊಳ್ ೭

ವಿಕಸಿತಮಾದ ಕಾಂಚನಸರೋರುಹಷಂಡದ ಪರ್ಬುಮಂ ತದಂ
ತಿಕದ ಸುವರ್ಣವರ್ಣಕಣಿಶಾಳಿಯ ಶಾಳಿಯದೊಂದು ಪರ್ಬುಮಂ
ಶುಕತತಿ ನೋಡಿ ನೋಡಿ ನೆಱೆ ನಿಟ್ಟಿಸಲಾಱದೆ ಮಂಜುಳಾರವಂ
ಪ್ರಕಟಿಸೆ ಪರ್ಬುಗೊಂಡು ಸುಟಿದಾಡುವುದಲ್ಲಿಯ ಕೆಯ್ವೊಲಂಗಳೊಳ್ ೮

ವನಲಕ್ಷ್ಮಿ ಶ್ವಸಿತಂಬೊಲಾಡುವೆಲರಿಂದಂ ಕಂಪಿಸುತ್ತಿರ್ಪ ಕ
ಬ್ಬಿನ ಕೋಲ್ಗಳ್ ಬಿಡದೊಂದನೊಂದೊರಸೆ ಪರ್ವಾಘಾತದಿಂದುರ್ಬಿ ಭೋ
ರೆನೆ ಪಾಯ್ತಿರ್ಪ ರಸಪ್ರವಾಹಚಯಮಾವಾಳಂಗಳಂ ತೀವುತಿ
ರ್ಪಿನಮಿರ್ದತ್ತಮೃತಾಕರಾವನಿಯವೊಲ್ ಪುಂಡ್ರೇಕ್ಷುವಾಟೀಕುಲಂ ೯

ಅಲರ್ದಲರ್ವಂಡನುಂಡು ಕಳನಾದದಿನಾಣತಿಗೆಯ್ವ ತುಂಬಿ ಕೋ
ಮಲಕಳಿತಾರಸಾಸವಮನೀಂಟಿ ಮದೋತ್ಸವದಿಂ ಕುಕಿಲ್ವ ಕೋ
ಗಿಲೆ ಮಿಡಿಯಂ ಕರ್ದುಂಕಿ ನಲಿದಾಡುವ ರಾಜಶುಕಂ ಸರೋಜಕಂ
ದಲಮನೊಱಲ್ದು ಕರ್ಚಿ ಸುಟಿವಂಚೆಗ[3]ಳಿಲ್ಲದುದಿಲ್ಲ ನಂದನಂ ೧೦

ಅದನ್ನು ಆ ವನದ ಬಳ್ಳಿಗಳ ಪೊದೆಯಿಂದ ಹೊರಡುವ ಕೋಗಿಲೆಗಳ ಧ್ವನಿಯೆಂದು ಭಾವಿಸಿ ಹೆದರದೆ, ಕೂಗುತ್ತಲೇ ಇರುವ ಗಿಳಿಗಳು ಗದ್ದೆಯನ್ನು ಬಿಟ್ಟು ಹೋಗದೆ ಇರುತ್ತಿದ್ದವು. ೭. ಹಸಿರಾಗಿರುವ ಸುಗಂಧದ ಬತ್ತದ ಬೆಳೆಗೆ ಬೇಗಬೇಗನೆ ಬಂದು ತೆನೆಯು ಎರಡು ಪಕ್ಕಕ್ಕೂ ಬಾಗಿ ಕಲಕುವಂತೆ ಗುಟುಕಿಗಾಗಿ ಮುತ್ತಿ ತಮ್ಮ ಗಟ್ಟಿಯಾದ ಕೂಗಿನಿಂದ ತಮ್ಮನ್ನು ಅಟ್ಟುವ ಕಾವಲುಗಾತಿಯರ ಮೆತ್ತನೆಯ ಧ್ವನಿಯನ್ನು ಸ್ವಲ್ಪವೂ ಕೇಳದೆ ಗಿಳಿಗಳು ಪೈರಿನಲ್ಲೇ ಕುಳಿತಿವೆಯೆಂಬುದನ್ನು ಅವುಗಳ ಅವ್ಯಕ್ತವಾದ ಧ್ವನಿಯಿಂದ ಊಹಿಸಬೇಕಾಗಿದ್ದಿತು. ೮. ಅರಗಿಳಿಗಳು ಅರಳಿದ ಹೊಂದಾವರೆಗಳ ವಿಸ್ತಾರವನ್ನೂ ಅವುಗಳ ಸಮೀಪದಲ್ಲೇ ಇರುವ ಹೊಂಬಣ್ಣದ ತೆನೆಯ ಬತ್ತದ ಬೆಳೆಯ ವಿಸ್ತಾರವನ್ನೂ ಮತ್ತೆ ಮತ್ತೆ ನೋಡಿಯೂ ಬತ್ತದ ಬೆಳೆ, ಯಾವುದೆಂಬುದನ್ನು ತಿಳಿಯಲಾರದೆ ಗದ್ದೆಗಳ ಮೇಲೆ ಹೆಚ್ಚಾಗಿ ಹಾರಾಡುತ್ತಿರುವುದು ಅವುಗಳ ಇಂಪಾದ ಧ್ವನಿಯಿಂದ ಪ್ರಕಟವಾಗುತ್ತಿದ್ದಿತು. ೯. ಅಲ್ಲಿಯ ರಸಬಾಳೆ ಪಟ್ಟಾ ಪಟ್ಟಿ ಕಬ್ಬಿನ ಗದ್ದೆಗಳ ಗುಂಪು ವನಲಕ್ಷ್ಮಿಯ ನಿಶ್ವಾಸದಂತೆ ಬೀಸುವ ಗಾಳಿಯಿಂದ ನಡುಗುತ್ತಿರುವ ಕಬ್ಬಿನ ಜಲ್ಲೆಗಳು ಬಿಡದೆ ಒಂದನ್ನೊಂದು ಉಜ್ಜುವುದರಿಂದ ಗೆಣ್ಣುಗಳೊಡೆದು, ತಟ್ಟನೆ ಉಕ್ಕಿ ಹರಿಯುವ ಕಬ್ಬಿನ ಹಾಲಿನ ಪ್ರವಾಹಗಳು ಪಾತಿಗಳಲ್ಲಿ ತುಂಬುತ್ತಿದ್ದುದರಿಂದ ಆ ಕಬ್ಬಿನ ತೋಟಗಳ ಗುಂಪು ಥಳಥಳಿಸುವ ಅಮೃತ ಸರೋವರ ಪ್ರದೇಶ ಭೂಮಿಯಂತೆ ಇದ್ದಿತು. ೧೦. ಅರಳಿದ ಹೂಗಳ ಮಕರಂದವನ್ನು ಕುಡಿದು, ಇಂಪಾಗಿ ಝೇಂಕರಿಸುವ ತುಂಬಿಯೂ ಕೋಮಲವಾದ ಚಿಗುರಿನ ರಸವೆಂಬ

---

೧. ತೊನೆದೆಕ್ಕೆಯಿ (ಮೊ ಅ) ೨. ಕುಟಿಕಿಂಗೆ (ಕ ಖ) ೩. ಇಲ್ಲದವಿಲ್ಲ (ಕ ಖ)

ಪಾರದೆ ಕಾಮುಕವ್ರಜಮನಾರ್ದಿಸುವಂಗಜವೀರನಸ್ತ್ರ ಭೀಂ
ಕಾರಮುಮಟ್ಟಿಜೆಂ ನೆರೆವ ನಲ್ಲರ ಸಪ್ರಣಯಪ್ರಕೋಪಹೂಂ
ಕಾರಮುಮುಲ್ಲಸತ್ಕುಸುಮದಿಂ ಮೊರೆದೇೞ್ವಳಿಜಾಲದೊಂದು ಝಂ
ಕಾರಮುಮೊರ್ಮೆಯುಂ ತವದು ಭಾವಿಪೊಡಲ್ಲಿಯ ನಂದನಂಗಳೊಳ್ ೧೧

ವ|| ಅಂತತಿಶಯ ಶೋಭಾವಿಷಯಮಾದ ವಿಷಯಾಂತರಾಳದೊಳ್

ಬಿದಿ ಮನದಟ್ಟೆಯಿಂ ಭುಜಗಲೋಕದ ಮಾನವಲೋಕದಿಂದ್ರಲೋ
ಕದ ಬಹುಸಾರವಸ್ತುಗಳನೊಂದೆಡೆಗೆಯ್ದೆ ತೆರಳ್ಚಿ ತಂದು ಮಾ
ಡಿದನತಿರಮ್ಯಮಂ ಪುರಮನೆಂಬಿನೆಗಂ ಯಮುನಾ[1]ತಟಪ್ರದೇ
ಶದೊಳೆಸೆದಿರ್ಪುದಲ್ತೆ ಮಧುರಾಪುರಮರ್ಧಶಶಾಂಕಸನ್ನಿಭಂ ೧೨

ತಿಳಿನೀರಿಂ ನೆಯ್ದಿಲಿಂ ತಾವರೆಯಿನೆಸೆವ ಲೀಲಾಸರಸ್ಸಂಕುಳಂ ಕೆಂ
ದಳಿರಿಂ ಪೂವಿಂ ಫಲವ್ರಾತದಿನಿಡಿದ ರಸಾಳದ್ರುಮಶ್ರೇಣಿ ಪೊನ್ನಿಂ
ಪಳುಕಿಂ ಮಾಣಿಕದಿಂ ತೀವಿದ ಕೃತಕನಗೇಂದ್ರಾಳಿ ತಳ್ತಂಚೆವಿಂಡಿಂ
ಗಿಳಿವಿಂಡಿಂ ಸೋಗೆವಿಂಡಿಂ ಸೊಗಯಿಸಲೆಸೆಗುಂ ತತ್ಪುರೋದ್ಯಾನಮೆಂದುಂ ೧೩

ಮದ್ಯವನ್ನು ಕುಡಿದು, ಮದೋತ್ಸವದಿಂದ ಕೂಗುವ ಕೋಗಿಲೆಯೂ ಮಿಡಿಯನ್ನು ಕಚ್ಚಿ ನಲಿದಾಡುವ ಅರಗಿಳಿಯೂ ತಾವರೆಯ ಚಿಗುರನ್ನು ಪ್ರೀತಿಯಿಂದ ಕಚ್ಚಿ ಸಂಚರಿಸುವ ಹಂಸಗಳೂ ಇಲ್ಲದ ನಂದನವನವು ಅಲ್ಲಿಲ್ಲ. ೧೧. ಅಲ್ಲಿಯ ನಂದನವನಗಳಲ್ಲಿ ಸರಿಯಾಗಿ ನೋಡಿದರೆ ಕಾಲ ಪಾತ್ರಗಳ ನಿರೀಕ್ಷಣೆಯಿಲ್ಲದೆ ಕಾಮುಕರ ಸಮೂಹವನ್ನು ಅಬ್ಬರಿಸಿ ಹೊಡೆಯುವ ಮನ್ಮಥವೀರನ ಅಸ್ತ್ರದ ಭೀಂಕಾರವೂ ಅಕ್ಕರೆಯಿಂದ ಕೂಡುವ ಪ್ರಿಯರ ಪ್ರೀತಿಪೂರ್ವಕವಾದ ಕೃತಕ ಕೋಪದ ಹೂಂಕಾರವೂ ಅರಳಿ ಹೊಳೆಯುವ ಹೂಗಳಿಂದ ಮೊರೆದೇಳುವ ತುಂಬಿಗಳ ಗುಂಪಿನ ಝೇಂಕಾರವೂ ಒಂದು ಸಾರಿಯೂ ತಪ್ಪುತ್ತಿರಲಿಲ್ಲ. ವ|| ಹಾಗೆ ಅತಿಶಯವಾದ ಸೊಗಸಿಗೆ ನೆಲೆಯಾದ ದೇಶದೊಳಗೆ ೧೨. ಬ್ರಹ್ಮನು ಮನಸ್ಸಿನ ಆಸಕ್ತಿಯಿಂದ ನಾಗಲೋಕ ಮನುಜಲೋಕ ಇಂದ್ರಲೋಕಗಳ ಬಹುಸಾರವಸ್ತುಗಳನ್ನು ಒಂದೆಡೆಗೆ ಸರಿಯಾಗಿ ಸಾಗಿಸಿ ತಂದು, ಅತಿರಮ್ಯವಾದ ಈ ಪಟ್ಟಣವನ್ನು ಮಾಡಿದನೆನ್ನುವಂತೆ ಯಮುನಾನದಿಯ ತೀರದಲ್ಲಿ ಅರ್ಧಚಂದ್ರಾಕಾರದಿಂದ ಇರುವ ಮಧುರಾಪುರವು ಪ್ರಕಾಶಿಸುತ್ತಿರುವುದಲ್ಲವೆ! ೧೩. ಆ ಪಟ್ಟಣದ ಉದ್ಯಾನವನದ ತಿಳಿನೀರು ನೆಯ್ದಿಲೆ ತಾವರೆಗಳಿಂದ ಹೊಳೆಯುವ ಲೀಲಾ ಸರೋವರ ಸಮೂಹವು ಹಂಸಗಳ ಗುಂಪಿನಿಂದಲೂ, ಕೆಂಪಾದ ಚಿಗುರು ಹೂ ಹಣ್ಣು ಕಾಯಿಗಳಿಂದ ತುಂಬಿದ ಮಾವಿನ ಮರಗಳು ಗಿಳಿಗಳ ಸಮೂಹದಿಂದಲೂ, ಸುವರ್ಣರತ್ನ ಸ್ಫಟಿಕಗಳಿಂದ ತುಂಬಿದ ಕೃತಕ ಗಿರಿಗಳ ಸಾಲು ನವಿಲುಗಳ ಹಿಂಡಿನಿಂದಲೂ ಕೂಡಿ, ಸೊಗಸುತ್ತ ಇರಲು ಎಸೆವುದು.

---

೧. ತಟಸ್ಥದೇಶ (ಕಖ)

ಲತೆಯೆಳಲತೆ ಮಾವಿಮ್ಮಾ
ವು ತೆಂಗು ಚೆಂದೆಂಗು ಕೌಂಗು ಪೂಗೌಂಗೆಲೆವ
ಳ್ಳಿ ತೊವಲ್ತೆಲೆವಳ್ಳಿ ನಗಂ
ಕೃತಕನಗಂ ಪಲಸು ಬಕ್ಕೆವಲಸಾ ಬನದೊಳ್ ೧೪

ತಿಂತಿಣಿವಣ್ಣನಾಂತ ಕದಳಂ ಪದವಣ್ಬುದಿದೀಳೆ ಬೀಡೆವ
ಣ್ಣಿಂ ತುಱುಗಿರ್ದ ದಾಡಿಮಚಯಂ ಕಿಸುವಣ್ಮುಸುಕಿರ್ದ ನಾಗರಂ
ಗಂ ತನಿವಣ್ ಪೊದಟ್ಟಿಸೆವ ಮಾವೆಳಗಾಯ್ಗೊಱೆ ತಳ್ತ ತೆಂಗು ಬೇ
ರಿಂ ತುದಿಮುಟ್ಟೆ ಕಾಯ್ತ ಪಲಸೆಂಬಿವು ಕುಂದವು ನಂದನಂಗಳೊಳ್ ೧೫

ಫಲಮೆಂದುಂ ಕಟೆವಣ್ಗಳಾಗವಲರೆಂದುಂ ಬೀಯುವಬ್ಜಾಕರಂ
ತಿಳಿದೆಂದುಂ ಬಗೆಗೊಳ್ವುದುರ್ಕುಡುಗದೆಂದುಂ ತುಂಬಿಗಂ ಹಂಸೆಗಂ
ಗಿಳಿಗಂ ಕೋಗಿಲೆಗಂ ವಿಯೋಗಿಮಥನಕ್ಕೆಂದುಂ ವಸಂತಪ್ರಿಯಂ
ಮುಳಿಸಿಂದಾರ್ದಲರಂಬುವೊಯ್ದು ತೆಗೆದಿರ್ಪಂ ಬಿಲ್ಲನುದ್ಯಾನದೊಳ್ ೧೬

ನೆರೆದಿಭಶಿಕ್ಷಕರ್ ಕಲಿಸಲೇರ್ವೆಸನಂ ಕಲುತಿರ್ಪ ಗಂಧಸಿಂ
ಧುರಚಯುವೇಱೆದಾತನ ಮನಂ ಮನವಾಗೆ ಮನೋಜವಂಗಳಿಂ
ಪರಿವ ಹಯಾಳಿ ಶಸ್ತ್ರವಿದರೊಳ್ ಭರದಿಂ ನಿಜಶಸ್ತ್ರವಿದ್ಯೆಯುಂ
ಪರಿವಿಡಿಗೆಯ್ವ ರಾಜಸುತರೊಪ್ಪುಗುಮಾ ಪುರಗೋಪುರಂಗಳೊಳ್ ೧೭

೧೪. ಆ ವನದಲ್ಲಿ ಬಳ್ಳಿಯೆಲ್ಲವೂ ಎಳೆಯಬಳ್ಳಿ, ಮಾವೆಲ್ಲವೂ ಸಿಹಿಮಾವು, ತೆಂಗೆಲ್ಲವೂ ಕೆಂದೆಂಗು, ಅಡಕೆಯೆಲ್ಲವೂ ಹೂವಡಕೆ, ವಿಳ್ಳೆಯದೆಲೆಯ ಬಳ್ಳಿಯೆಲ್ಲವೂ ಚಿಗುರೆಲೆಯ ಬಳ್ಳಿ, ಗಿರಿಯೆಲ್ಲವೂ ಹೂವಡಕೆ, ವಿಳ್ಳೆಯದೆಲೆಯ ಬಳ್ಳಿಯೆಲ್ಲವೂ ಚಿಗುರೆಲೆಯ ಬಳ್ಳಿ, ಗಿರಿಯೆಲ್ಲವೂ ಕೃತಕಗಿರಿ, ಹಲಸೆಲ್ಲವೂ ಬಕ್ಕೆ ಹಲಸು. ೧೫. ಅಲ್ಲಿಯ ನಂದನವನಗಳಲ್ಲಿ ಒತ್ತಾದ ಹಲವು ಚಿಪ್ಪು ಹಣ್ಣು ಗೊನೆಗಳ ಬಾಳೆಯೂ, ಹದವಾದ ಹಣ್ಣುಗಳಿಂದ ತುಂಬಿದ ಈಳೆಗಳೂ, ಬಿರಿದ ಹಣ್ಣುಗಳಿಂದ ತುರುಗಿರುವ ದಾಳಿಂಬದ ಗುಂಪೂ, ಕೆಂಪು ಹಣ್ಣುಗಳು ಮುಸುಕಿರುವ ಕಿತ್ತಳೆಯೂ ಸಿಹಿಹಣ್ಣಿನಿಂದ ಹೆಸರನ್ನು ಪಡೆದ ಮಾವೂ, ಎಳಗಾಯ್ಗೊನೆಯ ಭಾರವುಳ್ಳ ತೆಂಗೂ, ಬೇರಿಂದ ತುದಿಯವರೆಗೂ ಕಾಯಿಬಿಟ್ಟಿರುವ ಹಲಸೂ ಎಂದೂ ಕುಂದುವುದಿಲ್ಲ. ೧೬. ಅಲ್ಲಿಯ ಉದ್ಯಾನವನದಲ್ಲಿ, ಹಣ್ಣುಗಳು ಎಂದೂ ಕಳಿತ ಹಣ್ಣುಗಳಾಗುವುದಿಲ್ಲ. ಹೂವು ಎಂದೂ ಇಲ್ಲವಾಗುವುದಿಲ್ಲ. ತಾವರೆಯ ಕೊಳವು ಯಾವಾಗಲೂ ತಿಳಿನೀರಿನಿಂದ ಮನವನ್ನು ಸೆಳೆಯುವುದು. ತುಂಬಿಗೂ ಹಂಸೆಗೂ ಗಿಳಿಗೂ ಕೋಗಿಲೆಗೂ ಎಂದೂ ಕೊಬ್ಬು ಕಡಿಮೆಯಾಗುವುದಿಲ್ಲ. ವಸಂತಪ್ರಿಯನಾದ ಮನ್ಮಥನು ಕೋಪದಿಂದ ಅಗಲಿದ ಪ್ರಿಯರನ್ನು ಬಾಧಿಸುವುದಕ್ಕಾಗಿ ಬಿಲ್ಲನ್ನು ತೆಗೆದು ಟಂಕಾರಮಾಡಿ, ಅಬ್ಬರಿಸುತ್ತ, ಬಾಣವನ್ನು ಹೂಡಿ ಸೆಳೆದಿರುವನು. ೧೭. ಆ ಪಟ್ಟಣದ ಹೆಬ್ಬಾಗಿಲುಗಳ (ಸಮೀಪದಲ್ಲಿ) ಗಜಶಿಕ್ಷಕರು ಸೇರಿ, ಕಲಿಸುವ ಯುದ್ಧಕಾರ್ಯವನ್ನು ಸರಿಯಾಗಿ ಕಲಿಯುತ್ತಿರುವ ಮದ್ದಾನೆಗಳ ಗುಂಪೂ, ಸವಾರನ ಮನಸ್ಸೇ ತಮ್ಮ ಮನಸ್ಸಾದಂತೆ

ಬಡಹಾರ್ವಂ ಜಾಮದಗ್ನ್ಯಂ ತುಡೆ ವಿಶಿಖಮನೀರೆಟ್ಟಿತೆಣ್ಗಾವುದಂ ಮೆ
ಯ್ವಿಡೆದೋಡಿತ್ತೂರ್ಬಗಸ್ತ್ಯಂ ತನುಮುನಿ [1]ಮುನಿದಾಪೋಶನಂಗೊಂಡೊಡೆತ್ತಂ
ಪುಡಿವಿಟ್ಟತ್ತೊಂದೆ ಧೀಂಕಾದುದು ಕಪಿಗಣುವಂಗೆಂದಗಟಿಪ್ ವಾರ್ಧಿಯಂ ಕೀ
ಟ್ಟಿಡಿಕುಂ ನಾನಾಮರಾಳೀಬಹುಳಕಳಕಳಧ್ವಾನಂಸಂತಾನದಿಂದಂ ೧೮

*ವ|| ಅಂತತಿಗಂಭೀರಮಾದ ಪರಿಖಾಚಕ್ರದಿಂದೊಳಗೆ

ಶ್ರೀಪತಿ ಲೀಲೆಯಿಂ ವಸುಮತೀಭರಮಂ ತವಿಸಲ್ಕೆ ಬಾಲ್ಯದಿಂ
ದೀ ಪುರದಲ್ಲಿ ಪುಟ್ಟದಪನಿಂ ಗಡ ನೋಟ್ಪೆನು ಮರ್ತ್ಯವೇಷಸ
ದ್ರೂಪನನೆಂದು ಭೋಗಿಪತಿ ತನ್ನ ಸಹಸ್ರಫಣಾಮಣಿದ್ಯುತಿ
ವ್ಯಾಪಿಸೆ ಸುತ್ತಿ ನಿಂದನನೆ ಕೋಂಟೆಯ ಪೊಂದೆನೆಗಳ್ ವಿರಾಜಿಕುಂ ೧೯

ಮನೋವೇಗದಿಂದೋಡುವ ಕುದುರೆಗಳ ಸಾಲೂ ಶಸ್ತ್ರಜ್ಞರಲ್ಲಿ ತಮ್ಮ ಶಸ್ತ್ರವಿದ್ಯೆಯನ್ನು ಬೇಗನೆ ಪ್ರದರ್ಶಿಸುವ ರಾಜಪುತ್ರರೂ ಒಪ್ಪುತ್ತಿರುವರು. ೧೮. ಆ ಪುರದ ಕಂದಕವು ಬಗೆಬಗೆಯ ಹಂಸಗಳ ಕಳಕಳಧ್ವನಿಯಿಂದ "ಸಮುದ್ರವು ಬಡಹಾರುವನಾದ ಪರಶುರಾಮನು ಬಾಣವನ್ನು ತೊಡಲಾಗಿ ಹಿಂಜರಿದು ನೀರುಸಹಿತ ನೂರೈವತ್ತಾರು ಗಾವುದ ದೂರ ಓಡಿತು. ಸಾಮಾನ್ಯಋಷಿಯಾದ ಅಗಸ್ತ್ಯನೊಬ್ಬನು ಕೋಪಗೊಂಡು ಆಪೋಶನವಾಗಿ ತೆಗೆದುಕೊಂಡುದರಿಂದ ಬತ್ತಿ ಎಲ್ಲ ಕಡೆಯೂ ಹುಡಿಯೆದ್ದಿತು. ಅಲ್ಲದೆ ಅಣುವನೆನಿಸಿಕೊಂಡ ಕಪಿಯ ಒಂದೇ ನೆಗೆತಕ್ಕೆ ಒಳಗಾಯಿತು" ಎಂದು ಅದನ್ನು ಅಣಕಿಸುತ್ತಿರುವುದು. ವ|| ಹಾಗೆ ಬಹಳ ಆಳ(ಗಂಭೀರ)ವಾದ ಕಂದಕದ ಸುತ್ತಿನ ಒಳಗೆ ೧೯. ಶ್ರೀಪತಿಯು ಬಾಲ್ಯದಿಂದಲೇ ವಿನೋದವಾಗಿ ಭೂಭಾರವನ್ನು ಪರಿಹರಿಸುವುದಕ್ಕಾಗಿ ಈ ಪಟ್ಟಣದಲ್ಲಿ ಹುಟ್ಟುತ್ತಾನಲ್ಲವೆ, "ಮನುಷ್ಯವೇಷದ ಆ ಸದ್ರೂಪನನ್ನು ನೋಡುವೆನು" ಎಂದು ಆದಿಶೇಷನು, ತನ್ನ ಸಾವಿರ ಹೆಡೆಮಣಿಗಳ ಕಾಂತಿಯೂ ಹರಡುವಂತೆ ಸುತ್ತಿ ನಿಂತಿರುವನೋ ಎಂಬಂತೆ ಸುವರ್ಣದ ಕೋಟೆಯ ತೆನೆಗಳು ಹೊಳೆಯುವುವು.

---

* ಈ ವಚನದಿಂದ ೩೫ನೆಯ ಪದ್ಯದ ಮುಂದಣ ವಚನದವರೆಗೂ ಇರುವ ಗ್ರಂಥಕ್ಕೆ ಪ್ರತಿಯಾಗಿ ಕೆಲವು ಪುಸ್ತಕಗಳಲ್ಲಿ ಈ ರಗಳೆಯಿದೆ :

ರಗಳೆ || ಎನೆ ಪೆಂಪಂ ತಳೆದಗಳಿಂದೊಳಗೆ । ನಿಜದೀಧಿತಿ ದೆಸೆತತಿಯಂ ಬೆಳಗೆ । ಮುಗಿಲಟ್ಟಣೆಗಳ್ಮುಗಿಲ ಮುರುಂಟೆ । ಪಟವಿಗೆಗಳ್ ದಿವಮಂ [1]ಮಿಳಿರ್ದು ಮೀಂಟೆ । ಚೆಂಬೊನ್ನ ಕೋಂಟೆ ಥಳಥಳಿಸಿ ಪೊಳೆದು । ಪರಿರಂಜಿಸೆ ನಭಮಂ ಮುಟ್ಟೆ ಬಳೆದು । ನಡೆನೋಟ್ಪರ ಕಣ್ಗಳ ಪಸವೋಡೆ । ಪೊಸಪೊಂಗಳಸಂಗಳನಾಂತು ಕೂಡೆ । ದೇವಾಯತನಂಗಳ್ ಚೆಲ್ವುಬೀಱೆ । ಸಂಗೀತಕಮವಱೊಳಗೊಪ್ಪಿ ತೋಱೆ । ರತಿಯಂ ಸೌಭಾಗ್ಯದ ಬಲದಿನಲೆವ । ಬಹುಕಳೆ ಯೊಳ್ಭಾರತಿಗೆಡರಿ ಮಲೆವ । ಮೇನಕೆಯ ವಿಳಾಸಮನೀಟ್ಟುಕೊಂಡ । ರಂಭೆಯ ರೂಪಂ ನೆಱೆ ಸೂಱೆಗೊಂಡ । ಪೆಸರೂರ್ವಸಿಯಂ ಕೀೞ್ಪಿಡಿಸಲಾರ್ಪ । ಫಣಿಕಾಂತೆಯರಂದದಿನೊಪ್ಪಿ ತೋರ್ಪ । ಕಿನ್ನರಿಯರ ಚೆನ್ನಂ ಪಟೆದು ನಗುವ ।

---

೧. ಮಿಳಿರ್ದೀಂಟೆ (ಮೂಲ)

ಮಿಗಿಲೆನಿಪಟ್ಟಣೆಯಿಂದಂ
ಮುಗಿಲಂ ಮುಟ್ಟುವ ಪತಾಕೆಯಿಂ ತೋರಣದೋ
ಳಿಗಳಿಂ ರವಿ ಹಿಮಕರವೀ
ಧಿಗಳಿಂದಂ ಪುರಮದೇಂ ಮನಂಗೊಳಿಸಿದುದೋ ೨೦

ಕರಿಯಂ ಶಿಕ್ಷಿಪ ವಾಜಿಸಂಕುಳಮನಂತೊಲ್ದಟ್ಟೆಯಿಂ ತಿರ್ದುವ
ಕ್ಕರಮಂ ಪೇಳುವ ಶಸ್ತ್ರಕೌಶಲಧನುರ್ವಿದ್ಯಂಗಳಂ ಬೋಧಿಪಿ
ರ್ತರದಿಂ ಮಲ್ಲರ ಹೋರಿಪಾ ಸಕಲವಾದ್ಯಶ್ರೇಣಿಯಂ ಬಾಜಿಪ
ಬ್ಬರಮೆತ್ತಂ ನೆರೆ ಕುಂದದಿರ್ಕುಮನಿಶಂ [೧]ರಥ್ಯಾಜನಾತಿಥ್ಯದಿಂ ೨೧

**ವ॥ ಅಂತೆಸೆವ ಮಹಾರಭಸದಿನತಿಮನೋಹರತೆಯನೊಳಕೊಂಡಿರ್ಪ ರಮ್ಯಹರ್ಮ್ಯನಿರ್ಮಿತ ಮಣಿಪ್ರಭಾವಪುಂಜರಂಜಿತದಿನಿರ್ತರಂಬಿಡಿದು ಮೆಱೆವ ನಾನಾಸದನ ಪಜ್ಕ್ತಿಗಳೊಳತಿ ಸೊಬಗುವೆತ್ತಿರ್ಪುದದೆಂತೆಂದೊಡೆ**

೨೦. ಹೆಚ್ಚು ಎನಿಸಿಕೊಂಡ ಅಟ್ಟಣೆಯಿಂದಲೂ, ಮುಗಿಲನ್ನು ಮುಟ್ಟುವ ಬಾವುಟಗಳಿಂದಲೂ, ಹೆಬ್ಬಾಗಿಲು (ತೋರಣ)ಗಳಿಂದಲೂ ಸೂರ್ಯವೀಥಿ, ಚಂದ್ರವೀಥಿಗಳಿಂದಲೂ ಆ ಪಟ್ಟಣವು ಅದೆಷ್ಟು ಮನೋಹರವಾಗಿರುವುದೋ ! ೨೧. ಅಲ್ಲಿ ಆನೆಯನ್ನು ಪಳಗಿಸುವ, ಕುದುರೆಗಳನ್ನು ಆಸಕ್ತಿಯಿಂದ ತಿದ್ದುವ, ಅಕ್ಷರವನ್ನು ಕಲಿಸುವ, ಶಸ್ತ್ರಕೌಶಲ ಧನುರ್ವಿದ್ಯೆಗಳನ್ನು ಬೋಧಿಸುವ, ಎರಡು ತಂಡದಿಂದ ಜಟ್ಟಿಗಳನ್ನು ಹೋರಾಡಿಸುವ, ಸಕಲವಾದ್ಯಗಳನ್ನೂ ಬಾಜಿಸುವ ಅಬ್ಬರವು ಬೀದಿಯ ಜನರಿಗೆ ಚೆನ್ನಾಗಿ ಹಬ್ಬವನ್ನುಂಟುಮಾಡುವುದರಲ್ಲಿ ಎಂದೂ ಕುಂದದು. ವ॥ ಹಾಗೆ ಪ್ರಕಟವಾದ ಮಹಾರಭಸದಿಂದ ಅತಿ ಮನೋಹರತೆಯನ್ನು ಪಡೆದಿರುವ ಧನಿಕರ ರಮ್ಯವಾದ ಉಪ್ಪರಿಗೆಯ ರತ್ನಗಳ ಕಾಂತಿಸಮೂಹದ ರಂಜನೆಯಿಂದ ಬೀದಿಗಳ ಎರಡು ಪಕ್ಕಗಳಲ್ಲೂ ಸಾಲಾಗಿ ಮೆರೆಯುವ ನಾನಾಬಗೆಯ ಮನೆಗಳ ಪಜ್ತಿಗಳಿಂದ ಆ ಪಟ್ಟಣವು ಅತಿಯಾದ ಸೊಬಗನ್ನು ಪಡೆದಿರುವುದು.

---

ಖಚರಿಯರಂ ಭಾವದೊಳೆಯ್ದೆ ಮಿಗುವ । ಜತ್ತಕರಂ ಸುತ್ತಿಂದೊಳಗು ಮಾಟ್ಪಿ । ವಾತ್ಸ್ಯಾಯನನಂ ಪೊಱವರಸುಮಾಳ್ಪ । ಕಂಡವರಂ ಮೂವಣ್ಣಂಬರಿಪ । ನವವಾರವಿಳಾಸಿನಿಯರಿರುತಿರ್ಪ । ನೆಲೆವನೆಗಳಿನೊಪ್ಪುವ ಸೂಳೆಗೇರಿ । ಸೊಗಯಿಸುತಿರೆ ವಿಟಜನಹೃದಯ ಹಾರಿ । ಗಡಿಯಿಲ್ಲದೆ ನೀಳ್ದಂಗಡಿಗಳಿಂದ।ಮಲ್ಲಲ್ಲಿಗೆ ಬಜ್ಜರವಸರದಿಂದ।ಮಲ್ಲಲ್ಲಿಗೆ ಘಟ್ಟಿವಳರ್ಕಳಿಂದ।ಮಲ್ಲಲ್ಲಿಗೆ ಪೂವಿನ ಸಂತೆಯಿಂದ।ಮಲ್ಲಲ್ಲಿಗೆ ಪೆಸರರವನೆಗಳಿಂದ।ಮಲ್ಲಲ್ಲಿಗೆ ಮಂದುರದೋಳಿಯಿಂದ । ಮಲ್ಲಲ್ಲಿಗೆ ಕರಿಗಳ ಸಾಲೆಯಿಂದ।ಮಲ್ಲಲ್ಲಿಗೆ ತೀವಿದ ಕೊಳಗಳಿಂದ।ಮಲ್ಲಲ್ಲಿಗೆ ದೂಸಿಗವಸರದಿಂದ (ಮಲ್ಲಲ್ಲಿಗೆ ಗಂದಿಗವಸರದಿಂದ)ಮಲ್ಲಲ್ಲಿಗೆ ಕಂಚಿನ ವಸರದಿಂದ।ಮಲ್ಲಲ್ಲಿಗೆ ತಂಬುಲವಸರದಿಂದ । ಮಲ್ಲಲ್ಲಿಗೆ ಲೀಲೋದ್ಯಾನದಿಂದೆ । ಮಧುರಾಪುರಮೊಪ್ಪಮನಪ್ಪುಕೆಯ್ದು । ಸುರಪತಿಪುರದಳವು ಮನಿಟಿಕೆಯ್ದು । ಮಧುರಿಪು [೨]ಕೃಪೆಯತಿಶಯದೆಸೆವುದಿಂತು । ಪೊಗಟಲ್ಫಣಿಪತಿಗಮಸಾಧ್ಯಮಿಂತು

---

೧. ರಥ್ಯಂ ಜನಾತಿಥ್ಯದಿಂ (ಖಮೊಅ) ೨ ಕೃಪೆಯಿಂ ನಯಮೆಸೆವುದಿಂತು (ಮೊಅ)

ಪರದರ ಪಾರ್ವರ ಗೋಟಾ
ಯ್ಲರ ಜೋದರ ಮಾಲೆಗಾಱಮಣಿಗಾಱರ ಮ
ಲ್ಲರ ಮಂಡಳಿಕರ ಸಾಮಂ
ತರ ದಂಡಾಧೀಶರಾಲಯಂಗಳ್ ಮೆಱೆಗುಂ ೨೨

ವಿವಿಧಮಣಿಶಬಲಿತಂ ರ
ಮ್ಯವಿಧಾನ ಸುವರ್ಣಕಲಶಕಿರಣೋದ್ದ್ಯೋತಂ
ಅವಿರಳವಾದ್ಯಸಮೇತಂ
ಧವಳಪ್ರಾಸಾದಸಾರ ದೇವಾಗಾರಂ ೨೩

ಪಳುಕಿನ [1]ನೆಲೆಗಟ್ಟುಗಳುಂ
ಕಳಧೌತ ಸುರತ್ನಕೃತಭಿತ್ತಿಸ್ತಂಭೋ
ಜ್ಜ್ವಳಮುಕ್ತಿಕಾವಿತಾನಂ
ಥಳಥಳಿಪುವು ಪುರದ ನಿಳಯನಿಳಯದೊಳೆಲ್ಲಂ ೨೪

ವ|| ಅಂತತಿರಮಣೀಯತೆಯನೊಳಕೊಂಡಖಿಳಜನ ಮನೋರಂಜನಮಾದ ಬೀದಿಗಳೊಳ್

ಸೌರಭಕುಸುಮವಿಹಾರಂ
ಪೌರವಧೂಶ್ವಸಿತಪದ್ಮಗಂಧವಿಚಾರಂ
ಸಾರತರಶೈತ್ಯಭಾರಂ
ಸ್ವೈರಚರಂ ಸುಟಿವುದಲ್ಲಿ ಚಾರುಸಮೀರಂ ೨೫

೨೨. ವಣಿಜ (ವೈಶ್ಯ)ರ, ಬ್ರಾಹ್ಮಣರ, ರಾವುತರ, ಯೋಧರ, ಮಾಲೆಗಾರರ, ಮಣಿಗಾರರ, ಜಟ್ಟಿಗಳ, ಮಂಡಲಿಕರ, ಸಾಮಂತರ ಮತ್ತು ಸೇನಾಪತಿಗಳ ಮನೆಗಳು ಚೆನ್ನಾಗಿ ಕಾಣುವುವು. ೨೩. ವಿಧವಿಧವಾದ ರತ್ನಗಳಿಂದ ವಿಚಿತ್ರಮಿಶ್ರವರ್ಣವುಳ್ಳದೂ ಸುವರ್ಣಕಲಶಗಳ ಕಿರಣದಿಂದ ಹೊಳೆಯುವುದೂ, ಆದ ಅಲ್ಲಿಯ ಶ್ವೇತದೇವಾಲಯವು ಸರ್ವದಾ ಇಂಪಾದ ವಾದ್ಯಸಮೇತವಾಗಿರುವುದು. ೨೪. ಆ ಪಟ್ಟಣದ ಮನೆಮನೆಗಳಲ್ಲೂ ಸ್ಫಟಿಕದ ನೆಲೆಗಟ್ಟುಗಳೂ ಚಿನ್ನ ಬೆಳ್ಳಿ ರತ್ನಗಳ ಗೋಡೆಗಳೂ ಕಂಭಗಳೂ ತೊಳಗುವ ಮುತ್ತಿನ ಮೇಲುಕಟ್ಟುಗಳೂ ಥಳಥಳಿಸುತ್ತಿರುವವು. ಹಾಗೆ ಮನೋಹರತೆಯನ್ನೊಳಗೊಂಡು ಸರ್ವಜನ ಮನೋರಂಜಕವಾದ ಬೀದಿಗಳಲ್ಲಿ - ೨೫. ಸ್ವೇಚ್ಛೆಯಾಗಿ ಸಂಚರಿಸುವ ವಾಯುವು ಅಲ್ಲಿ ಸುವಾಸನೆಯ ಹೂಗಳಲ್ಲಿ ವಿಹರಿಸಿ, ಪುರವನಿತೆಯರ ನಿಶ್ವಾಸದ ಕಮಲಗಂಧವನ್ನು ಧರಿಸಿ, ತಕ್ಕಷ್ಟು ಶೈತ್ಯಭಾರವನ್ನು ಪಡೆದು, ಮಂದವಾಗಿ ಸಂಚರಿಸುವುದು.

---

೧. ನೆಲೆಗಟ್ಟುಗಳಿಂ (೨)

[1]ಸಾಲಿಡೆ ಕಟಾಕ್ಷಮಾಲೆ ವಿ
ಲೋಲತರಭ್ರಮರಮಾಲೆಯೇಟಿಸೆ ಸುಮನೋ
ಮಾಲೆಯ ಬಂಬಲ್ವೆಳಗುಂ
ಲೀಲೆಯುಮೊಡನೆಸೆಯೆ ಮಾಲೆಗಾರ್ತಿಯರೆಸೆವರ್ ೨೬

ಬಂದುಗೆಯೊಳ್ ನಯನದ್ಯುತಿ
ಬಂದುಗೆ ಮಲ್ಲಿಗೆಯ ಪೂಗಳೆಂದೀವರ್ ಕಂ
ಪಂ ದಳವೇಱಿಪರಳಿಗಿಂ
ಪಂದಳವಡೆ ಪುಲ್ಲವಡಿತಿಯರ್ ಸೊಗಯಿಸುವರ್ ೨೭

ಮಲ್ಲಿಗೆಯಂ ನಗೆಯಿಂ ಕರ
ಪಲ್ಲವದಿಂದರುಣಸರಸಿರುಹಮಂ ರದನದೆ
ಮೊಲ್ಲೆಯ ಮುಗುಳಂ ತೋರ್ಪರ್
ಸಲ್ಲಲಿತಾಂಗದೆ ಲತಾಂಗಿಯರ್ ಮಾನಿನಿಯರ್ ೨೮

ಎತ್ತಿದ ಪುಷ್ಪಮಾಲೆ ಲಲಿತೇಕ್ಷಣತೀಕ್ಷ್ಣ ಮರೀಚಿ[2]ಗಾಡಿಯಂ
ಬಿತ್ತುವ ಪುರ್ವುಗಳ್ ಪೊಸತಿದೆಂದು ನಿರೀಕ್ಷಿಸಲೊಂದು ದೇಸೆಯಂ
ಪೆತ್ತು ಮದಾಳಿಶಿಂಜಿನಿಯನಾ ಕುಸುಮಾಸ್ತ್ರಮನಿಕ್ಷುಚಾಪಮಂ
ಚಿತ್ತಜನಾಂತು ನಿಂದನೆನೆ ವಿಕ್ರಯಿಪರ್ ಸತಿಯರ್ ಲತಾಂತಮಂ ೨೯

ವ॥ ಇಂತೆಸೆವ ಮಾಲಾಕಾರವಧೂಜನಂಗಳಿಂ ಚೆಲ್ವುವೆತ್ತು ಪಲ್ಲವೋಲ್ಲಸಿತಮಪ್ಪ ಗಾಣಿಕ್ಯಸದನಪಙ್ಕ್ತಿಗಳೊಳ್

೨೬. ಹರಡುತ್ತಿರುವ ಕಡೆಗಣ್ಣುಗಳ ನೋಟವನ್ನು ಚಂಚಲವಾದ ತುಂಬಿಗಳ ಸಾಲು ತಿರಸ್ಕರಿಸುತ್ತಿರಲು ಹೂಮಾಲೆಯ ಹೊಳಪೂ ಅವರ ಲೀಲೆಯೂ ಚೆನ್ನಾಗಿ ಕಾಣುತ್ತಿರಲು ಮಾಲೆಗಾತಿಯರು ಒಪ್ಪುತ್ತಿದ್ದರು. ೨೭. ತಮ್ಮ ಕಣ್ಣಿನ ಕಾಂತಿಯನ್ನು ಬಿಂದಿಗೆ ಹೂವಿನ ಮೇಲೆ ಬೀರಿ, ಅದನ್ನು ಮಲ್ಲಿಗೆಹೂವೆಂದು ಕೊಡುವ ಮತ್ತು ಹೂಗಳ ಸುವಾಸನೆಯನ್ನು ಹೆಚ್ಚಿಸಿ, ತುಂಬಿಗಳಿಗೆ ಇಂಪಾಗುವಂತೆ ಮಾಡುವ ಹೂವಾಡಗಿತ್ತಿಯರು ಸೊಗಸುವರು. ೨೮. ಅತಿ ಕೋಮಲೆಯರೂ ಲತಾಂಗಿಯರೂ ಆದ ಮಾನಿನಿಯರು ತಮ್ಮ ನಗುವಿನಿಂದ ಮಲ್ಲಿಗೆಯ ಹೂವನ್ನು ಚಿಗುರುಗಯ್ಯಿಂದ ಕೆಂದಾವರೆಯ ಹೂವನ್ನೂ ಹಲ್ಲುಗಳಿಂದ ಮೊಲ್ಲೆಯ ಮೊಗ್ಗುಗಳನ್ನೂ ತೋರಿಸುವರು. ೨೯. ಎತ್ತಿಹಿಡಿದಿರುವ ಹೂಮಾಲೆಯೂ ಲಲಿತವಾದ ನೋಟದ ತೀಕ್ಷ್ಣವಾದ ಕಾಂತಿಯೂ ಸೊಗಸನ್ನು ಬೀರುವ ಹುಬ್ಬುಗಳೂ ನೋಡುವುದಕ್ಕೆ ಹೊಸಬಗೆಯ ಅಂದವನ್ನು ಪಡೆದಿದ್ದುದರಿಂದ, ಕುಸುಮಾಸ್ತ್ರವನ್ನೂ ಮದಿಸಿದ ತುಂಬಿಗಳ ಹೆದೆಯುನ್ನೂ ಕಬ್ಬಿನ ಬಿಲ್ಲನ್ನೂ ಧರಿಸಿ, ಮನ್ಮಥನೇ

---

೧. ವ॥ ಮುತ್ತಲ್ಲಿಂ ಬಟೆಯಂ ಎಂದು ಹೆಚ್ಚಾಗಿದೆ (ಮೊಲಿ)

೨. ಗಾಡಿಯಚ್ಚೊತ್ತಿದ (ಮೊಲಿ)

ರತಿಯಂ ಕಳೆಗುಂದಿಪ ಭಾ
ರತಿಯಂ ಜಾಣಿಂದೆ ಪಟಿವ ಸೊಬಗಿಂದಂ ಸುರ*
ಸತಿಯರನಿಟಿಕೆಯ್ವಗ್ಗದ
ಸತಿಯರ್ ಪೆಸರ್ವೆತ್ತ ವಾರನಾರಿಯರೆಲ್ಲಂ ೩೦

ಸ್ಮರನಂ ಪೂಜಿಪ ರತಿಯಂ
ಪಿರಿದರ್ಚಿಪ ಪರಕೆಯಂ ವಸಂತಂಗೆತ್ತುವ†
ನೆರೆದಿಂದುವನೊಲಿಸುವ ವಾ
ರಿರುಹದಳಾಕ್ಷಿಯರ ಕಳಕಳಂ ಮನೆಮನೆಯೊಳ್ ೩೧

ಓದಿಸುವ ಗಿಳಿಯನಂಚೆಯ
ನಾದರದಿಂ ನಡೆಯಿಪ್ಪುಲಿವ ಪಾರಾವತದ ವಿ
ನೋದಮನೊಲ್ದೀಕ್ಷಿಸುವ ತ
ಳೋದರಿಯರ್ ಗುರುನಿತಂಬೆಯರ್ ಸೊಗಯಿಸುವರ್ ೩೨

ಲಲಿತ ಭ್ರೂ ಕಾರ್ಮುಕಂ ಕೇಕರರುಚಿ ನನೆಗೋಲ್ ಕುಂತಳಂ ಮೌರ್ವಿಮಂಜೀ
ರಲಸದ್ಧ್ವಾನಂ ಧನುಷ್ಟಂಕೃತಮೆನೆ ವಿಶಿಖಾರೋಪಿತಾಕರ್ಣಚಾಪಂ
ಲಲನಾಯೂಥಂ ಬರಲ್ ಬೆಂಬಲಕೆ ಬರಿಸಿ ಕಾಮಾತುರವ್ರಾತಮಂ ಮೆ
ಲ್ಲೆಲರಿಂ ಪಂಚೇಷು ಗೆಲ್ಲಂಬಡೆವಿನ[೧]ಮಸೆಗುಂ ವಾರನಾರೀಕದಂಬಂ ೩೩

ನಿಂತಿರುವನೋ ಎಂಬಂತೆ ಕಾಣುವ ಯುವತಿಯರು ಹೂವನ್ನು ಮಾರುವರು. ವ|| ಹೀಗೆ ಹೊಳೆಯುವ ಮಾಲೆಗಾರ್ತಿಯರಿಂದ ಸೊಗಸಾಗಿ, ವಿಟರಿಂದೊಪ್ಪುವ ವೇಶ್ಯಾಗೃಹಗಳ ಸಾಲುಗಳಲ್ಲಿ ೩೦. ಅಲ್ಲಿ ಹೆಸರುಗೊಂಡ ಉತ್ತಮ ವೇಶ್ಯೆಯರೆಲ್ಲರೂ (ರೂಪದಿಂದ) ರತಿಯನ್ನೂ ಕಳೆಗುಂದಿಸುವರು. ಜಾಣತನದಲ್ಲಿ ಸರಸ್ವತಿಯನ್ನೂ ಮೀರಿರುವರು. ಸೊಬಗಿನಿಂದ ದೇವಾಂಗನೆಯರನ್ನೂ ಕೀಳಾಗಿಸಿರುವರು. ೩೧. ಮನೆಮನೆಯಲ್ಲೂ ಕಾಮನನ್ನು ಪೂಜಿಸುವ, ರತಿಯನ್ನು ಹೆಚ್ಚಾಗಿ ಅರ್ಚಿಸುವ ವಸಂತನಿಗೆ ಹರಕೆಯನ್ನೆತ್ತುವ ಪೂರ್ಣಚಂದ್ರನನ್ನು ಒಲಿಸಿಕೊಳ್ಳುವ ಕಮಲದಳ ನೇತ್ರೆಯರ ಕಲಕಲ. ೩೨. ಗಿಳಿಗೆ ಮಾತನ್ನು ಕಲಿಸುವ, ಹಂಸೆಯನ್ನು ಆದರದಿಂದ ನಡೆಸುವ, ಗುಬ್ಬಳಿಸುವ ಪಾರಿವಾಳದ ವಿನೋದವನ್ನು ಒಲಿದು ನೋಡುವ ಕೃಶೋದರರದ ಗುರುನಿತಂಬೆಯರು ಸೊಗಸಾಗಿರುವರು. ೩೩. ವೇಶ್ಯೆಯರ ಗುಂಪು ಲಲಿತವಾದ ಹುಬ್ಬೇ ಬಿಲ್ಲೂ, ಕಡೆಗಣ್ಣ ಬೆಡಗುನೋಟವೇ ಹೂಬಾಣವೂ, ಮುಂಗುರುಳೇ ಹೆದೆಯೂ

---

* ಈ ಪದ್ಯಗಳ (ಇದು ಮತ್ತು ೨೮ನೇ ಪದ್ಯ) ದ್ವಿತೀಯಪಾದಾಂತ್ಯದಲ್ಲಿ ಗುರುವಿಗೆ ಪ್ರತಿಯಾಗಿ ಲಘುದ್ವಯವಿದೆ. ಕ್ರಮವಾಗಿ ಅಲ್ಲಲ್ಲಿ ರದದಿಂ, ಸ್ವರ್ ಎಂದು ತಿದ್ದಿದರೆ ಕಂದದ ಗಣನಿಯಮವು ನೇರ್ಪಡುವುದು.

† ಈ ಪದ್ಯಗಳಲ್ಲಿ (ಇದು ಮತ್ತು ೩೨ನೇ ಪದ್ಯ) ದ್ವಿತೀಯಪಾದಾಂತ್ಯದಲ್ಲಿ ಗುರುವಿಗೆ ಪ್ರತಿಯಾಗಿ ಲಘುದ್ವಯವಿದೆ. ಕ್ರಮವಾಗಿ ವಸಂತಂಗುಯ್ವಾ, ಪಾರಾವತದಾ-ಮೋದಮ..... ಎಂದು ತಿದ್ದಿದರೆ ಗಣನಿಯಮವು ನೇರ್ಪಡುವುದು.

೧. ಮಿಸುಗುಂ (ಮೊಅ)

ವ|| [1]ಅಂತೆಸೆದು ಕಮನೀಯತರಸ್ವಾಂತಬಂಧುರಮಾಗಿ ಸೊಬಗುವೆತ್ತ ಪಣ್ಯಾಂಗನಾವೀಧಿಗಳೊಳಂದಂಬಡೆದಿರ್ದುಮತಿಮನೋಹರಮನಪ್ಪುಕೆಯ್ದಿರ್ಪುದದೆಂತೆಂದೊಡೆ

ಮೇಳವಿಸಿರ್ದ ದಂಪತಿಜನಂ ನಲಿದಾಡುವ ರಮ್ಯಹರ್ಮ್ಯದಿಂ
ಕೇಳಿವನಂಗಳಿಂದೆಸೆವ ತಣ್ಗೊಳನಿಂ ಕಳಕಂಠನಾದದಿಂ
ಬಾಳರಸಾಲದಿಂ ನೆರೆವ ಭೋಗಿಗಳಿಂ ಮಣಿಕುಟ್ಟಿಮಂಗಳಿಂ
ಬಾಳೆಯರೊಟ್ಟಿನಿಂ ಸಕಲವೈಭವದಿಂದೆಸೆದಿರ್ಪುದಾ ಪುರಂ ೩೪

ವ|| ಅಂತುಮಲ್ಲದೆ

ಚೆಲುವಿಕೆಗಿಂಬು ಚೈತ್ರನೊಲಿದಾವಗಮಿರ್ಪೆಡೆ ಕಂತುಗಿಂತಿದೇ
ನೆಲೆಮನೆ ಸಂಪದಂ ಪದಪಿಗಿಂಪಿಡಿದೊಪ್ಪುವ ತಾಣ ಸೌಖ್ಯ ಸಂ
ದೊಲಿದಿಹ ಬೀಡು ಮೈಮೆಗೆ ತವರ್ಮನೆ ನನ್ನಿಗೆ ಮೇರೆಯಾಗಿ ನಿ
ಚ್ಚಲುಮೆಸೆದಿರ್ಪುದಾ ನಗರಮಿಂದ್ರಪುರಕ್ಕಮುದಾತ್ತಮಗ್ಗಳಂ ೩೫

ವ|| ಅಂತೆಸೆವ ನಗರಮಧ್ಯಪ್ರದೇಶದೊಳ್

ಇದು ಬನಮಿದು ನೃಪಗೃಹಮೆಂ
ಬುದ್ಬೋಘಂ ಸ್ಪರ್ಶನಾನುಮಿತಮಪ್ಪುದು ಪ
ಟ್ಟದ ಶುಕಪಿಕಾಳಿಗೆನೆ ನೃಪ
ಸದನಂ ಸೊಗಯಿಪ್ಪುದು ಚಿತ್ರಮಣಿಶಬಲತೆಯಿಂ ೩೬

ಕಾಲುಬಳೆಯ ಶಬ್ದವೇ ಬಿಲ್ಲಿನ ಟಂಕಾರವೂ ಆಗಿರಲು ತನ್ನ ಬೆಂಬಲಕ್ಕೆ ಬಂದುದರಿಂದ ಬಿಲ್ಲಿನಲ್ಲಿ ಬಾಣವನ್ನು ತೊಟ್ಟು, ಕಿವಿಯವರೆಗೆ ಎಳೆದು ನಿಂತ ಕಾಮನು ಕಾಮುಕರ ತಂಡವನ್ನು ಬರಿಸಿ, ಮಂದಮಾರುತದಿಂದಲೇ ಜಯಿಸುವಂತೆ ತೋರುತ್ತಿದ್ದಿತು. ವ|| ಹಾಗೆ ಒಪ್ಪಿ, ಅತಿನಿರ್ಮಲ ಮನಸ್ಸಿನವರಿಂದ ಮನೋಹರವಾಗಿರುವ ವೇಶ್ಯಾಸ್ತ್ರೀಯರ ಬೀದಿಗಳಿಂದ ಅಂದವಾಗಿರುವುದು. ೩೪. ಆ ಪಟ್ಟಣವು ದಂಪತಿಗಳು ಜತೆಗೂಡಿ ನಲಿದಾಡುವ ರಮ್ಯವಾದ ಉಪ್ಪರಿಗೆಗಳಿಂದಲೂ, ಕ್ರೀಡಾವನಗಳಿಂದಲೂ ತಂಪಾದ ಕೊಳಗಳಿಂದಲೂ ಕೋಗಿಲೆಗಳ ಧ್ವನಿಯಿಂದಲೂ ಎಳೆ ಮಾವಿನಮರಗಳಿಂದಲೂ, ಬಂದು ಸೇರುವ ಭೋಗಿಗಳಿಂದಲೂ ರನ್ನದ ಜಗಲಿಗಳಿಂದಲೂ ಬಾಲೆಯರ ಗುಂಪಿನಿಂದಲೂ ಸಕಲ ವೈಭವದಿಂದಲೂ ಮನೋಹರವಾಗಿರುವುದು, ವ|| ಹಾಗೂ ಅಲ್ಲದೆ, ೩೫. ಚೆಲುವಿಕೆಗೆ ಇಂಬು, ವಸಂತನು ಒಲಿದು ಯಾವಾಗಲೂ ಇರುವ ಎಡೆ, ಮನ್ಮಥನಿಗೆ, ನೆಲೆಮನೆ, ಪ್ರೀತಿಗೆ ಸಂಪತ್ತು, ಇಂಪು ತುಂಬಿ ಒಪ್ಪುವ ಸ್ಥಳ, ಸೌಖ್ಯವು ತಾನಾಗಿ ಪ್ರೀತಿಯಿಂದ ಬಂದು ನೆಲೆಸಿರುವ ಮನೆ, ಮಹಿಮೆಗೆ ತೌರುಮನೆ, ಸತ್ಯಕೃತಜ್ಞತೆಗಳಿಗೆ ಅವಧಿ, ಹೀಗೆ ಆ ಪಟ್ಟಣವು ಅಮರಾವತಿಗಿಂತ ಮೇಲಾಗಿರುವುದು ವ|| ಹಾಗೆ ಹೊಳೆಯುವ ನಗರದ ಮಧ್ಯಪ್ರದೇಶದಲ್ಲಿ ೩೬. ಅರಮನೆಯು ವಿಚಿತ್ರವರ್ಣ ರತ್ನಗಳ ಮಿಶ್ರವಾದ ಕಾಂತಿಯಿಂದ ಕೂಡಿದ್ದುದರಿಂದ ತುಂಬಿ ಗಿಳಿಕೋಗಿಲೆಗಳಿಗೆ ನಿಜವಾಗಿಯೂ ಇದು ವನ,

---

೧. ಅಂತೆಸೆವ (ಖ)

ಅಹಿರಾಜಂ ದ್ವಿಸಹಸ್ರಜಿಹ್ವನಜೆಯಂ ವ್ಯಾವರ್ಣಿಸಲ್ ಬಲ್ಲನೇ
ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ
ಬಹುವಿಸ್ತಾರಮನಿಂದ್ರಪುಷ್ಪಕವಿಮಾನಾಕಾರಮಂ ತನ್ಮಹಾ
ಮಹಿಮಾಧಾರಮನತ್ಯುದಾರಮನಿಳಾಚೇತಶ್ಚಮತ್ಕಾರಮಂ ೩೭

ವ|| ಆ ರಾಜನಿಳಯದೊಳ್

ಯದುವಂಶಾಭರಣಂಗೆ ರಾಜ್ಯಭರಧುರ್ಯಂಗುಗ್ರಸೇನಂಗೆ ಪು
ಟ್ಟಿದನಭ್ರಮಕ್ಕೆ ಸಿಡಿಲ್ ಸುಧಾಬ್ಧಿಗೆ ಮಹಾ ಹಾಳಾಹಳಂ ಕಾನನ
ಕ್ಕೆ ದವೋಗ್ರಾಗ್ನಿ ಕಡಂಗಿ ಪುಟ್ಟಿದವೊಲಂತಾ ಕಂಸದೈತ್ಯಂ [1]ವಿಳಾ
ಸದಿನಿರ್ದಂ ಸೆಱೆಗೆಯ್ದು ತಜ್ಜನಕನಂ ಸಾಮ್ರಾಜ್ಯಸಂಪತ್ತಿಯೊಳ್ ೩೮

ಮಸಕದ ಹಾಳಾಹಳದೊಡ
ನೆಸೆವಿಂದುವ ಲೇಖೆ ಪುಟ್ಟುವಂದದಿನಾ ರಾ
ಕ್ಷಸನೊಡನೆ ಪುಟ್ಟಿ ದೇವಕಿ
ವಸುದೇವಂಗರಸಿಯಾಗಿ ಸುಖದಿಂದಿರ್ದಳ್ ೩೯

ವ|| ಅಂತಿರ್ಪುದುಮೊಂದು ಸಮಯದೊಳ್ ಉಗ್ರಸೇನನ ಸೂನು ಸಿಂಹಾಸನಾಸೀನನಾಗಿ ಲೀಲೆಯಿಂದೊಡ್ಡೋಲಗಂಗೊಟ್ಟಿರ್ದಲ್ಲಿ ಚಿತ್ರ ಚೀನಾಂಶುಕ ಸುಗಂಧಾನುಲೇಪನ ನೂತ್ನ ರತ್ನಾಭರಣಂಗಳಿಂ ಶೃಂಗಾರಂಗೆಯ್ದು ಪರಿವೇಷ್ಟಿಸಿರ್ದಂಗನಾಜನಂಗಳಿಂ ಶೃಂಗಾರರಸಮುಂ ; ನಮುಚಿ

ಇದು ಅರಮನೆ ಎಂಬುದು ನೋಟಕ್ಕೆ ತಿಳಿಯದೆ, ಸ್ಪರ್ಶದಿಂದ ಮಾತ್ರ ತಿಳಿಯುವಂತೆ ಇದ್ದಿತು. ೩೭. ಬಹುವಿಸ್ತಾರವೂ ಇಂದ್ರನ ಪುಷ್ಪಕ ವಿಮಾನಾಕಾರವುಳ್ಳದೂ ಮಹಾಮಹಿಮೆಗೆ ಆಧಾರವಾದುದೂ ಅತ್ಯುತ್ಕೃಷ್ಟವೂ ಭೂಜನರ ಚೇತನಕ್ಕೆ ಚಮತ್ಕಾರಕವೂ ಆದ ಆ ಅರಮನೆಯನ್ನು ಎರಡುಸಾವಿರನಾಲಗೆಯನ್ನು ಪಡೆದಿರುವ ಆದಿಶೇಷನೂ ಸರಿಯಾಗಿ ವರ್ಣಿಸಲಾರನೆನ್ನುವಾಗ ಭೂಮಿಯ ಮೇಲಿರುವ ಮನುಷ್ಯನು ಒಂದೇ ನಾಲಗೆಯಿಂದ ವರ್ಣಿಸಬಲ್ಲನೇ? ವ|| ಆ ರಾಜನಿಲಯದಲ್ಲಿ ೩೮. ಯದುವಂಶಕ್ಕೇ ಭೂಷಣನೂ ರಾಜ್ಯಭಾರ ಧುರೀಣನೂ ಆದ ಉಗ್ರಸೇನಮಹಾರಾಜನಿಗೆ - ಮೇಘಕ್ಕೆ ಸಿಡಿಲೂ ಕ್ಷೀರಸಮುದ್ರಕ್ಕೆ ಹಾಲಾಹಲವೆಂಬ ಕ್ರೂರವಿಷವೂ ಮಹಾವನಕ್ಕೆ ಉಗ್ರವಾದ ಕಾಡುಕಿಚ್ಚೂ ಉತ್ಸಾಹದಿಂದ ಹುಟ್ಟಿದಂತೆ, ಕಂಸನೆಂಬ ಮಗನು ಹುಟ್ಟಿದನು. ರಾಕ್ಷಸನಾದ ಆ ಕಂಸನು ತನ್ನ ತಂದೆಯನ್ನು ಸೆರೆಯಲ್ಲಿಟ್ಟು, ತಾನು ಸಾಮ್ರಾಜ್ಯ ಸಂಪತ್ತಿನಿಂದ ಕೂಡಿ ವಿಲಾಸಯುತನಾಗಿದ್ದನು. ೩೯. ಕ್ರೂರವಾದ ಹಾಲಾಹಲ ವಿಷದೊಡನೆ ಹೊಳೆಯುವ ಚಂದ್ರನು ಹುಟ್ಟಿದಂತೆ ಆ ಕಂಸನೊಡನೆ ದೇವಕಿಯು ಹುಟ್ಟಿ, ವಸುದೇವನಿಗೆ ರಾಣಿಯಾಗಿ ಸುಖದಿಂದ ಇದ್ದಳು. ವ|| ಹಾಗಿರಲು ಒಂದು ಸಮಯದಲ್ಲಿ ಉಗ್ರಸೇನನ ಮಗ ಕಂಸನು ಸಿಂಹಾಸನವನ್ನೇರಿ ಕುಳಿತು, ಲೀಲೆಯಿಂದ ಸಭೆಯನ್ನು ಅಲಂಕರಿಸಿದ್ದನು. ಆಗ ಅಲ್ಲಿ

---

೧. ವಿಲಾಸದಿನಿರ್ಪಂ (ಕ)

**ಸೂದನಪ್ರಚೋದಿತವಜ್ರಾಕರ್ಷಣಲೇಖಾವಿಸಂಕಟವ್ಯೂಢವಕ್ಷಸ್ಸ್ಥಲರುಂ ಐರಾವತದಂತಿದಂತೋತ್ಪಾಟನ ಪಟು ಬಾಹುಪರಿಘರುಮಪ್ಪನೇಕವೀರ ದಾನವಸೇನಾಗ್ರಣಿಗಳಿಂ ವೀರರಸಮುಂ; ಅಕ್ರೂರಾದಿಚತುರಪಧಾ ವಿಶುದ್ಧ ಯಾದವಪ್ರಧಾನ ಸಂತಾನದಿಂ ಶಾಂತರಸವಮುಂ; ಎತ್ತಲಾನುಮವಸರಂಬಡೆದು ಬಂದೋಲೈಸುವಷ್ಟಲೋಕ ಪಾಲಕರ ಕಳಕಳಮನುಟೆಯಿಮೆಂದು ಜಡಿದು ನುಡಿವ ಕಣ್ಣಂ ಬಿಡುವ ಪಡಿಯಱರ ತಂಡದಿಂ ರೌದ್ರರಸಮುಂ; ಆಸ್ಥಾನವಲ್ಲಭನ ಮನಮನಱಿದು ನಗಿಸುವ ಕುಬ್ಜ ವಾಮನ ಬಧಿರ ಮೂಕರ್ ಮೊದಲಾದ ಪಲತೆಱದ ಸಬ್ಬವಗಾಱರಿಂ ಹಾಸ್ಯರಸಮುಂ; ತಂತಮ್ಮ ಸರ್ವಸ್ವಮಂ ಕೊಟ್ಟನುಗ್ರಹಂಬಡೆಯದೆ ನಿಗ್ರಹ ಶಂಕಾಭರಾತಂಕಿತಹೃದಯರಾದ ಅಂಗವಂಗ ಕಳಿಂಗ ಕೊಂಗ ಮಾಳವ ಚೋಳ ನೇಪಾಳ ಸಿಂಹಳ ಪಾಂಡ್ಯ ಗೊಲ್ಲ ಪಲ್ಲವ ಘೂರ್ಜರ ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ; ಇತ್ತಲಸುರೋತ್ತಮ ಕೋಪದಿಂ ಪುರ್ಬಿನ ಜರ್ಬಿನಿಂ ಪೊಗೆ ನೆಗೆಯಲ್ಕತ್ತ ನಾಕಲೋಕಮುರಿಯುತಿರ್ದುದೆಂಬ ವಾರ್ತಾಪರಂಪರೆಯಿನದ್ಭುತರಸಮುಂ ; ಅಧಿನಾಥನಾಜ್ಞೆಯಿಂ ರಕ್ಷಾವಿನಿರ್ದಿಷ್ಟರೂಕ್ಷರಾಕ್ಷಸರ ತೋಳ ಕಾರುಣ್ಯರಸಮುಂ; ಕಂಸನೊಳಡಱೆ ಮೀಱೆ ಮಾಱಾಂತು ಬರ್ದುಂಕುವನಾವನೆಂಬ ತಲ್ಲಣದಿಂ**

ವಿಚಿತ್ರವಾದ ಚೀನಾಂಬರ ಸುಗಂಧಾನುಲೇಪನ ನೂತನ ರತ್ನಾಭರಣಗಳಿಂದಲಂಕೃತರಾಗಿ ಸುತ್ತಲೂ ಸೇರಿದ್ದ ಅಂಗನಾಜನರಿಂದ ಶೃಂಗಾರರಸವೂ, ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧವನ್ನು ಸೆಳೆದ ಗುರುತುಳ್ಳ ವಿಸ್ತಾರವೂ ಉನ್ನತವೂ ಆದ ಎದೆಯುಳ್ಳವರೂ, ಐರಾವತವೆಂಬ ಆನೆಯ ದಂತವನ್ನೂ ಕೀಳುವುದಕ್ಕೆ ಸಮರ್ಥವಾದ ಪರಿಘದಂತಿರುವ ತೋಳುಗಳುಳ್ಳವರೂ ಆದ ಅನೇಕ ರಾಕ್ಷಸ ಸೇನಾಗ್ರಗಣ್ಯರಿಂದ ವೀರರಸವೂ, ಅಕ್ರೂರನೇ ಮೊದಲಾದ ಚತುರುಪಧಾವಿಶುದ್ಧರಾದ ಯಾದವಪ್ರಧಾನಿಗಳ ಸಮೂಹದಿಂದ ಶಾಂತರಸವೂ, ಎಲ್ಲಾದರೂ ಸಮಯವನ್ನು ಪಡೆದು ಬಂದು, ಸೇವೆಗೆಯ್ಯುವ ಅಷ್ಟಲೋಕಪಾಲಕರ ಕಳಕಳವನ್ನು 'ನಿಲ್ಲಿಸಿ' ಎಂದು ಗದರಿಸಿ ಹೇಳುವ ಮತ್ತು ದೊಡ್ಡದಾಗಿ ತೆರೆದ ಕಣ್ಣಿಂದ ನೋಡುವ ದ್ವಾರಪಾಲಕರ ತಂಡದಿಂದ ರೌದ್ರರಸವೂ ಸಭಾನಾಯಕನ ಮನಸ್ಸನ್ನರಿತು, ನಗಿಸುವ ಗುಜ್ಜಾರಿ ಕುಳ್ಳ ಕಿವುಡ ಮೂಕರೇ ಮೊದಲಾದ ಹಲವು ಬಗೆಯ ಹಾಸ್ಯಗಾರದಿಂದ ಹಾಸ್ಯರಸವೂ, ತಮ್ಮ ಸರ್ವಸ್ವವನ್ನೂ ಕೊಟ್ಟು ಅನುಗ್ರಹವನ್ನು ಪಡೆಯದೆ ದಂಡನೆಯ ಶಂಕಾತಿಶಯದಿಂದ ಆತಂಕಗೊಂಡ ಹೃದಯವುಳ್ಳವರಾದ ಅಂಗ ವಂಗ ಕಳಿಂಗ ಕೊಂಗ ಮಾಳವ ಚೋಳ ನೇಪಾಳ ಸಿಂಹಳ ಪಾಂಡ್ಯ ಗೊಲ್ಲ ಪಲ್ಲವ ಘೂರ್ಜರ ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರು ಪ್ರಭೃತಿ ಮೊದಲಾದ ರಾಜರಿಂದ ಭಯಾನಕರಸವೂ ಇತ್ತ ರಾಕ್ಷಸೋತ್ತಮರ ಕೋಪದ ಹುಬ್ಬಿನ ಜರುಬಿನಿಂದ ಹೊಗೆಯು ಏಳಲು ಅತ್ತ ಸ್ವರ್ಗಲೋಕವು ಉರಿಯುತ್ತಿದ್ದಿತು ಎಂಬ ವಾರ್ತಾಪರಂಪರೆಯಿಂದ ಅದ್ಭುತರಸವೂ ಅಧಿನಾಥನ ಆಜ್ಞೆಯಿಂದ ರಕ್ಷಣೆಗೆ ನಿಯಮಿತರಾದ ಕ್ರೂರರಾಕ್ಷಸರ ತೋಳ ಶಕ್ತಿಯ ನೆಳಲಲ್ಲಿ ಕಪ್ಪಾಗಿ ಕರಿಕರಿಗಂದಿ ಕೃಶರಾಗಿ ಚಲಿಸಲಾರದಿರುವ ದಾಯಾದಿಗಳಾದ ಯಾದವರಿಂದ ಕರುಣರಸವೂ ಕಂಸನಿಗೆ ವಿರೋಧವಾಗಿ ಎದಿರುಬಿದ್ದು ಮೀರಿ ಪ್ರತಿಭಟಿಸಿ, ಬದುಕುವನಾವನೆಂಬ ಭಯದಿಂದ ಹುಲ್ಲನ್ನು ಕಚ್ಚಿ ಕೊಲ್ಲಬೇಡವೆಂದು ಹಲವು ಬಗೆಯಿಂದ ನಾಚಿಕೆಯನ್ನು ಬಿಟ್ಟು, ಹಿಮ್ಮೆಟ್ಟಿ ಓಡಿದ ಇಂದ್ರನ ಓಟವನ್ನು ಅಭಿನಯಿಸಿ ಆಡಿ ತೋರಿಸುವ ವೈತಾಳಿಕರಿಂದ ಬೀಭತ್ಸರಸವೂ

ಪುಲ್ಲಂ ಕರ್ಚಿ ಕೊಲ್ಲದಿರೆಂದು ಪಲತೆಱದೆ ನಾಣಂ ತೊಱೆದು ಬೆಂಗೊಟ್ಟೋಡಿ[1]ದಿಂದ್ರನೋಟಮನಭಿನಯಿಸಿಯಾಡಿ ತೋರ್ಪ ವೈತಾಳಿಕರಿಂ ಬೀಭತ್ಸರಸಮುಂ; ಇಂತು ನವರಸಂಗಳಿಂದಭಿನವರಸಂಗಳಾಗಿ ನೆಗೞುತ್ತುಮಿರೆ

ಆ ನೆಗೞ್ದ ಸಭೆಗೆ ಗಗನ
ಸ್ಥಾನದಿನಿೞಿತಂದನೊರ್ಮೊದಲ್ ಪಗಲುಳ್ಕಂ
ತಾನೆನೆ ಮುನಿವಿಖ್ಯಾತಂ
ದಾನವಕುಲನಿಧನದೂತನಜಸಂಜಾತಂ ೪೦

ಬಂದು ಸಭೆವುಗೆ ಮುನೀಶಂ
ಗಂದಿದಿರೆೞ್ದರ್ಘ್ಯಹಸ್ತನೆಱಗಿದನಸುರಂ
ಸಂದೆಯಮೇನೆಱಗಿಸುವುದ
ದೊಂದುಗ್ರತಪಃಪ್ರಭಾವಮೆಂತಪ್ಪವರಂ ೪೧

ಪ್ರತ್ಯುತ್ಥಾನಾನಂತರ
ಮತ್ಯುನ್ನತಕನಕಪೀಠಮಂ ಮುನಿಗಿತ್ತಾ
ದೈತ್ಯಂ ಬೆಸಸುವುದೆನಗಾ
ದಿತ್ಯಪ್ರಭ ನಿಮ್ಮ ಬಂದ ಕಾರ್ಯಾಂತರಮಂ ೪೨

ವ॥ ಎನೆ ತದೀಯ ಕರ್ಣಾಭ್ಯರ್ಣಮಂ ಪೊರ್ದಿ

ಅತಿದುಸ್ಸಹವಾರ್ತಾ ವಿಷ
ಲತೆಯಂ ನಾಂಟಿಸಲಿವಲ್ತೆ ಕಂಸಶ್ರೋತ್ರ
ಕ್ಷಿತಿಖನನಪವಿಶಲಾಕಾ
ತತಿಯೆನೆ ದಶನಾಂಶು ನಿಮಿರೆ ಮುನಿಯಿಂತೆಂದಂ ೪೩

ಹೀಗೆ ನವರಸಗಳಿಂದ ನೂತನ ರಸಗಳಾಗಿ ಪ್ರಕಟವಾಗುತ್ತಿದ್ದವು. ೪೦. ಪ್ರಸಿದ್ಧವಾದ ಆ ಸಭೆಗೆ, ಬ್ರಹ್ಮಪುತ್ರನೂ, ಋಷಿಗಳಲ್ಲಿ ಪ್ರಸಿದ್ಧನೂ, ರಾಕ್ಷಸಕುಲನಾಶ ವಿಚಾರವನ್ನು ತಿಳಿಸುವವನೂ, ಆದ ನಾರದಮುನಿಯು ಹಗಲೇ ಉಲ್ಕಾಪಾತವೆನ್ನುವಂತೆ, ಆಕಾಶದಿಂದ ತಟ್ಟನೆ ಇಳಿದು ಬಂದನು. ೪೧. ಸಭೆಗೆ ಬಂದ ಮುನೀಂದ್ರನಿಗೆ ಆ ಕಂಸನು ಇದಿರುಗೊಂಡೆದ್ದು ಪೂಜಾದ್ರವ್ಯಹಸ್ತನಾಗಿ ಕಾಲಿಗೆರಗಿದನು. ಉಗ್ರತಪಸ್ಸಿನ ಪ್ರಭಾವವು ಎಂಥವರನ್ನೂ ಎರಗಿಸುತ್ತದೆಂಬುದರಲ್ಲಿ ಸಂಶಯವಿಲ್ಲ. ಎದಿರುಗೊಂಡೆದ್ದ ನಂತರ ಋಷಿಗೆ ಅತ್ಯುನ್ನತವಾದ ಪೀಠವನ್ನಿತ್ತು "ಆದಿತ್ಯತೇಜರೇ! ನೀವು ಬಂದ ಕಾರ್ಯವಿಶೇಷವನ್ನು ನನಗೆ ತಿಳಿಸಬೇಕೆಂದನು. ವ॥ ಎನ್ನಲು ಅವನ ಕಿವಿಯ ಹತ್ತಿರ ಹೋಗಿ ೪೨. ಅತಿ ದುಸ್ಸಹವಾದ ವೃತ್ತಾಂತವೆಂಬ ವಿಷದ ಬಳ್ಳಿಯನ್ನು ನಾಟಿಸುವುದಕ್ಕೆ ಕಂಸನ ಕಿವಿಯೆಂಬ ಭೂಮಿಯನ್ನು ಅಗೆಯಲು ಇವೇ ವಜ್ರದ ಸಲಾಕಿಗಳೆಂಬಂತೆ ನಾರದಮುನಿಯ ಹಲ್ಲಿನ ಕಾಂತಿಯು ಹರಡುತ್ತಿರಲು ಹೀಗೆಂದನು. ೪೩. ಅತಿ ಶುಭ್ರಾಂಗನೂ ಪಾಪದ ಬಳ್ಳಿಯನ್ನು ಕೊಯ್ಯುವ ಕುಡುಗೋಲೂ ಆದ ಆ ನಾರದನು "ಬ್ರಹ್ಮನೇ ಮೊದಲಾದ ದೇವತೆಗಳು ವಿಷ್ಣುವಿನ ಹತ್ತಿರ ಹೋಗಿ, ರಾಕ್ಷಸೇಂದ್ರರ ಕ್ರೂರವಾದ ದುರ್‌ವ್ಯಾಪಾರವನ್ನು ದುಃಖದಿಂದ

೧. ಇಂದ್ರನ ನೋಟಮ (ಖ)

ಚತುರಾಸ್ಯೇಂದ್ರಾದಿದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರುದ್ವೃ
ತ್ತತೆಯಂ ಪುಯ್ಯಲ್ಚೆ ಕಂಸಪ್ರಭೃತಿ ದಿತಿಜರಂ ಕೊಲ್ವೆನಾನೆಂದು ಪೂಣ್ದ
ಚ್ಯುತದೇವಂ ದೇವಕೀಗರ್ಭದೊಳುದಯಿಸಲೆಂದಿರ್ದನೆಂದಿಂತಿದಂ ಪೇ
ಟ್ದಿಮಾತ್ರಂ ಪಾಂಡುಗಾತ್ರಂ ತಳರ್ದನಫಲತಾದಾತ್ರನಾ ಬ್ರಹ್ಮಪುತ್ರಂ ೪೪

ವ|| ಆಗಳತ್ಯಂತವಿಸ್ಮಿತಸ್ವಾಂತನಾಗಿ ಕಂಸಂ ನಿಜಾಂತಿಕದೊಳಿರ್ದ ಮಂತ್ರಿಗಳ್ಗಾ ವೃತ್ತಾಂತಮಂ ಪೇಟ್ದುದುಮೀ ಕಾರ್ಯಮೀ ಕದರ್ಯಂಗೆ ವಿಪರ್ಯಯಪ್ರದಮೆಂದು ಸಕಳ ಸಂಯುತಜನಮುಂ ಮನದೊಳನುಮಾನಿಸೆ ತತ್ಪ್ರಯೋಜನಪ್ರತೀಕಾರವಿಸಮ್ಮತಮತಿಗಳಕ್ರೂರಾದಿ ಯಾದವಪ್ರಧಾನರ್ ನಾರದನ ತಥ್ಯವಚನಮನತಥ್ಯಂ ಮಾಡಲೆಂದು

ಕಿಸುಱಿಂ ಪೊತ್ತಿಕ್ಕುವೀ ದಂದುಗಮೆ ತನುಗನುಷ್ಠಾನಮುಂ ಧ್ಯಾನಮುಂ ತ
ತ್ತ್ವಸುಖೈಕಜ್ಞಾನಮುಂ ಕೇವಳಮೆನೆ ಕುಟಿಲಂ [1]ಕ್ಲಿಷ್ಟಕಂ ಸಾಧುದುಷ್ಟಂ
ಪಿಸುಣರ್ ಮತ್ತಾರೋ ಪೇಟ್ ನಾರದಮುನಿಯವೊಲೆಂಬೀ ಪ್ರಧಾನೋಕ್ತಿಯಂ ರಾ
ಕ್ಷಸರಾಜಂ ಕೇಳ್ದು ದಂಷ್ಟ್ರಾಕಿರಣಧವಳಿತಾಸ್ಥಾನನಿಂತೆಂದನಾಗಳ್ ೪೫

ತೊದಳಲ್ತು ನಾರದಂ ಪೇ
ಟ್ದುದದೆಂತೆನಲೆನ್ನ ತೇರನೇಱಿಸಿ ವಿಭವಾ
ಸ್ಪದಮೆನೆ ದೇವಕಪುತ್ರಿಯ
ಮದುವೆಯ[2]ನಾನೊಲ್ದುಮಾಡಿ ಕಟಿಪುವ ಪಥದೊಳ್ ೪೬

ಹೇಳಿಕೊಂಡರು. ಅದಕ್ಕೆ ಅಚ್ಯುತದೇವನು 'ನಾನು ಕಂಸನೇ ಮೊದಲಾದ ರಾಕ್ಷಸರನ್ನು ಕೊಲ್ಲುವೆನು' ಎಂದು ಪ್ರತಿಜ್ಞೆ ಮಾಡಿ ದೇವಕೀಗರ್ಭದಲ್ಲಿ ಜನಿಸಬೇಕೆಂದಿರುವನು" ಎಂದು ಹೇಳಿ ಹೊರಟು ಹೋದನು. ವ|| ಆಗ ಅತ್ಯಾಶ್ಚರ್ಯಗೊಂಡ ಮನಸ್ಸುಳ್ಳ ಕಂಸನು ತನ್ನ ಸಮೀಪದಲ್ಲಿದ್ದ ಮಂತ್ರಿಗಳಿಗೆ ಆ ವೃತ್ತಾಂತವನ್ನು ಹೇಳಿದನು. ಅಲ್ಲಿ ಸೇರಿದ್ದವರೆಲ್ಲರೂ ಈ ಕಾರ್ಯವು ಈ ನೀಚನಿಗೆ ಪ್ರತಿಕೂಲವಾದುದು ಎಂದು ಶಂಕಿಸುತ್ತಿದ್ದರು. ಆ ಪ್ರಯೋಜನಕ್ಕೆ ಪ್ರತೀಕಾರ ಮಾಡಲು ಇಷ್ಟವಿಲ್ಲದ ಅಕ್ರೂರನೇ ಮೊದಲಾದ ಯಾದವ ಪ್ರಧಾನರು, ನಾರದನ ಸತ್ಯವಚನವನ್ನು ಅಸತ್ಯವಾಗಿ ಮಾಡಬೇಕೆಂದು, ೪೫. "ಚಾಡಿಯನ್ನು ಹತ್ತಿಸುವ ಈ ತೊಂದರೆಯೇ ತನಗೆ ಮುಖ್ಯವಾದ ಅನುಷ್ಠಾನ, ಧ್ಯಾನ, ತತ್ತ್ವಸುಖಕ್ಕೆ ಬೇಕಾದ ಜ್ಞಾನ ಎಂದುಕೊಂಡಿದ್ದಾನೆ ಈ ನಾರದ. ಕುಟಿಲನೂ ಕೆಟ್ಟವನೂ ಸಾಧುವೇಷದ ದುಷ್ಟನೂ ಆದ ನಾರದಮುನಿಯಂತೆ ಪಿಸುಣರು ಮತ್ತೆ ಯಾರಿರುವರು, ಹೇಳು" ಎಂದರು. ಅವರ ಮಾತನ್ನು ಕೇಳಿದ ರಾಕ್ಷಸರಾಜನು, ತನ್ನ ಕೋರೆಹಲ್ಲಿನ ಕಾಂತಿಯಿಂದ ಸಭೆಯನ್ನು ಬೆಳ್ಳಗೆ ಮಾಡುತ್ತಾ ಹೀಗೆಂದನು. ೪೬. "ನಾರದನು ಹೇಳಿದುದು ಸುಳ್ಳಲ್ಲ. ಹೇಗೆಂದರೆ ನಾನು ಪ್ರೀತಿಯಿಂದ ದೇವಕಿಯ ಮದುವೆಯನ್ನು ವೈಭವದಿಂದ ಮಾಡಿ, ತೇರನೇರಿಸಿ, ಕಳುಹಿಸುವಾಗ ದಾರಿಯಲ್ಲಿ

೧. ಕೃಷ್ಣಕಂ (ಕ) ೨. ನಾನಂದು ಕೂರ್ತು (ಮೊಅ) ನಾನಂದು ಮಾಡಿ (ಕಖ)

ಅಮರಾಧ್ವದೊಳೊಂದಶರೀ
ರಮಹಾಧ್ವನಿ ಕಂಸ ಕಂಸ ಕೇಳ್ ದೇವಕಿಯ
ಷ್ಟಮಗರ್ಭದಾತನಿಂದ
ಷ್ಟಮಚಂದ್ರಂ ನಿನಗೆ ನೆರೆಗುಮೆಂದುದಮೋಘಂ ೪೭

ವ॥ ಅದಂ ಕೇಳ್ದಾಂ ಮದೀಯಜೀವಾಪಹರಣಕಾರಿವಿರೋಧಿವಿಷಸಸ್ಯಮವಶ್ಯಮುದಯಿಸುವೀ ದೇವಕೀಗಾತ್ರಕ್ಷೇತ್ರಮನೀಗಳೆ ವಿನಾಶಮನೆಯ್ದಿಸುವೆನೆಂದು ಬಗೆದಂದು

ಪೇಟ್ವೆ ಬಗೆಯಿರ್ಕೆ ಪಕ್ಕದ
[1]ಕಿಟ್ವಾಳನ ಕೈಯೊಳಿರ್ದ ಬಾಳಂ ಕೊಂಡಾ
ನೇಟ್ವುದುಮಾ ವಸುದೇವಂ
ಬಾಟ್ವಾಸೆಯೊಳಾದ ಖೇದದಿಂದಿಂತೆಂದಂ ೪೮

ಅಹಿಮರ್ತ್ಯಾಮರವಿಷ್ಟಪತ್ರಿತಯಮಂ ಮುಂ ಗೆಲ್ದ ನಿನ್ನೊಂದು ದು
ಸ್ಸಹದೋಸ್ಸಾಹಸದಿಂದಮಾದ ಜಸಮೆಲ್ಲಂ ಮಾಸುಗುಂ ತ್ವತ್ಪ್ರತಾ
ಪಹುತಾಶಂ [2]ಕಡುದಣ್ಣನೇಱುಗುಮಮೋಘಂ ಸ್ತ್ರೀವಧಂಗೆಯ್ಯೆ ಮಾ
ಣಹಹಿನ್ನೆತ್ತದಿರೀ ನಿಜಾನುಜೆಗೆ ನೀಂ ನಿಸ್ತ್ರಿಂಶ ನಿಸ್ತ್ರಿಂಶಮಂ ೪೯

ನೆಟ್ಟನೆ ಮೃತ್ಯುವೀಕೆಯ ಸುತರ್ ನಿನಗೆಂದೊಡೆ ಕೊಲ್ವುದೀಕೆಗಂ
ಪುಟ್ಟಿದ ಮಕ್ಕಳಂ ಪರಸಿ ಸೇಸೆಯನಿಕ್ಕಿದ ಕೈಯೊಳಿಂತು ಕೈ
ಮುಟ್ಟಿಱಿದಪ್ಪೆ ಪೂಮುಡಿಯ ಬಾಲೆಯನೀಕೆಯನೆಂದು ಬಾಸಿಗಂ
ಗಟ್ಟಿದ ಶೀರ್ಷದಿಂದೆಱಗಿದಂ ವಸುದೇವನತೀವಭೀತಿಯಿಂ ೫೦

೪೭. ಆಕಾಶದಲ್ಲಿ ಬಂದು ಅಶರೀರಮಹಾಧ್ವನಿಯು "ಕಂಸ, ಕಂಸಾ! ಕೇಳು. ದೇವಕಿಯ ಎಂಟನೆಯ ಗರ್ಭದಲ್ಲುದಿಸುವವನಿಂದ ನಿಜವಾಗಿಯೂ ನಿನಗೆ ಅಷ್ಟಮಚಂದ್ರ (ಮಾರಕ)ನು ಒದಗುವನು" ಎಂದಿತು. ವ॥ ಅದನ್ನು ಕೇಳಿದ ನಾನು ನನ್ನ ಜೀವಾಪಹರಣಕಾರಿಯಾದ ವಿರೋಧಿ ವಿಷಸಸ್ಯವು ಅವಶ್ಯವಾಗಿ ಉದಯಿಸುವ ಈ ದೇವಕಿಯ ದೇಹಕ್ಷೇತ್ರವನ್ನು ಈಗಲೇ ವಿನಾಶವನ್ನೈದಿಸುವೆನು" ಎಂದು ಆಲೋಚಿಸಿ, ೪೮. ಈ ವಿಚಾರವನ್ನು ಹೇಳುವುದಿರಲಿ; ನನ್ನ ಪಕ್ಕದಲ್ಲಿ ನಿಂತಿದ್ದ ಭಟನ ಕಯ್ಯಲ್ಲಿದ್ದ ಹಿರಿದ ಕತ್ತಿಯನ್ನು ತೆಗೆದುಕೊಂಡು ನಾನು ಏಳುತ್ತಲೂ ಆ ವಸುದೇವನು-ಖೇದಗೊಂಡು ಬಾಳುವ ಆಸೆಯಿಂದ ಹೀಗೆಂದನು: ೪೯. "ನೀನು ಈಗ ಸ್ತ್ರೀವಧೆ ಮಾಡಿದರೆ ಸ್ವರ್ಗಮರ್ತ್ಯಪಾತಾಳವೆಂಬ ಮೂರು ಲೋಕವನ್ನೂ ಮುಂಚೆ ಜಯಿಸಿದ ನಿನ್ನ ದುಸ್ಸಹವಾದ ಬಾಹುಸಾಹಸದಿಂದ ಆಗಿರುವ ಕೀರ್ತಿಯು ನಿಜವಾಗಿಯೂ ಮಾಸುವುದು. ನಿನ್ನ ಪ್ರತಾಪಾಗ್ನಿಯು ಪೂರ್ತಿ ತಣ್ಣಗಾಗುವುದು. ಅಹಾ! ಕ್ರೂರಿಯೇ ನಿನ್ನ ಈ ತಂಗಿಯಮೇಲೆ ಕತ್ತಿಯನ್ನೆತ್ತದಿರು. ೫೦. ನಿಜವಾಗಿ ಈಕೆಯ ಮಕ್ಕಳು ನಿನಗೆ ಮಾರಕರೆಂದು ಭಾವಿಸಿದರೆ ಈಕೆಯಲ್ಲಿ ಜನಿಸುವ ಮಕ್ಕಳನ್ನು ಕೊಲ್ಲು. ಹರಸಿ, ಸೇಸೆಯನ್ನು ತಳಿದ ಕಯ್ಯಿಂದಲೇ ಹೂಮುಡಿದ

---

೧. ಕೀಟ್ವಾಳಿನ (ಕಖ) ೨. ಕಡುದಣ್ಣಸೇಱುಗು (ಕಖ)

ಆಂ ದಯೆಗೈದು ಕಾದನುಜೆಯಂ ವಸುದೇವಸಮೇತಮಂಬು[1]ಮ
ನ್ಮಂದಿರಮಧ್ಯಕೇಳಿಗೃಹದೊಳ್ ಸೆಱೆಗೆಯ್ದು ತದೀಯಗರ್ಭನಿ
ಷ್ಯಂದಿಗಳಪ್ಪ ಕೂಸುಗಳನಿಂ ಕೊಲಲಿರ್ದೆನದಿಂತುಟೆಂದು ನೋ
ಟ್ಪಂದನುರೂಪಮಾದುದಶರೀರಸಹೋಕ್ತಿಗೆ ನಾರದೇರಿತಂ ೫೧

ವ।। ಎಂದು ನುಡಿದು ದೇವಕೀಗರ್ಭಾರ್ಭಕದ್ವೇಷಿ ಸುರದ್ವೇಷಿ ಕತಿಪಯದಿನಂಗಳಂ ಕಟೆಪಲಿತ್ತಲ್

ನಂದನವನಮಧ್ಯದ ಕೊಳ
ದಿಂದಗಲದ ಹಂಸಮಿಥುನಮೆನೆ ಕಂಸಮಹಾ
ಮಂದಿರಮಧ್ಯದ ಮಣಿಗೃಹ
ದಿಂದಗಲದೆ ನಲಿಯುತಿರ್ದರಾ ದಂಪತಿಗಳ್ ೫೨

ವ।। ಅಂತು ನಿಕಾಮಪ್ರೇಮದಿಂ ಕಾಮಸುಖಮನನುಭವಿಸುತ್ತಿರಲನ್ಯೋನ್ಯಪ್ರೀತಿ ಬೀಜದಿಂ ಜನಿಸಿದ, ನಿರ್ಭರಸ್ವೇದಸಲಿಲಸೇಚನದಿಂ ನಯಂಬಡೆದ, ಪುಳಕಜಾಳದಿಂ ಜಾಳಕಮನಪ್ಪುಕೆಯ್ವು ಚುಂಬನಾದಿಬಹುಕಳಾಕಳಾಪದಿಂ ಪಲ್ಲವಿಸಿದ, ಸಮಪದಸ್ಖಲನಸುಖ ನಿಮಿಾಳಿತೋನ್ಮೀಲಿತನಯನಂಗಳಿಂ ಮುಕುಳಿತಮುಂ ಕುಸುಮಿತಮುಮಾದ, ನಿಶ್ವಾಸಪವನನಿಂ ಪರಿಮಳಮಂ ಬೀಱುವ ವಧೂವರ ರಾಗವಿಷಯವಲ್ಲರಿ ಫಲಿತಮಾದುದೆನಿಸಿ

ಈ ಬಾಲೆಯನ್ನು ಹೇಗೆ ತಾನೆ ಕಯ್ಯಾರೆ ಕೊಲ್ಲುವೆ?" ಎಂದು ವಸುದೇವನು ಅತಿಭೀತಿಯಿಂದ ಬಾಸಿಗವನ್ನು ಕಟ್ಟಿದ್ದ ತಲೆಯಿಂದಲೇ ನನಗೆ ಎರಗಿದನು. ವ।। ಅದನ್ನು ಕಂಡು, ನಾನು ದಯೆಯಿಂದ ತಂಗಿಯನ್ನು ರಕ್ಷಿಸಿ ವಸುದೇವನೊಡನೆ ಅವಳನ್ನು ನನ್ನ ಅರಮನೆಯ ಮಧ್ಯದ ಕೇಳೀಗೃಹದಲ್ಲಿ ಸೆರೆಯಲ್ಲಿಟ್ಟು, ಅವಳ ಗರ್ಭದಿಂದ ಜನಿಸುವ ಕೂಸುಗಳನ್ನು ಅಂದಂದೇ ಕೊಲ್ಲಲಿರುವೆನು. ೫೧. ಆ ವಿಚಾರವಿಷ್ಟು ಯೋಚಿಸಿ ನೋಡಿದರೆ ನಾರದನು ಹೇಳಿದುದು ಅಶರೀರವಾಣಿಗೆ ಅನುರೂಪವಾಗಿಯೇ ಇದೆ" ವ।। ಎಂದು ಹೇಳಿ, ದೇವಕೀಗರ್ಭಶಿಶುದ್ವೇಷಿಯಾದ ಕಂಸನು ಕೆಲವು ದಿನಗಳನ್ನು ಕಳೆಯಲು ೫೨. ಆ ದಂಪತಿಗಳು ಕಂಸನರಮನೆಯ ಮದ್ಯದ ಮಣಿಗೃಹದಲ್ಲಿ ಇತ್ತ ಕಡೆ ನಂದನವನ ಮಧ್ಯದ ಕೊಳದಿಂದ ಅಗಲದ ಹಂಸ ದಂಪತಿಗಳಂತೆ ಅಗಲದೆ ನಲಿಯುತ್ತಿದ್ದರು. ವ।। ಹಾಗೆ ಅತಿಪ್ರೇಮದಿಂದ ಕಾಮಸುಖವನ್ನನುಭವಿಸುತ್ತಿರಲು ಅನ್ಯೋನ್ಯಪ್ರೀತಿಬೀಜದಿಂದ ಜನಿಸಿ, ಹೆಚ್ಚಾದ ಬೆವರುನೀರಿನಿಂದ ಉಬ್ಬಿ ನಯವಾಗಿ ರೋಮಾಂಚನದಿಂದ ದೊಡ್ಡಮೊಳಕೆಯಾಗಿ ಮುತ್ತಿಡುವುದೇ ಮೊದಲಾದ ಬಹು ಕಲೆಗಳ ಸಮೂಹದಿಂದ ಚಿಗುರಿ ಸಮಪದ ಸ್ಖಲನಸುಖದಿಂದ ಮುಚ್ಚಿ ತೆರೆಯುವ ಕಣ್ಣುಗಳ ಮೊಗ್ಗು ಹೂಗಳುಳ್ಳುದಾಗಿ ನಿಶ್ವಾಸವಾಯುವಿನಿಂದ ಸುವಾಸನೆಯನ್ನು ಬೀರುವ ಆ ದಂಪತಿಗಳ ರಾಗ(ಕಾಮ)ವಿಷಯಲತೆಯು ಫಲಿಸಿತೆಂಬಂತೆ ಆಯಿತು.

---

೧. ತನ್ಮಂದಿರ (ಕಖ)

ಆ ಗುಣವತಿ ಫಲವತಿ ತಾ
ನಾಗೆಯುಮಿದು ವಿಫಲಮೆಂದು ಪತಿಗುತ್ಸವಮಂ
[1]ತಾಗದು ಸಂಸೃತಿ ಫಲವತಿ
ಯಾಗಿರೆಯುಂ ಯೋಗಿಗುತ್ಸವಂ ಪುಟ್ಟದವೋಲ್ ೫೩

ವ॥ ಅನ್ನೆಗಂ ನವಮಾಸಂ ತೀವಿ ದೇವಕಿ [2]ಬೆಸಲೆಯಪ್ಪುದುಮದಂ ಗೃಹಾಧ್ಯಕ್ಷ ನಿಂದಾಕ್ಷಣದೊಳ್ ಕೇಳ್ದು ಕಂಸಂ ತದೀಯಬಾಲಹಿಂಸಾಪರನಾಗಿ ಸೂತಿಕಾಸದನಮಂ ಪೊಕ್ಕು, ವಿಕ್ರಾಂತಮಂತರಿಸೆ, ಪೆಂಪು ಸೊಂಪೞಿಯೆ, ಭುಜಬಳವೊಳಸರಿಯೆ, ಮಾನಂ ಮ್ಲಾನತೆಯನೆಯ್ದೆ, ಜಸಂ ಮಸುಳೆ, ಧೃತಿ ಗತಿಗಿಡೆ, ಪ್ರೊಡರ್ಪಡೆಯುಡುಗೆ, ಕರುಣವಪಸರಣಂಗೆಯ್ಯೆ, ರೂಢಿ [3]ಗೊಡ್ಡುಗೊಳೆ, ಧರ್ಮಂ ನಿರ್ಮದವಾಗೆ, ಮೈಮೆ ಮೆಯ್ಮಱೆಯೆ, ಪಾೞಿ ಪೂೞೆ, ಪೇಸುಗೆ ಪೆಸರೞಿಯೆ, ಹೇಯಂ ಮಾಯವಾಗೆ, ಸತ್ತ್ವಂ ಸತ್ತ್ವಂಗಿಡೆ, ಕಣ್ಬರಿ ಬೆಂಬರಿಯೆ, ಕುಲಂ ಮಲಿನವೆನಿಸೆ, ವಿಳಾಸವೋಸರಿಸೆ, ಬೆಡಂಗಡಂಗೆ, ಮೆಯ್ಯ ಮಾಸಾಱದ ಕೂಸಂ ತಲೆಕೆಳಗಾಗೆ ಪಿಡಿದುಕೊಂಡು ನಡೆವನ್ನಂ ಬೆನ್ನನೆ ಬೞಿಸಂದು ಮಂತ್ರಿಗಳಮಂತ್ರಮೆನೆ, [4]ವಯಸ್ಯರಪಹಾಸ್ಯಮೆನೆ, ಧರ್ಮಜ್ಞರಧರ್ಮಮೆನೆ, ವೃದ್ಧರಸಂಬದ್ಧಮೆನೆ, ಪಾರ್ಥಿವರಪಾರ್ಥಮೆನೆ, ಸೋದರರಪವಾದಮೆನೆ, ಸೇವ್ಯರಸೇವ್ಯಮೆನೆ, ಯೋಗಿಗಳಭಿಯೋಗಮೆನೆ, ಧಿಷಣರ್ವಿಷಮಮೆನೆ, ಶಿಷ್ಟರಶಿಷ್ಟಮೆನೆ, ವಂಶಜರವಂಶಮೆನೆ, [5]ಪರಿಚಾರರಪಚಾರಮೆನೆ, ನಾಕಿಗಳವಿವೇಕಮೆನೆ, ವಾರ್ತಿಕರಕೀರ್ತಿಯೆನೆ, ಮಾರ್ಗಣರಮಾರ್ಗಮೆನೆ,

೫೩. ಸಂಸಾರವು ಫಲವುಳ್ಳುದಾದರೂ ಯೋಗಿಗೆ ಅದರಿಂದ ಸಂತೋಷವುಂಟಾಗದಿರುವಂತೆ ಆ ಗುಣವತಿ ದೇವಕಿಯು ಗರ್ಭಫಲವತಿಯಾದರೂ ಇದು ವಿಫಲವಾಗುವುದೆಂಬುದರಿಂದ ವಸುದೇವನಿಗೆ ಅಷ್ಟು ಸಂತೋಷವುಂಟಾಗಲಿಲ್ಲ. ವ॥ ಅದುವರೆಗೆ ಒಂಭತ್ತು ತಿಂಗಳು ತುಂಬಿ ದೇವಕಿ ಹಡೆಯಲಾಗಿ ಅದನ್ನು ಗೃಹಾಧ್ಯಕ್ಷನಿಂದ ಆ ಕ್ಷಣದಲ್ಲೇ ಕೇಳಿ, ಕಂಸನು ಆಕೆಯ ಬಾಲನ ಹಿಂಸೆಯಲ್ಲಿ ಆಸಕ್ತನಾಗಿ, ಹೆರಿಗೆಯ ಮನೆಯನ್ನು ಹೊಕ್ಕು ಪರಾಕ್ರಮವು ದೂರವಾಗುವಂತೆಯೂ ಹಿರಿಮೆಯು ಸೊಂಪುಗೆಡುವಂತೆಯೂ ಬಾಹುಬಲವು ಒಳಸರಿಯುವಂತೆಯೂ ಗೌರವವು ಬಾಡುವಂತೆಯೂ ಯಶಸ್ಸು ಮಂಕಾಗುವಂತೆಯೂ ಧೈರ್ಯವು ಗತಿಗೆಡುವಂತೆಯೂ, ಪ್ರಕಾಶವು ಸಂಕುಚಿತವಾಗುವಂತೆಯೂ ಕರುಣರಸವು ಹಿಂದೋಡಿಹೋಗುವಂತೆಯೂ ರೂಢಿಯು ನಿಷ್ಫಲವಾಗುವಂತೆಯೂ, ಧರ್ಮವು ನಿರ್ಮದವಾಗುವಂತೆಯೂ ಮಹಿಮೆಯು ಮೈಮುರಿಯುವಂತೆಯೂ ಕ್ರಮವು ಹೂಳಿಹೋಗುವಂತೆಯೂ ಹೇಸಿಕೆಯು ಹೆಸರಿಲ್ಲದಂತಾಗುವಂತೆಯೂ ಹೇಯವು ಮಾಯವಾಗುವಂತೆಯೂ ಸತ್ವವು ಶಕ್ತಿಗುಂದುವಂತೆಯೂ ಕಣ್ನೋಟವು ಹಿಂದೋಡುವಂತೆಯೂ ಕುಲವು ಮಲಿನವೆನಿಸುವಂತೆಯೂ ವಿಳಾಸವು ಪಕ್ಕಸರಿಯುವಂತೆಯೂ ಬೆಡಗು ಅಡಗುವಂತೆಯೂ ಮೆಯ್ಯ ಮಾಸು ಆರದ ಕೂಸನ್ನು ತಲೆಯು ಕೆಳಗಾಗುವಂತೆ ಹಿಡಿದುಕೊಂಡು ನಡೆಯುವಾಗ ಹಿಂಬಾಲಿಸಿ ಬಂದ ಮಂತ್ರಿಗಳು ಇದು ಅಯುಕ್ತವೆಂದೂ ಸ್ನೇಹಿತರು ಅಪಹಾಸ್ಯಕರವೆಂದೂ

---

೧. ತಾಗದೆ (ಕಖ) ೨. ಬೆಸೆಯಪ್ಪುದನಱಿದುಮದಂ (ಕಖ) ೩. ಗೋಡುಗೊಳೆ (ಮೊಅ) ೪. ವೈಶ್ಯರಪಹಾಸ್ಯಮೆನೆ (ಕಖ) ೫. ಪರಿಚಾರರಪರಿಚಾರಮೆನೆ (ಕಖ)

ಬಂಧುಗಳಬಂಧುರಮೆನೆ, ವಂದಿಗಳ್ ನಿಂದ್ಯಮೆನೆ, ಮಾಗಧರಾಗದೆನೆ, ಸೂತರನೀತಿಯೆನೆ, ವಲ್ಲಭೆಯರ್ ಪೊಲ್ಲದೆನೆ, ಪುರಸ್ತ್ರೀಯರನ್ಯಾಯಮೆನೆ, ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ಳದೆ

ದಿವಿಜವಧಪಟುಗೆ ನಿನಗಭಿ
ಭವಮೀ ಶಿಶುವಧಮೆನಲ್ಕೆ ಮಾಣ್ಬೆನೆ ಮತ್ತೇ
ಭವಧಪ್ರಚಂಡಯಮದಂ
ಡವದೇಂ ಮಾಣ್ಬುದೆ ಪಿಪೀಲಿಕಾವಧವಿಧಿಯಂ ೫೪

ವ।। ಎಂದೊದಱಿ ಪಾಸಱೆಯೊಳ್ ಕೂಸನಪ್ಪಳಿಸಿ ಬಾಲನಿಬರ್ಹಣಗರ್ಹಣಾತಿರೇಕದಿಂ ಗತಶ್ರೀಕನಾಗಿ ನಿಜರಾಜಮಂದಿರಮಂ ಪೊಕ್ಕಂ, ಅದಲ್ಲದೆಯುಂ

ಕುತ್ಸಿತಮಿದೆಂಬಿನಂ ಪ್ರತಿ
ವತ್ಸರಮೀಕ್ರಮದೆ ಶಿಶುಗಳಾಱುಮನಟೆದಂ
ಹೃತ್ಸಂತಾಪದೆ ನಯನಗ
ಳತ್ಸಲಿಲಂ ಕುಚದೊಳಿಟೆಯೆ ದೇವಕಸುತೆಯಾ ೫೫

ಧರ್ಮಜ್ಞರು ಅಧರ್ಮವೆಂದೂ, ವೃದ್ಧರು ಅಸಂಬದ್ಧವೆಂದೂ, ರಾಜರು ಅಪಾರ್ಥವೆಂದೂ ಸಹೋದರರು ಅಪವಾದಕರವೆಂದೂ, ಸೇವ್ಯರು ಇದು ಮಾಡಬಾರದ ಕೆಲಸವೆಂದೂ ಯೋಗಿಗಳು ಅಕಾರ್ಯವೆಂದೂ, ವಿದ್ವಾಂಸರು ಇದು ವಿಷಮವೆಂದೂ, ಶಿಷ್ಟರು ದುಷ್ಟತನವೆಂದೂ, ಉತ್ತಮ ವಂಶೀಯರು ನಮ್ಮ ವಂಶಕ್ಕೆ ತಕ್ಕದ್ದಲ್ಲವೆಂದೂ, ಪರಿಚಾರಕರು ಇದು ಅಪಚಾರವೆಂದೂ, ದೇವತೆಗಳು ಅವಿವೇಕವೆಂದೂ, ಉದ್ಯಮಜೀವಿಗಳು ಅಕೀರ್ತಿಕರವೆಂದೂ, ಮಾರ್ಗಣ (ಪ್ರೇಕ್ಷಕ)ರು ಅಮಾರ್ಗವೆಂದೂ, ಬಂಧುಗಳು ಅಬಂಧುರವೆಂದೂ, ವಂದಿಗಳು ನಿಂದ್ಯವೆಂದೂ, ಮಾಗಧರು ಆಗದೆಂದೂ, ಸೂತರು (ಸಾರಥಿಗಳು) ಅನೀತಿಯೆಂದೂ, ವಲ್ಲಭೆ (ಪ್ರಿಯೆ)ಯರು ಹೊಲ್ಲದೆಂದೂ, ಪುರಸ್ತ್ರೀಯರು ಅನ್ಯಾಯವೆಂದೂ ಸಮುದ್ರದ ಘೋಷದಂತೆ ಘೋಷಿಸುತ್ತಿದ್ದರೂ ಕೇಳದೆ ದೇವತೆಗಳನ್ನು ಕೊಲ್ಲುವುದರಲ್ಲಿ ಸಮರ್ಥನಾದ ನಿನಗೆ ಈ ಶಿಶುವಧೆಯು ಅಪಜಯದಂತೆ ಹೀನವಾದುದು ಎಂದರೆ ಬಿಡುವೆನೆ! ಮದ್ದಾನೆಯನ್ನು ಕೊಲ್ಲುವುದರಲ್ಲಿ ಪ್ರಚಂಡವಾದ ಯಮದಂಡವು ಇರುವೆಗಳ ಕೊಲೆಯ ನಿಯಮವನ್ನು ಬಿಡುವುದೇನು?" ವ।। ಎಂದು ಕೂಗಿ ಹೇಳಿ, ಕೂಸನ್ನು ಹಾಸುಗಲ್ಲಿನ ಮೇಲೆ ಅಪ್ಪಳಿಸಿ (ಕೊಂದು) ಬಾಲವಧೆಯ ಅತಿನಿಂದನೆಯಿಂದ ಗತಶ್ರೀಕನಾಗಿ ಕಳೆಗುಂದಿ, ತನ್ನ ಅರಮನೆಯನ್ನು ಹೊಕ್ಕನು, ವ।। ಅದೂ ಅಲ್ಲದೆ ೫೫. ಎಲ್ಲರೂ ಇದು ಹೀನಕಾರ್ಯವೆನ್ನುತ್ತಿದ್ದರೂ ಪ್ರತಿವರ್ಷವೂ ಇದೇ ರೀತಿಯಾಗಿ ದೇವಕಿಗೆ ಹೃದಯ ಸಂತಾಪದಿಂದ ಕಣ್ಣೀರಿನ ಧಾರೆಯು ಸ್ತನಗಳ ಮೇಲಿಳಿಯುವಂತೆ ಅವಳ ಆರುಮಕ್ಕಳನ್ನೂ ಕೊಂದನು. ಪ್ರಳಯಕಾಲದ ಯಮನಂತಿರುವ ಕಂಸನಿಂದ ಆರು ಮಕ್ಕಳೂ ಲೋಕವೇ ದುಃಖಿಸುವಂತೆ ಹೀಗೆ ನಾಶವಾದುದರಿಂದ ದೇವಕಿಯು

ಲೋಕಮಟಲ್ವಿನಂ ಶಿಶುಗಳಾಱುಮವೀ ಕ್ರಮದಿಂದೆ ಕಾಲಕಾ
ಲಾಕೃತಿಕಂಸನಿಂ ಲಯಮನೆಯ್ದಿರೆ ದೇವಕಿ ಪೊತ್ತಳಂತತಿ
ವ್ಯಾಕುಳವೃತ್ತಿಯಂ ನಿಜಫಲಸ್ತಬಕಂ ವನಮತ್ತಹಸ್ತಿಹೇ
ಳಾಕರಭಗ್ನವಾಗೆ ಕಡುಜಾಡಟೆದೊಂದು ನವಾಮ್ರವಲ್ಲಿವೊಲ್ ೫೬

ವ|| ಅನ್ನೆಗಮತ್ತಲ್ ಪನ್ನಗಶಯನನವತರಣೋದ್ಯೋಗದಿಂ ನಾಗೇಂದ್ರನಂ ನೋಡಿ

ಎಲೆ ಫಣಿರಾಜ ನಿನ್ನ ಫಣರತ್ನಸಹಸ್ರದ ಮಧ್ಯರತ್ನದೊಳ್
ಜಲಧಿವೃತೋರ್ವಿಯಂ ಸರಸಕಿಂಶುಕಕುಟ್ಮಳಸಂಗಿಭೃಂಗಿಯಂ
ಗೆಲೆ ತಳೆದಾ ಮಹಾಮಹಿಮ ನೀಂ ತಳೆದುರ್ವರೆಗಾದ ಭಾರಮಂ
ತೊಲಗಿಪನಿಂ ಮದಂಶವಿಭುವಾ ವಿಭುಗಗ್ರಜನಾಗು ಲೀಲೆಯಿಂ ೫೭

ಎಲೆ ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆಯುಷ್ಮ
ತ್ಕಲೆ ದಿವ್ಯಾಕಾರದಿಂ ಪುಟ್ಟುಗೆ ಭಗವತಿಯುಂ ಚಂಡಿಯುಂ ದುರ್ಗಿಯುಂ ವೀ
ರಲುಲಾಯಧ್ವಂಸಿಯುಂ ಕನ್ನೆಯುಮೆನಿಸುಗೆ ಪೂಜಿಕ್ಕೆ ಮಾಂಸಾದಿ ನಾನಾ
ಬಲಿಯಿಂ ದೇವರ್ ನರರ್ ತ್ವಚ್ಚರಣಕಮಲಮಂ ಶ್ರೀಜಯಶ್ರೀನಿಮಿತ್ತಂ ೫೮

ಮೊದಲೊಳ್ ನೀಂ ದೇವಕೀಗರ್ಭದ ಶಿಶುವನನಂತಾಂಶಮಂ ಕರ್ಷಣಂಗೆ
ಯ್ದದನಿಂಬಿಂ ತತ್ಸಪತ್ನೀಜಠರದೊಳಿರಿಸಲ್ಲಿಂ ಬಟಿಕ್ಕಂ ವ್ರಜಸ್ಥಾ
ನದ ನಂದಸ್ತ್ರೀಯ ಗರ್ಭಕ್ಕವತರಿಸಿ ಮದೀಯಾನುಸಂಜಾತೆಯಾಗೀ
ತ್ರಿದಶತ್ರಾಣಾರ್ಥಮಾಂ ದೇವಕಿಯ ಬಸಿಱೊಳಂಶಾಂಶದಿಂ ಪುಟ್ಟದಪ್ಪೆಂ ೫೯

ಕಾಡಿನ ಮದ್ದಾನೆಯಿಂದ ತನ್ನ ಹಣ್ಣುಕಾಯ್ಗಳ ಗೊಂಚಲುಗಳನ್ನು ಕಳೆದುಕೊಂಡು ಕಂದಿ ಕುಂದಿದ ಎಳೆಯಮಾವಿನಂತೆ ಅತಿ ವ್ಯಾಕುಲಕ್ಕೆ ಈಡಾದಳು. ವ|| ಅಷ್ಟರಲ್ಲಿ ಆ ಕಡೆ ವಿಷ್ಣುವು ಅವತರಿಸುವ ಉದ್ದೇಶದಿಂದ ಆದಿಶೇಷನನ್ನು ನೋಡಿ ೫೭. ಎಲೈ ಸರ್ಪರಾಜ, ನಿನ್ನ ಹೆಡೆಯ ಸಾವಿರ ರತ್ನಗಳಲ್ಲಿ ಮಧ್ಯದ ರತ್ನದಿಂದ ಸಾಗರವು ಸುತ್ತಿರುವ ಭೂಮಿಯನ್ನು ಸರಸವಾದ ಮುತ್ತುಗದ ಮೊಗ್ಗಿನ ಮೇಲೆ ಕುಳಿತ ತುಂಬಿಯಂತೆ ತಳೆದಿರುವ ಮಹಾಮಹಿಮನೇ! ನೀನು ಧರಿಸಿರುವ ಭೂಮಿಯ ಭಾರವನ್ನು ಇನ್ನು ನನ್ನ ಅಂಶದಿಂದ ಉದಿಸುವ ಪ್ರಭುವು ತೊಲಗಿಸುವನು. ಆ ವಿಭುವಿಗೆ ನೀನು ಲೀಲೆಯಿಂದ ಅಣ್ಣನಾಗು. ೫೮. ಎಲೆ ಮಾಯಾದೇವಿ, ಲೋಕತ್ರಯ ಜನನಿ! ನನ್ನ ಆಜ್ಞೆಯಿಂದುದಿಸಿದವಳೇ! ನಿನ್ನ ಕಲೆಯು ದಿವ್ಯಾಕಾರದಿಂದ ಭೂಮಿಯಲ್ಲಿ ಉದಿಸಲಿ. ಅವಳು ಭಗವತಿ ಚಂಡಿ, ದುರ್ಗಿ, ಮಹಿಷಾಸುರಮರ್ದಿನಿ, ಕನ್ಯೆ ಎಂಬ ಹೆಸರುಗಳಿಂದಲೂ ಪ್ರಸಿದ್ಧವಾಗಲಿ. ದೇವತೆಗಳೂ ಮನುಷ್ಯರೂ ಶ್ರೀಜಯಶ್ರೀಗಳಿಗಾಗಿ ನಿನ್ನ ಚರಣಕಮಲವನ್ನು ಮಾಂಸಾದಿ ನಾನಾ ಬಲಿಯಿಂದ ಪೂಜಿಸಲಿ. ನೀನು ಮೊದಲು ದೇವಕಿಯ ಗರ್ಭದಲ್ಲಿರುವ ಅನಂತಾಂಶದ ಶಿಶುವನ್ನು ಹೊರತೆಗೆದು, ಅದನ್ನು ಅವಳ ಸವತಿಯ ಗರ್ಭದಲ್ಲಿರಿಸು. ಆಮೇಲೆ ೫೯. ಗೋಕುಲದ ನಂದಗೋಪನ ಪತ್ನಿಯ ಗರ್ಭಕ್ಕೆ ಅವತರಿಸಿ, ನನಗೆ ತಂಗಿಯಾಗು. ಈ ದೇವತೆಗಳ ರಕ್ಷಣಾರ್ಥವಾಗಿ ನಾನು ಅಂಶಾಂಶದಿಂದ ದೇವಕಿಯ

ವ॥ ಎಂದು ಬೆಸಸುತಿರ್ಪನ್ನೆಗಮಿತ್ತಲೊಂದುದಿವಸಂ ದೇವಕೀದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ ಮಂಗಳಪ್ರಸಾಧನಮನಪ್ಪುಕೆಯ್ದು ವಸುದೇವನೊಡನೆ ಧವಳ ಶಯ್ಯಾತಳಮನಲಂಕರಿಸಿ ಬಹುವಿಧಪ್ರಣಯಕೇಳೀಕಳಾವಿಡಂಬಸಂಭೋಗಸುಖಸುಧಾರಸತೃಪ್ತಿಯಿಂ ಸುಖಸುಪ್ತೆಯಾಗಿರ್ಪಿನಂ

ಧರೆಗವತರಿಸುವ ಲಕ್ಷ್ಮೀ
ವರನವತಾರಕ್ಕೆ ಪೀಠಿಕಾಪ್ರಕರಣದಂ
ತಿರೆ ಬಂದನಂತಭೋಗೀ
ಶ್ವರನಾ ದೇವಕಿಯ ಗರ್ಭದೊಳ್ ಜನಿಯಿಸಿದಂ ೬೦

ವ॥ ಅಂತನಂತನನಂತಶಯನನಾಜ್ಞೆಯಿಂ ಬಂದು ದೇವಕಿಯ ಗರ್ಭದೊಳ್ ನೆಲಸೆ ಕತಿಪಯಮಾಸಂಗಳ್ಗೆ

ವನಜಾಕ್ಷಂ ಬೆಸವೇೞ್ದುದಂ ನೆನೆದು ಮಾಯಾದೇವಿ ಬಂದೆಯ್ದೆ ಕಂ
ಸನ ಮಾಡಿಪ್ಪೊಂದಪಚಾರದಿಂದಿೞಿದುದಿಂದೀ ದೇವಕೀಗರ್ಭಮೆಂ
ಬಿನಮಾ ದೇವಿಯ ಗರ್ಭದರ್ಭಕನನತ್ತಲ್ ಗೋಕುಲಕ್ಕುಯ್ದು ಮೋ
ಹ[1]ನಸಾಮರ್ಥ್ಯದೆ ನಿಂದು ಯೋಜಿಸಿದಳಂತಾ ರೋಹಿಣೀಗರ್ಭದೊಳ್ ೬೧

ವ॥ ಆಗಳಾ ದೇವಕಿ ಪುಷ್ಪವತಿಯಾದಂತೆ ಮಣಿಭೂಷಣಂಗಳಂ ತೊಲಗಿಸಿ ಕಂಸ ಕೃತಾಪಚಾರದಿಂ ನಿರ್ವಿಚಾರಮೆ ಪೊಲ್ಲಮೆಯಾದುದೆಂದು ಖೇದಿಸುತ್ತಿರಲದಂ ಕಂಡು

ಗರ್ಭದಲ್ಲಿ ಹುಟ್ಟುವೆನು." ವ॥ ಎಂದು ಹೇಳಿದನು. ಈ ಸಮಯದಲ್ಲಿ ಇತ್ತಕಡೆ ಒಂದು ದಿವಸ ದೇವಕೀದೇವಿ ಪುಷ್ಪವತಿಯಾಗಿ ನಾಲ್ಕನೆಯ ದಿನ ಮಂಗಳಸ್ನಾನವಾದ ಬಳಿಕ ಮಂಗಳಾಲಂಕಾರವನ್ನು ಪಡೆದು, ವಸುದೇವನೊಡನೆ ಬಿಳಿಯ ಹಾಸಿಗೆಯನ್ನಲಂಕರಿಸಿ ಬಹುವಿಧದ ಪ್ರೀತಿ ಕೇಳೀ ಕಲಾವಿಡಂಬ ಸಂಭೋಗ ಸುಖಸುಧಾರಸ ತೃಪ್ತಿಯಿಂದ ಸುಖದಿಂದ ನಿದ್ರಿಸುತ್ತಿದ್ದಳು. ೬೦. ಭೂಮಿಗವತರಿಸುವ ಲಕ್ಷ್ಮೀಪತಿಯ ಅವತಾರಕ್ಕೆ ಪೀಠಿಕಾ ಪ್ರಕರಣರದಂತೆ ಆದಿಶೇಷನು ಬಂದು ದೇವಕಿಯ ಗರ್ಭದಲ್ಲಿ ಜನಿಸಿದನು. ವ॥ ಹಾಗೆ ಅನಂತನು ಅನಂತಶಯನನ ಆಜ್ಞೆಯಿಂದ ಬಂದು ದೇವಕಿಯ ಗರ್ಭದಲ್ಲಿ ನೆಲೆಸಲು ಕೆಲವು ತಿಂಗಳುಗಳಿಗೆ ೬೧. ಕಮಲಾಕ್ಷನು ಆಜ್ಞಾಪಿಸಿದುದನ್ನು ನೆನೆದು ಮಾಯಾದೇವಿಯು ಬಂದು, ಕಂಸನು ಮಾಡಿದ ಅತ್ಯಪಚಾರದಿಂದ ಈ ದೇವಕಿಯ ಗರ್ಭವು ಇಳಿದುಹೋಯಿತೆನ್ನುವಂತೆ ಗರ್ಭದ ಶಿಶುವನ್ನು ತೆಗೆದೆತ್ತಿಕೊಂಡು ಅತ್ತ ಗೋಕುಲಕ್ಕೆ ಹೋಗಿ ಮೋಹನ ಸಾಮರ್ಥ್ಯದಿಂದ ನಿಂತು, ಆ ರೋಹಿಣಿಯ ಗರ್ಭದಲ್ಲಿ ಸೇರಿಸಿದಳು. ವ॥ ಆಗ ದೇವಕಿಯು ಪುಷ್ಪವತಿಯಾದಂತೆ ರತ್ನಾಲಂಕಾರಗಳನ್ನು ತೆಗೆದಿಟ್ಟು ಕಂಸನು ಮಾಡಿದ ಅಪಚಾರದಿಂದಲೇ ನಿಸ್ಸಂಶಯವಾಗಿ ಕೇಡಾಯಿತೆಂದು ಖೇದಗೊಂಡಳು.

೧. ಕುಸಾಮರ್ಥ್ಯವಿನಿಂತು (ಕ)

ಸ್ನಿಗ್ಧತರಾಂಗಚೇಷ್ಟೆ ವದನೇಂದುಮರೀಚಿ ಕಪೋಲ[1]ಪಾಂಡುವಿಂ
ದೃಗ್ಧವಳಾಂಶುವಂಬಿಕೆಗೆ ಗರ್ಭದ ಚಿಹ್ನಮದೆತ್ತವೋದುದೀ
ಮುಗ್ಧೆಗದೆಂತು ಪುಟ್ಟಿದುದೋ ಖೇದಮೆನುತ್ತುಮೆ ತತ್ತ್ವಪಂಚಸಂ
ದಿಗ್ಧೆಯರಾತ್ಮಮೋಹಶಿಖಿ[2]ದಗ್ಧೆಯರೀಕ್ಷಿಸಿದರ್ ವಿದಗ್ಧೆಯರ್ ೬೨

ವ॥ ಅವರೊಳಗೊರ್ಬಳ್ ಮನದನ್ನಳಪ್ಪ ಕೆಳದಿ ತತ್ತ್ವಪಂಚಮಂ ತಿಳಿಯಲೆಂದಾ ದೇವಕಿಯಂ ಮೆಲ್ಲನೆ ಪೊರ್ದಿ

ಉಗುಬ್ಬುವುದಿಲ್ಲ ಚಂದ್ರಿಕೆಯನುಜ್ವಳಲೋಚನೆ ಲೋಚನಂ ಮನಂ
ಬುಗೆ ನಯಮಂ ಪುದುಂಗೊಳಿಸಿತಿಲ್ಲ ಲತಾಂಗಿ ಲತಾಂಗಲೇಖೆ ಮೆ
ಲ್ನಗೆವೆಳಗಂ ತುಳುಂಕಿದಪುದಿಲ್ಲೆಸೆವಿಂದುಮುಖೀ[3] ಮುಖೇಂದುವೇ
ಕೆಗ ನಿನಗಾವಕಾರಣದಿನಾದುದು ಪೇಟೆನಿತೊಂದು ಬೇವಸಂ ೬೩

ವ॥ ಎಂತು ಬೆಸಗೊಳ್ವುದುಂ

ಮುತ್ತಂ ಕೊಯ್ದೆಟಲಿಕ್ಕಿದ
ಬಿತ್ತರದಿಂ ಸುರಿವ ತೋರಕಣ್ಣನಿಯಿಂ ತ
ನ್ನುತ್ತುಂಗಕುಚಕೆ ಹಾರಮ
ನಿತ್ತಳ್ ಸತಿಯಿತ್ತುದಿಲ್ಲ ಸಖಿಗುತ್ತರಮಂ ೬೪

ವ॥ ಆಗಳ್ ದೇವಕಿ ಮನವನೆಂತಾನುಂ ಸಂತೈಸಿ ಕೆಳದಿಗಿಂತೆಂದಳ್

ಅದನ್ನು ಕಂಡು, ೬೨. "ಈ ಅಂಬಿಕೆಯ ಮನೋಹರವಾದ ಅಂಗಚಲನೆ ಮುಖಚಂದ್ರಕಾಂತಿ ಕೆನ್ನೆಯ ಬಿಳುಪು ಕಣ್ಣಿನ ಬಿಳಿಯ ಕಾಂತಿ ಮೊದಲಾದ ಗರ್ಭಚಿಹ್ನೆಯು ಎಲ್ಲಿ ಹೋಯಿತು? ಈ ಸುಂದರಿಗೆ ಅದೇಕೆ ಖೇಡವುಂಟಾಯಿತೋ" ಎಂದು, ವಿದ್ಯಾವತಿಯರಾದರೂ ಆ ವಿಚಾರದಲ್ಲಿ ಸಂದೇಹವುಳ್ಳವರಾದ ಸಖಿಯರು ತಮ್ಮ ಮೋಹಾಗ್ನಿಯಿಂದ ತೃಪ್ತರಾಗಿ ನೋಡಿದರು. ವ॥ ಅವರಲ್ಲಿ ದೇವಕಿಗೆ ಪ್ರಿಯಳಾದ ಗೆಳತಿಯೊಬ್ಬಳು ಆ ವಿಚಾರವನ್ನು ತಿಳಿಯಬೇಕೆಂದು ದೇವಕಿಯ ಸಮೀಪಕ್ಕೆ ಮೆಲ್ಲಗೆ ಹೋಗಿ, ೬೩. "ನಿನ್ನ ಹೊಳಪುಗಣ್ಣು, ಬೆಳದಿಂಗಳನ್ನು ಏಕೆ ಉಗುಳುತ್ತಿಲ್ಲ? ಲತಾಂಗೀ ನಿನ್ನ ಲತಾಂಗಕಾಂತಿಯು ಮನೋಹರವಾಗಿ ಕೋಮಲತೆಯನ್ನು ಏಕೆ ತಳೆದಿಲ್ಲ? ಚಂದ್ರಮುಖೀ, ನಿನ್ನ ಮುಖಚಂದ್ರನು ಕಿರುನಗೆಯ ಬೆಳಕನ್ನು ಏಕೆ ತುಳುಕಿಸುತ್ತಿಲ್ಲ. ನಿನಗೆ ಯಾವ ಕಾರಣದಿಂದ ಇಷ್ಟೊಂದು ಚಿಂತೆಯುಂಟಾಯಿತು. ಹೇಳು" ವ॥ ಎಂದು ಕೇಳಿದಳು. ದೇವಕಿಯು ಮುತ್ತಿನ ಸರವನ್ನು ಕೊಯ್ದು ಜೋಲು ಬಿಟ್ಟಂತೆ ಸುರಿಯುವ ದಪ್ಪ ಕಣ್ಣೀರಿನ ಹನಿಗಳಿಂದ ತನ್ನ ಉನ್ನತವಾದ ಸ್ತನಕ್ಕೆ ಹಾರವನ್ನು ಇತ್ತಳೇ ಹೊರತು ಸಖಿಗೆ ಉತ್ತರವನ್ನು ಈಯಲಿಲ್ಲ. ವ॥ ಹಾಗೆ ಸ್ವಲ್ಪ ಕಾಲವಿದ್ದು, ಹೇಗೋ ಮನಸ್ಸನ್ನು

೧ ಪಾಂಡುವೀ (ಮೊಅ) ೨ ದಗ್ಧೆಯನೀಕ್ಷಿಸಿದರ್ (ಕಖ) ೩ ಮುಖೇಂದುವೇಕೆಗೆ (ಮೊಅ)

ಪ್ರಸವಸಮಯಮನೆ ಪಾರ್ದಿ
ರ್ದಸುರಂ ಬಂದೆನ್ನ ಶಿಶುವನುಯ್ವುದುಗೆಟ್ಟೀ
ಬಸಿಱೊಳ್ ಕರಗಿಸೆ ಪಡೆದೆಂ
ಪೊಸತಪ್ಪದವಟಲನೆನ್ನೊಳಿಂದಿಂದುಮುಖೀ ೬೫

ಕಳಹಂಸಂ ಸುಟಿಯದ ಪೂ
ಗೊಳನಮೃತ ಮರೀಚಿಯಿಲ್ಲದಂಬರಚಕ್ರಂ
ಕಳಭಂ ಸಂಚರಿಸದ ವನ
ವಳಯಂ ಸುತನಾಡದಂಗಳಂ ರಂಜಿಕುಮೇ ೬೬

ಮೊಗಮಂ ನೋಡುವ ಲಲ್ಲೆಗೆಯ್ವ [೧]ಮೊಲೆಯುಂಬಬ್ಬಬ್ಬಜಾಬೆಂಬ ಕೆ
ಮ್ಮಗೆ ಕಾಲ್ಪತ್ತುವ ದೂರದಿಂದೆ ಪರಿತಂದಪ್ಪಪ್ಪೆನುತ್ತಪ್ಪುವೊ
ಯ್ಯಗೆ ಚೆಯ್ಯಾಡುವ ಮೇಲುದಂ [೨]ಮುಸುಕಿಡುತ್ತೋಯೆಂಬ ದಾಯೆಂಬ ಮು
ದ್ದುಗಳಂ ಬೀಱುವ ಕಂದನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೋ ೬೭

ಆನತಭೂಮಿಪಾಲಕಕುಲಂಗೆ ಹಿಮಾಂಶುಕುಲಂಗೆ ಕೀರ್ತಿಸಂ
ತಾನಕುಲಂಗೆ ಮೈಮೆಯ ಕುಲಾಂಗನೆಯಪ್ಪಿನಿತರ್ಕೆ ನೋಂತೆನಾಂ
ನೋನೆನೆ ನೋಡೆ ಕಂಸನ ವಿಜೃಂಭಣಮಂ ಜಯಿಸಲ್ ಸಮರ್ಥನಂ
ಭೂನುತನಂ ಯಶೋವಿದಿತನಂ ಸುತನಂ ಪಡೆವೊಂದು ನೋಂಪಿಯಂ ೬೮

ಸಮಾಧಾನಮಾಡಿಕೊಂಡು, ಗೆಳತಿಗೆ ಹೀಗೆಂದಳು. ೬೫. "ಚಂದ್ರಮುಖೀ ಹೆರಿಗೆಯ ಸಮಯವನ್ನು ನಿರೀಕ್ಷಿಸುತ್ತಿದ್ದ ರಾಕ್ಷಸನು ಬಂದು ನನ್ನ ಶಿಶುವನ್ನು ತೆಗೆದುಕೊಂಡು ಹೋಗದೆ ಬಸಿರಿನಲ್ಲೇ ಅದನ್ನು ಕರಗಿಸಿದುದರಿಂದ ಹೊಸಬಗೆಯ ಸಂಕಟವನ್ನು ಪಡೆದೆನು. ೬೬. ಇಂಪಾಗಿ ಧ್ವನಿ ಮಾಡುವ ಹಂಸವು ಸಂಚರಿಸದ ಹೂವಿನ ಕೊಳವೂ, ಚಂದ್ರನಿಲ್ಲದ ಆಕಾಶಮಂಡಲವೂ, ಮೂವತ್ತು ವಯಸ್ಸಿನ ಆನೆಯು ಸಂಚರಿಸದ ವನಸ್ಥಳವೂ ಮಗನಾಡದಿರುವ ಮನೆಯ ಅಂಗಳವೂ ರಂಜಿಸುವುದೇ! ೬೭. ಮುಖವನ್ನು ನೋಡುವ, ಲಲ್ಲೆಗೆಯ್ಯುವ, ಮೊಲೆಯುಂಬ ಅಬ್ಬಬ್ಬ ಜೂಬೆನ್ನುವ ಸುಮ್ಮನೆ ಕಾಲಮೇಲೇರುವ, ದೂರದಿಂದ ಓಡಿಬಂದು, ಅಪ್ಪಿಕೊ ಅಪ್ಪಿಕೊ ಎನ್ನುತ್ತ ತಬ್ಬಿಕೊಳ್ಳುವ, ಮೆತ್ತಗೆ ಬಾಲಲೀಲೆಯಾಡುವ ಮೇಲು ಸೆರಗನ್ನು ಮುಚ್ಚಿಕೊಂಡು ಓ, ದಾ ಎನ್ನುವ ಮುದ್ದುಗಳನ್ನು ಬೀರುವ ಕಂದನೊಡನೆ ನಲಿಯುವ ಹೆಣ್ಣು ಯಾವ ವ್ರತವನ್ನು ಆಚರಿಸುವಳೋ! ೬೮. ರಾಜಸಮೂಹನಮಸ್ಕೃತನೂ ಚಂದ್ರವಂಶೀಯನೂ ಬಹು ಕೀರ್ತಿವಂತರ ಕುಲದಲ್ಲಿ ಜನಿಸಿದವನೂ ಆದವನಿಗೆ ಮಹಿಮೆಯ ಕುಲಪತ್ನಿಯಾಗುವಷ್ಟಕ್ಕೆ ನಾನು ಪುಣ್ಯ ಮಾಡಿದೆನು. ಕಂಸನ ಕ್ರೂರೌದ್ಧತ್ಯವನ್ನು ಜಯಿಸಲು ಸಮರ್ಥನೂ ಭೂನುತನೂ ಕೀರ್ತಿವಂತನೂ ಆದ ಮಗನನ್ನು ಪಡೆಯುವ ವ್ರತವೊಂದನ್ನು ಮಾಡಲಿಲ್ಲವೇನೋ?" ವ॥ ಎಂದಳು.

---

೧. ಮೊಲೆಯುಣ್ಬಬ್ಬಜ್ಜಾಬೆಂಬ (ಖಮೊಅ) ೨. ಮುಸುಕಿದತ್ತೋಯೆಂಬ (ಕಖಗ)

ವ॥ ಎನಲತಿ ಪ್ರೌಢೆಯೆನಿಸಿದ ಕೆಳದಿ

ಎನಸುಂ ನಿನ್ನ ತಪಕ್ಕೆ ಮೆಚ್ಚಿ ವರವಿತ್ತಂ ಶ್ರೀವರಂ ತಾನೆ ನಂ
ದನನಪ್ಪೆಂ ನಿನಗೆಂದು ಪೂರ್ವಭವದೊಳ್ ವೃದ್ಧೋಕ್ತಿಯಿಂ ದೇವಿ ಕೇ
ಳ್ದೆನಿದಂ ನೀಂ ಪಡೆದಪ್ಪೆಯಿನ್ನವಿತಥಂ ಕ್ಷತ್ರಾಧಮಾಕ್ಷೌಹಿಣೀ
[1]ವನದಾಹೋಗ್ರ ಕೃಶಾನುವಂ ರಿಪುರವಿಸ್ವರ್ಭಾನುವಂ ಸೂನುವಂ ೬೯

ವ॥ ಎಂದು ನುಡಿಯೆ

ನವಘನಮಾಲಾರವದಿಂ
ದವನೀದೇವಿಯ ನಿದಾಘಪರಿತಾಪಮಡಂ
ಗುವವೋಲ್ ಸಖಿಯ ಸುಭಾಷಿತ
ರವದಿನಡಂಗಿದುದು ದೇವಕೀಹೃತ್ತಾಪಂ ೭೦

ವ॥ ಆಗಳಾಗರ್ಭಸ್ಖಲನಸಮಯಮೆ ಋತುಸಮಯಮಾಗೆ ಚತುರ್ಥದಿವಸಸಮನಂತರಂ ಮಜ್ಜನಂಬೊಕ್ಕು ಮಂಗಳಾಚಾರಮನಪ್ಪುಕೆಯ್ದು

ಮಿಸುಪ ದುಕೂಲದೊಳ್ಪುಡಿಗೆ ಚಂದನಕರ್ದಮದಣ್ಪು ಮಲ್ಲಿಕಾ
ಕುಸುಮಮನಾಂತ ಕುಂತಳಭರಂ ಸುಲಿಪಲ್ಗಳ ಕಾಂತಿಯಿಂ ಬೆಳ
ರ್ತೆಸೆವಧರಂ ತಳತ್ತಳಿಪ ಮುತ್ತಿನ ಪಚ್ಚಮನಂಗಕೀರ್ತಿಯಂ
ಪಸರಿಸೆ ಕೊಂಡ ಬೆಳ್ಪಸದನಂ ಬಗೆಗೊಂಡುದು ಕೋಮಲಾಂಗಿಯಾ ೭೧

ಅದಕ್ಕೆ ಅತಿ ಪ್ರೌಢೆಯಾದ ಗೆಳತಿಯು ೬೯. "ದೇವೀ! ಪೂರ್ವಜನ್ಮದಲ್ಲಿ ನಿನ್ನ ತಪಸ್ಸಿಗೆ ಬಹಳ ಮೆಚ್ಚಿದ ಶ್ರೀವರನು 'ನಾನೇ ನಿನಗೆ ಮಗನಾಗುವೆನು' ಎಂದು ವರವನ್ನು ಕೊಟ್ಟನು. ವೃದ್ಧರು ಹೇಳಿದ ಇದನ್ನು ನಾನು ಕೇಳಿದ್ದೇನೆ. ಇನ್ನು ನೀನು ನಿಜವಾಗಿಯೂ ಕ್ಷತ್ರಿಯಾಧಮರ ಅಕ್ಷೌಹಿಣೀಸೇನೆಯೆಂಬ ವನವನ್ನು ಸುಡುವ ಕ್ರೂರಾಗ್ನಿಯೂ, ಶತ್ರುಸೂರ್ಯನಿಗೆ ರಾಹುವೂ ಆದ ಮಗನನ್ನು ಪಡೆಯುವೆ" ವ॥ ಎಂದು ಹೇಳಿದಳು. ೭೦ ಸಖಿಯ ಆ ಸುಭಾಷಿತ ಧ್ವನಿಯಿಂದ ಹೊಸ ಗುಡುಗಿನ ಧ್ವನಿಯಿಂದ ಭೂದೇವಿಯ ಬೇಸಗೆಯ ಪರಿತಾಪವು ಅಡಗುವಂತೆ ದೇವಕಿಯ ಹೃದಯ ತಾಪವು ಅಡಗಿತು. ವ॥ ಆಗ ಆ ಗರ್ಭಸ್ರಾವಸಮಯವೇ ಋತುಸಮಯವಾಯಿತು. ನಾಲ್ಕನೆಯ ದಿನವಾದ ನಂತರ ಮಂಗಳಸ್ನಾನವನ್ನು ಮಾಡಿ ಮಂಗಳಕಾರ್ಯವನ್ನಾಚರಿಸಿ ೭೧. ಹೊಳೆಯುವ ರೇಷ್ಮೆಯ ಒಳ್ಳೆಯ ಉಡಿಗೆಯೂ ಗಂಧದ ಸರಿಯ ಲೇಪನವೂ ಮಲ್ಲಿಗೆ ಹೂವನ್ನು ಮುಡಿದ ತಲೆಗೂದಲಿನ ಭಾರವೂ ಉಜ್ಜಿದ ಹಲ್ಲುಗಳ ಕಾಂತಿಯಿಂದ ಬೆಳ್ಳಗೆ ಹೊಳೆಯುವ ತುಟಿಯೂ, ಥಳಥಳಿಸುವ ಮುತ್ತಿನ ಆಭರಣವೂ ಮನ್ಮಥನ ಕೀರ್ತಿಯನ್ನು ಹರಡುತ್ತಿರುವಂತೆ ಧರಿಸಿದ ಆ ಕೋಮಲಾಂಗಿಯ ಶುಭ್ರವೇಷಭೂಷಣವೂ

---

೧. ದಾವೋಗ್ರ (ಕಖಗ)

ಇದು ಚಿತ್ರಂ ನಿಜವಕ್ತ್ರಶೋಭೆಯೊಳ್ ತಾರಾಧೀಶನಂ ಗೆಲ್ದುದ
ಲ್ಲದೆ [1]ತತ್ತಾರಕಚಂದ್ರಿಕಾಬಲಮುಮಂ ಮುಕ್ತಾಫಲಾಲಂಕೃತಾ
ಫದುಕೂಲಂಗಳಿನೀಕೆ ಗೆಲ್ದಪಳೆನಲ್ ತನ್ವಂಗಿಗೇಂ ಚಲ್ವುವೀ
ಜಿದುವೋ ಮುತ್ತಿನ ಪಚ್ಚಮುಂ ದುಗುಲಮುಂ ಮಾಂಗಲ್ಯ ಶೃಂಗಾರಮುಂ ೭೨

ವ॥ ತದನಂತರಂ

ನೆಗಟ್ದುಡೆನೂಲ ಗೆಜ್ಜೆಯಲಿ ಕೀರದ ಸಾರಿಕೆಯಿಂಚರಂಗಳಂ
ಮಿಗೆ ಚರಣಸ್ಫುರನ್ನಖಮಯೂಖದ ಬೆಳ್ಪುಪಹಾರಪುಷ್ಪಮಂ
ದ್ವಿಗುಣಿಸೆ ಸುಯ್ಯ ಕಂಪಗುರುಧೂಪದ ಕಂಪನದಿರ್ಪೆ ದೀಪಕಾಂ
ತಿಗೆ ತನುಕಾಂತಿ ಮಾರ್ಮಲೆಯೆ ಪೊಕ್ಕಳಿಳಾನುತೆ [2]ಸೆಜ್ಜೆವಾಡಮಂ ೭೩

ಜಳಶಯನನವತರಿಸುವುದಂ
ತಿಳಿದಲ್ಲಿಂ ಮುನ್ನ ದುಗ್ಧವಾರಿಧಿ ತಳ್ಪ
ಚ್ಛಳದಿಂದವತರಿಸಿತ್ತಾ
ನಿಳಯದೊಳೆನೆ ಧವಳತಲ್ಪಮೆಸೆದುದನಲ್ಪಂ ೭೪

ಸ್ಮಿತಧವಳಕಮಳವನದೊಳ್
ರತಿರಾಗದೆ ಹಂಸಿ ಹಂಸನಂ ಸೋಂಕುವವೋಲ್
ಅತಿಶಯಶಯನಸ್ಥಳದೊಳ್
ಪತಿಯೊಡನಾ ಕಾಂತೆ ಸುರತಸುಖದಿಂದಿರ್ದಳ್ ೭೫

ಮನೋಹರವಾಗಿದ್ದಿತು. ೭೨. 'ಇದು ವಿಚಿತ್ರವಾಗಿದೆ. ಈಕೆ ತನ್ನ ಮುಖಕಾಂತಿಯಿಂದ ಚಂದ್ರನನ್ನು ಗೆದ್ದುದಲ್ಲದೆ ಮುತ್ತುಗಳ ಆಭರಣ ಸಮೂಹದಿಂದಲೂ ಬಿಳಿಯ ಪಟ್ಟೆಯ ವಸ್ತ್ರದಿಂದಲೂ ಅವನ ನಕ್ಷತ್ರ ಚಂದ್ರಿಕೆಗಳ ಬಲವನ್ನೂ ಗೆಲ್ಲುತ್ತಾಳೆ' ಎನ್ನುವಂತೆ ಆ ಕೃಶಾಂಗಿಯ, ಮುತ್ತಿನ ಆಭರಣವೂ ದುಕೂಲವೂ ಮಂಗಳಾಲಂಕಾರವೂ ಅದೆಷ್ಟು ಚೆಲುವನ್ನು ಬೀರಿದುವೋ! ವ॥ ಆಮೇಲೆ ೭೩. ಚೆನ್ನಾದ ಉಡಿಗೆಜ್ಜೆಯ ಧ್ವನಿಯು ಗಂಡು ಹೆಣ್ಣು ಗಿಳಿಗಳ ಇಂಪಾದ ಧ್ವನಿಯನ್ನು ಮೀರಿಯೂ ಕಾಲಿನುಗುರುಗಳ ಬಿಳಿಯ ಕಾಂತಿಯ ಹೊಳಪು ಬಲಿಪುಷ್ಪಗಳನ್ನು ಎರಡರಷ್ಟಾಗಿಸುತ್ತಲೂ ನಿಶ್ವಾಸದ ಸುವಾಸನೆಯು ಅಗುರು ಧೂಪದ ವಾಸನೆಯನ್ನು ಕುಗ್ಗಿಸುತ್ತಲೂ ದೇಹದ ಕಾಂತಿಯು ದೀಪದ ಕಾಂತಿಗೆ ಪ್ರತಿಭಟಿಸುತ್ತಲೂ ಇರಲು ಭೂನುತೆಯಾದ ಆ ದೇವಕಿಯು ಶಯ್ಯಾಗೃಹವನ್ನು ಹೊಕ್ಕಳು. ೭೪. ವಿಷ್ಣುವು ಅವತರಿಸುವುದನ್ನು ತಿಳಿದ ಕ್ಷೀರಸಾಗರವು ಅವನು ಅವತರಿಸುವುದಕ್ಕೆ ಮುಂಚೆಯೇ ಆ ಅರಮನೆಯಲ್ಲಿ ಹಾಸಿಗೆಯ ವೇಷದಿಂದ, ಅವತರಿಸಿತೆನ್ನುವಂತೆ ವಿಸ್ತಾರವಾದ ಬಿಳಿಯ ಹಾಸಿಗೆಯು ಹೊಳೆಯುತ್ತಿದ್ದಿತು. ೭೫. ಅರಳಿದ ಬೆಳ್ದಾವರೆಯ ಕೊಳದಲ್ಲಿ ಹಂಸೆಯು ಹಂಸನೊಡನೆ ರತಿರಾಗದಿಂದ ಬೆರೆಯುವಂತೆ ಅತಿಶಯವಾದ

೧. ತತ್ತಾರಚಂದ್ರಿಕಾಜ್ವಲಮುಮಂ (ಖಗ) ತತ್ತಾರಚಂದ್ರಿಕೋಜ್ವಲಮುಮಂ (ಮೊಅ)
೨. ಶಯ್ಯೆಗೇಹಮಂ (ಕ)

ವ|| ಅಂತಶ್ರಾಂತರಾಗದಿಂ ಸಂಭೋಗಸುಖಸಾಗರದೋಳೋಲಾಡಿ ಪರಿಶ್ರಮ ನಿಮೀಳಿತಲೋಚನೆಯಾಗಿ ವಸುದೇವನೊಡನೆ ಪವಡಿಸಿರ್ದು ಯಾಮಿನೀ ಯಾಮತ್ರಯ ವಿರಾಮ ಸಮಯದೊಳ್

ದ್ಯುತಿಧೌತವ್ಯೋಮ ಚಂಡಾಂಶುವನಮಲಸುಧಾಸೂತಿಯಂ ದರ್ಪದೈರಾ
ವತಮಂ ಪ್ರೋದ್ದಾಮಹೇಮಾಚಲಮನಭಿನುತಾಂಭೋಜಮಂ ತ್ವಂಗದುತ್ತುಂ
ಗತರಾಂಭೋರಾಶಿಯಂ ಸತ್ಫಲ[1]ಲಳಿತ ಸುರೋರ್ವೀಜಮಂ ಶೈಲಶೃಂಗ
ಸ್ಥಿತಗರ್ಜತ್ಸಿಂಹಮಂ ಸ್ವಪ್ನದೊಳತಿಮುದದಿಂ ದೇವಕೀದೇವಿ ಕಂಡಳ್ ೭೬

ವ|| ಅಂತುಮಲ್ಲದೆ

ಮಿಗುವಂಗದ್ಯುತಿ ಲೋಕಮಂ ಬೆಳಗೆ ಚಂಚತ್ಕುಂಡಲಂ ಗಂಡಭಿ
ತ್ತಿಗಳಂ ಚಿತ್ರಿಸೆ ಕೌಸ್ತುಭಂ ಪೊಳೆಯೆ ವಕ್ಷೋದೇಶದೊಳ್ ಶಂಖಚ
ಕ್ರಗದಾಪದ್ಮಧರಂ ಸುಪೀತವಸನಂ ಬಂದಾಸ್ಯದೊಳ್ ಪೊಕ್ಕುದಂ
ಮೃಗಲಕ್ಷ್ಮಾನನೆ ಕಂಡಳುಣ್ಮೆ ನಭದೊಳ್ ದೇವೇಂದ್ರತೂರ್ಯಸ್ವನಂ ೭೭

ವ|| ಆ ಮಹಾಶ್ಚರ್ಯ ಸ್ವಪ್ನದರ್ಶನೋತ್ಸವಾನಂತರಂ ಸಹಸ್ರಕಿರಣೋದಯ ಸಮಯದೊಳ್

ಕಳಕಾಂಚೀ ಮಂಜುಮಂಜೀರಕವಳಯರವಂ ಪೊಣ್ಮೆ ನೇತ್ರಾಂಬುಜಂ ಪಾ
ಟಳ ಕಾಂತಿಶ್ರೀಯಿನೊಪ್ಪುತ್ತಿರೆ ತನುಲತೆ ಸೌರಭ್ಯಮಂ ಬೀಱೆ ಸೂಸಿ
ರ್ದಳಕಂ ಜೋಲ್ದಿರ್ದ ಬಂಬಲ್ಮುಡಿ ಶಿಥಿಲತೆವೆತ್ತಿರ್ದ ನೀವೀಭರಂ ಕ
ಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳೆ [2]ನೀರ್ದಾಂಗಿ ಶಯ್ಯಾಗ್ರದಿಂದಂ ೭೮

ಆ ಹಾಸಿಗೆಯಲ್ಲಿ ಆ ದೇವಕಿಯು ಪತಿಯೊಡನೆ ಸುರತ ಸುಖದಿಂದ ಇದ್ದಳು. ವ|| ಹಾಗೆ ಕುಂದದ ಅನುರಾಗದಿಂದ ಸಂಭೋಗ ಸುಖಸಾಗರದಲ್ಲಿ ಓಲಾಡಿ, ರತಿಶ್ರಮದಿಂ ವಸುದೇವನೊಡನೆ ನಿದ್ದೆಗೆಯ್ದು ರಾತ್ರಿ ಮೂರು ಜಾವಗಳು ಕಳೆದಾಗ ೭೬. ತನ್ನ ಕಾಂತಿಯಿಂದ ಆಕಾಶವನ್ನು ಬೆಳ್ಳಗೆಮಾಡಿದ ಸೂರ್ಯನನ್ನೂ ನಿರ್ಮಲನಾದ ಚಂದ್ರನನ್ನೂ ದರ್ಪದ ಐರಾವತವನ್ನೂ ಅತ್ಯುನ್ನತವಾದ ಮೇರುಗಿರಿಯನ್ನೂ ಶ್ಲಾಘ್ಯವಾದ ಕಮಲವನ್ನೂ ಉಬ್ಬಿಹೊಳೆಯುವ ಸಮುದ್ರವನ್ನೂ ಸತ್ಫಲದಿಂದ ಮನೋಹರವಾದ ಕಲ್ಪವೃಕ್ಷವನ್ನೂ ಪರ್ವತಶಿಖರದಲ್ಲಿದ್ದು ಗರ್ಜಿಸುತ್ತಿರುವ ಸಿಂಹವನ್ನೂ ದೇವಕೀದೇವಿಯು ಕನಸಿನಲ್ಲಿ ಕಂಡಳು. ವ|| ಅದೂ ಅಲ್ಲದೆ, ೭೭. ಆಕಾಶದಲ್ಲಿ ದೇವತೆಗಳ ನಗಾರಿಯ ಶಬ್ದವು ಹೆಚ್ಚುತ್ತಿರುವಲ್ಲಿ ಶಂಖ ಚಕ್ರ ಗದಾಪದ್ಮಧರನೂ ಪೀತಾಂಬರಧಾರಿಯೂ ಆದ ವಿಷ್ಣುವು ಬಂದು ತನ್ನ ಬಾಯಲ್ಲಿ ಪ್ರವೇಶಿಸಿದುದನ್ನೂ ದೇವಕಿ ಕಂಡಳು. ಆಗ ವಿಷ್ಣುವಿನ ದೇಹಕಾಂತಿಯು ಲೋಕವನ್ನು ಬೆಳಗುತ್ತಿದ್ದಿತು. ಹೊಳೆಯುವ ಕರ್ಣಾಭರಣವು ಕೆನ್ನೆಗಳಲ್ಲಿ ಚಿತ್ರಿಸುತ್ತಿದ್ದಿತು. ಎದೆಯ ಮೇಲೆ ಕೌಸ್ತುಭಮಣಿ ಹೊಳೆಯುತ್ತಿದ್ದಿತು. ವ|| ಆ ಮಹಾಶ್ಚರ್ಯ ಸ್ವಪ್ನದರ್ಶನದಿಂದ ಸಂತೋಷವಾದ ನಂತರ ಸೂರ್ಯೋದಯ ಸಮಯದಲ್ಲಿ ೭೮. ಅಂದವಾದ ವಡ್ಯಾಣ ಕಾಲ್ಬಳೆ ಕೈಬಳೆಗಳ ಇಂಪಾದ ದನಿಯು ಹೊಮ್ಮುತ್ತಲೂ ನೇತ್ರಕಮಲವು ಪಾದರಿಯ ಹೂವಿನ ಕಾಂತಿಯಿಂದ ಒಪ್ಪುತ್ತಲೂ ಬಳ್ಳಿಯಂತಿರುವ ದೇಹವು

೧. ದಳಿತ (ಕಖಗ) ೨. ನಿದ್ರಾಂಗಿ (ಕಖಗ) ಹೃದ್ಯಾಂಗಿ (ಮೂಲ)

ದೇವಗುರುದ್ವಿಜರಂ [೧]ಸ
ದ್ಭಾವದಿನರ್ಚಿಸಿ ಸುವಸ್ತ್ರಭೂಷಾದಿಗಳಿಂ
ದೇವಕಿ ಕೈಗೆಯ್ದಿಸೆದಳ್
ಲಾವಣ್ಯದೆ ದಿವಸಲಕ್ಷ್ಮಿ ಪೊಳಪೇಱುವವೊಲ್ ೭೯

ವ॥ ಅನ್ನೆಗಂ ನಿರ್ವರ್ತಿತನಿತ್ಯನಿಯಮನಾಗಿ ವಸುದೇವನಿರೆ

ಇಂದಿದು ಚಿತ್ರಮೀಗಮಕಮೀಪರಿಯೀದರಹಾಸಮೀಬೆಡಂ
ಗೆಂದಿನ ಭಂಗಿಯಲ್ಲಿದೆನುತುಂ ಜನಮೀಕ್ಷಿಸೆ ತನ್ನ ಲೀಲೆಯಿಂ
ಬಂದಳದೊಂದು ವಿಭ್ರಮಮದೊಂದು ವಿಳಾಸಮದೊಂದು ಚೆಲ್ವದೊಂ
ದಂದಮದೊಂದು ದೇಸೆ ಪೊಸತಾಗಿರೆ ವಲ್ಲಭನಲ್ಲಿಗಟ್ಕಱಿಂ ೮೦

ವ॥ ಅಂತು ಬಂದು ನಿಜಕಾಂತನರ್ಧಾಸನಮನಲಂಕರಿಸಿ ಕುಳ್ಳಿರ್ದು

ಪಗಲೊಳಗೆಳವೆಳ್ದಿಂಗಳ
ನುಗುಟ್ದಪ್ಪುದಿದೊಂದು ಚಂದ್ರಮಂಡಲಮೆನೆ ದಂ
ತಗಭಸ್ತಿಗಳ್ ನಿಜಾಸ್ಯದಿ
ನೊಗೆತರೆ ಸತಿ ಪತಿಗೆ ಕಂಡ ಕನಸಂ ಪೇಟ್ದಳ್ ೮೧

ವ॥ ಆ ಕನಸುಗಳನನುಕ್ರಮದಿಂ ಕೇಳ್ದು

ಸುವಾಸನೆಯನ್ನು ಬೀರುತ್ತಲೂ ಕೆದರಿದ ಮುಂಗುರುಳೂ, ಸಡಿಲವಾಗಿ ಜೋಲುವ ಜಡೆಯೂ ಸಡಿಲವಾದ ನೆರಿಗೆಂಟೂ ಚೆನ್ನಾಗಿ ಕಾಣುತ್ತಲೂ ಇರಲು, ನಿದ್ರಾಲಸೆಯಾದ ಆ ದೇವಕಿಯು ಸಂತೋಷವುಳ್ಳವಳಾಗಿ ಹಾಸಿಗೆಯ ಮೇಲಿಂದ ಎದ್ದಳು. ೭೯. ಆಕೆ ದೇವದ್ವಿಜಗುರುಗಳನ್ನು ಭಕ್ತಿಯಿಂದ ಅರ್ಚಿಸಿ, ವಸ್ತ್ರಭೂಷಣಾದಿಗಳಿಂದ ಅಲಂಕೃತಳಾಗಿ ಲಾವಣ್ಯದಿಂದ ದಿನಲಕ್ಷ್ಮಿಯಂತೆ ಹೊಳಪೇರಿದಳು. ವ॥ ಅಷ್ಟರೊಳಗೆ ವಸುದೇವನು ನಿತ್ಯಕರ್ಮಗಳನ್ನು ನೆರವೇರಿಸಿದ್ದನು. ೮೦. ಈ ದಿನ ಇದೇನೋ ವಿಚಿತ್ರವಾಗಿದೆ, ಈಕೆಯ ಈ ಗಮನದ ರೀತಿಯೂ ಕಿರುನಗೆಯೂ ಈ ಬೆಡಗೂ ಎಂದಿನ ಬಗೆಯದಾಗಿಲ್ಲ ಎನ್ನುತ್ತ ನೋಡುವವರಿಗೆ ತನ್ನ ಅದೊಂದು ವಿಭ್ರಮವೂ ವಿಳಾಸವೂ ಚೆಲುವೂ ಅಂದವೂ ಸೊಗಸೂ ಹೊಸದಾಗಿ ಕಾಣುತ್ತಿರುವಾಗ ದೇವಕಿಯು ಪ್ರಿಯನೆಡೆಗೆ ಅಕ್ಕರೆಯಿಂದ ಬಂದಳು. ವ॥ ಹಾಗೆ ಬಂದು, ತನ್ನ ಕಾಂತನ ಅರ್ಧಾಸನವನ್ನಲಂಕರಿಸಿ ಕುಳಿತುಕೊಂಡು, ೮೧. ಈ ಚಂದ್ರಮಂಡಲವು ಹಗಲೇ ಎಳೆ ಬೆಳುದಿಂಗಳನ್ನು ಹರಡುತ್ತಿದೆಯೆನ್ನುವಂತೆ ಮುಖದಿಂದ ಹಲ್ಲಿನ ಕಾಂತಿಯು ಹೊರಡುತ್ತಿರುವಲ್ಲಿ ಆ ಸತಿ, ಪತಿಗೆ ತಾನು ಕಂಡ ಕನಸನ್ನು ಹೇಳಿದಳು. ವ॥ ಆ ಕನಸುಗಳನ್ನು ಅನುಕ್ರಮವಾಗಿ ಕೇಳಿ,

---

೧. ಸದ್ಭಾವದಿನರ್ಚಿಸುವ (ಗ)

ಪರಮಾನಂದರಸಾರ್ಣವ
ಪರಿಸರವೃಕ್ಷಮೆ ಕೊನರ್ತುದೆನೆ ವಸುದೇವಂ
ಧರಿಯಿಸಿ ಪುಳಕಮನಾಶುಭ
ಚರಿತೆಗೆ ತತ್ಫಲಮನಱಿಪಲಂದಿಂತೆಂದಂ ೮೨

ರವಿಯಿಂ ಭಾಸುರಮೂರ್ತಿ ಪೂರ್ಣಶಶಿಯಿಂ ಸದ್ವೃತ್ತನಿಂದ್ರೇಭದಿಂ
ದವನೀಭರ್ತೃ ಸುರಾದ್ರಿಯಿಂ ಸ್ಥಿರತರಂ ಪಂಕೇಜದಿಂ ಶ್ರೀವಧೂ
ಧವನಾ ವಾರಿಧಿಯಿಂದಪಾರಮಹಿಮಂ ಕಲ್ಪದ್ರುವಿಂ ಸತ್ವಗೌ
ರವಯುಕ್ತಂ ಮೃಗರಾಜನಿಂ ಪುರುಷಸಿಂಹಂ ಪುಟ್ಟುಗುಂ ನಂದನಂ ೮೩

ವ|| ಅಂತುಮಲ್ಲದೆ

ಪೋದ ಭವಂಗಳೊಳ್ ನೆರಪಿದೊಂದು ತಪಂ ಫಲಮಾಯ್ತು ನಿನ್ನೊಳಿಂ
ದಾ ದನುಜಾರಿ ಬಂದು ಭವದಾನನದೊಳ್ ಪುಗೆ ಕಂಡುದೊಂದು ಪು
ಣ್ಯೋದಯದಿಂ ಚತುರ್ಭುಜನೆ ಪುಟ್ಟಿದಪಂ ಯದುವಂಶರಾಜಸಂ
ಪಾದನನುಗ್ರಸೇನಭಯಭೇದನನುದ್ಧತಕಂಸಸೂದನಂ ೮೪

ಮಡದೀ ನೀಂ ಪಡೆವಾ ಸುತಂ ರಿಪುಚಮೂಸಂಹಾರವಂ ಹಾರವಂ
ಪೊಡರಲ್ ಮಾಳ್ಕುಮನಾಕುಳಂ ತವಿಕುಮೀ ದೇವಾರಿಯಂ ವಾರಿಯಂ
ವಡಬಾಸ್ಯಂ ತವಿಪಂತಿ[೧]ರಾವುಕನನೀ ನಿರ್ಬಂಧದಿಂ ಬಂಧದಿಂ
ಬಿಡಿಕುಂ ತನ್ನಯ ತೇಜದಿಂದೆ ಮಿಗುವುದ್ಯದ್ಭಾನುವಂ ಭಾನುವಂ ೮೫

೮೨. ವಸುದೇವನು ಪರಮಾನಂದ ಸಾಗರದ ತೀರ ವೃಕ್ಷವೇ ಚಿಗುರಿತೆನ್ನುವಂತೆ ರೋಮಾಂಚನವನ್ನು ಪಡೆದು ಶುಭಚರಿತೆಯಾದ ಅವಳಿಗೆ ಆ ಕನಸಿನ ಫಲವನ್ನು ಹೀಗೆ ತಿಳಿಸಿದನು. ೮೩. "ನೀನು ಕಂಡ ಸೂರ್ಯನಿಂದ ಹೊಳೆಯುವ ದೇಹವುಳ್ಳವನೂ, ಪೂರ್ಣಚಂದ್ರನಿಂದ ಸದ್ವೃತ್ತನೂ, ಐರಾವತದಿಂದ ಭೂಪತಿಯೂ ಮೇರುವಿನಿಂದ ಸ್ಥಿರತರನೂ ಕಮಲದಿಂದ ಶ್ರೀಕಾಂತನೂ ಆ ಸಮುದ್ರದಿಂದ ಅಪಾರ ಮಹಿಮನೂ ಕಲ್ಪವೃಕ್ಷದಿಂದ ಸತ್ತ್ವಗೌರವಯುತನೂ ಸಿಂಹದಿಂದ ಪುರುಷೋತ್ತಮನೂ ಆದ ಮಗನು ಹುಟ್ಟುವನು. ವ|| ಅದೂ ಅಲ್ಲದೆ ೮೪. ಹಿಂದಿನ ಜನ್ಮಗಳಲ್ಲಿ ಮಾಡಿದ ತಪಸ್ಸು ಇಂದು ನಿನ್ನಲ್ಲಿ ಫಲಿಸಿತು. ಆ ವಿಷ್ಣುವು ಬಂದು ನಿನ್ನ ಮುಖದಲ್ಲಿ ಹೊಕ್ಕುದನ್ನು ಕಂಡ ಪುಣ್ಯೋದಯದಿಂದ ಆ ಚತುರ್ಭುಜನೇ ಹುಟ್ಟುವನು. ಅವನು ಯದುವಂಶಕ್ಕೆ ರಾಜ್ಯವನ್ನು ಸಂಪಾದಿಸುವನು. ಉಗ್ರಸೇನನ ಭಯವನ್ನು ನಿವಾರಿಸುವನು. ಉದ್ಧತನಾದ ಕಂಸನನ್ನು ಕೊಲ್ಲುವನು. ೮೫. ಪ್ರಿಯೇ! ನೀನು ಪಡೆಯುವ ಆ ಮಗನು, ಹಾಹಾ ಎಂಬ ಕೂಗೇಳುವಂತೆ ಶತ್ರುಸೇನೆಯ ಸಂಹಾರವನ್ನು ಮಾಡುವನು. ಬಡಬಾಗ್ನಿಯು ನೀರನ್ನು ನಾಶಪಡಿಸುವಂತೆ ದೇವತೆಗಳಿಗೆ ಶತ್ರುವಾದ ಕಂಸನನ್ನು ತಡೆಯಿಲ್ಲದೆ ನಾಶಪಡಿಸುವನು. ಉಗ್ರಸೇನನನ್ನು ಈ ನಿರ್ಬಂಧದಿಂದಲೂ ಬಂಧನದಿಂದಲೂ ಬಿಡಿಸುವನು. ತನ್ನ

೧. ರಾವುಕನಸೇ (ಕಖಗ)

ಎನಲಪ್ರತಿಹತಸುತಲಾ
ಭನಿವೇದಕವಾರ್ತೆ ತೀವೆ ಪುಳಕಮನಾಂತಳ್
ವನಿತೆ ವಸಂತಾನಿಳನಿಂ
ವನಲತೆ ಕಳಿಕಾಕಳಾಪಮಂ ತಾಳ್ದುವವೋಲ್ ೮೬

ವ|| ಅನ್ನೆಗಮಿತ್ತಲ್

ದೇವಕಿ ವಿಷ್ಣುವಂ ಬಸಿಱೊಳಾಂತಿರೆ [1]ವೈಷ್ಣವಮಾಯೆಯಂ ಯಶೋ
ದಾವಧು ನಂದಗೋಪನ ಮನಃಪ್ರಿಯೆ ಗರ್ಭದೊಳಾಂತಳಿಂದ್ರದಿ
ಗ್ದೇವಿ ನವಾರ್ಕಮಂಡಲಮನಾಂತಿರೆ ತತ್ಪ್ರಭೆಯಂ ನಭೋಂಗಣ
ಶ್ರೀವಧುವೊಂದೆ ಕಾಲದೊಳೆ ತಾಳ್ದಿ ವಿರಾಜಿಸುವೊಂದು ಮಾಟ್ಕೆಯಿಂ ೮೭

ವ|| ಆಗಳಾ ಗೋಕುಲದೊಳಿರ್ದ ವಸುದೇವನರ್ಧಾಂಗಿ ರೋಹಿಣೀದೇವಿ ಪರಿಪೂರ್ಣ ಗರ್ಭನಿರ್ಭರಭಾರವತಿಯಾಗಿರೆ ಶುಭಮುಹೂರ್ತದೊಳ್

ಜಲಧರಪಥಪರ್ಯಟನ
ಕ್ಕಲಸಿ ಸುಧಾಸೂತಿ ಧಾತ್ರಿಯೊಳ್ ಶಿಶುರೂಪ
ಚ್ಛಲದಿಂ ನೆಲೆವಡೆದವೊಲು
ಜ್ಜ್ವಲತನು ರೋಹಿಣಿಗನಂತನಂದುದಯಿಸಿದಂ ೮೮

ವ|| ಅಂತು ಪುಟ್ಟುವಿನಮಿತ್ತಲ್

ತೇಜಸ್ಸಿನಿಂದ ಅತಿಪ್ರಕಾಶವುಳ್ಳ ಸೂರ್ಯನನ್ನೂ ಮೀರುವನು." ೮೬. ಎಂದನು. ಅವಧ್ಯನೂ ಅಜೇಯನೂ ಆದ ಸುತನ ಲಾಭವನ್ನು ತಿಳಿಸುವ ಮಾತು ತುಂಬಿದುದರಿಂದ ಆ ದೇವಕಿಯು ವಸಂತಮಾರುತದಿಂದ ವನಲತೆಯು ಚಿಗುರು ಮೊಗ್ಗುಗಳನ್ನು ಪಡೆಯುವಂತೆ ರೋಮಾಂಚನವನ್ನು ಪಡೆದಳು. ವ|| ಅಷ್ಟರಲ್ಲಿ ಈ ಕಡೆ ೮೭. ದೇವಕಿಯು ವಿಷ್ಣುವನ್ನು ಗರ್ಭದಲ್ಲಿ ಧರಿಸಿದಾಗ ನಂದಗೋಪನ ಪತ್ನಿ ಯಶೋದೆಯು ವೈಷ್ಣವ ಮಾಯೆಯನ್ನು ಗರ್ಭದಲ್ಲಿ ಧರಿಸಿದಳು. ಇದು ಪೂರ್ವದಿಗಂಗನೆಯ ಬಾಲಸೂರ್ಯ ಮಂಡಲವನ್ನು ಧರಿಸಿದಾಗ ಅವನ ಪ್ರಭೆಯನ್ನು ಆಕಾಶಾಂಗಣ ಶ್ರೀ ವನಿತೆಯು ಧರಿಸಿ ಹೊಳೆಯುವಂತೆ ಇದ್ದಿತು. ವ|| ಆಗ ಆ ಗೋಕುಲದಲ್ಲಿದ್ದ ವಸುದೇವನ ಪತ್ನಿ ರೋಹಿಣೀದೇವಿಯು ಪರಿಪೂರ್ಣ ಗರ್ಭದಿಂದ ಅತಿಶಯ ಭಾರವುಳ್ಳವಳಾಗಿರಲು ಶುಭಮುಹೂರ್ತದಲ್ಲಿ ೮೮. ಚಂದ್ರನು ಆಕಾಶಮಾರ್ಗದಲ್ಲಿ ಸುತ್ತುವುದಕ್ಕೆ ಬೇಸರಗೊಂಡು, ಭೂಮಿಯಲ್ಲಿ ಶಿಶುರೂಪದಿಂದ ನೆಲೆಯನ್ನು ಪಡೆದಂತೆ ಬೆಳ್ಳಗೆ ಹೊಳೆಯುವ ದೇಹದ ಅನಂತನು ರೋಹಿಣೀದೇವಿಯಲ್ಲಿ ಜನಿಸಿದನು. ವ|| ಹಾಗೆ ಹುಟ್ಟುತ್ತಲೂ ಇತ್ತಕಡೆ

---

೧. ವಿಷ್ಣುವ ಮಾಯೆಯಿಂ (ಕಖಗ)

ಗರ್ಭಸ್ಥನಪ್ಪ ಶೌರಿಯ
ನಿರ್ಭರಸರಸಪ್ರಕಾಶಮೀಜನನಿಯೊಳಾ
ವಿರ್ಭವಿಸಿದುದೆನೆ ತನು ಸಂ
ದರ್ಭಿತ[1]ಗೌರಿಮದಿನೆಸೆದುದಾ ದೇವಕಿಯಾ ೮೯

ಎಳವಯಕೆಯಿಂ ಬೆಳರ್ತಂ
ಗಳೇಖೆ ಕರ್ಪಡರ್ದ ಬಾಸೆಯಂ ತಳೆದೆಸೆದ
ತ್ತಳಿನೀಮಾಲೆಯ ತೀಂಬಿವಂ
ತಳೆದಂಗಜಪುಷ್ಪಚಾಪಮೆನೆ ದೇವಕಿಯಾ ೯೦

ತ್ರಿದಶಾರಿಧೂಮಕೇತುವ
ನುದರದೊಳೀ ದೇವಿ [2]ತಳೆದುದರ್ಕಿದೆ ದೃಷ್ಟಾಂ
ತದ ಧೂಮಲೇಖೆಯೆನೆ ಕ
ರ್ಪೊದವಿದ ರೋಮಾಳಿ ರಂಜಿಕುಂ ದೇವಕಿಯಾ ೯೧

ತರಣಿಪ್ರಭನರ್ಭಕನೀ
ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಬಹಿ
ಷ್ಕರಿಸಿದನೆನಲೆಸೆಗುಂ ಕುಚ
ಭರಚೂಚುಕಯುಗಳಕಾಳಿಮಂ ದೇವಕಿಯಾ ೯೨

ಮೇದಿನಿಯ ಭಾರವಮರರ
ಖೇದಂ ಖಳರೆಸಕವೆಂಬರಿಷ್ಟತ್ರಯಮಿಂ
ಪೋದಪುವೆಂದಜೆಪುವವೊಲ್
ಪೋದುವು ಮಧ್ಯದ ವಳಿತ್ರಯಂ ದೇವಕಿಯಾ ೯೩

೮೯. ಗರ್ಭದಲ್ಲಿರುವ ಕೃಷ್ಣನ ಪರಿಪೂರ್ಣವಾದ ಸರಸ ಪ್ರಕಾಶವೇ ಈ ತಾಯಿಯಲ್ಲಿ ಉದಿಸಿದೆ ಎನ್ನುವಂತೆ ದೇವಕಿಯ ದೇಹವು ಸಂದರ್ಭಕ್ಕೆ ತಕ್ಕ ಬಿಳುಪಿನಿಂದ ಹೊಳೆಯುತ್ತಿದ್ದಿತು. ೯೦. ಎಳೆಯ ಬಯಕೆಯಿಂದ ಬೆಳ್ಳಗಾದ ದೇವಕಿಯ ಅಂಗರೇಖೆಯು ಕಪ್ಪೇರಿದ ಬಾಸೆಯನ್ನು ಪಡೆದು ತುಂಬಿಯ ಸಾಲೆಂಬ ಹೆದೆಯನ್ನು ಪಡೆದ ಮನ್ಮಥನ ಹೂ ಬಿಲ್ಲಿನಂತೆ ಪ್ರಕಾಶಿಸುತ್ತಿದ್ದಿತು. ೯೧. ರಾಕ್ಷಸರಿಗೆ ಧೂಮಕೇತುವನ್ನು ಈ ದೇವಿ ಗರ್ಭದಲ್ಲಿ ಧರಿಸಿರುವುದಕ್ಕೆ ಇದೇ ಗುರುತಾದ ಧೂಮಲೇಖೆಯೆನ್ನುವಂತೆ ದೇವಕಿಯ ಕಪ್ಪು ಹೆಚ್ಚಿದ ರೋಮಾಳಿ (ಬಾಸೆ)ಯು ಚೆನ್ನಾಗಿ ಕಾಣಿಸುತ್ತಿದ್ದಿತು. ೯೨. ಸೂರ್ಯನಂತೆ ತೇಜಸ್ವಿಯಾದ ಶಿಶುವು ಈ ತರುಣಿಯ ಹೃದಯದ ಕತ್ತಲೆಯನ್ನು ಹೊರದೂಡಿದನೆನ್ನುವಂತೆ ದೇವಕಿಯ ಸ್ಥೂಲವಾದ ಸ್ತನಾಗ್ರಗಳ ಕಪ್ಪು ಚೆನ್ನಾಗಿ ಕಾಣಿಸುತ್ತಿದ್ದಿತು. ೯೩. ಭೂಮಿಯ ಭಾರ, ದೇವತೆಗಳ ಖೇದ, ದುರ್ಜನರ ದುಷ್ಕಾರ್ಯ ಎಂಬ ಈ ಮೂರು ಅರಿಷ್ಟಗಳೂ ಇನ್ನು ತೊಲಗುವುವು ಎಂಬುದನ್ನು ತಿಳಿಸುವಂತೆ ದೇವಕಿಯ ನಡುವಿನ ತ್ರಿವಳಿಗಳೂ

---

೧. ಗೌರವದಿ (ಕಖಗ) ೨. ತಳೆದಳೆನೆ ತದ್ಯಧು ಗರ್ಭದ (ಗ)

ಘನತೀವ್ರತೇಜನಂ ಮಾ
ನಿನಿ ಗರ್ಭದೊಳಾಂತು ಗೌರವರ್ಣೆನಿ ಮಧ್ಯ
ದಿನರವಿಯಂ ಮಧ್ಯದೊಳಾಂ
ತುಂ ನಿಂದ ಶರದಭ್ರಲೇಖೆವೋಲ್ ಸೊಗಯಿಸಿದಳ್ ೯೪

ಸುದತಿಯ ಗರ್ಭಚಿಹ್ನಮನದೇವೊಗಳ್ವುದೊ ಬಾಸೆ ಕರ್ಪನಾಂ
ತುದು ನಡು ಕೂಡೆ ಪೊಂಗಿದುದು ಬೀಗಿದುದುರ್ಬಿ ಕುಚಂ ಮೊಗಂ ಬೆಳ
ರ್ತುದು ವಳಿ ಪಿಂಗಿಪೋಯ್ತು ನಯವೇಱಿದುದಂಗಶಲಾಕೆ ಗುಜ್ಜುಗೊಂ
ಡುದು ನಡೆ ಮೆಲ್ಪುಗೊಂಡುದು ಕರಂ ಕುಡಿಗೊಂಡುದು ಕುಂತಳೋತ್ಕರಂ ೯೫

ವ॥ ಅಂತಿರ್ದ ದೇವಕಿಯ ಸಮೀಪದೊಳಂದೇಕಾಂತಸಮಯದೊಳ್ ಸಮಸ್ತ ಸುರಗಣಂ ನೆರೆದು ಬಂದಂತರ್ಹಿತರೂಪದಿಂದಂತರಿಕ್ಷದೊಳ್

ಪಿರಿದು ಸಮಸ್ತ [1]ವಿಷ್ಟಪವದಂ ಪಡೆದಂ ಪಿರಿಯಂ ವಿರಿಂಚನಾ
ಸರಸಿಜಯೋನಿಯಂ ಜಠರಹೇಮಪಯೋರುಹದಲ್ಲಿ ಪುಟ್ಟಿಪಂ
ಬುರುಹವಿಲೋಚನಂ ಪಿರಿಯನಾ ದನುಜಾರಿಯನಾತ್ಮಗರ್ಭದೊಳ್
ಧರಿಯಿಸಿ [2]ನಿಂದ ನೀಂ ಪಿರಿಯಳಿಂ ಪಿರಿಯರ್ ಪೆಱರಿಲ್ಲ ಲೋಕದೊಳ್ ೯೬

ವ॥ ಇಂತು ವಿಶ್ವರೂಪಗರ್ಭಿಣಿಯಪ್ಪ ದೇವಿ, ನೀಂ ಬ್ರಹ್ಮಗರ್ಭ ಪ್ರಕೃತಿಯಂತೆಯುಂ ; ಪ್ರಾಗಲ್ಭ್ಯಗರ್ಭದೃಷ್ಟಿಯಂತೆಯುಂ, ವಿವೇಕಗರ್ಭವಿದ್ಯೆಯಂತೆಯುಂ, ವೇದಗರ್ಭವಾಣಿಯಂತೆಯುಂ, ಯಜ್ಞಗರ್ಭಶ್ರುತಿಯಂತೆಯುಂ, ಆಚಾರಗರ್ಭಸ್ಮೃತಿಯಂತೆಯುಂ, ಹೋಮಗರ್ಭಸ್ವಾಹೆಯಂತೆಯುಂ,

ಅಡಗಿದವು. ೯೪. ಅತಿ ತೀವ್ರತೇಜನನ್ನು ಗರ್ಭದಲ್ಲಿ ಧರಿಸಿ ಬೆಳ್ಳಗಾಗಿರುವ ದೇವಕಿಯು ಮಧ್ಯಾಹ್ನದ ಸೂರ್ಯನನ್ನು ಮಧ್ಯದಲ್ಲಿ ಪಡೆದು ನಿಂತ ಶರತ್ಕಾಲದ ಮೋಡದಂತೆ ಸೊಗಸಾಗಿ ಕಾಣುತ್ತಿದ್ದಳು. ೯೫. ಆ ಸುಂದರಿಯ ಗರ್ಭಚಿಹ್ನೆಯನ್ನು ಅದೆಷ್ಟು ಹೊಗಳುವುದೋ! ಬಾಸೆ ಕಪ್ಪಾಯಿತು. ನಡು ಉಬ್ಬಿತು. ಸ್ತನವು ಉಬ್ಬಿ ದಪ್ಪವಾಯಿತು. ಮುಖವು ಬೆಳ್ಳಗಾಯಿತು. ತ್ರಿವಳಿ ಇಲ್ಲವಾಯಿತು. ಅಂಗಸಲಾಕೆಯು ನುಣುಪಾಯಿತು. ನಡಗೆಯು ಮಂದವಾಯಿತು. ಸ್ವರವು ಮೆದುವಾಯಿತು. ಮುಂಗುರುಳ ಸಾಲು ಕುಡಿಯಿಟ್ಟಿತು. ವ॥ ಹಾಗಿದ್ದ ದೇವಕಿಯ ಸಮೀಪದಲ್ಲಿ ಅಂದು ಏಕಾಂತಸಮಯದಲ್ಲಿ ಸಮಸ್ತ ದೇವತೆಗಳ ಗುಂಪೂ ಬಂದು ಅದೃಶ್ಯರೂಪದಿಂದ ಕೂಡಿ, "ಸಮಸ್ತ ಜಗತ್ತು ಹಿರಿದಾದುದು. ಅದನ್ನು ಸೃಷ್ಟಿಸಿದ ಬ್ರಹ್ಮನು ಅದಕ್ಕಿಂತ ಹಿರಿಯನು. ಆ ಬ್ರಹ್ಮನನ್ನು ಸುವರ್ಣ ಕಮಲದಲ್ಲಿ ಹುಟ್ಟಿಸಿದ ಕಮಲಾಕ್ಷ ವಿಷ್ಣು ಅವನಿಗಿಂತ ಹಿರಿಯನು. ದನುಜಾರಿಯಾದ ಆ ವಿಷ್ಣುವನ್ನು ನಿನ್ನ ಗರ್ಭದಲ್ಲಿ ಧರಿಸಿರುವ ನೀನು ಹಿರಿಯಳು. ನಿನಗಿಂತ ಹಿರಿಯರು ಲೋಕದಲ್ಲಿ ಬೇರಾರೂ ಇಲ್ಲ. ವ॥ ಹೀಗೆ ವಿಶ್ವರೂಪನನ್ನು ಗರ್ಭದಲ್ಲಿ ಧರಿಸಿರುವ ದೇವಿ, ನೀನು ಬ್ರಹ್ಮಗರ್ಭಪ್ರಕೃತಿಯಂತೆಯೂ ಪ್ರಾಗಲ್ಭ್ಯವನ್ನೊಳಗೊಂಡ ದೃಷ್ಟಿಯಂತೆಯೂ

---

೧. ವಿಷ್ಟಪವಳಂ ಪಿರಿಯಂ ಜಗದೊಳ್ (ಕ) ೨. ನಿಂದಳ್ (ಕಖಗ)

ವಹ್ನಿಗರ್ಭಾರಣಿಯಂತೆಯುಂ, ಮಣಿಗರ್ಭಜ್ಯಾಯಂತೆಯುಂ, ಜ್ಞಾನಗರ್ಭಸನ್ಮತಿಯಂತೆಯುಂ, [1]ಅವಬೋಧಗರ್ಭಮೇಧೆಯಂತೆಯುಂ, [2]ಕಾಮಗರ್ಭೇಚ್ಛೆಯಂತೆಯುಂ, ನಯನಗರ್ಭನೀತಿ ಯಂತೆಯುಂ, ಪ್ರಭಾವಗರ್ಭಶಕ್ತಿಯಂತೆಯುಂ, ಪರಿಣಾಮಗರ್ಭತುಷ್ಟಿಯಂತೆಯುಂ, [3]ಧೈರ್ಯಗರ್ಭಧೃತಿ ಯಂತೆಯುಂ, ಪ್ರಣಯಗರ್ಭ ಭಕ್ತಿಯಂತೆಯುಂ, ಅಭ್ಯುದಯಗರ್ಭಧರೆಯಂತೆಯುಂ, ಐಶ್ವರ್ಯಗರ್ಭಾಜ್ಞೆ ಯಂತೆಯುಂ, ಪ್ರಕಾಶಗರ್ಭಪ್ರಭೆಯಂತೆಯುಂ, ಪ್ರಸಾದಗರ್ಭ ದಯೆಯಂತೆಯುಂ, ಶೃಂಗಾರಗರ್ಭ ವಿಭೂತಿಯಂತೆಯುಂ, ಆನಂದಗರ್ಭಲೀಲೆಯಂತೆಯುಂ ಮಹತ್ತ್ವಮಂ ಪಡೆದೆಯೆಂದು ಸ್ತುತಿಗೈದು ಪೋಗೆ ಕತಿಪಯಮಾಸಂಗಳಿಂ ಬಳಿಯಂ

ಲಾಳಿತವಾಗಿ ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂ
ಸಾಳಿಯ ಬೆನ್ನೊಳ್ಬೆದೆ ನಡೆಯಲ್ ಬಸಮಲ್ಲದೆ ನಿಂದು [4]ಕೈಗಳಿಂ
ಲೀಳೆಯನಾಂತು ರಾಗರಸಮೊರ್ಬುಳಿಯಾದವೊಲೆೞ್ದು ಮೆಟ್ಟೆ ಭಾ
ರಾಳಸದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ ೯೭

ಗುರುಕಬರೀಭರಸ್ತನಭರೋರುಭರಸ್ಥಿತಿಯಿಂ ಸ್ವಭಾವಮಂ
ಧರಗತಿಯಪ್ಪ ತನ್ವಿಗೆ ಚತುರ್ದಶಲೋಕಮನೆಯ್ದೆ ಗರ್ಭದೊಳ್
ಧರಿಯಿಸಿದಚ್ಯುತಂ ಬಳೆಯೆ ತನ್ನುದರಾಂತರದೊಳ್ ತದೀಯನಿ
ರ್ಭರಭರದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ ೯೮

ವಿವೇಕವನ್ನು ಒಳಕೊಂಡಿರುವ ವಿದ್ಯೆಯಂತೆಯೂ ವೇದಜ್ಞಾನವನ್ನು ಪಡೆದಿರುವ ವಾಣಿಯಂತೆಯೂ ಯಜ್ಞವಿಚಾರವನ್ನು ಒಳಗೊಂಡಿರುವ ಶ್ರುತಿಯಂತೆಯೂ ಆಚಾರವಿಚಾರವನ್ನು ಒಳಗೊಂಡ ಸ್ಮೃತಿಯಂತೆಯೂ ಹೋಮವನ್ನೊಳಗೊಂಡಿರುವ ಸ್ವಾಹಾ ಎಂಬ ಮಂತ್ರದಂತೆಯೂ ಅಗ್ನಿಯನ್ನು ಗರ್ಭದಲ್ಲಿ ಧರಿಸಿರುವ ಅರಣಿಯಂತೆಯೂ, ರತ್ನಗರ್ಭೆಯಾದ ಭೂದೇವಿಯಂತೆಯೂ ಜ್ಞಾನಗರ್ಭವಾದ ಶ್ರೇಷ್ಠವಾದ ವಂದನೆಯಂತೆಯೂ ಅವಬೋಧಗರ್ಭದ ಮೇಧೆಯಂತೆಯೂ, ಕಾಮಗರ್ಭವಾದ ಇಚ್ಛೆಯಂತೆಯೂ, ನ್ಯಾಯಗರ್ಭ ನೀತಿಯಂತೆಯೂ, ಪ್ರಭಾವವನ್ನೊಳಗೊಂಡ ಶಕ್ತಿಯಂತೆಯೂ ಪರಿಣಾಮ ವನ್ನು ನಿರ್ಣಯಿಸಿಕೊಂಡಿರುವ ತುಷ್ಟಿಯಂತೆಯೂ, ಧೈರ್ಯಗರ್ಭದ ಸ್ಥಿರತೆಯಂತೆಯೂ ಪ್ರಸಾದ ಗರ್ಭದ ಭಕ್ತಿಯಂತೆಯೂ ಅಭ್ಯುದಯವನ್ನು ಒಳಗೊಂಡಿರುವ ಧರೆಯಂತೆಯೂ ಐಶ್ವರ್ಯಗರ್ಭವಾದ ಆಜ್ಞೆಯಂತೆಯೂ ಪ್ರಕಾಶವನ್ನು ಒಳಗೊಂಡಿರುವ ಕಾಂತಿಯಂತೆಯೂ, ಪ್ರಸಾದಗರ್ಭದ ದಯೆಯಂತೆಯೂ, ಶೃಂಗಾರಗರ್ಭವಾದ ಐಶ್ವರ್ಯದಂತೆಯೂ, ಆನಂದಗರ್ಭ ಲೀಲೆಯಂತೆಯೂ ಮಹತ್ವವನ್ನು ಪಡೆದೆ" ಎಂದು ಸ್ತುತಿಗೈದು ಹೋಯಿತು. ಅನಂತರ ಕೆಲವು ತಿಂಗಳುಗಳಾದ ಮೇಲೆ-೯೭. ಅದುವರೆಗೂ ಲಾಲನೆ ಮಾಡಿಸಿಕೊಂಡು, ತನ್ನ ನಡಗೆಯಿಂದಲೇ ನಡೆಯುವುದನ್ನು ಕಲಿತು ಹಿಂದೆ ನಡೆದುಬರುತ್ತಿದ್ದ ಕೇಳಿಹಂಸೆಗಳ ಜತೆಯಲ್ಲಿ ಅವುಗಳ ಹಿಂದೆ ನಡೆಯಲು ಕೂಡ ಈಗ ಸಾಧ್ಯವಾಗದೆ, ಕೈಗಳನ್ನು ಸಂತೋಷದಿಂದ ಅವುಗಳ ಮೇಲೂರಿಕೊಂಡು, ಅನುರಾಗರಸವು ಒಂದಾಗಿ ಸೇರಿದಂತೆ ಮೆತ್ತಗೆದ್ದು ಗರ್ಭಭಾರದಿಂದ ಬಳಲಿದ ದೇವಕಿಯ ಮಂದಗಮನ ವನ್ನು ಏನು ಹೇಳಲಿ!! ೯೮. ತೋರವಾದ ಹೆರಳಿನ

---

೧. ಅವರೋಧಗರ್ಭವೇಧೆ (ಕಖಗ) ೨. ಕಾಮಗರ್ಭಶ್ರೀ (ಕಖಗ) ೩. ಜಯಗರ್ಭ (ಕಖಗ) ೪. ಕೈಗಳಂ ಲೀಲೆಯಿನಾಂತು (ಕಖ)

ಮೊಲೆಗೆ ವಿಚಿತ್ರಪತ್ರಲತೆ ದುರ್ವಹಮೆಂಬ ವಿಲೋಚನಕ್ಕೆ ಕ
ಜ್ಜಲವತಿಭಾರವೆಂಬ ತನುಲೇಖೆಗೆ ಚಂದನದಣ್ಪು ಬಿಣ್ಣಿತೆಂ
ಬಲಸಪದಕ್ಕಲಕ್ತಕರಸಂ ಪೊರೆಯೆಂಬಿನಿತೊಂದುಚಿತ್ತಮಾ
ಲಲನೆಗೆ ದೇವಕೀವನಿತೆಗಾದುದು ನಿರ್ಭರ ಪೂರ್ಣಗರ್ಭದೊಳ್ ೯೯

ವ|| ಅಂತು [1]ನಿರ್ಭರಗರ್ಭ ಪ್ರಾದುರ್ಭಾವಮಾಗಿ ನವಮಾಸಂ ತೀವೆ ಸಮನಂತರಂ ಶ್ರಾವಣಕೃಷ್ಣಪಕ್ಷಾಷ್ಟಮೀ ರೋಹಿಣೀನಕ್ಷತ್ರದೊಳ್ ಮಹೋತ್ಕೃಷ್ಟಮಪ್ಪ [2]ಮುಹೂರ್ತದಿಂ ಸನಾಥವಾದ ನಿಶಾಮಧ್ಯಸಮಯದೊಳ್

ಅತಸೀಪುಷ್ಪಾವಭಾಸಂ ತನುವೆಸೆವಿನೆಗಂ ಕಿಂಕಿರಾತಪ್ರಸೂನ
ಪ್ರತಿಮಂ ಪೀತಾಂಬರಂ ರಂಜಿಸುವಿನಮುದಿತಾರ್ಕಪ್ರಭಂ ಕೌಸ್ತುಭಪ್ರ
ದ್ಯುತಿ ಬೀಱುತ್ತಿರ್ಪಿನಂ ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂ
ಕಿತಹಸ್ತಂ ವಾಸುದೇವಂ ದನುಜವಿಪಿನದಾವಂ ಸಮಸ್ತಪ್ರಭಾವಂ ೧೦೦

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ
ಘಟನಾಸ್ವತಂತ್ರ ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ
ಲಕ್ಷ್ಮೀಕಾಂತ ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ
ಶ್ರೀಜಗನ್ನಾಥವಿಜಯ ಮಹಾಪ್ರಬಂಧದೊಳ್
ಬಲಭದ್ರಾವತಾರ ಕೃಷ್ಣೋತ್ಪತ್ತಿವರ್ಣನಂ
ದ್ವಿತೀಯಾಶ್ವಾಸಂ

ಭಾರವೂ ಸ್ತನಭಾರವೂ ಇದ್ದುದರಿಂದ ಸಹಜವಾಗಿಯೇ ಮಂದಗಮನೆಯಾಗಿದ್ದಳು ಆ ಸುಂದರಿ. ಅವಳ ಗರ್ಭದಲ್ಲಿ ಹದಿನಾಲ್ಕು ಲೋಕಗಳನ್ನೂ ತನ್ನ ಉದರದಲ್ಲಿ ಧರಿಸಿರುವ ವಿಷ್ಣುವು ಬೆಳೆಯುತ್ತಿರುವಾಗ ಅವನ ಅತಿಶಯ ಭಾರದಿಂದ ಬಳಲಿದ ಅವಳ ಮಂದಗಮನವು ಇನ್ನೆಷ್ಟು ಮಂದವಾಯಿತೆಂದು ಹೇಗೆ ಹೇಳಲಿ! ೯೯. ಆ ದೇವಕೀದೇವಿ ಪರಿಪೂರ್ಣ ಗರ್ಭಿಣಿಯಾಗುತ್ತಲೂ ಅವಳ ಮೊಲೆಗೆ ಬರೆದ ಚಿತ್ರವಾದ, ಎಲೆಯ ಬಳ್ಳಿಯೂ ಮೊಲೆಗೆ ಸಹಿಸಲಾಗದ ಭಾರ. ಕಣ್ಣಿಗೆ ಕಣ್ಣುಕಪ್ಪೂ ಅತಿಭಾರ. ಕೋಮಲವಾದ ಅಂಗಕ್ಕೆ ಗಂಧಲೇಪನವೂ ಭಾರ, ಮಂದಗಮನದ ಕಾಲಿಗೆ ಅರಗಿನ ರಸವೂ ಭಾರ ಎನ್ನಿಸಿತು. ವ|| ಹಾಗೆ ಅತಿಶಯವಾದ ಗರ್ಭವು ಪರಿಪೂರ್ಣವಾಗಿ ಬಳೆದು, ಒಂಬತ್ತು ತಿಂಗಳು ತುಂಬಿದ ನಂತರ ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮಿಯಲ್ಲಿ ರೋಹಿಣೀ ನಕ್ಷತ್ರದಲ್ಲಿ ಮಹೋತ್ಕೃಷ್ಟವಾದ ಮುಹೂರ್ತದಿಂದ ಕೂಡಿದ ಮಧ್ಯರಾತ್ರಿಯ ಸಮಯದಲ್ಲಿ ಶಾಶ್ವತನೂ, ಗದಾಶಂಖ ಚಕ್ರಾಂಕಿತಹಸ್ತನೂ ರಾಕ್ಷಸರೆಂಬ ಕಾಡಿಗೆ ಕಾಡುಕಿಚ್ಚೂ ಸಮಸ್ತ ಪ್ರಭಾವವುಳ್ಳವನೂ ಆದ ವಾಸುದೇವನು ಅವತರಿಸಿದನು. ಹುಟ್ಟುವಾಗಲೇ ಅವನ ದೇಹವು ಅಗಸೇ ಹೂವಿ ನಂತೆ ಹೊಳೆಯುತ್ತಿದ್ದಿತು. ಮುತ್ತುಗದ ಹೂವಿನ ಬಣ್ಣದ ಪೀತಾಂಬರವು ರಂಜಿಸುತ್ತಿದ್ದಿತು. ಕೌಸ್ತುಭವು ಬಾಲಸೂರ್ಯನಂತೆ ಹೊಳೆಯುತ್ತಿದ್ದಿತು.

ಇದು ಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಬಲರಾಮಾವತಾರ ಕೃಷ್ಣೋತ್ಪತ್ತಿ ವರ್ಣನೆಗಳ ಎರಡನೆಯ ಆಶ್ವಾಸ.

---

೧. ಗರ್ಭನಿರ್ಭರಂ (ಕಖಗ) ಗರ್ಭನಿರ್ಭರ (ಮೊಲಿ) ೨. ಮುಹೂರ್ತ ಸನಾಥವಾದ ನಿಶಾವಸಾನಸಮಯದೊಳ್ (ಕಖಗ)

# ತೃತೀಯಾಶ್ವಾಸಂ

ಶ್ರೀರಮಣಂ ಪುಟ್ಟಿರೆ ಕೋ
ಟೀರಾದ್ಯಾಭರಣಚಕ್ರಮುಖ್ಯಾಯುಧ ನಾ
ನಾರಶ್ಮಿಯನುವಿಜೃಂಭಿಸೆ
ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ ೧

ವ॥ ಆಗಳಭೂತಪೂರ್ವಮಾದ ಪ್ರಸೂತಿಕೌತುಕಮನಾತ್ಮೀಯಾಪ್ತಗುಪ್ತವಾಕ್ಯದಿಂ ಕೇಳ್ದಕ್ರೂರಾದಿ ಯಾದವರ್ ಬಂದು ನೋಡಿ

ಇದು ತೇಜೋದುರ್ನಿರೀಕ್ಷ್ಯಂ ತೊಳಗಿ ಬೆಳಗಿ ಕಣ್ಗೊಪ್ಪುತಿರ್ದಪ್ಪುದಿಂತೀ
ಮದವತ್ಕಂಸಂಗಕಾಂಡಕ್ಷಯಸಮುದಿತಚಂಡಾಂಶು ಚಂಡಾಂಶುವೆಂಬಂ
ದದಿನೊಪ್ಪುತ್ತಿರ್ಪುದಂದಬ್ಧಿಯೊಳುದಯಿಸಿದಾ ಕೌಸ್ತುಭಂ ಕೌಸ್ತುಭಂದಾ
ಳ್ದಿದನೀತಂ ಕೇವಲಂ ದಾನವರಿಪುವೆ ಪೆಱಂಗೆಲ್ಲಿತೀ ದಿವ್ಯರೂಪಂ ೨

ವ॥ ಎಂದು ಪರಮಾನಂದದೊಳವರ್ ತಮ್ಮೊಳ್ಳೋರೊರ್ಬರೊಂದೊಂದು ಮಾತಂ ತಮ್ಮ ಮನಕ್ಕೆ ತೋಱಿದಂತೆ ನುಡಿಯುತ್ತಿರಲಾ ಪ್ರಸ್ತಾವದೊಳ್

ಘನಪಥವಾಹಿನೀಲಹರಿಕಾರವಮೆಂಬಿನಮುಣ್ಮಿದತ್ತು ಭೋ
ರೆನೆ ದಿವಿಜೇಂದ್ರತೂರ್ಯರವಮಂಬರಲಕ್ಷ್ಮಿಯ [೧]ಮಂದಹಾಸಮೆಂ
ಬಿನಮೆಸೆದತ್ತರಲ್ವಲರ ಬೆಳ್ಸರಿ ತತ್ಸುರನಂದನಾಳಿನೀ
ನಿನದವಿದೆಂಬಿನಂ ಪಸರಿಸಿತ್ತಮರೀಮೃದುಗೇಯನಿಸ್ವನಂ ೩

೧. ಶ್ರೀಕೃಷ್ಣನು ಜನಿಸಿದಾಗಲೇ ಅವನ ವಿಶಾಲವಾದ ಎದೆಯ ಮೇಲೆ ಕೌಸ್ತುಭ ರತ್ನವು ರಾರಾಜಿಸುತ್ತಿದ್ದಿತು. ಕಿರೀಟವೇ ಮೊದಲಾದ ಆಭರಣಗಳ ಮತ್ತು ಚಕ್ರಾದ್ಯಾಯುಧಗಳ ನಾನಾ ವರ್ಣದ ಕಾಂತಿಗಳು ಅದನ್ನನುಸರಿಸಿ, ಅದರ ಹೊಳಪನ್ನು ಹೆಚ್ಚಿಸುತ್ತಿದ್ದವು. ವ॥ ಹಿಂದೆ ಎಂದೂ ಆಗದ ಆಶ್ಚರ್ಯಕರವಾದ ಹೆರಿಗೆಯ ಸಮಾಚಾರವನ್ನು ತನ್ನ ಆಪ್ತರು ಗುಟ್ಟಾಗಿ ತಿಳಿಸಿದುದರಿಂದ ಅಕ್ರೂರನೇ ಮೊದಲಾದವರು ಬಂದು ನೋಡಿ ೨. ತೇಜಸ್ಸಿನಿಂದ ನೋಡುವುದಕ್ಕೆ ದುಸ್ಸಾಧ್ಯವಾಗಿ ಹೊಳೆಯುತ್ತಿರುವ ಇದು ಅಂದು ಕ್ಷೀರಸಾಗರದಲ್ಲಿ ಉದಯಿಸಿದ ಕೌಸ್ತುಭಮಣಿ. ಕ್ರೂರವಾಗಿ ಹೊಳೆಯುವ ಇದು ಮದಿಸಿದ ಕಂಸನಿಗೆ ಅಕಾಲದಲ್ಲಿ ಉದಿಸಿದ ಪ್ರಳಯ (ಕಾಲ) ಸೂರ್ಯನಂತೆ ಕಾಣುತ್ತಿದೆ. ಇದನ್ನು ಧರಿಸಿರುವ ಈತ ನಿಜವಾಗಿಯೂ ಸಾಕ್ಷಾತ್ ರಾಕ್ಷಸದ್ವೇಷಿ ವಿಷ್ಣುವೇ. ಬೇರೆಯವನಿಗೆ ಈ ದಿವ್ಯರೂಪವು ಎಲ್ಲಿಯದು? ವ॥ ಎಂದು, ಪರಮಾನಂದದಿಂದ ಒಬ್ಬೊಬ್ಬರು ಒಂದೊಂದು ಮಾತನ್ನು ತಮ್ಮ ಮನಸ್ಸಿಗೆ ಬಂದಂತೆ ಆಡುತ್ತಿದ್ದರು. ಆಗ ೩. ಇದೇನು ಆಕಾಶಗಂಗೆಯ ಪ್ರವಾಹದ ಧ್ವನಿಯೋ ಅಥವಾ ಆಕಾಶದಲ್ಲಿ ಸಂಚರಿಸುವ ಸೇನೆಯ ಧ್ವನಿಯೋ! ಎಂಬಂತೆ ದೇವೇಂದ್ರನ ತೂರ್ಯಧ್ವನಿಯು ಭೋರೆಂದು ಕೇಳಿಸಿತು.

---

೧. ಮಂಟಪಕ್ಕೆ ಬಂದನಿಮಿಷರೆಲ್ಲರುಂ ನಲಿದರಂತತಿ (ಕಖ)

ವ॥ ಅಂತುಮಲ್ಲದೆ

ದನುಜಕ್ಷತ್ರಾಧಮಾನೀಕಮನಗಣಿತಮಂ ಕೂಡೆ ನಿರ್ಮೂಲನಂಗೆ
ಯ್ದನಿತುಂ ಭೂಭಾರಮಂ ಪಿಂಗಿಸಲುದಯಿಸಿದಂ ಚಕ್ರಿ ನಮ್ಮೀಭರಾಕ್ರಾಂ
ತಿನಿರೋಧಂ ಮಾಣ್ದುದಿನ್ನೆಂದಹಿಪತಿ ಪೆಡೆಯಂ ಬಿರ್ಚಿದಂ ದಿಗ್ಗಜಂ ಭೋ
ರೆನೆ ದಾನಾಸಾರಮಂ ಸೂಸಿದುವು ಕಮಠನುಂ ತೂಗಿದಂ ಹರ್ಷದಿಂದಂ ೪

ವ॥ ಅಂತು ಸಕಲಲೋಕಂಗಳೊಳುತ್ಸವಪರಂಪರೆ ನೆಗಟುತ್ತುಮಿರಲಿತ್ತಲವತಾರಂಗೆಯ್ದು ಮುಂದೆ ನಿಂದಿರ್ದ ಜನಾರ್ದನಂಗೆ ಬದ್ಧಾಂಜಲಿಯಾಗಿ

ಮತಿಯೊಳ್ ನಿರ್ಭರಭಕ್ತಿ ಕಣ್ಮಲರೊಳಾನಂದಾಶ್ರು ಮೈಯೊಳ್ ಸಮು
ದ್ಗತರೋಮಂ ಮುಖದೊಳ್ ವಿಲಾಸಮೆಸೆಯುತ್ತಿರ್ಪನ್ನಮಿಂತೆಂದರಾ
ನತಮೂರ್ಧರ್ ಪಿತೃಮಾತೃಗಳ್ ದಯೆಯಿನಸ್ಮದ್ಗರ್ಭದೊಳ್ ಗೋಮಿನೀ
ಪತಿ ನೀಂ ಪುಟ್ಟಿದೆ ಧನ್ಯರೆಮ್ಮವೊಲದಾರ್ ಮುನ್ನಾದವರ್ ಯಾದವರ್ ೫

ವ॥ ಎಂದು ನುಡಿದನಂತರಂ ಕಂಸಕೃತಾಪಚಾರಮಂ ತತ್ಪ್ರಪಂಚಮನಱಿಪೆ, ಕಮಲನಾಭಂ ಕರುಣರಸಾರ್ದ್ರಹೃದಯನಾಗಿ ಮುನ್ನಂ ನಿಮಗೆ ಪುಟ್ಟಿದುವಾಱುಂ ಮಕ್ಕಳೆಂಬಿವು ಪಾತಾಳದೊಳಿರ್ದ ಹಿರಣ್ಯಕಶಿಪುವಿನ ಮಕ್ಕಳ್, ಮದೀಯಸಂದೇಶದಿಂ ಪುಟ್ಟಿಪೋದುವು, ಮತ್ತೊಂದು ಶಿಶುವೆಂಬುದಂ ಬಸಿಱಿಳಿದುದೆಂಬಂತೆ ಗರ್ಭದಿಂ ತೆಗೆದುಯ್ದು ರೋಹಿಣಿಯ ಗರ್ಭದೊಳ್ ನಿಲಿಸಿದೆಂ, ಅತ್ತ ಗೋಕುಲದೊಳಾ ಮಹಾತ್ಮನುದಯಿಸಿರ್ಪಂ, ಅಂತುಮಲ್ಲದೆಯುಂ

ಅಂಬರಲಕ್ಷ್ಮಿಯ ಕಿರುನಗೆಯೆಂಬಂತೆ ಅರಳಿದ ಹೂವಿನ ತುಂತುರು ಮಳೆ ಸುರಿಯಿತು. ಇದು ಆ ದೇವನಂದನವನದ ಹೆಣ್ದುಂಬಿಗಳ ಧ್ವನಿಯೆಂಬಂತೆ ದೇವವನಿತೆಯರ ಮೃದುಗಾನ ಧ್ವನಿಯು ಹರಡಿತು. ೪. ಅದೂ ಅಲ್ಲದೆ-ರಾಕ್ಷಸ ಕ್ಷತ್ರಿಯಾಧಮರನ್ನೂ ಅವರ ಅಗಣಿತ ಸೇನೆಯನ್ನೂ ಕೂಡಲೇ ನಿರ್ಮೂಲ ಮಾಡಿ, ಭೂಭಾರವನ್ನು ಹೋಗಲಾಡಿಸುವುದಕ್ಕಾಗಿ ವಿಷ್ಣು ಹುಟ್ಟಿದ್ದಾನೆ. ಇನ್ನು ನಮಗೆ ಭಾರಾಕ್ರಮಣವು ತಪ್ಪಿತು. ಎಂದು ಸರ್ಪರಾಜನು ಹೆಡೆಯನ್ನು ಬಿಚ್ಚಿದನು. ದಿಗ್ಗಜಗಳು ಮದೋದಕಧಾರೆಯನ್ನು ಸುರಿಸಿದವು. ಆದಿಕೂರ್ಮನು ಹರ್ಷದಿಂದ ತಲೆದೂಗಿದನು. ವ॥ ಹಾಗೆ ಸಕಲ ಲೋಕಗಳಲ್ಲೂ ಉತ್ಸವ ಪರಂಪರೆ ನಡೆಯುತ್ತಿರಲು ಇಲ್ಲಿ ಅವತರಿಸಿ, ತಮ್ಮ ಮುಂದೆ ನಿಂತಿದ್ದ ಕೃಷ್ಣನಿಗೆ ದೇವಕೀವಸುದೇವರು ಕೈಮುಗಿದರು. ೫. ಮನಸ್ಸಿನಲ್ಲಿ ಅತಿಭಕ್ತಿಯೂ ಹೂವಿನಂತಿರುವ ಕಣ್ಣುಗಳಲ್ಲಿ ಆನಂದಬಾಷ್ಪವೂ ಮೈಯ್ಯಲ್ಲಿ ರೋಮಾಂಚನವೂ ಉಳ್ಳ ಆ ತಾಯಿತಂದೆಗಳು, ತಲೆಬಾಗಿ, "ಭೂಕಾಂತನೇ, ನೀನು ದಯೆಯಿಂದ ನಮ್ಮ ಗರ್ಭದಲ್ಲಿ ಜನಿಸಿದೆ. ನಮ್ಮ ಪೂರ್ವಜರಾದ ಯಾದವರಲ್ಲಿ ನಮ್ಮಂತಹ ಧನ್ಯರಾರಿರುವರು!" ವ॥ ಎಂದು ಹೇಳಿ, ಕಂಸನು ಮಾಡಿದ ಅಪಕಾರದ ಆ ವಿವರವನ್ನು ತಿಳಿಸಿದರು. ಕಮಲನಾಭ ಕೃಷ್ಣನು ಕರುಣಾರಸಾರ್ದ್ರಹೃದಯನಾಗಿ ಮುಂಚೆ ನಿಮಗೆ ಹುಟ್ಟಿದ ಆರು ಮಕ್ಕಳೂ, ಪಾತಾಳದಲ್ಲಿದ್ದ ಹಿರಣ್ಯಕಶಿಪುವಿನ ಮಕ್ಕಳೇ. ನನ್ನ ಆಜ್ಞೆಯಿಂದ ಹುಟ್ಟಿಹೋದವು. ಮತ್ತೊಂದು ಶಿಶುವನ್ನು ಬಸಿರಿಳಿಯಿತೆಂಬಂತೆ ಗರ್ಭದಿಂದ ತೆಗೆದುಕೊಂಡು ಹೋಗಿ, ರೋಹಿಣಿಯ ಗರ್ಭದಲ್ಲಿ ನಿಲ್ಲಿಸಿದೆನು. ಗೋಕುಲದಲ್ಲಿ ಆ ಮಹಾತ್ಮನುದಯಿಸಿರುವನು.

ಮುನಿದಸ್ಮತ್ಸಹಜಾತರಂ ಶಿಶುಗಳಂ ಕೊಂದುಗ್ರಸೇನಂಗೆ ಬಂ
ಧನಮಂ ತಂದು ತದೀಯ ರಾಜ್ಯಪದದೊಳ್ ನಿಂದಾತನಂ ತಾತ ಕೊ
ಲ್ವೆನಮೋಘಂ ದನುಜಾವತಂಸನನತರ್ಕ್ಯೈಶ್ವರ್ಯ ಕಾಸಾರಹಂ
ಸನನತ್ಯಂತನೃಶಂಸನಂ ಸುರಬಲಪ್ರಧ್ವಂಸನಂ ಕಂಸನಂ ೬

ವ|| ಎಂದು ವಿಶ್ವರೂಪಂ ಕರ್ತವ್ಯಮನಱಿಪಿ ತನ್ನ ದಿವ್ಯರೂಪವನಡಂಗಿಸಿ ವಿಷ್ಣುಮಾಯೆಯಂ ಪಸರಿಸಿ ಸಾಮಾನ್ಯಶಿಶುರೂಪಮಂ ಕೈಕೊಂಡು ನಿಲ್ವುದುಂ, ಆ ವಸುದೇವನುಂ ದೇವಕಿಯುಮಿದಾರೊಡನೆ ನುಡಿದವೆಮಗುತ್ತರಮಂ ಕೊಟ್ಟರಾರ್, ಇದು ಶಿಶುತಾಂ ಬೇಱಿ; ನಾರಾಯಣನೆ ಬಂದು ನುಡಿದು ಪೋದನೆಂಬ ವಿಭ್ರಾಂತಿಯನಪ್ಪುಕೆಯ್ದುಮೆಂತಾದೊಡಮೀ ಶಿಶುವಂ ನಮ್ಮ ಸಂತಾನಕ್ಕುೞಿಪಿ ಕೃತಕೃತ್ಯರಪ್ಪುದರ್ಕುಪಾಯಮಾವುದು. ಈ ಶಿಶುವಿನೞ್ಕಿಯಂ ರಕ್ಕಸಂ ಕೇಳ್ದೊಡುೞಿಯಲೀಯಂ; ಇದಂ ಕೇಳ್ದೊಡೆ ಕಂಸಂ ಕೊಂಡುಯ್ಗುಮೆಂದು ನಾಡೆಯುಂ ಮಱುಗಿ ಸಿಡಿಮಿಡಿಗೊಳುತ್ತಿರ್ಪನ್ನೆಗಂ

ಇಂದೆನಿತಾನುಮಂಬುಧರಕಾಲದ ಕಾಳದಿರುಳ್ಗಳೆಲ್ಲವೇಂ
ನಿಂದುವೊ ಗಟ್ಟಿಗೊಂಡೆನೆ ಭಯಂಕರಮಾದುದು ವಿಷ್ಣುಮಾಯೆಯಿಂ
ದಂದಿನ ಕಾರಿರುಳ್ ನೆಗೆದ ಕಾರ್ಮುಗಿಲಿಂ ದಳವೇಱಿದೊಂದುಮ
ಬ್ರಂದಮಜಾಂಡಮಂಜನಕರಂಡಕದಂತೆ ಕಱಂಗಿ ನಿಲ್ವಿನಂ ೭

ನೆಗೆದ ಮುಗಿಲೆಂಬ ನೀಲಾ
ದ್ರಿಗಳಿಂ ನಿರ್ಝರಮೆ ಸೂಸಿ ಸುರಿದಪುವೆಂಬ
ನ್ನೆಗಮೇಂ ಕಱಿದುದೊ ಪೆರ್ಮೞೆ
ಜಗಮೆಲ್ಲಂ ಸಲಿಲಪೂರದಿಂ ತೇಂಕುವಿನಂ ೮

ಅದಲ್ಲದೆ ೬. ಕೋಪದಿಂದ ನನ್ನ ಸಹೋದರ ಶಿಶುಗಳನ್ನು ಕೊಂದು, ಉಗ್ರಸೇನನಿಗೆ ಬಂಧನವನ್ನು ತಂದು, ಅವನ ರಾಜ್ಯದಲ್ಲಿ ನಿಂದಿರುವ ರಾಕ್ಷಸಶಿರೋಮಣಿಯೂ ಊಹಿಸಲಾಗದ ಐಶ್ವರ್ಯ ಸರೋವರದ ಹಂಸನೂ ಅತಿಕ್ರೂರಿಯೂ ದೇವಬಲ ಧ್ವಂಸಿಯೂ ಆದ ಕಂಸನನ್ನು ನಿಜವಾಗಿಯೂ ಕೊಲ್ಲುವೆನು ಅಪ್ಪಾ!" ವ|| ಎಂದು ವಿಶ್ವರೂಪಿ ಕೃಷ್ಣನು ಅವರ ಕರ್ತವ್ಯವನ್ನು ತಿಳಿಸಿ, ತನ್ನ ದಿವ್ಯರೂಪವನ್ನಡಗಿಸಿ, ವಿಷ್ಣುಮಾಯೆಯನ್ನು ಹರಡಿ, ಸಾಮಾನ್ಯ ಶಿಶುರೂಪವನ್ನು ಧರಿಸಿದನು. ಆಗ ಆ ವಸುದೇವನೂ ದೇವಕಿಯೂ "ನಾವು ಆರೊಡನೆ ಮಾತನಾಡಿದೆವು? ನಮಗೆ ಉತ್ತರವನ್ನು ಕೊಟ್ಟವರಾರು? ಆ ಶಿಶು ತಾನು ಬೇರೆಯಾಗಿದೆ. ನಾರಾಯಣನೇ ಬಂದು, ನುಡಿದು ಹೊರಟುಹೋಗಿರಬೇಕು" ಎಂದುಕೊಂಡು, ಹೇಗಾದರೂ ಮಾಡಿ ಈ ಮಗುವನ್ನು ನಮ್ಮ ಸಂತಾನಕ್ಕೆ ಉಳಿಸಿ, ಕೃತಕೃತ್ಯರಾಗಬೇಕು. ಈ ಮಗುವಿನ ಅಳುವನ್ನು ಕೇಳಿದರೆ ರಾಕ್ಷಸನು ಇದನ್ನು ಉಳಿಯಲು ಬಿಡನು; ಈ ಧ್ವನಿಯನ್ನು ಕೇಳಿದರೆ ಕಂಸನು ಬಂದು, ಇದನ್ನು ಎತ್ತಿಕೊಂಡು ಹೋಗುವನು. ಎಂದು ಬಹಳವಾಗಿ ಮರುಗಿ ಕಳವಳಗೊಂಡು ಇರುತ್ತಿರುವಲ್ಲಿ ೭. ಈ ದಿನ ಎಷ್ಟೋ ಮಳೆಗಾಲದ ಕತ್ತಲೆಯ ಕಪ್ಪುರಾತ್ರಿಗಳೆಲ್ಲವೂ ಒಟ್ಟುಗೂಡಿ, ಗಟ್ಟಿಯಾಗಿ ನಿಂತಿವೆಯೋ ಎನ್ನುವಂತೆ ವಿಷ್ಣುಮಾಯೆಯಿಂದ ಆ ರಾತ್ರಿಯು ಏರಿದ ಮಳೆಗಾಲದ ಮೋಡದಿಂದಲೂ ಹೆಚ್ಚು ಕತ್ತಲೆಯಿಂದಲೂ ಬ್ರಹ್ಮಾಂಡವೇ ಕಪ್ಪಿನ ಭರಣಿಯಂತೆ ಆಗಿ ಭಯಂಕರವಾಗಿದ್ದಿತು. ೮. ಏರಿದ ಮೋಡವೆಂಬ ನೀಲಗಿರಿಯಿಂದ ಝರಿಗಳೇ ಹರಡಿ ಸುರಿಯುತ್ತಿರುವವೋ ಎಂಬಂತೆ ದೊಡ್ಡಮಳೆಯು ಜಗತ್ತೆಲ್ಲವೂ

ವ॥ ಅಂತಗುರ್ವಾಗಿ ಪರ್ವಿದ ಮಂದಗಟ್ಟಲೆಯೊಳಂ ಧಾರಾವರ್ತವೆನಿಸಿ ಕಾರ್ಮುಗಿಲಿಂ ಕಱಿವ ಪೆರ್ಮೞೆಯೊಳಮಂಜದೆ ಮಗನನೆತ್ತಿಕೊಂಡು ವಸುದೇವನೆಂತಾನುಮಾರಾಕ್ಷಸರಕ್ಷಿತ ಪ್ರಸೂತಿಕಾನಿಳಯದಿಂ ತಳರ್ದು ನಡೆವಾಗಳಾ ಯೋಗನಾಥಂ ಪುರಜನಂ ಮೆಯ್ಯಱಿಯದಂತು ನಿದ್ರೆಯಂ ಕವಿಸೆ ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆಯೊಳುದ್ದೇಶಕ್ಕೆ ಬರ್ಪಲ್ಲಿ

ಅರಿದಾಯ್ತೀ ಶಿಶುಗೆತ್ತ ಸಾರ್ವೆನಱಿಸಲ್ ಕಂಸಾಸುರಂ ಪೇೞ್ದ ಚಾ
ರರ ಕೈದೀವಿಗೆ ಮಾಲೆಗೊಂಡು ಬೆಳಗುತ್ತೀಬಂದುದೆಂಬೊಂದು ಭೀ
ತಿರಸಂ ಶ್ರೀವಸುದೇವನೊಳ್ ನೆಗೞ್ವಿನಂ ನಾನಾಫಣಾರತ್ನಮೊ
ಪ್ಪಿರೆ ಬಂದಂ ಮೞೆಯಂ ನಿವಾರಿಸಲನಂತಂಗಂದನಂತೋರಗಂ ೯

ವ॥ ಅಂತು ಬಂದುರಗಪರಿವೃಢಂ ಪ್ರಸಾರಿತಫಣಾಸಹಸ್ರನಾಗಿ ಕೊಡೆವಿಡಿದಂತೆ ಬರೆ ಪೆಡೆವಣಿಯ ಬೆಳಗಿನಿಂ ಬಟ್ಟೆಗೊಂಡತಿತ್ವರಿತಗತಿಯಿಂ ಪೋಗೆವೋಗೆ ತನ್ಮಹಾವೃಷ್ಟಿಯಿಂ ತೆಕ್ಕನೆ ತೀವಿ ಬಂದ ಕಾಳಿಂದಿಯಂ ಕಂಡಂ

ಪಿರಿದುಂ ಕಂಸನ ಭೀತಿಯಿಂದೆ ವಸುದೇವಂ ಮುಂದುಗೆಟ್ಟಲ್ಲಿ ಕ
ಮ್ಮರಿವಾಯ್ದಂತಿರೆ ಪೊಕ್ಕಡಂಗೆ ತನಗಾ ತೀವಿರ್ದ ಕಾಳಿಂದಿ ಚೆ
ಚ್ಚರಮಾಗಳ್ ನೆಲೆಯಾಗೆ [1]ದಾಂಟಿ ನಡೆದಂ ದುರ್ವಾರಸಂಸಾರಸಾ
ಗರಮಂ ದಾಂಟಿಸುವಾ ಮಹಾಮಹಿಮನಂ ಪೆತ್ತಂಗಿದೇಂ ಚಿತ್ರಮೇ ೧೦

ನೀರಿನ ಪ್ರವಾಹದಿಂದ ತೇಲುವಂತೆ ಅದೆಷ್ಟು ಸುರಿಯಿತೋ! ವ॥ ಹಾಗೆ ಭಯಂಕರವಾಗಿ ಹಬ್ಬಿದ ಕಗ್ಗತ್ತಲೆಯಲ್ಲಿ ಮಳೆಗಾಲದ ಮೋಡದಿಂದ ಧಾರಾಕಾರವಾಗಿ ಸುರಿಯುತ್ತಿರುವ ದೊಡ್ಡಮಳೆಯಲ್ಲೂ ಹೆದರದೆ ವಸುದೇವನು ಮಗುವನ್ನೆತ್ತಿಕೊಂಡು, ಹೇಗೋ ಆ ರಾಕ್ಷಸರು ಕಾಯುತ್ತಿದ್ದ ಹೆರಿಗೆಯ ಮನೆಯಿಂದ ಹೊರಟು ನಡೆದನು. ಆ ಸಮಯದಲ್ಲಿ ಆ ಯೋಗನಾಥ ಕೃಷ್ಣನು ಪುರಜನರೆಲ್ಲ ಮೈಮರೆಯುವಂತೆ ನಿದ್ದೆಯನ್ನು ಕವಿಸಿದನು. ಮಧುರೆಯಿಂದ ಹೊರಟ ಆ ವಸುದೇವನು ಬಯಲು ತೊರೆಹರಿಯುವ ದಾರಿಯಲ್ಲಿ ಬರುತ್ತಾ ಚಿಂತಿಸಿದನು. ೯. "ಅಸಾಧ್ಯವಾಗಿದೆ. ಈ ಶಿಶುವಿಗಾಗಿ ಎಲ್ಲಿ ಹೋಗಲಿ! ಕಂಸಾಸುರನು ಹೇಳಿ ಕಳುಹಿಸಿದ ಚಾರರ ಕೈದೀವಿಗೆಗಳು ಸಾಲಾಗಿ ಬೆಳಕನ್ನು ಮಾಡಿಕೊಂಡು ಇಗೋ ಬರುತ್ತಿವೆ. ಅವನಿಗೆ ಭೀತಿ ಹೆಚ್ಚಾಗುತ್ತಿದ್ದಿತು. ಆದಿಶೇಷನು ಕೃಷ್ಣನಿಗೆ ಮಳೆಯನ್ನು ತಪ್ಪಿಸವುದಕ್ಕಾಗಿ ಹೆಡೆಯ ನಾನಾ ರತ್ನಗಳಿಂದ ಬೆಳಗುತ್ತ ಬಂದನು. ವ॥ ಹಾಗೆ ಬಂದ ಸರ್ಪರಾಜನು ಸಾವಿರ ಹೆಡೆಗಳನ್ನೂ ಬಿಚ್ಚಿ ಪಸರಿಸಿ ಕೊಡೆಯನ್ನಾಗಿಸಿ ಹಿಡಿದು ಬರುತ್ತಿದ್ದನು. ಹೆಡೆಮಣಿಗಳ ಬೆಳಕಿನಿಂದ ದಾರಿಯನ್ನು ಹಿಡಿದು ಬಹಳ ವೇಗವಾಗಿ ನಡೆದು ಹೋಗುತ್ತ ಅತಿಯಾದ ಮಳೆಯಿಂದ ತುಂಬಿ ಹರಿಯುವ ಯಮುನಾನದಿಯನ್ನು ವಸುದೇವನು ಕಂಡನು. ೧೦. ಕಂಸನಿಂದ ಅತಿ ಭೀತನಾದ ಆ ವಸುದೇವನು ಮುಂದುಗಾಣದೆ, ಜಲಪಾತದಲ್ಲಿಳಿದಂತೆ ಅವನು ನದಿಯಲ್ಲಿಳಿಯಲು, ತುಂಬಿ ಹರಿಯುವ ಆ ಯಮುನೆಯು ಹಿಂದಕ್ಕೆ ಸರಿದು ಅವನಿಗೆ ಆಶ್ರಯವನ್ನು ಕೊಟ್ಟುದರಿಂದ ಬೇಗನೆ ನದಿಯನ್ನು ದಾಟಿ,

---

೧. ದಾಂಟಿದೆನದಂ (ಕ)

ತೀರದೊಳಿರ್ದ ಗೋಕುಲಮನಾನಕದುಂದುಭಿ ಪೊಕ್ಕು ಸೂತಿಕಾ
ಗಾರದೊಳಾಗಳಾಗಳೆ ಯಶೋದೆಗೆ ಸಂಭವಿಸಿರ್ದ ಕನ್ನೆಯೊಳ್
ಶೌರಿಯನಂದು ಪಲ್ಲಟಿಸಿ ಚಚ್ಚರಮಾಕೆಯನೆತ್ತಿಕೊಂಡು ದು
ರ್ವಾರತಮೋನಿಗೂಢಗತಿಯಿಂ ಪರಿದೈದಿದನಾತ್ಮಗೇಹಮಂ ೧೧

ವ|| ಅಂತೆಯ್ದಿ ಪೊಕ್ಕು ಸುತ್ರಾಮಾರಿಗೆ ಮಾರಿಯಂ ತರ್ಪಂತೆ ತಂದಾ ಕುಮಾರಿಯಂ ದೇವಕಿಯ ಮುಂದೆ ಪಟ್ಟರಿಸಿ ಪೋದ ಬಂದ ವೃತ್ತಾಂತಮಂ ಪೇಟ್ದು ತತ್ಪೂರ್ವಪ್ರಸವೋಚಿತ ಮಿಥ್ಯಾಸಂಭ್ರಮಮನಪ್ಪುಕೆಯ್ದಿರ್ಪುದುಂ

ಘನಘೋರನಿಷ್ಠುರಾಂಗ
ಧ್ವನಿಯಿಂದಾಶಿಶುವಿನಟ್ಟಿ ತೆಕ್ಕನೆ ತೀವಿ
ತ್ತನಿತುಂ ದಿಕ್ತಟಮಂ ಭೋ
ರೆನೆ ಶಂಕಾಕುಳಿತಮಪ್ಪಿನಂ ಭುವನಜನಂ ೧೨

ಸಕಳಬ್ರಹ್ಮಾಂಡಭಾಂಡೋದರಮೊಡೆದುದಿದೆಂತಪ್ಪ ಕೋಳಾಹಳಂ ಕೌ
ತುಕದಿಂದ್ರಂ ಪಾಯ್ದನಕ್ಕುಂ ಕವಿಯಲೆಲೆಲೆ ಸನ್ನಾಹಮಂ ತಾಳ್ದಿ ಸೈನ್ಯ
ಪ್ರಕರಂ ಬರ್ಕೆಂಬುದುಂ ತತ್ಸಮಯದೊಳೆ ಗೃಹಾಧ್ಯಕ್ಷನಿಂತೀರವಂ ದೇ
ವಕಿ ಪೆತ್ತಾಕೂಸಿನೊಂದಟ್ಟಿಯ ದನಿಯೆನೆ ಕೇಳ್ದಲ್ಲಿಗೆಯ್ತಂದು ಕಂಸಂ ೧೩

ವ|| ಅಂತು ಸೂತಿಕಾಸದನಮಂ ಪೊಕ್ಕು ದೇವಕಿಯ ಮುಂದೆ ಪಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು ನಡೆತಂದು

ಸುರಕ್ಷಿತನಾಗಿ ಮುಂದೆ ನಡೆದನು. ದುರ್ವಾರ ಸಂಸಾರ ಸಾಗರವನ್ನು ದಾಟಿಸುವ ಆ ಮಹಾ ಮಹಿಮನನ್ನು ಮಗನನ್ನಾಗಿ ಪಡೆದವನಿಗೆ ಇದೇನು ವಿಚಿತ್ರವೆ? ೧೧. ತೀರದಲ್ಲೇ ಇದ್ದ ಗೋಕುಲವನ್ನು ಹೊಕ್ಕು, ಹೆರಿಗೆಯ ಮನೆಯಲ್ಲಿ ಆಗಲೇ ಯಶೋದೆಯಲ್ಲಿ ಜನಿಸಿದ್ದ ಕನ್ಯೆಗೆ ಬದಲಾಗಿ ಕೃಷ್ಣನನ್ನು ಅದಿದ್ದೆಡೆಯಲ್ಲಿ ಮಲಗಿಸಿ, ಬೇಗ ಆ ಕನ್ನೆಯನ್ನೆತ್ತಿಕೊಂಡು, ಕಾಲಿನ ಶಬ್ದವು ಕೇಳಿಸದಂತೆ ಆ ಕಗ್ಗತ್ತಲೆಯಲ್ಲಿ ಓಡಿಬಂದು ಗುಟ್ಟಾಗಿ ತನ್ನ ಮನೆಯನ್ನು ಸೇರಿದನು. ಹಾಗೆ ಬಂದು ಮನೆಯನ್ನು ಸೇರಿದ ವಸುದೇವನು ಕಂಸನಿಗೆ ಮಾರಿಯನ್ನು ತರುವಂತೆ ತಾನು ತಂದ ಆ ಕುಮಾರಿಯನ್ನು ದೇವಕಿಯ ಮುಂದೆ ಮಲಗಿಸಿ, ತಾನು ಹೋಗಿ ಬಂದ ಸಮಾಚಾರವನ್ನು ಹೇಳಿ, ಆಗ ತಾನೆ ಹೆರಿಗೆಯಾದರೆ ಹೇಗೋ ಹಾಗೆ ಉಚಿತವಾದ ಸುಳ್ಳು ಸಡಗರವನ್ನು ಪಡೆದನು. ೧೨. ಅತಿ ಭಯಂಕರವೂ ಕಠೋರವೂ ಆದ ಆ ಮಗುವಿನ ಅಳುವ ಶಬ್ದವು, ತಟ್ಟನೆ ಲೋಕದ ಜನರು ಭಯ ಸಂದೇಹ ಪೀಡಿತರಾಗುವಂತೆ ದಿಗಂತದವರೆಗೂ ತುಂಬಿತು. ೧೩. "ಸಕಲ ಬ್ರಹ್ಮಾಂಡವೆಂಬ ಪಾತ್ರೆಯು ಒಡೆಯಿತು. ಇದೆಂತಹ ಗಲಭೆ! ಇಂದ್ರನು ಕುತೂಹಲದಿಂದ ನಮ್ಮ ಮೇಲೆ ಬೀಳಲು ಬರುತ್ತಿರಬಹುದು; ಎಲ ಎಲಾ! ಸೇನೆಯು ಸನ್ನದ್ಧವಾಗಲಿ" ಎಂದು ಕಂಸನು ಹೇಳಿದನು. ಗೃಹಾಧ್ಯಕ್ಷನು ಇದು ದೇವಕಿ ಹೆತ್ತ ಆ ಕೂಸಿನ ಅಳುವಿನ ದನಿ" ಎನ್ನಲು ಕಂಸನು ಒಡನೆಯೆ ಬಂದು ಹೆರಿಗೆಯ ಮನೆಯನ್ನು ಹೊಕ್ಕು ದೇವಕಿಯ ಮುಂದೆ ಮಲಗಿದ್ದ ಮಗುವಿನ ಹಿಂಗಾಲನ್ನು ಹಿಡಿದು ಎಳೆದುಕೊಂಡು ಹೊರಟನು.

ಅಸುರಂ ಕನ್ನೆಯನುಯ್ದು ವಧ್ಯಶಿಲೆಯೊಳ್ ಪೊಯ್ವಲ್ಲಿ ಕೈಯಿಂ ಸಿಡಿ
ಲ್ದು ಸಿಡಿಲ್ ಪೋಪವೊಲಂಬರಕ್ಕೆ ನೆಗೆದೆಂದಳ್ ನಿನ್ನನಾಂ ಕಂಸ ರಾ
ಕ್ಷಸ ಕೇಳ್ಕೊಲ್ವೊಡೆ ಕಾವರಾರೆಲವೊ ಮಾಣ್ ನಿನ್ನಂ ಕೊಲಲ್ವೇಡಿ ಪು
ಟ್ಟಿ ಸರೋಜೇಕ್ಷಣನತ್ತಲೊಂದೆಡೆಯೊಳಾಯಿರ್ದಪ್ಪನೆಮ್ಮಗ್ರಜಂ ೧೪

ವ॥ ಎನೆ ಕೇಳ್ದು ತದೀಯ ಪರುಷಭಾಷಿತಂ ತನಗೆ ಕರ್ಣಶೂಲಮಾಗೆ

ಈ ಕೃತಕಿಯೇಕೆ ಪುಟ್ಟಿದ
ಳೇಕಾರಣದಿಂದೆ ಪಾಱಿಪೋದಳ್ ಗಗನ
ಕ್ಕೀಕೆಯದಾವಳೊ ಮೃತ್ಯುವೊ
ಮಾಕಾಳಿಯೊ ಚಂಡಿಯೊ ಮಹಾಭೈರವಿಯೋ ೧೫

ವ॥ ಎಂದನಿಮಿಷದ್ರೋಹನನಿಮಿಷಮಾರ್ಗದೊಳಿರ್ದ ದುರ್ಗಿಯನನಿಮಿಷ[1]ನೇತ್ರನು
ಮುತ್ತಾನಿತಾನನನುಮತ್ಯಂತವಿಸ್ಮಯಸ್ವಾಂತನುಮಾಗಿ ನೀಡುಂ ನೋಡುತ್ತುಮಿರೆ

ವದನಂ ಪೂರ್ಣಶಶಾಂಕನಂತೆಸೆಯೆ ಮೇಘಶ್ಯಾಮಳಾಂಗಂ ತ್ರಿಭಂ
ಗದಿನಿಂಬಾಗಿರೆ ನೀಲಚೇಲದುಡೆಯುಂ ಮೇಲ್ಕೊಂಡ ಪೊಂಬಟ್ಟೆಯುಂ
ಕದಪಂ ಮೋದುವ ಕುಂಡಲದ್ವಿತಯಮುಂ ಚೆಲ್ವಾಗೆ ತಾನಾಗಳಾ
ಡಿದಳೆಂಟುಂ ನಳಿತೋಳ್ಗಳಂ ಪಸರಿಸುತ್ತುಂ ಕನ್ನೆ ರೋದೋಂತದೊಳ್ ೧೬

ವ॥ ಅಂತು ಗಗನರಂಗದೊಳ್ ನೃತ್ಯಲೀಲೆಯಂ ಮೆಱೆದು ವಾಸವನಿವಾಸಕ್ಕಭಿಮುಖಿಯಾಗಿ
ಪೋದಳ್, ಅನ್ನೆಗಮತ್ತಲ್

೧೪. ಆ ರಾಕ್ಷಸನು ಆ ಕನ್ನೆಯನ್ನು ಮೇಲೆತ್ತಿ ಕೊಲೆಗಲ್ಲಿನ ಮೇಲೆ ಬಡಿಯುವಾಗ ಅದು ಕಯ್ಯಿಂದ ಸಿಡಿದು, ಸಿಡಿಲಿನಂತೆ ಆಕಾಶಕ್ಕೆ ಹಾರಿ, "ಎಲೋ! ಕಂಸಾ! ನಾನು ನಿನ್ನನ್ನು ಕೊಲ್ಲುವುದಾದರೆ ರಕ್ಷಿಸುವರಾರಿರುವರು? ಬಿಡು. ನಮ್ಮಣ್ಣನಾದ ಕಮಲಾಕ್ಷ ಕೃಷ್ಣನು ನಿನ್ನನ್ನು ಕೊಲ್ಲಬೇಕೆಂದು ಹುಟ್ಟಿ ಆ ಅದೊಂದೆಡೆಯಲ್ಲಿರುವನು. ವ॥ ಎನ್ನಲು, ಅವಳ ಕಠಿನವಾದ ಆ ಮಾತು ಅವನ ಕಿವಿಗೆ ಶೂಲದಿಂದ ಇರಿದಂತಾಯಿತು. ೧೫. "ಈ ಮೋಸಗಾರ್ತಿ ಏಕೆ ಹುಟ್ಟಿದಳು! ಏತಕ್ಕಾಗಿ ಆಕಾಶಕ್ಕೆ ಹಾರಿಹೋದಳು! ಈಕೆ ಯಾರೊ? ಮೃತ್ಯುವೋ? ಮಹಾಕಾಳಿಯೋ? ಚಂಡಿಯೋ?! ಮಹಾಭೈರವಿಯೋ?! ೧೬. ಆ ಕನ್ಯೆಯು ಆಕಾಶದಲ್ಲಿ ತನ್ನ ಎಂಟು ತೋಳುಗಳನ್ನೂ ನೀಡುತ್ತ ಕುಣಿದಾಡಿದಳು. ಆಗ ಅವಳ ಮುಖವು ಪೂರ್ಣಚಂದ್ರನಂತೆಯೂ ಮೋಡದಂತೆ ಕಪ್ಪಾದ ಅವಯವವು ಮೂರು ಪ್ರಕಾರದ ನೃತ್ಯಭಂಗಿಯಿಂದಲೂ ಚೆನ್ನಾಗಿ ಕಾಣಿಸುತ್ತಿದ್ದಿತು. ನೀಲವಸ್ತ್ರದ ಉಡಿಗೆಯೂ ಪೀತಾಂಬರದ ಮೇಲುಹೊದಿಕೆಯೂ ಕೆನ್ನೆಗಳನ್ನು ತಾಕುವ ಓಲೆಗಳೂ ಹೊಳೆಯುತ್ತಿದ್ದವು. ವ॥ ಹಾಗೆ ಗಗನರಂಗದಲ್ಲಿ ನೃತ್ಯಲೀಲೆಯನ್ನು ಮೆರೆದು ಆಕೆ ಇಂದ್ರಲೋಕಕ್ಕಭಿಮುಖವಾಗಿ ಹೊರಟಳು. ಅಷ್ಟರೊಳಗೆ ಆ ಕಡೆ

---

೧. ನೇತ್ರೆಯನು (ಖ)

ಇದಿರ್ವಂದೊಪ್ಪುವ ದೇವದುಂದುಭಿಯೊಳಂ ದೇವಾಂಗನಾನೃತ್ಯಗೀ
ತದೊಳಂ ದೇವಮಹೀರುಹವ್ರಜದೊಳಂ ದೇವಾಪಗಾತೋಯಕುಂ
ಭದೊಳಂ ದೇವವರಂ ಸ್ತವಂಗೆಯೆ ವರಂಗೊಟ್ಟಾಮಹೇಂದ್ರಂಗೆ ಸ
ಮ್ಮದದಿಂ ದುರ್ಗಿ ಬಟಿಕ್ಕೆ ತಾಂ ನೆಲಸಿ ನಿಂದಳ್ ಯೋಗಪೀಠಾಗ್ರದೊಳ್ ೧೭

ದನುಜಂ ದುರ್ಗಿಯ ತೇಜದೊಂದು ತೆಱನಂ ಕೈ ಮಿಕ್ಕು ಪೋದಂದಮಂ
ತನಗೆಂದುಗ್ರದುರುಕ್ತಿಯಂ ನೆನೆದಿದೇನಾಶ್ಚರ್ಯಮೆಂದಂದು ನೆ
ಟ್ಟನೆ ಚಿಂತಾಗಿರಿ ಮೇಲೆ ಬೀೞೆ ಪಿರಿದುಂ ಬೆಂಬಿಟ್ಟು ಬಂದೆಯ್ದಿ ಪೊ
ಕ್ಕು ನಿಜಾವಾಸಮ[1]ನಾಪ್ತಮಂತ್ರಿನಿವಹಕ್ಕಿಂತೆಂದನಾಸ್ಥಾನದೊಳ್ ೧೮

ಅಶರೀರಧ್ವನಿಯಂತೆ ನಾರದನ ಪೇೞ್ದಾದೇಶಮಿಂದಾಯ್ತು ವ
ಧ್ಯಶಿಲೋಚ್ಛೃಂಖಲೆಯಾಗಿ ದುರ್ಗೆ ನುಡಿದಳ್ ಪುಟ್ಟಿರ್ದನೀಗಳ್ ಚತು
ರ್ದಶಲೋಕಪ್ರಭು ವಿಷ್ಣು ನಿನ್ನ ಪಗೆಯೆಂದಾರ್ಗೆಲ್ವರೀಛದ್ಮ ಬಾ
ಲಿಶನಂ ದೈವಸೂತ್ರಮಂ ಪುರುಷಕಾರಂ ಮೀಱಲೇನಕ್ಕುಮೇ ೧೯

ಆ ನೆಗೞ್ದಿಂದ್ರನೆಕ್ಕತುಳದೊಳ್ ಧುರದೊಳ್ ಬಲದೊಳ್ ಕಡಂಗಿ ನಿಂ
ದಾನಲೊಡರ್ಚಲಾಂಕೆಗೊಳಲಾಱದೆ ಪೋಗಿ ಗಡಂ ಮುರಾಂತಕಂ
ಗಾನತನಾಗಿ ಪುಯ್ಯಲಿಡೆ ಕೇಳ್ದು ಮದೀಯ ವಧಾರ್ಥಮಾಸುಧಾಂ
ಭೋನಿಧಿತಳ್ಪನಿಂದು ಗಡ ಪುಟ್ಟಿದನಿಲ್ಲಿಗದಾವುದುದ್ಯಮಂ ೨೦

೧೭. ದೇವೋತ್ತಮನಾದ ಮಹೇಂದ್ರನು ದೇವತೆಗಳ ನಗಾರಿಯ ವಾದ್ಯ, ದೇವಾಂಗನೆಯರ ನೃತ್ಯಗೀತ, ಕಲ್ಪವೃಕ್ಷ, ದೇವಗಂಗಾಜಲದ ಪೂರ್ಣಕುಂಭ ಮೊದಲಾದವುಗಳೊಡನೆ ಆಕೆಯನ್ನೆದಿರುಗೊಂಡು, ಬಂದು ಸ್ತುತಿಸಿದನು. ದುರ್ಗಿ ಸಂತೋಷದಿಂದ ಆತನಿಗೆ ವರವನ್ನು ಕೊಟ್ಟು ಬಳಿಕ ಯೋಗಪೀಠಾಗ್ರದಲ್ಲಿ ನಿಂತಳು. ೧೮ ಕಂಸನು ದುರ್ಗಿಯ ತೇಜಸ್ಸಿನ ಆ ಅಪೂರ್ವರೀತಿಯನ್ನೂ ತನ್ನ ಕಯ್ಯಿಂದ ತಪ್ಪಿಸಿಕೊಂಡು ಹೋದಬಗೆಯನ್ನೂ ತನಗೆ ಹೇಳಿದ ಕೆಟ್ಟ ಮಾತನ್ನೂ ನೆನೆಸಿಕೊಂಡು, ಇದೇನಾಶ್ಚರ್ಯವೋ ಎಂದು ಚಿಂತಾಗಿರಿಯೇ ತನ್ನ ಮೇಲೆ ಬೀಳಲು ಪೂರ್ತಿಯಾಗಿ ಹಿಂಜರಿದು ಬಂದು ತನ್ನರಮನೆಯನ್ನು ಸೇರಿ, ಆಸ್ಥಾನದಲ್ಲಿ ಆಪ್ತ ಮಂಡಲಕ್ಕೆ ಹೀಗೆ ಹೇಳಿದನು. ೧೯. "ಅಶರೀರವಾಣಿಯಂತೆಯೂ ನಾರದನ ಉಪದೇಶದಂತೆಯೂ ಇಂದು ಆಯಿತು, ವಧ್ಯಶಿಲೆಯಿಂದ ತನ್ನಿಷ್ಟದಂತೆ ತಪ್ಪಿಸಿ ಕೊಂಡ ಆ ದುರ್ಗಿಯು ಹದಿನಾಲ್ಕು ಲೋಕಗಳಿಗೂ ಪ್ರಭುವಾದ ವಿಷ್ಣುವು ನಿನಗೆ ಹಗೆಯಾಗಿ ಈಗ ಹುಟ್ಟಿದ್ದಾನೆ" ಎಂದು ಹೇಳಿದಳು. ಕಪಟವೇಷದ ಈ ಮೂರ್ಖನನ್ನು ಗೆಲ್ಲುವರಾರು? ಪುರುಷಪ್ರಯತ್ನವು ದೈವಸೂತ್ರವನ್ನು ಮೀರಲಾಗುವುದೇನು? ೨೦. ಪ್ರಸಿದ್ಧನಾದ ಆ ಇಂದ್ರನು ಯುದ್ಧದಲ್ಲಿ ಬಲದಿಂದ ನನಗೆ ಸಮನಾಗಿ ಉತ್ಸಾಹದಿಂದ ಎದುರಿಸಿ ನಿಂತು ಪ್ರತಿಭಟಿಸಲಾರದೆ ಹೋಗಿ ವಿಷ್ಣುವಿಗೆ ತಲೆಯನ್ನು ಬಾಗಿಸಿ, ಹುಯ್ಯಲಿಟ್ಟನು. ಅದನ್ನು ಕೇಳಿ ನನ್ನನ್ನು ಕೊಲ್ಲುವುದಕ್ಕಾಗಿ ಆ ಕ್ಷೀರಸಾಗರಶಯನನು

---

೧. ನಾತ್ಮ (ಖ)

ವ|| ಎಂದು ಸಚಿವರೊಳ್ ಸಮಾಳೋಚನಂಗೆಯ್ವಾಗಳಂತೆ ನಿಜವಿವೇಕವನಮಂ ಸ್ವಕೀಯ ಕೋಪವಹ್ನಿ ಸುಡಲೊಡರ್ಚೆ

ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ
ಪೊಡೆವೆಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ ಕಟ್ಟುವೆಂ
ಜಡರಾಶೀಂದ್ರನ[1]ನೆಯ್ದುವೆಂ ಪವನನಂ ಸರ್ವಸ್ವಮಂ ಕೊಂಡು ಕೂ
ಗಿಡಿಪೆಂ ವಿತ್ತಪನಂ ಪರಾಭವಿಸುವೆಂ ದಕ್ಷಾಧ್ವರಧ್ವಂಸಿಯಂ ೨೧

ವ|| ಎಂದಾಸ್ಫೋಟಿಸಿ ಲೋಕಪಾಲಕರಂ ನೀರ್ದಾಂಟಿಸಿ[2]

ಅಸುಹೃದ್ದ್ವೇಷಾಂಕುರಮುದ
ಯಿಸಿದತ್ತುಗುರೊಳ್ ಚಿವುಂಟುವೆಂ ಕೊಡಲಿಗೊಳಲ್
ಬಸಮಲ್ಲದು ಬಳೆದೊಡೆ ಬಳೆ
ಯಿಸುವುದು ನೀತಿಯೆ ವಿರೋಧಿಯಂ ವ್ಯಾಧಿಯುಮಂ ೨೨

ವ|| ಎಂದು ನಿಶ್ಚಯಿಸಿ ನಿಜವಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ, ಸ್ವಕೀಯಪರಿಧಾವನವೇಗವಿಘಟಿತವೈರಿಬಾಲಶಕಟನೆಂಬ ಶಕಟನುಮಂ,

ಹುಟ್ಟಿದನಲ್ಲವೆ? ಇದಕ್ಕೆ ನಾವು ಮಾಡಬೇಕಾದುದೇನು?" ವ|| ಎಂದು ಸಚಿವರಲ್ಲಿ ಸಮಾಲೋಚನೆ ಮಾಡುತ್ತಿದ್ದನು. ಆಗ ಇದ್ದಕ್ಕಿದಂತೆ ಅವನ ಕೋಪವೆಂಬ ಅಗ್ನಿಯು ಅವನ ವಿವೇಕವೆಂಬ ವನವನ್ನು ಸುಡಲಾರಂಭಿಸಿತು. ಆಗ ೨೧ "ಇಂದ್ರನ ಹೆಸರನ್ನು ತೊಡೆಯುವೆನು! ಅಗ್ನಿಯನ್ನು ಹಿಡಿದು ನೀರಲ್ಲದ್ದುವೆನು! ಯಮನನ್ನು ಹೊಡೆಯುವೆನು. ನಿಋುತಿಯನ್ನು ಹೊಡೆದುರುಳಿಸುವೆನು. ವರುಣನನ್ನು ಕಟ್ಟುವೆನು. ವಾಯುವಿನ ಮೇಲೆ ಬೀಳುವೆನು. ಕುಬೇರನಿಂದ ಎಲ್ಲವನ್ನು ಕಿತ್ತುಕೊಂಡು ಕೂಗಿಡಿಸುವೆನು. ಈಶನನ್ನು ಅಪಜಯಗೊಳಿಸುವೆನು". ವ|| ಎಂದು ಆರ್ಭಟಿಸಿ, "ಲೋಕಪಾಲಕರನ್ನು ರಕ್ಷಿಸಲು ಶತ್ರುದ್ವೇಷದ ಮೊಳಕೆ ಹುಟ್ಟಿತು. ಅದನ್ನು ಉಗುರಲ್ಲೇ ಜಿಗುಟುತ್ತೇನೆ. ಬೆಳೆದರೆ ಕೊಡಲಿಯನ್ನು ತೆಗೆದುಕೊಳ್ಳುವುದು ಸಾಧ್ಯವಿಲ್ಲ. ವಿರೋಧಿಯನ್ನೂ ವ್ಯಾಧಿಯನ್ನೂ ಬೆಳೆಯಿಸುವುದು ಯಾವ ನೀತಿ?" ವ|| ಎಂದು ಆಲೋಚಿಸಿದನು. ತನ್ನ ಸ್ತನಗಳಲ್ಲಿಟ್ಟುಕೊಂಡಿರುವ ವಿಷದಿಂದ ಪೀಡಿಸಿ ಜನವನ್ನು ಕೊಲ್ಲುವ ಪೂತನಿಯನ್ನೂ ತನ್ನ ವೇಗವಾದ ಓಟದಿಂದ ವೈರಿಬಾಲರನ್ನರೆಯುವ ಬಂಡಿಯೆನಿಸಿಕೊಂಡಿರುವ ಶಕಟಾಸುರನನ್ನೂ, ಬಲಗಡೆ ನಡುವಿನಲ್ಲಿ ದೃಢವಾಗಿ ಕತ್ತಿಯನ್ನು ಧರಿಸಿದ ರಾಕ್ಷಸವೀರನಾದ ಧೇನುಕನನ್ನೂ ಅನವಧಿಕಾತಿಶಯ ಬಾಹುಸಾಹಸಾಡಂಬರವುಳ್ಳ ಪ್ರಲಂಬನೆಂಬುವನನ್ನೂ ಮಾನವಭುಜ ಗೌರವಕ್ಕೆ ಕೇಡು ಎನಿಸಿಕೊಂಡ ಅರಿಷ್ಟನೆಂಬುವನನ್ನೂ ತನ್ನ ಕೆನೆತದ ಶಬ್ದವನ್ನು ಕೇಳಿದ ಮಾತ್ರದಲ್ಲೇ ಅತಿಭೀತಿಯಿಂದ ರಂಭೆ ತಿಲೋತ್ತಮೆ ಊರ್ವಶೀ ಸುಕೇಶಿಯೆಂಬ ಅಪ್ಸರೆಯರು ಇಂದ್ರನ ದೇಹವನ್ನು ಗಟ್ಟಿಯಾಗಿ ಅಪ್ಪಿಕೊಳ್ಳುವಂತೆ ಮಾಡುವ

---

೧. ನೆಟ್ಟುವೆಂ (ಮೊ ಅ) ೨. ನಿರ್ದಾಟಿಸಿ (ಕ ಖ)

ರಾಕ್ಷಸವೀರದಕ್ಷಿಣಕಟೀತಟ ಪ್ರಬದ್ಧಾಸಿಧೇನುಕನೆಂಬ ಧೇನುಕನುಮಂ, ನಿಸ್ಸೀಮನಿಕಾಮಬಾಹುಸಾಹಸಾಡಂಬರಪ್ರಳಂಬನೆಂಬ ಪ್ರಳಂಬನುಮಂ, ಮಾನವಭುಜಾವಷ್ಟಂಭಾರಿಷ್ಟನೆಂಬರಿಷ್ಟನುಮಂ, ಹೇಷಿತಘೋಷಣಶ್ರವಣಮಾತ್ರವಿತ್ರಾಸನರಚಿತ ಜಂಭಾರಿದೇಹಪರಿರಂಭ ರಂಭಾತಿಲೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ, ಮತ್ತಮನೇಕರೂಪಪರಾವರ್ತನರಸಾದಾನವರೆಂಬ ದಾನವರುಮಂ, ಕರೆದೆನ್ನ ಶತ್ರುವದೊಂದು ತಾಣದೊಳ್ ಪುಟ್ಟಿರ್ಪನಾತನಂ ಸಕಲಭೂತಳದೊಳುಳ್ಳ ಚತುರ್ವರ್ಣಜಾತಶಿಶುಜಾತದೊಳನ್ಯರೂಪಾವಷ್ಟಂಭಸೌಷ್ಠವವಿಶೇಷದಿಂದಱಿದೊಡಂಬಡಿಸಿದಂದದೊಳೋರೊರ್ಬರೊಂದೊಂದು ನೆವದಿನೊರ್ಮೆ ತಪ್ಪಿದಡೊರ್ಮೆ ಕೊಂದಿಕ್ಕುವುದೆಂದು ಬೆಸಸಿ ವಸುದೇವನ ದೇವಕಿಯ ಸೆಱೆಯಂ ಬಿಟ್ಟು ಎನ್ನ ಪಗೆಯೆನಿಸಿರ್ದ ವನಜನಾಭಂ ಮತ್ತೊಂದು ತಾಣದೊಳ್ ಪುಟ್ಟಿದಂ; ಕೆಮ್ಮನೆ ನಿಮ್ಮನಚ್ಚಿಗಂಬಡಿಸಿದೆನೆಂದು ಚಾಟುವಚನಂಗಳಂ ಮೆಱೆದು ಮಿಥ್ಯಾವಿನಯವಿನೋದೋಪಗೂಹಿತಸ್ವಾಂತಚಿಂತಿತಚಿತ್ತನಾಗಿರ್ದಂ, ಅಗಳಾ ಭೋಜರಾಜಂಗೆ ಕರಮಂ ತೆಱಲೆಂದು ಬಂದ ನಂದಗೋಪನಂ ಕಂಡು ಕಪಟನಾಟಕಸೂತ್ರಧಾರ ನಾರಾಯಣಪ್ರೇರಿತಮನಸ್ಕನಾಗಿ ವಸುದೇವನಿಂತೆಂದಂ

ಪ್ರಿಯ ಕೇಳುತ್ಸವವಾರ್ತೆಯಂ ತನಯನಂ ಪೆತ್ತಳ್ ಗಡಂ ನಿನ್ನ ಪ
ತ್ನಿ ಯಶೋದಾವಧು ತತ್ತನೂಜನೊಡನಿಂಬಿಂ ಭಾವನಿರ್ದ್ವಂದ್ವನಾ
ಗಿಯೆ ನೀಂ ರಕ್ಷಿಸು ರೌಹಿಣೇಯನೆನಿಪಸ್ಮತ್ಪುತ್ರನಂ ವಿಕ್ರಮೋ
ದಯರಾರಾದೊಡೆ [೧]ಕಾವರೆಂದು ನುಡಿದಂ ಶ್ರೀನಂದಗೋಪಾಲನೊಳ್ ೨೩

ಕೇಶಿಯೆಂಬುವನನ್ನೂ ತಮ್ಮ ರೂಪವನ್ನು ಮರೆಸಿಕೊಳ್ಳುವ ಶಕ್ತಿಯನ್ನು ಹೆಚ್ಚಾಗಿ, ಪಡೆದಿರುವ ಬೇರೆ, ಅನೇಕ ರಾಕ್ಷಸರನ್ನೂ ಕರೆದು,- "ನನ್ನ ಶತ್ರು ಎಲ್ಲೋ ಅದೊಂದು ಸ್ಥಳದಲ್ಲಿ ಹುಟ್ಟಿರುವನು. ಸಕಲಭೂತಲದಲ್ಲಿ ಬ್ರಹ್ಮಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರಲ್ಲಿ ಹುಟ್ಟಿರುವ ಶಿಶುಗಳಲ್ಲಿ ಎಲ್ಲಕ್ಕಿಂತ ಬೇರೆಯಾದ, ರೂಪಗರ್ವಸೌಷ್ಠವ ವಿಶೇಷದಿಂದ ಅವನನ್ನು ತಿಳಿದು ನಿಮಗೆ ಒಪ್ಪಿಕೆಯಾದ ರೀತಿಯಲ್ಲಿ ಒಬ್ಬೊಬ್ಬರು ಒಂದೊಂದು ನೆಪದಿಂದ ಒಂದು ಸಾರಿ ತಪ್ಪಿದರೆ ಮತ್ತೊಂದು ಸಾರಿ, ಕೊಂದು ಹಾಕಬೇಕು" ಎಂದು ಅಪ್ಪಣೆಯನ್ನು ಮಾಡಿ, ವಸುದೇವ ದೇವಕಿಯರ ಸೆರೆಯನ್ನು ತಪ್ಪಿಸಿ, "ನನಗೆ ಶತ್ರುವಾದ ವಿಷ್ಣುವು ಮತ್ತೊಂದೆಡೆಯಲ್ಲಿ ಹುಟ್ಟಿದನು. ಸುಮ್ಮನೆ ನಿಮಗೆ ತೊಂದರೆಪಡಿಸಿದೆನು." ಎಂದು ಉಪಚಾರವಚನವನ್ನಾಡಿ ಕಪಟವಿನಯ ವಿನೋದಗಳಿಂದ ತನ್ನ ಮನದ ಚಿಂತೆಯನ್ನು ಹೊರಗಾಣದಂತೆ ಮರೆಮಾಡಿ, ಅಂತರಂಗದಲ್ಲಿ ಚಿಂತೆಯುಳ್ಳವನಾಗಿದ್ದನು. ಅದೇ ಸಮಯದಲ್ಲಿ ಆ ಕಂಸನಿಗೆ ಕಪ್ಪಕಾಣಿಕೆಯನ್ನು ಕೊಡುವುದಕ್ಕಾಗಿ ಬಂದ ನಂದಗೋಪನನ್ನು ಕಂಡು, ವಸುದೇವನು, ಕಪಟನಾಟಕ ಸೂತ್ರಧಾರನಾದ ನಾರಾಯಣನಿಂದ ಪ್ರೇರಿತ ಮನಸ್ಕನಾಗಿ, ಹೀಗೆಂದನು- ೨೩. "ಪ್ರಿಯನೇ! ಸಂತೋಷ ಸಮಾಚಾರವನ್ನು ಹೇಳುತ್ತೇನೆ ಕೇಳು. ನಿನ್ನ ಪತ್ನಿಯಾದ ಯಶೋದಾದೇವಿ ಮಗನನ್ನು ಹೆತ್ತಿರುವಳಲ್ಲವೇ? ಆ ಮಗನೊಡನೆ ರೋಹಿಣೇಪುತ್ರನಾದ ನಮ್ಮ ಮಗನನ್ನು ಭೇದಭಾವವಿಲ್ಲದೆ ಆಶ್ರಯಕೊಟ್ಟು ನೀನು ರಕ್ಷಿಸು. ಪರಾಕ್ರಮವುಳ್ಳವರು ಯಾರಾದರೂ ರಕ್ಷಿಸುವರು" ಎಂದನು. ವ|| ಸಂತೋಷಪಟ್ಟ

೧. ಕಾವುದೆಂದು (ಕಗ)

ವ|| ಎನೆ ಸಂತೋಷಂಬಟ್ಟು ನಂದಗೋಪಂ ನಂದನಮುಖಾರವಿಂದಾವಲೋಕನೋತ್ಸುಕಂ ಗೋಕುಲಕೆ ಪೋಗಿ ನೀಲೋತ್ಪಲದಳಶ್ಯಾಮನಪ್ಪ ತಾಮರಸನೇತ್ರನಂ ನೋಡಿ ಪರಮಪ್ರೇಮ ರೋಮಾಂಚಿತಗಾತ್ರನುಮಾನಂದಬಾಷ್ಪಜಲಲುಳಿತನೇತ್ರನುಮಾಗಿ ಸುಖದಿನಿರಲ್; ಆ ಪ್ರಸೂತಿಕಾಸದನಕ್ಕೆ ದನುಜವೈರಿ ಪುಟ್ಟಿದಷ್ಟಮದಿನದೊಳ್ ಯಶೋದೆ ಪೊಱಮಟ್ಟ ಸಮಯಮಂ ಪಾರ್ದು

ಪ್ರಣಯಾಲಂಬಿನಿಯಂತೆ ಪೂತನೆ ಯಶೋದಾಕಾರದಿಂ ಬಂದು ನಿ
ರ್ಘೃಣೆ ನಂಜೂಡಿದ ತನ್ನ ಪೆರ್ಮೊಲೆಯನೂಡಲ್ ಬಾಲಕಂ ನೆತ್ತಱಿಂ
ನೆಣನಂ ಖಂಡಮನೆಯ್ದೆ ಪಿಂಡಿ ಪಿಟೆದುಂಡೋಹೋಹೊ ಹಾ ಮಾಣ ದಾ
ರುಣ ಮಾಣೆಂದೊಱಲುತ್ತೆ ಬೀೞೆ ತವೆ ಪೀರ್ದಂ ಪೂತನಾ ಜೀವಮಂ ೨೪

ವ|| ಆಗಳಾಟ್ಟಾಸುರಮಾಗಿ ಬೆಟ್ಟು ಕೆಡೆವಂತೆ ಭೂತಲದೊಳ್ ಕೆಡೆದ ಪೂತನೆಯ ಮೇಲೆ ಮೊಲೆಯಂ ಕಡೆವಾಯೊಳಿಟ್ಟು ಪಟ್ಟಿರ್ದ ಶಿಶುವಂ ಯಶೋದೆ ಬಂದು ಕಂಡು

ಪೂತನೆಯ ಕೆಡೆದ ವಿಕೃತಿಗೆ
ಭೀತಿಯನೊಳಕೊಳ್ಳದೆತ್ತಿಕೊಂಡಳ್ ಮಗನಂ
ಕೌತುಕಮೇಂ ಪೆಂಡಿರೊಳಂ
ಭೀತಿರಸಂ ಮೋಹರಸಮನೊತ್ತರಿಸುಗುಮೇ ೨೫

ನಂದಗೋಪನು ಮಗನ ಮುಖಕಮಲವನ್ನು ನೋಡುವುದರಲ್ಲಿ ಕುತೂಹಲವುಳ್ಳವನಾಗಿ ಗೋಕುಲಕ್ಕೆ ಹೋಗಿ ಕನ್ನೈದಿಲೆಯ ಎಸಳಿನಂತೆ ಶ್ಯಾಮಲನಾದ ಕಮಲನೇತ್ರನನ್ನು ನೋಡಿ, ಪರಮಪ್ರೇಮದಿಂದ ರೋಮಾಂಚಿತಾಂಗನೂ ಆನಂದಬಾಷ್ಪದಿಂದ ತುಂಬಿದ ಕಣ್ಣುಳ್ಳವನೂ ಆಗಿ ಸುಖದಿಂದ ಇದ್ದನು. ಕೃಷ್ಣನು ಹುಟ್ಟಿದ ಎಂಟನೆಯ ದಿನ ಯಶೋದೆಯು ಹೊರಗೆ ಹೋದ ಸಮಯವನ್ನು ನೋಡಿ, ಆ ಹೆರಿಗೆಯ ಮನೆಗೆ ಪೂತನಿಯೆಂಬ ರಾಕ್ಷಸಿಯು ೨೪. ಪ್ರೀತಿಯಿರುವವಳಂತೆ ನಟಿಸುತ್ತಾ ಯಶೋದೆಯ ಆಕಾರವನ್ನೇ ಧರಿಸಿ, ಬಂದು ಕರುಣೆಯಿಲ್ಲದ ವಿಷದಿಂದ ತುಂಬಿದ ತನ್ನ ದಪ್ಪಮೊಲೆಯನ್ನು ಕೃಷ್ಣನಿಗೆ ಊಡಿಸಿದಳು. ಬಾಲಕೃಷ್ಣನು ಅವಳ ರಕ್ತಮಾಂಸ ಕೊಬ್ಬುಗಳನ್ನು ಪೂರ್ತಿಯಾಗಿ ಹಿಂಡಿ, ಹಿಳಿದು, ಕುಡಿದು, “ಓಹೋ! ಹೋ ಹೋ ಕ್ರೂರೀ! ಬಿಡೋ ಬಿಡೋ” ಎಂದು ಕೂಗುತ್ತಾ ಅವಳು ಬೀಳುವಂತೆ ಅವಳ ಜೀವವನ್ನೂ ಪೂರ್ತಿಯಾಗಿ ಹೀರಿದನು. ವ|| ಆಗ ಅತಿಭಯಂಕರವಾಗಿ ಬೆಟ್ಟದಂತೆ ಭೂಮಿಯ ಮೇಲೆ ಪೂತನಿ ಬಿದ್ದಳು. ಅವಳ ಎದೆಯ ಮೇಲೆ ಅವಳ ಮೊಲೆಯನ್ನು ಕಡೆಬಾಯಲ್ಲಿಟ್ಟುಕೊಂಡು ಮಗು ಮಲಗಿದ್ದಿತು. ಅದನ್ನು ಕಂಡ ಯಶೋದೆಯು ೨೫. ವಿಕಾರವಾಗಿ ಬಿದ್ದಿದ್ದ ಪೂತನಿಯ ದೇಹಕ್ಕೂ ಹೆದರದೆ ಓಡಿ ಬಂದು, ಮಗುವನ್ನು ಎತ್ತಿಕೊಂಡಳು. ಆಶ್ಚರ್ಯವೇನು! ಭೀತಿರಸವು ಸ್ತ್ರೀಯರ ಮೋಹರಸವನ್ನು ಒತ್ತರಿಸುವುದೆ?

ತತ್ಸಮಯೋಚಿತಶಾಂತಿಯ
ನುತ್ಸವದಿಂ ಮಾಡಿ ವಿವಿಧರಕ್ಷಾವಿಧಿಯಂ
ವತ್ಸಂಗೆ ನೆಗಟ್ಬು ಸಕಲಸು
ಹೃತ್ಸಂತತಿ ಪರಸೆ ನಂದನಿರ್ದಂ ಸುಖದಿಂ ೨೬

ವ|| ಅನ್ನೆಗಂ ವಸುದೇವನಾದೇಶದಿಂ ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿಂ ತಿರೋಹಿತ ವೇಷನಾಗಿ ಬಂದು ಯಥೋಚಿತ ಮಂಗಳಾಚಾರಮಂ ಮೆಱೆದು ರೋಹಿಣೀಸುತಂಗಂ ರಾಮನಾಮಂ ಮೊದಲಾಗೆ ಪೆಸರಿಟ್ಟು ದೇವಕೀಸುತಂಗೆ ಕೃಷ್ಣಾಭಿಧಾನಮಂ ಮಾಡಿ ತನಯರ್ಗೆ ರಾಮಕೃಷ್ಣರೆಂಬ ನಾಮಕರಣಂ ಮೊದಲಾಗೆ ಪಲವುಮನ್ವರ್ಥನಾಮಮನಿಟ್ಟು ಮತ್ತಮಾಗಾಮಿಕಾರ್ಯಮನಱಿಪಿ ಪರಸಿ ಪೋಪುದುಮನಂತರಂ

ಬಲಿ ಬಾಯನಂಗಳುಂ ಮಂ
ಗಲತೂರ್ಯಮುಮೆಸೆಯೆ ಗೇಯರವಮಂ ಪೊಂದೊ
ಟ್ಟಲ ಪೊಳಪುಂ ರಂಜಿಸುತ್ತಿರೆ
ಕಲನಾದದ ಗೋಪಕಾಂತೆಯರ್ ನೆರೆದಾಗಳ್ ೨೭

ಉದರಮೆ ತೊಟ್ಟಿಲಾಗೆ ಭುವನತ್ರಯಮಂ ನೆಱೆ ತಾಳ್ದಿ ದೇಹಿವ
ರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ
ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರಚ್ಯುತ ಜೋ ಮಹಾತ್ಮ ಜೋ
ಸದಮಲಬೋಧ ಜೋ ಪರಮ ಜೋ ಹರಿ ಜೋಯೆನುತುಂ ಲತಾಂಗಿಯರ್ ೨೮

ವ|| ಆ ಮಹೋತ್ಸವದಿಂ ಬಳಿಕ್ಕೆ ಕತಿಪಯದಿನಂಗಳ್ಗೆ

೨೬. ನಂದನು ಮಗು ಭೀತಿಗೊಂಡಿರಬಹುದೆಂದು ಆ ಸಮಯಕ್ಕೆ ತಕ್ಕ ಶಾಂತಿಯನ್ನೂ ಬಗೆಬಗೆಯ ರಕ್ಷಾಕಾರ್ಯವನ್ನೂ ಮಾಡಿ, ಮಿತ್ರವರ್ಗವು ಹರಸುತ್ತಿರಲು ಸುಖದಿಂದ ಇದ್ದನು. ವ|| ಅಷ್ಟರಲ್ಲಿ ವಸುದೇವನು ಹೇಳಿದುದರಿಂದ ಮಗು ಜನಿಸಿದ ಹನ್ನೆರಡನೆಯ ದಿನ ನಾಮಕರಣ ಮಹೋತ್ಸವವನ್ನು ಮಾಡಬೇಕೆಂದು ಗಾರ್ಗ್ಯನೆಂಬ ಪುರೋಹಿತನು ವೇಷಾಂತರದಿಂದ ಬಂದನು. ಆತನು ಯಥೋಚಿತವಾದ ಮಂಗಳಕಾರ್ಯವನ್ನು ಮಾಡಿ, ರೋಹಿಣೀಸುತನಿಗೆ, ರಾಮನೇ ಮೊದಲಾದ ಹೆಸರನ್ನಿಟ್ಟು, ದೇವಕೀಸುತನಿಗೆ ಕೃಷ್ಣನೆಂಬ ಮೊದಲನೆಯ ಹೆಸರನ್ನಿಟ್ಟು, ಮಕ್ಕಳು ಇಬ್ಬರಿಗೂ ರಾಮಕೃಷ್ಣರೆಂಬುದೇ ಮೊದಲಾದ ಅನೇಕ ಅನ್ವರ್ಥನಾಮಗಳನ್ನು ಇಟ್ಟು, ಮುಂದೆ ಮಾಡಬೇಕಾದ ಕಾರ್ಯಗಳನ್ನು ತಿಳಿಸಿ, ಆಶೀರ್ವದಿಸಿ, ಹೊರಟುಹೋದನು. ೨೭. ಪೂಜೆಯ್ಯ ಬಾಗಿನಗಳೂ ಮಂಗಳ ವಾದ್ಯಗಳೂ, ಗಾನನಾದವೂ, ಚಿನ್ನದ ತೊಟ್ಟಿಲಿನ ಹೊಳಪೂ ಮನೋಹರವಾಗಿರಲು, ಇನಿದನಿಯ ಗೋಪವನಿತೆಯರು ಸೇರಿ ೨೮. ಮೂರುಲೋಕವನ್ನೂ ತನ್ನ ಉದರವೆಂಬ ತೊಟ್ಟಿಲಲ್ಲಿಟ್ಟು, ದೇಹಿಗಳು ಮಾಡಿದ ಪಾಪಪುಣ್ಯ ಕರ್ಮಫಲವನ್ನು ಚೆನ್ನಾಗಿ ತೂಗುವ ಕರ್ಮಸಾಕ್ಷಿ ಕೃಷ್ಣನನ್ನು ಸುಖವಾಗಿರುವಂತೆ ತೊಟ್ಟಿಲಲ್ಲಿ ಮಲಗಿಸಿ, ಆ ಲಲಿತಾಂಗಿಯರು ಅಚ್ಯುತ ಜೋ ಮಹಾತ್ಮ ಜೋ, ಸದಮಲಬೋಧ ಜೋ, ಪರಮ ಜೋ, ಹರಿ ಜೋ" ಎನ್ನುತ್ತ ಹಾಡಿದರು. ವ|| ಆ ಮಹೋತ್ಸವವಾದ ಬಳಿಕ ಕೆಲವು ದಿನಗಳಲ್ಲಿ

ಅನಿಮಿತ್ತದರಸ್ಮಿತದಿಂ
ದನಕ್ಷರಾಳಾಪದಿಂದ ಸಂಕೇತವಿಳೋ
ಕನದಿಂದಕಾರಣಾನಂ
ದಿನದಿಂದುತ್ತಾನಶಯನದಿಂ ಹರಿಯೆಸೆದಂ ೨೯

ವ|| ಅಂತೆಸೆಯುತ್ತಿರ್ಪನ್ನೆಗಮೊಂದುದಿವಸಂ ಯಶೋದೆ ಪರಿಚಾರಿಕಾಜನಂ ಬೆರಸು ಕಾಳಿಂದೀನದಿಗೆ ಪೋದ ಪಿಂದೆ

ತೊಟ್ಟಿಲನೊದೆದಾಡುತ್ತುಂ
ಪಟ್ಟಿರ್ದನನುರುಳಿವರಿದು ಶಿಶುವಂ ಕೊಲಲೆಂ
ದಿಟ್ಪೊತ್ತಿತದಂಘ್ರಿತಳಂ
ಮುಟ್ಟೆ ಸಿಡಿಲ್ ಪೊಡೆದ ತೆಱದೆ ಕೆಡದಂ ಶಕಟಂ ೩೦

ಶಕಟಂ ಬೀಟ್ಟೆಡೆಯೊಳ್ ಮಹಾಕುಲನಗಂ ಬೀಟ್ಟಂತೆ ಬೇಱೊಂದು ದೈ
ತ್ಯಕರಾಳಾಕೃತಿ ಬೀೞ್ ಗೋಪರಿದನಿಂ ಕಂಡಂಜುಗುಂ ನೋಡೆ ಕೌ
ತುಕಮೀ ಕೂಸಿನ ಸಾಸಮೆಂದುಮಿದು ಪೊಲ್ಲೆಂದಚ್ಯುತಂ ನುರ್ಗಿದಾ
ಶಕಟಂ [1]ತೋರ್ಪ ನಿಶಾಟರೂಪವನದೃಶ್ಯಂ ಮಾಡಿ ಪಟ್ಟಿರ್ಪಿನಂ ೩೧

ಗುರುಕುಚೆ ಗೋಪಿ ಬಂದು ಶಕಟಂ ಶತಧಾಕೃತಮಾದುದಿಂತಿದೆಂ
ದಿರದೆ ಬಟೆಕ್ಕೆ ಕೇಳಿ ಶುಕಜಲ್ಪಿತದಿಂ ಬಗೆವೋಗಿ ಕಂದನ
ತ್ಯರುಣತಳಾಂಘ್ರಿಯಿಂದಱಿದು ತತ್ಕಮಳಾಕ್ಷನನೆತ್ತಿಕೊಂಡು ಘೂಂ
ಕರಿಸಿ ನಿಜೇಶ್ವರಂಗಱಿಪಿ ಮಾಡಿಸಿದಳ್ ಬಹುಶಾಂತಿಕರ್ಮಮಂ ೩೨

೨೯. ಆ ಕೃಷ್ಣನು ಕಾರಣವಿಲ್ಲದ ಕಿರುನಗುವಿನಿಂದಲೂ, ಅಕ್ಷರವಿಲ್ಲದ ಮಾತಿನಿಂದಲೂ, ಏನನ್ನೂ ಸೂಚಿಸದ ನೋಟದಿಂದಲೂ, ಅಕಾರಣಾನಂದದಿಂದ ಮೇಲ್ಮುಖನಾಗಿ ಮಲಗಿ ಚೆನ್ನಾಗಿ ಕಾಣಿಸುತ್ತಿದ್ದನು. ವ|| ಹಾಗೆ ಚೆನ್ನಾಗಿರುತ್ತಿರಲು ಯಶೋದೆಯು ಒಂದು ದಿನ ಯುಮುನಾ ನದಿಗೆ ಪರಿಚಾರಿಕಾಜನರೊಡನೆ ಹೋಗಿದ್ದ ಸಮಯದಲ್ಲಿ ೩೦. ಪುಟ್ಟ ಕಾಲಿನಿಂದ ತೊಟ್ಟಿಲನ್ನು ಒದೆಯುತ್ತ, ಮಲಗಿದ್ದ ಆ ಶಿಶುವನ್ನು ಕೊಲ್ಲಬೇಕೆಂದು, ಬಂಡಿಯಾಕಾರದ ಶಕಟಾಸುರನು ಉರುಳುತ್ತ ಬಂದುಬೀಳಲು, ಆಗ ಕೃಷ್ಣನು ಒದೆದನು. ಅಂಗಾಲು ಸೋಕಿದ ಮಾತ್ರದಲ್ಲೇ ಶಕಟನು ಸಿಡಿಲುಹೊಡೆದಂತೆ ಬಿದ್ದು ಸತ್ತನು. ೩೧. ಶಕಟಾಸುರನು, ಬಿದ್ದೆಡೆಯಲ್ಲಿ ಮಹಾಕುಲಪರ್ವತವು ಬಿದ್ದಂತೆ ಬೇರೊಂದು ರಾಕ್ಷಸಾಕೃತಿಯು ಬಿದ್ದಿತು. "ಇನ್ನು ಇದನ್ನು ಗೋಪರು ಕಂಡರೆ ಈ ಕೂಸಿನ ಸಾಹಸವು ಆಶ್ಚರ್ಯವೆಂದು ಅಂಜುವರು. ನೋಡಿದರೆ ಇದು ಕೆಟ್ಟದ್ದು" ಎಂದುಕೊಂಡ ಆ ಅಚ್ಯುತನು ಪುಡಿಯಾದ ಆ ಬಂಡಿಯ ರೂಪದ ಶಕಟನು ಕಾಣಿಸಿದ ರಾಕ್ಷಸರೂಪವನ್ನು ಕಾಣದಂತೆ ಮಾಡಿ ಮಲಗಿದ್ದನು. ೩೨. ಸ್ತನ್ಯಪೂರ್ಣಕುಚೆಯಾದ ಗೋಪಿಯು ಬಂದು ಈ ಬಂಡಿಯು ಹೇಗೆ ಇಲ್ಲಿ ನೂರಾರು ಚೂರಾಗಿ ಬಿದ್ದಿದೆ? ಎಂದು ಶಂಕೆಗೊಂಡು ಗಿಳಿಮಾತಿನಿಂದ

---

೧. ತೋಱಿ(ಮೂಲ)

ಅಲಿಗಳ ಸೋಂಕಿಂ ಪ್ರಾತ
ರ್ಜಲರುಹಮಲರ್ವಂತೆ ಗೋಪಿಯರ್ ಪದೆಪಿಂ ಜ
ಕ್ಕುಲಿಸೆ [1]ಲಲಿತಾನನಾಂಬುಜ
ಮಲರ್ದೆಸೆದುದು ಮಂದಹಾಸದಿಂ ಮುರಹರನಾ ೩೩

ಅಲಿಗಳೆಱಗಿರ್ದ ತಾವರೆ
ಯಲರಂ ಸಕಳಂಕಮಾದ ಶಶಿಮಂಡಲಮಂ
ಗೆಲೆವಂದುದಂಜನಂ ಪರೆ
ದಲರ್ದ ಮೊಗಂ ಸಕಳಸುರಮನೋರಂಜನನಾ ೩೪

ಕುಸುಮಾಕರಸಮಯದೊಳತಿ
ಮಸೃಣತರಂ ಚೂತಪೋತಕನಂ ನನೆಯಿಂ ರಂ
ಜಿಸುವಂತಿರೆ ತನಯಂ ರಂ
ಜಿಸಿದಂ ಶೈಶವದೊಳಾ ಕುಶೇಶಯ ನಯನಂ ೩೫

ವಿವಿಧಸಟಾವಳಿ ಕಿರುಜಡೆ
ನವಕೇಸರಕಾಂತಿ ಕೊರಲ [2]ರಕ್ಕೆಯ ರತ್ನ
ಚ್ಛವಿಯಾಗಲಂಬೆಗಾಲಿ
ಕ್ಕುವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ ೩೬

ಕೇಳಿ. ಮನಸ್ಸಿಟ್ಟು ಕಂದನ ಅವಯುವಗಳನ್ನೆಲ್ಲಾ ನೋಡಿ, ಅವನ ಅಂಗಾಲು ಬಹಳ ಕೆಂಪಾಗಿದ್ದುದರಿಂದ ವಿಚಾರವನ್ನು ತಿಳಿದು, ಕಮಲನೇತ್ರನಾದ ಆ ಕಂದನನ್ನು ಎತ್ತಿಕೊಂಡು 'ಥೂತ್'ಕರಿಸಿ, ವಿಚಾರವನ್ನು ಪತಿಗೆ ತಿಳಿಸಿ, ಅನೇಕ ಶಾಂತಿ ಕರ್ಮಗಳನ್ನು ಮಾಡಿಸಿದಳು. ೩೩. ಪ್ರಾತಃಕಾಲದ ತುಂಬಿಗಳು ಸೋಕುವುದರಿಂದ ಕಮಲವು ಅರಳುವಂತೆ ಗೋಪಿಯರು ಪ್ರೀತಿಯಿಂದ ತನ್ನ ಮೇಲೆ ನೋಟವನ್ನು ಬೀರಿದುದರಿಂದ ಕೃಷ್ಣನ ಲಲಿತವಾದ ಮುಖಕಮಲವು ಅರಳಿ, ಕಿರುನಗುವಿನಿಂದ ಪ್ರಕಾಶಿಸುತ್ತಿದ್ದಿತು. ೩೪. ಸಕಲ ದೇವತೆಗಳಿಗೂ ಮನೋರಂಜಕನಾದ ಕೃಷ್ಣನ ಕಣ್ಣು ಕಪ್ಪುಹರಡಿದ ನಗುಮುಖವು. ತುಂಬಿಗಳು ಕುಳಿತಿರುವ ತಾವರೆಯ ಹೂವಿಗಿಂತಲೂ ಅಧಿಕ ಮನೋಹರವಾಗಿದ್ದಿತು. ೩೫. ವಸಂತಕಾಲದಲ್ಲಿ ಅತಿಮನೋಹರವಾದ ಎಳಮಾವು ಹೂವಿನಿಂದ ರಂಜಿಸುವಂತೆ ಎಳೆತನದ ಆ ಮಗುವು ತಾವರೆಗಣ್ಣಿನಿಂದ ರಂಜಿಸುತ್ತಿದ್ದಿತು. ೩೬. ಕೃಷ್ಣನು ಅಂಬೆಗಾಲಿಡುವಾಗ ಅವನ ಕಿರುಜಡೆಯು ಸಿಂಹದ ಜಾತಿಯಂತೆಯೂ ಕೊರಳಲ್ಲಿರುವ ರಕ್ಷಾಮಣಿಗಳ ಕಾಂತಿಯು ಸಿಂಹದ ಕೇಸರದಂತೆಯೂ ರಂಜಿಸುತ್ತಿರಲು, ಅವನು ಸಿಂಹದ ಮರಿಯಂತೆ ಶೋಭಿಸಿದನು. ಚಟುವಟಿಕೆಯಿಂದಲೂ ಆಸಕ್ತಿಯಿಂದಲೂ ಮನೆಯ ಅಂಗಳದಿಂದ ಅಂಬೆಗಾಲಿಡುತ್ತಲೇ ಹೊರಗೆ ಓಡುತ್ತಿದ್ದ ಕೃಷ್ಣನ ಹಿಂದೆಯೇ ಹೋಗಿ, ಹಿಡಿದುಕೊಂಡು ಒಳಗೆ ಗದರಿಸಿಬಿಡುತ್ತಿದ್ದ ಗೋಪಿಯು ಒಂದು ದಿನ

---

೧. ಯಸಿತಾ (ಖಗ) ೨. ಭೂಷಿತ (ಖಗ)

ತನ್ನದಟಿಂದೆ ಮಾಣದೆ ಗೃಹಾಂಗಣಮಂ ಪೊಱಮಟ್ಟು ಪೋಪನಂ
ಬೆನ್ನನೆ ಪೋಗಿಪೋಗಿ ಪಿಡಿತಂದೆನಸುಂ ಜಡಿದೊರ್ಮೆ ಗೋಪಿ ದಾ
ವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ ಪೋ
ಗಿನ್ನೆಲೆಪೋಗಲಾರ್ಪೊಡೆಲೆ ಚಂಚಲಚೇಷ್ಟಿತ ನೋೞ್ಪೆನೆಂಬುದುಂ ೩೭

ಪನೆ ಮಿಱುಗಲ್ ಮುಗುಳ್ನಗೆನಗುತ್ತೊರಲಂ ತೆಗೆಯುತ್ತುಮೊಯ್ಯನೊ
ಯ್ಯನೆ ಮುರಿದಂಬಿಕಾಮುಖಮನೀಕ್ಷಿಸುತುಂ ನಡೆಯಲ್ ಮಹಾಯಮಾ
ರ್ಜುನಕುಜದಲ್ಲಿ ಸಿಲ್ಕಿದೊರಲಂ ತೆಗೆಯಲ್ಕನುಗೆಯ್ದೊಡಾಯಮಾ
ರ್ಜುನ ತರು ಕಿೞ್ತು ಬೇರ್ವೆರಸು ಬಿೞ್ದಿರೆ ಮಧ್ಯದೊಳಿರ್ದನಚ್ಯುತಂ ೩೮

ವಿಯದಾಶಾವಧಿಯಾಗಿ ಪೆರ್ಚಿ ಬೆಳೆದಿರ್ದಾ ಮತ್ತಿಯಂ ಕೃಷ್ಣನ
ಟ್ಟೆಯ ಕೂಸಾಟದೆ ಕಿೞ್ತ ಮಾನುಷಚರಿತ್ರಂ ನೋೞ್ಪ ಗೋಪಾಲರೊಳ್
ಭಯಮಂ ಮಾಡದೆ ಮುದ್ದಿದೆಂಬದಟಿದೆಂಬಂತಾಯ್ತು ಯುಕ್ತಂ ಜಗ
ತ್ತ್ರಯರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾೞ್ಕುಮೇ ೩೯

ವ|| ಆಗಳಾ ಕಳಕಳಧ್ವನಿಯಂ ಕೇಳ್ದಿದೇನೆಂದು ನಂದಗೋಪಂ ಪೊಱವೊಟಲಿಂ ಬಂದು ಭಗ್ನವಾಗಿರ್ದಾಮಹಾಸ್ಕಂಧಶಾಖಾರ್ಜುನವಿಟಪಿಯುಮಂ ದರಸ್ಮಿತಭಿನ್ನೋಷ್ಠ ಪುಟನಾಗಿರ್ದ ದಾಮೋದರನುಮಂ ಕಂಡು ಕೌತುಕಾನನ್ದನಿರತಿಶಯಹೃದಯನಾಗಿರ್ಪಿನಂ ಯಶೋದೆ

೩೭. ಅವನ ನಡುವಿಗೆ ಹಗ್ಗವನ್ನು ಬಿಗಿದು, ಅದರಿಂದ ಮರದ ಒರಳೊಂದಕ್ಕೆ ಅವನನ್ನು ಕಟ್ಟಿಹಾಕಿ, "ಎಲೋ, ಚಂಚಲಚೇಷ್ಟೆಯವನೇ! ಇನ್ನು ಹೋಗುವುದಕ್ಕೆ, ಶಕ್ತಿಯಿದ್ದರೆ ಹೋಗು ನೋಡುತ್ತೇನೆ" ಎಂದಳು. ೩೮. ಕೃಷ್ಣನು ಹಲ್ಲು ಹೊಳೆದು ಕಾಣುವಂತೆ ಕಿರುನಗುವನ್ನು ಬೀರುತ್ತ ಆ ಒರಳನ್ನು ಎಳೆದುಕೊಂಡು, ಮೆತ್ತಮೆತ್ತಗೆ ಹಿಂದಿರುಗಿ ತಾಯಿಯ ಮುಖವನ್ನು ನೋಡುತ್ತಾ ಹೊರಗೆ ನಡೆದನು. ಒರಳು ಅವಳಿಯಾಗಿ ಬೆಳೆದಿದ್ದ ಮತ್ತಿಯ ಮರದ ನಡುವೆ ಸಿಕ್ಕಿಕೊಂಡಿತು. ಅದನ್ನು ಬಿಡಿಸಿ ತೆಗೆಯಲು ಪ್ರಯತ್ನಿಸಿದಾಗ ಆ ಯಮಳಾರ್ಜುನ ವೃಕ್ಷವು ಬೇರುಸಹಿತ ಕಿತ್ತುಬಿದ್ದಿತು. ಬಿದ್ದ ಮರಗಳೆರಡರ ನಡುವೆ ಕೃಷ್ಣನು ಸುರಕ್ಷಿತನಾಗಿದ್ದನು. ೩೯. ಆಕಾಶ ದಿಗಂತದವರೆಗೆ ಬೆಳೆದಿದ್ದ ಆ ಮತ್ತಿಯ ಮರವನ್ನು ಕೃಷ್ಣನು ಮಕ್ಕಳಾಟಿಕೆಯಿಂದ ಬೇಕೆಂದು ಕಿತ್ತ ಅಮಾನುಷ ಚರಿತೆಯು, ಅದನ್ನು ನೋಡಿದ ಗೋಪಾಲಕರಲ್ಲಿ ಭಯವನ್ನುಂಟು ಮಾಡದೆ, ಇದು ಒಂದು ಮುದ್ದಿನ ಶಕ್ತಿಯ ಕೆಲಸವೆನ್ನುವಂತೆ ಮಾಡಿತು. ಅದೂ ಉಚಿತವೇ, ಮೂರು ಲೋಕವನ್ನೂ ರಕ್ಷಿಸುವುದರಲ್ಲಿ ಪ್ರೀತಿಯುಳ್ಳ ಕೃಷ್ಣನ ಚರಿತ್ರೆಯು ಭಯವನ್ನುಂಟುಮಾಡುವುದೆ?! ವ|| ಆಗ ಆ ಕಲಕಲ ಧ್ವನಿಯನ್ನು ಊರಹೊರಗಿದ್ದ ನಂದಗೋಪನು ಕೇಳಿ, ಇದೇನೆಂದು ಗಾಬರಿಗೊಂಡು ಬಂದು, ಮುರಿದು ಬಿದ್ದಿದ್ದ ಬುಡಕೊಂಬೆಗಳಿಂದ ಕೂಡಿದ ದೊಡ್ಡ ಮತ್ತಿಯ ಮರವನ್ನೂ ಕಿರುನಗೆಯಿಂದ ತೆರೆದ ತುಟಿಯುಳ್ಳ ಕೃಷ್ಣನನ್ನೂ ನೋಡಿ, ಅತಿಶಯಾನಂದಾಶ್ಚರ್ಯ

ಪರಮಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ ಸರೋರುಹೋ
ದರನನಿದಾರ ಮಾಣಿಕವಿದಾರ ನಿಧಾನವಿದಾರ ಮುದ್ದಿದಾ
ರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹವೆಂ
ದಿರದಮರ್ದಪ್ಪಿದಳ್ ಪದೆಪಿನಂ ಮೊಲೆವಾಲ್ ತೊಱೆದೆಚ್ಚುಪಾಯ್ವಿನಂ ೪೦

ತರುಣೇಂದು ದಿನಕ್ರಮದಿಂ
ಪರಿವರ್ಧಿಸಿ ವಾರಿನಿಧಿಯನೊದವಿಪ ತೆಱದಿಂ
ಮುರರಿಪು ದಿವಸಕ್ರಮದಿಂ
ಪರಿವರ್ಧಿಸಿ ಜನದ ಮುದಮನೊದವಿಸುತಿರ್ದಂ ೪೧

ಒಂದಡಿಯನಿಟ್ಟು ಹರಿ ಮ
ತ್ತೊಂದಡಿಗಡಿಯೆತ್ತುವಾಗಳುಂ ವಿಕ್ರಮನಾ
ದಂದಿನ ಸಂಸ್ಕಾರಂ ಬಿಡ
ದೆಂದೆನೆ ಬಗೆಗೊಳಿಸಿದಂ ತಳರ್ನಡೆವೆಡೆಯೊಳ್ ೪೨

ಕಮಲಭವಾದ್ಯರುಂ ಪಡೆವರೇ ಹರಿಪಾದಜೋಲವಪ್ರಸಾ
ದಮನೆನಲತ್ಯಲಭ್ಯತರಮಾದ ತದಂಘ್ರಿಗಳೆನ್ನ ಮೇಲೆ ಸಂ
ಕ್ರಮಿಸಿದುವೆಂದು ತನ್ನ ಕೃತಕೃತ್ಯತೆಗೇಂ ತಲೆದೂಗುತಿರ್ದಳೋ
ಕ್ಷಮೆಯೆನೆ ಕಂಪಿಕುಂ ಧರೆ ತಳರ್ನಡೆವಂಘ್ರಿಭರಕ್ಕೆ ಕೃಷ್ಣನಾ ೪೩

ಎಡೆಗಿಱಿದಿರೆ ಪೊಂಗವಡಿಕೆ
ಬಿಡೆ ಘಲ್ಲೆನೆ ಗೆಜ್ಜೆ ಮಿಱುಗೆ ದಶನಾಂಶು ಕುರುಳ್
ಜಡಿಯೆ ತೊದಳ್ನುಡಿಯ ತಳ
ರ್ನಡೆಯ ಬೆಡಂಗಸುರವೈರಿಗಡಿಗಡಿಗೆಸೆಗುಂ ೪೪

ಹೃದಯನಾದನು. ಯಶೋದೆಯು ೪೦. ಪರಮ ಸುಖಬಾಷ್ಪದಿಂದ ಒದ್ದೆಯಾದ ಕಣ್ಣಿನಿಂದ ಕಮಲೋದರನಾದ ಆ ಮಗನನ್ನು ನೋಡಿ, "ಇದು ಯಾರ ಮಾಣಿಕ್ಯ! ಇದು ಯಾರ ನಿಧಿ? ಇದು ಯಾರ ಮುದ್ದು! ಇದು ಯಾರ ದೊರೆ? ಇವನಾರ ವಲ್ಲಭ? ಇದಾರ ಮರಿಯಾನೆ ಇದಾರ ಸಿಂಹ!" ಎಂದುಕೊಳ್ಳುತ್ತ ವಾತ್ಸಲ್ಯದಿಂದ ಮೊಲೆಹಾಲಿಳಿದು ಚಿಮ್ಮಿ ಹಾರುತ್ತಿರಲು ಗಟ್ಟಿಯಾಗಿ ಅಪ್ಪಿಕೊಂಡಳು. ೪೧. ಬಾಲಚಂದ್ರನು ದಿನಕ್ರಮದಲ್ಲಿ ಚೆನ್ನಾಗಿ ಬೆಳೆದು, ಸಾಗರವನ್ನು ಉಕ್ಕಿಸುವಂತೆ ಕೃಷ್ಣನು ದಿನಕ್ರಮದಲ್ಲಿ ಚೆನ್ನಾಗಿ ಬೆಳೆದು, ಜನರ ಸಂತೋಷವನ್ನು ಉಕ್ಕಿಸುತ್ತಿದ್ದನು. ೪೨. ಕೃಷ್ಣನು ದಟ್ಟಡಿಯಿಡುವಾಗ ಒಂದು ಹೆಜ್ಜೆಯನ್ನು ಇಟ್ಟು ಮತ್ತೊಂದನ್ನು ಮುಂದಿಡಲು ಕಾಲನ್ನು ಎತ್ತುವಾಗ ತನ್ನ ತ್ರಿವಿಕಮನಾಗಿದ್ದಾಗಿನ ಸಂಸ್ಕಾರವು ತಪ್ಪಿಲ್ಲವೆನ್ನುವಂತೆ ಚೆನ್ನಾಗಿ ಕಾಣಿಸುತ್ತಿದ್ದನು. ೪೩. ಬ್ರಹ್ಮನೇ ಮೊದಲಾದವರು ಕೂಡ ಹರಿಯಪಾದಧೂಳಿಲವದ ಅನುಗ್ರಹವನ್ನು ಪಡೆಯಲಾರರೆನ್ನುವಾಗ ಅಲಭ್ಯತರವಾದ ತನ್ನ ಪಾದಗಳನ್ನೇ ನನ್ನ ಮೇಲಿಟ್ಟು ಸಂಚರಿಸಿದನು ಎಂದು ತನ್ನ ಕೃತಜ್ಞತೆಯಿಂದ ಭೂದೇವಿಯು ತಲೆದೂಗುತ್ತಿರುವಳೋ ಎಂಬಂತೆ ಕೃಷ್ಣನು ದಟ್ಟಡಿಯಿಟ್ಟು ನಡೆಯುವಾಗ ಪಾದದ ಭಾರಕ್ಕೆ ಭೂಮಿ ನಡುಗುವುದು. ೪೪. ಚಿನ್ನದ ಕಿರುಗವಡೆಗಳು ಒತ್ತಾಗಿದ್ದು, ಗೆಜ್ಜೆಯು ಹೆಚ್ಚಾಗಿ ಘಲ್ ಘಲ್ಲೆಂದು ಶಬ್ದಮಾಡುತ್ತ, ಹಲ್ಲಿನ ಬಿಳುಪು

ಒಡವುಟ್ಟಿದ ಕೌಸ್ತುಭಮಿ
ರ್ಪೆಡೆಗಂ ದಾಯಾದನಪ್ಪೆನನ್ನೆಗಮೆಂದಂ
ದುಡುಪತಿಕಳೆ ನೆಲಸಿತ್ತೆನೆ
ಪೊಡೆಯಲರನ ಕೊರಲ ಪುಲಿಯುಗುರ್ ಕರಮೆಸೆಗುಂ ೪೫

ನೊಸಲೊಳ್ ಕಣ್ಣುಳ್ಳ ಮನೋ
ಜಸೂದನಂ ಪೆಱನದಾವನಾನೆ ದಲೆಂದೀ
ವಸುಮತಿಗೆ ಸೂಚಿಪಂದದಿ
ನೆಸೆದಂ ಹರಿ ನೊಸಲಕಣ್ಣೊಲೆಸೆವರಲೆಲೆಯಿಂ ೪೬

ವಿಕ್ರಮಮೂರ್ತಿಗೆ ತಾರಾ
ಚಕ್ರಂ ಕಟಿಸೂತ್ರಮಾಗೆ ತತ್ಕಟಿಸೂತ್ರಂ
ಚಕ್ರಿಗೆ ಬಾಲ್ಯಕ್ಕನುರೂ
ಪಕ್ರಮಮಾಯ್ತೆನಿಸಿ ಮುತ್ತಿನುಡೆವಣಿಯೆಸೆಗುಂ ೪೭

ಸಲೆ ಪಾಟೆಗಿಡದೆ ಗುಣದಿಂ
ತೊಲಗಿರದೀ ಕೃಷ್ಣಪದಮನಾಶ್ರಯಿಪೆಮ್ಮಂ
ತೆಲೆ ಮರ್ತ್ಯಪದಮನಾಶ್ರಯಿ
ಸಲೊಲ್ವನೆಂಬಂತೆ ಹರಿದು ನೂಪುರ[೧]ಮುಲಿಗುಂ ೪೮

ಎನಿತೊಂದು ಪದೆಪು ಮೋಹಂ
ವನಜಾಕ್ಷನೊಳನಿತು ಪದೆಪು ಮೋಹಂ ಬಳನೊಳ್
ತನಗಾಗೆ ನಂದವಧು ತ
ತ್ತನಯದ್ವಯಕೇಳಿಯಿಂದೆ ಸುಖಮಂ ಪಡೆದಳ್ ೪೯

ಹೊಳೆಯುತ್ತಾ ತಲೆಗೂದಲು ಜೋಲುತ್ತ ಇರಲು ಕೃಷ್ಣನ ತೊದಲುಮಾತಿನ ಮತ್ತು ದಟ್ಟಡಿನಡೆಯ ಬೆಡಗು ಅಡಿಗಡಿಗೆ ಚೆನ್ನಾಗಿ ಕಾಣುವುದು. ೪೫. "ಈ ಕೌಸ್ತುಭವು ನನ್ನೊಡನೆ ಹುಟ್ಟಿದುದು ಆದುದರಿಂದ ಇದು ಇರುವ ಸ್ಥಳಕ್ಕೂ ಎಂದೆಂದಿಗೂ ನಾನು ಭಾಗಿಯಾಗಿರುತ್ತೇನೆ". ಎಂದು ಚಂದ್ರಕಳೆಯು ಬಂದು ನೆಲೆಸಿದೆಯೆನ್ನುವಂತೆ ಪದ್ಮನಾಭನ ಕೊರಳ ಹುಲಿಯುಗುರು, ಹೆಚ್ಚಾಗಿ ಹೊಳೆಯುವುದು. ೪೬. ಮನ್ಮಥನನ್ನು ಕೊಂದ ಹಣೆಗಣ್ಣ (ತ್ರಿಣೇತ್ರ)ನು ನಿಜವಾಗಿಯೂ ನಾನೇ ಬೇರೆ ಯಾರೂ ಅಲ್ಲ ಎಂದು ಈ ಭೂಮಿಗೇ ಸೂಚಿಸುವನೋ ಎನ್ನುವಂತೆ ಕೃಷ್ಣನು ಹಣೆಗಣ್ಣನಂತೆ ಕಾಣುವ ಅರಳೆಲೆಯೆಂಬ ನೆತ್ತಿಯ ಮೇಲಿನ ಜೋಲು ಆಭರಣದಿಂದ ಒಪ್ಪುತ್ತಿದ್ದನು. ೪೭. ತ್ರಿವಿಕ್ರಮಮೂರ್ತಿಗೆ ಉಡಿದಾರವಾಗಿದ್ದ ಆ ನಕ್ಷತ್ರಮಂಡಲವು ಈಗ ಬಾಲಕನಾಗಿರುವ ಕೃಷ್ಣನಿಗೆ ತಕ್ಕಂತೆ ಚಿಕ್ಕದಾಗಿದೆಯೋ ಎನ್ನುವಂತೆ ಅವನ ಮುತ್ತಿನ ಉಡಿಮಣಿಯು ಹೊಳೆಯುತ್ತಿದ್ದಿತು. ೪೮. ಹರಿಯ ಕಾಲ್ಗೆಜ್ಜೆಯು "ಎಲೈ ಮನುಜರೇ ಕ್ರಮತಪ್ಪದೆ ಗುಣ(ದಾರ)ವನ್ನು ಬಿಡದೆ ನಮ್ಮಂತೆ ಕೃಷ್ಣನ ಪಾದವನ್ನಾಶ್ರಯಿಸಿದರೆ ಅವನು ಒಲಿಯುವನು." ಎಂದು ಹೇಳುತ್ತಿದೆಯೋ ಎನ್ನುವಂತೆ ಶಬ್ದವನ್ನು ಮಾಡುತ್ತಿದ್ದಿತು. ೪೯. ನಂದಗೋಪಿಯು, ತನಗೆ ಕೃಷ್ಣನ ಮೇಲೆ ಎಷ್ಟು ಇಷ್ಟವೋ ಪ್ರೀತಿಯೋ ಅಷ್ಟೇ ಇಷ್ಟವೂ ಪ್ರೀತಿಯೂ ಬಲರಾಮನಲ್ಲಿ ಇದ್ದುದರಿಂದ

---

೧. ಮೆಸೆಗುಂ (ಕಖಗ)

ಒಡನೊಡನಾಡಿಗಳ್ ಗಡಣದಿಂ ಬರೆ ಗೆಜ್ಜೆಯ ಸುಣ್ಣರಂ ಪೊದ
ಱ್ದೆವಣೆಯಿಂಚರಂ ನೆಗೞೆ ಕಣ್ಮಲರ್ಗಳ್ ಪೊಳೆದಾಡೆ ಧೂಳಿ ಮೆ
ಯ್ಗಡರ್ದಿರೆ ಮುಗ್ಧಜಲ್ಪನಮೊಡಂಬಡೆ ರಂಜಿಸಿ ತಾಯ ದಿಟ್ಟಿ ತ
ಮ್ಮೊಡನೊಡನೆತ್ತಲುಂ ಪರಿವಿನಂ ಪರಿದಾಡಿದರಾ ಬಳಾಚ್ಯುತರ್ ೫೦

ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾೞ್ತೆಗೆ ಪೋಗೆ ಗೆಜ್ಜೆಯಿಂ
ದನಿ ನಸುಪೊಣ್ಮದಂತು ಪರಿತಂದೆಡಗೆಯ್ಯೊಳೆ ತೋಡಿ ಬೆಣ್ಣೆಯಂ
ತಿನುತಿರೆ ಗೋಪಿ ಕಂಡೆಲೆಲೆ ಕಳ್ಳತನಂಗಳನಣ್ಣ ಕಂಡೆವಾ
ವೆನೆ ಕಡೆವಾಯ ಬೆಣ್ಣೆವೆರಸೊಯ್ಯನೆ ಪಿಂಗುವ ಕೃಷ್ಣನೊಪ್ಪಿದಂ ೫೧

ವ|| ಮತ್ತೊಂದು ಸಮಯದೊಳ್ ಪಾಲ್ಗುಡಿಯಲೊಲ್ಲದಾಟೆಗುಟ್ಟುವ ದಾಮೋದರನಂ ಯಶೋದೆ ಕಂಡು

ಶಕಟವಿಮರ್ದನಾ ಮುಸಲಿ ಬಾರದ ಮುನ್ನಮೆ ನಮ್ಮ ಹೇಮಘಂ
ಟಿಕೆ ಘಣಿಲೆಂಬ ನಂದಿನಿಯ ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಚೆಂ
ಡಿಕೆ ಬಳೆದಪ್ಪುದೆಂದಬಲೆ ನಂಬಿಸೆ ಪಾಲ್ಗುಡಿದೀಗಳಬ್ಬೆ ಚೆಂ
ಡಿಕೆಯೆನಿತುದ್ದವಾದುದೆನುತುಂ ಬೆಸಗೊಳ್ವ ಮುಕುಂದನೊಪ್ಪುಗುಂ ೫೨

ಆ ಇಬ್ಬರು ಮಕ್ಕಳ ಬಾಲಕ್ರೀಡೆಯಿಂದಲೂ ಸಂತೋಷವನ್ನು ಪಡೆದಳು. ೫೦. ಒಡನಾಡಿಗಳು ಸಂಗಡ ಗುಂಪಾಗಿ ಬರುತ್ತ, ತಮ್ಮ ಕಾಲ್ಗೆಜ್ಜೆಯೂ ನಡುಗೆಜ್ಜೆಯೂ ಇಂಪಾಗಿ ಧ್ವನಿ ಮಾಡುತ್ತ, ತಾವರೆಗಣ್ಣುಗಳು ಹೊಳೆಯುತ್ತಾ, ಮುದ್ದಾದ ತೊದಲು ನುಡಿಗಳು ಚೆನ್ನಾಗಿರುತ್ತಾ ಧೂಳು ಮೈಗೆ ಅಡರುತ್ತಾ ತಾಯಿಯ ಜಾಗರೂಕತೆಯ ನೋಟವು ತಮ್ಮನ್ನು ಹಿಂಬಾಲಿಸಿ ಬರುತ್ತ ಇರಲು ಆ ಬಲರಾಮಕೃಷ್ಣರು ಓಡಿಯಾಡು ತ್ತಿದ್ದರು. ೫೧. ಗೋಪಿಯು, ಮೊಸರನ್ನು ಕಡೆಯುತ್ತಿದ್ದು ನಡುವೆ ಬೇರೆಯ ಕೆಲಸಕ್ಕಾಗಿ ಹೋದಾಗ ಕೃಷ್ಣನು ಗೆಜ್ಜೆಯ ಶಬ್ದವಾಗದಂತೆ ಅಲ್ಲಿಗೆ ಓಡಿಬಂದು ಎಡಗಯ್ಯಿಂದಲೇ ಬೆಣ್ಣೆಯನ್ನು ತೋಡಿ ತಿನ್ನುತ್ತಿದ್ದನು. ಗೋಪಿಯು ಕಂಡು, “ಎಲೆಲೆ ಅಣ್ಣ! ನಿನ್ನ ಕಳ್ಳತನಗಳನ್ನು ನಾವು ಕಂಡೆವು” ಎಂದಳು. ಕಡೆಬಾಯಲ್ಲಿದ್ದ ಬೆಣ್ಣೆಯ ಸಹಿತವೇ ಬೇಗ ಹಿಂದಿರುಗಿ ಓಡಿದ ಅವನು ಚೆನ್ನಾಗಿ ರಂಜಿಸಿದನು. ವ|| ಮತ್ತೊಂದು ಸಮಯದಲ್ಲಿ ಹಾಲನ್ನು ಕುಡಿಯಲೊಲ್ಲದೆ ಚಂಡಿ ಹಿಡಿದ ಕೃಷ್ಣನನ್ನು ನೋಡಿ, ೫೨. “ಶಕಟಮರ್ದನಾ! ಚಿನ್ನದ ಘಂಟೆಯು ಘಣಿಲೆಂದು ಶಬ್ದಮಾಡುವ ನಮ್ಮ ನಂದಿನಿಯ ಹಾಲಿದೆ. ಬಲರಾಮನು ಬರುವುದಕ್ಕಿಂತ ಮುಂಚೆಯೇ ನೀನು ಕುಡಿದರೆ ನಿನ್ನ ಮುಂಜುಟ್ಟು ಬೆಳೆಯುವುದು.” ಎಂದು ಹೇಳಿ ಯಶೋದೆಯು ನಂಬಿಸಿದಾಗ ಹಾಲನ್ನು ಕುಡಿದು, “ಅಮ್ಮ ಈಗ ನನ್ನ ಚಂಡಿಕೆ ಎಷ್ಟು ಉದ್ದವಾಯಿತು” ಎಂದು ಕೇಳಿದ ಆ ಕೃಷ್ಣನು ಮುದ್ದು ಬೀರುತ್ತಿದ್ದನು. ೫೩. ಸಂಸಾರನಾಟಕ

ಚಾರಿಮೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ ಮಂಜುಮಂ
ಜೀರಕಂಕಣಕಿಂಕಿಣೀರುತಿ ಪೊಣ್ಮೆ ವಕ್ರಿತಕಂಧರಂ
ಸ್ಮೇರವಕ್ತ್ರಸರೋರುಹಂ ಲಲಿತಾಯತೇಕ್ಷಣನಾಗಿ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ೫೩

[೧]ನೀರದೋತ್ಪಲ ವರ್ಣನಾಡಿದನಾಡಿದಂ ಕಮಲೇಕ್ಷಣಂ
ಚಾರುಹಾಸನಿವಾಸನಾಡಿದನಾಡಿದಂ ಸುಭಗಂ ಶುಭಾ
ಕಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ೫೪

ಕ್ಷೀರಲಂಪಟನಾಡಿದಂ ನವನೀತಚೋರಕನಾಡಿದಂ
ದಾರಕವ್ರಜಮಲ್ಲನಾಡಿದನಾಡಿದಂ ಹರಿ ಗೋಕುಲಾ
ಧಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ೫೫

ದಾರುಣಾಕೃತಿಪೂತನಾಂತಕನಾಡಿದಂ ಶಕಟಪ್ರಸಂ
ಹಾರನಾಡಿದನಾಡಿದಂ ಯಮಳಾರ್ಜುನದ್ರುಮಘಾತಿಯೆಂ
ಬೀರವಂ ನೆಗಟಲ್ಕೆ ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಜೆಗಾಡಿದಂ ೫೬

ಸೂತ್ರಧಾರಿಯಾದ ಕೃಷ್ಣನು, ಗೋಪಿಯರು ಚಪ್ಪಾಳೆಯನ್ನು ತಟ್ಟುತ್ತಿರಲು ತಾಳಕ್ಕೆ ಸರಿಯಾಗಿ ಹೆಜ್ಜೆಯನ್ನು ಹಾಕುತ್ತಾ, ತೋಳನ್ನು ತಿರುಗಿಸುತ್ತಾ, ಕಾಲ್ಬಳೆ ಕೈ ಕಪ್ಪಗಳ ಮನೋಹರವಾದ ಧ್ವನಿಯನ್ನು ಹೊಮ್ಮಿಸುತ್ತಾ ಕತ್ತನ್ನು ಓರೆಮಾಡುತ್ತ ಕಮಲದಂತೆ ನಗುಮುಖವುಳ್ಳವನೂ ಲಲಿತವೂ ಸೌಮ್ಯವೂ ಆದ ದೃಷ್ಟಿಯುಳ್ಳವನೂ ಆಗಿ ಕುಣಿದನು. ೫೪. ಕನ್ನೈದಿಲೆಯ ಬಣ್ಣದವನು ಆಡಿದನು, ತಾವರೆಗಣ್ಣಿನವನು ಆಡಿದನು, ನಗುಮುಖದವನು ಆಡಿದನು, ಸೌಂದರ್ಯದ ಮಂಗಳಾಕಾರನು ಆಡಿದನು" ಎಂದು ಹೇಳುತ್ತ ಗೋಪಿಯರು ಚಪ್ಪಾಳೆ ಹಾಕುತ್ತಿರಲು ಸಂಸಾರನಾಟಕ ಸೂತ್ರಧಾರಿ ಕೃಷ್ಣನು ಆಡಿದನು. ೫೫. "ಹಾಲಿನ ಲಂಪಟನು ಆಡಿದನು, ಹೊಸ ಬೆಣ್ಣೆಗಳ್ಳನು ಆಡಿದನು, ಮಕ್ಕಳ ಗುಂಪಿನ ಜಟ್ಟಿ ಆಡಿದನು, ಗೋಕುಲಾಧಾರ ಆಡಿದನು" ಎಂದು ಹೇಳುತ್ತ ಚಪ್ಪಾಳೆಯನ್ನು ತಟ್ಟುತ್ತಿರಲು ಅದಕ್ಕೆ ಸರಿಯಾಗಿ ಸಂಸಾರನಾಟಕ ಸೂತ್ರಧಾರಿ ಮುರಾರಿ ಕುಣಿದನು. ೫೬. "ಭೀತಿಯ ಪೂತನಿ ಹಂತಕನು, ಶಕಟಾಸುರ ಸಂಹಾರಕನು, ಅವಳಿಯ ಮತ್ತಿಯ ಭಂಜಕನು, ಆಡಿದನಾಡಿದನೆನ್ನುತ-।
ಗೋಪಿಯರೆಲ್ಲರೂ ಚಪ್ಪಾಳೆ ತಟ್ಟಿ, ಸಂಸ್ಕೃತಿನಾಟಕ ಸೂತ್ರವ ಹಿಡಿದಾ ।
ಮುರಾರಿ ಕೃಷ್ಣನು ತಾಳವ ಹಿಡಿದು, ಕುಣಿಯುತ್ತಿದ್ದನು ನಗುತಲೆ ತಾನು ॥

೧. ನೀರಜೋತ್ಪಲ (ಕ ಮೊ ಅ)

ವೀರದೈತ್ಯರ[೧]ನಿಕ್ಕಲಾಡಿಯೆ ಪುಟ್ಟಿದಂ ಹರಿಯೆಂದು ಕೈ
ವಾರದಿಂದವೆ ಮಾತನಾಡೆ ವಿರೋಧಿಗಳ್ ಯಮಲೋಕಮಂ
ಸಾರಲಾಡೆ ಯಶೋದೆ ರಾಗರಸಾಬ್ಧಿಯೊಳ್ ತುಳುಕಾಡೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಱಿಗಾಡಿದಂ ೫೭

ಆನಂದಮೂರ್ತಿ ಸುಖಲ
ಕ್ಷ್ಮೀನಿಳಯಂ ಸಕಲಸಾರಸರ್ವಸ್ವನೆನಿ
ಪ್ಪಾ ನೀರಜನೇತ್ರನ ಲೀ
ಲಾನುಷ್ಠಿತಬಾಲಕೇಳಿ ಬಣ್ಣಿಪರಳವೇ ೫೮

ವನಜಜ ಬನ್ನಿಮಿತ್ತ ಹರ ಕುಳ್ಳಿರಿಮುನ್ನತಪೀಠದೊಳ್ ಪದಾ
ವನತಿಯಿನೇಱ್ ಮಹೇಂದ್ರ ದಿವಿಜರ್ ಪುಗೆ ಬಾರಿಸವೇಡೆನುತ್ತೆ ಮು
ನ್ನಿನ ನಿಜಲೀಲೆಯೋಲಗದ ಪೆರ್ಮೆಯ ಮಾತನದೊರ್ಮೆ ಸುಪ್ತಿಯೊಳ್
ಕನವರಿಸುತ್ತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನೆಗಟ್ಟಿದಂ ೫೯

ಒಂದಲ್ಲದೊಂದನೆನುತಮ
ದೊಂದುದಿನಂ ಕೃಷ್ಣನಾಟಿಗುಟ್ಟಿದೊಡದನೇ
ನೆಂದುಂ ಮಾಣಿಸಲಱಿಯದ
ದೊಂದು ಕಥಾಂತರದೆ ಗೋಪಿ ಮಾಣಿಪ ಬಗೆಯಿಂ ೬೦

ಕತೆಯಂ ಕೇಳೆಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ
ಸ್ಥಿತನಾದಂ ಗುರು ಪೇಟೆ ಹುಂ ದಶಶಿರಂ ಕೊಂಡುಯ್ದನಾ ರಾಮನಾ
ಸತಿಯಂ ತಾನೆನೆ ಪೂರ್ವಮಂ ನೆನೆಯುತುಂ ಹುಂಕೊಳ್ಳದುತ್ಕೋಪಹುಂ
ಕೃತಿಯಂ ಮಾಡುತುಮೌಂಡುಗರ್ಚೆ ಕಿಸುಗಣ್ಬಿಟ್ಟಚ್ಯುತಂ ರಂಜಿಕುಂ ೬೧

೫೭. ರಾಕ್ಷಸ ವೀರರ ಕೊಲ್ಲುವುದಕ್ಕೇ ಹುಟ್ಟಿದನೀ ಹರಿತಾಂ ನಿಜವೀಗ । ಆಟವನಾಡುತ ಹಗೆಗಳನೀತ ಅಟ್ಟುವನಲ್ಲವೆ ಯಮಲೋಕಕ್ಕೆ । ಎನ್ನುತ ಗೋಪಿಯರೆಲ್ಲರು ಹೇಳಿ, ಯಶೋದೆ ರಾಗದ ಸಾಗರದಲ್ಲಿ । ತುಳುಕಾಡುತ್ತಾ ಇರುತಿರಲಾಗ ಆಡಿದನಾ ಹರಿ ಕೈಚಪ್ಪಾಳೆಗೆ ।। ೫೮. ಆನಂದಮೂರ್ತಿ, ಸುಖಲಕ್ಷ್ಮೀನಿವಾಸ, ಸಕಲಸಾರಸರ್ವಸ್ವ ಎನಿಸಿಕೊಂಡಿರುವ ಆ ಕಮಲನೇತ್ರ ಕೃಷ್ಣನು ವಿನೋದದಿಂದ ಆಡಿದ ಮಕ್ಕಳಾಟವನ್ನು ವರ್ಣಿಸುವುದು ಸಾಧ್ಯವೇ?! ೫೯. "ಬ್ರಹ್ಮಾ! ಇತ್ತ ಬನ್ನಿ, ಹರಾ! ಉನ್ನತ ಪೀಠದಲ್ಲಿ ಕುಳಿತುಕೊಳ್ಳಿ, ಮಹೇಂದ್ರಾ! ಪಾದ ನಮಸ್ಕಾರದಿಂದ ಮೇಲೇಳು ದೇವತೆಗಳು ಬಂದರೆ ತಡೆಯಬೇಡ". ಎಂದು ತನ್ನ ಹಿಂದಿನ ಲೀಲಾಸಭೆಯ ಹಿರಿಮೆಯ ಮಾತನ್ನು ಅದೊಂದು ದಿನ ನಿದ್ದೆಯಲ್ಲಿ ಕನವರಿಸುತ್ತಿರುವ ಕೃಷ್ಣನು, ಗೋಪಿಯರಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿದನು. ೬೦. ಅದೊಂದು ದಿನ ಕೃಷ್ಣನು, ಏನಾದರೊಂದನ್ನು ಹೇಳುತ್ತ, ಚಂಡಿ ಹಿಡಿದನು. ಅದನ್ನು ಬೇರೆ ಏನೂ ಹೇಳಿಯೂ ತಪ್ಪಿಸಲರಿಯದ ಗೋಪಿ, ಒಂದು ಕಥೆಯನ್ನು ಹೇಳಿ ತಪ್ಪಿಸಬೇಕೆಂದು ಕೊಂಡು ೬೧. "ಎಲೆಕಂದ ಕಥೆಯನ್ನು ಕೇಳು, ಎಂದಳು. 'ಹೂ' ಎಂದನು. ರಾಮನೆಂಬುವನು, 'ಹೂ', ತಂದೆ ಹೇಳಿದುದರಿಂದ

೧. ನಿಕ್ಕಲೋಸುಗ (ಖಗ)

ಆಡುತ್ತುಂ ಸಹಪಾಂಸು
ಕ್ರೀಡಿತರೊಳ್ ಕೃಷ್ಣನಬ್ಬ ಮಣ್ಣಂ ತಿಂದಂ
ನೋಡೆಂದು ಹಳಧರಂ ಪಿಸು
ಣಾಡಲ್ ಕೇಳ್ದೊರ್ಮೆ ಗೋಪಿ ಸೆಳೆವಿಡಿದೊಲವಿಂ ೬೨

ಹರಿ ನೀಂ ಮಣ್ಣಿಂದೆ ತಿನ್ನೆಂ ಜನನಿ ಪುಸಿದನೆಮ್ಮಗ್ರಜಂ ತೋಱು ವಕ್ತ್ರಾಂ
ತರಮಂ ನೋಡೆಂದು ಬಾಯಂ ತೆಱೆವುದುಮದಱೊಳ್ ವಾರ್ಧಿಯೇೞುಂ ಕುಲೋರ್ವೀ
ಧರವೇೞುಂ ದ್ವೀಪವೇೞುಂಬೆರಸು ಜಗಮನೀರೇೞುಮಂ ಕೂಡೆ ಕಂಡ
ಚ್ಚರಿವಟ್ಟಂ ಮುಚ್ಚುಮುಚ್ಚಾನನಮನೆನುತುಮಾ ಕಾಂತೆ ವಿಭ್ರಾಂತೆಯಾದಳ್ ೬೩

ಕಮಳಾಕ್ಷನ ಮಹಿಮೆಯನಱಿ
ದುಮದಂ ತನ್ಮಾಯೆಯಿಂದೆ ಮಱೆವರ್ ಗೋಪರ್
ಯಮಿಗಳುಮಂ ಮೋಹಿಪ ವಿ
ಷ್ಣುಮಾಯೆ ಮೋಹಿಸದೆ ಗೋಪರಂ ತತ್‌ಕ್ಷಣದೊಳ್ ೬೪

ಪೂತನೆ ಬಿರ್ದುದಂ ಶಕಟನೊತ್ತಿದುದಂ ಯಮಳಾರ್ಜುನಾವನೀ
ಜಾತಮನಾಹತಂ ಕೆಡೆದುದಂ ನೆನೆದದ್ಭುತಮಿಲ್ಲಿ ಕಾಣಲಾ
ಯ್ತಾತಪತಾಪದಿಂದಮಿದು ನಿಸ್ತೃಣನಿರ್ಜಳನಿಷ್ಪ್ರವಾಳವ
ಲ್ಲೀ ತರುವಾದುದೀಯೆಡೆಯೊಳಿನ್ನಿರವಾಗದು ಪೋಪುದುತ್ತಮಂ ೬೫

ಕಾಂತೆಯೊಡನೆ ವನಕ್ಕೆ ಹೋಗಿದ್ದನು. ಎಂದಳು, ಆಗಲೂ 'ಹೂ' ಎಂದನು, ರಾಮನ ಪತ್ನಿಯನ್ನು ರಾವಣನು ಎತ್ತಿಕೊಂಡು ಹೋದನು." ಎಂದಾಗ ಪೂರ್ವದ ವಿಚಾರವನ್ನು ನೆನೆಸಿಕೊಂಡು 'ಹೂ' ಗುಟ್ಟದೆ ಎದ್ದು ಅತಿಕೋಪದಿಂದ ಆರ್ಭಟಿಸುತ್ತಾ ತುಟಿಯನ್ನು ಕಚ್ಚಿ ಕೆಂಪಾದ ಕಣ್ಣನ್ನು ದೊಡ್ಡದಾಗಿ ತೆರೆದ ಆ ಕೃಷ್ಣನು ಮನೋಹರವಾಗಿ ಶೋಭಿಸಿದನು. ೬೨. 'ಅಮ್ಮಾ, ಜತೆಗಾರರ ಸಂಗಡ ಮಳಲಾಟವಾಡುತ್ತಾ ಕೃಷ್ಣ ಈ ದಿನ ಮಣ್ಣನ್ನು ತಿಂದನು ನೋಡು' ಎಂದು ಬಲರಾಮನು ಚಾಡಿ ಹೇಳಿದನು. ೬೩. ಯಶೋದೆಯು ಪ್ರೀತಿಯಿಂದಲೇ ಬೆತ್ತವನ್ನು ಹಿಡಿದುಕೊಂಡು 'ಹರೀ ನೀನು ಮಣ್ಣು ತಿಂದೆಯಂತೆ' ಎಂದಳು. ಕೃಷ್ಣನು- 'ತಿನ್ನಲಿಲ್ಲಮ್ಮಾ, ಅಣ್ಣ ಸುಳ್ಳು ಹೇಳಿದ್ದಾನೆ'. ಎಂದನು. ಗೋಪಿ-ಆದರೆ ಬಾಯಿ ತೆರೆದು ತೋರಿಸು'. ಎಂದಳು. ಕೃಷ್ಣನು 'ನೋಡು' ಎಂದು ಬಾಯಿ ತೆರೆದನು. ಗೋಪಿ ಅದರಲ್ಲಿ ಏಳು ಕುಲಪರ್ವತಗಳಿಂದಲೂ ಸಪ್ತದ್ವೀಪಗಳಿಂದಲೂ, ಕೂಡಿದ ಹದಿನಾಲ್ಕು ಲೋಕಗಳನ್ನೂ ಒಡನೆ ಒಟ್ಟಾಗಿ ಕಂಡು, ಆಶ್ಚರ್ಯಪಟ್ಟು, 'ಇನ್ನು ಮುಚ್ಚು ಬಾಯನ್ನು' ಎಂದು ಹೇಳಿ, ವಿಭ್ರಾಂತೆಯಾದಳು. ೬೪. ಆ ಕಮಲಾಕ್ಷನ ಮಹಿಮೆಯನ್ನು ತಿಳಿದು ತಿಳಿದೂ ಗೋಪರು ಅದನ್ನು ಅವನ ಮಾಯೆಯಿಂದ ಮರೆತುಬಿಡುತ್ತಿದ್ದರು. ಯೋಗಿಗಳನ್ನೂ ಮೋಹಗೊಳಿಸುವ ವಿಷ್ಣುಮಾಯೆ, ಗೋಪಾಲಕರನ್ನು ಆ ಕ್ಷಣದಲ್ಲೇ ಮೋಹಗೊಳಿಸದೇ? ೬೫. ಪೂತನಿ ಶಕಟರು ಬಿದ್ದುದನ್ನು ಯಮಳಾರ್ಜುನ ವೃಕ್ಷವು ಕಡಿಯದೆ ಬೇರುಸಹಿತ ಬಿದ್ದುದನ್ನು ನೆನೆಸಿಕೊಂಡ ನಂದಗೋಪನು. "ಇಲ್ಲಿ ಅದ್ಭುತಗಳನ್ನು ಕಂಡೆವು. ಬಿಸಿಲಿನ ತಾಪದಿಂದ ಇಲ್ಲಿ ಹುಲ್ಲೂ ನೀರೂ ಚಿಗುರುಗೂಡಿದ ಮರಬಳ್ಳಿಗಳೂ

[1]ನಮಗಿನ್ನಿರ್ಪೊಡಮೊಂದೆ ಸುಸ್ಥಳವತೀವಾಸೇವ್ಯಮೀ ನಮ್ಮ ಗೋ
ಸಮುದಾಯಕ್ಕೆ ಬಹುಪ್ರಕಾರತೃಣಮುಂ ಸುಚ್ಛಾಯೆಯುಂ ತನ್ನೊಳ
ಪ್ರಮಿತಂ ಕೇಳಿಸುಖಪ್ರದೇಶಮೆಸೆಗುಂ ವೃಂದಾವನಂ ಕೀರಕೇ
ಕಿಮರಾಳವ್ರಜದಾವನಂ ಪ್ರಚುರಕಾಳಿಂದೀವನಂ ಪಾವನಂ ೬೬

ವ|| ಎಂದು ನಂದಗೋಪಂ ಗೋಪವೃದ್ಧರೊಳ್ ಸಮಾಲೋಚನಂಗೆಯ್ದು ನಿಶ್ಚಯಿಸಿ ನಿಖಿಲಗೋಪಕಟಕಂ ಬೆರಸು ಕತಿಪಯಪ್ರಯಾಣಂಗಳಿಂ ಪೋಗಿ

ವೃಂದಾವನತಟದೊಳ್ ಗೋ
ವೃಂದಾವನವಾಂಛೆಯಿಂದೆ ಮನೆಗಟ್ಟಿದನಾ
ನಂದು ಕೃತಗೋಪಜನಾ
ನಂದಂ ದುರ್ಭೇದಶ[2]ಕಟರುಚಿ ರಂಜಿಪಿನಂ ೬೭

ನಯಮುಂ ತೋರ್ಕೆಯುಮಿರ್ಪುಮೋಡಿದ ನಿದಾಘಾಕ್ರಾಂತಭೂಜಾಳಿ ಶೌ
ರಿಯ ಸಂಕಲ್ಪದೆ ಪತ್ರಪುಷ್ಪಫಲಭಾರಾಕ್ರಾಂತಮಾಗಿರ್ದುವೊ
ರ್ಮೆಯೆ ವೃಂದಾವನಭೂಮಿಯೊಳ್ ನಿಜನಿಮೇಷೋನ್ಮೇಷಮಾತ್ರಂ ಜಗ
ತ್ತ್ರಯಸೃಷ್ಟಿಕ್ಷಮನಾದ ಕೃಷ್ಣನ ಮಹಾತ್ಮ್ಯಕ್ಕೇನಿದಾಶ್ಚರ್ಯಮೇ ೬೮

ಇಲ್ಲದಂತಾಗುತ್ತಿದೆ. ಈ ಎಡೆಯಲ್ಲಿ ನಾವು ಇನ್ನು ಇರಬಾರದು, ಹೊರಟು ಹೋಗುವುದು ಉತ್ತಮ. ೬೬. ಇನ್ನು ನಾವು ವಾಸವಾಗಿರುವುದಕ್ಕೆ ಬೃಂದಾವನವೊಂದೇ ಒಳ್ಳೆಯ ಸ್ಥಳ. ಅತ್ಯುತ್ತಮವಾದ ನೆಲೆ, ಅಲ್ಲಿ ನಮ್ಮ ಗೋವುಗಳಿಗೆ ಬಹಳ ಬಗೆಯ ಹುಲ್ಲೂ ಒಳ್ಳೆಯ ನೆಳಲೂ ಅಪರಿಮಿತವಾಗಿದೆ. ಅಲ್ಲಿ ಮಕ್ಕಳ ಆಟಕ್ಕೂ ಸುಖಕರವಾದ ಸ್ಥಳಗಳು ಚೆನ್ನಾಗಿವೆ. ಗಿಳಿ, ನವಿಲು, ಹಂಸಗಳ ಸಮೂಹದ ಆ ವನವು ಪ್ರಸಿದ್ಧವಾದ ಯಮುನಾ ನದಿಯ ಪವಿತ್ರವಾದ ನೀರುಳ್ಳುದ್ದಾಗಿದೆ." ವ|| ಎಂದು, ನಂದನು ಗೋಪಾಲ ವೃದ್ಧರಲ್ಲಿ ಸಮಾಲೋಚನೆಮಾಡಿ, ನಿಶ್ಚಯಿಸಿ, ಸಕಲ ಗೋಪಸಮೂಹದೊಡನೆ ಕೆಲವು ಮಜಲುಗಳಿಂದ ಪ್ರಯಾಣ ಮಾಡಿಹೋಗಿ ೬೭. ಗೋಪಾಲಕ ಜನರಿಗೆ ಆನಂದವನ್ನುಂಟು ಮಾಡುವ ಆ ನಂದಗೋಪನು ಗೋವುಗಳ ಸಮೂಹವನ್ನು ಚೆನ್ನಾಗಿ ಕಾಪಾಡುವುದಕ್ಕಾಗಿ ಬೃಂದಾವನಪ್ರದೇಶದಲ್ಲಿ ದೃಢವಾದ, ತಮ್ಮ ಬಂಡಿಗಳೂ ಸುರಕ್ಷಿತವಾಗಿ ನಿಲ್ಲಲು ಅನುಕೂಲವಾಗಿರುವ ಮನೆಗಳನ್ನು ಕಟ್ಟಿದನು. ೬೮. ಬೇಸಗೆಯ ಬಿಸಿಲ ತಾಪದಿಂದ ಬಾಡಿ ರೂಪಗೆಟ್ಟು ನೋಡಲಾಗದಂತಿದ್ದ ಬೃಂದಾವನದ ಮರಬಳ್ಳಿಗಳೆಲ್ಲವೂ ಕೃಷ್ಣನ ಸಾನ್ನಿಧ್ಯ ಸಂಕಲ್ಪಗಳಿಂದ ತಟ್ಟನೆ ಎಲೆ ಹೂಕಾಯಿ ಹಣ್ಣುಗಳಿಂದ ತುಂಬಿ ಭಾರದಿಂದ ಜೋಲುತ್ತಿದ್ದವು. ತನ್ನ ಕಣ್ಣನ್ನು ಮುಚ್ಚಿತೆರೆಯುವಷ್ಟರಲ್ಲೇ ಮೂರುಲೋಕಗಳನ್ನು ಸೃಷ್ಟಿಸುವುದರಲ್ಲಿ ಶಕ್ತವಾದ ಕೃಷ್ಣನ ಮಹತ್ವಕ್ಕೆ ಇದೊಂದು ಆಶ್ಚರ್ಯವೇ.

---

೧. ನಮಗಿಂತಪ್ಪಡಮೊಂದೆ (ಕಗ) ೨. ಕಟಕರುಚಿ (ಮೊಲಿ)

ಅಸುರಾರಿ ಕಾಕಪಕ್ಷದಿ
ನೆಸೆದಿರ್ದಂ ಕಾಕಪಕ್ಷವಿಸರದ ತಣ್ಪಿಂ
ದಸುರಗಣಮಿರ್ಕುಮೀರಣ
ವಸುಧೆಯೊಳೆಂದಮರರೊಸಗೆವಱೆ ವಾಜಿಪಿನಂ ೬೯

ಆದಿಪುರುಷಂ ಸರೋಜಭ
ವಾದಿನುತಂ ತ್ರಿಭುವನಾದಿಗುರು ಗೋಪಪದ
ಕ್ಕಾದಿಪದಮಿಂತಿದೆನೆ ತುಱು
ಗಾದಂ ಲೀಲಾಯಿತಂ ಸ್ವಯಂಪ್ರಭುಗುಚಿತಂ ೭೦

ಮಿಳಿರ್ವನ್ನಂ ಕುಡಿವಾಲಮವ್ವಳಿಸುವನ್ನಂ ದಿಟ್ಟ ಸೂಟಿಕ್ಕಿ ಕೆ
ಕ್ಕಳಿಪನ್ನಂ ಕಿವಿ ಸೋಂಕಿನಿಂ ಕೊಣಕಿಡುತ್ತುಂ ಬರ್ಪಿನಂ ಪೋಗಿ ತಂ
ದೆಳವುಲ್ಲುಂ ಮೊಳೆವುಲ್ಲುಮೆಂಬ ಪಸುರ್ವುಲ್ಲೊಳ್ ತಾಂಗಿ ಕಾಳಿಂದಿಯೊಳ್
ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ ಮಹೋತ್ಸಾಹದಿಂ ೭೧

ಶೈಶವದೊಳಬಲೆಯರ್ಗೆ ಕು
ಶೇಶಯಲೋಚನನ ಮೂರ್ತಿ ಪಡೆದುದು ರಾಗಾ
ವೇಶಮನೆಳವೆಱೆಯ ಕಳಾ
ವೇಶಮದುತ್ಪಲಿನಿಗಳ್ಗೆ ಪಡೆವವೊಲೊಲವಂ ೭೨

೬೯. ಕೃಷ್ಣನು ಕಾಕಪಕ್ಷವೆಂಬ ಕಾಗೆಯ ರಕ್ಕೆಯಾಕಾರದ ಜುಟ್ಟಿನಿಂದ ಒಪ್ಪುತ್ತಿದ್ದನು. ಅದನ್ನು ನೋಡಿದ ದೇವತೆಗಳು ಈ ಯುದ್ಧಭೂಮಿಯಲ್ಲಿ ಕೃಷ್ಣನಿಂದ ಹತರಾದ ರಾಕ್ಷಸರ ದೇಹಗಳು ಕಾಗೆಗಳ ರಕ್ಕೆಯ ನೆಳಲಿನ ತಂಪಿನಲ್ಲಿರುವಂತಾಗುವುದು ಎಂದುಕೊಂಡು ಜಯಭೇರಿಯನ್ನು ಬಾರಿಸುವಂತಾಯಿತು. ೭೦. ಆದಿಪುರುಷನೂ ಬ್ರಹ್ಮಾದಿಗಳಿಂದ ಸ್ತುತನೂ ಮೂರು ಲೋಕಕ್ಕೂ ಆದಿಗುರುವೂ ಆದ ಕೃಷ್ಣನು ತನ್ನ ಗೋಪ = ಶಬ್ದಕ್ಕೆ ೧ ಗೋವುಗಳನ್ನು ರಕ್ಷಿಸುವವನು ೨ ಸ್ವರ್ಗ, ಜಲ, ಕಿರಾಣದಿಗಳನ್ನು ರಕ್ಷಿಸುವವನು ಎಂದು ಅನೇಕಾರ್ಥಗಳಿದ್ದರೂ ಗೋವುಗಳನ್ನು ರಕ್ಷಿಸುವವನು ಎಂಬ ಹೆಸರು ಸಾರ್ಥಕವಾಗುವುದಕ್ಕೆ ಇದು ಮೂಲ ಸ್ಥಾನವೆನ್ನುವಂತೆ ಅಲ್ಲಿ ಗೋವುಗಳನ್ನು ಕಾದನು.[1] ಸ್ವಯಂಪ್ರಭುವಾದವನಿಗೆ ಲೀಲೆಯಂತಿರುವ ಇದೂ ಉಚಿತವೇ ಸರಿ. ೭೧. ಕರುಗಳು ಬಾಲವನ್ನು ಬೀಸುತ್ತಾ ಸಮಯಕ್ಕೆ ಸರಿಯಾಗಿ ಕಣ್ಣನ್ನು ಹಾಯಿಸುತ್ತಾ ಕಿವಿಯಿಂದ ಗಮನವಿಟ್ಟು ಕರೆಯನ್ನು ಕೇಳುತ್ತಾ, ನೆಗೆಯುತ್ತಾ ಮೈತಾಕುವಂತೆ ಜತೆಯಲ್ಲಿ ಬರುತ್ತಿರಲು, ಕೃಷ್ಣನು ತಾನೇ ಹೋಗಿ ಮೊಳೆಹುಲ್ಲು ಎಂಬ ಹಸಿರುಹುಲ್ಲಿನಲ್ಲಿ ತಡೆದು ನಿಲ್ಲಿಸಿ ಮೇಯಿಸಿ, ಯಮುನಾನದಿಯ ತಿಳಿನೀರನ್ನು ಕುಡಿಸಿ ಅವುಗಳನ್ನು ಅತ್ಯುತ್ಸಾಹದಿಂದ ಕಾದನು. ೭೨. ಬಾಲಚಂದ್ರನ ಕಳಾವಿಶೇಷವು ನೈದಿಲೆಬಳ್ಳಿಗಳಿಗೆ ಒಲವನ್ನುಂಟು ಮಾಡುವಂತೆ ಆ ಕಮಲನೇತ್ರನ ಬಾಲರೂಪ ಕಳೆಯು, ಅಬಲೆಯರಿಗೆ ಅನುರಾಗದ

1. ಶ್ರೀಕೃಷ್ಣನು ಆದಿಪುರುಷ, ಆದಿನುತ, ಆದಿಗುರು, ಹಾಗೆಯೇ ಆದಿಗೋಪನಾದದ್ದು ಹೀಗೆ ಎಂದು ತೋರಿಸಲು ಗೋವುಗಳನ್ನು ಕಾದನು (ರಂ).

ಅನುನಯದಿಂ ಬನಕ್ಕೊಡನೆ ಪೋಗಿ ಲತಾಗೃಹದಲ್ಲಿ ಗೋಪಿಯರ್
ವನರುಹನೇತ್ರನಂ ಪಿಡಿದು ಚುಂಬಿಸೆ ತಳ್ತಮರ್ದಪ್ಪಿ ಪೀವರ
ಸ್ತನಭರದೊಳ್ ಪೊರಳ್ಚಿ ನಿಬಿಡೋರುಯುಗಂಗಳೊಳಿಟ್ಟಮರ್ಚಿ ಸಂ
ಜನಿತ ಕಟೀತಟದ್ರವೆಯರುತ್ಪುಲಕಾಂಗಿಯರಾಗಿ ರಂಜಿಪರ್ ೭೩

ಕಾಮಾಂಗಚೇಷ್ಟೆಯಿಲ್ಲದ
ದಾಮೋದರನಂಗಸಂಗದೊಳಗಾ ಸತಿಯರ್
ಕಾಮಾಮೃತಮಂ ತಳೆದರ್
ಸೋಮಮಣಿಸ್ಥಳಿಗಳೊಸರ್ವವೊಲ್ ಶಶಿರುಚಿಯಿಂ ೭೪

ವಿಕಸಿತತಿಲಾತಸೀಕುಸು
ಮಕಾಂತಿಗಳ್ ನೀಲಹೇಮರುಚಿನಿಚಯರ್ ಗೈ
ರಿಕಲಸಿತಫಾಲಕರ್ ಬಾ
ಲಕರೆಸೆದರ್ ವತ್ಸಪಾಲಕರ್ ಬಲಕೃಷ್ಣರ್ ೭೫

ಸ್ಮಿತಕರ್ಣಿಕಾರಸುಮನ
ಶ್ರುತಿಪೂರರ್ ಚಿತ್ರಕುಸುಮಮಯವನಮಾಲರ್
ಶಿತಿಕಂಠಬರ್ಹಶೀರ್ಷರ್
ನುತವೇಣೀಸ್ಫುರಿತಚೂಡರಸಕೃತ್ಕ್ರೀಡರ್ ೭೬

ಮೈಮರೆವನ್ನುಂಟುಮಾಡಿತು. ೭೩. ಗೋಪಯುವತಿಯರು ಅನುರಾಗದಿಂದ ಆ ಕಮಲನೇತ್ರನನ್ನಾಶ್ರಯಿಸಿ, ಸಂಗಡ ವನಕ್ಕೆ ಹೋಗಿ, ಬಳ್ಳಿಮನೆಯಲ್ಲಿ ಅವನನ್ನು ಹಿಡಿದು ಕೊಂಡು, ಮುತ್ತಿಟ್ಟು, ಚೆನ್ನಾಗಿ ಗಟ್ಟಿಯಾಗಿ ಅಪ್ಪಿಕೊಂಡು, ದಪ್ಪ ಮೊಲೆಗಳ ಮೇಲೆ ಹೊರಳಿಸಿ, ಒತ್ತಾದ ದುಂಡುದೊಡೆಗಳೆರಡರ ನಡುವೆ ಸೇರಿಸಿಕೊಂಡು ಹಿಸುಕಿ, ಬೆಮರು ನೀರು ತುಂಬಿದ ನಡುವುಳ್ಳವರೂ ರೋಮಾಂಚನವನ್ನು ಪಡೆದವರೂ ಆಗಿ ರಂಜಿಸಿದರು. ೭೪. ಚಂದ್ರಕಾಂತಮಣಿಗಳು ಚಂದ್ರಕಾಂತಿಯಿಂದ ದ್ರವಿಸುವಂತೆ ಕಾಮಸಂಬಂಧವಾದ ಯಾವ ಅಂಗಚೇಷ್ಟೆಯೂ ಇಲ್ಲದ ಆ ಬಾಲಕನ ಅಂಗಸಂಗದಿಂದ ಆ ಸತಿಯರು ಕಾಮಾಮೃತವನ್ನು ಪಡೆದರು. ೭೫. ಕರುಗಳನ್ನು ಕಾಯುವ ಬಾಲಕರಾದ ಬಲರಾಮಕೃಷ್ಣರು ಅರಳಿದ ಎಳ್ಳುಹೂ, ಅಗಸೆಹೂಗಳ ಕಾಂತಿಯುಳ್ಳವರೂ ನೀಲಸುವರ್ಣ ವರ್ಣದ ಕವಚ ಉಳ್ಳವರೂ ಹೊಳೆಯುವ ಮನಶಿಲೆಪುಡಿಯ ತಿಲಕವುಳ್ಳವರೂ ಆಗಿ ಚೆನ್ನಾಗಿ ಕಾಣಿಸುತ್ತಿದ್ದರು. ೭೬. ಅವರು ಅರಳಿದ ಕಣಿಗಲೆ ಹೂವನ್ನು ಕಿವಿಗೆ ಅಲಂಕರಿಸಿ ಕೊಂಡು ವಿಚಿತ್ರವಾದ ಹೂಗಳ ಜೋಲುಮಾಲೆಯನ್ನು ಧರಿಸಿ ನವಿಲುಗರಿಯಿಂದ ಒಪ್ಪುವ ಮುಂದಲೆಯುಳ್ಳವರೂ ಹೊಗಳಿಸಿಕೊಳ್ಳುವ ಜಡೆಮುಡೆಯುಳ್ಳವರೂ ಅಡಿಗಡಿಗೆ

ಅನುಕೃತಮಯೂರಕೇಕಾ
[೧]ನಿನಾದ ಮೃದುಗಾನತಾನನ[೨]ನಿಪುಣರ್ ಮಧುರ
ಸ್ವನಪತ್ರವಾದ್ಯ[೩]ನಿರತರ್
ಮನೋಜ್ಞಗೋಪಾಲವೇಣುವಾದನಸುಭಗರ್ ೭೭

ತೋಯಜನಾಭನನಂತಸ
ಹಾಯಂ ನಲಿದಿಂತು ವತ್ಸಕುಲಮಂ ಕಾದಂ
ಕಾಯೆ ವಿರಹಿಣಿಗನಂಗಂ
ಕಾಯೆ ಮನೋರಥಿಮಹೀರುಹಂ ನಾಕಿಗಳಾ ೭೮

[೪]ಅಚ್ಛನವಪೀತ ಪಟನ
ಭೃಚ್ಛವಿ ನವಕುಸುಮಭೂಷಿತಂ ಕಮಳಾಕ್ಷಂ
ಸ್ವಚ್ಛಂದಗಾಮಿ ಯಮುನಾ
ಕಚ್ಛಂಬಿಡಿದೆಟ್ಟಿರುತ್ತುಮೊಂದವಸರದೊಳ್ ೭೯

ಘುಳುಘುಳಿಸುತ್ತೆ ಬುದ್ಬುದಚಯಂ ನೆಗೆದಪ್ಪುದಿದೇಕೆ ನೀರಜಂ
ಗಳ ರಾಜದಂತದೊಂದರುಣಕಾಂತಿ ಪೊದಟ್ಟಿಪ್ಪುದೇಕೆ ಧೂಮಮಂ
ಡಳಮೊಗೆದಪ್ಪುದೇಕಿದಱೊಳೀಹ್ರದಮದ್ಭುತಮೆಂದು ಗೋಪರಂ
ಜಳರುಹನಾಭನಂದು ಬೆಸಗೊಳ್ವುದುಮಿಂತಿದು ಕಾಳಿಯಹ್ರದಂ ೮೦

ವ॥ ಈ ಕರ್ಮಡುವಿನೊಳ್ ಕಾಳಿಯಮಹಾಸರ್ಪನಿರ್ಪಂ, ಈ ಘುಳುಘುಳುಧ್ವಾನೋದ್ಗತ ಬುದ್ಬುದಪ್ರಕಾರವಾಸ್ಫಟಾಧರನತಿಸ್ಫಾರಸ್ಫಟಾಫೂತ್ಕಾರವಾತೋದ್ಗತಬುದ್ಬುದಪ್ರಕರಂ,

ಆಟವಾಡುವರೂ ಆಗಿದ್ದರು. ೭೭. ನವಿಲುಗಳ ಕೇಕಾಧ್ವನಿಯನ್ನು ಅನುಕರಿಸುವವರೂ ಮೃದುವಾದ ಗಾನತಾನಗಳಲ್ಲಿ ನಿಪುಣರು, ಮಧುರವಾಗಿ ಶಬ್ದಮಾಡುವ ಪೀಪಿಗಳನ್ನೂದುವುದರಲ್ಲಿ ನಿರತರು, ಮನೋಹರವಾದ ಗೋಪಾಲರ ಕೊಳಲನ್ನೂದುವುದರಲ್ಲಿ ನಿಪುಣರು. ೭೯. ಮೇಘವರ್ಣನಾದ ಕೃಷ್ಣನು ಸ್ವಚ್ಛವಾದ ಪೀತಾಂಬರವನ್ನು ಧರಿಸಿ ಹೊಸ ಹೂಮಾಲೆಯಿಂದ ಅಲಂಕರಿಸಿಕೊಂಡು ತನ್ನ ಇಷ್ಟದಂತೆ ಯಮುನಾನದಿಯ ತೀರದಲ್ಲಿ ಸಂಚರಿಸುತ್ತ ಒಂದು ಕಾಲದಲ್ಲಿ ೮೦. "ಈ ಮಡು ಅತ್ಯಾಶ್ಚರ್ಯಕರವಾಗಿದೆ. ಇದರಲ್ಲಿ ಘುಳು ಘುಳು ಎಂದು ಹಲವು ಗುಳ್ಳೆಗಳು ಏಕೆ ಏಳುತ್ತಿವೆ? ಕಮಲಗಳ ಧೂಳಿನಂತೆ ಕೆಂಪಾದ ಕಾಂತಿಯೊಂದು ಏಕೆ ಹೆಚ್ಚಾಗಿದೆ? ಹೊಗೆಯ ರಾಶಿಯು ಏಕೆ ಏಳುತ್ತಿದೆ?" ಎಂದು ಕೃಷ್ಣನು ಗೋಪಾಲಕರನ್ನು ಕೇಳಿದನು. ಅವರು ಇದು ಕಾಳಿಯ ಮಡು. ವ॥ ಈ ಕಪ್ಪಾದ ಮಡುವಿನಲ್ಲಿ ಕಾಳಿಯ ಮಹಾಸರ್ಪನಿದ್ದಾನೆ. ಘುಳುಘುಳು ಶಬ್ದದಿಂದ ಮೇಲೇರುವ ಈ ಗುಳ್ಳೆಗಳ ಗುಂಪು ಅನೇಕ ಹೆಡೆಗಳನ್ನು ಧರಿಸಿರುವ ಅವನ ಬಾಯಿಯ ಫೂತ್ಕಾರದ ಗಾಳಿಯಿಂದ ಮೇಲೇಳುತ್ತಿದೆ. ಈ ಕೆಂಪು

---

೧. ನಿನದರ್ (ಖ) ೨. ನಿಯತರ್ (ಖ) ೩. ಚತುರರ್ (ಖ) ೪. ಅಚ್ಛನ್ನಪೀತ (ಖಗ)

ಈಯರುಣಕಿರಣಮಂಜರೀಪುಂಜಮಾ ಫಣೀಂದ್ರನ ಫಣಾಮಣಿಗಣಾರುಣಕಿರಣಮಂಜರೀಪುಂಜಂ, ಈ ಸಮುದ್ದಾಮಧೂಮಸ್ತೋಮಮಾಲೇಲಿಹಾನನಾಭೀಲಹಾಳಾಹಳೋದ್ದಾಮಧೂಮಸ್ತೋಮಂ, ಅದಲ್ಲದೆಯುಂ

ಆ ವಿಷಮಾಹಿಯ ವಿಷಮುಖ
ಪಾವಕನಿಂ ಪಾಱುತಿರ್ಪ ಖಗಕುಳಮುಂ ತೀ
ರಾವನಿಜ ಭೂಜಕುಳಮುಂ
ಬೇವುದು ಯೋಜನಪರಿಪ್ರಮಾಣಾಂತರದೊಳ್ ೮೧

ವ|| ಆ ಪ್ರದೇಶಮಂ ಪೊರ್ದಲಾ ಕಾಳಕೂಟಮಂ ಧರಿಸಿದ ಪುರಹರಂಗಮರಿದು; ನಾಮತ್ತ ಪೋಗಲಾಗದೆಂದು ಸಹಪಾಂಸುಕ್ರೀಡಿತರಪ್ಪ ಗೋಪಾಲಕರ್ ಪೇೞೆ

ತ್ರಿದಶಾಸುರರಂ ಸುಡುವ
ಗ್ಗದ ವಿಷಮಂ ನುಂಗಿದಾ ತ್ರಿಣೇತ್ರನುಮಾನೆಂ
ಬುದನರಿಯರ್ ಮಾನವರೆಂ
ದದರ್ಕೆ ನಗುವಂತೆ ದನುಜರಿಪು ನಸುನಗುತುಂ ೮೨

ದುಷ್ಟೋರಗನಂ ತಗುಳ್ದಿಂ
ಶಿಷ್ಟಜನಂ ಸೇವಿಪಂತು ಮಾಡುವೆನಿದನು
ತ್ಕೃಷ್ಟಮೆನೆ ದುಷ್ಟನಿಗ್ರಹ
ಶಿಷ್ಟಪ್ರತಿಪಾಲನಾರ್ಥಮೆನ್ನವತಾರಂ ೮೩

ಹೊಳಪಿನ ಬಳ್ಳಿಗಳ ಗುಂಪು ಆ ಸರ್ಪರಾಜನ ಹೆಡೆಮಣಿಗಳ ಸಮೂಹದ ಕೆಂಪಾದ ಕಿರಣಗಳ ಗುಂಪು ಹೆಚ್ಚಾಗಿ ಹೊರಡುತ್ತಿರುವ ಈ ಹೊಗೆಯ ಸಾಲು ಆ ಸರ್ಪನ ಭಯಂಕರವಾದ ಹಾಲಾಹಲ ವಿಷದ ಹೊಗೆಯ ದೊಡ್ಡ ಗುಂಪು. ಅದೂ ಅಲ್ಲದೆ ೮೧. ಆ ಉಗ್ರಸರ್ಪದ ವಿಷಾಗ್ನಿಯಿಂದ ಯೋಜನ ದೂರದೊಳಗಿರುವ ಮರಗಳೂ ಸುಟ್ಟುಹೋಗುವುವು. ಹಾರುವ ಹಕ್ಕಿಗಳ ಗುಂಪು ಬೆಂದು ಬೀಳುವುವು. ವ|| "ಆ ಪ್ರದೇಶಕ್ಕೆ ಹೋಗಲು ಕಾಳಕೂಟವನ್ನು ಧರಿಸಿದ ಈಶ್ವರನಿಗೂ ಅಸಾಧ್ಯ. ನಾವು ಆ ಕಡೆಗೆ ಹೋಗಬಾರದು." ಎಂದು ಧೂಳಾಟದ ಜೊತೆಗಾರ ಗೋಪಾಲಕರು ಹೇಳಿ ೮೨. 'ದೇವಾಸುರರನ್ನೂ ಸುಡುತ್ತಿದ್ದ ಕ್ರೂರವಿಷವನ್ನು ನುಂಗಿದ ಆ ತ್ರಿಣೇತ್ರನೂ ನಾನೇ ಎಂಬುದನ್ನು ಮನುಜರು ಅರಿಯರು' ಎಂದು : ನಗುವಂತೆ ಶ್ರೀಕೃಷ್ಣನು ಅವರ ಮಾತಿಗೆ ನಕ್ಕನು. ೮೩. "ಆ ದುಷ್ಟೋರಗವನ್ನು ಆಕ್ರಮಿಸುವೆನು. ಈ ಮಡುವನ್ನು ಶಿಷ್ಟ ಜನರು ಸೇವಿಸುವಂತೆ ಉತ್ಕೃಷ್ಟವನ್ನಾಗಿ ಮಾಡುವೆನು. ದುಷ್ಟನಿಗ್ರಹ, ಶಿಷ್ಟ ಪ್ರತಿಪಾಲನಾರ್ಥವಾಗಿಯೇ ನನ್ನ ಅವತಾರ." ಎಂದು ಮನಸ್ಸಿನಲ್ಲಿ ಪ್ರತಿಜ್ಞೆ ಮಾಡಿ, ನೋಡುತ್ತೇನೆಂದು ಮಡುವಿನ ಸಮೀಪಕ್ಕೆ ಬಂದು ನೋಡುವಾಗ

ವ।। ಎಂದು ಮನದೊಳ್ ಕೃತಪ್ರತಿಜ್ಞನಾಗಿ ನೋಡುವೆನೆಂದು ತತ್ಸಮೀಪಕ್ಕೆ ಬಂದು ನೋಟ್ಪಲ್ಲಿ

ವದನೋಚ್ಛ್ವಾಸದಿನುಣ್ಮುತಿರ್ಪ ಯಮುನೋರ್ಮಿಶ್ರೇಣಿಯಂ ತನ್ನ ಪ
ಕ್ಕದ ಸೇವಾಗತಭೋಗಿಭಂಗುರವಪುಃಕಾಂಡಂಗಳಿಂ ಮಿಕ್ಕು ನಿ
ಲ್ಲದೆ ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಂ ಭೋಗರ
ತ್ನದ ಚೆಲ್ವಿಂ ದ್ಯುತಿಮಾಲಿಯಂ ಮಸಕದಿಂದಂಭೋಳಿಯಂ ಕಾಳಿಯಂ ೮೪

ವ।। ಆ ಕುಂಭೀನಸನ ಸಂರಂಭಮಂ ಕಂಡುಮಿರ್ಕೆಲನಂ ನೋಡೆ

ಅಮರಪತಿಯೊಡನೆ ತಳ್ತಿಱಿ
ದಮೃತವನುಯ್ವಲ್ಲಿ ಗರುಡಹಸ್ತದಿನಂದೊಂ
ದಮೃತದ ಪನಿ ತನ್ನೊಳ್ ಪನಿ
ತು ಮಹೀಜಂ ವಿಷದೆ ಬೇಯದಿರ್ದುದು ತಡಿಯೊಳ್ ೮೫

ಆಗಸದಿಂ ವಧ್ಯಶಿಲಾ
ನಾಗಂಗೆ ಗರುತ್ಮನೆಱಗುವಂತಾ ಮರದಿಂ
ನಾಗಾರಿಕೇತು ಕಾಳಿಯ
ನಾಗಂಗೆಱಗಿದನಮರ್ತ್ಯರೀಕ್ಷಿಸೆ ನಭದೊಳ್ ೮೬

ಸಿಡಿವ ಪೆಡೆವಣಿಗಳಂ ನೂ
ರ್ಮಡಿಸುತ್ತುಂ ನೆಗೆವ ತದ್ವಿಷಾಗ್ನಿಯ ಕಿಡಿಯಿಂ
ದೊಡನೆಯ ಗೋಪರ್ ತಂತ
ಮ್ಮೊಡಲೊಳ್ ಪುಗುಳೇಳೆ ಪೋಗಿ ಪುಯ್ಯಲ್ಚುವುದುಂ ೮೭

೮೪. ಮುಖದ ಉಚ್ಛ್ವಾಸದಿಂದ ಮೇಲೇರುತ್ತಿರುವ ಯಮುನೆಯ ಅಲೆಗಳ ಸಾಲನ್ನು ತನ್ನ ಸೇವೆಗಾಗಿ ಬಂದು ಪಕ್ಕದಲ್ಲಿರುವ ಸರ್ಪಗಳ ಡೊಂಕು ಡೊಂಕಾದ ದೇಹದಂಡಗಳಿಂದ ಅತಿಕ್ರಮಿಸಿದುದಲ್ಲದೆ ವಿಷಾಗ್ನಿಯಿಂದ ಪ್ರಳಯಕಾಲದ ಉರಿಯನ್ನೂ, ಹೆಡೆಯ ರತ್ನದ ಚೆಲುವಿನಿಂದ ಸೂರ್ಯನನ್ನೂ, ಕಾಠಿಣ್ಯದಿಂದ ವಜ್ರಾಯುಧವನ್ನು ಅಥವಾ ಸಿಡಿಲನ್ನೂ ಆ ಕಾಳೀಯನು ಮೀರಿದ್ದನು. ವ।। ಆ ಸರ್ಪದ ಸಂಭ್ರಮವನ್ನು ಕಂಡು ಕೃಷ್ಣನು ಎರಡುಪಕ್ಕವನ್ನೂ ನೋಡಿದನು. ೮೫. ಗರುಡನು ದೇವೇಂದ್ರನೊಡನೆ ಯುದ್ಧಮಾಡಿ ಅಮೃತವನ್ನು ತರುವಾಗ ಅವನ ಕೈಯಿಂದ ಅಮೃತದ ಒಂದು ಹನಿ ತನ್ನ ಮೇಲೆ ಬಿದ್ದಿದ್ದುದರಿಂದ ಯಮುನೆಯ ದಡದಲ್ಲಿದ್ದ ಒಂದು ಮರವು ವಿಷದಿಂದ ಸುಟ್ಟುಹೋಗದೆ ಉಳಿದಿದ್ದಿತು. ೮೬. ವಧ್ಯಶಿಲೆಯಲ್ಲಿದ್ದ ನಾಗನ ಮೇಲೆ ಆಕಾಶದಿಂದ ಗರುಡನು ಎರಗುವಂತೆ ಗರುಡಧ್ವಜ (ಕೃಷ್ಣ)ನು ಆ ಮರದ ಮೇಲಿನಿಂದ ಕಾಳಿಯ ನಾಗನ ಮೇಲೆ ಎರಗಿದನು. ದೇವತೆಗಳು ಆಕಾಶದಲ್ಲಿ ನಿಂತು ನೋಡುತ್ತಿದ್ದರು. ೮೭. ಮೇಲೆಕಾಣಿಸುವ ಹೆಡೆಯ ಮಣಿಗಳ ಕಾಂತಿಯನ್ನು ನೂರರಷ್ಟಾಗಿ ಮಾಡುತ್ತ ಮೇಲೆ ಹಾರುವ ಆ ವಿಷಾಗ್ನಿಯ ಕಿಡಿಯಿಂದ ಕೃಷ್ಣನ ಸಂಗಡ ಬಂದಿದ್ದ ಗೋಪರ ಮೈಯ್ಯಲ್ಲಿ ಗುಳ್ಳೆಗಳೆದ್ದವು. ಅವರು

ಶಿಶಿರಪಯಃಕಣವೆರಸಿದ
ಕುಶೇಶಯಚ್ಛದಮನಕ್ಷಿಗಳ್ ಬಾಷ್ಪಜಲ
ಪ್ರಶಮಿತರುಚಿಗಳ್ ಪೋಲ್ತಿರೆ
ಯಶೋದೆಯುಂ ನಂದಗೋಪನುಂ ನಡೆತಂದರ್ ೮೮

ಉದಯಿಪ ವಿವೇಕಲಕ್ಷ್ಮಿಯ
ನಿದಿರ್ಗೊಳ್ವರ್ಘ್ಯಾಂಬುವೆನಿಸಿ ಖೇದಾಶ್ರುಜಲಂ
ಮೊದಲೊಳ್ ಸೂಸೆ ಬಳಿಕ್ಕಂ
ವಿದಿತಾಚ್ಯುತಮಹಿಮನಾಗಿ ಬಲನೆಟ್ಟಿಂದಂ ೮೯

ನಸುಜೋಲ್ದುಳ್ಪುಡೆಯುಂ ತೆಱಂಬೊಳೆದು ಪಾಱುತ್ತಿರ್ಪ ಸಂವ್ಯಾನಮುಂ
ನೊಸಲೊಳ್ ತಳ್ತ ಕುರುಳ್ಗಳುಂ ತುಱುಗಿ ನೀರೇಱಿರ್ದಲರ್ಗಣ್ಗಳುಂ
ಬಿಸುಸುಯ್ವೆಂಕೆಯಿನಿರ್ಪುಗುಂದಿದಧರಂ ಬಿಟ್ಟಿರ್ದ ಧಮ್ಮಿಲ್ಲಮುಂ
ಪೊಸತೊಂದೊಪ್ಪಮನೀಯೆ ವಿಹ್ವಳತೆಯಿಂ ಬಂದತ್ತು ಗೋಪೀಜನಂ ೯೦

ದಾರಕಮಲ್ಲನೆಲ್ಲಿದನಮಾನುಷಖೇಳನದೆಲ್ಲಿದಂ ವ್ರಜಾಂ
ಭೋರುಹಮಿತ್ರನೆಲ್ಲಿದನನಂತಸಹಾಯನದೆಲ್ಲಿದಂ ಕನ
ನ್ನೀರದಕಾಂತಿಯೆಲ್ಲಿದನುದಂಚಿತಚಂದ್ರಕಳಾಪನೆಲ್ಲಿದಂ
ಚಾರುಸುವರ್ಣವರ್ಣಪಟನೆಲ್ಲಿದನೆಲ್ಲಿದನಬ್ಜಲೋಚನಂ ೯೧

ವ॥ [1]ಎನುತ್ತೆಯ್ದೆವಂದು ನೋೞ್ಪಲ್ಲಿ

ಓಡಿಹೋಗಿ ತಮ್ಮ ಕಷ್ಟವನ್ನು ಹೇಳಿಕೊಂಡು ಕೂಗಾಡಿದರು. ೮೮. ಯಶೋದಾ ನಂದಗೋಪರು, ಒಡನೆಯೇ ಬಂದ ಕಣ್ಣೀರಿನಿಂದ ಕಾಂತಿಯನ್ನು ಕಳೆದುಕೊಂಡ ತಮ್ಮ ಕಣ್ಣುಗಳು ಹಿಮಜಲ ಕಣಗಳು ತುಂಬಿದ ತಾವರೆಯಂತಾಗಿರಲು, ಅಲ್ಲಿಗೆ ಬಂದರು. ೮೯. ಬಲರಾಮನಿಗೆ, ಉದಯಿಸುವ ವಿವೇಕಲಕ್ಷ್ಮಿಯನ್ನು ಇದಿರುಗೊಳ್ಳುವಾಗಿನ, ಅರ್ಘ್ಯಜಲವೆನ್ನುವಂತೆ ಮೊದಲು ದುಃಖದ ಕಣ್ಣೀರು ಬಂದಿತು. ಆದರೆ ಅಚ್ಯುತನ ಮಹಿಮೆಯನ್ನು ನೆನೆಸಿಕೊಂಡ ಅವನು ಧೈರ್ಯದಿಂದ ಮಡುವಿನ ಹತ್ತಿರ ಬಂದನು. ೯೦. ಚಿಂತೆಗೊಳಗಾದ ಗೋಪಿಯರು ಮಡುವಿನೆಡೆಗೆ ಓಡಿಬಂದರು. ಬರುವಾಗ ಅವರ ಕೆಳ ಉಳ್ಳುಡೆ ಸ್ವಲ್ಪವಾಗಿ ಜೋಲಾಡುತ್ತಿದ್ದಿತು. ಮೇಲು ಸೆರಗು ಚೆನ್ನಾಗಿ ಹಾರುತ್ತ ಹೊಳೆಯುತ್ತಿದ್ದಿತು. ಮುಂಗುರುಳು ಹಣೆಯ ಮೇಲೆ ಹರಡಿಕೊಂಡಿದ್ದಿತು. ತಾವರೆಗಣ್ಣುಗಳಲ್ಲಿ ನೀರು ತುಂಬಿದ್ದಿತು. ನಿಟ್ಟುಸಿರಿನ ಬೆಂಕಿಯಿಂದ ತುಟಿ ರೂಪಗೆಟ್ಟಿದ್ದಿತು. ಆದರೂ ಅದೂ ಒಂದು ಹೊಸಬಗೆಯ ಸೊಗಸನ್ನೇ ಬೀರುತ್ತಿದ್ದಿತು. ೯೧. ಅವರು ಮಕ್ಕಳಮಲ್ಲನೆಲ್ಲಿರುವನು; ಮನುಜರಿಗಸಾಧ್ಯವಾದ ಆಟವನ್ನಾಡುವವನು ಎಲ್ಲಿ? ಗೋಕುಲ ಕಮಲ ಮಿತ್ರನೆಲ್ಲಿ? ಅನಂತಸಹಾಯಕನೆಲ್ಲಿ? ಮೇಘಕಾಂತಿಯಿಂದ ಹೊಳೆಯುವವನೆಲ್ಲಿ? ಹೊಳೆಯುವ ನವಿಲುಗರಿಯಿಂದಲಂಕೃತನೆಲ್ಲಿ? ಮನೋಹರವಾದ ಪೀತಾಂಬರವನ್ನು ಧರಿಸಿದವನೆಲ್ಲಿ? ಕಮಲನೇತ್ರನೆಲ್ಲಿರುವನು? ವ॥ ಎನ್ನುತ್ತ ಸಮೀಪಕ್ಕೆ ಬಂದು ನೋಡುವಾಗ

---

೧. ಎನುತ್ತೈತಂದು (ಖ)

ಘನಗರಳಂ ವಿಜೃಂಭಿಸೆ ಫಣಾಮಣಿ ರಂಜಿಸೆ ಘೋರಫೂತ್ಕೃತ
ಧ್ವನಿ ಮಿಗೆ ಪಾವು ಸುತ್ತಿರಲನಾಹತಲೀಲೆಯೊಳಂದು ಬಾಳಚಂ
ದನಕುಜದಂತೆ ಕೃಷ್ಣನೆಸೆದಿರ್ದೊಡಮಾದುದಪಾಯಮೆಂದು ವೇ
ದನೆ ಪಿರಿದಾಯ್ತು ನಂದನ ಯಶೋದೆಯ ಗೋಪಿಯರಂತರಂಗದೊಳ್ ೯೨

ಭವದೀಯಮನೋಹರಬಾ
ಲ್ಯವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂ
ತವ[1]ನಿಂತೀವಿಷದಿಂ ತೀ
ವುವುದೇ ಶ್ರೀವತ್ಸವತ್ಸ ವತ್ಸಸವತ್ಸಾ ೯೩

ಪಿರಿದು ಮದೀಯಜನ್ಮಾಂ
ತರಪುಣ್ಯದಿನೆಮಗೆ ನಿನ್ನ ದೊರೆಯ ತನೂಜಂ
ದೊರೆಕೊಂಡನೆಂಬ ಸುಖಸಾ
ಗರಮಂ ದುಃಖಾನಳಾರ್ಚಿ ಪೀರ್ದಪುದಲ್ತೇ ೯೪

ಹರಿಯಿಲ್ಲದ ಪವನಾಧ್ವಂ
ಹರಿಯಿಲ್ಲದ ಲೋಕಪಾಲಪರಿಷದ್ವಲಯಂ
ಹರಿಯಿಲ್ಲದ ಕಾಂತಾರಂ
ಹರಿ ನೀನಿಲ್ಲದ ಮದೀಯಗೋಕುಲಮಫಲಂ ೯೫

ವ॥ ಎಂದು ನಂದಗೋಪನುಂ ಯಶೋದೆಯುಮಳವಿಗಟೆದಟಲನೊಳಕೊಂಡು ಚಂಡಾಹಿತುಂಡಖಂಡಿತಪುಂಡರೀಕಾಕ್ಷವದನವಿನ್ಯಸ್ತ ತರಳತಾರ[2]ನೇತ್ರರುಂ ನಿಷ್ಪಂಜ್ಞನಿಃಸಂಜ್ಞ ಗಾತ್ರರುಮಾಗೆ ತದನಂತರಂ

೯೨. ಕ್ರೂರವಾದ ವಿಷದ ಜೋರೂ ಹೆಡೆಮಣಿಯ ಹೊಳಪೂ, ಘೋರವಾದ ಫೂತ್ಕಾರದ ಶಬ್ದವೂ, ಹೆಚ್ಚುತ್ತಲೇ ಇದ್ದಿತು. ಹಾವು ಸುತ್ತಿಕೊಂಡಿರುವ ಕೃಷ್ಣನು ತಡೆಯಿಲ್ಲದೆ ಲೀಲೆಯಿಂದ ಎಳೆಯ ಗಂಧದ ಮರದಂತೆ ಚೆನ್ನಾಗಿಯೇ ಕಾಣಿಸುತ್ತಿದ್ದನು. ಆದರೂ ಅಪಾಯವಾಯಿತೆಂದು ನಂದ ಯಶೋದಾ ಗೋಪಿಯರಿಗೆ ಮನೋವೇದನೆಯು ಹೆಚ್ಚಾಯಿತು. ೯೩. ಶ್ರೀವತ್ಸಲಾಂಛನಾ ಕರುಗಳೊಡನಾಡೀ! ಮಗೂ! ನಿನ್ನ ಮನೋಹರವಾದ ಬಾಲಲೀಲಾಮೃತದಿಂದ ಪೂರ್ಣವಾಗಿದ್ದ ನಮ್ಮನ್ನು ಹೀಗೆ ಈ ವಿಷದಿಂದ ತುಂಬಬಹುದೆ! ೯೪. ನಮ್ಮ ಜನ್ಮಾಂತರ ಪುಣ್ಯಾತಿಶಯದಿಂದ ನಮಗೆ ನಿನ್ನಂತಹ ಮಗನು ದೊರೆತನು ಎಂಬ ಸುಖಸಾಗರವನ್ನು ದುಃಖಾಗ್ನಿಜ್ವಾಲೆಯು ಹೀರುವುದಲ್ಲವೆ? ೯೫. ಹರಿ(ರವಿ)ಯಿಲ್ಲದ ಆಕಾಶವೂ, ಹರಿ ಇಂದ್ರನಿಲ್ಲದ ಲೋಕಪಾಲಪರಿಷನ್ಮಂಡಲವೂ, ಹರಿ (ಗಿಳಿ, ಸಿಂಹ)ಯಿಲ್ಲದ ಮಹಾವನವೂ ಹರೀ ಕೃಷ್ಣಾ ನೀನಿಲ್ಲದ ಗೋಕುಲವೂ ನಿಷ್ಫಲ. ವ॥ ಎಂದು ನಂದಗೋಪನೂ ಯಶೋದೆಯೂ ಮಿತಿಯಿಲ್ಲದ ಸಂಕಟವನ್ನೊಳಗೊಂಡು ಕ್ರೂರ ಸರ್ಪನಿಂದಾಕ್ರಮಿಸಲ್ಪಟ್ಟ, ಕೃಷ್ಣನ ಮುಖದಲ್ಲೇ ನೆಟ್ಟ ದೃಷ್ಟಿಯುಳ್ಳವರೂ, ಮಾತೂ ಅಂಗನೇತ್ರಗಳ

೧. ನಾಶೀವಿಷದಿಂ (ಕಖಗ) ೨. ಅದಜೆಂದಂ ನೀಂ (ಕಖಗ)

ರಮಣೀಯಸ್ಥಾನದೊಳ್ ನಿನ್ನೊಡನೆ ನಲಿದು ಸರ್ವೋಲ್ಬಣಸ್ಥಾನದೊಳ್ ಮಾ
ಣ್ಬೆಮೆ [1]ನೀನೆಲ್ಲಿರ್ಪೆಯಿರ್ದಲ್ಲಿಯೆ ಸುಖವೆಮಗಾ ಕಾಮಬಾಣಾಗ್ನಿಯಿಂ ಸ
ರ್ಪಮುಖಕ್ಷ್ವೇಡಾಗ್ನಿಯೇಂ ದುಸ್ಸಹಮೆ ಸುಭಗ ನಿನ್ನಲ್ಲಿಗೀಬರ್ಪೆವೆಂದ
ಶ್ರಮದಿಂ ಗೋಪೀಜನಂ ಕರ್ಮಡುವುಗೆ ಪುಗುವೇಡೆಂದು ಸಂತೈಸಿ ರಾಮಂ ೯೬

ಜನಕಂ ರಕ್ಷಕನಂತಕ
ನನಾದಿಮಧ್ಯಾಂತ ನಿನಗದಾವನಜಂಗಂ
ಜನಕಂ ರಕ್ಷಕನಂತಕ
ನೆನಿಸಿದೆ ಕೇಳ್ ಪೊಗಳ್ವರಳವೆ ನಿನ್ನ ಮಹತ್ವಂ ೯೭

ಪರನಪರಂ ಭವನಭವಂ
ಚರನಚರಂ ಸುಗುಣನಗುಣನೇಕನನೇಕಂ
ಕ್ಷರನಕ್ಷರನೆನಿಪಗಣಿತ
ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೇ ೯೮

ನೆನೆ ನಿನ್ನ ಮಹಿಮೆಯಂ ನೀ
ನೆನಿತನಿದಂ ಕೊಂಡುಕೊನೆವೆ ನೀರ್ವಾವನಿದ
ರ್ಕೆನಿತೇಕೆ ಮಾನುಷತ್ವಮ
ನೆನಸುಂ ನಟಯಿಸುವೆ ಕೃಷ್ಣ ಪೊಱಮಡು ಮಡುವಿಂ ೯೯

ವ|| ಎನಲೊಡಂ

ಸಂಜ್ಞೆಯೂ ಇಲ್ಲದವರೂ ಆಗಿ ಮೂರ್ಛಿತರೂ ಆದರು. ಅದಾದ ಮೇಲೆ ೯೬. ಗೋಪಿಯರು ರಮಣೀಯವಾದೆಡೆಗಳಲ್ಲಿ ನಿನ್ನೊಡನೆ ನಲಿದು, ಸರ್ಪದಿಂದ ಕ್ರೂರವಾದೆಡೆಯಲ್ಲಿ ಬಿಡುವೆವೇ? ನೀನೆಲ್ಲಿರುವೆಯೋ ಅಲ್ಲೇ ನಮಗೆ ಸುಖ, ಆ ಕಾಮಬಾಣಾಗ್ನಿಗಿಂತಲೂ ಸರ್ಪಮುಖ ವಿಷಾಗ್ನಿಯು ಸಹಿಸಲು ಅಧಿಕ ಕಷ್ಟವಾದುದೇ? ಸುಂದರನೇ, ಇದೋ, ನೀನೆಲ್ಲಿರುವೆಯೋ ಅಲ್ಲಿಗೆ ಬರುವೆವು" ಎಂದು ಶ್ರಮವಿಲ್ಲದೇ ಆ ಕರಿಯ ಮಡುವನ್ನು ಹೊಗಲುದ್ಯುಕ್ತರಾದರು. ಬಲರಾಮ 'ಹೋಗಬೇಡಿ' ಎಂದು ಹೇಳಿ ಸಂತೈಸಿದನು. ೯೭. ಬಲರಾಮನು-ಆದಿಮಧ್ಯಾಂತ ರಹಿತನೇ! ಕೇಳು. ನಿನಗೆ ಜನಕನೂ ರಕ್ಷಕನೂ ಅಂತಕನೂ ಯಾರಿರುವನು; ನೀನು ಬ್ರಹ್ಮನಿಗೂ ಜನಕನೂ ರಕ್ಷಕನೂ ಅಂತಕನೂ ಆಗಿರುವೆ. ನಿನ್ನ ಮಹತ್ವವನ್ನು ಹೇಳಲು ಯಾರಿಗೆ ತಾನೆ ಸಾಧ್ಯ! ೯೮. ಪರ-ಅಪರ, ಭವ-ಅಭವ, ಚರ-ಅಚರ, ಸಗುಣ-ನಿಗುಣ, ಏಕ-ಅನೇಕ, ಕ್ಷರ-ಅಕ್ಷರ ಎಂಬ ಅಗಣಿತ ವಿರುದ್ಧಗುಣವುಳ್ಳವನೇ ನಿನ್ನ ಸತ್ಯವು ಸಾಮಾನ್ಯವಾದುದೇ? ೯೯. ಕೃಷ್ಣಾ ಈ ನೀರುಹಾವನ್ನು ಎಷ್ಟು ಉಬ್ಬಿಸುತ್ತಿಯೆ? ನಿನ್ನ ಮಹಿಮೆಯನ್ನು ನೆನೆಸಿಕೋ ಇದಕ್ಕೆ ಇಷ್ಟುಮಟ್ಟಿಗೆ ಮನುಷ್ಯತ್ವವನ್ನು ಏಕೆ ಅತಿಯಾಗಿ ನಟಿಸುತ್ತೀಯೆ? ಮಡುವಿನಿಂದ ಹೊರಟು ಬಾ." ವ|| ಎನ್ನಲು

---

೧. ನೀನೆಲ್ಲಿರ್ದೆ (ಕಖಗ)

ತಿಳಿಯೆ ವಿನೋದನಿದ್ರೆ ಹರಿ ಮೆಲ್ಲನೆ ಮೆಯ್ಮುಱಿವಂತೆ ಗೆಯ್ಕೆ ತ
ನ್ನಳವಟೆದೆಯ್ದೆ ಸುತ್ತಿಟಿದ ಪಾವಿನ ಪೆರ್ವಡೆಯಂ ಪದಾಂಬುಜಂ
ಗಳ ಕೆಟಗಿಕ್ಕಿ ಮೆಟ್ಟಿ ಕರದಿಂದೆ ತದೀಯಶರೀರಕಾಂಡಮಂ
ಜಳರುಹಕಾಂಡಮಂ ಪಿಡಿವವೋಲ್ ಪಿಡಿದಾಡಿದನಂದು ಲೀಲೆಯಿಂ ೧೦೦

ಕಾಳಿಯನಂ ಮರ್ದಿಪ ವನ
ಮಾಳಿಗೆ ಸುಗಿದೀಗಳುಗುಟುತಿರ್ದನೊ ರಾಹು
ವ್ಯಾಳಂ ಮುನ್ನುಂಡಮರ್ದಂ
ಪೇಟಿನಿಸಿದುದರಲ ಸುರಿವ ಬಲ್ಸರಿ ಸುರರಾ ೧೦೧

ವ॥ ಆ ಪ್ರಸ್ತಾವದೊಳ್

ಮೀಱುವ ಸುಯ್ಯೆಲರ್ ಕೊಱಗಿ ತೋಱುವ ವಕ್ತ್ರಪ್ರಯೋಜವಶ್ರುವಂ
ಪೇಱುವ ಕಣ್ಮಲರ್ ಪೊಳೆದು ಪಾಱುವ ಮೇಲುದು ಮಂಜುಘೋಷಮಂ
ಬೀಱುವ ಸಿಂಜನೀವಳಯಕಾಂಚಿಗಳೆಂಬಿವಱಿಂದದೊಂದು ಚೆ
ಲ್ವೇಱಿರೆ ಭೋಗಿಭಾಮಿನಿಯರಾ ಮಡುವಿಂ ಪೊಱಮಟ್ಟರಟ್ತೆಯಿಂ ೧೦೨

ಬಂದಚ್ಯುತನಭಿಮುಖದೊಳ್
ನಿಂದು ಕೃತಾಂಜಲಿಗಳಾಗಿ ಕಾಳಿಯಸತಿಯರ್
ಸಂದ ಪತಿಭಕ್ತಿಗುಣದಿಂ
ದಂದುದಯಿಸಿದಮಲಬೋಧದಿಂದಿಂತೆಂದರ್ ೧೦೩

೧೦೦ ವಿನೋದದ ನಿದ್ದೆಯಿಂದ ಎಚ್ಚೆತ್ತ ಕೃಷ್ಣನು ಮೆಲ್ಲಗೆ ಮೈಮುರಿಯುವಂತೆ ಮಾಡಿದನು. ಶಕ್ತಿಗುಂದಿದ ಹಾವು ಸುತ್ತಿಕೊಂಡಿದ್ದುದನ್ನು ಪೂರ್ತಿಯಾಗಿ ಬಿಟ್ಟಿತು. ಆಗ ಅದರ ಹಿರಿಯ ಹೆಡೆಯನ್ನು ತನ್ನ ಪಾದಕಮಲದ ಕೆಳಗಿಟ್ಟುಕೊಂಡು ಮೆಟ್ಟಿ, ಕಯ್ಯಿಂದ ಕೋಲಿನಂತಿರುವ ಅದರ ಮೈಯ್ಯನ್ನು ಕಮಲದ ದಂಟನ್ನು ಹಿಡಿಯುವಂತೆ ಹಿಡಿದುಕೊಂಡು ವಿನೋದದಿಂದ ಕುಣಿದಾಡಿದನು. ೧೦೧. ಕಾಳಿಯ ಸರ್ಪವನ್ನು ಮರ್ದಿಸಿದ ಕೃಷ್ಣನಿಗೆ ಅಂಜಿ ರಾಹು ಸರ್ಪನು ತಾನು ಹಿಂದೆ ಕುಡಿದಿದ್ದ ಅಮೃತವನ್ನು ಈಗ ಉಗುಳುತ್ತಿರುವನೋ ಎಂಬಂತೆ ದೇವತೆಗಳು ಹೂವಿನ ಮಳೆಯನ್ನು ಹೆಚ್ಚಾಗಿ ಸುರಿಸಿದರು. ವ॥ ಆ ಸಂದರ್ಭದಲ್ಲಿ- ೧೦೨. ಬಾಡಿದ ಮುಖಕಮಲವೂ ನಿಟ್ಟುಸಿರೂ ನೀರು ತುಂಬಿದ ಕಣ್ಣೂ ಹೊಳೆಯುತ್ತಾ ಹಾರುತ್ತಿರುವ ಸೆರಗೂ ಮನೋಹರವಾಗಿ ಶಬ್ದಮಾಡುತ್ತಿರುವ ಕೈಬಳೆ ಕಾಲ್ಬಳೆ ವಡ್ಯಾಣಗಳೂ ಅದೊಂದು ಬಗೆಯ ಚೆಲುವನ್ನು ಹೆಚ್ಚಿಸುತ್ತಿರಲು ನಾಗವನಿತೆಯರು ಆ ಮಡುವಿನಿಂದ ಹೊರಟರು. ೧೦೩. ಬಂದ ಕಾಳಿಯ ಸರ್ಪದ ಪತ್ನಿಯರು ಕೃಷ್ಣನೆದುರಿನಲ್ಲಿ ಕೈಮುಗಿದುಕೊಂಡು ನಿಂತು ತಮ್ಮ ಪತಿಭಕ್ತಿ ಗುಣದಿಂದ ಉಂಟಾದ ನಿರ್ಮಲಜ್ಞಾನದಿಂದ

ಅನಿಮೇಷರಕ್ಷಣಾರ್ಥಂ
ನಿನಗೆ ತನುಗ್ರಹಣವಾ[1]ದುದಱಿಂದಿನ್ನಾ
ಮುನಿಸಂತತಿಗಮಚಿಂತ್ಯವ
ದೆನಿಪ ಪರಂಜ್ಯೋತಿ ನೀಂ ಕುಶೇಶಯ ನಯನಾ ೧೦೪

ಉದಯಸ್ಥಿತಿಸಂಹಾರ
ಪ್ರದಂ ಜಗಕ್ಕೆನಿಪ ಕಮಲಭವಹರಿಹರನಾ
ಮದ [2]ಪುರುಷಾಕಾರತ್ರಯ
ಮದು ನಿನ್ನ ವಿಡಂಬಮಲ್ತೆ ಪರಮಜ್ಯೋತೀ ೧೦೫

ಕ್ಷಮರಾರಿತರರ್ ನಿಜಪದ
ಮುಮನಱಿಯಲ್ ಪದ್ಮಭವನ ಮತಿಗಂ ಹರಿ ನಿ
ನ್ನ ಮಹತ್ವಂ ಪ್ರಥಿತಮಗಾ
ಧಮಗಾಧಮುಮುನ್ನತೋನ್ನತೋನ್ನತಮಲ್ತೇ ೧೦೬

ವಿವಿಧಬ್ರಹ್ಮಾಂಡಂ [3][ಮಾ
ಧವ ನಿನ್ನವಕಾಶಮದಱ] ಸೂಕ್ಷ್ಮತರಾಂಶಾಂ
ಶವೆನಲ್ ನಿಜಸ್ವರೂಪದ
ಪವಣುಮನಾರ್ ಬಲ್ಲರೆಂತದಂ ಬಣ್ಣಿಸುವರ್ ೧೦೭

ನಾಕಿಗಳಿಂದ್ರಾದ್ಯರ್ ಪರ
ಮಾಕೃತಿ ದುರ್ಲಕ್ಷ್ಯವೆಂದೆನಲ್ ನಿನ್ನವತಾ
ರಾಕೃತಿಯನರ್ಚಿಪರ್ ಮಹಿ
ಮಾಕರ ಪರಮಾರ್ಥವಾಗೆ ಲಕ್ಷ್ಮ್ಯಂ ನಿನ್ನಾ ೧೦೮

ಹೀಗೆಂದರು- ೧೦೪. "ಕಮಲನೇತ್ರಾ! ದೇವತೆಗಳ ರಕ್ಷಣೆಗಾಗಿಯೇ ನೀನು ಹುಟ್ಟಿರುವುದರಿಂದ ಆ ಋಷಿಸಮೂಹಕ್ಕೂ ಅಚಿಂತ್ಯವಾದ ಪರಂಜ್ಯೋತಿಯು ನೀನೇ! ೧೦೫. ಪರಂಜ್ಯೋತೀ! ಜಗತ್ತಿನ ಹುಟ್ಟು ಉಳಿವು ಅಳಿವುಗಳಿಗೆ ಕಾರಣವೆನ್ನಿಸಿಕೊಂಡ ಬ್ರಹ್ಮವಿಷ್ಣುಮಹೇಶ್ವರರೆಂಬ ಹೆಸರಿನ ಪುರುಷಾಕಾರಗಳು ಮೂರೂ ನಿನ್ನ ನಟನೆಯೇ ಅಲ್ಲವೆ? ೧೦೬. ಹರೀ, ನಿನ್ನ ಪದವನ್ನು ಅರಿಯಲು ಇತರರಾರು ತಾನೆ ಶಕ್ತರು? ಪ್ರಸಿದ್ಧವಾದ ನಿನ್ನ ಮಹಿಮೆಯು ಬ್ರಹ್ಮನ ಬುದ್ಧಿಗೂ ಅತ್ಯಸಾಧ್ಯವೂ ಅತ್ಯತಿಶಯೋನ್ನತೋನ್ನತವೂ ಅಲ್ಲವೆ? ೧೦೭. 'ಲಕ್ಷ್ಮೀಕಾಂತಾ, ವಿಧವಿಧವಾದ ಬ್ರಹ್ಮಾಂಡವೂ ನಿನ್ನ ಉದರಾವಕಾಶದಲ್ಲಿದ್ದು ಅದರ ಬಹು ಸೂಕ್ಷ್ಮವಾದ ಅಂಶಾಂಶವೆನ್ನುವಾಗ ನಿನ್ನ ಸತ್ಯಸ್ವರೂಪದ ಪರಿಮಾಣವನು ಯಾರು ಬಲ್ಲರು? ಹೇಗೆ ಅದನ್ನು ವರ್ಣಿಸುವರು! ೧೦೮. ಮಹಿಮಾಧಾರಕನೇ! ನಿನ್ನ ಪರಮಾಕೃತಿಯು ದರ್ಶನಕ್ಕೆ ಸಾಧ್ಯವಿಲ್ಲದುದೆಂದು ಇಂದ್ರಾದಿ ದೇವತೆಗಳು ಕೂಡ ನಿನ್ನ ಅವತಾರಮೂರ್ತಿಗಳನ್ನೇ

---

೧. ಅದಱಿಂದಂ ನೀಂ (ಕಖಗ) ೨. ಪುರುಷಕಾರಣತ್ರಯ (ಕಖ) ೩. ಭೂಪವನ್ನಾಗಿ ಜಲಾಮ್ಬರಮವು (ಎಲ್ಲ ಪ್ರತಿ)

ಯೋಗಾಕ್ಷಿಯಿಂದೆ ಕಂಡು ಮ
ನೋಗೃಹದೊಳ್ ನಿಲಿಸಿ ಭಾವಕುಸುಮೋತ್ಕರದಿಂ
ಯೋಗಿಗಳರ್ಚಿಪ ನಿನ್ನನ
[1]ದೇಗಾಣ್ಬೆವಬಲೆಯರಾವದೆಂತರ್ಚಿಪೆವೋ ೧೦೯

ಬಿತ್ತರಿಸಲರ್ಚಿಸಲ್ ಮುನಿ
ಪೋತ್ತಮರುಂ ಬಲ್ಲರೇ ಕ್ರಿಯಾಮಾತ್ರಮನೋ
ವೃತ್ತಿಗಳಿ[2]ನೆಂತು ನಿನ್ನಂ
ಬಿತ್ತರಿಸುವೆನೆಂತು ನಿನ್ನನರ್ಚಿಪೆವೀಶಾ ೧೧೦

ಜಗದಾಧಾರಕನೈ ನೀ
ನಗಧರ ನಿನ್ನಂಘ್ರಿಭಾರಮಂ ಕ್ಷೀಣಬಲೋ
ರಗನೆಂತು ಸೈರಿಪಂ ಕಂ
ಠಗತಾಸು ಗತಾಸುವಕ್ಕುಮೇಕಕ್ಷಣದಿಂ ೧೧೧

[3]ರಿಕ್ಕಟದ ಶಕ್ತಿಯಂ ಮುಂ
ದಿಕ್ಕಿಯುಮಾತ್ಮಾಂತರಂಗದೊಳ್ ಮುಳಿಸಂ ಪಿಂ
ದಿಕ್ಕಿಯುಮೀ ಫಣಿಯಂ ಕೊಂ
ದಿಕ್ಕದಿರಿಕ್ಕೆಮಗೆ ಪುರುಷಭಿಕ್ಷಮನರಸಾ ೧೧೨

ಅರ್ಚಿಸುವರು. ನಿನ್ನ ಪರಮಾರ್ಥವು ಯಾರಿಗೆ ತಾನೆ ಗೋಚರವಾಗುವುದು? ೧೦೯. ಯೋಗಿಗಳು ಯೋಗದೃಷ್ಟಿಯಿಂದ ನೋಡಿ, ಮನೋಗೃಹದಲ್ಲಿ ನಿಲ್ಲಿಸಿಕೊಂಡು, ಭಾವಕುಸುಮದಿಂದ ಅರ್ಚಿಸುವ ನಿನ್ನನ್ನು ಅಬಲೆಯರಾದ ನಾವು ಹೇಗೆತಾನೆ ಕಾಣಬಲ್ಲೆವು? ಹೇಗೆ ಅರ್ಚಿಸಬಲ್ಲೆವು? ೧೧೦. ಈಶಾ! ನಿನ್ನ ಸ್ವರೂಪವನ್ನು ವಿವರಿಸುವುದಕ್ಕೂ ಪೂಜಿಸುವುದಕ್ಕೂ ಋಷಿವರ್ಯರು ತಾನೆ ಬಲ್ಲರೇ! ಕಾರ್ಯದಲ್ಲಿ ಮಾತ್ರವೇ ಇರುವ ಮನಸ್ಥಿತಿಯಿಂದ ನಿನ್ನನ್ನು ಹೇಗೆ ನಾವು ಹೊಗಳುವೆವು? ಹೇಗೆ ಅರ್ಚಿಸುವೆವು? ೧೧೧. ಗಿರಿಧರನೇ! ನೀನು ಜಗತ್ತಿಗೇ ಆಶ್ರಯನಲ್ಲವೆ? ನಿನ್ನ ಪಾದದ ಭಾರವನ್ನು ಬಲಹೀನನಾದ ಈ ಸರ್ಪನು ಹೇಗೆ ಸಹಿಸಬಲ್ಲನು! ಕಂಠಗತ ಪ್ರಾಣನಾಗಿರುವ ಇವನು ಒಂದು ಕ್ಷಣದಲ್ಲಿ ಪ್ರಾಣಗಳನ್ನು ಕಳೆದುಕೊಳ್ಳುವನು. ೧೧೨. ಗೂಢವಾದ ನಿನ್ನ ಶಕ್ತಿಯನ್ನು ಕಾಲಾಂತರಕ್ಕೆ ಮುಂದುವರಿಸಿ, ಕ್ರೋಧವನ್ನು ನಿನ್ನ ಮನಸ್ಸಿನಿಂದ ಹಿಂದಕ್ಕೆ ಸರಿಸು. ಈ ಸರ್ಪವನ್ನು ಕೊಂದಿಕ್ಕದಿರು. ಪ್ರಭುವೇ! ನಮಗೆ ಪುರುಷಭಿಕ್ಷೆಯನಿಕ್ಕು.

---

೧. ದೇಗಾಮ್ಬಬಲೆಯರೆನಾವದೆಂ (ಕಖಗ) ೨. ನೆಂದು (ಕಖಗ) ೩. ಅಕ್ಕಟ ಮದುಕ್ತಿಯಂಪಿಂ (ಕಖಗ)

ಸೃಷ್ಟಿಸಮಯದೊಳಿದರ್ಕಿದು
ಚೇಷ್ಟಿತಮೆಂದಖಿಳಜಾತಿಯೊಳ್ ಕಲ್ಪಿಸೆ ನೀಂ
ದುಷ್ಟತೆ ನಿಸರ್ಗಮಾಯ್ತೆನೆ
ದುಷ್ಟವಿಷೋರಗತೆ ನಿನ್ನ ಮಾಡಿದ ಮಾಟಂ ೧೧೩

ಅಪರಾಧಮಿಲ್ಲ ಪರಿಭಾ
ವಿಪೊಡೀ ತೆಱದಿಂದವೆಮ್ಮೊಳದುಕಾರಣದಿಂ
ಕೃಪೆಗೆಯ್ವುದೆಮಗೆ ನೀಂ ರ
ಕ್ಷಿಪುದೀ ಕಾಳಿಯಫಣೀಂದ್ರನಂ ಫಣಿಶಯನಾ ೧೧೪

ವ|| ಎಂದು ದಂದಶೂಕವನಿತಾಜನವಭಿಷ್ಟುತಿಗೆಯ್ದು ಬಿನ್ನವಿಸೆ ಸಂತುಷ್ಟನಾಗಿ [1]ಕಾಳಿಯ ವ್ಯಾಳಕುಳಾಂಗನಾಜನದ ದೈನ್ಯವಚನಪರಂಪರೆಗೇಳ್ದು ಕರುಣಂಗೆಯ್ದು ಕಾಳಿಯನಂ ನೋಡಿ ನೀನಿಲ್ಲಿರಲ್ವೇಡ ಅಪತ್ಯಭೃತ್ಯಬಾಂಧವಾಂತಃಪುರ ಪುರಸ್ಸರಮುರಗೇಶ್ವರ ಸಮುದ್ರಮಂ ಪೋಗಿ ಪುಗು ನಿನ್ನ ಪೆಡೆದುಱುಗಲೊಳೆನ್ನ ಪದಪದ್ಧತಿಗಳಿರ್ದಪುವು. ಇವಂ ಕಂಡೊಡೆ ಪನ್ನಗ ವಿರೋಧಿಯುಂ ಕಾದು ಕಟೆಪುಗುಂ ಪೋಗೆಂದು ಪೇೞೆ ಕಟೆಪೆ ಕಾಳಿಯವ್ಯಾಳನುಂ ತನ್ನಮಹಾಹ್ರದವಂ ಕ್ರೀಡಾಹ್ರದಮೆಂದೆಂಬಿನಮಬಲಾಬಾಲಗೋಪಾಲ ಸುಲಭಮಪ್ಪಂತು ಮಾಡಿ ತದಾಶ್ರಯಕ್ಕೆ ಬರ್ಪನ್ನೆಗಮಿತ್ತ

೧೧೩. ನೀನು ಸೃಷ್ಟಿಕಾಲದಲ್ಲಿ ಸಮಸ್ತಪ್ರಾಣಿಗಳಲ್ಲೂ ಇದಕ್ಕೆ ಇದು ಸಹಜಗುಣ ಕರ್ಮವೆಂದು ಕಲ್ಪಿಸಿದುದರಿಂದ ಸರ್ಪನಿಗೆ ಈ ದುಷ್ಟತನವು ಸ್ವಾಭಾವಿಕವಾಗಿದೆ. ಇವನು ದುಷ್ಟಸರ್ಪನಾಗಿರುವುದು ನೀನು ಮಾಡಿದ ಮಾಟವೇ ಅಲ್ಲವೆ? ೧೧೪. ಸರ್ಪಶಯನಾ! ಈ ರೀತಿಯಲ್ಲಿ ಸರಿಯಾಗಿ ಪರಿಭಾವಿಸುವುದಾದರೆ ನಮ್ಮಲ್ಲಿ ಅಪರಾಧವಿಲ್ಲ. ಆದುದರಿಂದ ನೀನು ನಮ್ಮ ಮೇಲೆ ಕೃಪೆಯಿಟ್ಟು, ಈ ಕಾಳಿಯ ನಾಗೇಂದ್ರನನ್ನು ರಕ್ಷಿಸಬೇಕು. ವ|| ಎಂದು ಆ ನಾಗವನಿತೆಯರು ಸ್ತುತಿಸಿ ವಿಜ್ಞಾಪಿಸಿದರು. ಕೃಷ್ಣನು ಸಂತುಷ್ಟನಾಗಿ ಕಾಳಿಯ, ಸರ್ಪನ ಕುಲಾಂಗನೆಯರ ದೈನ್ಯವಚನ ಪರಂಪರೆಯನ್ನು ಕೇಳಿ, ಕರುಣೆಯಿಟ್ಟು, ಕಾಳಿಯನನ್ನು ನೋಡಿ, ಉರಗೇಶ್ವರಾ ನೀನು ಇನ್ನು ಇಲ್ಲಿರಬೇಡ. ಪುತ್ರ ಭೃತ್ಯಬಾಂಧವಾಂತಃಪುರಸಮೇತನಾಗಿ ಹೋಗಿ ಸಮುದ್ರವನ್ನು ಸೇರು. ನಿನ್ನ ಹೆಡೆಗಳ ಮೇಲೆ ನನ್ನ ಹೆಜ್ಜೆಯ ಗುರುತುಗಳಿರುತ್ತವೆ. ಇದನ್ನು ಕಂಡರೆ ಗರುಡನು ನಿನ್ನನ್ನು ಕಾದು ಕಳುಹಿಸುವನು, ಹೋಗು" ಎಂದು ಹೇಳಿ ಕಳುಹಿಸಿದನು. ಕಾಳಿಯಸರ್ಪನೂ ಆ ದೊಡ್ಡ ಮಡುವನ್ನು ನೀರಾಟದ ಮಡುವೆಂಬಂತೆ ಹೆಂಗಸರೂ ಹುಡುಗರೂ ಗೋಪಾಲರೂ ಸುಲಭವಾಗಿ ಉಪಯೋಗಿಸಿಕೊಳ್ಳುವಂತೆ ಮಾಡಿ ಹೊರಟು ಹೋದನು.

---

೧. ತದೀಯ (ಕಖಗ)

ಜಗಮೆಲ್ಲಂ ಪೊಗಟ್ಟಿಂತು ಕಾಳಿಯಮಹಾಸರ್ಪಾಂಕನಂ [1]ಕಾದು ಮಾ
ತೆಗೆ ನಂದಂಗೆ ಬಲಂಗೆ ಗೋಪವಧುಗಳ್ಗಾನಂದಮಂ ಮಾಡಿ ದೇ
ವಗಣಂ ಕೀರ್ತಿಸೆ ತನ್ಮಹಾಹ್ರದದಿನೆಟ್ಟಿಂದೆತ್ತಲಾಶೀರವಂ
ಮಿಗೆ ಪೊಕ್ಕಂ ವ್ರಜಮಂ ಸವತ್ಸನಿವಹಂ ವಿಕ್ರಾಂತಚಕ್ರಾಯುಧಂ ೧೧೫

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಳಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀ
ಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯ ಮಹಾಪ್ರಬಂಧದೊಳ್ ಬಾಲಲೀಲಾವಿನೋದ
ಪೂತನಾವಧಶಕಟಾಸುರಭಂಜನಯಮಳಾರ್ಜು
ನೋನ್ಮೂಲನವತ್ಸಗೋಪಾಲ ವಿನೋದ
ಕಾಳಿಯಸರ್ಪದರ್ಪದಳನಂ
ತೃತೀಯಾಶ್ವಾಸಂ

ಇತ್ತ ಕಡೆ ೧೧೫. ಜಗತ್ತೇ ಹೊಗಳುವಂತೆ ಆ ಕಾಳಿಯ ಮಹಾಸರ್ಪನನ್ನು ರಕ್ಷಿಸಿ ಯಶೋದಾ ನಂದಗೋಪರಿಗೂ, ಬಲರಾಮನಿಗೂ ಗೋಪಸ್ತ್ರೀಯರಿಗೂ ಆನಂದವನ್ನುಂಟು ಮಾಡಿದನು. ೧೧೬. ದೇವತೆಗಳು ಗುಂಪುಗೂಡಿ ಕೀರ್ತಿಸುತ್ತಿದ್ದರು. ಆಶೀರ್ವಾದ ಧ್ವನಿಯು ಹೆಚ್ಚುತ್ತಿರುವಲ್ಲಿ ಆ ದೊಡ್ಡಮಡುವಿನಿಂದ ಹೊರಟು ಬಂದು ಸಂತೋಷದಿಂದ ಕರುಗಳ ಗುಂಪಿನೊಡನೆ ಗೋಕುಲವನ್ನು ಸೇರಿದನು. ೧೧೭. ಇದು ಸಮಸ್ತ ಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಬಾಲಲೀಲಾವಿನೋದ ಪೂತನಿಯು ವಧೆ ಶಕಟಾಸುರ ಯಮಳಾರ್ಜುನಭಂಜನ ವತ್ಸಗೋಪಾಲನ ವಿನೋದ ಕಾಳಿಯ ಸರ್ಪದಳನಗಳ ಮೂರನೆಯ ಆಶ್ವಾಸ.

---

೧. ಕಾದೆಶೋದೆಗೆ (ಕ)

# ಚತುರ್ಥಾಶ್ವಾಸಂ

ಶ್ರೀವತ್ಸಾಂಕಂ ಸುಭಗಂ
ಶ್ರೀವತ್ಸಾಂಕೇಷುದಳಿತ ಗೋಪೀಹೃದಯಂ
ಗೋವರ್ಧನಪಟು ನಲಿದಂ
ಗೋವರ್ಧನಗಿರಿಯೊಳೆಸೆವ ವೃಂದಾವನದೊಳ್ ೧

ವರುಣವಧೂವರಶ್ವಸಿತಗಂಧವಹಂ ಮಕರೇಶಚಾರುಚಾ
ಮರಮರುತಂ ಜಳೇಶಮಕರೋದ್ಧತಪುಚ್ಛಸಮೀರನಂಜನ
ದ್ವಿರದನಕರ್ಣತಾಳಪವಮಾನನಿದೆಂದು ವಿತರ್ಕಿಪನ್ನಮ
ಸ್ಫುರಿತದವಾನಳಂ ಸುೞಿದುದೊಯ್ಯನೆ ಪಶ್ಚಿಮದಿಗ್ಭವಾನಿಳಂ ೨

ಪಡುವಣೆಲ[೧]ರಿರ್ಪುವಡೆಯಿಸ
ಲಡವಿಯೊ[೨]ಳೊತ್ತಂಬದಿಂದಮುದ್ದಂ ಬರ್ಪಾ
ಸಡಿಯಿಂ ಮುನ್ನಂ ಬಂದಾ
ಸಡಿಯೊಳ್ ನಳನಳಿಸುವೆಳದಳಿರ್ಗಳ್ ರಯ್ಯಂ ೩

ಮುಗಿಲಿದಿರೇಱಿತ್ ಕಾದಲಲರೇಱಿತ್ ಪೊಲಂ ಪಸುರೇಱಿತ್ ಕಾಡ ಮ
ಲ್ಲಿಗೆ ನನೆಯೇಱಿತ್ ಮೊಲ್ಲೆ ನಯವೇಱಿತ್ ಬಿಸಿಲ್ ಕಡುದಣ್ಣಸೇಱಿತ್ ಕೇ
ದಗೆ ಸುೞಿಯೇಱಿತ್ ಹಂಸೆ ಭಯವೇಱಿತ್ ನವಿಲ್ ನಲವೇಱಿತ್ ಕಾಮಬಾ
ಹುಗೆ ಜಯವೇಱಿದತ್ತು ವಿರಹಿಪ್ರಕರಕ್ಕೞಲೇಱುತಿರ್ಪಿನಂ ೪

೧. ಶ್ರೀವತ್ಸವೆಂಬ ಮಚ್ಚೆಯುಳ್ಳವನೂ ಸುಂದರನೂ ಗೋಪಿಯರ ಹೃದಯವನ್ನು ಕಾಮಬಾಣಕ್ಕೆ ಗುರಿಮಾಡಿದವನೂ ಆದ ಕೃಷ್ಣನು ಗೋವರ್ಧನಗಿರಿ ಪ್ರದೇಶದಲ್ಲಿ ಚೆನ್ನಾಗಿರುವ ಬೃಂದಾವನದಲ್ಲಿ ಗೋವುಗಳನ್ನು ಬೆಳೆಸುವುದರಲ್ಲಿ ಸಮರ್ಥನಾಗಿ ನಲಿಯುತ್ತಿದ್ದನು. ೨. ಕಾಡುಗಿಚ್ಚು ಅಡಗುವಂತೆ ಮಾಡಿದ ಪಶ್ಚಿಮದಿಕ್ಕಿನ ಗಾಳಿಯು ಇದು ವರುಣಪತ್ನಿಯ ಉಸಿರಿನ ಗಂಧವಾಯು, ವರುಣನ ಮನೋಹರವಾದ ಚಾಮರದ ಗಾಳಿ, ವರುಣನ ಮೊಸಳೆಯ ಬಾಲದ ಗಾಳಿ, ಅಂಜನವೆಂಬ ಪಶ್ಚಿಮ ದಿಗ್ಗಜದ ಕಿವಿಯ ಬೀಸುಗಾಳಿ ಎಂದು ಬಗೆಬಗೆಯಲ್ಲಿ ವಿತರ್ಕಿಸುವಂತೆ ಮಂದವಾಗಿ ಬೀಸಿತು. ೩. ಪಶ್ಚಿಮದ ಗಾಳಿ ನಿರ್ಬಂಧದಿಂದ ಚೆನ್ನಾಗಿ ಕಾಣುವಂತೆ ಮಾಡಿದುದರಿಂದ ಕಾಡಿನಲ್ಲಿ ಬೆಳೆಯುವ ಮುತ್ತುಗದ ಮರಕ್ಕಿಂತಲೂ ಮುಂಚೆಯೇ ಆಷಾಢಮಾಸದಲ್ಲಿ ಕಾಣಿಸಿಕೊಂಡ ಎಳೆಯ ಚಿಗುರುಗಳು ಮನೋಹರವಾಗಿದ್ದವು. ೪. ಮೋಡವು ಇದುರೇರಿ, ಅನುರಾಗವು ಹೂವೇರಿ, ಹೊಲವು ಹಸುರೇರಿ, ಕಾಡುಮಲ್ಲಿಗೆಯಲ್ಲಿ ಹೂವೇರಿ, ಮೊಲೆಯಲ್ಲಿ ನಯವೇರಿ ಬಿಸಿಲಿನಲ್ಲಿ ತಂಪೇರಿ ತಾಳೆಯಲ್ಲಿ ಸುಳಿಯೇರಿ ಹಂಸೆಗೆ ಭಯವೇರಿ, ನವಿಲಿಗೆ

---

೧. ರಿಂಪು (ಕ) ೨. ಳಂ ಬಣ್ಣ (ಖ)

ಎಱಗದೆ ತಮ್ಮೊಳ್ ಮಧುಕರ
ನಱಗಿರೆ ಕೇದಗೆಯೊಳಟಿಲ್ದು ಕಣ್ಬನಿವಱಿಯಂ
ಕಱಿವಂತಿರೆ ಕಟಿವೂಗಳಿ
ನುಱಿ ಬೀತುವು ಸುರಗಿ ಹೊನ್ನೆ ಮಲ್ಲಿಗೆ ವನದೊಳ್ ೫

ಮೊದಲಿಡೆ ಕಾರ್ಮುಕಂ ಗಿಳಿಯೆಱಂಕೆಯ ಬಣ್ಣದ ಪುಲ್ಲೊಗನಿರ್ ಪೊದ
ಱ್ದುದು ಪೊಲದೊಳ್ ವಿರಾಜಿಸುವ ಮಾಣಿಕವಣ್ಣದ ಕೋರಕಂಗಳಿಂ
ಪುದಿದೆಸೆದತ್ತು ಸಾಳತರು ಮುತ್ತಿನ ಬಣ್ಣದ ಕುಟ್ಮಳೌಘವಾ .
ದುದು ಕುಟಜಂಗಳೊಳ್ ಪವಳವಣ್ಣದ ಪೂಗಳನಾಂತುದರ್ಜುನಂ ೬

ಚಾದಗೆ ನಾಟಕಂ ನಲಿದುದದ್ರಿಕುಜಂಗಳ ಕೋಟರಂಗಳೊಳ್
ಪೋದಗೆ ತತ್ತಿಯಿಕ್ಕಿದುದು ಮಾನಸಪದ್ಮವನಕ್ಕೆ ಪೋಪ ಚಿ
ತ್ತೋದಯವಂಚೆಗಾಯ್ತು ಮಱಿಗೋಗಿಲೆಗಳ್ ಗಱಿವೊಯ್ದನಾಕುಳಂ
ಪೋದುವು ಪಾಱಿ ವಾಯಸದ ಗೂಡುಗಳಿಂ ನವಮೇಘಕಾಲದೊಳ್ ೭

ಹರಿಗೋಪಾಲಪದಕ್ಕೆ ತೂರ್ಯಪಟುಘೋಷಂ ಕೇಕಿನಾಟ್ಯಕ್ಕೆ ಬಂ
ಧುರಥಕ್ಕಾನಿನದಂ ವಿಯೋಗಿನಿವಹಕ್ಕಂಗೋದ್ಭವಜ್ಯಾಲತೋ
ದ್ದುರನಾದಂ ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೆನೆ ನವ್ಯಮೇಘನಿನದಂ ಪೊಣ್ಮಿತ್ತು ರೋದೋಂತರದೊಳ್ ೮

ಸಂತೋಷವೇರಿ, ಅಗಲಿದ ಪ್ರಿಯರಿಗೆ ಸಂಕಟವೇರುವಂತಾಗುತ್ತಿರಲು ಕಾಮನ ತೋಳಿಗೆ ಜಯವೇರಿತು. ೫. (ಆಗ) ವನದಲ್ಲಿ ಸುರಗಿ ಹೊನ್ನೆ ಮಲ್ಲಿಗೆಗಳು-ತುಂಬಿಗಳು ತಮಗೆರಗದೆ ತಾಳೆಯ ಹೂವಿಗೆರಗಿದುದರಿಂದ ಸಂಕಟಪಟ್ಟು ಕಣ್ಣೀರಿನ ಮಳೆಯನ್ನು ಸುರಿಸುವಂತೆ ಹಳೆಯ ಹೂಗಳನ್ನು ಸುರಿಸಿ ಕೊನೆಗಂಡವು. ೬. ಮಳೆಗಾಲವೂ ಕಾಮನಬಿಲ್ಲೂ ಆರಂಭವಾದುದರಿಂದ ಹೊಲಗಳಲ್ಲಿ ಗಿಳಿಯ ರೆಕ್ಕೆಯ ಬಣ್ಣದ ಚಿಗುರುಹುಲ್ಲು ಚೆನ್ನಾಗಿ ಕಾಣಿಸಿತು. ಸಾಲವೃಕ್ಷವು ಕೆಂಪುರತ್ನದ ಬಣ್ಣದ ಮೊಗ್ಗುಗಳಿಂದ ತುಂಬಿ ಹೊಳೆಯುತ್ತಿದ್ದಿತು. ಗಿರಿಮಲ್ಲಿಗೆಯಲ್ಲಿ ಮುತ್ತಿನ ಬಣ್ಣದ ಮೊಗ್ಗುಗಳಾದವು. ಮತ್ತಿಯ ಮರವು ಹವಳದ ಬಣ್ಣದ ಹೂಗಳನ್ನು ಪಡೆಯಿತು. ೭. ಹೊಸ ಮೋಡದ ಕಾಲದಲ್ಲಿ ಚಾತಕ ಪಕ್ಷಿಗಳು ನಾಟಕವಾಡಿದವು. ಪೋದಗೆ ಹಕ್ಕಿಯು ಬೆಟ್ಟದ ಮರಗಳ ಪೊಟರೆಗಳಲ್ಲಿ ಮೊಟ್ಟೆಯಿಟ್ಟಿತು. ಹಂಸಗಳಿಗೆ ಮಾನಸಸರೋವರಕ್ಕೆ ಹೋಗುವ ಮನಸ್ಸುಂಟಾಯಿತು. ಕೋಗಿಲೆಯ ಮರಿಗಳು ಕಾಗೆಗಳ ಗೂಡುಗಳಿಂದ ತಡೆಯಿಲ್ಲದೆ ರಕ್ಕೆಯನ್ನು ಬೀಸುತ್ತಾ ಹೊರಟುಹೋದವು. ೮. ಕೃಷ್ಣನ ಗೋಪಾಲಕ ಪದವಿಗೆ ಮಂಗಳವಾದ್ಯಘೋಷ, ನವಿಲಿನ ಕುಣಿತಕ್ಕೆ ಮನೋಹರವಾದ ಢಕ್ಕೆಯಧ್ವನಿ, ಅಗಲಿದ ಪ್ರಿಯರ ಸಮೂಹಕ್ಕೆ ಮನ್ಮಥನ ಹೆದೆಬಳ್ಳಿಯ ಜೋರಾದ ಟಂಕಾರ, ಕಲಹಂಸ ಸಮೂಹದ ಪ್ರಯಾಣಕಾರ್ಯಕ್ಕೆ ನಗಾರಿಯ ಗಂಭೀರಧ್ವನಿ ಎಂಬಂತೆ ಭೂಮ್ಯಾಕಾಶಗಳ ನಡುವೆ ಹೊಸ ಗುಡುಗು ಹೆಚ್ಚಾಯಿತು.

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತಮ್ಮ ಮನಂ ಕಲಂಕಿ ಕ
ಟ್ಟಿರೆ ಮಱಿದುಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಪಂ
ಕರುಹದ ಭಂಗಿಯಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ [೧]ಪರಿಗೊಂಡುದು ಕೂಡೆ ಮರಾಳಮಂಡಲಂ ೯

[೨]ಅಱಿದಿನಿಸಂ ಬೆಟ್ಟದೆ ತಾ
ಟ್ಸೆಱಿಗೊಂಡಿರಲೆಂದು ಬಿಲ್ಲಪಳ್ಳಿಗಳೆಲ್ಲಂ
ತೊಱಿದುವು ತೊಱಿದಡಿಗಳನಾರ್
ತೊಱಿಯದರನುಕೂಲವೃತ್ತಿಗೆಟ್ಟೆಸಗುವರಂ ೧೦

ದಿನನಾಥಂ ನವವರ್ಷಾ
ವನಿತೆಯ ಪೀವರಪಯೋಧರಸ್ಪರ್ಶನದಿಂ
ವಿನತಾಂಶುಕನಾದನೆನಲ್
ವನಿತೆಯ ಮೊಲೆ [೩]ಮುಟ್ಟ ಶೌಚಿಯಾವಂ ಜಗದೊಳ್ ೧೧

ಮಾಕಂದಂ ಬೀತಿರೆ ಜಂ
ಬೂಕುಜಫಳದಿಂ ಶುಕಾಳಿ ಸುಖಿಯಾಯ್ತು ಪಿಕಂ
[೪]ಮೂಕತೆವೆತ್ತಿರ್ದುದು ಮ
ತ್ತೇಕಗ್ರಾಹಿಗೆ ಸುಖೋದಯಂ ಸಮನಿಪುದೇ ೧೨

೯. ತುಂಬಿದ ಮೋಡವು ಕಲಕುತ್ತಿರುವುದನ್ನು ಕಂಡ ಹಂಸಗಳ ಮನಸ್ಸೂ ಕದಡಿ ಕಪ್ಪಾಯಿತು. ಆದುದರಿಂದ ಅವು ಮರಿದುಂಬಿಗಳನ್ನೊಳಗೊಂಡು ರಾತ್ರೆ ಮೊಗ್ಗಾದ ಬಿಳಿಯ ತಾವರೆಯಂತೆಯೇ ಆದವು. ವಿಸ್ಮಯಗೊಂಡ ಜನರು ತಾವರೆ ಯಾವುದು ಹಂಸವಾವುದು? ಎಂದು ಪರೀಕ್ಷಿಸುತ್ತಿರುವಾಗ ಹಂಸಗಳು ಕೂಡಲೇ ಮಾನಸ ಸರೋವರಕ್ಕೆ ಹಾರಿಹೋದವು. ೧೦. ತೊರೆಗಳು ಕೂಲ (ದಡ)ವನ್ನು ಮೀರಿ ಹರಿಯುವವು ಎಂದು ಅರಿತ ಬೇಡರ ಹಳ್ಳಿಗಳೆಲ್ಲವೂ ಬೆಟ್ಟದ ತಪ್ಪಲನ್ನಾಶ್ರಯಿಸುವುದಕ್ಕಾಗಿ ತೊರೆಗಳ ದಡಗಳನ್ನು ತೊರೆದರು. ಅನುಕೂಲವೃತ್ತಿ ೧. ದಡವನ್ನು ಅನುಸರಿಸಿರುವಿಕೆ, ೨. ಅನುಕೂಲಕರವಾದ ಕಾರ್ಯ (ನಡತೆ)ಗಳನ್ನು ಬಿಟ್ಟು ನಡೆಯುವವರನ್ನು ಯಾರು ತಾನೇ ತೊರೆಯದಿರುವರು? ೧೧. ದಿನನಾಥನು (ಸೂರ್ಯನು) ಹೊಸ ಮಳೆಗಾಲವೆಂಬ ಯುವತಿಯ ದಪ್ಪವಾದ ಪಯೋಧರ = ೧. ಮೋಡ, ೨. ಸ್ತನ (ಮೊಲೆ) ಸ್ಪರ್ಶದಿಂದ ವಿನತಾಂಶಕ (೧. ಕೆಳಕ್ಕಾದ ಕಿರಣವುಳ್ಳವನು, ೨. ಕೆಳಕ್ಕೆ ಹೋದ ಬಟ್ಟೆಯುಳ್ಳವನು) ನಾದನು. ಎಂದ ಮೇಲೆ ವನಿತೆಯ ಸ್ತನವನ್ನು ಮುಟ್ಟಿದಮೇಲೂ ಶುಚಿಯಾಗಿರುವವನು ಲೋಕದಲ್ಲಿ ಯಾರಿರುವನು! ೧೨. ಮಾವು ಬೀತು ಹೋದುದರಿಂದ ನೇರಳೆಹಣ್ಣನ್ನೇ ತಿಂದು ಗಿಳಿ ಸುಖಿಯಾಗಿದ್ದಿತು. ಕೋಗಿಲೆ

---

೧. ಸರಿಗೊಂಡುದು (ಖಗ) ೨. ಅರಿದೆನಿಸಂ ಬೆಟ್ಟದ ತಾಟಸ್ಸೆಱಿ (ಕಗ) ಅರಿದಿನಿಸು ಬೆಟ್ಟದ ತಾಟ್ಸಜೆ(ಮೊಅ) ೩. ಮುಟ್ಟೆ (ಖಗ) ೪. ಮೂಕತೆವೆತ್ತಿರ್ಪುದಱಿಂದೇ (ಕಗ)

ವಿದಳಿಸೆ ಘನದಂತಿ ಬಿಸಿ
ಲ್ಗುದುರೆಗಳಂ ಪನಿತು ಪೆತ್ತನೆತ್ತರ ಪನಿಯಂ
ದದಿನಲ್ಲಲ್ಲಿಗೆ ಕಣ್ಗೊಳಿ
ಸಿದತ್ತು ಕಾರ್ಮುಕದೊಳಿಂದ್ರಗೋಪಕಳಾಪಂ ೧೩

ವಿಳಸಲ್ಲೋಲಪ್ರವಾಳಪ್ರತತಿಯನಪರಾಂಭೋಧಿವೀಚೀಚಯಂ ಕೆಂ
ದಳಿರಂ ತದ್ವಾರ್ಧಿವೇಳಾವನಸಮಿತಿ ದವಜ್ವಾಳೆಯಂ ನೀಲಶೈಲಾ
ವಳಿ ಕೈಕೊಂಡಭ್ರಮಂ ತಳ್ತಡರ್ವವೊಲಡರ್ದತ್ತೆತ್ತಲುಂ ಬಳ್ಳಿಮಿಂಚಂ
ತಳೆದಾಶಾಮಂಡಲಂ ಕಟ್ಟಿಗೆ [1]ಕುನಿಯೆ ಜಳಸ್ಫೀತಜೀಮೂತಜಾತಂ ೧೪

ಜಳಮಂ ವಾರಾಶಿಯೊಳ್ಮೀನ್‌ಬೆರಸುಮೊಗೆತರಲ್ ಮೇಘವಾ ಬಾಳೆಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳೆನಲವಿಭಿನ್ನಾಂಜನಚ್ಛಾಯೆಯಿಂ ಗೊಂ
ದಳಿಸಿರ್ದಂಭೋದದೊಳ್ ತಾಂ ಬಳಸಿ ಪೊಳೆವ ವಿದ್ಯುಲ್ಲತಾಜಾಳಮಾಗಳ್
ತಳೆದತ್ತಾಶ್ಚರ್ಯಮಂ ಕಟ್ತಳೆ ಬಿಡೆ ಬಿಸಿಲಂ ಕಾಱುತಿರ್ಪಂದದಿಂದಂ ೧೫

ಗಗನಶ್ರೀಯ ವಿಚಿತ್ರವಸ್ತ್ರವಿಳಸತ್ಸಂವ್ಯಾನಮೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನ [2]ದಗ್ಗವಣೆಯೆಂಬಂತಬ್ಜಗರ್ಭಾಂಡಭೂ
ರಿಗೃಹದ್ವಾರದುದಾರತೋರಣಮಿದೆಂಬಂತಭ್ರದೊಳ್ ನೋಟೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಶಬಳಿತಂ ಗೀರ್ವಾಣಬಾಣಾಸನಂ ೧೬

ಹಸಿವುಳ್ಳದ್ದಾದರೂ ಮೌನದಿಂದ ಕುಳಿತಿದ್ದಿತು. ಒಂದನ್ನೇ ನಂಬಿರತಕ್ಕವರಿಗೆ, ಸುಖವು ಲಭಿಸುವುದೇ? ೧೩. ಮಳೆಗಾಲದ ಮೋಡವೆಂಬ ದೊಡ್ಡ ಆನೆ ಬಿಸಿಲುಗುದುರೆಗಳನ್ನು ಸೀಳಿದುದರಿಂದ ಹನಿತ ರಕ್ತದ ಬಿಂದುಗಳೆಂಬಂತೆ ಇಂದ್ರಗೋಪಗಳ ಗುಂಪು ಚೆನ್ನಾಗಿ ಕಾಣಿಸುತ್ತಿದ್ದಿತು. ೧೪. ಪಶ್ಚಿಮ ಸಮುದ್ರದ ಅಲೆಗಳು ಹೊಳೆಯುವ ಚಂಚಲವಾದ ಹವಳಗಳ ಸಮೂಹವನ್ನು ಆ ಸಮುದ್ರತೀರದ ವನಗಳು ಕೆಂಪು ಚಿಗುರನ್ನು ನೀಲವಾದ ಪರ್ವತ ಪಙ್ತಿಯು ಕಾಡುಕಿಚ್ಚನ್ನು ಪಡೆದು ಆಕಾಶದಲ್ಲಿ ಹೋಗುತ್ತಿರುವುದೋ ಎಂಬಂತೆ, ಬಳ್ಳಿಮಿಂಚನ್ನು ಪಡೆದ ನೀರಿನಿಂದ ತುಂಬಿದ ಮೋಡಗಳ ಗುಂಪು ದಿಙ್ಮಂಡಲವು ಕಪ್ಪಾಗಿ ಕುಗ್ಗುವಂತೆ ಎಲ್ಲೆಡೆಯೂ ಮೇಲಡರಿತು. ೧೫. ಮೇಘವು ಸಮುದ್ರದಿಂದ ನೀರನ್ನು ಮೀನುಗಳೊಡನೆಯೇ ಮೊಗೆದುಕೊಂಡು ಬಂದುದರಿಂದ ಆ ಬಾಳೆ ಮೀನುಗಳೇ ಕಗ್ಗಪ್ಪಾದ ಕಾಡಿಗೆ ಬಣ್ಣದ ಮೋಡದಿಂದ ತುಂಬಿದ ಆಕಾಶದಲ್ಲಿ ಹೊಳೆಯುತ್ತಿವೆಯೆನ್ನುವಂತೆಯೂ, ಕತ್ತಲೆಯು (ತಾನು ನುಂಗಿದ್ದ) ಬಿಸಿಲನ್ನು ಕಾರುತ್ತಿದೆಯೆನ್ನುವಂತೆಯೂ, ಆ ಮೋಡಗಳಲ್ಲಿ ಸುತ್ತಲೂ ಹೊಳೆಯುವ ಬಳ್ಳಿಮಿಂಚಿನ ಗುಂಪು ಆಗ ಆಶ್ಚರ್ಯವನ್ನುಂಟುಮಾಡಿತು. ೧೬. ಆಕಾಶದಲ್ಲಿ ಹಲವು ಬಗೆಯ ಕಾಂತಿಯಿಂದ ಚಿತ್ರವರ್ಣವುಳ್ಳುದಾಗಿ ಕಾಣುತ್ತಿರುವ ಕಾಮನಬಿಲ್ಲು, ಗಗನಲಕ್ಷ್ಮಿಯ ವಿಚಿತ್ರವರ್ಣವಸ್ತ್ರದ ಮೇಲುಹೊದಿಕೆ, ಮಳೆಗಾಲದ ಮೋಡವೆಂಬ ಆನೆಯ ಮೇಲಿನ ಶ್ರೇಷ್ಠವಾದ ರತ್ನಖಚಿತವಾದ ಜೂಲು, ಬ್ರಹ್ಮಾಂಡವೆಂಬ

---

೧. ಕನಿಯೆ (ಕಗ) ಕವಿಯೆ (ಖ) ೨. ದಂಕವಣೆ (ಮೊಐ)

ಮನದನುರಾಗದಿಂ ನೆಗೆದು ನೀಡಿದ ಕಂಠಮರಲ್ದ ತುಪ್ಪುೞು
ರ್ಬನಿಮಿಷಮಾದ ಕಣ್ ತೆಱೆದ ಚಂಚು ವಿಜೃಂಭಿಪೆಱಂಕೆ ರಂಜಿಸಿ
ತ್ತೆನೆ ನಲವೇಱೆ ತೋರವನಿ ತಣ್ಪನಿ ಮುಂಬನಿಯೆಂಬ ಕಾರ್ಮುಗಿ
ಲ್ವನಿಯನಲಂಪಿನಿಂದ[೧]ಮಿದಿರ್ಗೊಂಡು ಕರ್ದುಂಕಿದುದುದ್ಧ ಚಾತಕಂ ೧೭

ಪಳುಕಿನ ಬಟ್ಟುಗಳ್ ಗಗನದಿಂದುದಿರ್ದಪ್ಪುವು ಚಿತ್ರಮೆಂಬಿನಂ
ಫಳಫಳನಭ್ರದಿಂದಮಿಡುಕುಂಬನಿ ಸೂಸೆ ಬೞಕ್ಕೆ ವೃಷ್ಟಿ ಕ
ಣ್ಗೊಳಿಸಿದುದಂದು ತೀವ್ರಪವನಾಹತಿಯಿಂ ತಟಿದಂಶುವೆಂಬ ಕೆಂ
ದಳಿರ್ಗಳನಾಂತ ಮೇಘಲತೆಯಿಂದಲರಲ್ಗುಗುತಿರ್ದುವೆಂಬಿನಂ ೧೮

ನಿಳಯದ ಸೂರ್ಗಳೊಳ್ ತಱದೆ ಮುತ್ತಿನ ಸೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ
ವಳಿಯ ಕುರುಳ್ಗಳೊಳ್ ತಳಿದ ಸೇಸೆಗಳಂತೆಳವುಲ್ಲಗಳೊಳ್ ಘನೋ
ಪಳಕುಳದಂತೆ ತೋಱದುವು ನವ್ಯಘನಚ್ಯುತ ತೋಯಬಿಂದುಗಳ್ ೧೯

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ
ಹರಿತಚ್ಛಾಯೆಯಿನಲ್ಲಿಗಲ್ಲಿಗೆಸೆಗುಂ ಮಾಣಿಕ್ಯದಿಂ ಮುತ್ತಿನಿಂ
ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮಂ
ಧರಣೀವಲ್ಲಭೆಗಂಬುದಾಗಮವಿಟಂ ತಂದಿಕ್ಕಿದೊಂದಂದದಿಂ ೨೦

ವಿಸ್ತಾರವಾದ ಮನೆಯ ಹೆಬ್ಬಾಗಿಲಿನ ತೋರಮಾಲೆ-ಎನ್ನುವಂತೆ ಚೆಲುವಾಗಿ ಕಾಣಿಸುತ್ತಿದ್ದಿತು. ೧೭. ಮೇಲಾದ ಪಕ್ಷಿಯು ಮನೋನುರಾಗದಿಂದ ಎತ್ತಿನೀಡಿದ ಕಂಠವೂ ಅರಳಿದ ತುಪ್ಪಳ ರೋಮಾಂಚನವೂ ಎವೆಯಿಕ್ಕದ ಕಣ್ಣೂ, ತೆರೆದ ಕೊಕ್ಕೂ ಚೆನ್ನಾಗಿ ಹರಡಿದ ರೆಕ್ಕೆಯೂ ರಂಜಿಸುತ್ತಿರುವಲ್ಲಿ ಮೊದಲ ಹನಿ, ತಣ್ಣಗಿರುವ ಹನಿ, ದಪ್ಪಹನಿ ಎಂಬ ಮಳೆಗಾಲದ ಮೋಡದ ಹನಿಯನ್ನು ಪ್ರೀತಿಯಿಂದ ಎದಿರುಗೊಂಡು ಕುಡಿಯಿತು. ೧೮. ವಿಚಿತ್ರ ಆಕಾಶದಿಂದ ಪಟಕದ ಹರಳುಗಳು ಉದಿರುತ್ತಿವೆ ಎನ್ನುವಂತೆ ಮೋಡದಿಂದ ಆಲಿಕಲ್ಲುಗಳು ಫುಳಫುಳನೆ ಸುರಿದುವು. ಬಳಿಕ ಜೋರಾದ ಗಾಳಿಯ ಹೊಡೆತದಿಂದ ಮಳೆ ಸುರಿಯಿತು. ಅದು ಮಿಂಚಿನ ಕಾಂತಿಯೆಂಬ ಕೆಂಪು ಚಿಗುರನ್ನು ಪಡೆದ ಮೋಡವೆಂಬ ಬಳ್ಳಿಯ ಹೂಗಳು ಸುರಿಯುವಂತೆ ಕಾಣಿಸುತ್ತಿದ್ದಿತು. ೧೯. ಹೊಸಮೋಡದಿಂದ ಸುರಿದ ನೀರಿನ ಹನಿಗಳು ಕ್ರಮವಾಗಿ ಮನೆಗಳ ಸೂರುಗಳಲ್ಲಿ ಮುತ್ತಿನ ಕುಚ್ಚುಗಳಂತೆಯೂ ನಂದನವನಗಳ ಮರಗಳ ಎಲೆಗಳಲ್ಲಿ ಮೊಗ್ಗಿನ ಗೊಂಚಲುಗಳಂತೆಯೂ ಸಂಚರಿಸುವ ಪುರಾಂಗನೆಯರ ಕುರುಳುಗಳಲ್ಲಿ ತಳಿದ ಮುತ್ತಿನ ಅಕ್ಷತೆಯಂತೆಯೂ ಎಳೆಯ ಹುಲ್ಲುಗಳಲ್ಲಿ ಆಲಿಕಲ್ಲುಗಳಂತೆಯೂ ಕಾಣಿಸುತ್ತಿದ್ದಿತು. ೨೦. ಮಳೆಗಾಲವೆಂಬ ವಿಟನು ಭೂಪ್ರಿಯೆಗೆ ಕೆಂಪು, ಮುತ್ತು, ಗರುಡ ಪಚ್ಚೆಯ ಮಣಿಗಳಿಂದ ಮಾಡಿದ ಹಲವು ಬಗೆಯ ಒಡವೆಗಳನ್ನು ತಂದುಕೊಟ್ಟಿರುವನೋ ಎನ್ನುವಂತೆ ಅಲ್ಲಲ್ಲಿ ಇಂದ್ರಗೋಪಗಳೂ ಆಲಿಕಲ್ಲುಗಳೂ ಎಳೆಯ

೧. ಸವಿಗೊಂಡು (ಘ).

ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುವೊಯ್ದಿಂದ್ರಕೋದಂಡಮಮಂ ಕೊಂ
ಡು ನಿಜಾಗ್ರಸ್ಕಂಧದೊಳ್ ಕೇದಗೆಯೆಸೆವರಲೆಂದೆಂಬ ಕೂರಂಬು ತೀವಿ
ರ್ದನಿಷಂಗಂ ಕಣ್ಗೊಳಲ್ಕೊಲ್ಲೆಯ ನನೆಗಣೆಯಂ ತೂಗುತುಂ ಕಂತುವೀಬಂ
ದನೆನುತ್ತುಂ ಗರ್ಜಿಪಂತಾದುದು ವಿರಹಿಗಳಂ ಕೇಕಿಭೇಕಪ್ರಣಾದಂ ೨೧

ತವೆ ಮುಂ ತಿಂದು ನಿದಾಘಸಲ್ಲಕಿಯನಾದಿತ್ಯೇಂದುಬಿಂಬಂಗಳಂ
ಕವಳಂಗೊಂಡು [1]ಸಿಡಿಲ್ಗಳೆಂಬ ಕಿಸುಗಣ್ಬೇಡುಂ ಮರುಚ್ಚಾಪಮೆಂ
ಬ ವಿಚಿತ್ರಾಂಬರದೊಂದು ಚೆನ್ನಮಿಳಿಯುಂ ಮಿಂಚೆಂಬ ಕೊಂಬುಂ ಕರಾ
ಳವೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ ೨೨

ಮರಕತರುಚಿಯೊಳ್ ದೂರ್ವಾಂ
ಕುರಮಂ ನಿಶ್ಚಯಿಸದಿರ್ದ ಮೃಗಶಿಶುಗೆ ನಗಾಂ
ತರದಲ್ಲಿ ಹರಿಣನಿತ್ತುದು
ಕರುಣಿಸಿ ನಿಜಸೃಕ್ವದೂರ್ವೆಯಂ ಕಾರ್ಮುಕದೊಳ್ ೨೩

ಕರಿಕಳಭಂಗಳ್ ಬಿಸವ
ಲ್ಲರಿಗೆತ್ತೆಱಗುತ್ತುಮಿರ್ಪ ಧಾರಾಧರಪು
ಷ್ಕರಧಾರೆಗಳಂ ಕರಪು
ಷ್ಕರದಿಂ ಬರೆ ತೆಗೆದುವಂದರಣ್ಯಾಂತರದೊಳ್ ೨೪

ಹುಲ್ಲೂ ಕೆಂಪು ಬಿಳುಪು ಹಸಿರು ಬಣ್ಣಗಳಿಂದ ಚೆನ್ನಾಗಿ ಕಾಣಿಸುತ್ತಿದ್ದವು. ೨೧. ಆಗ ನವಿಲುಗಳ ಕೇಕೆಯೂ ಕಪ್ಪೆಗಳ ವಟಗುಟ್ಟುವಿಕೆಯೂ ಅಗಲಿದ ಪ್ರಿಯರನ್ನು ಕುರಿತು, "ಮನ್ಮಥನು ತನ್ನ ಇದುವರೆಗಿನ ಹೂಬಿಲ್ಲನ್ನು ತ್ಯಜಿಸಿ ಮಿಂಚುಬಳ್ಳಿಯ ಹೆದೆಯನ್ನೇರಿಸಿದ ಕಾಮನಬಿಲ್ಲನ್ನು ತೆಗೆದುಕೊಂಡು, ಕೇದಗೆಯ ಹೂವೆಂಬ ಹರಿತವಾದ ಬಾಣದಿಂದ ತುಂಬಿದ ಬತ್ತಳಿಕೆಯನ್ನು ಹೆಗಲಿನ ಮೇಲೆ ಚೆನ್ನಾಗಿ ಕಾಣುವಂತೆಯೇ ಧರಿಸಿ ಮೊಲ್ಲೆಯ ಹೂವೆಂಬ ಬಾಣವನ್ನು ತೂಗುತ್ತಾ ಇದೊ ಈಗ ಬಂದನು" ಎಂದು ಗರ್ಜಿಸಿ ಹೇಳುವಂತೆ ಇದ್ದಿತು. ೨೨. ಮಳೆಗಾಲವೆಂಬ ಕಾಮಗಜವು, ಮೊದಲು ಬೇಸಗೆಯೆಂಬ ಸಲ್ಲಕೆ (ಆನೆಬೇಲ) ಯನ್ನು ಚೆನ್ನಾಗಿ ತಿಂದು, ಸೂರ್ಯಚಂದ್ರ ಬಿಂಬಗಳನ್ನು ಕಬಳಿಸಿ, ಸಿಡಿಲೆಂಬ ಕೆಂಗಣ್ಣನ್ನು ಬಿಟ್ಟು ಕಾಮನಬಿಲ್ಲೆಂಬ ವಿಚಿತ್ರಾಂಬರದ ಮಿಳಿಯನ್ನೂ ಮಿಂಚೆಂಬ ಕ್ರೂರವಾದ ದಂತವನ್ನೂ ಪಡೆದು ಅಗಲಿದ ಇನಿಯರ ಮೇಲೆ ಗರ್ಜಿಸಿತು. ೨೩. ಮಳೆಗಾಲದ ಆರಂಭದಲ್ಲಿ ಪರ್ವತ ಪ್ರದೇಶದಲ್ಲಿ ಪಚ್ಚೆಯ ಮಣಿಯು ಹೊಳೆಯುತ್ತಿದ್ದುದರಿಂದ ಗರಿಕೆಯ ಎಳೆಹುಲ್ಲು ಯಾವುದು? ಎಂಬುದನ್ನು ತಿಳಿಯಲಾರದ ಜಿಂಕೆಯ ಮರಿಗೆ ದೊಡ್ಡ ಗಂಡು ಜಿಂಕೆಯು ತನ್ನ ಕಡೆ ಬಾಯಿನ ಗರಿಕೆಯನ್ನು ಕರುಣೆಯಿಂದ ಕೊಡುತ್ತಿದ್ದಿತು. ೨೪. ಕಾಡಿನ ಮಧ್ಯದಲ್ಲಿ ಮರಿಯಾನೆಗಳು ಸುರಿಯುತ್ತಿರುವ ಮಳೆನೀರಿನ ಧಾರೆಗಳನ್ನು ತಾವರೆಯ ದಂಟುಗಳೆಂದುಕೊಂಡು ಸೊಂಡಿಲಿನ ತುದಿಯಿಂದ ಹಿಡಿದುಕೊಳ್ಳುತ್ತಿದ್ದವು.

---

೧. ಬಿಸಿಲ್ಗಳೆಂಬ (ಕ)

ದರಿಗೊಂಡೀಡಿಜಿದಾಡುತುಂ ಕೊಣಕುತುಂ ಬಾರುತ್ತುಮೊಳ್ಗಾಡೊಳಾ
ದರದಿಂ ಮೇದೆಳವುಲ್ಗಳಂ ತೊರೆದು ಪಾಲ್ಗಳ್ ಕೆಚ್ಚಲಿಂದೆಚ್ಚುಪಾ
ಯ್ತರೆ ಪಟ್ಟಿರ್ದುವೆಟಿಲ್ವ ಕರ್ಣವರೆಮುಚ್ಚಿರ್ದಕ್ಷಿಗಳ್ ಪೊಯ್ವ ಸುಯ್
ನೊರೆವಿಂಡುಣ್ಮುವ ಸೃಕ್ವಮಂದೆಸೆಯೆ ಮೆಲ್ಕೊತ್ತುತ್ತೆ ಕಾಡೆರ್ಮೆಗಳ್ ೨೫

ಅವಿಶಾಲಾಂಬರವಪ್ರಸನ್ನದಿವವಸ್ಪಷ್ಟಾಧ್ವವಸ್ವಚ್ಛತೋ
ಯವನುದ್ಯೋಗಜನೌಘವಸ್ತದವವಸ್ಮೇರಾಬ್ಜವಶ್ಲಕ್ಷ್ಣ ಕೈ
ರವವಕ್ರೀಡಿತಹಂಸವಸ್ಫುರಿತಚಂದ್ರಾದಿತ್ಯವಶ್ಲಿಷ್ಟಕೋ
ಕವಯೂನಾಧ್ವಗವಸ್ವರಾನ್ಯಭೃತವಂದೊಪ್ಪಿರ್ದುದಭ್ರಾಗಮಂ ೨೬

ನವನೀಳಾಂಭೋದವಂಭೋದದಿನೆಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ತೊಯ್ವ ಜಂಝಾನಿಳನನಿಳನಿನಾಮೋದಮಂ ಪೇಱೆ ಪೂವೇ
ಱುವ ಕುಂದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂ ಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲವಂಭೋದಕಾಲಂ ೨೭

ತಳರ್ದಾತ್ಮಾಲಯದಿಂದಿರುಳ್ ಸುಟಿವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯುನ್ನಯನಾವಲೋಕದೊಳೆ ಕಂಡನ್ಯಾಯಮಾಯ್ತೀ ವಿಯ
ತ್ತಳಚೂಡಾಮಣಿಚಂದ್ರನಂ ಕಱೆದನೋ ವರ್ಷಾಂಬುವಿಂ ಕೂಡೆ ಭೂ
ವಳಯಕ್ಕೆಂಬಿನವಂತದೇಂ ಮೊಟಗಿತೋ ಮೇಘಂ ನಿಶೀಥಂಗಳೊಳ್ ೨೮

೨೫. ಭೂಮಿಯ ತಿಟ್ಟುಗಳನ್ನು ಕೊಂಬಿನಿಂದಗೆಯುತ್ತ ನೆಗೆದಾಡುತ್ತಾ ಅರಚುತ್ತ ಆಸೆಯಿಂದ ಕಾಡಿನ ಎಳೆಹುಲ್ಲನ್ನು ಬೇಕಾದ ಹಾಗೆ ಮೇದು, ಕೆಚ್ಚಲಿನಿಂದ ತೊರೆದ ಹಾಲು ಚಿಮ್ಮಿ ಸುರಿಯುತ್ತಿರಲು ಜೋಲುಗಿವಿಗಳೂ ಅರೆಮುಚ್ಚಿದ ಕಣ್ಣೂ ಜೋರಾದ ಉಸಿರೂ ನೊರೆಯ ಉಂಡೆಯಿಂದ ಕೂಡಿದ ಕಡೆಬಾಯಿಯೂ ಇರುವ ಕಾಡೆಮ್ಮೆಗಳು ಮೆಲುಕುಹಾಕುತ್ತ ಮಲಗುತ್ತಿದ್ದವು. ೨೬. ಈ ವಿಶಾಲಾಕಾಶವೂ ಅಪ್ರಕಾಶವಾದ ಹಗಲೂ ಅಸ್ಪಷ್ಟವಾದ ದಾರಿಯೂ ಸ್ವಚ್ಛವಲ್ಲದ ನೀರೂ ನಿರುದ್ಯೋಗಿಗಳಾದ ಜನರೂ ಉಳ್ಳ ಆ ಮಳೆಗಾಲದಲ್ಲಿ ಕಾಡುಕಿಚ್ಚಿನ ಹೆಸರೇ ಇಲ್ಲದಂತಾಗಿದ್ದಿತು. ಕಮಲಗಳೂ ನೈದಿಲೆಗಳೂ ಚೆನ್ನಾಗಿ ಅರಳುತ್ತಿರಲಿಲ್ಲ. ಹಂಸಗಳ ಕ್ರೀಡೆಯಿಲ್ಲವಾಗಿತ್ತು. ಚಂದ್ರ ಸೂರ್ಯರು ಚೆನ್ನಾಗಿ ಪ್ರಕಾಶಿಸುತ್ತಿರಲಿಲ್ಲ. ಚಕ್ರವಾಕ ದಂಪತಿಗಳು ಬೆರೆಯುತ್ತಿರಲಿಲ್ಲ. ದಾರಿಯು ಯುವಕರ ಸಂಚಾರವಿಲ್ಲದುದಾಯಿತು. ಕೋಗಿಲೆಯ ಕೂಗೇ ಇಲ್ಲವಾಗಿದ್ದಿತು. ೨೭. ನೀಲಿಯ ಬಣ್ಣದ ಹೊಸಮೋಡವೂ ಅದರಿಂದ ಸುರಿಯುವ ನೀರಿನ ಧಾರೆಗಳೂ ಧಾರೆಗಳು ಹೆಚ್ಚಾಗಿ ಸುರಿಯುವಂತೆ ಹೊಡೆಯುವ ಗಾಳಿಯೂ ಗಾಳಿಯಿಂದ ಬರುವ ಸುವಾಸನೆಯನ್ನು ಹೊತ್ತು ಹೂವೇರುವ ಮೊಲ್ಲೆಯೂ, ಮೊಲ್ಲೆಗೆ ಮುತ್ತುವ ತುಂಬಿಗಳೂ ಆ ತುಂಬಿಗಳನ್ನು ತನ್ನ ಹಣ್ಣುಗಳಿಂದ ಗೆದ್ದ ನೇರಿಳೆಮರವೂ ಉಳ್ಳ ಚಂಚಲವಾದ ಮಿಂಚುಗಳ ಮೇಘಕಾಲವು ಚೆನ್ನಾಗಿದ್ದಿತು. ೨೮. ಅರ್ಧರಾತ್ರೆಯಲ್ಲಿ ಮಳೆಯನ್ನು ಸುರಿಸುತ್ತಿದ್ದ ಮೋಡವು ಆಗ ಮನೆಯಿಂದ ಹೊರಟು ನಡೆಯುವ ಜಾರಸ್ತ್ರೀಯ ಮುಖಚಂದ್ರನನ್ನು ತನ್ನ ಮಿಂಚುಗಣ್ಣಿಂದ ನೋಡಿ, ಅನ್ಯಾಯವಾಯಿತು. ಆಕಾಶವನಿತೆಯ ಚೂಡಾಮಣಿಯಾದ ಚಂದ್ರನನ್ನು

ಚಪಳಾಪಾಂಗಾಂಶು ವಿದ್ಯುಲ್ಲತೆಯನಡರೆ ಚಂದ್ರಾತಪಂ ನೀಳ್ದ ಬಾಳಾ
ತಪಮಂ ತಳ್ತಂದಮಾಗಲ್ ಸುಟೆದುದು ಪದಚಂಚನ್ನಖದ್ಯೋತಸುವ್ಯ
ಕ್ತಪದಂ ಮಾರ್ಗಾಳಜಾಳಂ ಬಳಸಿದ ಜಳದೇವೀಸಮೂಹಂಬೊಲಂಭೋ
ದಪಯೋಧಾರಾಳಿ ತಳ್ಪೊಯ್ವಿನಮೆಸೆದಿರುಳೊಳ್ ಜಾರನಾರೀಕದಂಬಂ ೨೯

ಒದವಿದ ಕೇಗು ನೀಳ್ದ ಕೊರಲೆತ್ತಿದ ಪಕ್ಷವೊಜಿಲ್ದುತಿರ್ಪಿನಂ
ಮದನನ ಪಂಚರತ್ನಮಯಖೇಟಕದಂತಿರೆ ಬರ್ಚಿ ಬರ್ಹಮಂ
ಪದೆದು ನವಿಲ್ಗಳಾಡೆ ಚಪಲಾಕ್ಷಿಘನಾಗಮಲಕ್ಷ್ಮಿ[1]ಗಂದು ಹ
[2]ರ್ಷದಿನುಗುತಿರ್ಪ ಕಣ್ಬನಿಯ ಸೋನೆವೊಲಾದುವು ಭೂರಿವೃಷ್ಟಿಗಳ್ ೩೦

ಪರಿವ ಮುಗಿಲ್ ಪಳಂಚಿ ಖಚರೀನಿಚಯಸ್ತನತಾರಹಾರವ
ಲ್ಲರಿ ಪಜಿಯಲ್ ಪೊದಟ್ಟು ಬಿಡುಮುತ್ತು ಘನೋಪಳದೊಂದುರೂಪದಿಂ
ಸುರಿಯಲನಂತರಂ ಬಜಿಯದಾರವೆಬಿಲ್ದಪುದೆಂಬ ಚೆಲ್ವನಾ
ವರಿಸಿದುವಂದು ಸಂದಣಿಸಿ ನೀಳ್ದ ಪಯೋಧರವಾರಿಧಾರೆಗಳ್ ೩೧

ಬಲ್ಸರಿ ಬಿಜುಸರಿ ಪೆರ್ಮಟಿ
ಮೆಲ್ಸರಿ ತುಂತುರ್ ತುಷಾರವಿಡುಕುಂಬನಿ ತಂ
ದಲ್ಲೋನೆ ನಟ್ಟಬಡಪಮೆ
ನಲ್ಸುರಿದುವು ಬಿಡದೆ ಮಟಿಗಳಿರುಳುಂ ಪಗಲುಂ ೩೨

ಮಳೆಯ ನೀರಿನೊಡನೆ ಭೂಮಂಡಲಕ್ಕೆ ಬೀಳಿಸಿದೆನು' ಎಂದು ವ್ಯಥೆಯಿಂದ ಹೇಳುವಂತೆ ಹೆಚ್ಚಾಗಿ ಗುಡುಗಿತು. ೨೯. ಮೋಡಗಳು ವ್ಯಾಪಿಸಿದ ರಾತ್ರಿಯಲ್ಲಿ ಜಾರವನಿತೆಯರ ತಂಡವು ಚಂಚಲವಾದ ತಮ್ಮ ಕಡೆಗಣ್ಣಿನ ಹೊಳಪು ಮಿಂಚನ್ನೂ ಮುಖಚಂದ್ರನ ಕಾಂತಿಯು ಎಳೆಬಿಸಿಲನ್ನೂ ಜಯಿಸುವಂತಿರಲು ಕಾಲುಗುರಿನ ಹೊಳಪಿನಿಂದ ದಾರಿಯನ್ನು ತಿಳಿಯುತ್ತ ಮಳೆಯ ನೀರಿನ ಧಾರೆಗಳು ಸುರಿಯುತ್ತಿರಲು ತಾವರೆಯ ಬಳ್ಳಿಯು ಬಳಸಿರುವ ಜಲದೇವಿಯರ ಸಮೂಹದಂತೆ ಸಂಚರಿಸಿತು. ೩೦. ಉದ್ದವಾದ ಕೊರಳನ್ನು ಮೇಲೆತ್ತಿ ರೆಕ್ಕೆಯನ್ನು ಬಿಚ್ಚಿ ಹೆಚ್ಚಾಗಿ ಕೇಕೆ ಹಾಕುತ್ತಾ ಮನ್ಮಥನ ಪಂಚರತ್ನಮಯವಾದ ಗುರಾಣಿಯಂತೆ ಕಾಣುವ ಹಾಗೆ ಗರಿಯನ್ನು ಬಿಚ್ಚಿ ಹರಡಿ, ಉತ್ಸಾಹಗೊಂಡು ನವಿಲುಗಳು ಕುಣಿಯುತ್ತಿದ್ದವು. ನೋಡಿದ ಮಿಂಚುಗಣ್ಣಿನ ಮಳೆಗಾಲವೆಂಬ ಲಕ್ಷ್ಮಿಗೆ ಆಗ ಆನಂದದಿಂದ ಸುರಿಯುವ ಕಣ್ಣೀರಿನ ಸೋನೆಯಂತೆ ಮಳೆಯು ಕಾಣಿಸುತ್ತಿದ್ದಿತು. ೩೧. ಓಡುವ ಮೋಡವು ಜೋರಾಗಿ ತಾಕಿದುದರಿಂದ ಖೇಚರಿಯರ ಸ್ತನದ ಮೇಲಿನ ಮುತ್ತಿನ ಬಳ್ಳಿಯ ಹಾರವು ಕಿತ್ತುಹೋಗಿ ಪ್ರಸಿದ್ಧವಾದ ಆ ಮುತ್ತುಗಳು ಆಲಿಕಲ್ಲಿನ ರೂಪದಿಂದ ಸುರಿದು ಹೋದವು. ಬರಿಯ ದಾರಗಳು ಜೋಲುತ್ತಿವೆ ಎನ್ನುವಂತೆ ಒತ್ತಾಗಿ ಉದ್ದವಾಗಿ ಸುರಿಯುತ್ತಿದ್ದ ನೀರಿನ ಧಾರೆಗಳು ಚೆಲುವನ್ನು ಪಡೆದಿದ್ದವು. ೩೨. ಬಲವಾದ ಸರಿ, ಜೋರು ಸರಿ, ದೊಡ್ಡಮಳೆ, ಸಣ್ಣಮಳೆ, ತುಂತುರು ಮಳೆ, ತಣ್ಣಗಿರುವ ಹಿಮದ ಒತ್ತಾದ ಹನಿ ಎಂಬ ನಾನಾ ಬಗೆಯ ಮಳೆಗಳು

೧. ಕಂಡು (ಕಖಗ) ೨. ಷರ್ದಿನಗುತಿರ್ಪ (ಕಖ)

ಕೆಱೆ ಕಾಟ್ಪುರದಿಂ ತೀವಿರೆ
ಕೆಱೆಗಳ ಕಡೆನೋಡಿ ಪಳ್ಳಮಂ ಪಳ್ಳಂಗಳ್
ತೊಱೆಯುಂ ತಾಂ ತೊಱೆಗಳ ಬಾಂ
ದೊಱೆಗೊರೆಯೆನಲುರ್ಬೆ ಪೊಕ್ಕರಳ್ಕುಱೆ ಪಥಿಕರ್* ೩೩

ಸಂದಣಿಸಿರ್ದ ಕೇದಗೆಗಳೊಳ್ಗಱಿಯೊಳ್ ಗಱಿಸೋಂಕಿ ಕುಂದದೊಳ್
ಕುಂದದ ಲೀಲೆಯಿಂ ಸುೞಿದು ಕಂದಳದೊಳ್ ದಳಮಂ ಕಲಂಕಿ ಕೈ
ವಂದ ಕದಂಬಪುಷ್ಪದ ಪರಂಪರೆಯೊಳ್ ಪರಿದಾಡಿ ತಣ್ಪು ಕಂ
ಪೊಂದಿರೆ ಬಂದು ತೀಡಿದುದು ಮಾರುತನಾತ್ತಕಳಾಪಿನೀರುತಂ ೩೪

ವಿದಳಿತವಾದ ಕಂಟಕಕದಂಬದಿನುರ್ಬಿದ ವಾಹಿನೀಸಮೂ
ಹದಿನಭಿವೃದ್ಧಿವೆತ್ತ ಭುವನಾಶ್ರಯದಿಂ ಬಗೆಗೊಳ್ವ ಕುಂದದ
ಭ್ಯುದಯದಿನೇೞ್ಗೆಗೆಟ್ಟಳಱಿ ಪೋದ ಮಹೋದ್ಧತ ರಾಜಹಂಸತೇ
ಜದಿನೆಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ ೩೫

ರಾತ್ರಿಯೂ ಹಗಲೂ ಬಿಡದೆ ಸುರಿಯುತ್ತಿದ್ದವು. ೩೩. ಕಾಡಿನ ಪ್ರವಾಹದಿಂದ ಕೆರೆಗಳು ತುಂಬಿ ಕೋಡಿವರಿದವು. ಆದರಿಂದ ಹಳ್ಳಗಳು ತುಂಬಿ ಹರಿದು ಉಪನದಿಗಳನ್ನು ತುಂಬಿ ಹರಿಯುವಂತೆ ಮಾಡಿದವು. ಉಪನದಿ ನದಿಗಳು ದೊಡ್ಡನದಿ ನದಗಳನ್ನು ಸೇರಿ ತುಂಬಿ ಹರಿಯುವಂತೆ ಮಾಡಿದವು. ದೊಡ್ಡನದಿಗಳು ದಾರಿಗರು ಹೆದರುವಂತೆ ಆಕಾಶಗಂಗೆಯಂತೆ ಹರಿದು ಕಡಲನ್ನು ಸೇರಿದವು. ೩೪. ಚೆತ್ತಾದ ತಾಳೆಯ ಗರಿಯನ್ನು ಸ್ವಲ್ಪ ಮುಟ್ಟಿ, ಮೊಲ್ಲೆಯಲ್ಲಿ ಸಾಮಾನ್ಯ ಲೀಲೆಯಿಂದ ಸಂಚರಿಸಿ, ಚಿಗುರೆಲೆಗಳನ್ನು ಕಲಕಿ ಫಲಿಸಿದ ತಡಹದ ಮರಗಳ ಹೂಗಳ ಸಮೂಹದಲ್ಲಿ ಓಡಾಡಿ ಸುಗಂಧಿಯಾದ ತಂಗಾಳಿ ಕೇಕಾಶಬ್ದದೊಡನೆ ಬೀಸಿತು. ೩೫. ಮೇಘಾಗಮ (ಮಳೆಗಾಲವೆಂಬ) ಚಕ್ರವರ್ತಿಯ ರಾಜ್ಯ ವೈಭವವು-ಮನುಷ್ಯ ಚಕ್ರವರ್ತಿಯ ವೈಭವದಂತೆ ಬಹಳ ಚೆನ್ನಾಗಿದ್ದಿತು. (ಹೇಗೆಂದರೆ) ೧. ಮನುಜ ಚಕ್ರವರ್ತಿಯ ವೈಭವವು ವಿದಳಿತ ಕಂಟಕ ಕಂದಬವಾಗಿ (= ರಾಜ್ಯಕಂಟಕರಾದ ದ್ವೇಷಿಗಳ ಸಮೂಹವನ್ನು ಸೀಳಿದುದಾಗಿ) ಇರುವುದು. ಉಬ್ಬಿದ ವಾಹಿನೀ ಸಮೂಹ (= ಉತ್ಸಾಹವುಳ್ಳ ದೊಡ್ಡದಾದ ಸೇನೆಯ ಸಮೂಹ)ದಿಂದ ಕೂಡಿರುವುದು. ಅಭಿವೃದ್ಧಿಯನ್ನು ಪಡೆದ ಭುವನಾಶ್ರಯ (=ಏಳಿಗೆಯನ್ನು ಪಡೆದ ಜನ (ಲೋಕ)ಕ್ಕೆ ಆಶ್ರಯ)ವಾಗಿರುವುದು. ಮನೋಹರಳಾಗಿದ್ದು (ಕುಂದದ) ಕ್ಷೀಣವಾಗದ ಐಶ್ವರ್ಯವುಳ್ಳುದಾಗಿರುವುದು. ಮುಂಚೆ ಬಹು ಉದ್ಧತರಾಗಿದ್ದು ಈಚೆಗೆ ಏಳಿಗೆಗೆಟ್ಟು ತೇಜೋಹೀನರಾಗಿ ಹೆದರಿ ಓಡಿಹೋದ ಶತ್ರುರಾಜ ಶ್ರೇಷ್ಠರನ್ನುಳ್ಳದಾಗಿರುವುದು. ೨. ಮಳೆಗಾಲವೆಂಬ ಚಕ್ರವರ್ತಿಯ ರಾಜ್ಯವೈಭವವು ವಿದಳಿತವಾದ ಕಂಟಕ ಕದಂಬ (= ಚಿಗುರುವುದಕ್ಕೆ ಸಿದ್ಧವಾಗಿ ಗಂಟೊಡೆದು ಮುಳ್ಳಿನಂತಿರುವ ಚಿಗುರು ಮೊಗ್ಗುಗಳಿಂದ ತುಂಬಿದ ಕಡಹದ ಮರಗಳ ಸಮೂಹ) ವುಳ್ಳುದಾಗಿರುವುದು. ಉಬ್ಬಿದ ವಾಹಿನೀ (= ನದಿಗಳ)

---

* ವಿರಹಿಗಳಾದ ಪಥಿಕರು ಹೆದರಿದರು ಎಂಬ ಅಭಿಪ್ರಾಯವಿರಬಹುದು (ರಂ).

ಸುಮನೋಗೋಪಸಮಾವೃತಂ ಜಲಧರಶ್ಯಾಮಂ ಕದಂಬದ್ರುಮೋ
ದ್ಗಮಮಾಳಾಸುಭಗಂ ಮಯೂರನವಬರ್ಹಾಳಂಕೃತಂ ಕುಂದಹಾ
ಸಮನೋಜ್ಞಂ ಭುವನಾತ್ಮಕಂ ವಿಜಿತಚಂದ್ರಾದಿತ್ಯತೇಜಂ ಘನಾ
ಗಮದೊಳ್ ಶೌರಿ ಘನಾಗಮಂಬೊಲೆಸೆದಂ ಗೋಪಾಲಲೀಲಾಸ್ಪದಂ ೩೬

ತೊಲಗದ ಮೋಡವೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಲವಳಱೆತ್ತು ಮಿಂಚು[1]ವೆಳಗುಂ ಬರಮಾಯ್ತು ಶಿಖಂಡಿ ತಾಂಡವ
ಕ್ಕಲಸಿದುದೆಯ್ದೆ ಕುಂದಲತೆ ಕುಂದಲೊಡರ್ಚಿದುದಂಚೆ ಚಂಚುವಿಂ
ನಲಿದು ಮೃಣಾಳಮಂ ಸವಿವುದಾಯ್ತು ಶರತ್ಪ್ರಥಮಪ್ರವೇಶದೊಳ್ ೩೭

ಸಮೂಹವುಳ್ಳುದಾಗಿರುವುದು. ಅಭಿವೃದ್ಧಿ.... ಭುವನಾಶ್ರಯ (= ತುಂಬಿ ತುಳುಕುವ ಸರೋವರ ಕೆರೆ ಕೊಳ ಮೊದಲಾದ ಜಲಾಶಯ) ಗಳುಳ್ಳುದಾಗಿರುವುದು. ಮನೋಹರವಾದ, ಕುಂದದ ಅಭ್ಯುದಯ (=ಮೊಲ್ಲೆಯ ಬಳ್ಳಿ ಹೂಗಳ ಏಳಿಗೆಗೆ) ಕಾರಣವಾಗಿರುವುದು, ಏಳ್ಗೆಗೆಟ್ಟ.... ಹಂಸತೇಜ (=ಮಳೆಯ ಭೀತಿಯಿಂದ ತೇಜೋಹೀನವಾಗಿ ಓಡಿಹೋದ ರಾಜಹಂಸ ಸಮೂಹವುಳ್ಳುದು. ಮತ್ತು ಚಂದ್ರಸೂರ್ಯರ ತೇಜಸ್ಸನ್ನು ಕಡಿಮೆ ಮಾಡಿರುವುದು. ೩೬. ಮೇಘಾಗಮ (=ವರ್ಷ) ಕಾಲದಲ್ಲಿ ೧. ಸುಮನೋ ಗೋಪಸಮಾವೃತನೂ (=ಒಳ್ಳೆಯ ಮನಸ್ಸಿನವರಾದ ಗೋಪಾಲರೊಡಗೂಡಿದವನೂ), ಜಲಧರಶ್ಯಾಮನೂ (=ನೀರುಂಡ ಮೋಡದಂತೆ ನೀಲವರ್ಣನೂ), ಕದಂಬ... ಮಾಲಾಸುಭಗನೂ (=ಕಡಹದ ಹೂಮಾಲೆಯಿಂದ ಅಲಂಕೃತನಾಗಿ ಮನೋಹರನೂ), ಮಯೂರ ಬರ್ಹಾಳಂಕೃತನೂ (= ನವಿಲುಗರಿಯಿಂದ ಅಲಂಕರಿಸಿಕೊಂಡವನೂ), ಕುಂದಹಾಸ ಮನೋಜ್ಞನೂ (=ಮೊಲ್ಲೆಯ ಮೊಗ್ಗಿನಂತೆ ಮುಗುಳುನಗೆಯಿಂದ ಮನೋಹರನೂ), ಭುವನಾತ್ಮಕನೂ (=ಪ್ರಪಂಚವನ್ನೇ ದೇಹವಾಗಿ ಪಡೆದಿರುವವನು ಮತ್ತು ಪ್ರಪಂಚಕ್ಕೆ ಆತ್ಮವಾಗಿರುವವನೂ), ವಿಜಿತ ಚಂದ್ರಾದಿತ್ಯತೇಜನೂ (=ಚಂದ್ರಸೂರ್ಯರಿಗಿಂತಲೂ ಅಧಿಕ ತೇಜಸ್ವಿಯೂ) ಆದ ಕೃಷ್ಣನು-ಸುಮನೋಗೋಪ ಸಮಾವೃತವೂ (೨. = ಇಂದ್ರಗೋಪವೆಂಬ ಹುಳುಗಳಿಂದ ಕೂಡಿದುದೂ, ಜಲಧರಶ್ಯಾಮವೂ (ನೀರುಂಡ ಮೋಡದಿಂದ ಕಪ್ಪಾದುದೂ), ಕದಂಬದ್ರುಮೋದ್ಗಮ ಮಾಲಾಸುಭಗವೂ (=ಕದಂಬ ಪುಷ್ಪಮಾಲೆಗಳಿಂದ ಮನೋಹರವಾದುದೂ), ಮಯೂರನವಬರ್ಹಾಲಂಕೃತವೂ ಹೊಸದಾಗಿ ನವಿಲುಗರಿಗಳಿಂದ ಅಲಂಕೃತವೂ, ಕುಂದಹಾಸ ಮನೋಜ್ಞವೂ. (ಮೊಲ್ಲೆಹೂಗಳರಳುವಿಕೆಯಿಂದ ಮನೋಹರವೂ), ಭುವನಾತ್ಮಾಕವೂ (=ಜಲಮಯವೂ), ವಿಜಿತಚಂದ್ರಾದಿತ್ಯ ತೇಜವೂ (=ಚಂದ್ರಸೂರ್ಯರ ಪ್ರಕಾಶವನ್ನೇ ಕಡಿಮೆಮಾಡಿದುದೂ? ಆ ಮಳೆಗಾಲದಂತೆಯೇ ಪ್ರಕಾಶಿಸುತ್ತಿದ್ದನು. ೩೭. ಶರದೃತುವಿನ ಆರಂಭವಾಗುತ್ತಲೂ ಅದುವರೆಗೆ ತೊಲಗದೆ ಇದ್ದ ಮೋಡವು ಓಡಿಹೋಯಿತು. ತುಂತುರು ಹನಿಯಾಯಿತು. ಮೇಘಮಂಡಲವು ಹೆದರಿತು. ಮಿಂಚಿನ

೧. ವೆಳಗಂಚಿರಮಾಯ್ತು (ಕಗ)

ಕಿಱಿದಾನುಂ ಪೊೞ್ತುಚೆಂಬೊಂದರಳಿರ ಪಸೆಗಳೊಳ್ ಗೋಷ್ಠಿಯಿಂ ಕುಳ್ಳಿರುತ್ತುಂ
ಕಿಱಿದಾನುಂ ಪೊೞ್ತು ಮಲ್ಲಶ್ರಮದೆ ಪೊಣರ್ದು ಗೋಪಾಲರಿಂ [1]ಜಾಳಿಸುತ್ತುಂ
ಕಿಱಿದಾನುಂ ಪೊೞ್ತು ನಾದಾಮೃತಮೊಸರ್ವಿನೆಗಂ ವೇಣುವಂ ಬಾಜಿಸುತ್ತುಂ
ತುಱುಗಾವಂ ಗೋಪವೇಷೋಚಿತವನಕುಸುಮಾಲಂಕೃತಂ ಪಂಕಜಾಕ್ಷಂ ೩೮

ವII ಅಂತು ಗೋಪಾಲವಿನೋದದಿಂ ಕಾಮಪಾಲಂಬೆರಸು ಗೋವರ್ಧನಗಿರೀಂದ್ರದತ್ತ ಮತಿದೂರಾಂತರದೊಳ್ ಚರಿಸುತ್ತಿರ್ದಲ್ಲಿ

ತಾಳದಳಾವಳೀಕಳಕಳಾನಿಳನುರ್ವಿಸಿ ತೀಡೆ ಪೇೞಿಮೀ
ಗಾಳಿಯಿನಾದ ನಿಷ್ಠುರನಿನಾದಮಿದಾವುದೆನಲ್ಕೆ ಕೇಳ್ದು ಗೋ
ಪಾಳರಿದಲ್ತೆ ಕಂಸವಧುಗಳ್ ಮಧುವಂ ಕುಡಿವೊಂದು ತಾೞಭೂ
ಜಾಳಿಯ ತೀವ್ರಘೋರರವವಲ್ಲಿಗೆ ಪೋಗಲೆಬಾರದಚ್ಯುತಾ ೩೯

ವII ಅದೆಂತೆಂದೊಡಾ ಮಹೋತ್ತಾಳ ತಾೞವನಮಂ ಧೇನುಕನೆಂಬ ರಾಸಭರಾಕ್ಷಸಂ ಕಾದಿರ್ಪಂ ಆ ರಾಸಭನ ರಭಸಮಂ ಪೇೞ್ವೊಡೆ ಮುನ್ನೊಂದು ಸಮಯದೊಳ್ ಪೌಲೋಮಿ ತಾೞಮಧುವಂ ಬಯಸಿ ಕಾಪಿಲ್ಲದ ಪೊೞ್ತಱಿದಲ್ಲಿಗೆ ಪುರಂದರಪುರಸ್ಸರಂ ಬಂದು ಹೃದ್ಯಮಪ್ಪ ಮದ್ಯಮಂ ಕೀಳಿವಟ್ಟಲೊಳಱಿದು ಕುಡಿಯಲುಜ್ಜುಗಂಗೈವುದುಂ ಮರುಜ್ಜವದಿನಟ್ಟಾಸುರಂ ಮಸಗಿ

ಬೆಳಕಿಗೆ ಕ್ಷಾಮವೊದಗಿತು. ನವಿಲು ಕುಣಿತಕ್ಕೆ ಬೇಸರಗೊಂಡಿತು. ಮೊಲ್ಲೆಯ ಬಳ್ಳಿ ಕುಂದಲಾರಂಭವಾಯಿತು. ಹಂಸವು ನಲಿದು ಕೊಕ್ಕಿನಿಂದ ತಾವರೆಯ ದಂಟನ್ನು ತಿನ್ನಲಾರಂಭಿಸಿತು. ೩೮. ಕೃಷ್ಣನು ತನ್ನ ಗೋಪಾಲವೇಷಕ್ಕೆ ತಕ್ಕ ಕಾಡುಹೂಗಳಿಂದ ಅಲಂಕೃತನಾದನು. ಸ್ವಲ್ಪಕಾಲ ಕೆಂಪು ಹಳದಿಯ ಚಿಗುರು ಹಾಸಿಗೆಯಲ್ಲಿ ಕುಳಿತಿರುತ್ತಲೂ ಕೆಲವು ಹೊತ್ತು ಶ್ರಮಪಟ್ಟು ಜಟ್ಟಿಯ ಕಾಳಗದಲ್ಲಿ ಗೋಪಾಲರನ್ನು ಸೋಲಿಸುತ್ತಲೂ ಸ್ವಲ್ಪಕಾಲ ನಾದಾಮೃತವು ಹರಿಯುವಂತೆ ಕೊಳಲನ್ನು ಬಾಜಿಸುತ್ತಲೂ ಕರುತುರುಗಳನ್ನು ಕಾಯುತ್ತಿದ್ದನು. ವII ಹಾಗೆ ಗೋವುಗಳನ್ನು ಕಾಯುವ ವಿನೋದದಲ್ಲಿ ಬಲರಾಮನೊಡನೆ ಗೋವರ್ಧನಗಿರಿಯಿಂದ ಆ ಕಡೆಯಿಂದ ಬಹಳ ದೂರ ತಿರುಗುತ್ತಿರುವಾಗ. ೩೯. ತಾಳೆ (ಓಲೆ)ಯ ಮರದ ಗರಿಗಳ ಕಳ ಕಳ ಶಬ್ದದಿಂದ ಕೂಡಿದ ಗಾಳಿಯು ಜೋರಾಗಿ ಬೀಸಿತು. "ಈ ಗಾಳಿಯಿಂದ ಬರುತ್ತಿರುವ ಕಠಿನ ಈ ಧ್ವನಿಯಾವುದು?" ಎಂದು ಕೃಷ್ಣನು ಗೋಪಾಲರನ್ನು ಕೇಳಿದನು. ಅವರು "ಇದು ಕಂಸನ ಹೆಂಡಿರು ಮದ್ಯವನ್ನು ಕುಡಿಯುವ ತಾಳೆಯ ಮರಗಳ ಗುಂಪಿನ ತೀವ್ರವೂ ಭಯಂಕರವೂ ಆಗಿರುವ ಧ್ವನಿ, ನಾವಾರೂ ಅಲ್ಲಿಗೆ ಹೋಗಲೇಬಾರದು, ಕೃಷ್ಣಾ!" ಎಂದರು. ವII ಅದೇಕೆ ಹೇಗೆ ಎಂದರೆ ಆ ಮಹೋನ್ನತವಾದ ತಾಳವನವನ್ನು ಧೇನುಕನೆಂಬ ಕತ್ತೆಯಾಕಾರದ ರಾಕ್ಷಸನು ಕಾಯುತ್ತಿರುವನು. ಅವನ ರಭಸವನ್ನು ಏನು ಹೇಳೋಣ. ಹಿಂದೊಂದು ಸಾರಿ ಶಚೀದೇವಿ ತಾಳೆಯ ಮದ್ಯವನ್ನು ಬಯಸಿ, ಅವನ ಕಾವಲಿಲ್ಲದ ಹೊತ್ತನ್ನು ತಿಳಿದು, ಇಂದ್ರನೊಡನೆ

---

೧. ಬಾಳಿಸುತ್ತುಂ (ಕ)

ರಾಸಭಂ ಬಂದುಮಾ ವಾಸವಸೈನ್ಯಮಂ ಕರ್ಚ್ವಿಯುಮೊದೆದುಂ ಚಿಗುಳಿದುಟಿಯುಂ ಪಡಲ್ವಡಿಸುತ್ತುಮಿರೆ ಸತ್ತುಕಾಣ್ಬ ಸಗ್ಗದಿಂದಿರ್ದುಕಾಣ್ಬ ನರಕಮೆಲೇಸೆಂಬ ನಾಣ್ನುಡಿಯುಮುಂಟು ಅಲ್ಲದೆಯುಮೆಮಗೆ ವಿಶೇಷದಿಂದಿರ್ದುಕಾಣ್ಬ ಸಗ್ಗದಿಂ ಕಟ್ತೆಯಿಂ ಸತ್ತು ಕಾಣ್ಬ ನರಕಮೇವುದು; ಆಂ ಮರುಳಲ್ಲೆಂ, ಈ ಸಾಂಪರಾಯದಿಂ ಪಲಾಯನಮೆ ಲೇಸೆಂದು ವಾಸವನತಿಜವಾಶ್ರಮೆನಿಸಿದುಚ್ಚೈಶ್ಶ್ರವಮನೇಟಿ ಮನೋವೇಗದಿಂ ಪೋಗೆ ದಿವಂಬರಂ ಬೆಂಬತ್ತಿ ಮರಳ್ದು ಬಂದಂ ಧೇನುಕನಿಂತುಟೆನೆ, ದರಹಸಿತವದನಾರವಿಂದನಾಗಿ

ರಾಸಭವಿಜೃಂಭಣಕ್ಕೇ
ನೋಸರಿಪುದೆ ಪೋಗಿ ತಾಟಿ ಪಣ್ಗಳನೊಲವಿಂ
ಲೇಸಪ್ಪುವನಾಸ್ವಾದಿಸಿ
ಗೋಸಮಿತಿಯನಲ್ಲಿ ಮೆಲ್ಲನಾಡಿಸಿ ಬರ್ಪೆಂ ೪೦

ವ॥ ಎಂದು ಪೋಗಿ ತಾಟಿವನಮಂ ಪೊಕ್ಕು ಪಕ್ವಫಲಮಂ ಕಂಡಟ್ಟೆವಟ್ಟುಮಿದನಿಟ್ಟು ಕೆಡಪುವೊಡೀ ಸ್ಥಳಂ ಕಾಷ್ಠಪಾಷಾಣವರ್ಜಿತಂ ಅಲ್ಲಾಡಿಕೆಡಪುವೆನೆಂದುಜಿದೆಗೊಂಡಲ್ಲಾಡಲಾ ಕಳಕಳಮಂ ಕೇಳ್ದು ರಾಸಭರಾಕ್ಷಸನತಿಕ್ಷೋಭಮಂ [೧]ತಳೆದಂತಕಂಗುರುಬಾಡುವೋವರಿಗಳಂತಿರ್ದ ಘೋರ ಘೋಷಣಘೋಣಾವಿವರಂಗಳುಂ ಸುರನರರುಧಿರಮಾಂಸಂಗಳಿಂ ತಣಿದಪೆಸಂಜದಿರಿಮೆಂದು ಭೂತ ಪಿಶಾಚಂಗಳ್ಗಭಯಮಿತ್ತ ಮೃತ್ಯುದೇವತೆಯ ಕರತಳಗಳಂತಿರ್ದುದ್ಗತಸ್ಫುರಿತಕರ್ಣಂಗಳುಂ, ವದನಹ್ರದ

ಅಲ್ಲಿಗೆ ಬಂದು ಹೃದ್ಯವಾದ ಮದ್ಯವನ್ನು ಕೇಳಿ ಬಟ್ಟಲಿಗೆರೆದು ಕುಡಿಯಲಾರಂಭಿಸಿದಾಗ ಆ ಧೇನುಕನು ವಾಯುವೇಗದಿಂದ ಬಂದು ಭಯಂಕರವಾಗಿ ರೇಗಿ ಆ ಇಂದ್ರನ ಸೇನೆಯನ್ನು ಕಚ್ಚಿಯೂ ಒದೆದೂ ಚಿಗುಳಿಯಂತೆ ತುಳಿದೂ ದಿಕ್ಕುಗೆಟ್ಟೋಡುವಂತೆ ಮಾಡಿದನು. ಇಂದ್ರನು-ಸತ್ತು ಕಾಣುವ ಸ್ವರ್ಗಕ್ಕಿಂತ ಇದ್ದು ಕಾಣುವ ನರಕವೇ ಲೇಸು" ಎಂಬ ಗಾದೆಯುಂಟು. ಅದೂ ಅಲ್ಲದೆ ನಾವು ಇದ್ದೇ ಸತ್ಯವಾಗಿ ಸುಖದಿಂದ ಕಾಣುವ ಸ್ವರ್ಗಕ್ಕಿಂತ ಕತ್ತೆಯ ಹತಿಯಿಂದ ಸತ್ತುಕಾಣುವ ನರಕವೇತಕ್ಕೆ? ನಾನು ಹುಚ್ಚನಲ್ಲ. ಈ ಕತ್ತೆಯೊಡನೆ ಯುದ್ಧಮಾಡುವುದಕ್ಕಿಂತ ಪಲಾಯನವೇ ಉತ್ತಮ" ಎಂದು ಅತಿವೇಗಶಾಲಿಯಾದ ಉಚ್ಚೈಶ್ರವವೆಂಬ ತನ್ನ ಕುದುರೆಯನ್ನೇರಿ, ಮನೋವೇಗದಿಂದ ಹೊರಟುಹೋದನು. ಆಗಲೂ ಸ್ವರ್ಗದವರೆಗೂ ಹಿಂದಟ್ಟಿಹೋಗಿ ಧೇನುಕನು ಹಿಂದಿರುಗಿಬಂದನು ಎಂದರು. ಅದನ್ನು ಕೇಳಿ ಮುಗುಳುನಗೆಯಿಂದ ಕೂಡಿದ ಮುಖವುಳ್ಳವನಾದ ಕೃಷ್ಣನು ೪೦. "ಕತ್ತೆಯ ಜೋರಿಗೆ ನಾವು ಹಿಂಜರಿಯುವುದೇ? ಅಲ್ಲಿಗೆ ಹೋಗಿ ಒಳ್ಳೆಯ ತಾಳೆಯ ಹಣ್ಣುಗಳನ್ನು ತಿಂದು, ಸಂತೋಷದಿಂದ ದನಕರುಗಳ ಗುಂಪನ್ನೂ ಅಲ್ಲಿ ನಿಧಾನವಾಗಿ ತಿರುಗಾಡಿಸಿಕೊಂಡು ಬರುವೆನು" ವ॥ ಎಂದು ಹೋಗಿ ತಾಳೆಯ ವನವನ್ನು ಹೊಕ್ಕು ಕಳಿತ ಹಣ್ಣನ್ನು ಕಂಡು ಆಸೆಪಟ್ಟು ಇದನ್ನು ಹೊಡೆದು ಕೆಡವಲು ಇಲ್ಲಿ ಕಲ್ಲಾಗಲಿ ಕಟ್ಟಿಗೆಯಾಗಲಿ ಇಲ್ಲ, ಮರವನ್ನೇ ಅಲ್ಲಾಡಿಸಿ, ಹಣ್ಣನ್ನು ಬೀಳಿಸುವೆನು ಎಂದು ಬಲದಿಂದ ಅಲ್ಲಾಡಿಸಿದನು. ಆ ಕಳಕಳವನ್ನು

೧. ತಳೆದಂತಕನಂಗುರುಬಾಡು (ಕಗ) ತಳೆದಂತಕನಂಗುರುಬಾಡಿಸು (ಖ) ತಳೆದಂತಕನಂ ಗುಬುಬಾಡು (ಮೊಲಿ)

ರೌದ್ರರಸದ ಪೊನಲ್ ಪೊಱಪೊಣ್ಮಿ ಸೂಸಿ ಪರಿಯದಂತು ಕಟ್ಟೆಗಟ್ಟಿದ ಶಿಲಾಶಕಲಂಗಳಂತಿರ್ದ ಕುಲಿಶ ಕಠಿನದಶನಂಗಳಂ, ಜಗಮೆಲ್ಲಮನುಡುಗಿ ಸುಡುವ ಕಲ್ಪಾಂತಹುತವಹಂಗಿದಱ ಕಣ್ಬೇಡೆ ಬೀಡುದಾಣವೆಂಬಂತೆ ಕೆಂಪಡರ್ದು ಕೆಂಡಮುಂ ಕೇಸುರಿಯುಮನುಗುಟ್ವ ಕಣ್ಗಳುಂ ಲೋಕಪಾಲಕರ ನೊಸಲಕ್ಕರಮಂ ತೊಡೆವ ಸಮ್ಮಾರ್ಜನಿಯಿದೆಂಬಂತೆ ದೆಸೆದೆಸೆಗೆ ಬೀಸುವುದ್ದಂಡ ಬಾಳದಂಡಮುಂ, ಪ್ರಳಯಜಲಧರದ ಮೊೞಗಿಂದೆಱಗುವ ಬಱಸಿಡಿಲ ಬಳಗಕ್ಕಮಿದಱಕಂಠನಾಳಮೆ ನಿರ್ಗಮ ಮಾರ್ಗಮೆಂಬಂತೆ ಗರ್ಗರವಾಗಿ ನೆಗೆವ ಹೇಷಾವಿನಿರ್ಘೋಷಮುಂ ಸ್ವಪಕ್ಷರಾಕ್ಷಸರ್ ಪೊಱಮಡಲೋಸುಗಂ ಪಾತಾಳದಳದ ಮುಚ್ಚುಳನೊಡೆದು ಕಳೆದಪುದೆಂಬಂತೆ ಭೂತಳಮನಪ್ಪಳಿಸಿ ಪೊಯ್ವ ನಿಷ್ಠುರಶಫಟಂಕಮುಂ, ಭಯಂಕರಮಪ್ಪಿನಂ ಬಂದು ಇತ್ತ ಗೋಪಾಲಗಣಮನತ್ತ ದೇವಗಣಮಂ ಕಂಡು ಮಹಾಹೂಂಕಾರಂ ಮಾಡಿ ಭರದಿಂ ಕರ್ಚಿ ಮುಱಿದೊದೆವ ಸಮಯದೊಳ್ ಮುರಾಂತಕನದಱ ಪಿಂಗಾಲ್ಗಳನಡಸಿ ಪಿಡಿದು ತಾೞಪಣ್ಗಳನಿಟ್ಟು ಕೆಡಪಲಿದೊಂದುಪಾಯುಮಾದುದೆಂದು*

ಅರಿಜೀವಕ್ಕಂತಕಂ ಕಣ್ಣಿಡಲಹಿತಪುರಾಭ್ಯಂತರಂ ಗೋೞಿಡಲ್ ದೇ
ವರ ತಂಡಂ ರಾಗದಿಂ ಬೊಬ್ಬಿಡೆಯಿಡೆ ಖರನಿಂ ತಾೞಪಣ್ಣುಂ ರಿಪುಸ್ತ್ರೀ
ಯರ ಬಾಷ್ಪಂ ಬೀೞೆ ದೈತ್ಯಪ್ರತತಿ ಭಯರಸಾಂಭೋಧಿಯೊಳ್ ಬೀೞೆ ಕಂಸಂ
ಪಿರಿದುಂ ಬೆಂಬೀೞೆ ಬೀೞ್ತಂದುವು ಧರಮಗೊಡನಾ ಕೞ್ತೆಯುಂ ತಾೞಪಣ್ಣುಂ ೪೧

ಕೇಳಿ, ಧೇನುಕರಾಕ್ಷಸನು, ಅತಿಯಾಗಿ ರೇಗಿ, ಯಮನನ್ನು ಪ್ರತಿಭಟಿಸುವ ಕೋಣೆಗಳಂತಿದ್ದು ಘೋರವಾಗಿ ಶಬ್ದಮಾಡುವ ಮೂಗಿನ ಹೊಳ್ಳೆಗಳೂ, ಸುರನರರಕ್ತ ಮಾಂಸಗಳಿಂದ ನಿಮ್ಮನ್ನು ತೃಪ್ತಿಪಡಿಸುವೆನು ಹೆದರಬೇಡ ಎಂದು ಭೂತಪಿಶಾಚಿಗಳಿಗೆ ಅಭಯವನ್ನು ಕೊಟ್ಟ ಮೃತ್ಯುದೇವತೆಯ ಕೈಗಳಂತೆ ಬತ್ತಿರುವ ಹೊಳೆಯುವ ಕಿವಿಗಳೂ, ಬಾಯೆಂಬ ಮಡುವಿನ ಕಾದ್ರರಸವು ಹೊರಚೆಲ್ಲದಂತೆ ಕಟ್ಟೆಯನ್ನು ಕಟ್ಟಿದ ಕಲ್ಲಿಟ್ಟಿಗೆಯ ಸಾಲಿನಂತಿರುವ ವಜ್ರಕಠಿನವಾದ ಹಲ್ಲುಗಳೂ, ಜಗವೆಲ್ಲವನ್ನೂ ಗುಡಿಸಿ ಸುಡುವ ಪ್ರಳಯ ಕಾಲಾಗ್ನಿಗೆ ಇದರ ಕಣ್ಣುಗಳೇ ನಿವಾಸವೆನ್ನುವಂತೆ ಕೆಂಪೇರಿ, ಕೆಂಡವನ್ನೂ ಕೆಂಪುರಿಯನ್ನೂ ಉಗುಳುವ ಕಣ್ಣುಗಳೂ, ಲೋಕಪಾಲಕರ ಹಣೆಯ ಬರೆಹವನ್ನು ತೊಡೆಯುವ ಪೊರಕೆಯಂತೆ ಇದ್ದು ದಿಕ್ಕುದಿಕ್ಕಿಗೆ ಬೀಸುವ ಉದ್ದವೂ ಕ್ರೂರವೂ ಆದ ಬಾಲವೂ ಪ್ರಳಯಕಾಲದ ಮೋಡದ ಗುಡುಗಿನಿಂದ ಬೀಳುವ ಬರಸಿಡಿಲಿನ ಸಮೂಹಕ್ಕೂ ಇದರ ಕಂಠನಾಳವೆ ಹೊರಡುವ ದಾರಿಯೆಂಬಂತೆ ಗರ್ಗರವಾಗಿ ಹೊರಡುವ ಕಿರಿಚುಧ್ವನಿಯೂ ತನ್ನ ಕಡೆಯ ರಾಕ್ಷಸರು ಹೊರಡುವುದಕ್ಕೋಸ್ಕರ ಪಾತಾಳದ ಮುಚ್ಚಳವನ್ನೊಡೆದು ತಳೆಯುತ್ತಿದೆಯೆಂಬಂತೆ ಭೂಮಿಯನ್ನು ಅಪ್ಪಳಿಸಿ ಹೊಡೆಯುವ ಕಲ್ಲುಳಿಯಂತಿರುವ ಗೊರಸು ಭಯಂಕರವಾಗಿರಲು ಬಂದು, ಇತ್ತಕಡೆಯಲ್ಲಿ ಗೋಪಾಲರೂ ಅತ್ತಕಡೆ ದೇವತೆಗಳೂ ಇರುವುದನ್ನು ಕಂಡು, ಬಲವಾದ ಹೂಂಕಾರವನ್ನು ಮಾಡಿ, ರಭಸದಿಂದ ಕಚ್ಚಿ ಮುರಿದೊದೆಯಲು ಯತ್ನಿಸಿದಾಗ ಕೃಷ್ಣನು ಅದರ ಹಿಂಗಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ತಾಳೆಯ ಹಣ್ಣುಗಳನ್ನು ಹೊಡೆದು ಬೀಳಿಸಲು ಇದು ಒಂದು ಉಪಾಯವಾಯಿತೆಂದುಕೊಂಡು, ೪೧. ಆ ಕತ್ತೆಯಿಂದ ತಾಳೆಯ ಹಣ್ಣೂ ಶತ್ರು ಸ್ತ್ರೀಯರ ಕಣ್ಣೀರು ಬೀಳುತ್ತಿರಲು ಯಮನು ಅದರ ಜೀವದ ಮೇಲೆ ಕಣ್ಣಿಟ್ಟನು, ವೈರಿ ಪುರಾಂತರಾಳವೆಲ್ಲ ಗೋಳಿಡುತ್ತಿದ್ದಿತು. ದೇವತೆಗಳ

* ಈ ವಾಕ್ಯ ಅಪೂರ್ಣವಾಗಿದೆ. ಹಣ್ಣುಗಳತ್ತ ಧೇನುಕನನ್ನು ಎಸೆದನು ಎಂಬ ಅಂಶವು ಬಿಟ್ಟುಹೋಗಿದೆ (ರಂ).

ಪರುಷತರಸ್ವನೋನ್ಮುಖರನಂ ಖರನಂ ಖರನಂ ಮುರಾರಿ ಸಂ
ಹರಿಸೆ ಜಯಪ್ರಮೋದಸುಮನರ್ ಸುಮನರ್ ಸುಮನಸ್ಸುವೃಷ್ಟಿಯಂ
ಸುರಿಯೆ ಲತಾಂತದೊಳ್ಸದನಂ ಸದನಂ ಸದನಂಗಲಕ್ಷ್ಮಿಗಾ
ಗಿರೆ ತಳರ್ದಂ ಶುಭಾಚರಣದಿಂ ರಣದಿಂ ರಣದಿಂದ್ರಕಾಹಳಂ ೪೨

ವ॥ ಅಂತಲ್ಲಿಂ ತಳರ್ದು

ಎಳವುಲ್ಲಂ ಮೇಯಿಸುತುಂ
ತಿಳಿನೀರ್ಗುಡಿಯಿಸುತುಮುಯ್ಯು ತಣ್ಣೆಳಲೊಳ್ ಗೋ
ಕುಳಮಂ ನಿಲಿಸುತ್ತುಂ ಮಂ
ಗಳಚರಿತಂ ಕ್ರೀಡಮಾನನೆಸೆದಂ ಕೃಷ್ಣಂ ೪೩

ಪರಿವರಿ ಪಾಱುಂಬಳೆ ಮರ
ಗೆರಸಿ ಕುಳಿಲ್ಸೆಂಡು ಬಟ್ಟು ತಿಱಿಕಲ್ಲಟ್ಟುಂ
ಗರೆ ಹೊಣೆಗುಂಡೆಂಬಿವನಾ
ಮುರಹರನಲ್ಲಲ್ಲಿಗಾಡುತುಂ ಬರಲಿದಿರೊಳ್ ೪೪

ಗಗನೇಚರಿಯರ ಪದದಲ
ತೆಗೆವೊರೆದರುಣಂಗಳಾದುವಿದಱ ಫಲಶ್ರೀ
ಣಿಗಳೆನೆ ಪಣ್ಗಳ ಕೆಂಪಿಂ
ಸೊಗಯಿಸಿತುದ್ದಂಡಕಾಂಡಭಾಂಡೀರ ವಟಂ ೪೫

ತಂಡವು ಸಂತೋಷದಿಂದ ಅಬ್ಬರಿಸುತ್ತಿತ್ತು. ರಾಕ್ಷಸರ ಸಮೂಹವು ಭಯರಸ ಸಾಗರದಲ್ಲಿ ಬಿದ್ದಿತು. ಕಂಸನು ಬಹಳ ಹಿಂಜರಿದನು. ಆ ಕತ್ತೆ ರಕ್ಕಸನೂ ತಾಳೆಯ ಹಣ್ಣುಗಳೂ ಒಟ್ಟಿಗೆ ಕೆಳಕ್ಕೆ ಬಿದ್ದುವು. ೪೨. ಕಠೋರವಾಗಿ ಕಿರಿಚುವುದರಲ್ಲಿ ಬಹಳವಾದ ಶಕ್ತಿಯುಳ್ಳ ಆ ಕತ್ತೆ ರಕ್ಕಸನನ್ನು ಕೃಷ್ಣನು ಸಂಹರಿಸಿದ ಜಯದ ಸಂತೋಷಾತಿಶಯದಿಂದ ದೇವತೆಗಳು ಹೂಮಳೆಯನ್ನು ಸುರಿಸಿದರು-ಒಳ್ಳೆಯವಳಾದ ಕಾಮಲಕ್ಷ್ಮಿಗೆ ಹೂಗಳ ಉತ್ತಮಾಲಂಕಾರದ ನೆಲೆಯಾಯಿತು. ಕೃಷ್ಣನ ಶುಭಕಾರ್ಯಾಚರಣೆಯಿಂದ ಇಂದ್ರನ ಕಹಳೆಗಳು ಧ್ವನಿಗೆಯ್ಯುತ್ತಿರುವಲ್ಲಿ ಕೃಷ್ಣನು ಆ ಯುದ್ಧದಿಂದ ಹಿಂದಿರುಗಿ ವ॥ ಅಲ್ಲಿಂದ ನಡೆದು. ೪೩. ಮಂಗಳಚರಿತನಾದ ಕೃಷ್ಣನು ಗೋವುಗಳನ್ನು ಎಳೆಯ ಹುಲ್ಲನ್ನು ಮೇಯಿಸಿ, ತಿಳಿನೀರನ್ನು ಕುಡಿಸಿ ಬಿಸಿಲು ಹೆಚ್ಚಾದಾಗ ಮರಗಳ ತಂಪಾದ ನೆಳಲಿನಲ್ಲಿ ತಡೆದು ನಿಲ್ಲಿಸಿ, ವಿಹರಿಸುತ್ತ ಮೋಹಕನಾಗಿದ್ದನು. ೪೪. ಆ ಕೃಷ್ಣನು ಪರಿವರಿ (ಓಡಾಟ), ಹಾರುಬಳೆ, ಮರಗೆರಸಿ, ಕುಳಿಲ್ಸೆಂಡು, ಬಟ್ಟು, ಕಿರಿಕಲ್ಲು, ಅಟ್ಟುಂಗರೆ, ಹೊಣೆಗುಂಡು ಎಂಬ ಹಲವು ಬಗೆಯ ಆಟಗಳನ್ನು ಅಲ್ಲಲ್ಲಿ ಆಡುತ್ತಾ ಬರುವಾಗ ಎದಿರುಗಡೆಯಲ್ಲಿ ೪೫. ಖೇಚರಿಯರ ಕಾಲಿನ ಅರಗಿನ ರಸವು ಅಂಟಿಕೊಂಡುದರಿಂದ ಈ ಹಣ್ಣುಗಳು ಕೆಂಪಾಗಿವೆಯೋ ಎನ್ನುವಂತೆ ಬಹಳ ಕೆಂಪಾದ ಹಣ್ಣುಗಳುಳ್ಳ ಭಾಂಡಿರವೆಂಬ ಆಲದ ಮರವು ಸೊಗಾಸಾಗಿ ಕಾಣಿಸಿತು.

ವಸುಧೆಗೆ ಗುಡಿ ಕವಿದಂತೆ
ಣ್ದೆಸೆಯಂ ಬಾಸಣಿಸಿ ಶಿಖರಶಾಖೆಯ ನೆಬಿಲಿಂ
ಮಸುಳಿಸಿ [1]ಖಚರಶ್ರಾಂತಿಯ
ನೆಸೆದುದು ಭುವನೈಕಭವನದಂತಾ ಭೂಜಂ ೪೬

ವ॥ ಆ ಭಾಂಡೀರಮೆಂಬ ಮಹಾವಟವಿಟಪಿಯೊಳ್

ನೀಲೋತ್ಪಲ[2]ರುಚಿ ಧೃತ ವನ
ಮಾಲಂ ರಾಜೀವಲೋಚನಂ ಕ್ರೀಡಿಸಿದಂ
ಪೀಲಿಯ ತಲೆಸುತ್ತಿನ ಪ
ಚ್ಚೋಲೆಯ ಪೊಂಬಟ್ಟೆಯುಡೆಯ ಚೆಲ್ವೆಸೆವಿನೆಗಂ ೪೭

ಖೇಡನ ನರ್ತನ ಹಾಸ್ಯವ
ನಾಡಂಬರ ನಟನ ವೇಣುವಾದನಗೇಯ
ಕ್ರೀಡೆಗಳಿಂ ಗೋವುಗಳೊಡ
ನಾಡುತ್ತುಂ ರಾಮಕೃಷ್ಣರಿರ್ದವಸರದೊಳ್ ೪೮

ಛಿದ್ರಾನ್ವೇಷಿ ನಿಶಾಟಂ
ರೌದ್ರತ್ವಮನುಳಿದು ಗೋಪವೇಷದೆ ಬಂದಂ
ತದ್ರಮಣಿಯರ ಪೊರೆಗಮ್ಮೃ
ತದ್ರವನಿಭವೇಣುನಿನದನುಕ್ತಿಪ್ರೌಢಂ ೪೯

ಸ್ರುಕ್ಸುಭಗೋರಸ್ಸ್ಥಳನಂ
ದೃಕ್ಸೌಮ್ಯಶರೀರನಂ ಸವೇಣುಸ್ವನನಂ
ವಾಕ್ಸಾರನನಾಬಳ ವಿ
ಷ್ವಕ್ಸೇನರ್ ಗೋಪಬಂಧುಗೆತ್ತರ್ ಖಳನಂ ೫೦

೪೬. ಆ ಮರವು ಭೂಮಿಗೆ ಧ್ವಜವು ಕವಿದಿರುವಂತೆ ಎಂಟುದಿಕ್ಕನ್ನೂ ಆವರಿಸಿ ಮುಚ್ಚಿ ತುದಿ ಗೊಂಬೆಗಳ ನೆಳಲಿನಿಂದ ಖೇಚರರ ಆಯಾಸವನ್ನು ಕಡಿಮೆಯಾಗಿಸಿ, ಪ್ರಪಂಚಕ್ಕೆ ಒಂದು ಮನೆಯಾಗಿರುವಂತೆ ಚೆನ್ನಾಗಿದ್ದಿತು. ವ॥ ಭಾಂಡೀರವೆಂಬ ಆ ದೊಡ್ಡ ಆಲದ ಮರದಲ್ಲಿ ೪೭. ಕನ್ನೈದಿಲೆಯ ಕಾಂತಿಯುಳ್ಳವನೂ ವನಮಾಲೆಯನ್ನು, ನವಿಲುಗರಿಯ ಕಿರೀಟವನ್ನು, ಹಸಿಯೆಲೆಯ ಕಡುಕನ್ನೂ ಪೀತಾಂಬರವನ್ನೂ ಧರಿಸಿದವನೂ ಆಗಿ, ಒಪ್ಪುತ್ತಾ ಆ ಕೃಷ್ಣನು ಆಟವಾಡುತ್ತಿದ್ದನು. ೪೮. ಬಲರಾಮಕೃಷ್ಣರು, ಕುಣಿತ, ಹಾಸ್ಯ, ಆಡಂಬರವಿಲ್ಲದ ನಟನೆ, ಕೊಳಲು ನುಡಿಸುವುದು, ಗಾನ ಮೊದಲಾದವುಗಳಿಂದ ವಿನೋದಿಸುತ್ತಾ ಗೋವುಗಳ ಸಂಗಡ ತಿರುಗುತ್ತಿದ್ದರು. ೪೯. ಹೊಂಚುಕಾಯುತ್ತಿದ್ದ ಒಬ್ಬ ರಾಕ್ಷಸನು, ತನ್ನ ರೌದ್ರತೆಯನ್ನು ಮರಸಿ, ಅಮೃತವು ದ್ರವಿಸುವಂತೆ ಕೊಳಲನ್ನು ಬಾಜಿಸುತ್ತಾ ಚತುರನಾಗಿ ಮಾತನಾಡುತ್ತಾ ಗೋಪಾಲ ವೇಷದಿಂದ ಆ ಮನೋಹರರ ಹತ್ತಿರ ಬಂದನು. ೫೦. ಬಲರಾಮ ಕೃಷ್ಣರು - ಮಾಲೆಯಿಂದ ಒಪ್ಪುವ ಎದೆಯುಳ್ಳವನೂ ಸೌಮ್ಯಶರೀರನೂ ಕೊಳಲನ್ನು ಬಾಜಿಸುವವನೂ ಸಾರವಾದ ಮಾತನ್ನಾಡುವವನೂ ಆದ ಆ ನೀಚನನ್ನು

---

೧. ಖಚರಶ್ರುತಿಯ (ಕ) ೨. ಕೃತಧೃತ (ಖಗ)

ನಾಡೆ ಮನಮಂ ಪ್ರಬೋಧಿಸಿ
ಮಾಡೆ ಖಳಂ ಹರ್ಷಮಂ ಬಟಿಕ್ಕಂ ಹರಿಣ
ಕ್ರೀಡನಮೆಂಬುದನೆರೆವ
ಚ್ಚಾಡಲ್ ವಸುದೇವನಂದನರ್ ಬಗೆದಂದರ್ ೫೧

ಈ ವಸುದೇವತನೂಜರೊ
ಳಾವನೊಳಾಂ ಪೊಣರ್ವೆನೆಂದು ಹರಿಬಳರಂ ದು
ರ್ಭಾವದಿನೀಕ್ಷಿಸಿ ಹರಿಯ ಭು
ಜಾವಷ್ಟಂಭಕ್ಕೆ ಮನದೊಳಳ್ಕಿದನಸುರಂ ೫೨

ವ|| ಅಂತಾ ಪ್ರಳಂಬನೆಂಬ ದಾನವಂ ಕೃಷ್ಣನದ್ಭುತಪರಾಕ್ರಮನೆಂದು ಸಂಕರ್ಷಣವಧ ಪ್ರಯತ್ನದಿಂದಿರ್ಪಿನೆಗಮೆರಲೆ ಧೀಂಕನಾಡಲೆಂದಿರ್ಬರಿರ್ಬರೊಂದಾಗೆರೆವಚ್ಚಾಡುವಲ್ಲಿ ದಾಮೋದರಂ ಸುಧಾಧಾಮನೆಂಬ ಗೋಪಕುಮಾರಕನೊಡನೆ ರೌಹಿಣೇಯಂ ಮಾಯಾವೇಶನಾಗಿ ಗೋಪನಪ್ಪ ಪ್ರಳಂಬನೊಡನೆ ಮಿಕ್ಕ ಗೋಪಾಲರೆಲ್ಲರುಂ ಗೋಪಾಲರೊಡನೆ ಗೆಡೆಯಾಗಿ ಲಘುಕ್ರಮದೆ ಸಮಪಾದದಿಂ ಲಂಘಿಸಿ ಗೆಲ್ಲಂಗೊಂಡು ಭಾಂಡೀರಸ್ಕಂಧಮಂ ಗೊತ್ತುಮಾಡಿ ತಂತಮ್ಮೊಳಾಡಿ ಸೋಲ್ತವರ ಪೆಗಲೇಱಿಬರ್ಪ ಸಮಯದೊಳ್

ಯುಗಸಂವರ್ತನಕಾಲಕಾಲಜಲದಂ ಬಾಲೇಂದುವಂ ಪೊತ್ತಿದೇಂ
ನೆಗೆದತ್ತೆಂಬನಮದ್ಭುತಾಕೃತಿಯನಾಂತಾ ರಾಮನಂ ಪೊತ್ತುಕೊಂ
ಡಗಲುತ್ತುಂ ದಿಗಿಭಂಬರಂ ಬಳೆಯುತುಂ ನಾಕಂಬರಂ ಪಾಱುತುಂ
ಗಗನಾಗ್ರಂಬರಮಿಂತು ದಾನವಖಳಂ ಪೋತಂದನಾಟೋಪದಿಂ ೫೩

ಗೋಪಾಲರ ಬಂಧುವೆಂದೇ ಭಾವಿಸಿದರು. ೫೧. ಆ ರಾಕ್ಷಸನು ವಸುದೇವನ ಪುತ್ರರಿಬ್ಬರ ಮನಸ್ಸನ್ನು ಪ್ರೋತ್ಸಾಹಿಸಿ ಸಂತೋಷಗೊಳಿಸಿದನು. ಬಳಿಕ ಆ ರಾಮಕೃಷ್ಣರು ಅವನೊಡನೆ ಹರಿಣ ಕ್ರೀಡನ (ಜಿಂಕೆಯಾಟ)ವೆಂಬುದನ್ನು ಆಡಲು ಮನಸ್ಸು ಮಾಡಿದರು. ೫೨. ಆ ನೀಚ ರಾಕ್ಷಸನು ವಸುದೇವನ ಮಕ್ಕಳಿಬ್ಬರಲ್ಲಿ ಯಾರೊಡನೆ ಯುದ್ಧವನ್ನು ಮಾಡಲಿ? ಎಂದು ಯೋಚಿಸುತ್ತ ಅವರಿಬ್ಬರನ್ನೂ ದುರ್ಭಾವನೆಯಿಂದ ನೋಡುತ್ತಾ, ಕೃಷ್ಣನ ತೋಳ್ಬಲದ ಮಹಿಮೆಗೆ ಮನಸ್ಸಿನಲ್ಲೇ ಅಂಜಿದನು. ವ|| ಕೃಷ್ಣನು ಅದ್ಭುತ ಪರಾಕ್ರಮವುಳ್ಳವನೆಂದು ತಿಳಿದ ಆ ಪ್ರಳಂಬನೆಂಬ ರಾಕ್ಷಸನು, ಬಲರಾಮನನ್ನು ಕೊಲ್ಲಬೇಕೆಂಬ ಪ್ರಯತ್ನದಿಂದ ಇದ್ದನು. ಜಿಂಕೆನೆಗೆತವೆಂಬುದನ್ನು ಆಡಲೆಂದು, ಇಬ್ಬರಿಬ್ಬರೊಂದಾಗಿ ಆಡುವಲ್ಲಿ ಬಲರಾಮನೊಡನೆ ಆ ನೀಚನು ಆಡಲು ಆರಂಭಿಸಿದನು. ಬಳಿಕ ಕೃಷ್ಣನು ಸುಧಾಧಾಮನೆಂಬ ಗೋಪಾಲಬಾಲನೊಡನೆ ಆಡಲು ಆರಂಭಿಸಿದನು, ಮಿಕ್ಕ ಗೋಪಬಾಲರು ತಮ ತಮಗೆ ಸರಿಯಾದ ಬಾಲರೊಡನೆ ಇಬ್ಬಿಬ್ಬರೊಂದಾಗಿ ಆಡಲು ಪ್ರಾರಂಭಿಸಿದರು. ಲಘುವಾದ ರೀತಿಯಲ್ಲಿ ಸಮಪಾದದಲ್ಲಿ ನಿಂತು ನೆಗೆದು, ಸೋತವರು ಗೆದ್ದವರನ್ನು ಹೆಗಲಿನ ಮೇಲೇರಿಸಿಕೊಂಡು, ಗೊತ್ತುಮಾಡಿದ್ದ ಭಾಂಡೀರ ವೃಕ್ಷದ ಕೊಂಬೆಯವರೆಗೆ ಬರುವ ಸಮಯದಲ್ಲಿ ೫೩. "ಇದೇನು?! ಯುಗಪ್ರಳಯಕಾಲದ ಕಪ್ಪುಮೋಡವು ಬಾಲಚಂದ್ರನನ್ನು ಹೊತ್ತುಕೊಂಡು ಹಾರುತ್ತಿದೆ!" ಎನ್ನುವಂತೆ ಅದ್ಭುತಾಕಾರವನ್ನು ಧರಿಸಿ ಆ ಬಲರಾಮನನ್ನು ಹೊತ್ತುಕೊಂಡು ಗುಂಪನ್ನು ಅಗಲಿ

ಕುಡುದಾಡೆ ಮಿಂಚು ಕಿಸುಗಣ್
ಸಿಡಿಲೆನೆ ನೀಲಾಭ್ರಘಟೆಯೆ ಶರದದ ಮೇಘ
ಕ್ಕೆಡೆಗುಡದೆ ಮಗುಳಿಗಗನಮ
ನೆಡೆಗೊಂಡವೊಲಾಯ್ತು ದನುಜನಾಕೃತಿ ನಭದೊಳ್ ೫೪

ವ॥ ಆಗಳಾ ಮಹಾಕಾಯದೈತ್ಯಸ್ಕಂಧದೊಳಿರ್ದ ಸಂಕರ್ಷಣಂ ಕಿಂಕರ್ತವ್ಯತಾಮೂಢನಾಗಿ ಪೋಗುತ್ತುಮಿರೆ ಕಮಳಲೋಚನಂ ನೋಡಿ

ಎಲೆಲೆ ಮಹಾತ್ಮ ನೀನಿತರಬಾಲಕರಂತೆವೊಲಿಂತು ಪೋಗಿ ವಿ
ಹ್ವಲತೆಯನೇಕೆ ಮಾಡಿದಪೆ ನೀಂ ನೆನೆ ನಿನ್ನ ಮಹತ್ವಮಂ ಜಗಂ
ವಿಲಯಮನೆಯ್ದುವಾಪದದೊಳಂ ಲಯಮೆಯ್ದದ ಶೇಷಮೂರ್ತಿ ನೀಂ
ಹಲಧರ ಶೇಷನಾಮಮುದಱಿಂ ನೆಗಟ್ದಾಪ್ರಭು ನೀನೆ ನಿಶ್ಚಯಂ ೫೫

ಪದಿನಾಲ್ಕುಂ ಜಗಮಿರ್ಪುದಾರುದರದೊಳ್ ಶಕ್ರಾದಿದೇವರ್ ಮಹಾ
ಪದವೀಸಂಸ್ಥಿತರಾದರಾರ ದಯೆಯಿಂ ವಾರಾಶಿ ಮರ್ಯಾದೆದ
ಪ್ಪದದಾರಾಜ್ಞೆಯಿನಿಂದ್ವಿನರ್ ಬೆಳಪರಾರಾದೇಶದಿಂ ತದ್ರಮಾ
ಸ್ಪದನೆನ್ನಂ ತಳೆದಿರ್ಪನಂತ[1]ನಯನಂತಜ್ಞತ್ವಮೇನಕ್ಕುಮೇ ೫೬

ವ॥ ಎಂಬುದುಂ ಸ್ವಕೀಯಸಾಮರ್ಥ್ಯಮಂ ತಿಳಿದು ಸಪ್ತಾರ್ಣವಮೇಖಲಾವೃತ ವಸುಂಧರಾವಹ ಶಕ್ತಿಯುಕ್ತನಾಗಿ ನಕ್ತಂಚರನ ಮಸ್ತಕಮಂ ಮುಷ್ಟಿಯಿಂ ತಿವಿದು

ದಿಗ್ಗಜದವರೆಗೂ ಬಳೆದು, ಸ್ವರ್ಗದವರೆಗೂ ಹಾರಿದ ಆ ರಾಕ್ಷಸನೀಚನು ಆಡಂಬರದಿಂದ ಆಗ ಆಕಾಶದ ಕಡೆಯ ತನಕ ಹೋದನು. ೫೪. ಡೊಂಕಾದ ಕೋರೆಯ ಹಲ್ಲೇ ಮಿಂಚು, ಕೆಂಪಾದ ಕಣ್ಣೇ ಸಿಡಿಲು, ಎನ್ನುವಂತಿರಲು ನೀಲಮೇಘ ಸಮೂಹವೇ ಶರತ್ಕಾಲದ ಮೋಡಕ್ಕೆ ಅವಕಾಶಕೊಡದೆ ಮತ್ತೆ ಆಕಾಶವನ್ನು ಆಕ್ರಮಿಸಿದೆಯೆನ್ನುವಂತೆ ಆ ರಾಕ್ಷಸ ಆಕಾರವು ಆಕಾಶದಲ್ಲಿ ಕಾಣಿಸುತ್ತಿದ್ದಿತು. ವ॥ ಆಗ ಆ ಅದ್ಭುತ ದೇಹದ ರಾಕ್ಷಸನ ಹೆಗಲಿನ ಮೇಲಿದ್ದ ಬಲರಾಮನು ಏನು ಮಾಡಬೇಕೆಂಬುದನ್ನರಿಯದವನಾಗಿ ಇರುವುದನ್ನು ನೋಡಿದ ಕೃಷ್ಣನು-೫೫. "ಎಲೈ ಮಹಾತ್ಮನೇ ಅಣ್ಣಾ! ನೀನು ಇತರ ಸಾಮಾನ್ಯ ಬಾಲಕರಂತೆ ಹೀಗೆ ಹೋಗಿ ಚಿಂತೆಯನ್ನೇಕೆ ಮಾಡುತ್ತಿರುವೆ? ನೀನು ನಿನ್ನ ಮಹತ್ವವನ್ನು ಭಾವಿಸಿಕೊ. ಜಗತ್ತು ಪ್ರಳಯವನ್ನು ಹೊಂದುವ ಸಮಯದಲ್ಲೂ ನಾಶವಾಗದ ಶೇಷಮೂರ್ತಿ ನೀನು. ಆದುದರಿಂದಲೇ ನಿನಗೆ ಶೇಷ (ಉಳಿದಿರುವವನು) ಎಂಬ ಹೆಸರು ನಿಜವಾಗಿ ಪ್ರಸಿದ್ಧವಾಗಿದೆ. ೫೬. ಹದಿನಾಲ್ಕು ಲೋಕವೂ ಯಾರ ಉದರದಲ್ಲಿದೆಯೋ ಇಂದ್ರಾದಿ ದೇವತೆಗಳು ಯಾರ ದಯೆಯಿಂದ ಮಹಾಪದವಿಯಲ್ಲಿರುವುದೋ ಯಾರ ಆಜ್ಞೆಯಿಂದ ಸಮುದ್ರವು ಎಲ್ಲೆಯನ್ನು ಮೀರದಿರುವುದೋ ಸೂರ್ಯಚಂದ್ರರು ಯಾರ ಆಜ್ಞೆಯಿಂದ ಬೆಳಗುವರೋ ಆ ಲಕ್ಷ್ಮೀನಿಲಯನಾದ ನನ್ನನ್ನು ಧರಿಸುವ ಅನಂತನೇತ್ರನು ನೀನು. ಆ ಸ್ಮರಣೆಯು ನಿನಗೆ ಬರುವುದಿಲ್ಲವೊ!" ವ॥ ಎನ್ನಲು ತನ್ನ ಸಾಮರ್ಥ್ಯವನ್ನರಿತ ಬಲರಾಮನು ಸಪ್ತಸಮುದ್ರವೆಂಬ ವಡ್ಯಾಣವನ್ನು ಧರಿಸಿದ ಭೂಮಿಯನ್ನು ಧರಿಸುವ ಶಕ್ತಿಯುಳ್ಳವನಾಗಿ

---

೧. ನಿನಗಿಂತಜ್ಞತ್ವ (ಮೊಲಿ)

ಕುಲಿಶವಿಘಾತಮೆಂಬ ದೃಢಮುಷ್ಟಿವಿಘಾತದಿನುಣ್ಮಿ ಪಾಯ್ದಿನಂ
ತಲೆಯ ಮಿದುಳ್ಗೆ ಸಱುತಲೆಯುಮಟ್ಟೆಯೊಳಾಟ್ಟಿನಮಟ್ಟೆಯುಂ ಧರಾ
ತಲದೊಳುರುಳ್ವಿನಂ ತಲಮುಮಾಖಳನಟ್ಟೆಯ ಬಿಣ್ಪಿನಿಂ ರಸಾ
ತಲಕಿಟಿವನ್ನಮಂತು ಮುಸಲಾಯುಧದಿಕ್ಕಿದನಾ ಪ್ರಳಂಬನಂ ೫೭

ವ॥ ಆಗಳ್

ಅನಿಮೇಷಾಹಿತನಾಸ್ಯಗಹ್ವರವಿನಿರ್ಯಲ್ಲೋಹಿತಂ ಕಾಕಾಗ್ರ
ಧನಿಕಾಯಚ್ಛದನಾವಗೂಹಿತಮೆನಲ್ ಬಿಟ್ಟಿರ್ದನಂ ಗೆಲ್ದು ನಿಂ
ದನನೊಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ ತೇಜೋಧಿರಾ
ಮನನುಗ್ರಾರಿವಿರಾಮನಂ ವಿಜಯಭೃಂಗಾರಾಮನಂ ರಾಮನಂ ೫೮

ವ॥ ಅಂತು ವಿಜಯಮಂಗಳಂ ನೆಗಟೆ ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದಮೆ ನಿತ್ಯೋತ್ಸವಮಾಗೆ ಸುಖದಿಂದಿರ್ಪನ್ನೆಗಂ

ತುಱುಗಿರ್ದ ನೀಲಮೇಘದ
ತುಱುಗಲ್ ನೆಱೆ ಪಿಂಗಿ ಪೋಗೆ ತೆಱಪಾದುದಱೆಂ
ದೆಱಗಿದಳಿಪಟಲಿ ಪೋಗಲ್
ತೆಱಪಾದುತ್ಪಲವನಂಬೊಲಿರ್ದುದು ಗಗನಂ ೫೯

ಲವಣಾರ್ಣವಮಂ ದುಗ್ಧಾ
ರ್ಣವದೊಳ್ದೆರೆಮಾಲೆ ಮುಸುಕಿದಂತಿರೆ ನೀಳ
ಚ್ಛವಿಯೆನಿಪ ಘನಾಧ್ವಮನಡ
ರ್ದುವು ಶರದದ ಮುಗಿಲ್ಗಳೆಸೆದುವತಿಧವಳಂಗಳ್ ೬೦

ರಾಕ್ಷಸನ ತಲೆಯನ್ನು ಮುಷ್ಟಿಯಿಂದ ತಿವಿದನು. ೫೭. ವಜ್ರಾಯುಧದ ಹೊಡೆತದಂತಹ ದೃಢಮುಷ್ಟಿಯ ಗುದ್ದಿನಿಂದ ತಲೆಯೊಡೆದು, ಮೆದುಳಿನ ಧಾರೆಯು ಹಾರಿತು. ಆ ಮೆದುಳಿನ ಕೆಸರಿನಿಂದ ತಲೆ ದೇಹದ ಅಟ್ಟೆಯಲ್ಲಿ ಮುಳುಗಿತು. ಅಟ್ಟೆಯು ಭೂತಳಕ್ಕುರುಳಿತು. ಭೂತಳವು ಆ ನೀಚನ ದೇಹದ ಭಾರದಿಂದ ಪಾತಾಳಕ್ಕಿಳಿಯಿತು. ಹೀಗೆ ಬಲರಾಮನು ಆ ನೀಚನಾದ ಪ್ರಲಂಬನನ್ನು ಕೊಂದನು. ೫೮. ಆ ದೇವದ್ವೇಷಿಯ ಗುಹೆಯಂತಿರುವ ಬಾಯಿಯಿಂದ ಹೊರಡುವ ರಕ್ತವು ಹದ್ದು ಕಾಗೆಗಳ ರೆಕ್ಕೆಗಳಿಂದ ಮುಚ್ಚಲ್ಪಡುವಂತೆ ಕೊಂದು ಬೀಳಿಸಿ ಗೆದ್ದು ಅವನ ಬಂಧನದಿಂದ ಮುಕ್ತನಾಗಿ ಬಂದು ನಿಂತ ತೇಜೋಭಿರಾಮನೂ ಅಗ್ರಜನೂ ಆದ ಬಲರಾಮನನ್ನು ಕೃಷ್ಣನು ಅತಿ ಪ್ರೀತಿಯಿಂದ ನೋಡಿದನು. ವ॥ ಹಾಗೆ ವಿಜಯ ಮಂಗಳವಾದ ನಂತರ ನಂದಕುಮಾರನು ಗೋಪಾಲನ ವಿನೋದವೇ ನಿತ್ಯ ಸಂತೋಷಕರವಾಗಿರಲು ಸುಖದಿಂದ ಇದ್ದನು. ೫೯. ಒತ್ತಾಗಿ ಹರಡಿದ್ದ ನೀಲಮೇಘದ ಗುಂಪು, ಪೂರ್ತಿಯಾಗಿ ಹೋಗಿ ತೆರಪಾದುದರಿಂದ ಆಕಾಶವು, ಮುತ್ತಿದ್ದ ತುಂಬಿಗಳ ಗುಂಪು ಹೊರಟು ಹೋಗಿ ತೆರಪಾದ ನೈದಿಲೆಯ ವನದಂತೆ ಕಾಣಿಸುತ್ತಿದ್ದಿತು. ೬೦. ಉಪ್ಪಿನ ಕಡಲನ್ನು ಹಾಲಿನ ಕಡಲಿನ ಚೆನ್ನಾಗಿರುವ ಅಲೆಗಳ ಸಾಲು ಮುಚ್ಚಿಕೊಂಡಂತೆ ನೀಲಕಾಂತಿಯುಳ್ಳದಾಗಿದ್ದ ಆಕಾಶವನ್ನು ಶರತ್ಕಾಲದ ಬಹಳ ಬಿಳುಪು ಮೋಡಗಳು

ರವಿಹಯಲಾಲಾಪಿಂಡಂ
ದಿವಿಜನದೀಫೇನಮಾಲೆ ರಾಹುವ ನಿರ್ಮೋ
ಕವಿದೆಂಬಿನಮಲ್ಲಲ್ಲಿಗೆ
ಧವಳಾಂಬುದಮೆಸೆದುದಂಬರದೊಳ್ ೬೧

ದರಿಯಂ ಮೀಱಿರ್ದ ನೀರೊತ್ತಿಟಿತರೆ ತೊಱೆಗೆಲ್ಲಂ ಪುಟಿಲ್ವಜ್ಜೆ ಮೆಯ್ದೋ
ಱೆರೆ ಸೈವಾಳಂ ಮಳಲ್ದಿಂಟೆಗಳೆಸೆಯೆ ಶರತ್ತಾಪಸಂಪತ್ತಿಯಿಂದಂ
ತೆರೆಗಳ್ ನೀರ್ವೊಕ್ಕವೊಲ್ ತೀರದ ತರುಪಟಲಚ್ಛಾಯೆ ನೀರೊಳ್ ಬೆಡಂಗಾ
ಗಿರೆ ತತ್ತ್ವಾವಾಸಚಿತ್ತಕ್ಕೆಣೆಯೆನೆ ತಿಳಿದತ್ತಂದು ಸಿಂಧುಪ್ರತಾನಂ ೬೨

ಬಾಲೆಯರುರದೊಳ್ ಕಿಱುಮೊಲೆ
ಮೇಲುದು ನಸುದೊಲಗೆ ತೋರ್ಪ ತೆಱದಿಂ ಸರಸೀ
ಮಾಲೆಯೊಳೆಸೆದುವು ನವಪ
ತ್ರಾಲಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ ೬೩

ಮಾನಸದಿಂ ಸಿತಾಂಬುಜಶತಂ ತಳರ್ವಂತೆವೊಲೆಯ್ದೆ ನೀರದ
ಸ್ಥಾನದೊಳಿರ್ದ ಬೆಳ್ಮುಗಿಲ ಮಕ್ಕಳವೊಲ್ ನಿಜಪಾಂಡುದೇಹಸಂ
ತಾನಕವಭ್ರದೊಳ್ ಮಿಱುಗೆ ಬಂದೆಱಗಿತ್ತು ಕೊಳಂಗಳೊಳ್ ತಟೀ
ಫೇನವಿತಾನವಾತ್ಮರುಚಿಯೊಳ್ ತಡಮಾಗೆ ಮರಾಳಮಂಡಳಂ ೬೪

ಆಕ್ರಮಿಸಿ ಹೊಳೆದವು. ೬೧. ಆಗ ಬಿಳಿಯ ಮೋಡಗಳ ಗುಂಪು ಆಕಾಶದಲ್ಲಿ ಅಲ್ಲಲ್ಲಿ ಇದ್ದು, ಸೂರ್ಯನ ಕುದುರೆಗಳ ಬಾಯಿನ ನೊರೆಯ ಉಂಡೆಯೋ, ದೇವಗಂಗಾ ನದಿಯ ನೊರೆಯು ಸಾಲೋ, ರಾಹುವಿನ ಪೊರೆಯೋ ಎನ್ನುವಂತೆ ಹೊಳೆಯಿತು. ೬೨. ನದಿಗಳಲ್ಲೆಲ್ಲಾ ದಡವನ್ನು ಮೀರಿದ್ದ ನೀರಿನ ಉಬ್ಬರವು ಇಳಿದು ಹೋಯಿತು. ಮರಳ ಮೇಲೆ ಹೆಜ್ಜೆಯ ಗುರುತುಗಳು ಕಾಣಿಸಿದವು. ಪಾಚಿಯೂ ದಿಣ್ಣೆಗಳೂ ಚೆನ್ನಾಗಿ ಕಾಣಿಸಿದವು. ಶರತ್ಕಾಲದ ತಾಪದ ಹೆಚ್ಚಿಕೆಯಿಂದ ತಡೆಯಲಾರದೆ ನೀರಿನ ಮೇಲೆ ಇದ್ದ ತೆರೆಗಳು ನೀರಿನೊಳಕ್ಕೆ ಹೋದುವೋ ಎನ್ನುವಂತೆ ಮರಗಳ ನೆಳಲು ನೀರಿನಲ್ಲಿ ಬೆಡಗನ್ನು ಪಡೆದಿದ್ದಿತು. ಹೀಗಾಗಿ ನದಿಗಳೆಲ್ಲವೂ ತತ್ತ್ವಜ್ಞನ ಚಿತ್ತದಂತೆ ತಿಳಿಯಾಗಿದ್ದವು ೬೩. ನವಯುವತಿಯರ ಎದೆಯ ಮೇಲಿನ ಸೆರಗು ಸ್ವಲ್ಪ ಜಾರಿದಾಗ ಕಿರುಮೊಲೆಯು ಕಾಣಿಸುವಂತೆ ಸರೋವರಗಳಲ್ಲಿ ಹೊಸ ಕಮಲದೆಲೆಗಳ ನಡುವೆ ಕಮಲದ ಮೊಗ್ಗುಗಳು ಕಾಣಿಸಿದವು. ೬೪. ಮಾನಸಸರೋವರದಿಂದ ನೂರಾರು ತಾವರೆಯ ಹೂಗಳು ಚಲಿಸುವಂತೆಯೂ ಆಕಾಶದಲ್ಲಿರುವ ಬಿಳಿಯ ಮೋಡಗಳ ಮಕ್ಕಳಂತೆಯೂ ತಮ್ಮ ಬಿಳಿಯ ದೇಹಗಳು ಹೊಳೆಯುತ್ತಿರುವಲ್ಲಿ ಹಂಸಗಳ ಗುಂಪುಗಳು ಕೊಳಗಳಿಗೆ ದಡದ ನೊರೆಯ ಉಂಡೆಗಳು ತಮ್ಮಂತೆಯೇ ಹೊಳೆಯುತ್ತಿರುವಲ್ಲಿ ಬಂದು ಕುಳಿತವು.

ಇವು ಕಂದರ್ಪಂಗೆ ದೋರ್ದರ್ಪವನಳಿಗಟಿಪಂ ಗಂಧವಾಹಂಗೆ ಸೌಗಂ
ಧವನಬ್ಜಂಗೂರ್ಜಿತಾಟೋಪವನಡರಿಸುಗುಂ ತಮ್ಮ ಪುಷ್ಪೇಷುವಿಂ ತ
ಮ್ಮ ವಿಕಾಸೋಲ್ಲಾಸದಿಂ ತಮ್ಮತಿಪರಿಮಳದಿಂ ತಮ್ಮ ಚೆಲ್ವಿಂದೆನಲ್ ಜಾ
ತಿ ವನೇಜಾತಪ್ರಸೂನಾವಳಿಯನಿಟೆಸಿ ಸಂಪತ್ತುವೆತ್ತಿರ್ದುದತ್ತಂ ೬೫

ಪಿಂಗಳಮಾದ ನೆಲ್ಲತೆನೆಯಂ [1]ನಸುಗರ್ಚಿದ ರಕ್ತಚಂಚು ಪ
ಕ್ಷಂಗಳ ಶಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ ರೋ
ದೋಂಗಣಮೆಂಬ ಪಟ್ಟಣದೊಳೊಪ್ಪುವ ಬೆಳ್ಮುಗಿಲೆಂಬ ಬಳ್ಳಿಮಾ
ಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ ೬೬

ಐರಾವಣಕುಲಸಂಭವ
ವಾರಣಘಟೆ ನೆರೆದು ಪತ್ತಿ ಶೀಕರಜಲಮಂ
ಧಾರಿಣಿಗೆ ಸೂಸಿದಪುವೆನೆ
ಶಾರದಘನಘಟೆಯಿನೆಱಗಿದುವು ಬೆಳ್ಸರಿಗಳ್ ೬೭

ವಾರಿಧಿಯೊಳುಳ್ಳ ನೀರಂ
ಕಾರ ಮುಗಿಲ್ ಕಱೆದು ಪೋಗಲುಟಿದಾ ಮುತ್ತಂ
ಶಾರದಮೇಘಾವಳಿ ತಂ
ದೋರಂತಿರೆ ಕಱೆದುವೆನಿಸಿದುವು ಬೆಳ್ಸರಿಗಳ್ ೬೮

೬೫. ಜಾಜಿಯ ಹೂಗಳು ತಮ್ಮ ಬಾಣದಿಂದ ಮನ್ಮಥನಿಗೆ ತೋಳಿನ ದರ್ಪವನ್ನೂ ಉಲ್ಲಾಸದಿಂದ ಅರಳಿ ತುಂಬಿಗಳಿಗೆ ಆಸೆಯನ್ನು ಹೆಚ್ಚಾದ ವಾಸನೆಯಿಂದ ವಾಯುವಿಗೆ ಸುಗಂಧವನ್ನೂ ಚೆಲುವಿನಿಂದ ಚಂದ್ರನಿಗೆ ಆಡಂಬರವನ್ನೂ ಹೆಚ್ಚಿಸಿ, ವನದ ಎಲ್ಲಾ ಹೂಗಳಿಗಿಂತಲೂ ಮೇಲಾಗಿ ಅಧಿಕ ಸಂಪತ್ತನ್ನು ಪಡೆದಿದ್ದವು. ೬೬. ಹೊಂಬಣ್ಣದ ಬತ್ತದ ತೆನೆಯನ್ನು ಕಚ್ಚಿಕೊಂಡಿರುವ ಕೆಂಪಾದ ಕೊಕ್ಕೂ ಹಸಿರು ಬಣ್ಣದ ರೆಕ್ಕೆಗಳೂ ಮನೋಹರವಾಗಿ ಹಾರುವ ಗಿಳಿಗಳ ಸಾಲು ಗಗನಾಂಗಣವೆಂಬ ಪಟ್ಟಣದಲ್ಲಿ ಚೆನ್ನಾಗಿರುವ ಬೆಳ್ಳಿಮೋಡವೆಂಬ ಲತಾಗೃಹಗಳ ಚಿನ್ನ ಕೆಂಪು ಪಚ್ಚೆಗಳ ತೋರಣ ಮಾಲೆಯಂತೆ ಸೊಗಸಾಗಿದ್ದಿತು. ೬೭. ಐರಾವತದ ವಂಶದಲ್ಲಿ ಹುಟ್ಟಿದ ಆನೆಗಳು ಗುಂಪು ಸೇರಿ, ತುಂತುರುಹನಿಯನ್ನು ಭೂಮಿಗೆ ಸುರಿಸುತ್ತಿವೆಯೆನ್ನುವಂತೆ ಶರತ್ಕಾಲದ ಮೋಡದಿಂದ ತುಂತುರಹನಿ ಸುರಿಯಿತು. ೬೮. ಮಳೆಗಾಲದ ಮೋಡವು ಸಮುದ್ರದಲ್ಲಿದ್ದ ನೀರನ್ನು ತಂದು ಸುರಿದುಹೋಯಿತು. ಶರತ್ಕಾಲದ ಮೋಡಗಳು ಅಲ್ಲಿ ಉಳಿದಿದ್ದ ಮುತ್ತುಗಳನ್ನು ತಂದು ಸುರಿಸುತ್ತಿವೆಯೆನ್ನುವಂತೆ ಬಿಳಿಯ ತುಂತುರುಹನಿಯು ಸುರಿಯಿತು.

---

೧. ನಲಿ (ಖಗ)

ನೀರಧಿಯ ನೀರ್ಗೆ ಪೋಪಾ
ಕಾರ ಮುಗಿಲ್ ಮರಳವೆಂದು ಶರದಭ್ರಂಗಳ್
ಸಾರಿರ್ದ ಗಗನಗಂಗೆಯ
ನೀರನೆ ಕಱೆವಂತಿರೆಱಗಿದುವು ಬೆಳ್ಸರಿಗಳ್ ೬೯

ಶರದಭ್ರಕುಸುಮತರುಗಳ್
ಮರುದಾಹತಿಯಿಂ ಪರಾಗಪಾಂಸುಪ್ರಸರಂ
ಬೆರಸರಲಂ ಸುರಿದಪುವೆನೆ
ಸುರಿವ ಬಿಸಿಲ್ಮೞೆಗಳೆಸೆದು [1]ವಭ್ರಾಂಗಣದೊಳ್ ೭೦

ಮದಚಳೆಯಾಗಿ ನೀರ್ಮೊಗೆವ ಖೇಚರಕಾಂತೆಯ ಹಸ್ತದಿಂ [2]ಬೞೆ
ಲ್ದಿದ ನವರೌಪ್ಯಕುಂಭಮೆ ತರಂಗಿತನಾಕತರಂಗಿಣೀಪ್ರವಾ
ಹದೊಳಿದೆ ಕಾಣಲಾದಪುದೆನೆಲ್ ನಿಱೆಗೊಂಡ ಶರದ್ಘನಾಳಿಯಿಂ
ಪುದಿದನಿಳಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ ೭೧

ಶರದಭ್ರಮೆಂಬ ಬೆಳ್ದಾ
ವರೆಗಳ ಮಕರಂದರೇಣು ಪವನಾಹತಿಯಿಂ
ಪರೆದು ಪಸರಿಸಿದುದೆನೆ ಪಿಂ
ಜರರುಚಿ ರಂಜಿಸಿದುದಂದು ಕಂಜಪ್ರಿಯನಾ ೭೨

ಕಡಲಂ ಸುರಾಸುರರ್ ಕಡೆ
ವೆಡೆಯೊಳ್ ತೆರೆತೆರೆಗಳೊಳಗೆ ಪುಟ್ಟಿದ ಚೆಲ್ವಿಂ
ಗೆಡೆಗೊಂಡು ನಿಱೆಮುಗಿಲ್ಗಳ
ನಡುವೆ ಕರಂ ಮಿಱುಗಿದತ್ತು ಹಿಮಕರಬಿಂಬಂ ೭೩

೬೯. ಸಮುದ್ರದ ನೀರಿಗೆ ಹೋಗುವ ಮಳೆಗಾಲದ ಮೋಡಗಳು ಹಿಂದಿರುಗುವುದಿಲ್ಲವೆಂದು ಶರತ್ಕಾಲದ ಮೋಡಗಳು, ಹತ್ತಿರದಲ್ಲಿದ್ದ ಆಕಾಶಗಂಗೆಯ ನೀರನ್ನೇ ಕರೆಯುತ್ತಿದೆಯೆನ್ನುವಂತೆ ಬಿಳಿಯ ತುಂತುರುಮಳೆ ಭೂಮಿಗೆ ಸುರಿಯಿತು. ೭೦. ಶರತ್ಕಾಲವೆಂಬ ಹೂವಿನ ಮರಗಳು ಗಾಳಿಯ ಹೊಡೆತದಿಂದ ಹೂಧೂಳಿನಿಂದ ಕೂಡಿದ ಹೂವನ್ನು ಸುರಿಸುತ್ತಿವೆಯೆನ್ನುವಂತೆ ಆಕಾಶಾಂಗಳದಲ್ಲಿ ಬಿಸಿಲು ಮಳೆಗಳು ಕಾಣಿಸಿದವು. ೭೧. ಮದಿಸಿ, ಚಂಚಲೆಯಾಗಿ ನೀರನ್ನು ಮೊಗೆಯುತ್ತಿದ್ದ ಖೇಚರಕಾಂತೆಯ ಕಯ್ಯಿಂದ ಜಾರಿದ ಬೆಳ್ಳಿಯ ಕೊಡವೇ ಅಲೆಗಳಿಂದ ತುಂಬಿದ ದೇವಗಂಗೆಯ ಪ್ರವಾಹದಲ್ಲಿ ಇದೋ ಕಾಣಿಸುತ್ತಿದೆಯೆನ್ನುವಂತೆ ನಿರಿಗೊಂಡ ಶರತ್ಕಾಲದ ಮೋಡಗಳ ಸಮೂಹದಿಂದ ತುಂಬಿದ ಆಕಾಶದಲ್ಲಿ ಸೂರ್ಯಮಂಡಲವು ಹೊಳೆಯುತ್ತಿದ್ದಿತು. ೭೨. ಶರತ್ಕಾಲದ ಮೋಡವೆಂಬ ಬಿಳಿಯ ತಾವರೆಯ ಮಕರಂದ ರೇಣುವು ಗಾಳಿಯ ಹೊಡೆತದಿಂದ ಹರಡಿ ವ್ಯಾಪಿಸಿದೆಯೆನ್ನುವಂತೆ ಸೂರ್ಯನ ಪಿಂಜರವರ್ಣಕಾಂತಿಯು ಹೊಳೆಯುತ್ತಿದ್ದಿತು. ೭೩. ದೇವಾಸುರರು ಕ್ಷೀರಸಮುದ್ರವನ್ನು ಕಡೆದಾಗ ತೆರೆ ತೆರೆಗಳ ನಡುವೆ ಹುಟ್ಟಿದಾಗಿನ, ತನ್ನ ಚೆಲುವನ್ನೇ ಪಡೆದು, ನಿರಿಮೋಡಗಳ ನಡುವೆ ಚಂದ್ರಮಂಡಲವು ಚೆನ್ನಾಗಿ

---

೧. ಅಭ್ರಾಗಮಮೊಳ್ (ಕಖಗ) ೨. ಬಿರ್ದುಂಕಿದ (ಕ) ಕಬಿಲ್ದಿದ (ಖ) ಬರ್ದುಂಕಿದ (ಗ)

ಮೃಡಹಾಸದ್ಯುತಿಯಂತೆ ಕಂತುಶರದಂತಿರ್ದಚ್ಚವೆಳ್ದಿಂಗಳಂ
ಕಡುದಣ್ಪಿಂಗೆಡೆಗೊಂಡಿದೊಂದು ಬಿಸಿಲೆಂದಾಶ್ಚರ್ಯದಿಂದಂ ಜನಂ
ನಡೆ ನೋಡುತ್ತೆ ಮಹೋತ್ಪಳೋತ್ಪಳನಿಮೇಷೋನ್ಮೇಷಚಿಹ್ನಂಗಳಿಂ
ಗಡ ಬೆಳ್ದಿಂಗಳಿದೆಂಬುದೇವೊಗಟ್ವೆ[1]ನೂರ್ಜಚ್ಛ್ರೀಯ ಬೆಳ್ದಿಂಗಳಾ ೨೪

ರಾಜಿಸುತಿರ್ದುವಂದರುಣಪಂಕಜಪಾಂಡುಪಯೋಜನೀಳ ನೀ
ರೇಜಕದಂಬಕಂಗಳ ಪೊದಟ್ದಿರವಂ ಪರೆಪುತ್ತೆ ಷಟ್ಪದೀ
ರಾಜಿಯ ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀ
ರಾಜನ ಲೀಲೆಗೆಂದು ರತಿ ತೀವಿದ ಬಣ್ಣವುರಂಗಳಂದದಿಂ ೨೫

**ವ॥ ಅಂತು ವಿಮಳಾಬ್ಜವಿಭವಂ ನಭದೊಳಂ ನಳಿನಿಯೊಳಂ ಗೋಸಮೃದ್ಧಿ ಗೋಕುಲದೊಳಂ ಮಾರ್ತಂಡಮಂಡಳದೊಳಂ; ಕುಸುಮಶಿಳೀಮುಖಪ್ರಚಾರಂ ವಿರಹಿತತಿಯೊಳಂ ಮಾಳತಿಯೊಳಂ ಮದೋದಯಂ ಮದನನೊಳಂ ಮತ್ತಗಜದೊಳಂ ಅನುಕೂಲವೃತ್ತಿ ನದಿಯೊಳಂ ನಲ್ಲರೊಳಂ ಪ್ರಸನ್ನಭಾವಂ ಜಲದೊಳಂ ಜನದೊಳಮಾದ ಶರತ್ಸಮಯದೊಳ್**

ಹೊಳೆಯಿತು. ೨೪. ಶರತ್ಕಾಲದ ಅತಿಸ್ವಚ್ಛವಾದ ಬೆಳದಿಂಗಳನ್ನು ಏನೆಂದು ಹೊಗಳಲಿ? ಈಶ್ವರನ ಅಟ್ಟಹಾಸದ ಕಾಂತಿಯಂತೆಯೂ ಮನ್ಮಥಬಾಣದಂತೆಯೂ ಬಹಳ ಬೆಳ್ಳಗಿರುವ ಬೆಳುದಿಂಗಳನ್ನು ಜನರು ಹೆಚ್ಚುತಂಪನ್ನು ಪಡೆದಿರುವ ಇದು ಒಂದು ತೆರನಾದ ಬಿಸಿಲು ಎಂದು ಆಶ್ಚರ್ಯದಿಂದ ನೋಡುತ್ತಿದ್ದರು. ಕಮಲವು ಮೊಗ್ಗಾಗಿ ನೈದಿಲೆಯು ಅರಳುವುದರಿಂದ ಮಾತ್ರ ಇದು ಬೆಳುದಿಂಗಳೆಂದು ತಿಳಿದುಕೊಳ್ಳಬೇಕಾಗಿದ್ದಿತು. ೨೫. ಆಗ ಕೆಂದಾವರೆ ಬೆಳ್ದಾವರೆ ನೀಲೋತ್ಪಲಗಳ ಸಮೂಹದಿಂದ ತುಂಬಿ, ತುಂಬಿಗಳ ಬಣ್ಣದಿಂದ ಕೂಡಿದ ಕೊಳಗಳು ಕಾಮರಾಜನ ಆರತಿಯ ಲೀಲೆಗಾಗಿ ರತಿಯು ಬೇರೆ ಬೇರೆ ಬಣ್ಣಗಳ ಗೆರೆಗಳಿಂದಲಂಕರಿಸಿದ ಬಣ್ಣವುರ ತಟ್ಟೆಗಳಂತೆ ಕಾಣುತ್ತಿದ್ದವು. ವ॥ ಹಾಗೆ ವಿಮಳಾಬ್ಜವಿಭವವು ನಭದಲ್ಲೂ ನಳಿನಿಯಲ್ಲೂ ೧. ನಿರ್ಮಲ ಚಂದ್ರ ವೈಭವವು ಆಕಾಶದಲ್ಲಿ ೨. ಪರಿಶುದ್ಧವಾದ ಬಿಳಿಯ ತಾವರೆಗಳ ವೈಭವವು ಕಮಲವನದಲ್ಲಿ, ಗೋಸಮೃದ್ಧಿ ಗೋಕುಲದಲ್ಲೂ ಸೂರ್ಯಮಂಡಲದಲ್ಲೂ ಕುಸುಮಶಿಳೀಮುಖ ೧. ದನಕರುಗಳ ಸಮೃದ್ಧಿ ಗೋಕುಲದಲ್ಲಿ ೨. ಕಿರಣಗಳ ಸಮೃದ್ಧಿ ಸೂರ್ಯಮಂಡಲದಲ್ಲಿ ಪ್ರಚಾರ, ವಿರಹಿಗಳಲ್ಲೂ ಜಾಜಿಯಲ್ಲೂ ೧. ಪುಷ್ಪಬಾಣಗಳ ಪ್ರಯೋಗವು ಅಗಲಿದ ಪ್ರಿಯರ ಗುಂಪಿನಲ್ಲಿ ೨. ಹೂಗಳಿಗೆ ತುಂಬಿಗಳ ಮುತ್ತುವಿಕೆಯು ಜಾಜಿಯಲ್ಲಿ, ಮದೋದಯವು ಮನ್ಮಥನಲ್ಲೂ ಆನೆಗಳಲ್ಲೂ ಅನುಕೂಲವೃತ್ತಿ ನದಿಯಲ್ಲೂ ನಲ್ಲರಲ್ಲೂ ೧. ದಡವನ್ನನುಸರಿಸಿ ಹರಿಯುವಿಕೆ ನದಿಗಳಲ್ಲಿ ೨. ಅನುಕೂಲವಾದ ಕಾರ್ಯವು ಪ್ರಿಯರಲ್ಲಿ, ಪ್ರಸನ್ನಭಾವವು ಜಲದಲ್ಲೂ ಜನದಲ್ಲೂ ೧. ಪರಿಶುದ್ಧ ಮನಸ್ಕರಾಗಿರುವುದು ಜನರಲ್ಲಿ ೨. ತಿಳಿಯಾಗಿರುವಿಕೆ ನೀರಿನಲ್ಲಿ, ಆದ ಶರತ್ಸಮಯದಲ್ಲಿ-

---

೧. ಊರ್ಜಶ್ರೀಯ ಬೆಳ್ದಿಂಗಳಂ (ಮೊ ಅ)

ನಂದಾದಿಗೋಪರಿಂದು ಪು
ರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್
ಮಂದರಧರನೀಕ್ಷಿಸಿ ಸಂ
ಕ್ರಂದನಮಹಮೇನಿಮಿತ್ತಮೆಮಗಿದು ಚಿತ್ರಂ ೭೬

ವ|| ಎಂದು ಬೆಸಗೊಳ್ವುದುಂ

ತೀವಿದ ಗಟ್ಟಿಪಾಲೊದವು ಗೋಧನದೊಳ್ ನೆಗಟ್ಟುಂ ತೃಣಾದಿ ಸ
ಸ್ಯಾವಳಿ ಪೆರ್ಚುಗುಂ ನದನದೀಕುಳದೊಳ್ ಪರಿವರ್ಧಿಕುಂ ಜಗ
ಜ್ಜೀವನಜೀವನಂ ಮೞೆಗಳಿಂ ಮೞೆಯಂ ಕಱೆವಂ ಹಿತಾರ್ಥಮೀ
ಭೂವಳಯಕ್ಕೆ ಶಕ್ರನದುಕಾರಣಮರ್ಚಿಪುದಿಂದ್ರನಂ ಜನಂ ೭೭

ವ|| ಎಂದು ನುಡಿದ ನಂದಗೋಪನ ಮಾತಂ ಕೇಳ್ದು ಪುರುಹೂತಂಗೆ ಕೋಪಮಂ ಪುಟ್ಟಿಸಲ್ವೇಡಿ ಕೃಷ್ಣನಿಂತೆಂದಂ: ನಮಗೀ ದಿವಿಜರಾಜನಿಂ ಪ್ರಯೋಜನಮಿಲ್ಲ, ಗೋಪಾಲರಾಗಿ ವನದೊಳ್ ಚರಿಯಿಸುವ ನಮಗೆ ವನಾನ್ವಿತಂಗಳಪ್ಪ ಗಿರಗಳುಂ ಗೋಧನಗಳುಂ ಪರಮಗತಿಯುಮಿಷ್ಟದೈವತಮುಮಲ್ಲದಿಲ್ಲ. ಈ ಗಿರಿಗಳ್ ಕಾಮರೂಪಿಗಳ್ ತಂತಮ್ಮ ತರುತೃಣಚ್ಛೇದದಿಂದಪರಾಧಂ ಮಾಡಿದ ನಮ್ಮ ಮಂದಿಗಳಂ ಸಿಂಹ ಶರಭಭೇರುಂಡ ಶುಂಡಾಲ ಶಾರ್ದೂಲ ಸರ್ಪಾದಿ ಕ್ರೂರರೂಪಂಗಳಿಂ ಬಾಧಿಸದಂತು ಶಾಂತಿಯಂ ಮಾಡಲ್ವೇೞ್ಪುದಿನ್ನೆಮಗೆ ಗಿರಿಯಜ್ಞಮುಂ ಗೋಯಜ್ಞಮುಂ ಪ್ರಧಾನಮಂಗಳಂ. ಅದು ಕಾರಣದಿಂ

ಘನರಸಭಕ್ಷ್ಯಾನ್ನಗಳಿಂ
ಘನರಸಗಂಧಾಕ್ಷತೌಘದಿಂದಂ ನೆಗೞೆಂ
ಅನುಮತಿಯೊಳೆ ಗಿರಿಯಜ್ಞಮಿ
ದನುಮತಿಯೆನಗೆಂದು ಚಕ್ರಿ ಮತ್ತಿಂತೆಂದಂ ೭೮

೭೬. ನಂದನೇ ಮೊದಲಾದ ಗೋಪರು ಇಂದು ಇಂದ್ರೋತ್ಸವವೆಂದು ಹರ್ಷದಿಂದ ಸಂಭ್ರಮಗೊಳ್ಳುತ್ತಿರುವುದನ್ನು ನೋಡಿ, ಕೃಷ್ಣನು "ನಮಗಿದು ಆಶ್ಚರ್ಯವಾಗಿದೆ. ಇಂದ್ರೋತ್ಸವವು ಏತಕ್ಕಾಗಿ?" ವ|| ಎಂದು ಕೇಳಿದನು. ೭೭. "ಇಂದ್ರನು ಈ ಭೂಮಂಡಲಕ್ಕೆ ಹಿತಾರ್ಥವಾಗಿ ಮಳೆಯನ್ನು ಕರೆಯುವನು. ಅದರಿಂದ ಹುಲ್ಲೇ ಮೊದಲಾದ ಸಸ್ಯಗಳು ಸಮೃದ್ಧಿಯಾಗುವುವು, ನಮ್ಮ ಗೋಧನದಲ್ಲಿ ಗಟ್ಟಿಯಾದ ಹಾಲು ಸಮೃದ್ಧಿಯಾಗುತ್ತದೆ. ನದನದಿಗಳಲ್ಲಿ ಜಗಜ್ಜೀವನಕ್ಕೆ ಅವಶ್ಯವಾದ ನೀರು ದೊರೆಯುತ್ತದೆ. ಆದುದರಿಂದ ಜನರು ಇಂದ್ರನನ್ನು ಪೂಜಿಸಬೇಕು" ವ|| ಎಂದು ನುಡಿದ ನಂದಗೋಪನ ಮಾತನ್ನು ಕೇಳಿ, ಕೃಷ್ಣನು ಇಂದ್ರನಿಗೆ ಕೋಪವುಂಟಾಗುವಂತೆ ಮಾಡುವುದಕ್ಕಾಗಿ ಹೀಗೆಂದನು "ನಮಗೆ ಈ ಇಂದ್ರನಿಂದ ಪ್ರಯೋಜನವಿಲ್ಲ. ಗೋಪಾಲರಾಗಿ ವನದಲ್ಲಿ ಸಂಚರಿಸುವ ನಮಗೆ ವನಕ್ಕೆ ಸಂಬಂಧಿಸಿದ ಗಿರಿಗಳೂ ಗೋಧನಗಳೂ ಪರಮಗತಿಯೂ ಇಷ್ಟದೈವವೂ ಅಲ್ಲದೆ ಬೇರೆ ಇಲ್ಲ. ಈ ಗಿರಿಗಳು ಕಾಮರೂಪಿಗಳು. ತಮ್ಮ ತಮ್ಮ ಹುಲ್ಲು ಮರಗಳ ಛೇದನದಿಂದ ಅಪರಾಧಮಾಡಿದ ನಮ್ಮ ಜನರನ್ನು ಸಿಂಹ ಶರಭ ಭೇರುಂಡ ಗಜವ್ಯಾಘ್ರಸರ್ಪಾದಿ ಕ್ರೂರರೂಪಗಳು ಬಾಧಿಸದಂತೆ ಶಾಂತಿಯನ್ನು ಮಾಡಬೇಕು. ಇನ್ನು ನಮಗೆ ಗಿರಿಯಜ್ಞವೂ ಗೋಯಜ್ಞವೂ ಪ್ರಧಾನವಾದ ಮಂಗಳ. ಆದುದರಿಂದ, ೭೮. ಘನರಸ ಭಕ್ಷ್ಯಗಳಿಂದಲೂ ರಸಗಂಧಾಕ್ಷತೆಗಳಿಂದಲೂ ಮನಸ್ಸಿಟ್ಟು ಗಿರಿಯಜ್ಞವನ್ನುಮಾಡಿ. ಇದು ನನಗೆ ಸಮ್ಮತವಾದುದು, ಎಂದು ಮತ್ತೆ ಹೇಳಿದನು.

ಆನ್ನಿಮಗೆ ಪುತ್ರನಪ್ಪೊಡ
ಮೆನ್ನೊಳ್ ನಿಮಗಕ್ಕಱುಳ್ಳೊಡಂ ನಿಮಗೆನ್ನಿಂ
ದನ್ನಂ ಪುಟ್ಟುವೊಡಂ ನೀ
ಮೆನ್ನೆಂದುದುಗೆಯ್ವುದೆನಗೆ ಮಾಳ್ಪುದು ಮುದಮಂ ೭೯

ವ॥ ಎಂಬುದುಂ, ನಂದಗೋಪಪ್ರಭೃತಿಗೋಪವೃದ್ಧರಿಂತೆಂದರ್ : ಎಲೆ ಕೃಷ್ಣ ನಿನ್ನ ರೂಪಮಂ, ಸೌಷ್ಠವಪ್ರತಿಷ್ಠೆಯಂ, ಪ್ರಭಾವಪ್ರಕರ್ಷಮಂ, ಶೃಂಗಾರಗೌರವಮಂ, ವಿಲಾಸವಿನ್ಯಾಸಮಂ, ವೇಷವಿಶೇಷಮಂ, ಸತ್ಪ್ರವರ್ತನೆಯಂ, ವಿಕ್ರಮಾಧಿಕ್ಯಮಂ, ವಿವೇಕಾತಿರೇಕಮಂ, ನೋಡಲ್ ನೀಂ ಪರದೈವಕಳಾಸ್ವರೂಪನಾಗಿ ತೋರ್ಪೆ, ನಿನ್ನಭಿಮತಾರ್ಥಮನೆ ಮಾಡಿ ಕೃತಾರ್ಥರಪ್ಪೆಮಗೆ ನೀಂ ದರಸ್ಮಿತಪ್ರಸನ್ನ ವದನನಪ್ಪ ಕಾರ್ಯಮೇ ಕರಣೀಯಮೆಂದು ಮಹೇಂದ್ರಮಹಮಂ ಮಾಣ್ದು ಗಿರೀಂದ್ರಮಹ ಮನೊಡಂಬಟ್ಟು, ತನ್ಮಹಾಮಹೋಚಿತ ಪರಿಕರಂಗಳಂ ಗೋವರ್ಧನನಗರಕ್ಕೆ ನಡೆಯಿಸಿ ಗೋಪಾಲ ಬಾಲಕರೆಲ್ಲರುಂ ಕೈಗೈದು ಗೋಧನಂಗಳಂ ಶೃಂಗಾರಂಗೆಯ್ಸಿ ನೆರೆದು ಬರ್ಪುದೆಂದು ಗೋಕುಲದೊಳಿಯ್ದಿ ಸಾಱಿಸುವುದುಂ

ತನತನಗೊಲವಿಂ ಕೈಗೆ
ಯ್ವ ನಗರಾರ್ಚನಪರಿಕರಂಗಳಂ ನೆರಪುವ ಗೋ
ಧನಮನಲಂಕರಿಸುವ ಘೋ
ಷನಿವಾಸಿಗಳಿಂದಮಾಯ್ತು ಕಳಕಳನಿನದಂ ೮೦

೭೯. ನಾನು ನಿಮಗೆ ಪುತ್ರನಾಗಿದ್ದು ನನ್ನಲ್ಲಿ ನಿಮಗೆ ಅಕ್ಕರೆಯಿದ್ದರೆ ನನ್ನಿಂದ ನಿಮಗೆ ಅನ್ನವು ಹುಟ್ಟುವುದಾದರೆ ನಾನು ಹೇಳಿದುದನ್ನು ನೀವು ಮಾಡಬೇಕು. ನನಗೆ ಸಂತೋಷವನ್ನುಂಟುಮಾಡಬೇಕು." ವ॥ ಎಂದನು. ನಂದಗೋಪನೇ ಮೊದಲಾದ ಗೋಪವೃದ್ಧರು ಹೀಗೆಂದರು- "ಎಲೈ ಕೃಷ್ಣ; ನಿನ್ನ ರೂಪವನ್ನೂ, ಅಂಗಸೌಷ್ಠವವನ್ನೂ ಪ್ರಭಾಧಿಕ್ಯವನ್ನೂ, ಶೃಂಗಾರ ಗೌರವವನ್ನೂ, ವಿಲಾಸ ರೀತಿಯನ್ನೂ, ವೇಷ ವಿಶೇಷವನ್ನೂ ಸತ್‌ಪ್ರವರ್ತನೆಯನ್ನೂ, ವಿಕ್ರಮಾಧಿಕ್ಯವನ್ನೂ ವಿವೇಕಾತಿಶಯವನ್ನೂ ನೋಡಿದರೆ ನೀನು ಪರದೈವತಕಳಾಸ್ವರೂಪನಾಗಿ ಕಾಣಿಸುವೆ. ನಿನಗೆ ಅಭಿಮತವಾದ ಕಾರ್ಯವನ್ನೇ ಮಾಡಿ ಕೃತಾರ್ಥರಾಗುವ ನಮಗೆ ನೀನು ಮುಗುಳುನಗುವುಳ್ಳ ಮುಖದಿಂದ ಪ್ರಸನ್ನನಾಗುವ ಕಾರ್ಯವೇ ಮಾಡಬೇಕಾದುದು ಎಂದು, ಮಹೇಂದ್ರೋತ್ಸವವನ್ನು ಬಿಟ್ಟು ಗಿರೀಂದ್ರೋತ್ಸವವನ್ನೇ ಒಡಂಬಟ್ಟರು. ಆ ಮಹೋತ್ಸವಕ್ಕೆ ಉಚಿತವಾದ ಪರಿಕರಗಳನ್ನು ಗೋವರ್ಧನಗಿರಿಗೆ ಸಾಗಿಸಿದರು. ಗೋಪಬಾಲಕರೆಲ್ಲರೂ ಅಲಂಕೃತರಾಗಿ ಗೋಧನಗಳನ್ನೂ ಶೃಂಗರಿಸಿ ಕೂಡಿಕೊಂಡು ಬರಬೇಕೆಂದು, ಗೋಕುಲದಲ್ಲಿ ಸ್ಪಷ್ಟವಾಗಿ ಸಾರಿಸಿದರು. ಆದರಿಂದ ೮೦. ಆಸಕ್ತಿಯಿಂದ ತಾವು ತಾವು ಅಲಂಕರಿಸಿ ಕೊಳ್ಳುವ, ಗಿರಿಪೂಜೆಗೆ ಬೇಕಾದ ಪರಿಕರಗಳನ್ನು ಕೂಡಿ ಹಾಕುವ ಮತ್ತು ಗೋವುಗಳನ್ನು ಅಲಂಕರಿಸುವ ಗೋಕುಲನಿವಾಸಿಗಳ ಕಳಕಳಧ್ವನಿಯು ಆರಂಭವಾಯಿತು.

ವ|| ಆಗಳಾಸಂಭ್ರಮಮಾನ್ತ ಜನಧ ಕಳಕಳದಿಂ ದಳಂಬಡೆದು ಭೋರ್ಗರೆದು[1]ಲಿವ ಕೊರಲ ಗಂಟೆಯುಮುರದ ಗೆಜ್ಜೆಯುಮಂದಂಬಡೆಯೆ; ಪೊಳೆವ ಪಂಚವರ್ಣಿಗೆಯ ಪಟ್ಟೆಯ ತೋರದೊಂಗಲುಂ, ಬೇವಿನ ದಂಡೆಯು, ನವಿಲ ಕಂಠದ ಬಾಸಿಗಮು[2]ಮಲುಗೆ; ವಾರಮುಂ, ಉಱಚೆಲ್ಲಿಯುಂ, ನೇವಣಮುಂ ಲೀಲೆವಡೆಯೆ; ಮೆಯ್ದೊಡೆದ ಹರಿದ್ರಾದ್ರವಮುಂ, ಕುಂಕುಮ ಪಂಕಮುಂ ಬಿಂಕಂಬಡೆಯೆ; ಶೃಂಗಾರದಿಂ ಭಂಗಿವಡೆದು ವೃಷ ಬಲೀವರ್ದಧ್ವಾನಮುಂ, ಗೋವತ್ಸಕದಂಬ ಹಂಭಾರವಮುಂ ವಿಜೃಂಭಿಸೆ ಗೋಲೋಕಮವನಿಗವತರಿಸಿದಂತೆ ಗೋಮಂಡಲಮೆ ಗೋಮಂಡಲಾದ್ವೈತಮಾದಂತಸಂಖ್ಯಾತಮೆನಿಸಿ ಮುಂದುವರಿವ ತುಱುಗಳುಮನವಱ ಪಿಂದೆ ಶಂಖರಸದರಿದಾಳದ ಪಸುರ ತಿಗುರೊಳಂ, ಮೃಗಮದಘುಸೃಣಚಂದನಚರ್ಚೆಯೊಳಂ, ನಿಂಬಮಾಲೆಯ ಕಿಱುವೀಲಿಯ ಪೆಂಚೆಯದ ಕೇಶಬಂಧದೊಳಂ, ಶಾರದೈಕವನ್ಯಕುಸುಮದ [3]ಚಿತ್ರಹಾರ ಕೇಯೂರ ಕರ್ಣಪೂರದ ಭೂಷಣಂಗಳೊಳಂ, ಪಟ್ಟಪಟ್ಟಾವಳಿಯ ಗಂಡುಡಿಗೆಯೊಳವೊಸೆದು ಪಸದನಂಗೆಯ್ದು ಸಂಮಾರ್ಜಿತೋಜ್ಜ್ವಲದಶನನಿಚಯತಾಂಬೂಲ ಚರ್ವಣಭರಿತಕಪೋಲರುಂ ಗೋನಿಯೋಗದಂಡಧರರುಮಾಗಿ, ಕೆಲಬರ್ ಕೋಡ ಕಾಳೆಗಳನೂದುತ್ತುಂ, ಕೆಲಬರ್ ಪಿಂಡೊಡೆದು ಪರಿವ ಬಲವದ್ದರ್ಪಯುಕ್ತ ವತ್ಸಂಗಳ ಬಟೆವಿಡಿದು ಪರಿಯುತ್ತುಂ, ಕೆಲಬರ್ ಮಾರ್ತಳಂಬೊಯ್ದಾರ್ದು ವೃಷಭಂಗಳಂ ಕೆಂಗೋಲಸ್ಸಗಿಸುತ್ತುಂ ಬರೆ, ಗೋಪಾಲರಂ ಕಂಡತಿಮುದಿತಹೃದಯನಾಗಿ ಮುಕುಂದಂ

ವ|| ಹಾಗೆ ಆ ಸಡಗರವನ್ನು ಪಡೆದ ಜನದ ಕಲ ಕಲದಿಂದ ಹೆಚ್ಚಿ ಭೋರ್ಗರೆದು ಶಬ್ದ ಮಾಡುವ ಕೊರಲ ಗಂಟೆಯೂ ಉತ್ತಮವಾದ ಗೆಜ್ಜೆಯೂ ಅಂದವಾಗಿದ್ದುವು. ಹೊಳೆಯುವ ಐದು ಬಣ್ಣದ ಪಟ್ಟೆಯ ದಪ್ಪ ಕುಚ್ಚೂ ಐದು ಬಣ್ಣವನ್ನು ಬಳಿದ ಗಂಗೆದೊಗಲೂ ಬೇವಿನ ಸೊಪ್ಪಿನ ದಂಡೆಯೂ ನವಿಲಿನ ಕಂಟದಂತಿರುವ ಬಾಸಿಂಗವೂ ಅಲಗೆ ಹುಲ್ಲಿನ ಜಾತಿಯೂ ಎದೆಗೆ ಕಟ್ಟಿಕೊಂಡ ಕನ್ನಡಿಯೂ ದೊಡ್ಡ ಹೂಮಾಲೆಯೂ ರಂಜಿಸುತ್ತಿದ್ದವು. ಮೈಗೆ ಲೇಪಿಸಿದ ಅರಿಸಿನ ಕುಂಕುಮ ದ್ರವವು ಬಿಂಕಪಡೆದಿದ್ದಿತು. ಅಲಂಕಾರದಿಂದ ಸೊಗಸು ಪಡೆದ ಗೂಳಿ ಎತ್ತುಗಳ ಧ್ವನಿಯೂ ದನ ಕರುಗಳ ಹಂಭಾಧ್ವನಿಯೂ ಹೆಚ್ಚಾಗಿದ್ದಿತು. ಗೋಲೋಕವೇ ಭೂಮಿಗೆ ಅವತರಿಸಿದಂತೆಯೂ ಗೋಮಂಡಲವೇ ಭೂಮಂಡಲ ಸ್ವರ್ಗ ಮಂಡಲವಾದಂತೆಯೂ ಅಸಂಖ್ಯಾತವಾಗಿ ನಡೆಯುತ್ತಿರುವ ತುರುಗಳೂ ಅವುಗಳ ಹಿಂದೆ ಶಂಖರಸ ಅರಿದಳದ ಹಸುರಿನ ಕಸ್ತೂರಿಯ ಕುಂಕುಮ ಕೇಸರಿಯ ಗಂಧವನ್ನು ಲೇಪಿಸಿಕೊಂಡು, ಬೇವಿನ ಮಾಲೆಯ ಚಿಕ್ಕ ನವಿಲುಗರಿಯ ಕೂದಲ ಗಂಟಿನಿಂದಲೂ ಶರತ್ಕಾಲದಲ್ಲಿ ಮಾತ್ರವೇ ಇರುವ ಕಾಡುಹೂಗಳ ಸರಗಳ ಮತ್ತು ನವಿಲುಗರಿಯ ಕಿವಿಯಾಭರಣಗಳ ಅಲಂಕಾರದಿಂದಲೂ, ಪಟ್ಟೆಯ ಬಣ್ಣದ ಪಟ್ಟೆಯ ಗಂಡುಡಿಗೆಯಿಂದಲೂ ಒಪ್ಪುತ್ತ ಹಲ್ಲನ್ನು ಚೆನ್ನಾಗಿ ಉಜ್ಜಿ ತಾಂಬೂಲವನ್ನು ಅಗಿಯುತ್ತ ಅದರಿಂದ ತುಂಬಿದ ಕೆನ್ನೆಉಳ್ಳವರೂ ದನಗಳನ್ನು ಕಾಯಲು ತಕ್ಕ ಕೋಲನ್ನು ಹಿಡಿದವರೂ ಆಗಿ ಕೆಲವರು ಕೊಂಬುಕಹಳೆಗಳನ್ನೂದುತ್ತಲೂ ಕೆಲವರು ಹಿಂಡನ್ನು ಬಿಟ್ಟು ಓಡುವ ಕೊಬ್ಬಿದ ಗೂಳಿ ಎತ್ತು ಕರು ತುರುಗಳನ್ನು ಅನುಸರಿಸಿ ಮಂದೆಗೆ ಸೇರಿಸಲು ಓಡುತ್ತಲೂ ಕೆಲವರು ಚಪ್ಪಾಳೆ ತಟ್ಟಿ, ಅಬ್ಬರಿಸಿ, ಗೂಳಿಗಳನ್ನು ರೇಗಿಸುತ್ತಲೂ ಬರುತ್ತಿರಲು, ಅವರನ್ನು

---

೧. ಆ ಉಲಿವಘಂಟೆಯುಮುರಗೆಜ್ಜೆಯ (ಮೊಅ) ೨. ಅಲಗೆವಾರಮುಂ ಚೆಲ್ಲಿಯುಂ (ಕಖಗ) ೩. ಚಿತ್ರಪೂರ (ಕಗ)

ನಗಯಜ್ಞೋಪಯೋಗ್ಯದ್ರವ್ಯಂಗಳಂ ತಂದು ಮುಂದೆ ನಿಂದಿರ್ದ ನಂದಗೋಪಪುರೋಗಮರನನು ರಾಗದಿಂ ನೋಡಿ

ದಿವ್ಯಸ್ರಗ್ದಿವ್ಯಾಂಬರ
ದಿವ್ಯಾಲಂಕಾರ ದಿವ್ಯಲೇಪನಭಾಸ್ವ
ದ್ದಿವ್ಯಾಕೃತಿಯಂ ಧರಿಯಿಸಿ
ದಿವ್ಯಗಂಭೀರೋಕ್ತಿಯಿಂದಮಾಗಳ್ ಪೇಳ್ದಂ ೮೧

ಪೂಜಿಸಿಮೆನ್ನನಿಲ್ಲಿಗಧಿದೇವತೆಯಾನೆನುತದ್ರಿಯಲ್ಲಿ ನಿಂ
ದಾ ಜಲಜಾಕ್ಷನಂ ನೆರೆದು ಘೋಷಜನಂ ವಿವಿಧೋಪಚಾರದಿಂ
ಪೂಜಿಸಿದತ್ತು ಬಿತ್ತರಿಸೆ ಗೋಪಕದಂಬಕವೊಳ್ಳೊಳಲ್ಗಳಂ
ಬಾಜಿಪ ಕೋಡ ಕಾಳೆಗಳನೂದುವ ಬೊಬ್ಬೆಬಿದಾರ್ವ ಸಂಭ್ರಮಂ ೮೨

ವ|| ಅಂತು ವಿಕೀರ್ಯಮಾಣಪ್ರಸವಧವಳಾಕ್ಷತಾಸಾರಪ್ರಕಾಶವಿಶದಮುಂ, ಕಾಳಾಗರು ಧೂಪೋದ್ದಾಮ ಧೂಮಸ್ತೋಮಜಲಜೀಮೂತಸಮುದಯಶ್ಯಾಮಳಮುಂ, ನೀರಾಜನದೀಪ ಕಳಿಕಾಶ್ರೇಣೀಶೋಣಾಂಶುಬಾಲಾತಪಪ್ರಸರಪಿಶಂಗಮುಂ, ಯಕ್ಷಕರ್ದಮಕರ್ದಮೀಭೂತ ಧಾತು ಸ್ಥಲಸ್ಥಗಿತಮುಂ, ವಿಚಿತ್ರವಾದಿತ್ರನಿನದಘನಗರ್ಜಿತೋರ್ಜಿತಮುಂ ವಿವಿಧೋಪದಂಶಭಕ್ಷ್ಯಾ ವ್ರತಾನಪ್ರತ್ಯಂತಪರ್ವತ ಪರೀತಮುಂ, ಲೇಹ್ಯಚೋಷ್ಯಪಾಯಸದ್ರೋಣೀಕಟಾಹಸನದರಾಶಿ ದೀರ್ಘಿಕಾಸಂಕುಲವಿಶಂಕಟಮುಂ, ಆಜ್ಯ ನಿರ್ಝರಪರಂಪರಾಪರೀತಮುಂ, ದುಗ್ಧಕುಂಭ

ನೋಡಿ ಕೃಷ್ಣನು ಸಂತುಷ್ಟನಾದನು. ಪೂಜೋಪಯುಕ್ತವಾದ ದ್ರವ್ಯಗಳನ್ನು ತಂದು ಮುಂದೆ ನಿಂತಿರುವ ನಂದಗೋಪನೇ ಮೊದಲಾದವರನ್ನು ಅನುರಾಗದಿಂದ ನೋಡಿ, ೮೧. ಕೃಷ್ಣನು ದಿವ್ಯವಾದ ಮಾಲಾವಸ್ತ್ರ ಗಂಧಭೂಷಣಾದಿಗಳಿಂದ ಭೂಷಿತನಾಗಿ ದಿವ್ಯಾಕೃತಿಯನ್ನು ಧರಿಸಿ, ದಿವ್ಯಗಂಭೀರೋಕ್ತಿಯಿಂದ ಹೀಗೆ ಹೇಳಿದನು. ೮೨. "ನನ್ನನ್ನು ಪೂಜಿಸಿರಿ, ಇಲ್ಲಿಗೆ ನಾನು ಅಧಿದೇವತೆ" ಎಂದು ಹೇಳುತ್ತ ಬೆಟ್ಟದಲ್ಲಿ ನಿಂತ ಆ ಕಮಲಾಕ್ಷನನ್ನು ಗೋಕುಲದ ಜನರೂ, ಗೋಪ ಸಮೂಹವೂ ಸೇರಿ ಚೆನ್ನಾಗಿ ಕೊಳಲನ್ನು ಬಾಜಿಸುವ ಕೋಡಿನ ಕಹಳೆಗಳನ್ನೂದುವ ಬೊಬ್ಬಿಟ್ಟು ಅಬ್ಬರಿಸುವ ಸಡಗರವು ಹೆಚ್ಚಾಗುತ್ತಿರಲು ಬಗೆ ಬಗೆಯ ಉಪಚಾರದಿಂದ ಪೂಜಿಸಿದರು. ವ|| ಎರಚುವ ಹೂ ಬಿಳಿಯ ಅಕ್ಷತೆಗಳ ಮಳೆಯ ಹೊಳಪಿನಿಂದ ಬೆಳ್ಳಗೂ ಕಾಳಾಗರು ಧೂಪ ಧೂಮದ ಹರಡುವಿಕೆಯಿಂದ ಜಲಭರಿತ ನೀಲಮೇಘದಂತೆ ಶ್ಯಾಮಳವೂ ದೀಪಶ್ರೇಣಿ ಮಂಗಳಾರತಿಗಳ ಕೆಂಪು ಕಾಂತಿಯ ವ್ಯಾಪನೆಯಿಂದ ಎಳೆಬಿಸಿಲಿನಂತೆ ಕೆಂಪು ಬಣ್ಣವುಳ್ಳುದೂ ಯಕ್ಷಕರ್ದಮವೆಂಬ ಗಂಧದ ಸರಿಯು ಸುರಿಯುವಿಕೆಯಿಂದ ಕೆಸರಿನಿಂದಾವೃತವಾದ ಗೈರಿಕಾದಿಧಾತುಗಳ ಪ್ರದೇಶವುಳ್ಳುದೂ, ವಿಚಿತ್ರ ವಾದ್ಯಧ್ವನಿಗಳೆಂಬ ಗುಡುಗಿನಿಂದ ಕೂಡಿದುದೂ, ಬಗೆ ಬಗೆಯ ಉಪ್ಪಿನಕಾಯಿ ಪಲ್ಯ ಭಕ್ಷ್ಯಾನ್ನರಾಶಿಯ ಉಪಪರ್ವತದಿಂದ ಸುತ್ತಲ್ಪಟ್ಟುದೂ ಲೇಹ್ಯ ಚೋಷ್ಯ ಪಾಯಸಗಳ ಹಂಡೆದೋಣಿ ಕೊಪ್ಪರಿಗೆಗಳೆಂಬ ಹೆಚ್ಚಾಗಿ ವಿಸ್ತಾರವಾದ ಬಾವಿ ಕೊಳಗಳುಳ್ಳುದೂ, ತುಪ್ಪದ ಝರಿಗಳಿಂದ ಸುತ್ತುವರಿದುದೂ, ಸಾವಿರಾರು ಹಾಲಿನ ಕೊಡಗಳಿಂದ ಕೂಡಿದುದೂ, ಅರೆಗಡೆದ ಮೊಸರ ಸುಳಿಗಳಿಂದ ಕೂಡಿದ ನೂರಾರು

ಸಹಸ್ರಸಂಗತಮುಂ ದಧಿಹ್ರದಶತಾವರ್ತಮುಮೆನಿಸಿ, ಗೋವರ್ಧನನಗಂ ಸೊಗಯಿಸೆ, ನಗೇಂದ್ರ ಯಜ್ಞಮಂ ನೆಗಲ್ದು ಗೋಪಸಮಾಜಂ ವಿರಾಜಿಸೆ ತದನಂತರಂ

ಅಪ್ರಮಿತ ಪಾಯಸಾಜ್ಯರ
ಸಪ್ರಿಯಾಪಕ್ವಾನ್ನಚಯಮನುಂಡೆಂ ತಣಿದೆಂ
ಸುಪ್ರೀತನಾದೆನಾಂ ಶೈ
ಳಪ್ರಭು ನಿಮಗೆಂದಗಾಗ್ರದೊಳ್ ಹರಿ ನುಡಿದಂ ೮೩

ವ|| ಎಂದು ನುಡಿದಾಗಳಾ ದಿವ್ಯಮೂರ್ತಿಯಂ ತೊಲಗಿಸಿ ತನ್ನ ಮುನ್ನಿನ ಗೋಪ ಸ್ವರೂಪದಿಂ ಗೋಪಗೋಪೀಜನಂಗಳೊಡನೆ ತನ್ಮಹಾಮಹಮಂಗಳ ಪ್ರಶಂಸೋಕ್ತಿಗಳಂ ನೆಗಳುತ್ತುಂ ಬಂದು ನಂದನಂದನನಾನಂದದಿಂ ಗೋಕುಲದೊಳಿರ್ಪನ್ನೆಗಮಿತ್ತಲ್

ಮಾಣ್ದೆನ್ನಮಹಮನಗಮಂ
ಪೂಣ್ದರ್ಚಿಸಿದಂ ಮುಕುಂದನೆಂದು ಮಹೇಂದ್ರಂ
ಕಣ್ದುಱುಗಲ್ ಕೆಂಪಡರ್ದಿರೆ
ನುಣ್ದಳಿರಿಂ ತಳ್ತಶೋಕಕುಜದಂತಾದಂ ೮೪

ವ|| ಅಂತು ಭೂಧರವಿರೋಧಿ ಭೂಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕ ಬಲಾಹಕ ನಿಕಾಯಮಂ ಕರೆದು

ಇಂದೆ ಲಯಕಾಲಮಕ್ಕೆಮ
ಸಂದೆಯಮೇಂ ಗೋಕುಲಕ್ಕೆ ನೀಂ ಪೋಗಿ ಶಿಲಾ
ವೃಂದಾನ್ವಿತವೃಷ್ಟಿಯನೇ
ಳುಂ [1]ದಿನಮುಂ ಕಱೆಯಿಮೆಂದು ಬೆಸವೇಳಲೊಡಂ ೮೫

ಮಡುಗಳುಳ್ಳುದೂ ಆದ ಗೋವರ್ಧನಗಿರಿ ಸೊಗಯಿಸಿತು. ಗೊಲ್ಲರು ಗಿರಿಯಜ್ಞವನ್ನಾಚರಿಸಿದರು. ಆಮೇಲೆ ೮೩. ಕೃಷ್ಣನು-ಗೋವರ್ಧನ ಗಿರಿಯ ಮೇಲಿಂದ- "ಶೈಲಪ್ರಭುವಾದ ನಾನು ಬೇಕಾದಷ್ಟು ಪಾಯಸ ತುಪ್ಪ ರಸ ಪಕ್ವಾನ್ನಾದಿಗಳನ್ನು ಉಂಡು, ತೃಪ್ತನಾದೆನು. ನಿಮಗೆ ಸುಪ್ರೀತನಾಗಿದ್ದೇನೆ" ಎಂದು ಹೇಳಿದನು. ವ|| ಹಾಗೆ ಹೇಳಿ ಬಳಿಕ ಆ ದಿವ್ಯಮೂರ್ತಿಯನ್ನು ಅಡಗಿಸಿ ತನ್ನ ಮೊದಲಿನ ಗೋಪಾಲರೂಪದಿಂದ ಗೋಪ ಗೋಪೀ ಜನಗಳೊಡನೆ ಆ ಮಹಾಮಂಗಳೋತ್ಸವದ ಹೊಗಳಿಕೆಯ ಮಾತುಗಳನ್ನಾಡುತ್ತಾ ಬಂದು ನಂದನೊಡನೆ ಮಹಾನಂದದಿಂದ ಗೋಕುಲದಲ್ಲಿರುತ್ತಿದ್ದನು. ಅಷ್ಟರಲ್ಲಿ ಇತ್ತ ಕಡೆ ೮೪. "ಕೃಷ್ಣನು ಉದ್ದೇಶ ಪೂರ್ವಕವಾಗಿ ನನ್ನ ಉತ್ಸವವನ್ನು ತಪ್ಪಿಸಿ ಬೆಟ್ಟವನ್ನು ಪೂಜೆ ಮಾಡುವಂತೆ ಮಾಡಿದ್ದಾನೆಂದು" ರೇಗಿದ ಮಹೇಂದ್ರನು ತನ್ನ ಕಣ್ಣುಗಳ ಸಮೂಹವು ಕೆಂಪೇರಿದುದರಿಂದ, ಕೆಂಪು ಚಿಗುರಿಂದ ಕೂಡಿದ ಅಶೋಕವೃಕ್ಷದಂತಾದನು ವ|| ಭೂಧರ (ಪರ್ವತ) ವಿರೋಧಿಯಾದ ಇಂದ್ರನು ಭೂಧರ (ಕೃಷ್ಣ)ನ ಮೇಲೆ ಹಾಗೆ ಕೋಪಗೊಂಡು, ಪುಷ್ಕಲಾವರ್ತಕವೆಂಬ ಮೇಘಗಳ ಸಮೂಹವನ್ನು ಬರಿಸಿ ೮೫. "ಇಂದೇ ಪ್ರಳಯ ಕಾಲವಾಗಲಿ. ಸಂದೇಹವು ಬೇಡ. ನೀವು ಗೋಕುಲಕ್ಕೆ ಹೋಗಿ, ಕಲ್ಲುಗಳ ಗುಂಪಿನಿಂದ

---

೧. ದಿನಪರ್ಯಂತಮೆಂದು (ಕಗ)

ಮರನಂ ಮರದಿಂ ಮೋದುವ
ಗಿರಿಯಂ ಗಿರಿಯಿಂದೆ ಪೊಡೆವ ಕಡಲಂ ಕಡಲೊಳ್
ಬೆರಸುವ ಪ್ರಳಯಾನಿಳನೆನೆ
ಭರದಿಂ ಕಡುಗಾಳಿ ಬೀಸಿದುದು ಗೋಕುಲದೊಳ್ ೮೬

ಗಾಳಿಯ ಪೊಯ್ಲಿಂದಂ ದ್ಯುತಿ
ಮಾಳೆ ತೆರಳ್ದೊಡನೆ ನೆಗೞ್ದ ತಮದೊಡ್ಡನಲಾ
ಭೀಳತೆವೆತ್ತುದು ನೀಳಘ
ನಾಳಿ [1]ನಿರಕ್ಷೀಕೃತಾಂಬರಂ ಘನಪಥದೊಳ್ ೮೭

ಸಿಡಿಲುಂ ಮಿಂಚುಂ ಮೊೞಗುಂ
ಗಡಣಿಸೆ ಶುಂಡಾಲಹಸ್ತನಿಭಧಾರೆಯೊಳಂ
ದೊಡಗೂಡಿ ಶಿಲಾವಳಿಗಳ್
ಕೆಡೆಯೆ ಘನಾಘನಘಟಾಳಿ ಕಱೆದುವು ಮಱೆಯಂ ೮೮

ವ।। ಆ ಸಮಯದೊಳ್

ಸಮುದಗ್ರಗ್ರಾವವರ್ಷಂ ಕಱೆಯೆ [2]ತುಱುವುಮಾವುಂ ಪಡಲ್ವಟ್ಟು ಬಿೞ್ದ
ಪ್ಪಮೆನುತ್ತುಂ ಗೋಪಗೋಪೀತತಿ ಮಱೆವುಗೆ ಗೋವರ್ಧನಾದ್ರೀಂದ್ರಮಂ ಕಿ
ೞ್ತು ಮಹಾಂಭೋನಿರ್ಝರಂ ಝಲ್ಲರಿವೊಲಿರೆ ಮಹಾವೃಷ್ಟಿಯಿಂ ವಾಮದೋರ್ದಂ
ಡಮೆ ಕಾವಾಗಿರ್ಪಿನಂ ಗೋಕುಲಕೆ ಕಡೆವೊಲಂದೆತ್ತಿ ನಿಂದಂ ಮುಕುಂದಂ ೮೯

ಕೂಡಿದ ಮಳೆಯನ್ನು ಏಳು ದಿವಸಗಳೂ ಸುರಿಸಿರಿ.” ಎಂದು ಆಜ್ಞಾಪಿಸಿದನು. ೮೬. ಮರವನ್ನು ಮರದಿಂದಲೇ ಹೊಡೆಯುವ, ಗಿರಿಯನ್ನು ಗಿರಿಯಿಂದಲೇ ಅಪ್ಪಳಿಸುವ, ಸಮುದ್ರವನ್ನು ಬೇರೆಯ ಸಮುದ್ರದೊಡನೆ ಬೆರೆಸುವ ಬಿರುಗಾಳಿಯು ಪ್ರಳಯ ಕಾಲದ ಗಾಳಿಯಂತೆ ಭರದಿಂದ ಗೋಕುಲದಲ್ಲಿ ಬೀಸಿತು. ೮೭. ಗಾಳಿಯ ಹೊಡೆತದಿಂದ ಬೆಳಕಿನ ಸಮೂಹವೇ ಹೊರಟುಹೋಗಿ, ಒಡನೆಯೇ ಕತ್ತಲೆಯ ರಾಶಿ ತುಂಬಿದೆ, ಎನ್ನುವಂತೆ ಆಕಾಶವೇ ಕಾಣಿಸದಂತೆ ನೀಲಮೇಘ ಸಮೂಹವು ಭಯಂಕರವಾಗಿ ತುಂಬಿತು. ೮೮. ಸಿಡಿಲು ಮಿಂಚು ಗುಡುಗುಗಳಿಂದೊಡಗೂಡಿದ ಘನಾಘನವೆಂಬ ಆ ಮೋಡಗಳ ಗುಂಪು ಆನೆಯ ಸೊಂಡಲಿನ ಗಾತ್ರದ ಮಳೆಯ ಧಾರೆಗಳನ್ನು ಆಲಿಕಲ್ಲುಗಳೊಡನೆ ಸುರಿಸಿತು. ವ।। ಆ ಸಮಯದಲ್ಲಿ ೮೯. ಅತಿಯಾದ ಕಲ್ಲುಮಳೆ ಕರೆದರೆ ದನಕರುಗಳು ದಿಕ್ಕುಪಾಲಾಗಿ ಚದುರಿಬೀಳುವವು ಎಂದು ಹೆದರಿದ ಗೋಪಗೋಪಿಯರ ತಂಡವು ಕೃಷ್ಣನನ್ನು ಮರೆಹೊಕ್ಕಿತು. ಅವನು ಗೋವರ್ಧನಗಿರಿಯನ್ನು ಕಿತ್ತು ಅದರ ಮೇಲಿನ ಹೆಚ್ಚುನೀರಿನ ಝರಿಗಳು ಜಾಲರಿಯಂತೆ ಕಾಣಿಸುವಂತೆ ತನ್ನ ಎಡಗಯ್ಯನ್ನೇ ಕಾವಾಗಿ ಮಾಡಿ ಗೋಕುಲಕ್ಕೆ

---

೧. ನಿರೀಕ್ಷಿಸೆ ವೃತಾಂಬರಂ (ಖ) ೨. ಕಱುವುಮಾವುಂ ಪಡಲ್ವಟ್ಟುಬೀೞ್ತರ್ಕುೞ (ಮೊಅ)

ವ॥ ಅಂತು ದಿವ್ಯರೂಪದಿಂ ನಗಮಂ ನೆಗಪಿ ಗೋಪಗೋಪೀಜನಂಗಳ ಮೊಗಮಂ ನೋಡಿ

ನೀವರ್ಚಿಸೆ ತಣಿದೀ ನಗ
ದೇವತೆ ಹಿಮವೃಷ್ಟಿಚಯಮನಪಹರಿಸಲ್ ಬಂ
ದಾವಿರ್ಭವಿಸಿದೊಡೆನಗೆ ಮ
ಹಾವಪುವಾಯ್ತೆಂದು ನಗುತುಮಗಧರನೆಂದಂ ೯೦

ಹರಿ ತನ್ನಂಶಾಂಶದಿ[1]ನೊಸೆ
ದಿರೆ ತೋಱುವ ತನ್ಮಹತ್ವದಂಶಾಂಶಮೆ ಗೋ
[2]ಧರಣಬಲಮಂತುಮಾತ್ಮೋ
ದರಸ್ಥಲೋಕಂಗೆ ಪಿರಿದೆ ಶೈಲೋದ್ಧರಣಂ ೯೧

ನಾನಾವನಸಂಕೀರ್ಣಂ
ನಾನಾಶೃಂಗೋಪಕುಧರನಿರ್ಝರಯುಕ್ತಂ
ನಾನಾಮೃಗಗಣಘೋರಂ
ನಾನಾಯೋಜನವಿಶಾಲಮಾಶೈಲೇಂದ್ರಂ ೯೨

ಮರವಾಯ್ವ ಪೊಣರ್ವ ವಿಸಟಂ
ಬರಿವ ಕರೇಣುಗಳ ನೆರೆವ ಹರಿವಿರುತಿಗೆ ಕೊ
ಕ್ಕರಿಸುವ [3]ನೀರ್ಸೆರೆಗೆಯ್ವಿಭ
ಪರಿಕರಮೆಸೆಗುಂ ಮುರಾರಿ ನೆಗಪಿದ ನಗದೊಳ್ ೯೩

ಕೊಡೆಯನ್ನಾಗಿ ಎತ್ತಿ ಹಿಡಿದು ನಿಂತನು. ವ॥ ಹಾಗೆ ದಿವ್ಯರೂಪದಿಂದ ಗಿರಿಯನ್ನು ಎತ್ತಿಹಿಡಿದು ಗೋಪಿಯರ ಮುಖವನ್ನು ನೋಡಿ, ೯೦. "ನೀವು ಪೂಜಿಸಿದುದರಿಂದ ತೃಪ್ತಿಗೊಂಡ ಈ ಗಿರಿದೇವತೆಯು ಹಿಮದ ಮಳೆಯ ರಾಶಿಯನ್ನು ಹೋಗಲಾಡಿಸುವುದಕ್ಕಾಗಿ ಬಂದು, ನನ್ನ ಮೈತುಂಬಿದುದರಿಂದ ನನಗೆ ಅದ್ಭುತವಾದ ಈ ದೇಹವಾಯಿತು" ಎಂದು ನಗುತ್ತ ಹೇಳಿದನು. ೯೧. ಶ್ರೀ ಹರಿಯು ತನ್ನ ಅಂಶಾಂಶದಿಂದ ಉದಿಸಿ, ಪ್ರಸನ್ನನಾಗಿರಲು ಕಾಣಿಸುವ ಅವನ ಮಹಿಮೆಯ ಅಂಶಾಂಶವೇ ಗೋವುಗಳನ್ನು ಭೂಮಿಯನ್ನೂ ಕಾಪಾಡುವ ಶಕ್ತಿಯಾಗಿದೆ. ತನ್ನ ಉದರದಲ್ಲಿ ಲೋಕವನ್ನೇ ಧರಿಸಿರುವವನಿಗೆ ಬೆಟ್ಟವನ್ನು ಎತ್ತಿ ಧರಿಸುವುದು ಒಂದು ದೊಡ್ಡ ಕೆಲಸವೆ? ೯೨. ನಾನಾ ವನ ಶಿಖರ ಉಪಗಿರಿ ಝರಿಗಳಳ್ಳುದೂ ಅನೇಕ ಮೃಗಗಣಗಳಿಂದ ಭಯಂಕರವಾದುದೂ ಆದ ಆ ಪರ್ವತವು ಅನೇಕ ಯೋಜನ ವಿಶಾಲವಾಗಿದ್ದಿತು. ೯೩. ಕೃಷ್ಣನು ಎತ್ತಿಹಿಡಿದ ಆ ಪರ್ವತದಲ್ಲಿ ಮರವನ್ನು ಹಿರಿದು ಜಗಳವಾಡುವ ಸ್ವೇಚ್ಛೆಯಿಂದ ಓಡುವ, ಹೆಣ್ಣಾನೆಗಳೊಡನೆ ಸೇರುವ, ಸಿಂಹ ಧ್ವನಿಗೆ ಹೆದರುವ, ಹರಿಯುವ ಮತ್ತು ಸುರಿಯುವ

೧. ನೊಗೆದಿರೆ (ಮೊಅ) ೨. ವರುಣಬಲಮೆಂತು (ಖ) ೩. ನಿಪ್ಪೆರೆ (ಕಗ)

ಮಂಡಳಿಸಿರಲಲಸಿ ಮಹೀ
ಮಂಡಳಮಂ ಪೊತ್ತು ನೆಗೆದ ಶೇಷನೆನಲ್ ಶ್ರೀ
ಖಂಡರಸಭೂಷಿತಂ ಭುಜ
ದಂಡಂ ಬಗೆಗೊಂಡುದಗಮನಾಂತಚ್ಯುತನಾ ೯೪

ಅಂಭೋಜನಾಭನಿಂದು
ತ್ತಂಭಿತಮಾದೊಂದುದಗ್ರಗೋವರ್ಧನಮು
ಜ್ಜೃಂಭಿಸುತಿರ್ದುದು ರುದ್ರಂ
ಸ್ತಂಭಿಸಿದಾ ತ್ರಿಪುರದಂತೆ ಗಗನಾಂಗಣದೊಳ್ ೯೫

ತಳರದತಂದ್ರಿತಮಿಳೆಯಂ
ತಲೆದಿರ್ಪಚ್ಚಿಗಮಡಂಗೆ ಹರಿಕರಶಯ್ಯಾ
ತಳದೊಳೊಱಗಿದವೊಲಿರ್ದುದು
ಜಳದನಿಮೀಳಿತ ಗುಹಾವಿಳೋಚನಮಚಳಂ ೯೬

ಇರುಳುಂ ಪಗಲುಂ ಮಾಣದೆ
ಸುರಿವ ಮಹಾವೃಷಟಿಯಂ ನಿವಾರಿಸಲಗಮಂ
ಹರಿ ಧರಿಯಿಸೆ ಸಪ್ತದಿನಂ
ಬರಮಲ್ಲಿಂ ಬಟಿಕ ಪರೆದು ಪೋಯ್ತು ಘನೌಘಂ ೯೭

ವ|| [೧]ಅಂತು ವಿಫಲೋದ್ಯೋಗಮಾಗಿ ಮಹಾದ್ಭುತವೃಷ್ಟಿ ಪೋಪುದುಂ ಕಂಡು ಗೋಪ ಗೋಪೀಜನಂ ನಿಜಸ್ವೈರದಿಂ ಸಂಚರಿಸೆ ಪೂರ್ವಪ್ರದೇಶದೊಳ್ ಪರ್ವತವನಿರಿಸಿ ತದೀಯಶಿಖರ

ನೀರನ್ನು ತಡೆಹಿಡಿಯುವ ಆನೆಗಳ ಗುಂಪು ಚೆನ್ನಾಗಿದ್ದಿತು. ೯೪. ಭೂಮಂಡಲವನ್ನು ಹೊತ್ತುಕೊಂಡು ಸಿಂಬಿಸುತ್ತಿಕೊಂಡಿರುವುದಕ್ಕೆ ಬೇಸರಪಟ್ಟ ಆದಿಶೇಷನು ಎದ್ದುನಿಂತು ಅದನ್ನು ಹೊತ್ತುಕೊಂಡಿರುವನೋ ಎನ್ನುವಂತೆ ಶ್ರೀಗಂಧ ಲೇಪನದಿಂದ ಭೂಷಿತವಾಗಿ ಗಿರಿಯನ್ನು ಧರಿಸಿರುವ ಕೃಷ್ಣನ ದಂಡಾಕಾರವಾದ ತೋಳು ಮನೋಹರವಾಗಿದ್ದಿತು. ೯೫. ಪದ್ಮನಾಭನು ಎತ್ತಿಹಿಡಿದಿರುವ ಉನ್ನತವಾದ ಗೋವರ್ಧನ ಗಿರಿಯು ಆಕಾಶದಲ್ಲಿ ಈಶ್ವರನು ತಡೆದು ನಿಲ್ಲಿಸಿದ್ದ ತ್ರಿಪುರದಂತೆ ಹೊಳೆಯುತ್ತಿದ್ದಿತು. ೯೬. ಆ ಪರ್ವತವು ಅದುವರೆಗೆ ಅಲ್ಲಾಡದೆ ಭೂಮಿಯನ್ನು ಹೊತ್ತುಕೊಂಡಿತ್ತು. ಅದರಿಂದಾದ ಆಯಾಸವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಕೃಷ್ಣನು ಕೈಯೆಂಬ ಹಾಸಿಗೆಯಮೇಲೆ, ಗುಹೆಗಳೆಂಬ ಕಣ್ಣುಗಳನ್ನು ಮೋಡಗಳೆಂಬ (ರೆಪ್ಪೆ)ಗಳಿಂದ ಮುಚ್ಚಿಕೊಂಡು ಮಲಗಿಕೊಂಡಂತೆ ಕಾಣಿಸಿತು. ೯೭. ರಾತ್ರಿಯೂ ಹಗಲಿನಲ್ಲೂ ಬಿಡದೆ ಸುರಿಯುತ್ತಿದ್ದ ದೊಡ್ಡಮಳೆಯನ್ನು ನಿವಾರಿಸುವುದಕ್ಕಾಗಿ ಕೃಷ್ಣನು ಏಳುದಿನಗಳವರೆಗೆ ಗೋವರ್ಧನ ಗಿರಿಯನ್ನು ಧರಿಸಿದ್ದನು. ಆಮೇಲೆ ಮೋಡಗಳ ಗುಂಪು ಓಡಿ ಹೋಯಿತು. ವ|| ಹಾಗೆ ವ್ಯರ್ಥವಾಗಿ ಸುರಿದು ಸೋತ ಅತ್ಯದ್ಭುತವಾದ ಮಳೆಯು ನಿಂತು ಹೋದುದನ್ನು ನೋಡಿ, ಗೋಪ ಗೋಪೀಜನರು

---

೧. ವಿಪುಲೋದ್ಯೋಗಮಾಗಿ (ಕಖ)

ಶಿಳಾತಳದ ಮೇಲೆ ವನಮಾಲಿ ಲೀಲೆಯಿಂ ಕುಳ್ಳಿರ್ಪನ್ನೆಗಮತ್ತಲಮರೋತ್ತಮಂ ವಿಸ್ಮಿತಸ್ವಾಂತನಾಗಿ ನಿಜಾಂತರಂಗದೊಳಿಂತೆಂದಂ

*ಪೃಥ್ವಿ ॥ ಕ್ಷಮಾಧರನಿವಾಸದೊಳ್ ಬಳಿಯನಿಕ್ಕಿದಾ ಶೌರ್ಯಕಂ
ಕ್ಷಮಾಧರತೆಯಂ ಕಿರಿಚ್ಛಲದೆ ತೋಱಿದಾ ಧೈರ್ಯಕಂ
ಕ್ಷಮಾಧರಮನೀಗಳೆತ್ತಿ ಮೆಱೆದಾ ಮಹಾವೀರ್ಯಕಂ
ಕ್ಷಮಾಧರನನಾತನಂ ಕ್ಷಮೆಗೊಳಲ್ಕೆವೇಱ್ಕುಂ ದಿಟಂ ೯೮

ವ॥ ಎಂದು ನಿಶ್ಚೈಸಿ

ಮಿಳಿರ್ವನ್ನಂ ಚಮರೀರುಹಂ ಮಿಱುಗುವನ್ನಂ ಪಾಂಡುರಚ್ಛತ್ರಮಂ
ಡಳಮೈರಾವತಮಸ್ತಕಸ್ಥಿತನಮರ್ತ್ಯವ್ಯೂಹಸೇವ್ಯಂ ವಿಯ
ತ್ತಳದಿಂ ಭೋಂಕನೆ ಬಂದನೀಕ್ಷಿಸುವಲಂಪಿಂ ವಜ್ರಿ ಗೋವರ್ಧನಾ
ಚಳಭಾರೈಕಸಹಿಷ್ಣುವಂ ಜಳಧರಭ್ರಾಜಿಷ್ಣುವಂ ವಿಷ್ಣುವಂ ೯೯

ವ॥ ಅಂತು ಬಂದು

ತಮ್ಮಿಷ್ಟದಂತೆ ಸಂಚರಿಸಲಾರಂಭಿಸಿದರು. ಕೃಷ್ಣನು ಆ ಪರ್ವತವನ್ನು ಅದು ಮೊದಲಿದ್ದೆಡೆಯಲ್ಲೇ ಇರಿಸಿ, ಅದರ ಶಿಖರದ ಒಂದು ಹಾಸುಗಲ್ಲಿನ ಮೇಲೆ ಲೀಲೆಯಿಂದ ಕುಳಿತಿದ್ದನು. ಅತ್ತ ಅಮರೇಂದನು ವಿಸ್ಮಿತಸ್ವಾಂತನಾಗಿ ತನ್ನ ಅಂತರಂಗದಲ್ಲಿ ಹೀಗೆಂದು ಕೊಂಡನು. ೯೮. "ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದ ಆ ಕಾರ್ಯಕ್ಕೂ, ವರಾಹರೂಪದಿಂದ ಭೂಧರತೆಯನ್ನು ತೋರಿಸಿದ ಆ ಧೈರ್ಯಕ್ಕೂ ಈಗ ಗೋವರ್ಧನಪರ್ವತವನ್ನು ಎತ್ತಿ ಪ್ರಕಟಿಸಿದ ಮಹಾವೀರ್ಯಕ್ಕೂ ನಿಜವಾಗಿಯೂ ಕ್ಷಮಾಶೀಲನಾದ ಆ ಕೃಷ್ಣನಲ್ಲಿ ನಾನು ಕ್ಷಮಾಪಣೆಯನ್ನು ಪ್ರಾರ್ಥಿಸಲೇ ಬೇಕು. ವ॥ ಎಂದು ನಿಶ್ಚಯಿಸಿದನು. ೯೯. ಗೋವರ್ಧನಗಿರಿಯ ಭಾರವನ್ನು ಸಹಿಸುವುದರಲ್ಲಿ ಏಕೈಕವೀರನಾಗಿ ಮೇಘಶ್ಯಾಮನಾಗಿ ಹೊಳೆಯುತ್ತಿರುವ ಆ ಕೃಷ್ಣನನ್ನು ಸಂದರ್ಶಿಸುವ ಆಸಕ್ತಿಯಿಂದ ಐರಾವತವನ್ನೇರಿಕೊಂಡು, ಬೀಸುವ ಚಾಮರವೂ ಹಿಡಿದ ಬೆಳ್ಗೊಡೆಯೂ ಹೊಳೆಯುತ್ತಿರುವಲ್ಲಿ ದೇವತೆಗಳಿಂದ ಸೇವ್ಯನಾಗಿ ಆಕಾಶದಿಂದ ಇಂದ್ರನು ತಟ್ಟನೆ ಇಳಿದು ಬಂದನು. ವ॥ ಹಾಗೆ ಬಂದು

---

* ಬದಲಾಗಿ (ಖಗ) ಪ್ರತಿಗಳಲ್ಲಿ

ಕ್ಷಮಾಧರನಿವಾಸದೊಳ್ ಬಲಿಯನಿಕ್ಕಿದಾ ಶೌರ್ಯಮಂ
ಕ್ಷಮಾಧರತೆಯಂ ಕಿಟಿಲ್ ಚಲದೆ ತೋಱಿದಾ ಧೈರ್ಯಮಂ
ಕ್ಷಮಾಧರಮನೀಗಳೆತ್ತಿ ಮೆಱೆದಂ ಮುಕುಂದಂ ನತ
ಕ್ಷಮಾಧರನನಾತನಂ ಕ್ಷಮೆಗೊಳಲ್ಕೆವೇಱ್ಕುಂ ದಿಟಂ

ನೆಗಟ್ದಾ ಗೋವರ್ಧನಾಗ್ರೋಪಲದಿನೆಸೆದು ಕುಳ್ಳಿರ್ದ ಮೇಘಾಧ್ವದೊಳ್ ನಿಂ
ದು ಗರುತ್ಮಂ ಮಾಟ್ಟಿ ಪಕ್ಷಾವಳಿಯ ನೆಟಿಲೊಳೊಪ್ಪಿರ್ದ ಗೋಪಾಲವೇಷಂ
ಬಗೆಗೊಳ್ವಬ್ಜಾಕ್ಷನಂ ಶ್ಯಾಮಳತನುರುಚಿಯಂ ಬಾಳನಂ ದೀರ್ಘಬಾಹಾ
ಯುಗನಂ ಶ್ರೀವತ್ಸವಕ್ಷಸ್ಸ್ಥಳನನತುಲತೇಜಸ್ವಿಯಂ ವಜ್ರಿ ಕಂಡಂ ೧೦೦

ತ್ರೈಲೋಕ್ಯಪಾಲಕಂ ಗೋ
ಪಾಲಕನಾಗಿರ್ದ ಲೀಲೆಯಂ ಕಂಡು ಮರು
ತ್ಪಾಲಕನೆನಗಕ್ಷಿಸಹ
ಸ್ರಾಲಂಬನಮಿಂದು ಸಫಲಮೆಂದೀಕ್ಷಿಸಿದಂ ೧೦೧

ವ|| ಅಂತು ಸಹಸ್ರಲೋಚನಂ ಪರ್ಯಾಪ್ತಸಹಸ್ರಲೋಚನನಾಗಿ ಸಹಸ್ರಪತ್ರಾಯತನೇತ್ರನಂ ನೋಡಿ

ಎಲೆ ಸರ್ವಾತ್ಮ ಪಿಪೀಲಿಕಾದಿ ಗಜಪರ್ಯಂತಂ ಜಗತ್ಪ್ರಾಣಿಸಂ
ಕುಲಮೆಲ್ಲಂ ಭವದಂಶಜಾಲಮದಟಿಂ ನೀನೀಗಳಂಶಾಂಶದಿಂ
ದಿಲೆಯೊಳ್ ಪುಟ್ಟಿದ ನಿನ್ನದೊಂದೆಸಕಮೇಂ ಸಾಮಾನ್ಯಮೋ ಮೇಣ್ ಜಗ
ದ್ವಲಯತ್ರಾಣ[1]ಸಮರ್ಥಮೋ ತಿಳಿವೆನೆಂದೀ ವೃಷ್ಟಿಯಂ ಮಾಡಿದೆಂ ೧೦೨

ಇನ್ನಮರಕಾರ್ಯಸಿದ್ಧಿಯು
ಮಿನ್ನಖಿಳವಿರೋಧಿವಧಮುಮಕ್ಕುಂ ನಿನ್ನಿಂ
ನಿನ್ನ ಭುಜಬಲಮನಜಿದೆಂ
ನೀನ್ನಗಮಂ ನೆಗಪಿ ಸಪ್ತದಿನಮಿರ್ದುದಜಿಂ ೧೦೩

೧೦೦. ಪ್ರಸಿದ್ಧವಾದ ಆ ಗೋವರ್ಧನಗಿರಿಯ ಮೇಲೆ ಹಾಸುಗಲ್ಲಿನಲ್ಲಿ ಗರುಡನು ಆಕಾಶದಲ್ಲಿ ನಿಂತು ಮಾಡಿರುವ ರೆಕ್ಕೆಯ ನೆಳಲಿನಲ್ಲಿ ಗೋಪಾಲವೇಷದಲ್ಲಿ ಒಪ್ಪುವ ನೀಲವರ್ಣದೇಹಕಾಂತಿಯುತನೂ ಕಮಲನೇತ್ರನೂ ಆಜಾನುಬಾಹುವೂ ಶ್ರೀವತ್ಸವಕ್ಷನೂ, ಅಮಿತತೇಜನೂ ಆದ ಆ ಬಾಲಕೃಷ್ಣನನ್ನು ಇಂದ್ರನು ಕಂಡನು. ೧೦೧. ತ್ರಿಲೋಕ ಪಾಲಕನಾದವನು ಗೋಪಾಲಕನಾಗಿರುವ ಆ ಲೀಲೆಯನ್ನು ಕಂಡ ದೇವೇಂದ್ರನು ನನಗೆ ಸಾವಿರ ಕಣ್ಣಿರುವುದು ಇಂದು, ಸಾರ್ಥಕವಾಯಿತೆಂದುಕೊಂಡು ಅತ್ಯಾಸಕ್ತಿಯಿಂದ ನೋಡಿದನು. ವ|| ಆ ಸಹಸ್ರಾಕ್ಷ (ಇಂದ್ರ)ನು ತನ್ನ ಸಾಕಾದಷ್ಟು ಕಣ್ಣುಗಳಿಂದ ಕಮಲದಳ ವಿಶಾಲ ನೇತ್ರನಾದ ಕೃಷ್ಣನನ್ನು ನೋಡಿ, ೧೦೨. "ಎಲೈ ಸರ್ವಾತ್ಮನೇ, ಇರುವೆಯಿಂದ ಹಿಡಿದು ಆನೆಯುವರೆಗಿನ ಜಗತ್ತಿನ ಪ್ರಾಣಿಸಮೂಹವೆಲ್ಲವೂ ನಿನ್ನ ಅಂಶ ಸಮೂಹವಾದುದು. ನೀನು ಲೀಲೆಯಿಂದ ಈಗ ನಿನ್ನ ಅಂಶಾಂಶದಿಂದ ಹುಟ್ಟಿರುವೆ. ಆದುದರಿಂದ ನಿನ್ನ ಅಂಶಾಂಶದ ಕಾರ್ಯವು ಸಾಮಾನ್ಯವಾದುದೋ ಅಥವಾ ಮೂರು ಲೋಕಗಳನ್ನೂ ರಕ್ಷಿಸಲು ಸಮರ್ಥವೋ? ಎಂಬುದನ್ನು ತಿಳಿದುಕೊಳ್ಳಬೇಕೆಂದು ಈ ಮಳೆಯನ್ನು ಸುರಿಸಿದೆನು. ೧೦೩. ನೀನು ಪರ್ವತವನ್ನು ಏಳುದಿನಗಳವರೆಗೆ ಎತ್ತಿಹಿಡಿದುಕೊಂಡು ಇದ್ದುದರಿಂದ ನಿನ್ನ ತೋಳಿನ ಬಲವನ್ನು ತಿಳಿದೆನು. ಇನ್ನು

೧. ಸಮಗ್ರಮೋ (ಖ)

ಏಕಂ ಕೂಟಸ್ಥಂ ನಿ
ನ್ನಾಕಾರತ್ರಿತಯವಾದ ವಿಭುತೆ ಸಮಗ್ರಂ
ಶ್ರೀಕಾಂತ ಮದ್ವಿಧರ್ ಸ್ವ
ಭ್ರೂಕೋಟಿಯ [1]ಪರ್ಬಿನಿಂದವಪ್ಪರ್ ಕಿಡುವರ್ ೧೦೪

ವ॥ ಆ ಸಮಗ್ರಪ್ರಭಾವಮುಂ ನಿನ್ನೀಗಳವತಾರದೊಳ್ ಕಾಣಲಾದಪುದೆಂತೆನೆ

ನೀಂ ತುಱುಗಾವೊಡಮೇಂ ನಿ
ನ್ನಂತಿಕದೊಳ್ ನೋಡೆ ಮದ್ವಿಳಾಸಂ ಮಸುಳ್ದ
ತ್ತಂತುಟೆ ವಲಂ ಸ್ವಯಂಪ್ರಭು
ವೆಂತಿರ್ದೊಡಮಿರ್ದ ತೆಱನೆ ಚೆಲ್ವಾಗಿರ್ಕುಂ ೧೦೫

ಪುರಮಥನರೂಪದಿಂ ನೀಂ
ಮರುಳ್ಗಳೊಡನಾಡಿದೈ ನರಾಕೃತಿಮಿಷದಿಂ
ಹರಿ ಗೋವುಗಳೊಡನಾಡಿದೆ
[2]ಪರಮೈಕಂಗುಚಿತಮಕ್ಕುಮೀ ಸ್ವಾತಂತ್ರ್ಯಂ ೧೦೬

ಜಗದುದಯಸ್ಥಿತಿಪ್ರಳಯಕಾರಣ ಭಕ್ತಸನಾತನ ತ್ರಿಮೂ
ರ್ತಿಗಳ ಮಹಾಧಿಪತ್ಯಮದು ನಿನ್ನ ವಿಡಂಬಮೆನಲ್ ಜುಗುಪ್ಸಿತಂ
ಬಗೆವೊಡಿದಾಧಿಪತ್ಯಸವನಂ ನಿನಗಾಗಿದನೆಂಬೆನಟ್ಟೆಯಿಂ
ನಗಧರ ಗೋಪನಾಗಿ ನಲಿವಲ್ಲಿಗೆ ತಾಳ್ದು ಗವಾಧಿಪತ್ಯಮಂ ೧೦೭

ನಿನ್ನಿಂದ ದೇವತೆಗಳ ಕಾರ್ಯಸಿದ್ಧಿಯೂ ಸಕಲ ವಿರೋಧಿಗಳ ವಧೆಯೂ ಆಗುವುದು. ೧೦೪. ತ್ರಿಮೂರ್ತಿರೂಪದ ನಿನ್ನ ವಿಭುತ್ವವು ಪರಿಪೂರ್ಣವೂ ಏಕವೂ ಕೂಟಸ್ಥವೂ ಆದುದು, ಶ್ರೀಕಾಂತಾ! ನಮ್ಮಂತಹವರು ನಿನ್ನ ಹುಬ್ಬಿನ ಕೊನೆಯ ಅಲುಗುವಿಕೆಯಿಂದ ಜನಿಸುವರು, ಕೆಡುವರು. ವ॥ ಆ ಸಮಗ್ರಸ್ವಭಾವವೂ ನಿನ್ನ ಈಗಿನ ಈ ಅವತಾರದಲ್ಲಿ ಕಾಣಿಸುವುದು. ಹೇಗೆಂದರೆ ೧೦೫. ನೀನು ದನಗಳನ್ನು ಕಾದರೇನು! ನಿನ್ನ ಹತ್ತಿರ ನನ್ನ ವೈಭವವು ಮಸುಕಾಯಿತು. "ಸ್ವಯಂಪ್ರಭುವು ಹೇಗಿದ್ದರೂ ಅವನು ಇರುವ ರೀತಿಯು ಚೆಲುವಾಗಿರುವುದು, ೧೦೬. ಹರೀ! ನೀನು ತ್ರಿಪುರಾರಿರೂಪದಿಂದ ಮರುಳುಗಳೊಡನಾಡಿದೆ, ಮನುಜವೇಷದಿಂದ ಗೋವುಗಳೊಡನಾಡುತ್ತಿರುವೆ. ಪರಮೈಕನಾದವನಿಗೆ ಈ ಸ್ವಾತಂತ್ರ್ಯವು ಉಚಿತವಾದುದೇ ಆಗಿದೆ. ೧೦೭. ಜಗತ್ತಿನ ಸೃಷ್ಟಿಸ್ಥಿತಿಪ್ರಳಯಕಾರಣನೇ! ಸನಾತನಭಕ್ತರುಳ್ಳವನೇ! ನಿನ್ನ ತ್ರಿಮೂರ್ತಿಗಳ ಮಹಾಧಿಪತ್ಯವೂ ನಿನ್ನ ನಟನೆಯೆನ್ನುವಾಗ ನಾನು ಮಾಡುವ ಈ ಆಧಿಪತ್ಯಾಭಿಷೇಕವು ಜಿಹಾಸೆಯನ್ನುಂಟುಮಾಡುವುದಾಗಿದೆ. ನನಗಾಗಿ ಇದನ್ನು ಹೇಳುತ್ತಿದ್ದೇನೆ. ಗಿರಿಧರನೇ; ಗೋಪಾಲನಾಗಿ ನಲಿಯುತ್ತಿರುವುದಕ್ಕಾಗಿ ಆಸಕ್ತಿಯಿಂದ ಗೋವುಗಳ ಆಧಿಪತ್ಯವನ್ನೇ ಪಡೆ.

೧. ಜರ್ಬಿನಿಂದ (ಖ) ೨. ಪರಮೇಶಂಗುಚಿತ (ಕ)

ಶ್ರೀವರ ನಿನಗಾಂ ಮಾಳ್ಪೆಂ
ಗೋವಿಂದಪದಾಭಿಷೇಕಮಂ ಧರಿಯಿಸು ನೀಂ
ಗೋವಿಂದನಾಮಮಂ ನಿನ
ಗಾವಭಿಧಾನಕ್ಕುಮಾ ಪೆಸರ್ ಪ್ರಿಯಮಕ್ಕುಂ ೧೦೮

ವ|| ಎಂದು ದೇವೇಂದ್ರಂ ಪಯೋನಿಧಿಯ ಪಾಲಂ ತೀವಿ ತರಿಸಿ ಐರಾವತದ ಕೆಲವಣಿಯ ಚಂದ್ರಕಾಂತದ ಘಟಂಬಿಡಿದು ನೀಲಗಿರಿಯ ಚೂಳಿಕೆಯೊಳಿಂದುಮಂಡಲವಮೃತಧಾರೆಯಂ ಕಱೆದಪುದೆನೆ ಕೃಷ್ಣಂಗಭಿಷೇಕಮಂ ಮಾಡಿ ಪಾರಿಜಾತದ ಪುಷ್ಪದಿಂ ಸಮೆದ ಬಾಸಿಗಮಂ ಕಟ್ಟಿ ದೇವದುಂದುಭಿಗಂಧರ್ವಗೇಯಜಯಜಯಧ್ವಾನವಂತರ್ಧಾನದೊಳ್ ಭೋರ್ಗರೆಯೆ ಪುಷ್ಪವೃಷ್ಟಿಲಾಜ ವರ್ಷಸಿತಾಕ್ಷತಾಸಾರವಂತರಿಕ್ಷದೊಳ್ ಸುರಿಯೆ ಗೋವಿಂದಾಭಿಧಾನಮನನುಕರಿಸಿ ವಿಭೂತಿಯಂ ಮೆಱೆಯೆ ದರಸ್ಮಿತಪ್ರಸನ್ನವದನಾರವಿಂದನಾಗಿ ಗೋವಿಂದನಾಮೋತ್ಸವವಿಭೂತಿಯಂ ಮೆಱೆದ ಪುರೂಹತನಂ, ನಿನಗೆ ಸಂತುಷ್ಟನಾದೆಂ ವರಂಗಳಂ ಬೇಡಿಕೊಳ್ಳೆನೆ, ಶತಕ್ರತು ಮುಕುಳಿತಾಂಜಲಿಪುಟನಾಗಿ ಬಿನ್ನಪಂ ಜಗನ್ನಾಥ, ಪಾಂಡವಮಧ್ಯಮನುರ್ಜುನನೆಂಬನೆನಗತಿ ಪ್ರಿಯತನಯಂ ದುರ್ಯೋಧನಂಗೆ ಭಾಗಿನೇಯಂ, ನಿನಗೆ ಮೈದುನನುಮಪ್ಪಂ, ಆ ವಿಜಯನೊಳಿಂದು ನಿನ್ನದೊಂದು ವಿಜಯಶಕ್ತಿಯ ಕಳೆಯಂ ನಿಯೋಜಿಸುವುದು. ಆ ಪಾರ್ಥನೊಳಪ್ರತ್ಯೂಹಮೈತ್ರಿಯಿಂ ವರ್ತಿಸುವುದು. ಮುಂದೆ

೧೦೮. ಶ್ರೀವರಾ! ನಾನು ನಿನಗೆ ಗೋವಿಂದ ಪದವಿಯ ಅಭಿಷೇಕವನ್ನು ಮಾಡುತ್ತೇನೆ. ನೀನು ಇನ್ನು ಗೋವಿಂದನೆಂಬ ಹೆಸರನ್ನು ಧರಿಸು. ನಿನಗೆ ಬೇರೆಲ್ಲಾ ಹೆಸರುಗಳಿಗಿಂತಲೂ ಈ ಹೆಸರು ಅಧಿಕ ಪ್ರಿಯವಾಗುವುದು." ವ|| ಎಂದು ಮಹೇಂದ್ರನು ಚಂದ್ರಕಾಂತದ ಕೊಡಗಳಿಂದ ಕ್ಷೀರಸಮುದ್ರದ ಹಾಲನ್ನು ತುಂಬಿ ತರಿಸಿ, ನೀಲಗಿರಿಯ ಶಿಖರದಲ್ಲಿ ಚಂದ್ರಮಂಡಲವು ಅಮೃತಧಾರೆಯನ್ನು ಕರೆಯುತ್ತಿದೆಯೆಂಬಂತೆ ಕೃಷ್ಣನಿಗೆ ಅಭಿಷೇಕವನ್ನು ಮಾಡಿ, ಪಾರಿಜಾತಪುಷ್ಪದಿಂದ ಮಾಡಿದ ಬಾಸಿಂಗವನ್ನು ಕಟ್ಟಿ, ದೇವಭೇರಿ ಗಂಧರ್ವಗಾನ ಜಯಧ್ವನಿಗಳು ಅಂತರ್ಧಾನದಲ್ಲಿಯೇ ಭೋರ್ಗರೆಯುತ್ತಿರಲು ಪುಷ್ಪವೃಷ್ಟಿಯೂ ಲಾಜಸಿತಾಕ್ಷತಾವೃಷ್ಟಿಯೂ ಅಂತರಿಕ್ಷದಿಂದ ಸುರಿಯುತ್ತಿರಲು ಗೋವಿಂದನೆಂಬ ಹೆಸರನ್ನು ಅನುಕರಿಸಿ ವೈಭವವನ್ನು ಮೆರೆಯಿಸಿದ ಇಂದ್ರನನ್ನು ಮಂದಹಾಸಪ್ರಸನ್ನಮುಖಕಮಲನಾಗಿ ನೋಡಿ, "ನಿನಗೆ ಸಂತುಷ್ಟನಾಗಿದ್ದೇನೆ. ವರಗಳನ್ನು ಬೇಡಿಕೋ" ಎಂದನು. ಇಂದ್ರನು ಕೈಗಳನ್ನು ಮುಗಿದುಕೊಂಡು-"ಬಿನ್ನಹ, ಜಗನ್ನಾಥ! ಪಾಂಡವರಲ್ಲಿ ಮಧ್ಯಮನಾದ ಅರ್ಜುನನೆಂಬುವನು ನನಗೆ ಅತಿಪ್ರಿಯನಾದ ಮಗ. ದುರ್ಯೋಧನನಿಗೆ ಸೋದರತ್ತೆಯ ಮಗ. ನಿನಗೆ ಮೈದುನ. ನೀನು ಆ ವಿಜಯನಲ್ಲಿ ಇಂದು ನಿನ್ನದೊಂದು ವಿಜಯಶಕ್ತಿಯ ಕಳೆಯನ್ನು ಕೂಡಿಸಬೇಕು. ಆ ಪಾರ್ಥನಲ್ಲಿ ಎಡೆಬಿಡದ ಮೈತ್ರಿಯಿಂದ ವರ್ತಿಸಬೇಕು. ಮುಂದೆ ನಡೆಯುವ ಭಾರತಯುದ್ಧದಲ್ಲಿ ಆ ಕಪಿಧ್ವಜನಿಗೆ ನೀನೇ ಸಾರಥಿಯಾಗಬೇಕು. ಈ ಮೂರು ವರಗಳನ್ನು ನೀನು ನನಗೆ ದಯೆಪಾಲಿಸಬೇಕು" ಎಂದನು. ಭಕ್ತವತ್ಸಲನಾದ ಶ್ರೀವತ್ಸಾಂಕ(ಕೃಷ್ಣ)ನು ಉತ್ಸಾಹದಿಂದ ದೇವೇಂದ್ರನಿಗೆ ವರಗಳನ್ನು ಕೊಟ್ಟು "ಇಂದಿನ ರಾತ್ರೆಯ ಬೆಳುದಿಂಗಳಲ್ಲಿ ರಾಸಕ್ರೀಡೆಯನ್ನಾಡುವೆನು, ನೀನು ಆ ವಿನೋದವನ್ನು ನನ್ನ ಸಮೀಪದಲ್ಲಿದ್ದು ಗೋಪಜನಕ್ಕೆ ಅದೃಶ್ಯನಾಗಿದ್ದು ನೋಡಿ ಹೋಗಬೇಕು." ಎಂದು

ನೆಗಳ್ವ ಭಾರತಯುದ್ಧದೊಳ್ ಕಪಿಧ್ವಜಂಗೆ ನೀನೆ ಸಾರಥಿಯಪ್ಪುದು. ಈ ವರತ್ರಯಮಂ ನೀನೆನಗೆ ದಯೆಗೆಯ್ವುದೆನೆ ಭಕ್ತವತ್ಸಲಂ ಶ್ರೀವತ್ಸಾಂಕನುತ್ಸಾಹದಿಂ ದೇವವರಂಗೆ ಕೊಟ್ಟಂದಿನಿರುಳ ಬೆಳ್ದಿಂಗಳೊಳ್ ರಾಸಕ್ರೀಡೆಯನಾಡಿದಪೆಂ; ನೀನಾ ವಿನೋದಮನೆನ್ನ ಸಮೀಪದೊಳಿರ್ದು ಗೋಪಜನಕ್ಕದೃಶ್ಯರೂಪನಾಗಿ ನೋಡಿ ಪೋಪುದೆಂದು ನಿಲಿಸುವುದುಂ ಇಂದ್ರನಂ ಕಟಿಪಿದನೆಗೆತ್ತು ಗೋಪಾಲಕರ್ ಬಂದು ಪರಿವೇಷ್ಟಿಸಿ ಗೋಷ್ಠಿಯಿಂ ಕುಳ್ಳಿರ್ದು ಪೂತನಾಹರಣದಿಂ ಗೋವರ್ಧನೋದ್ಧರಣಪರ್ಯಂತವಾದ ಸಾಹಸಂಗಳನೆಣಿಸಿ ವಿಸ್ಮಯವಿಧೂನಿತೋತ್ತಮಾಂಗರಾಗಿ ಕೈಗಳಂ ಮುಗಿದು

ಪಸುಗೂಸುತನದೊಳಂ ಸಾ
ಹಸವತಿಮಾನುಷಮತೀಂದ್ರಿಯಂ ನಿನಗದಱಿಂ
ಬೆಸಗೊಂಡಪೆವೊಂದಂ ಬಂ
ಚಿಸದುಳ್ಳುದನೆಮಗೆ ಕೃಷ್ಣ ಪೇೞಲೆವೇೞ್ಕುಂ ೧೦೯

ಸುರನೋ ಸಿದ್ಧನೋ ಯಕ್ಷನೋ ಗರುಡನೋ ನೀನಾರ್ಗೆ ಪೇೞೆಂದು ಗೋ
ಪರೆನಲ್ ಸಪ್ರಣಯಪ್ರಕೋಪಿ ಹರಿ ಕೇಳ್ವಾನಾರುಮಲ್ಲೆಂ ಮದಾ
ಚರಣಂ ದೂಷ್ಯಮೆ ಮಾಣ್ಬುದೆನ್ನ ಕೆಳೆಯಂ ಮೇಣ್ ಮಚ್ಚರಿತ್ರಂ ಮನೋ
ಹರಮೇ ಭಾವಿಪುದೆನ್ನನಾತ್ಮಸಮನೆಂದೇಕನ್ಯಥಾಕಲ್ಪನಂ ೧೧೦

ವ|| ಎಂಬುದುಮಾ ದಿವ್ಯವಚನವಕ್ರಿಮಕ್ರಮವೆ ತಮಗನುಗ್ರಹಪಕ್ಷಮಾಗೆ ಕೃಷ್ಣನಂ ಪರಮಾತ್ಮಸ್ವರೂಪನೆಂದಱಿದು ಗೋಪರ್ ಕೃತಕೃತ್ಯರಾಗಿರ್ಪಿನಮನಂತರಂ

ಅರುಣಾಂಶುಗಳಿಂ ಪಶ್ಚಿಮ
ಗಿರಿಕೂಟಮನರ್ಕಪೂರ್ವಪಲ್ಲವಚಯದಿಂ
ನೆರಪಿ ಪಡುನೇಸಱಿಸೆದುದು
ಶರನಿಧಿನಾಥಂಗೆ ಪಿಡಿದ ಮಾಣಿಕಗೊಡೆವೊಲ್ ೧೧೧

ನಿಲ್ಲಿಸಿದನು. ಕೃಷ್ಣನು ಇಂದ್ರನನ್ನು ಕಳುಹಿಸಿರುವನೆಂದು ಭಾವಿಸಿ, ಗೋಪಾಲಕರು ಬಂದು, ಸುತ್ತುವರಿದು ಗುಂಪುಗೂಡಿ ಕುಳಿತುಕೊಂಡು ಪೂತನಿಯ ಕೊಲೆಯಿಂದ ಹಿಡಿದು ಗೋವರ್ಧನೋದ್ಧರಣಪರ್ಯಂತವಾದ ಕೃಷ್ಣನ ಸಾಹಸಗಳನ್ನೆಣಿಸಿ ವಿಸ್ಮಯದಿಂದ ತಲೆದೂಗಿದವರಾಗಿ ಕೈಗಳನ್ನು ಮುಗಿದು ೧೦೯. "ಕೃಷ್ಣಾ! ಹಸುಗೂಸುತನದಲ್ಲೂ ನಿನ್ನ ಸಾಹಸವು ಮನುಷ್ಯರಿಗೆ ಮೀರಿದುದು. ಇಂದ್ರಿಯಾತೀತವಾದುದು. ಆದುದರಿಂದ ನಿನ್ನಲ್ಲಿ ನಾವು ಒಂದನ್ನು ಕೇಳುತ್ತೇವೆ. ವಂಚಿಸದೆ ಇರುವ ವಿಚಾರವನ್ನು ನೀನು ನಮಗೆ ಹೇಳಲೇಬೇಕು. ೧೧೦. "ನೀನು ಸುರನೋ ಸಿದ್ಧನೋ ಯಕ್ಷನೋ ಗರುಡನೋ? ಯಾರೆಂಬುದನ್ನು ಹೇಳು" ಎಂದು ಗೋಪರು ಕೇಳಿದರು. ಪ್ರೀತಿ ಪೂರ್ವಕವಾದ ಹುಸಿ ಮುನಿಸಿನಿಂದ ಆ ಹರಿಯು ನಾನು ಬೇರೆ ಯಾರೂ ಅಲ್ಲ. ನನ್ನ ಆಚರಣೆಯು ದೂಷ್ಯವಾಗಿದ್ದಲ್ಲಿ ನೀವು ನನ್ನ ಗೆಳೆತನವನ್ನು ಬಿಟ್ಟುಬಿಡಿ. ಹಾಗಲ್ಲದೆ ನನ್ನ ಚರಿತೆಯು ಮನೋಹರವಾಗಿದ್ದರೆ, ನನ್ನನ್ನು ನಿಮ್ಮ ಸಮಾನನನ್ನಾಗಿಯೇ ಭಾವಿಸಿರಿ. ಬೇರೆ ಕಲ್ಪನೆಯೇಕೆ?" ಎಂದನು. ವ|| ವಕ್ರೋಕ್ತಿಯಾದ ಆ ದಿವ್ಯವಚನವೇ ತಮಗೆ ಅನುಗ್ರಹವಾಗಲಾಗಿ ಕೃಷ್ಣನನ್ನು ಪರಮಾತ್ಮಸ್ವರೂಪನೆಂದರಿತ ಗೋಪರು, ತಾವು ಧನ್ಯರೆಂದು ಕೊಂಡರು. ಬಳಿಕ ೧೧೧. ಸಂಜೆ ಸೂರ್ಯನು, ಮುಳುಗುವ ಸಮಯದಲ್ಲಿ ತನ್ನ ಕೆಂಪಾದ ಕಿರಣಗಳೆಂಬ ಚಿಗುರುಗಳಿಂದಲಂಕರಿಸಿ, ವರುಣನಿಗೆ ಹಿಡಿವ ಕೆಂಪು ರನ್ನದ

ವ|| ಅಂತು ನೇಸರ್ಪಡಲೊಡಂ

ಅವಿತತಮಳುರ್ವ ಮಹಾಬಾ
ಡವವಹ್ನಿಯ ಭೀತಿಯಿಂದಮೊಯ್ಯನೆ ಪೂರ್ವಾ
ರ್ಣವದಿಂದಂ ಪೊಱಮಟ್ಟುದು
ಪವಳದ ಕೆಂಪಡರ್ದ ಕೂರ್ಮನೆನೆ ವಿಧುವೆಸೆದಂ ೧೧೨

ವ|| ಅಂತು ನಿಶೀಥಿನೀನಾಥಮಂಡಲಮುದಯಶಿಖರಿ[1]ಶಿಖರಮಂಡನಮಪ್ಪುದುಂ

ಇಂಗಡಲಿಂದಮಿಂದು ಗಡ ಪುಟ್ಟಿದನಂತದು ಕೆಮ್ಮನಿಂದುವಿಂ
ದಿಂಗಡಲಲ್ತೆ ಪುಟ್ಟಿತೆನೆ ರಂಜಿಸಿ ಗೋಪವಧೂಕದಂಬಕಾ
ಪಾಂಗರುಚಿಚ್ಛಟಾಪಟಲದಿಂ ದಳವೇಱಿ ಪಳಚ್ಚನಚ್ಚವೆ
ಳ್ದಿಂಗಳಶೇಷಮಂ ಬೆಳಗಿದತ್ತು ನಿಶಾಲತೆ ಪೂತ ಮಾಳ್ಕೆಯಿಂ ೧೧೩

ವ|| ಅಂತು ವಿಕಸಿತಕುಮುದಕುವಲಯಮಾಲತೀಕುಸುಮಾಮೋದಿತದಿಗಂತರಾಳವಾದಮಲಕೌಮುದೀವಿಲಾಸಮಂ ಮನದೆ ಕೊಂಡು

ಚಳಮಾಲೋರಸ್ಸ್ಥಳಂ ಕಾಂಚನರುಚಿನಿಚಯಂ ಸಂಚಲತ್ಕರ್ಣಪೂರಂ
ವಿಳಸದ್ಬರ್ಹಾವತಂಸಂ ಸ್ಫುರದಧರಸುಧಾಪೂರದಿಂ ವೇಣುರಂಧ್ರಾ
ವಳಿಯಂ ತೀವುತ್ತುಮುದ್ಯನ್ನಟಧರವಪುವಿಂ ಬಂದು ವೃಂದಾವನಾಂತ
ಸ್ಸ್ಥಳಮಂ ಪೊಕ್ಕಂ ಪದಾಬ್ಜನ್ಯಸನಮೆಸೆಯೆ ರಾಸಕ್ರಿಯಾರಂಭಚಿತ್ತಂ ೧೧೪

ಕೊಡೆಯಂತೆ ಕಾಣಿಸಿದನು. ೧೧೨. ನಿಜವಾಗಿಯೂ ಹರಡುತ್ತಿರುವ ಮಹಾಬಡಬಾಗ್ನಿಯ ಭೀತಿಯಿಂದ ಹವಳದ ಕೆಂಪೇರಿದ ಕೂರ್ಮನು ಪೂರ್ವಸಮುದ್ರದಿಂದ ಮೆತ್ತಗೆ ಹೊರಟನೆನ್ನುವಂತೆ ಉರಿಸುವ ಚಂದ್ರನು ಹೊಳೆದನು. ವ|| ಹಾಗೆ ಚಂದ್ರಮಂಡಲವು ಉದಯಗಿರಿಶಿಖರವನ್ನು ಅಲಂಕರಿಸಿದ್ದಾಗ ೧೧೩. ಕ್ಷೀರಸಮುದ್ರದಿಂದ ಚಂದ್ರನುದಿಸಿದನು ಎಂಬುದು ಸುಳ್ಳು, ಚಂದ್ರನಿಂದಲೇ ಕ್ಷೀರಸಮುದ್ರವು ಉದಿಸಿತಲ್ಲವೆ? ಎನ್ನುವಂತೆ ಹೊಳೆದು ಗೋಪಸ್ತ್ರೀಯರ ಕಡೆಗಣ್ಣಿನ ನೋಟದಿಂದ ದಳವೇರಿದ ರಾತ್ರಿಯೆಂಬ ಬಳ್ಳಿಯು ಹೂವನ್ನು ಪಡೆದಂತೆ ಸ್ವಚ್ಛವಾದ ಬೆಳದಿಂಗಳು ಎಲ್ಲವನ್ನೂ ಪ್ರಕಾಶಗೊಳಿಸಿತು. ವ|| ಹಾಗೆ ಅರಳಿದ ಕನ್ನೈದಿಲೆ ಜಾಜಿ ಹೂಗಳ ಸುವಾಸನೆಯಿಂದ ದಿಗಂತರಾಳವನ್ನು ತುಂಬಿದ ನಿರ್ಮಲವಾದ ಬೆಳುದಿಂಗಳ ಸೊಬಗನ್ನು ಮನಸ್ಸಿಗೆ ತಂದುಕೊಂಡು ೧೧೪. ರಾಸಕ್ರೀಡೆಯನ್ನಾರಂಭಿಸುವುದರಲ್ಲಿ ಮನಸ್ಸುಳ್ಳ ಕೃಷ್ಣನು, ಸುವರ್ಣ ಕವಚವನ್ನೂ ಎದೆಯ ಮೇಲೆ ಚಲಿಸುತ್ತಿರುವ ಹೂವಿನ ಹಾರವನ್ನೂ ನವಿಲುಗರಿಯ ಕಿರೀಟವನ್ನೂ ಧರಿಸಿ, ಹೊಳೆಯುವ ಅಧರಾಮೃತದ ಪ್ರವಾಹದಿಂದ ಕೊಳಲಿನ ರಂಧ್ರಗಳನ್ನು ತುಂಬುತ್ತಾ ಉತ್ತಮ ನಟಧರವೇಷದಿಂದ ಕಮಲದಂತಿರುವ ಕಾಲನ್ನಿಡುವುದೇ ಮನೋಹರವಾಗಿರಲು, ನಡೆದು ಬಂದು ಬೃಂದಾವನ ಪ್ರದೇಶವನ್ನು ಅಲಂಕರಿಸಿದನು.

---

೧. ಶೇಖರ (ಕ)

ಮುರಹರನ ಕೊಙಲ ಸನ್ನೆಯ
ವರರವಕನುಸರವಿದೆಂಬಿನಂ ಬಗೆಗೊಳಲಾ
ಸರದ ಬಟೆವಿಡಿದು ತನ್ನುರ
ಹರನಲ್ಲಿಗೆ ನೆರೆದು ಗೋಪಿಯರ್ ನಡೆವೆಡೆಯೊಳ್ ೧೧೫

ಕೊಂಕಿದ ಪುರ್ಬುಂ ತೆಳ್ವಸಿ
ಱುಂ ಕೋಮಲತನುವುಮೆಸೆಯೆ ನಡೆತಂದುದು ಚೆ
ಲ್ವಿಂ ಕದಳೀಪತ್ರದ ದೂ
ರ್ವಾಂಕುರದೆಳವಿದಿರ ಬಣ್ಣದಬಲಾನೀಕಂ ೧೧೬

ವದನೇಂದುವ ಕಾಂತಿ ಕಟಾ
ಕ್ಷದ ರುಚಿ ದರಹಾಸದಂಶು ತಳ್ತಿರೆ ನಡೆತಂ
ದುದು ಹಂಸಯಾನದಿಭಯಾ
ನದ ಮಂದರಯಾನದಂಗನಾನಿಕುರುಂಬಂ ೧೧೭

ಕಣ್ದಾವರೆಗಳ ಪೊಳೆಪುಗ
ಳೆಣ್ದೆಸೆಯಂ ಪುದಿಯೆ ಬಂದುದತಿಮೃದುಗತಿಯಿಂ
ಪೂಣ್ದೆಸೆವ ತೋರದೊಡೆಗಳ
ನುಣ್ದೊಡೆಗಳ ಬಟ್ಟದೊಡೆಗಳಬಲಾನೀಕಂ ೧೧೮

ನಡು [1]ನಳಿಯೆ ಪೊಳೆಯೆ ಕಣ್ಗಳ್
ಪೊಡರೆ ಕುಚಂ ಮಿಳಿರೆ ಮೇಲುದೆಸೆಯೆ ವಿಳಾಸಂ
[2]ನಡೆದರ್ ಕೇಸಡಿಗಳ ತಳಿ
ರಡಿಗಳ ಮೆಲ್ಲಡಿಗಳತನುಶರಸನ್ನಿಭೆಯರ್ ೧೧೯

೧೧೫. ಮುರಹರನ ಕೊಳಲಿನ ಸಂಜ್ಞೆಯ ಉತ್ತಮ ಧ್ವನಿಯಂತೆ ಮನೋಹರವಾಗಿರಲು ಗೋಪಿಯರು ಗುಂಪುಕೂಡಿ ಆ ಸ್ವರವು ಬರುತ್ತಿರುವ ದಾರಿಯನ್ನೇ ಹಿಡಿದು ಅವನ ಹತ್ತಿರ ನಡೆದರು. ೧೧೬. ಬಾಳೆಯ ಎಲೆಯ, ಎಳೆಯ ಗರುಕೆಯ ಮತ್ತು ಎಳೆ ಬಿದುರಿನ ಬಣ್ಣದ ಅಬಲೆಯರ ಗುಂಪು, ಡೊಂಕಾದ ಹುಬ್ಬು ತೆಳುವಾದ ಉದರವೂ ಕೋಮಲವಾದ ದೇಹವೂ ಚೆನ್ನಾಗಿ ಕಾಣುತ್ತಿರಲು ನಡೆದು ಕೃಷ್ಣನ ಹತ್ತಿರ ಬಂದರು. ೧೧೭. ಹಂಸೆಯಂತೆಯೂ ಮದ್ದಾನೆಯಂತೆಯೂ ಮಂದವಾಗಿ ನಡೆಯುವ ಯುವತಿಯರ ಗುಂಪು, ಮುಖಚಂದ್ರನ, ಕಡೆಗಣ್ಣಿನ, ಕಿರುನಗೆಯ ಬೆಳಕನ್ನು ಹರಡುತ್ತಾ ಬಂದಿತು. ೧೧೮. ಹೊಳೆಯುವ ತೋರದೊಡೆಗಳ ನುಣುಪುದೊಡೆಗಳ ದುಂಡುದೊಡೆಗಳ ಅಬಲೆಯರ ಗುಂಪು ತನ್ನ ತಾವರೆಗಣ್ಣುಗಳ ಕಾಂತಿಯನ್ನು ಎಂಟು ದಿಕ್ಕಿಗೂ ಹರಡುತ್ತಾ ಮಂದಗಮನದಿಂದ ಉದ್ದೇಶಪೂರ್ವಕವಾಗಿ ಬಂದಿತು. ೧೧೯. ನಡು ಬಾಗುತ್ತಲೂ ಕಣ್ಣುಗಳು ಹೊಳೆಯುತ್ತಲೂ ಸ್ತನವು ಅದಿರುತ್ತಲೂ ಮೇಲುಸೆರಗು ಚಲಿಸುತ್ತಲೂ ಬೆಡಗು ಎಸೆಯುತ್ತಲೂ ಕೆಂಪುಗಾಲಿನ,

೧. ಸೆಳೆಯೆ (ಕಖಗ) ೨. ನಡೆತಂದರ್ ಕೇಸಡಿ (ಕಗ)

ಉಡೆನೂಲ್ ಸಡಿಲಲ್ ಮೆಲ್ನುಲಿ
ಪೊಡರೆ ನಿಜಾವಳಿಯ ಶೋಭೆ ರಂಜಿಸೆ ಬಂದರ್
ಗಡಣದ ತೆಳ್ನಡುವಿನ ಸೆಳೆ
ನಡುವಿನ ಬಡನಡುವಿನಸಿಯ ನಡುವಿನ ಸತಿಯರ್ ೧೨೦

ಲಳಿತನಿಜರೂಪವಿಭ್ರಮ
ವಿಳಾಸಮಡರ್ದೆಸೆಯೆ ಬಂದರಾಮಳಕಕುಚಂ
ಗಳ ನಾರಂಗಕುಚಂಗಳ
ನಳಿನೀಕುಟ್ಮಳಕುಚಂಗಳೆಳಜವ್ವನೆಯರ್ ೧೨೧

ಅವಯುವದ ಚೆಲ್ವು ತಾನಂ
ತವಯುವದಿಂ ಗೆಲೆ ವಿಳಾಸವಮರಿಯರ ವಿಳಾ
ಸವನಿಟೆಸಲ್ ಬಂದರ್ ಪವ
ಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್ ೧೨೨

ಜಗುಟೆ ಕಳಕಾಂಚಿ ಹಾರಮು
ನುಗುಟೆ ಕುಚಂ ನೆಗಟೆ ನೂಪುರಧ್ವನಿ ರೂಪಂ
ಪೊಗಟೆ ಜನವಂದು ಬಂದರ್
ನಗೆಮೊಗದುಡುಮೊಗದ ಮುದ್ದುಮೊಗದಂಗನೆಯರ್ ೧೨೩

ಲಳಿತಾಕಾರಂ ವಿಭವಂ
ಬೆಳಗುವ ಲಾವಣ್ಯಮೆಸೆಯೆ ಬಂದರ್ ನಗೆಗ
ಣ್ಗಳ ಚಲ್ಲೆಗಣ್ಗಳಲರ್ಗ
ಣ್ಗಳ ನಡುಗಣ್ಗಳ ಬೆಡಂಗಿಯರ್ ಕೋಮಲೆಯರ್ ೧೨೪

ಚಿಗುರುಗಾಲಿನ ಮೆದುಗಾಲಿನ, ಕಾಮಬಾಣದಂತಿರುವ ಯುವತಿಯರು ನಡೆದರು. ೧೨೦. ತೆಳುನೆಡುವಿನ ಬೆತ್ತದಂತಹ ನಡುವಿನ ಬಡನಡುವಿನ ಸೂಕ್ಷ್ಮವಾದ ನಡುವಿನ ಸತಿಯರು ಗುಂಪಾಗಿ ಉಡೆದಾರವು ಸಡಿಲವಾಗುತ್ತಲೂ ಮೆತ್ತನೆಯ ಮಾತು ಹೆಚ್ಚುತ್ತಲೂ ತಮ್ಮ ಸಾಲಿನ ಸೊಗಸು ಹೆಚ್ಚುತ್ತಲೂ ಇರುವಲ್ಲಿ ಕೃಷ್ಣನಲ್ಲಿಗೆ ಬಂದರು. ೧೨೧. ಲಲಿತವಾದ ತಮ್ಮ ರೂಪವೂ ಬೆಡಗೂ ಅಲಂಕಾರವೂ ವಿಲಾಸವೂ ಹೆಚ್ಚುತ್ತಿರಲು ನೆಲ್ಲಿಯಕಾಯ ಗಾತ್ರದ ಕಿತ್ತಲೆಯ ಹಣ್ಣಿನ ಗಾತ್ರದ ಮತ್ತು ತಾವರೆಯ ಮೊಗ್ಗಿನ ಗಾತ್ರದ ಸ್ತನಗಳ ನವಯುವತಿಯರು ಬಂದರು. ೧೨೨. ಹವಳದ ತುಟಿಯ, ಚಿಗುರುದುಟಿಯ ತೊಂಡೆಯ ಹಣ್ಣಿನ ತುಟಿಯ ಸುಂದರಿಯರು ತಮ್ಮ ಅಂಗಗಳ ಚೆಲುವು ದೇವವನಿತೆಯರ ಚೆಲುವನ್ನೂ ತಮ್ಮ ವಿಲಾಸವು ಅವರ ವಿಲಾಸವನ್ನೂ ಸಾಮರ್ಥ್ಯದಿಂದ ಜಯಿಸುತ್ತಿರಲು ಅಲ್ಲಿ ಬಂದರು. ೧೨೩. ಶಬ್ದಮಾಡುವ ಒಡ್ಯಾಣ ಜಾರುತ್ತಲೂ, ಸ್ತನವು ಹಾರವನ್ನು ತಳ್ಳುತ್ತಲೂ, ಕಾಲ್ಬಳೆಯ ಶಬ್ದವು ಹೆಚ್ಚುತ್ತಲೂ, ರೂಪವನ್ನು ಜನ ಹೊಗಳುತ್ತಲೂ ಇರುವಲ್ಲಿ ನಗುಮುಖದ ಚಂದ್ರಮುಖದ ಮುದ್ದುಮುಖದ ಅಂಗನೆಯರು ಬೃಂದಾವನಕ್ಕೆ ಬಂದರು. ೧೨೪. ಸುಂದರಾಕಾರವೂ ವೈಭವವೂ ಹೊಳೆಯುವ ಲಾವಣ್ಯವೂ ಹೆಚ್ಚಾಗಿರಲು ನಗೆಗಣ್ಣಿನ

[1]ದೊರೆಯಾರೋ ಚೆಲ್ವಿಂಗ
ಪ್ಸರಸಿಯರೀಕೆಯರೊಳೆನಿಸಿ ಮೆಱೆವರ್ ಸುರ್ಕುಂ
ಗುರುಳ ಸುೞಿಗುರುಳ ನಿಡುಗುರು
ಳುರುಳಿಗುರುಳ ತುಂಬಿಗುರುಳ ಗೋಪಸ್ತ್ರೀಯರ್ ೧೨೫

[2]ತುಡುಗೆಯ ಬಂಬಲ್ವೆಳಗಿಂ
ಪಡೆಯುತ್ತೆಣ್ದೆಸೆಯೊಳಿಂದ್ರಚಾಪಶ್ರೀಯಂ
ನಡೆತಂದರ್ ಚೆಲ್ವಿಂದೊ
ಳ್ನುಡಿಯ ತಡಂನುಡಿಯ ತೊದಳ ನುಡಿಯೊಳ್ವೆಂಡಿರ್ ೧೨೬

ಬಂದೆಳಸಿ [3]ಬಳಸೆ ಗೋಪೀ
ವೃಂದಂ [4]ತುಹಿನಾಂಶು ಬೆಳಗೆ ಕುಮುದಾಮೋದ
ಸ್ಯಂದಿ ಮೃದುಪವನನೆಸೆಗೆ ಮು
ಕುಂದಂ ತತ್ಕೇಳಿರಂಗದೊಳ್ ರಂಜಿಸಿದಂ ೧೨೭

ಮುಡಿಗಟ್ಟಿಂಬಾಗೆ ನುಣ್ಬೀಲಿಯಿನಮರೆ ಭುಜಂ ರತ್ನಕೇಯೂರದಿಂದು
ಳ್ಳುಡೆ ಚೆಲ್ವಂ ಬೀಱೆ ಪೀತಾಂಬರದಿನಗಲ್ದುರಂ ಕೌಸ್ತುಭಶ್ರೀಯಿನೊಳ್ಪಂ
ಕುಡೆ ಗಂಡಂ ಕುಂಡಲಾಂದೋಳನದಿನೆಸೆಯೆ ನಿಂದಂ [5]ತ್ರಿಭಂಗಾಂಗದಿಂ ನೋ
ಟ್ಕೊಪ್ಪೆ ಶೃಂಗಾರಾವತಾರಂ ಮುರರಿಪು ಕೊಟಲಂ ಬಾಜಿಸುತ್ತಿರ್ದನಾಗಳ್ ೧೨೮

ಚೆಲ್ಲಗಣ್ಣಿನ ತಾವರೆಗಣ್ಣಿನ ನಿಡುಗಣ್ಣಿನ ಬೆಡಗಿನ ಕೋಮಲೆಯರು, ಬಂದರು. ೧೨೫. ಚೆಲುವಿನಲ್ಲಿ ಈಕೆಯರಿಗೆ ಸಮಾನರು ಅಪ್ಸರಸ್ತ್ರೀಯರಲ್ಲಿ ತಾನೆ ಯಾರಿರುವರು! ಎನ್ನಿಸಿಕೊಂಡ ಸುಕ್ಕುಗುರುಳಿನ ಸುಳಿಗುರುಳಿನ ಉದ್ದಗುರುಳಿನ ಉರುಳಿಗುರುಳಿನ ತುಂಬಿಗುರುಳಿನ ಗೋಪಸ್ತ್ರೀಯರು ಮೆರೆದರು. ೧೨೬. ಆಭರಣಗಳ ಬೇರೆ ಬೇರೆ ಬಣ್ಣದ ಬೆಳಕಿನ ಸಮೂಹದಿಂದ ಎಂಟು ದಿಕ್ಕುಗಳಲ್ಲೂ ಕಾಮನ ಬಿಲ್ಲಿನ ಕಾಂತಿಯನ್ನುಂಟುಮಾಡುತ್ತಾ ಒಳ್ಳೆಯ ಮಾತಿನ, ತಡೆದು ಆಡುವ ಮಾತಿನ, ತೊದಲು ಮಾತಿನ, ಒಳ್ಳೆಯ ಸ್ತ್ರೀಯರು ಚೆಲುವಿನಿಂದ ನಡೆದು ಬಂದರು. ೧೨೭. ಗೋಪಿಯರ ಗುಂಪು ರಾಗಾಸಕ್ತಿಯಿಂದ ಬಂದಿತು. ಚಂದ್ರನು ಪ್ರಕಾಶಿಸುತ್ತಿದ್ದನು. ನೈದಿಲೆಯ ಸುವಾಸನೆಯನ್ನು ಬೀರುವ ಮಂದಮಾರುತವು ಬೀಸುತ್ತಿದ್ದಿತು. ಗುಂಪು ಕೃಷ್ಣನನ್ನು ಸುತ್ತುಗಟ್ಟಿತು. ಅವನು ಅದರ ನಡುವೆ ಕ್ರೀಡಾರಂಗದಲ್ಲಿ ಹೊಳೆಯುತ್ತಿದ್ದನು. ೧೨೮. ಮುಡಿಗಂಟು ನುಣುಪಾದ ನವಿಲುಗರಿಯಿಂದಲೂ, ಭುಜವು ರತ್ನಖಚಿತವಾದ ಭುಜಕಿರೀಟದಿಂದಲೂ, ಕೆಳಉಡಿಗೆಯು ಪೀತಾಂಬರದಿಂದಲೂ ವಿಶಾಲವಾದ ಎದೆಯು

---

೧. ಒರೆಯಾರೊ (ಖಗ) ೨. ನಿಡುಗಂಗಳ (ಖ) ೩. ಬಯಸಿ (ಕಗ) ೪. ಕುಮುದಾಂಶು (ಕಗ) ೫. ತ್ರಿಭಂಗಾಗ್ರದಿಂ (ಕಖಗ)

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಮಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀ
ಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯ ಮಹಾಪ್ರಬಂಧದೊಳ್ ಪಯೋಧರಾಗಮನ
ಧೇನುಕನಿರ್ಧೂನನಪ್ರಳಂಬನಿಶುಂಭನಶರತ್ಕಾಲಗಿರಿಯಜ್ಞ
ಗೋವರ್ಧನೋದ್ಧರಣ ಶಕ್ರಾಗಮನಗೋವಿಂದಾಭಿ
ಷೇಕೋತ್ಸವರಾಸಕ್ರೀಡಾಪ್ರಾರಂಭವರ್ಣನಂ
ಚತುರ್ಥಾಶ್ವಾಸಂ

ಕೌಸ್ತುಭರತ್ನಕಾಂತಿಯಿಂದಲೂ, ಕೆನ್ನೆಗಳು ಕಡುಕಿನ ಝುಮಕಿಯ ತೂಗಾಟದಿಂದಲೂ ಅಲಂಕೃತವಾಗಿ ಹೊಳೆಯುತ್ತಿರಲು, ಶೃಂಗಾರದ ಅವತಾರದಂತೆ ಕಾಣಿಸುತ್ತಿದ್ದ ಕೃಷ್ಣನು (ತ್ರಿಭಂಗಾಂಗದಿಂದ =) ಮೂರೆಡೆಯಲ್ಲಿ ಬಾಗಿಸಿದ ದೇಹವುಳ್ಳವನಾಗಿ ನಿಂತು, ಕೊಳಲನ್ನು ಬಾಜಿಸುತ್ತಿದ್ದನು. ಇದು ಸಮಸ್ತ.... ಕವೀಂದ್ರ ರುದ್ರಪ್ರಣೀತ ಜಗನ್ನಾಥವಿಜಯದಲ್ಲಿ ಮಳೆಗಾಲದ ವರ್ಣನೆ, ಧೇನುಕ ಪ್ರಲಂಬವಧೆ, ಶರತ್ಕಾಲಗಿರಿಯಜ್ಞ, ಗೋವರ್ಧನೋದ್ಧರಣ, ಇಂದ್ರಾಗಮನ, ಗೋವಿಂದಪದಾಭಿಷೇಕೋತ್ಸವ ರಾಸ ಕ್ರೀಡಾರಂಭಗಳ ವರ್ಣನೆಯ ನಾಲ್ಕನೆಯ ಆಶ್ವಾಸ.

# ಪಂಚಮಾಶ್ವಾಸಂ

ಶ್ರೀಕಮಳಲೋಚನಂ ತ್ರ್ಯ
ಶ್ರೀಕೃತಪದನುನ್ನತೈಕಜಘನಂ ಲಲಿತ
ಭ್ರೂಕಂ ತಿರ್ಯಗ್ವಳಿತ
ವ್ಯಾಕುಂಚಿತಕಂಠನೂದುತಿರ್ದಂ ಕೊಳಲಂ ೧

ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಿಂಪನಿ
ರ್ಕುಳಿಗೊಂಡೊಟ್ಟಜೆಯಂ ನಿಮಿರ್ಚಿ ನಯಮಂ ತಳ್ಪೊಯ್ದಲಂಕಾರಮಂ
ಕೆಳೆಗೊಂಡಾಣತಿಯಂ ತೆರಳ್ಚಿ ಜತಿಯಂ [1]ಸೈತೋಜೆಯಂ ತಾಳ್ದಿ ಗೋ
ವಳರಾಯಂ ಕೊಳಲೂದಿದಂ ನೆಗಟ್ಟೆಸಂ ಮಾಧುರ್ಯತೂರ್ಯಸ್ವನಂ ೨

ಭಣಿತೆ ಬೆಡಂಗು ಕಾಕು ಖಚರಂ ಗಮಕಂ ತಿರುಪಿಂಪು ನುಣ್ಪು ನೇ
ವಣೆ ಕಣೆ ಬಣ್ಣದೊಡ್ಡವಣೆ ಕಾಳಸಿ ಬೈಸಿಕೆ ಪಟ್ಟ ಕಾಂತಿ ಕೊಂ
ಕಣುಕನುಜಾಯಿ [2]ಗೀತಿ ಜತಿ ಜೋಕೆ ನಯಂ ಬಹುಲಾಯಿ ದೇಸೆ ಪೆ
ಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ ೩

ರಸಭಾವಂ ಪೆಱತೋಜೆ ಬೇಱೆ ಜತಿ ಮತ್ತೊಂದಿಂಪಪೂರ್ವಂ ನಯಂ
ಪೊಸತೆಂಬಂತಿರೆ ನಾಳಿಕೇರರಸಧಾರಾವೃಷ್ಟಿ ಜೇನೆಯ್ಯ ಸೋ
ನೆ ಸುಧಾಸಾರವಿದೆತ್ತಣಿಂ ಪಸರಿಸಿತ್ತೆಂಬಂತು ದೈತ್ಯಾರಿ ಬಾ
ಜಿಸಿದಂ ಬಣ್ಣಿಸೆ ವಾಸವಂ ಮಧುರನಾದಾವಾಸವಂ ವಾಸವಂ ೪

೧. ಕಮಲನೇತ್ರ ಕೃಷ್ಣನು, ತ್ರಿಭುಜಾಕಾರವಾಗಿಸಿದ ಕಾಲೂ ಒಂದು ಕಡೆಗೆ ಉಬ್ಬಿದ ಕಿಬ್ಬೊಟ್ಟೆಯೂ ಲಲಿತವಾದ ಹುಬ್ಬೂ ಪಕ್ಕಕ್ಕೆ ತಿರುಗಿದ ಬಾಗಿದ ಕೊರಳೂ ಮನೋಹರವಾಗಿರಲು ಕೊಳಲನ್ನೂದುತ್ತಿದ್ದನು. ೨. ಆ ಗೋಪಾಲರಾಜನು ಚಮತ್ಕಾರವನ್ನು ಹೆಚ್ಚಿಸಿ, ರಾಗವನ್ನು ಸರಿಯಾಗಿಸಿ, ನಯವಾಗಿರುವುದನ್ನು ಮತ್ತಷ್ಟು ನಯಮಾಡಿ, ಇಂಪನ್ನು ಸ್ವಾಧೀನ ಮಾಡಿಕೊಂಡು, ಶ್ರುತಿಲಯಗಳಿಗೆ ಹೊಂದಿಕೆಯನ್ನೂ ನಯವನ್ನೂ ಒಟ್ಟುಗೂಡಿಸಿ, ಅಲಂಕಾರವನ್ನು ಒಡಗೊಳಿಸಿ, ಸಂಗೀತಶಾಸ್ತ್ರ ನಿಯಮವನ್ನು ಪ್ರಕಟಿಸುತ್ತ ಯತಿಕ್ರಮವನ್ನು ಸರಿಯಾಗಿ ಅನುಸರಿಸಿ, ಮಧುರವಾದ್ಯಧ್ವನಿಯು ಹೊಗಳಿಸಿಕೊಳ್ಳುವಂತೆ ಕೊಳಲನ್ನೂದಿದನು. ೩. ಸ್ಪಷ್ಟೋಚ್ಚಾರಣೆ ಬೆಡಗು, ಕಾಕು, ಖಚರ, ಗಮಕ, ತಿರುಪು, ಇಂಪು, ನುಣುಪು, ನೇವಣೆ, ಕಣೆ, ಬಣ್ಣದೊಡ್ಡವಣೆ, ಕಾಳಸೀ (ಔಚಿತ್ಯ), ಬೈಸಿಕೆ, ಪಟ್ಟ, ಕಾಂತಿ, ಕೊಂಕು, ಅಣುಕನುಜಾಯಿ, ಗೀತಿ, ಯತಿ, ಜೋಕೆ, ನಯ, ಬಹುಲಾಯಿ, ದೇಸೆ, ಪೆಲ್ಲಣೆ, ಕಳೆ ಎಂಬಿವುಗಳನ್ನು ಸ್ಪಷ್ಟಪಡಿಸಿ, ಕೃಷ್ಣನು ಕೊಳಲನ್ನು ಬಾಜಿಸಿದನು. ೪. ಕೃಷ್ಣನು-ರಸವೂ ಭಾವವೂ ಕ್ರಮವೂ ಯತಿಯೂ ಇಂಪೂ ಬೇರೆ ಹೊಸದು ಎನ್ನುವಂತೆಯೂ ಎಳೆನೀರಿನ ಧಾರೆಯ ಸುರಿಮಳೆ, ಜೇನುತುಪ್ಪದ ಸೋನೆ, ಅಮೃತವೃಷ್ಟಿ,

---

೧. ತೈತೋಜೆಯಂ (ಕಖಗ) ೨. ರೀತಿ (ಖ)

ಕಮಳದಳಾಕ್ಷನಾಕೃತಿಯನೀಕ್ಷಿಸಿ ಸಾಸಿರ ಕಣ್ಗಳಂಗದೊಳ್
ಸಮೆನಿಸಿದೀ ಕ್ರಮಂ ಸಫಲಮಾಯ್ತೆನಗೀತನದೊಂದು ವೇಣುನಾ
ದಮನೊಸೆದಾಲಿಸಲ್ ಕಿವಿಗಳೇಕೆಯೊ ಸಾಸಿರವಾದುವಿಲ್ಲೆನು
ತ್ತಮವರವರಂ ಮನಂಗೊಳೆ ನೆಗಟ್ಟುದು ಕೃಷ್ಣನ ವೇಣುನಿಸ್ವನಂ ೫

ವ॥ ಅನಂತರಂ

ಸುರುಚಿರಚಿತ್ರಾಭರಣಾಂ
ಬರಗೋಪೀರಚಿತರಾಸಮಂಡಲಬದ್ಧಾಂ
ತರ [1]ವೃತ್ತಿ ಗೋಪಚಂದ್ರಂ
ಪರಿವೇಷಂಗೊಂಡ ಚಂದ್ರನಂತೆಸೆದಿರ್ದಂ ೬

ಅಸಕೃದ್ಭ್ರೂಪಲ್ಲವೋಲ್ಲಾಸಿತವೆಸೆಯೆ ಚಳಲ್ಲೋಚನಾರೇಚನಂ ರಂ
ಜಿಸೆ ಮುಕ್ತಾಚ್ಛೋಟಿಕಾಡಂಬರಮಳವಡೆ ಬಾಹಾಲತಾಂದೋಲಮುನ್ಮೀ
ಲಿಸೆ ಕೃಷ್ಣಂ ನೃತ್ಯಮಂ ಸೂತ್ರಿಸುವುದುಮೊಲವಿಂ ಪಾಡುತುಂ ಗೋಪಿಯರ್ ನ
ರ್ತಿಸಿದರ್ ಚೈತ್ರಾನಿಳಂ ಸೂತ್ರಿಸೆ ವನಲತೆಗಳ್ ನರ್ತಿಪೊಂದಂದದಿಂದಂ ೭

ಇದು ಎಲ್ಲಿಂದ ಹೇಗೆ ಹರಡಿತು ಎಂದು ಇಂದ್ರನೂ ವರ್ಣಿಸುವಂತೆಯೂ ಮಧುರನಾದಕ್ಕೆ ಆಶ್ರಯವಾದ ಆ ಕೊಳಲನ್ನು ಬಾಜಿಸಿದನು. ೫. ದೇವೇಂದ್ರನು ಕಮಲನೇತ್ರ ಕೃಷ್ಣನ ಆಕಾರವನ್ನು ನೋಡಿ ಆನಂದಿಸಿ ನನ್ನ ದೇಹದಲ್ಲಿ ಸಾವಿರ ಕಣ್ಣುಗಳಿರುವುದು ಸಫಲವಾಯಿತು. ಈತನ ಕೊಳಲಿನ ಗಾನವನ್ನು ಕೇಳುವುದಕ್ಕೆ ಅನುಕೂಲವಾಗುವಂತೆ ಕಿವಿಗಳೇ ಸಾವಿರವಾಗಲಿಲ್ಲವೋ! ಎಂದು ಯೋಚಿಸುವಂತೆ ಮಾಡಿತು ಕೃಷ್ಣನ ಕೊಳಲಿನ ಮಧುರನಾದ. ೬. ಅತಿಮನೋಹರವೂ ವಿಚಿತ್ರವೂ ಆದ ವಸ್ತ್ರಾಭರಣಗಳಿಂದ ಅಲಂಕೃತರಾದ ಗೋಪಿಯರು ರಚಿಸಿದ ರಾಸಮಂಡಲದ ಮಧ್ಯದಲ್ಲಿ ಮನಃಪ್ರೀತಿಯಿಂದ ಬದ್ಧನಾದ ಗೋಪಚಂದ್ರನು ಪರಿವೇಷವನ್ನು ಪಡೆದ ಚಂದ್ರನಂತೆ ಹೊಳೆಯುತ್ತಿದ್ದನು. ೭. ಚಿಗುರು ಹುಬ್ಬು ಅಡಿಗಡಿಗೆ ಕುಣಿಯುತ್ತಾ ಚಂಚಲವಾದ ಕಡೆಗಣ್ಣಿನ ನೋಟವು ಹಾಯುತ್ತ ತಾಳಕ್ಕೆ ಹೊಂದಿಕೊಂಡ ಚಿಟಿಕೆ ಚಪ್ಪಾಳೆಗಳು ಆಗುತ್ತ ಮನೋಹರವಾದ ತೋಳುಗಳ ತೂಗಾಟವು ಆರಂಭವಾಗುತ್ತಿರುವಲ್ಲಿ ಕೃಷ್ಣನು ನರ್ತನವನ್ನು ಸರಿಯಾಗಿ ಮಾಡಲು ಪ್ರೇರಿಸಿದನು. ಗೋಪಿಯರು ಪ್ರೀತ್ಯಾದರಗಳಿಂದ ಹಾಡುತ್ತ ಚೈತ್ರಮಾಸದ ವಾಯುವಿನಿಂದ ಪ್ರೇರಿತವಾದ ವನದ ಬಳ್ಳಿಗಳಂತೆ ನರ್ತಿಸಿದರು.

---

೧. ವರ್ತಿ (ಕಖಗ)

ಇನಿಸಂ ಕೀಱ್ಬಾಡಿ ಭೃಂಗೀರುತಿಯನಿಟಿಸಿ ಪುಷ್ಪಾಯುಧಜ್ಯಾಲತಾನಿ
ಸ್ವನಮಂ ವಾಣೀವಿಪಂಚೀರವಮನಲೆದು ಗೇಯಸ್ವನಂ ಪೊಣ್ಮೆ ಗೋವಿಂ
ದನೆ ನಾನಾರೀತಿಯ ಕತ್ತುರಿಯ ಸೆಳೆಯನಲ್ಲಾಡಿದೊಂದಂದದಿಂ ವಾ
ಸನೆಯಾದತ್ತೆಂಬಿನಂ [1]ಪಾಡಿದುದೆಸೆಯೆ ನಟದ್ಗೋಪಕಾಂತಾಕದಂಬಂ ೮

ತನತನಗೆ ಗೋಪಿಯರ್ ಕೃ
ಷ್ಣನಂಕಮಾಲೆಯನೆ [2]ಪಾಡಿದರ್ ಕೃಷ್ಣಂ ಚಂ
ದ್ರನ ಬೆಳ್ದಿಂಗಳ ತಣ್ಣೆಟ
ಲ[3]ನೆಯ್ದಿಲೊಪ್ಪಮನೆ ಪಾಡಿದಂ ಕಳರವದಿಂ ೯

ವಲಯಾಳೀರವಮಂಘ್ರಿಭೂಷಣರವಂ ಕಾಂಚೀರವಂ ಪೊಣ್ಮೆ ಸು
ಯ್ಯಲರ್ಗಂಪಣ್ಪಿನ ಕಂಪು ಪೂಮುಡಿಯ ಕಂಪೊಂದೊಂದನೊಟ್ಟೈಸೆ ದೋ
ರ್ವಲನಂ ಭ್ರೂವಲನಂ ಕಟಾಕ್ಷವಲನಂ ಚೆಲ್ವಾಗೆ ಗೋಪಾಂಗನಾ
ವಲಿಯೊಳ್ ರಂಜಿಸಿದತ್ತು ಕಂಜನಯನಸ್ವಾಂತಕ್ಕಣಂ ಪೆಕ್ಕಣಂ ೧೦

ಗೀತರಸಪ್ರವಾಹನದಿ ಚಂಚಳನೇತ್ರಮರೀಚಿವೀಚಿ ಸಂ
ಘಾತಿತಹೃದ್ಯವಾದ್ಯಘನಘೋಷಣದೇಟ್ಗೆ ನಿಸರ್ಗಮಾದ ಸಂ
ಗೀತರಸಾಬ್ಧಿ ಪೆರ್ಚೆ ಹರಿಲೋಚನಚಂದ್ರಿಕೆಯಿಂ ವಿಧೂದಯ
ಸ್ಫೀತಸುಧಾಬ್ಧಿಯಂತೆ ಪರಿಘೂರ್ಣಿಸುತಿರ್ದುದು ರಾಸಕೇಳಿಯೊಳ್ ೧೧

೮. ಕೃಷ್ಣನು ಕಸ್ತೂರಿಯ ಬೆತ್ತವನ್ನು ಅಲ್ಲಾಡಿಸಿದಂತೆ ಆಡಿ ಸುವಾಸನೆಯನ್ನು ಬೀರುತ್ತ ಕೊಳಲನ್ನು ಬಾಜಿಸುತ್ತಿದ್ದನು. ನಟಿಸುವ ಗೋಪಕಾಂತೆಯರ ತಂಡವು ತನ್ನ ಗೀತಧ್ವನಿಯಿಂದ ಹೆಣ್ಣು ದುಂಬಿಗಳ ಝೇಂಕಾರವನ್ನೂ ಮನ್ಮಥನ ಹೆದೆಯ ಟಂಕಾರವನ್ನೂ ಸರಸ್ವತಿಯ ವೀಣಾಗಾನವನ್ನೂ ಸ್ವಲ್ಪ ಕೀಳಾಗಿಸಿ ನಾನಾ ರೀತಿಯಿಂದ ಹಾಡಿತು. ೯. ಗೋಪಿಯರು ಕೃಷ್ಣನ ಗುಣಾಂಕಿತವಾದ ಗೀತಮಾಲೆಯನ್ನು ತಾವು ತಾವಾಗಿಯೇ ಹಾಡಿದರು. ಕೃಷ್ಣನು ಚಂದ್ರನ ಬೆಳದಿಂಗಳಲ್ಲಿರುವ ಕನ್ನೈದಿಲೆಯಂತೆ ಒಪ್ಪುತ್ತಿದ್ದು ಅವ್ಯಕ್ತ ಮಧುರಧ್ವನಿಯಿಂದ ಹಾಡಿದನು. ೧೦. ಗೋಪಾಂಗನೆಯರ ಬಳೆಗಳ ಸಾಲಿನ ಧ್ವನಿಯೂ ಕಾಲಿನ ಆಭರಣಗಳ ಮತ್ತೂ ಒಡ್ಯಾಣಗಳ ಗೆಜ್ಜೆಗಳ ಧ್ವನಿಯೂ ಹೊಮ್ಮುತ್ತಿದ್ದಿತು. ನಿಶ್ವಾಸದ ಗಾಳಿಯ ಸುವಾಸನೆಯೂ ಲೇಪನಸುಗಂಧದ ಮತ್ತು ಮುಡಿಯ ಹೂವಿನ ಸುವಾಸನೆಯೂ ಒಂದಾಗಿ ಸೇರಿ ಹರಡಿತು. ತೋಳಿನ ಹುಬ್ಬಿನ ಮತ್ತು ಕಡೆಗಣ್ಣಿನ ನೋಟದ ಚಲನವಲನಗಳು ಚೆಲುವಾಗಿದ್ದವು. ಇವೂ ನರ್ತನ ಪ್ರೇಕ್ಷಣಗಳೂ ಕೃಷ್ಣನ ಮನಸ್ಸಿಗೆ ಅಧಿಕಸಂತೋಷಕರಗಳಾಗಿದ್ದವು. ೧೧. ರಾಸಕ್ರೀಡೆಯಲ್ಲಿ ಗೀತರಸಪ್ರವಾಹವೆಂಬ ನದಿಯಿಂದ ಕೂಡಿ, ಚಂಚಲವಾದ ಕಣ್ಣುಗಳ ಕಾಂತಿ (ಯೆಂಬ) ಅಲೆಗಳುಳ್ಳುದಾಗಿ ಒಟ್ಟುಗೂಡಿದ ಮನೋಹರವಾದ್ಯಗಳ ಹೆಚ್ಚಾದ ಮೊರೆತಗಳುಳ್ಳುದಾದ; ಸಹಜವಾದ

---

೧. ಪಾಡಿದನೆಸೆಯೆ (ಮೊಅ) ೨. ಪಾಡುತುಂ (ಕಖಗ) ೩. ನೆಯ್ದಲೊಪ್ಪಮನೆ ಪಾಡಿದರ್ (ಕಖಗ) ನೆಯ್ದಲೊಪ್ಪಮೆನೆ ಪಾಡಿದರ್ (ಮೊಅ)

ನವಯೌವನೆಯರ್ ಲಾವ
ಣ್ಯವತಿಯರಜಿದದ್ರಿಧರನ ಮನಮಂ ಕೋಲಾ
ಟವನಾಡಲ್ ಕೆಲರಾಟಂ
ದು ವಿನೋದದೆ ಕನಕದಂಡಮಂ ಪಿಡಿದೆಸೆದರ್ ೧೨

ಯುಗಪತ್ಕೂರ್ಮವಿಧಾನದಿಂ ಯುಗಪದುತ್ತಾನಾಂಗಸಂಸ್ಥಾನದಿಂ
ಯುಗಪದ್ವಿಭ್ರಮವೇಗದಿಂ ಯುಗಪದಭ್ಯಾಯಾತಚಾತುರ್ಯದಿಂ
ಯುಗಪದ್ದಂಡ ಖಣಿಲ್ ಖಣಿಲ್ ಕ್ವಣಿತದಿಂ ಕೋಲಾಟದೊಳ್ ಕೃಷ್ಣನಂ
ಬಗೆಗೊಂಡರ್ ನಮಸ್ತವಿಭ್ರಮಣೆಯರ್ ಶ್ರೀರೂಪೆಯರ್ ಗೋಪಿಯರ್ ೧೩

ಈ ನಟಿಯಂತರಂಗಮೆ ಮುಕುಂದನ ಚಿತ್ತಮೆ ಬಲ್ಲುದೀಕೆಗಿಂ
ತೀ ನಯದಿಂದೆ ನರ್ತಿಪುದನೆಂಬಿನೆಗಂ ರಸಭಾವರಮ್ಯಸಂ
ಸ್ಥಾನಕನೃತ್ಯಮಾ ಪರಮತತ್ತ್ವಸುಖಕ್ಕೆಣೆಯಾಗಿ ತೋಱೆ ಗೋ
ಪೀನಟಿ ತೋಱೆದಳ್ ಮಿಸುಗುವೊಲೆಯ ತೂಕಮೆ ನೃತ್ಯಮಂ ೧೪

ನಗೆಮೊಗದಿಂ ಮುಗುಳ್ನಗೆ ತುಳುಂಕೆ ಬಳಲ್ಮುಡಿಯಿಂದರಲ್ಗಳ
ಲ್ಗುಗೆ ನಿಡುಗಣ್ಗಳಿಂ ಪೊಳಪು ಸಾಲಿಡೆ ನೀಳಚಳಾಳಕಾಳಿಯಿಂ
ಮೃಗಮದರೇಣು ಸೂಸೆ ಲತೆ ತೆಂಬೆಲರ್ಗೊಯ್ಯನೆ ನರ್ತಿಪಂದದಿಂ
ಸೊಗಯಿಸೆ ಗೋಪಿ ಡಕ್ಕೆಯ ಲಯಕ್ಕೆ ಪೆಜಿಳ್ ಜತಿಮೆಟ್ಟುತಾಡಿದಳ್ ೧೫

ಸಂಗೀತರಸಸಾಗರವು ಕೃಷ್ಣನ ನೇತ್ರಚಂದ್ರಿಕೆಯಿಂದ ಉಕ್ಕಿ ಚಂದ್ರೋದಯದಲ್ಲಿ ಉಕ್ಕುವ ಕ್ಷೀರಸಾಗರದಂತೆ ಘೋಷಿಸುತ್ತಿದ್ದಿತು. ೧೨. ಲಾವಣ್ಯವತಿಯರಾದ ಯುವತಿಯರು ಕೆಲವರು ಆ ಗಿರಿಧರನ ಮನಸ್ಸನ್ನರಿತು, ಕೋಲಾಟವನ್ನಾಡುವುದಕ್ಕೆ ಬಯಸಿದರು. ವಿನೋದಕ್ಕಾಗಿ ಕೆಲವರು ಮೇಲೆಬಿದ್ದು ಚಿನ್ನದ ಕೋಲುಗಳನ್ನು ಕಿತ್ತೆಸೆದರು. ೧೩. ಶ್ರೀರೂಪೆಯರಾದ ಗೋಪಿಯರು ಕೋಲಾಟದಲ್ಲಿ ಆಗಾಗ ಒಟ್ಟಿಗೆ ಬಾಗಿ ಆಮೆಯಂತೆ ಆಗುತ್ತಲೂ ಅಂಗವನ್ನು ಮೇಲ್ಮುಖವಾಗಿ ಮಾಡುತ್ತಲೂ ವೇಗದಿಂದ ಸುತ್ತುತ್ತಲೂ ಚಾತುರ್ಯದಿಂದ ಎದುರಾಗಿ ಬರುತ್ತಲೂ ಆಟದ ಕೋಲುಗಳಿಂದ ಖಣಿಲ್ ಖಣಿಲ್ ಎಂಬ ಶಬ್ದ ಮಾಡುತ್ತಲೂ ಕೃಷ್ಣನಿಗೆ ಸಮಶಕ್ತಿಯುಳ್ಳವರಾಗಿ ಸುತ್ತುತ್ತ ಕೃಷ್ಣನನ್ನು ಸಂತೋಷಪಡಿಸಿ, ಒಲಿಸಿಕೊಂಡರು. ೧೪. ಈಕೆ, ಈ ರೀತಿಯಲ್ಲೇ ನರ್ತಿಸಬೇಕೆಂಬುದನ್ನು ಇವಳ ಅಂತರಂಗವೂ ಕೃಷ್ಣನ ಚಿತ್ತವೂ ಬಲ್ಲುದು ಎನ್ನುವಂತೆಯೂ ರಸಭಾವಗಳು ರಮ್ಯವಾಗಿ ತೋರುವಂತೆಯೂ ತಕ್ಕ ರೀತಿಯಲ್ಲಿ ನಿಂತು ನರ್ತಿಸುವುದು ಆ ಪರಮತತ್ತ್ವ ಜ್ಞಾನಸುಖಕ್ಕೆ ಸಮಾನವಾದುದು ಎಂದು ಕಾಣಿಸುವಂತೆಯೂ ನಟಿಯಾದ ಗೋಪಿಯೊಬ್ಬಳು ನರ್ತಿಸುತ್ತಿದ್ದಳು. ಅವಳ ಒಲೆಯ ತೂಗಾಟವೇ ನೃತ್ಯವಿಧಾನವನ್ನು ತೋರಿಸುತ್ತಿದ್ದಿತು. ೧೫. ಮತ್ತೊಬ್ಬಳು ಗೋಪಿ ತೆಂಕಣಗಾಳಿಗೆ ಬಳ್ಳಿ ಬೇಗನೆ ನರ್ತಿಸುವಂತೆ ಡಕ್ಕೆ (ವಾದ್ಯ)ಯ ಲಯಕ್ಕೆ ಸರಿಯಾಗಿ ಹೆಜ್ಜೆಯಿಟ್ಟು ಸೊಗಸಾಗಿ ನರ್ತಿಸಿದಳು. ಆಗ ಅವಳ ನಗುಮುಖವು ಮುಗುಳುನಗುವನ್ನು ಚೆಲ್ಲುತ್ತಿದ್ದಿತು. ಸಡಿಲವಾದ ಮುಡಿಯಿಂದ

ಮಸೃಣಕಟಾಕ್ಷದಿಂ ಕುಮುದದೊಳ್ಪೆಸಳಂ ಕರೆವಂತಿರಂಘ್ರಿವಿ
ನ್ಯಸನದಿನಬ್ಜಮಂ ಕೆದಱುವಂತಿರೆ ಕೈಸಿರಿಯೊಂದು ದೇಸೆಯಿಂ
ಕಿಸಲಯಜಾಲಮಂ ಪರಪುವಂತಿರೆ ಭೂಷಣಕಾಂತಿಯಿಂ ತಟಿ
ತ್ಪ್ರಸರಮನೆತ್ತಲುಂ ಪಸರಿಪಂತಿರೆ ಬೊಂಬುಳಿಗೊರ್ವಳಾಡಿದಳ್ ೧೬

ವ|| ಮತ್ತೊರ್ವಳ್

ತ್ರಿಗುಣಿಸೆ ನಯನವಿಭೂಷಾಂ
ಶು^1ಗಳಲಗಿನ ರುಚಿಯನಲಗನೆರಡುಂ ಕೈಯೊಳ್
ತ್ರಿಗುಣಿಸಿ ಚಿತ್ರಂಬಡೆದಳ್
ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೊಣೆಯಂ ೧೭

ವ|| ಮತ್ತೊರ್ವಳ್

ಸರಳತರಾಂಗುಳೀಮೃದುನಿವರ್ತನದಿಂ ಕಱಿಗಣ್ಮುತಿರ್ಪ ಬಂ
ಧುರರಸಗೇಯಮೆಂಬಮೃತಪೂರಮನೊಯ್ಯನಲಾಬುವಿಂದಮು
ತ್ತರಿಸುತುಮಿರ್ದಳೀಕೆಯೆನೆ ಬಾಜಿಸಿದಳ್ ಪೆಱಳುನ್ನತಸ್ತನಾಂ
ತರದೊಳಗೌಂಕಿ ವೀಣೆಯನದೇ ಪೊಗಟ್ವೆಂ ಸುರತಪ್ರವೀಣೆಯಂ ೧೮

ಹೂಗಳುದುರುತ್ತಿದ್ದವು. ನಿಡುಗಣ್ಣುಗಳು ಹೊಳೆಯುತ್ತಿದ್ದವು. ನೀಲವೂ ಚಂಚಲವೂ ಆದ ಮುಂಗುರುಳಿನಿಂದ ಕಸ್ತೂರಿಯ ರೇಣು ಉದಿರುತ್ತಿದ್ದಿತು. ೧೬. ಇನ್ನೊಬ್ಬಳು ಗೋಪಿ, ಮನೋಹರವಾದ ಕಡೆಗಣ್ಣಿನ ನೋಟದಿಂದ ನೈದಿಲೆಯ ಒಳ್ಳೆಯ ಎಸಳನ್ನು ಸುರಿಸುವಂತೆಯೂ ಹೆಜ್ಜೆಯಿಡುವುದರಿಂದ ತಾವರೆಯ ಹೂವನ್ನು ಹರಡುವಂತೆಯೂ ಕೈಯ ಕಾಂತಿಯ ಸೊಗಸಿನಿಂದ ಚಿಗುರುಗಳನ್ನು ಹರಡುವಂತೆಯೂ ಒಡವೆಗಳ ಹೊಳಪಿನಿಂದ ಮಿಂಚುಗಳ ಗುಂಪನ್ನು ಎಲ್ಲಕಡೆಗೂ ಹರಡುವಂತೆಯೂ ತಮಟೆಯ ವಾದ್ಯಕ್ಕೆ ಸರಿಯಾಗಿ ಕುಣಿದಳು. ವ|| ಮತ್ತೊಬ್ಬಳು ೧೭. ಕಣ್ಣಿನ ಮತ್ತು ಒಡವೆಗಳ ಕಾಂತಿಯಿಂದ ತಾನು ಎರಡು ಕಯ್ಯಲ್ಲೂ ಹಿಡಿದುಕೊಂಡಿರುವ ಬಾಣದಲಗಿನ ಕಾಂತಿಯನ್ನು ಮೂರರಷ್ಟನ್ನಾಗಿಸುತ್ತ ಬಿಗಿಯುತ್ತಿರುವ ಕುಚದಿಂದ ಮನ್ಮಥನಿಗೆ ಬತ್ತಳಿಕೆಯನ್ನು ಬಿಗಿಯುವಂತೆ ಕಾಣಿಸುತ್ತ ಆಶ್ಚರ್ಯವನ್ನುಂಟುಮಾಡಿದಳು. ವ|| ಮತ್ತೊಬ್ಬಳು ನರ್ತಿಸುವಾಗ ಕಣ್ಣಿನ ಓರೆನೋಟದಿಂದ ಮನ್ಮಥಬಾಣದ ಹರಿತ ಮೂರರಷ್ಟಾಯಿತು. ಕೈಗಳ ಅಭಿನಯದಿಂದ ಮನ್ಮಥಬಾಣಗಳು ಮೂರರಷ್ಟು ಹೆಚ್ಚಾದವು.* ೧೮. ಸರಳವಾದ ಬೆರಳುಗಳನ್ನು ಮೃದುವಾಗಿ ಹಿಂದಕ್ಕೂ ಮುಂದಕ್ಕೂ ಜಾರಿಸುವುದರಿಂದ, ದಡವನ್ನು ಮೀರಿ ಹರಿಯುವ ಮಧುರರಸಗಾನವೆಂಬ ಅಮೃತಪ್ರವಾಹವನ್ನು ಮೆತ್ತಗೆ ಸೋರೆಯ ಬುರುಡೆಯಿಂದ ದಾಟುತ್ತಿರುವಳೆನ್ನುವಂತೆ ತನ್ನ ಉಬ್ಬಿದ ಸ್ತನಗಳ ನಡುವೆ ವೀಣೆಯನ್ನು

---

೧. ಗಳಿಂ ತನುರುಚಿಯ ಬೆಳಗ (ಖ)

* ಬಿಗಿದ ಸ್ತನದಿಂದ, ಆ ನರ್ತಕಿ ಮನ್ಮಥನಿಗೆ ಬತ್ತಳಿಕೆಯನ್ನು ಕಟ್ಟಿ ಯುದ್ಧಕ್ಕೆ ಕಳಿಸುವಳೋ ಎಂಬಂತೆ ಕಂಡಿತು. (ರಂ)

ವ॥ ಮತ್ತೊರ್ವಳ್

ಅಲಕಚಯಂಗಳಾಡೆ ನೊಸಲೊಳ್ ಕಬರೀಭರವಾಡೆ ಬೆನ್ನೊಳು
ಜ್ಜ್ವಲತರಹಾರವಾಡೆ ಕುಚದೊಳ್ ಮಿಸುಪೋಲೆಗಳಾಡೆ ಗಂಡಮಂ
ಡಲದೊಳದೊಂದು ಕಂತುಕದ ಬೆಂಬಟೆಯೊಳ್ ಪೊಳೆದಾಡೆ ಕಣ್ಬೊಣರ್
ಸುಲಲಿತೆ ಸೆಂಡನಾಡಿ ಮುಳುಗಾಡಿಸಿದಳ್ ಹರಿಯಂ ಸುಖಾಬ್ಧಿಯೊಳ್ ೧೯

ವ॥ ಅಂತು ಮನೋಹರವಾದ ವಿವಿಧವಿನೋದಮಂ ನೋಡಿ ಸಫಲೀಕೃತ ಸಹಸ್ರಲೋಚನನರವಿಂದಲೋಚನಂಗಭಿಮುಖನಾಗಿ ದೇವ, ನಿನ್ನ [1]ಸಮೀಪದೊಳಾನಿರೆ ನೀನುಪೇಂದ್ರನಾಗಿ ರಾಸಗೋಷ್ಠಿಯನನುಕರಿಸಿದ ಕಾರಣದಿಂದುಪೇಂದ್ರಾಭಿಧಾನಮಂ ಧರಿಯಿಸುವು ದೆಂದತಿ ಪ್ರೀತಿಯಿಂ ನುಡಿದಿಂದ್ರಂ ಬೀಳ್ಕೊಂಡು ಪೋದಂ. ಇತ್ತ ಗೋಪಿಯರೊಡನೆ ಸುಖಸಂಕಥಾ ವಿನೋದದಿನಿರ್ದರ್ಮೆ ಕೃಷ್ಣನನ್ಯಪ್ರದೇಶಕ್ಕೆ ಪೋಗೆ ಕೃಷ್ಣ ಚೇಷ್ಟಿತಸ್ವಾಯತ್ತರೂಪೆಯರ್ ಗೋಪಿಯರ್ ವೃಂದಾವನದೊಳಿರ್ದಲ್ಲಿ

ಆಂ ಕೃಷ್ಣನೆನಿಸಿ[2]ಯಿರ್ಪೆನೆ
ಪಂಕಜಮುಖಿಯರಿರ ನೋಡಿಮೆನುತುಂ ಶ್ರೀವ
ತ್ಸಾಂಕನ ಸುಲಲಿತಯಾನದ
ಬಿಂಕಮನನುಕರಿಸಿ ತೋಱುತಿರ್ದಳದೊರ್ವಳ್ ೨೦

ಅವುಚಿಕೊಂಡು ಬಾಜಿಸಿದಳು. ಸುರತಪ್ರವೀಣೆಯಾದ ಅವಳನ್ನು ಎಷ್ಟು ಹೊಗಳಲಿ! ವ॥ ಮತ್ತೊಬ್ಬಳು ೧೯. ಸುಲಲಿತೆಯು ಹಣೆಯ ಮೇಲೆ ಮುಂಗುರುಳುಗಳೂ ಬೆನ್ನಮೇಲೆ ತೋರಮುಡಿಯೂ ಸ್ತನಗಳ ಮೇಲೆ ಹೊಳೆಯುವ ಹಾರವೂ ಕೆನ್ನೆಗಳ ಮೇಲೆ ಪ್ರಕಾಶಿಸುವ ಓಲೆಯೂ ಅದೊಂದು ಚಂಡಿನ ಮೇಲೆ ಕಣ್ಣುಗಳೆರಡೂ ಹೊಳೆದಾಡುತ್ತಿರಲು ಚಂಡನ್ನಾಡಿ ಕೃಷ್ಣನನ್ನು ಸುಖಸಾಗರದಲ್ಲಿ ಮುಳುಗಾಡಿಸಿದಳು. ವ॥ ಹಾಗೆ ಮನೋಹರವಾದ ಬಗೆಬಗೆಯ ವಿನೋದವನ್ನು ನೋಡಿ, ಸಾವಿರಕಣ್ಣುಗಳನ್ನು ಸಫಲಮಾಡಿಕೊಂಡ ಇಂದ್ರನು ಕಮಲನೇತ್ರಕೃಷ್ಣನಿಗೆ ಅಭಿಮುಖನಾಗಿ ದೇವಾ! ನಿನ್ನ ಸಮೀಪದಲ್ಲಿ ನಾನಿರುವಾಗ ನೀನು ಉಪೇಂದ್ರನಾಗಿ ರಾಸಮಂಡಲವನ್ನು ಅನುಕರಿಸಿದ ಕಾರಣದಿಂದ ಉಪೇಂದ್ರನೆಂಬ ಹೆಸರನ್ನು ಪಡೆಯೆಂದು ಅತಿ ಪ್ರೀತಿಯಿಂದ ಹೇಳಿ, ಅನುಮತಿಯನ್ನು ಪಡೆದು ಹೊರಟು ಹೋದನು. ಇತ್ತ ಗೋಪಿಯರೊಡನೆ ಸುಖಸಂಕಥಾವಿನೋದದಿಂದ ಇದ್ದ ಕೃಷ್ಣನು ಒಂದು ದಿನ ಬೇರೊಂದೆಡೆಗೆ ಹೋದನು. ಕೃಷ್ಣನ ರೂಪಚೇಷ್ಟಿತಗಳನ್ನು ಸ್ವಾಧೀನ ಪಡಿಸಿ ಕೊಂಡಿದ್ದ ಗೋಪಿಯರು ಬೃಂದಾವನದಲ್ಲೇ ಇದ್ದರು. ೨೦. ಆಗ ಅವಳೊಬ್ಬಳು ಗೋಪಿ- 'ಕಮಲಮುಖಿಯರೇ; ನಾನು ಕೃಷ್ಣನಂತೆ ಇರುವೆನೆ? ನೋಡಿ' ಎನ್ನುತ್ತ ಕೃಷ್ಣನ ಸುಲಲಿತವಾದ ನಡಿಗೆಯ ಬಿಂಕವನ್ನು ಅನುಕರಣಮಾಡಿ ತೋರಿಸುತ್ತಿದ್ದಳು.

---

೧. ಸುಖಪದದೊಳಾನಿರೆ (ಕಗ) ೨. ಇರ್ಪೆನೆ (ಕಖಗ)

ದಾಮೋದರನಾಂ ಮತ್ತಿಯ
ನೀಮುಱಿದಪೆನೆಂದೊಂದು ಕುಜಮಂ ಕಾಂಚೀ
ದಾಮದೆ ತೊಡರ್ಚಿ ಶಿಶುಲೀ
ಲಾಮುಗ್ಧಸ್ಮಿತಮನೋರ್ವಳಾಗಳ್ ಮೆಱೆದಳ್ ೨೧

ಕಾಳಿಯನ ಮಡುವನಾಂ ವನ
ಮಾಳಿಯೆನಿದೆ ಕದಡಿದಪ್ಪೆ [1]ನೆನುತುಂ ನೀರೊಳ್
ತೋಳೆರಡುಮನಾಸ್ಫೋಟಿಸಿ
ನೀಳಾಬ್ಜದ ಕಾವುವಿಡಿದು ಕುಣಿದಳದೊರ್ವಳ್ ೨೨

ತಾಳಫಳಂದಿಂಗೆಮ ಗೋ
ಪಾಳರ್ ಖಳನಿಂದೆ ತಾಟನಿಟ್ಟಪೆನೆನುತುಂ
[2]ಲೋಳಾಕ್ಷಿ ಪೂರೆಯೆ ಕೌಂಗಂ
ನೀಳಾಬ್ಜದಿನಿಟ್ಟು ಹರಿಯ ಪರಿಯಂ ಮೆಱೆದಳ್ ೨೩

ಪಿಂಗುಗೆ ವೃಷ್ಟಿಭಯಂ ನಿಮ
ಗಾಂ ಗೋವರ್ಧನಮನೆತ್ತಿದೆಂ ಕೃಷ್ಣನೆನಿಂ
ದಂಗತ್ರಿಭಂಗಿ ಸೊಗಯಿಸ
ಲಂಗನೆ ಕಂತುಕಮನೆತ್ತಿ ನಿಂದಳದೊರ್ವಳ್ ೨೪

ಮೃಗನಯನೆ ನೋಡಿ ವನವೀ
ಥಿಗಳಂ ಧ್ವಜ ವಜ್ರ ಪಂಕಜಾಂಕುಶರೇಖಾ
ಳಿಗಳಿಂದೆಸೆದಪುದಿದು ಲಲಿ
ತಗಾಮಿ ನಗಧರನ ಪಜ್ಜೆಯೆಂದೆಸೆದುಲಿದಳ್ ೨೫

೨೧. ಇನ್ನೊಬ್ಬಳು "ನಾನು, ದಾಮೋದರ, ಇಕೋ! ಮತ್ತಿಯ ಮರವನ್ನು ಮುರಿಯುತ್ತೇನೆ.' ಎಂದು ಒಂದು ಚಿಕ್ಕಮರಕ್ಕೆ ತನ್ನ ಒಡ್ಯಾಣವನ್ನು ತೊಡರಿಸಿ, ಅರಿಯದ ಮಗುವಿನಂತೆ ಲೀಲೆಯಿಂದ ಕಿರುನಗೆಯನ್ನು ಬೀರಿದಳು. ೨೨. ಅದೊಬ್ಬಳು- ನಾನು ವನಮಾಲಿಕೃಷ್ಣ ಇದೋ ಕಾಳಿಯನ ಮಡುವನ್ನು ಕದಡುತ್ತೇನೆ ಎನ್ನುತ್ತ ನೀರಿನ ಮೇಲೆ ಎರಡು ತೋಳುಗಳನ್ನೂ ಬಡಿದು ನೀರನ್ನು ಹಾರಿಸಿ, ಒಂದು ಕನ್ನೈದಿಲೆಯ ದಂಟನ್ನು ಹಿಡಿದುಕೊಂಡು ಕುಣಿದಳು. ೨೩. ಚಂಚಲಾಕ್ಷಿಯೊಬ್ಬಳು - "ನೀಚ (ಖರ)ನಿಂದ ತಾಳೆಯ ಹಣ್ಣುಗಳಿಗೆ ಹೊಡೆಯುತ್ತೇನೆ. ಗೋಪಾಲರು ಉದುರಿದ ಹಣ್ಣನ್ನು ತಿನ್ನಲಿ." ಎನ್ನುತ್ತ ಅಡಿಕೆಯ ಮರವನ್ನು ನೀಲಕಮಲದಿಂದ ಹೊಡೆದು, ಕೃಷ್ಣನ ರೀತಿಯನ್ನು ಪ್ರಕಟಿಸಿದಳು. ೨೪. "ನಾನು ಕೃಷ್ಣ ಗೋವರ್ಧನಗಿರಿಯನ್ನು ಎತ್ತುತ್ತೇನೆ. ನಿಮಗೆ ಮಳೆಯ ಭಯವು ಬೇಡ" ಎನ್ನುತ್ತ ಒಬ್ಬಳು ತನ್ನ ತ್ರಿಭಂಗಾಂಗವು ಸೊಗಸುತ್ತಿರಲು ಚಂಡೊಂದನ್ನು ಎತ್ತಿ ಹಿಡಿದು ನಿಂತಳು. ೨೫. ಜಿಂಕೆಗಣ್ಣಿನವಳೊಬ್ಬಳು ಕಾಡಿನ ದಾರಿಗಳನ್ನು ನೋಡುತ್ತ ಲಲಿತಗಮನದ ಗಿರಿಧರನ ಹೆಜ್ಜೆಯ ಗುರುತುಗಳಿವು, ಧ್ವಜ, ವಜ್ರ, ಕಮಲ, ಅಂಕುಶಗಳ ರೇಖೆಗಳಿಂದ ಹೊಳೆಯುತ್ತಿವೆ" ಎಂದು ಸಂತೋಷದಿಂದ ಹೇಳಿದಳು.

---

೧. ನೆನತುಮದೊರ್ವಳ್ (ಕಖ) ೨. ಲೀಲಾಕ್ಷಿ (ಕಗ)

ನಳಿನಾಕ್ಷನ ಪದಪದ್ಧತಿ
ಗಳ ಬಟೆಯೊಳಲಕ್ತಕಾಂಕ ಪದಪದ್ಧತಿಗಳ್
ಪೊಳವುವಿವೆ ನೋಡಿದಾವಳೊ
ಬಳಿರಿಪುವೊಡನಲಿವ ಧನ್ಯೆಯೆಂದಳದೊರ್ವಳ್ ೨೬

ಅನ್ಯಾಸಕ್ತಂ ಕೃಷ್ಣಂ
ಮಾನ್ಯೆಯದೊರ್ವಳನವಜ್ಞೆಗೆಯ್ದ[1]ನಿದಂತಾ
ಮನ್ಯುನಿರಾಯಸವಿಮುಖಪ
ದನ್ಯಾಸದ ಪಜ್ಜೆಯೆಂದು ನುಡಿದಳದೊರ್ವಳ್ ೨೭

ಒಡನಲಿವ ನಲ್ಲಳಚ್ಯುತ
ನಡಿವಜ್ಜೆಗಳಲ್ಲಿ ಕೇಳಿಗೆಳಸಿ[2]ದಳವನೀ
ಯಡಿಯೊಳ್ ಪೋರ್ಕುಳಿಯಾಯ್ತೆಂ
ದಡಿಗಡಿಗಾಯೆಡೆಯನೊರ್ವಳೀಕ್ಷಿಸುತಿರ್ದಳ್ ೨೮

ಅನುಗತ್ತಿವೆತ್ತ ನಲ್ಲಳಡಿವಜ್ಜೆಗಳಲ್ಲಿಯೆ ನಿಂದುವಬ್ಜಲೋ
ಚನನಡಿವಜ್ಜೆ ನೀಡುಮಿದಿರಂ ಬಟೆಯಂ ಪುದಿದಿರ್ದುವಂತವಳ್
ಮುನಿದು ನಿಲಲ್ಕೆ ತಾಂ ತಿಳಿಪಲೆಂದೆಡೆಯಾಡಿದ ಪಾಂಗಿದೊಂದು ತ
ದ್ವನಿತೆಯೊಳಾದ ಕೃಷ್ಣನೊಲವೆಂದು ಪೆಱಳ್ ಮನದೊಳ್ ಕಲಂಕಿದಳ್ ೨೯

೨೬. ಅದೊಬ್ಬಳು ನಳಿನಾಕ್ಷ ಕೃಷ್ಣನ ಹೆಜ್ಜೆಯ ಗುರುತಿನ ಹತ್ತಿರದಲ್ಲೇ ಅರಗಿನ ರಸವನ್ನು ಲೇಪಿಸಿದ ಹೆಜ್ಜೆಯ ಗುರುತುಗಳು ಹೊಳೆಯುತ್ತಿವೆ, ನೋಡಿ ಇದಾವಳೋ?! ಕೃಷ್ಣನೊಡನೆ ನಲಿದ ಧನ್ಯೆ?!" ಎಂದಳು. ೨೭. ಅವಳೊಬ್ಬಳು "ಅನ್ಯಾಸಕ್ತನಾದ ಕೃಷ್ಣನು ಮಾನ್ಯಳಾದವಳೊಬ್ಬಳನ್ನು ಉದಾಸೀನ ಮಾಡಿದನು. ಆ ಕೋಪದಿಂದ ಆಯಾಸ ಪಡದೆ ಹಿಂದಿರುಗಿ ಹೋದ ಅವಳ ಹೆಜ್ಜೆಯ ಗುರುತುಗಳಿವು" ಎಂದಳು. ೨೮. "ಕೃಷ್ಣನ ಹೆಜ್ಜೆಗಳನ್ನು ಅನುಸರಿಸಿ ಜೊತೆಯಲ್ಲಿ ನಲಿಯುತ್ತಿದ್ದ ಪ್ರಿಯೆಯೊಬ್ಬಳು ಇಲ್ಲಿ ಆಟಕ್ಕೆ ಬಯಸಿದಳು. ಈ ಹೆಜ್ಜೆಯಲ್ಲಿ ಅವರಿಗೆ ಹೋರಾಟವಾಯಿತು" ಎಂದು ಅಡಿಗಡಿಗೆ ಆ ಸ್ಥಳವನ್ನು ಒಬ್ಬಳು ನೋಡುತ್ತಿದ್ದಳು. ೨೯. ಮತ್ತೊಬ್ಬಳು ಜತೆಯಲ್ಲಿ ನಡೆದ ಪ್ರಿಯೆಯ ಹೆಜ್ಜೆಯ ಗುರುತುಗಳು ಇಲ್ಲಿಯೇ ನಿಂತುಹೋಗಿವೆ. ಆ ಕಮಲನೇತ್ರನ ಹೆಜ್ಜೆಯ ಗುರುತುಗಳು ಹೆಚ್ಚಾಗಿ ಇದಿರಾಗಿಯೂ ಪಕ್ಕಗಳಲ್ಲೂ ತುಂಬಿವೆ. ಆ ಪ್ರಿಯೆ ಕೋಪಿಸಿಕೊಂಡು ಹಿಂದೆ ನಿಂತಳು. ಅವಳನ್ನು ಸಮಾಧಾನ ಗೊಳಿಸುವುದಕ್ಕಾಗಿ ಕೃಷ್ಣನು ನಡೆದಾಡಿದ ರೀತಿಯಿದು. ಇದು ಆ ವನಿತೆಯಲ್ಲಿ ಕೃಷ್ಣನಿಗಿದ್ದ ಪ್ರೀತಿಯ ಗುರುತು." ಎಂದು ತನ್ನ ಮನಸ್ಸನ್ನು ಕಲಕಿಕೊಂಡಳು.

೧ ನದಂತಂ (ಕಖಗ) ೨ ದನವನೀಯೆಡೆಯೊಳ್ ಪೊರ್ಕುಳಿ (ಕಖಗ)

ಸ್ತನವತಿಗನುಯಾತೆಗೆ ಕೃ
ಷ್ಣನೊಲ್ದು ಕೈಗೊಟ್ಟು ನಡೆದನೀಯೆಡೆಯೊಳಿದಾ
ವನಿತೆಯ ಲಘುಪದಪದ್ಧತಿ
ಯೆನುತಮದಂ ಸಖಿಗೆ ತೋಱಿದಳ್ ಮತ್ತೊರ್ವಳ್ ೩೦

ವ|| ಅಂತನೇಕಪ್ರಕಾರದಿಂ ಪ್ರಣಯಯುವತಿಯರ್ ತೊಳಲ್ದು ನೋಡಿ

ಹರಿ ಪೋತಂದಡಿವಜ್ಜೆಗಳ್ ಬಯಲೊಳಿಲ್ಲಿಂದಿತ್ತವಿನ್ನಿಲ್ಲ ಚಂ
ದ್ರರುಚಿಶ್ರೇಣಿಗಭೇದ್ಯಮಪ್ಪ ಬನದೊಳ್ ಪೊಕ್ಕಿರ್ದನಾ ಧೂರ್ತನೆಂ
ದಿರೆ ಗೋಪೀಜನವಾಗಳೊರ್ಮೊದಲೆ ವೃಕ್ಷಚ್ಛಾಯೆಯಂ ಕೈಕೊಳು
ತ್ತಿರೆ ಶೃಂಗಾರರಸಾಬ್ಧಿ ಮೇಲೆ ಕವಿದಂತೆಯ್ತಂದನಬ್ಜೇಕ್ಷಣಂ ೩೧

ವ|| ಅಂತು ಬಂದು ವಿಕಸಿತಮುಖಾರವಿಂದನಾಗಿ ಮುಂದಿರ್ದ ಶೃಂಗಾರನಿಧಿಯಂ [1]ಕಂಡತಿಪ್ರಣಯಕುಪಿತೆಯರಾದ ಗೋಪಿಯರೊಳ್

ಪ್ರಿಯೆಯೊರ್ಬಳ್ ವಿನಿಗೂಢಸಂಭ್ರಮೆಯುಮೊರ್ಬಳ್ ಪಾಟಲೀಲೋಲನೇ
ತ್ರೆಯುಮೊರ್ಬಳ್ ವಿತತಸ್ಮಿತಾನ್ವಿತೆಯುಮೊರ್ಬಳ್ ದಂತದಷ್ಟಾರುಣೋ
ಷ್ಠೆಯುಮೊರ್ಬಳ್ ವಿಮುಖೀಕೃತಾಕೃತಿಯುಮೊರ್ಬಳ್ ಕುಂಚಿತಭ್ರೂಶಲಾ
ಕೆಯುಮಾಗಿರ್ದ ಬೆಡಂಗದೇಂ ಪಡೆದುದೋ ಕೃಷ್ಣಂಗತಿಪ್ರೀತಿಯಿಂ ೩೨

೩೦. ಮತ್ತೊಬ್ಬಳು ತನ್ನೊಡನೆ ಬರುತ್ತಿದ್ದ ಸ್ಥೂಲಸ್ತನಿಯೊಬ್ಬಳಿಗೆ ಕೃಷ್ಣನು ಪ್ರೀತಿಯಿಂದ ಕೈಗೊಟ್ಟು ನಡೆಸಿದನು. ಇಲ್ಲಿ ಆಕೆ ಮೆಲ್ಲಗೆ ನಡೆದ ಹೆಜ್ಜೆಯ ಗುರುತುಗಳಿವೆ." ಎಂದು ಸಖಿಗೆ ತೋರಿಸಿದಳು. ವ|| ಹೀಗೆ ಅನುರಾಗವುಳ್ಳ ವನಿತೆಯರು ಹಲವು ಬಗೆಯಿಂದ ಸುತ್ತಿ ನೋಡಿದರು. ೩೧. "ಕೃಷ್ಣನು ನಡೆದ ಹೆಜ್ಜೆಯ ಗುರುತುಗಳು ಇಲ್ಲಿಂದ ಮುಂದೆ ಬಯಲಿನಲ್ಲಿ ಇಲ್ಲ. ಆ ವಂಚಕನು ಬೆಳುದಿಂಗಳು ಪ್ರವೇಶಿಸದ ವನದಲ್ಲಿ ಹೊಕ್ಕಿರಬಹುದು" ಎಂದು ಗೋಪಿಯರು ಒಂದೇ ಸಾರಿ ಒಟ್ಟಿಗೆ ಮರದ ನೆಳಲನ್ನು ಸೇರುತ್ತಿದ್ದರು. ಅಷ್ಟರಲ್ಲೇ ಶೃಂಗಾರಸಾಗರವೇ ಮೇಲೆ ಕವಿದಂತೆ ಕೃಷ್ಣನು ಬಂದನು. ವ|| ಹಾಗೆ ಬಂದು, ಅರಳಿದ ತಾವರೆಮೊಗದವನಾಗಿ ಮುಂದೆ ಇದ್ದ ಶೃಂಗಾರನಿಧಿಯನ್ನು ಕಂಡು ಅತಿಪ್ರಣಯದಿಂದ ಗೋಪಿಯರು ಕೋಪಗೊಂಡರು. ೩೨. ಪ್ರಿಯೆಯರಲ್ಲಿ ಒಬ್ಬಳು ಸಡಗರವನ್ನು ಹೊರಗೆ ಕಾಣಿಸದವಳು, ಒಬ್ಬಳು ಪಾದರಿಯ ಹೂವಿನ ಚಂಚಲವಾದ ದೃಷ್ಟಿಯುಳ್ಳವಳು, ಮತ್ತೊಬ್ಬಳು ಹೆಚ್ಚಾಗಿ ನಗುವವಳು ಇನ್ನೊಬ್ಬಳು ಹಲ್ಲುಗಳಿಂದ, ಕೆಂಪಾದ ತುಟಿಯನ್ನು ಕಚ್ಚುವವಳು, ಬೇರೊಬ್ಬಳು ಹಿಮ್ಮುಖವಾಗಿ ತಿರುಗಿದವಳು, ಇನ್ನೂ ಒಬ್ಬಳು ಹುಬ್ಬು ಗಂಟು ಹಾಕಿಕೊಂಡವಳು- ಹೀಗೆ ಇದ್ದ ಬಗೆಬಗೆಯ ಅವರ ಬೆಡಗು ಕೃಷ್ಣನಿಗೆ ಅದೆಷ್ಟು ಸಂತೋಷವನ್ನುಂಟು ಮಾಡಿತೋ!

೧. ಕಂಡತಿಪ್ರಣೀಯ (ಖಗ).

ವ|| ಆಗಳ್

ಸರಸಾಲೋಕನದಿಂ ವಚ
ನರಚನೆಯಿಂ ಹಸ್ತಕಮಳಸಂಸ್ಪರ್ಶದಿನಂ
ಬುರುಹೇಕ್ಷಣಂ ಪ್ರಸನ್ನಾ
ಚರಿತೆಯರಪ್ಪಂತು ಮಾಡಿದಂ ಗೋಪಿಯರಂ ೩೩

ಮಾರ್ದವದೆ ಸಖಿಯರೊಡನೆ ಜ
ನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್
ಮಾರ್ದನಿವಿಡಲದ್ಭುತವೃಷ
ನರ್ದನವುಣ್ಮಿದುದದೊಂದು ವಜ್ರಾಶನಿವೊಲ್ ೩೪

ವ|| ಅನಂತರಂ

ಬಲಭಿನ್ನಾಗೇಂದ್ರನೊಳ್ ಮಾರ್ಮಲೆದ ಹರವೃಷಾಧೀಶನೊಳ್ ಪೋರ್ದ ಕೀನಾ
ಶಲುಲಾಯಶ್ರೇಷ್ಠನೊಳ್ ತಾಗಿದ ರಣಗಣನಾರೇಖೆಯೆಂಬಂತು ರೇಖಾ
ವಲಿ ಪೀನಸ್ಕಂಧದೊಳ್ ತಳ್ತಿರೆಯಿರೆ ಪೊಱಮಟ್ಟತ್ತು ಕಾಂತಾರದಿಂ ಪಾ
ಟಲನೇತ್ರಂ ತುಂಗಗಾತ್ರಂ ಘನತರಕಕುದಂ ಶಾತಶೃಂಗಂ ಗವೇಂದ್ರಂ ೩೫

ಕುಲಿಕಾಟೋಪಮನಂತಕಾರಭಟೆಯಂ ಕಂಠೀರವಕ್ಷೋಭಮಂ
ಕುಲಿಶಾಡಂಬರಮಂ ಲಯಾನಲಶಿಖಾಸಂರಂಭಮಂ ಘೋಷದಿಂ
ಗೆಲೆವಂದೊರ್ಮೆಯೆ ಮುಟ್ಟೆವಂದುದು ಬೆಱಂಟುತ್ತುಂ ಮಹೀರಂಗವಂ
ಕೆಲೆದುರ್ಬೇಟಿಸುತಂ ಗವಂ ಮೊನೆಯಿಡುತ್ತುಂ ಶೃಂಗವಂ ಪುಂಗವಂ ೩೬

ವ|| ಆಗ ೩೩. ಆ ಕಮಲನೇತ್ರ ಕೃಷ್ಣನು ಗೋಪಿಯರನ್ನು ಸರಸವಾದ ನೋಟದಿಂದಲೂ ಮಾತಿನಿಂದಲೂ ಕರಕಮಲಸ್ಪರ್ಶದಿಂದಲೂ ಪ್ರಸನ್ನೆಯರಾಗಿಸಿ, ಸರಳವಾಗಿ ನಡೆಯುವವರನ್ನಾಗಿ ಮಾಡಿದನು. ೩೪. ಆ ಜನಾರ್ದನನು ಸಖಿಯರೊಡನೆ ಸರಸ ಮೃದುವಚನದಿಂದ ಮಾತನಾಡುತ್ತಿದ್ದನು. ಆಗ ದಿಕ್ಕುಗಳು ಪ್ರತಿಧ್ವನಿಕೊಡುವಂತೆ ಅದ್ಭುತವಾದ ಗೂಳಿಯ ಗುಟುರು ಶಬ್ದವೊಂದು ಸಿಡಿಲಿನಂತೆ ಕೇಳಿಸಿತು. ಉನ್ನತವಾದ ದೇಹದ, ಗಾತ್ರವಾದ ಹಿಣಿಲಿನ, ಕೆಂಗಣ್ಣಿನ ಹರಿತವಾದ ಕೊಂಬುಗಳ ದೊಡ್ಡ ಗೂಳಿಯೊಂದು ಕಾಡಿನಿಂದ ಹೊರಟು ಬಂದಿತು. ಅದರ ದಪ್ಪವಾದ ಕುತ್ತಿಗೆಯಲ್ಲಿ ೩೫. ಇಂದ್ರನ ಐರಾವತದ ಮೇಲೆ ಪ್ರತಿಭಟಿಸಿದ, ಹರನ ವೃಷಭದೊಡನೆ ಹೋರಾಡಿದ ಮತ್ತು ಯಮನ ದೊಡ್ಡ ಕೋಣನೊಡನೆ ಯುದ್ಧ ಮಾಡಿದ ಎಣಿಕೆಯ ರೇಖೆಗಳಂತೆ ಮೂರು ಮಡಿಪು ಗೆರೆಗಳು ಹೆಗಲಿನಲ್ಲಿ ಕಾಣುತ್ತಿದ್ದು ೩೬. ರಾಹುಕೇತುಗಳ ಆಡಂಬರವನ್ನೂ ಯಮನ ಆರ್ಭಟವನ್ನೂ ಸಿಂಹದ ಗರ್ಜನೆಯನ್ನೂ ವಜ್ರಾಯುಧದ ಆಡಂಬರವನ್ನೂ ತನ್ನ ಗುಟರೆಯಿಂದಲೇ ಗೆದ್ದಂತಿರುವ ಆ ಗೂಳಿಯು ಕಾಲಿನಿಂದ ನೆಲವನ್ನು ಕೆರೆಯುತ್ತ ಗುಟುರುಹಾಕಿ ತನ್ನ ದೇಹವನ್ನುಬ್ಬಿಸುತ್ತ ಕೊಂಬನ್ನು ಚೂಪಾಗಿ ಮಾಡಿಕೊಳ್ಳುತ್ತ ತಟಕ್ಕನೆ ಹತ್ತಿರ ಬಂದಿತು. ವ|| ಹಾಗೆ ಸಮೀಪಕ್ಕೆ ಬಂದ ಅರಿಷ್ಟಾಸುರನನ್ನು ಕಂಡು,

ವ|| ಅಂತು ಮುಟ್ಟೆ ಬರ್ಪರಿಷ್ಟಾಸುರನಂ ಕಂಡು

ಭಯಚಕಿತನೇತ್ರೆಯರ್ ಗೋ
ಪಿಯರೀಕ್ಷಿಸೆ ಕೃಷ್ಣನಾರ್ದು ತಳಶಬ್ದದುರ
ತ್ಕಯನಸುರವೃಷಂಗಭಿಮುಖ
ತೆಯೆನೆಯ್ದಿದನೆಸೆಯೆ ಗಂಡಗರ್ವಮಖರ್ವಂ ೩೭

ವ|| ಅಂತೆಯ್ದಿ ಪೊಣರ್ದು

ಗಿರಿ ಪವಿ ಮುಟ್ಟದನ್ನೆಗವರಣ್ಯಕುಜಂ ದವಮುಟ್ಟದನ್ನೆಗಂ
ಕರಿ ನಖರಾಯುಧಂ ಮುಳಿಯದನ್ನೆಗಮುಗ್ರನಿಶಾಟರಚ್ಯುತಂ
ಪರಿಯಿಡದನ್ನೆಗಂ ಬಟೆಯಮೇನೆನೆ ಶೃಂಗಮನೊತ್ತಿ ಗಂಟಲಂ
ಮುರಿದರುಣಾಂಬುವಂ ಪಿಟೆದು ಮರ್ದಿಸಿದಂ ವೃಷನಂ ಜನಾರ್ದನಂ ೩೮

ವ|| ಆ ಸಮಯದೊಳ್

ಅಪರಿಮಿತಂ ಪೊಣ್ಮಿದುದಮ
ರಪಟಹರವವಾರವಪ್ರಹಾರದೆ ಚಂದ್ರಾ
ತಪಮೆ ಕಟಲ್ದಿಳೆಗುಗುವಂ
ತೆ ಪೊದಟ್ದುದು ಭೋರೆನಲಲರ ಬೆಳ್ಸರಿ ನಭದೊಳ್ ೩೯

೩೭. ಭಯದಿಂದ ಕಣ್ಣು ಕಣ್ಣು ಬಿಡುತ್ತ ಗೋಪಿಯರು ಕೃಷ್ಣನನ್ನು ನೋಡಿದರು. ಅವನು ಆರ್ಭಟಿಸಿ ಸಹಿಸಲಾಗದೆ ಚಪ್ಪಾಳೆಯನ್ನು ಹಾಕುತ್ತ ತನ್ನ ಅಮಿತವಾದ ಪೌರುಷವು ಪ್ರಕಟವಾಗುವಂತೆ ಆ ರಾಕ್ಷಸ ಗೂಳಿಗೆ ಎದಿರಾಗಿ ನುಗ್ಗಿದನು. ವ|| ಹಾಗೆ ನುಗ್ಗಿ ಯುದ್ಧ ಮಾಡಿ, ೩೮. ವಜ್ರಾಯುಧವು ತಾಕದಿರುವವರೆಗೆ ಗಿರಿಯೂ, ಕಾಡುಕಿಚ್ಚು ಸುಡದಿರುವವರೆಗೆ ಕಾಡುಮರವೂ ಸಿಂಹವು ರೇಗದಿರುವವರೆಗೆ ಆನೆಯೂ ವಿಷ್ಣುವು ತಮ್ಮ ಮೇಲೆ ಬೀಳುವವರೆಗೂ ಕ್ರೂರರಾಕ್ಷಸರೂ ಜೀವಿಸಿ ಇರಬಹುದು. ಆಮೇಲೆ ಸಾಧ್ಯವೇ! ಎಂಬಂತೆ ಕೃಷ್ಣನು ಆ ಗೂಳಿಯ ಕೊಂಬನ್ನು ಹಿಡಿದುಕೊಂಡು ಗಂಟಲನ್ನು ಮುರಿದು ರಕ್ತವನ್ನು ಹಿಂಡಿ, ಕೊಂದುಹಾಕಿದನು. ವ|| ಆ ಸಮಯದಲ್ಲಿ ೩೯. ದೇವತೆಗಳ ಪಟಹವಾದ್ಯವು ಅಪರಿಮಿತವಾಗಿ ಧ್ವನಿ ಮಾಡಿತು. ಆ ಧ್ವನಿಯೊಡನೆ ಬೆಳುದಿಂಗಳೇ ಜಾರಿ ಭೂಮಿಗೆ ಬೀಳುವಂತೆ ಆಕಾಶದಿಂದ ಭೋರೆಂದು ಶಬ್ದವಾಗುವಂತೆ ಹೂಮಳೆ ಸುರಿಯಿತು. ವ|| ಹಾಗೆ ವಿಜಯೋತ್ಸವವು ಯಶಸ್ವಿಯಾಗಿ ನಡೆಯಲು ಉಪೇಂದ್ರನು ಉತ್ತಮ ಗೋಪವನಿತೆಯರೊಡನೆ ಗೋಕುಲಕ್ಕೆ ಬಂದು ಸುಖದಿಂದ ಇದ್ದನು. ಮರುದಿನ ಉದಯ

ವ|| ಅಂತು ವಿಜಯೋತ್ಸವಂ ನೆಗಱ್ ಗೋಪವರಾಂಗನಾಜನಂಬೆರಸು ಬಂದುಪೇಂದ್ರಂ ಗೋಕುಲದೊಳ್ ಸುಖದಿನಿರೆ ಮಱುದೆವಸಮುದಯಸಮಯದೊಳ್

ತ್ರಿದಶಾರಿ ಕೇಶಿ ಮಡಿದಪ
ನಿದು ಶುಭದಿನಮೆಂದು ಶಕ್ರ[1]ಮಂಗಳಸವನ
ಕ್ಕುದಯಾಚಲವೇದಿಯೊಳಿಟೆ
ಪಿದ ಪೊಂಗಳಸಂಬೊಲಾಯ್ತು ದಿನಕರಬಿಂಬಂ ೪೦

ಬಾಳಾತಪದ ವಿಳಾಸಮ
ನೇಳಿಸೆ ಪೀತಾಂಬರಾಂಶು ವೃಂದಾವನದೊಳ್
ಲೀಳಾಲಂಕೃತಗಮನಂ
ನೀಳೋತ್ಪಳವರ್ಣನಚ್ಯುತಂ ಕ್ರೀಡಿಸಿದಂ ೪೧

ಸುರಭಿ ಘಟೋಧ್ನಿ ದುಗ್ಧನಿಧಿ ನಂದಿನಿ ವತ್ಸಲೆ ಕಾಮಧೇನು ಪೀ
ವರುಕುಚೆ ಗೋಪಿ ಸಲ್ಲಕಿಯೆನಿಪ್ಪಭಿಧಾನದ ಗೋಕದಂಬಮಂ
ಕರೆದು ಮುರಾರಿ ಮೆಯ್ದೊಡೆದು ಮೇಯಿಸಿಯುಂ ತಿಳಿನೀರನೂಡಿಯುಂ
ಮರದ ನೆೞಲ್ಗಳೊಳ್ ನಿಲಿಸಿಯುಂ ಮೆಱೆದಂ ನಿಜಗೋಪಲೀಲೆಯಂ ೪೨

ಮುತ್ತಿನ [2]ನೀಲದೆಕ್ಕಸರದೋಲೆ ಕದಂಪಿನೊಳಾಡೆ ನೆತ್ತಿಯೊಳ್
ಕತ್ತರಿವೀಲಿಯುಂ ಮಿಱುಗೆ ಪೀತಪಟಂ ಕಟಿಯೊಳ್ ಬೆಡಂಗು ಮೆ
ಯ್ವೆತ್ತಿರೆ ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ ವೇಣುವಿಂ
ತುತ್ತುರುನಿಸ್ವನಂ ನೆಗಱ್ ಗೋವಳರಾಯನ ಲೀಲೆ ರಂಜಿಕುಂ ೪೩

ಕಾಲದಲ್ಲಿ ೪೦. ಈ ದಿನ ದೇವವೈರಿಯಾದ ಕೇಶಿಯು ಸಾಯುವುದರಿಂದ ಇದು ಶುಭದಿನವೆಂದು ಇಂದ್ರನ ಮಂಗಳಸ್ನಾನಕ್ಕಾಗಿ ಉದಯಗಿರಿಯ ಹಸೆಯ ಜಗಲಿಯಲ್ಲಿ ಸಿದ್ಧಪಡಿಸಿಟ್ಟಿರುವ ಸುವರ್ಣಕಲಶದಂತೆ ಸೂರ್ಯಮಂಡಲವು ಕಾಣಿಸಿತು. ೪೧. ಕನ್ನೈದಿಲೆಯ ಬಣ್ಣದ ಕೃಷ್ಣನ ಪೀತಾಂಬರದ ಹೊಳಪು ಎಳೆ ಬಿಸಿಲಿನ ಸೊಗಸನ್ನು ಕೀಳಾಗಿಸುತ್ತಿದ್ದಿತು. ಕೃಷ್ಣನು ಲೀಲೆಯಿಂದ ಅಂದವಾಗಿ ನಡೆಯುತ್ತಾ ಬೃಂದಾವನದಲ್ಲಿ ಕ್ರೀಡಿಸುತ್ತಿದ್ದನು. ೪೨. ಕೃಷ್ಣನು ಸುರಭಿ, ಘಟೋಧ್ನಿ, ದುಗ್ಧನಿಧಿ, ನಂದಿನಿ, ವತ್ಸಲೆ, ಕಾಮಧೇನು, ಪೀವರ ಕುಚೆ, ಗೋಪಿ, ಸಲ್ಲಕಿ ಎಂಬ ಹೆಸರಿನ ಹಸುಗಳನ್ನು ಕರೆದು ಮೈದೊಡೆದೂ ಮೇಯಿಸಿಯೂ ತಿಳಿನೀರನ್ನು ಕುಡಿಸಿಯೂ ಮರದ ನೆಳಲಲ್ಲಿ ನಿಲ್ಲಿಸಿಯೂ ತನ್ನ ಗೋಪಾಲ(ನ) ಲೀಲೆಯನ್ನು ತೋರಿಸಿದನು. ೪೩. ಕೆನ್ನೆಯ ಮೇಲೆ ಮುತ್ತಿನ ಮತ್ತು ನೀಲಮಣಿಗಳ ಕಡುಕಿನ ಒಂದೆಳೆಯ ಸರವು ತೂಗಾಡುತ್ತಲೂ ನೆತ್ತಿಯ ಮೇಲೆ ಕತ್ತರಿಯಾಕಾರದಿಂದ ಇರುವ ನವಿಲುಗರಿಯು ಹೊಳೆಯುತ್ತಲೂ ನಡುವಿನಲ್ಲಿ ಪೀತಾಂಬರವು ಬೆಡಗು ಪಡೆದಿರುತ್ತಲೂ ಕಾಲಿನ ಚಿನ್ನದ ಒಡವೆಗಳಲ್ಲಿ ರಾಕ್ಷಸರ

೧. ಮಂಗಳವಸನ (ಖ) ಮಂಗಳಸಮಯ (ಗ) ೨. ನೀಲದೆಕ್ಕತರದೋಲೆ (ಖಗ)

ವ|| ಆ ಸಮಯದೊಳ್

ತುರುಗಾಕಾರದೆ ಕಾಳರಕ್ಕಸನೆ ಮೂಱುಂ ಲೋಕಮಂ ನುಂಗಲೆ
ಬ್ಬರುತಿರ್ಪಂತಿಳೆಯಂ ಖುರಾಗ್ರಹತಿಯಿಂ ನುರ್ಗೊತ್ತುವಾಶಾಗಜೋ
ತ್ಕರಮಂ ಪೋಗೊದೆವಬ್ಧಿಯಂ ಸರಳಿಪರ್ಕಾಶ್ವಂಗಳಂ ನಿಳ್ಕಿ ತೊ
ಪ್ಪರದಿಂ ಪಾಯ್ವಳವಿಂದೆ ಕೇಶಿ ಪರಿತಂದಂ ಕಂಸನಾದೇಶದಿಂ ೪೪

ವ|| ಅಂತು ನಿಜಗತಿವಿಜೃಂಭಣಂ ಭುವನಕ್ಷೋಭಮಾಗೆ

ಪೆಸರ್ವೆತ್ತರ್ ದಶಕಂಧರಾದಿದನುಜರ್ ಮುನ್ನಾದೊಡಂ ಕೇಶಿಯಂ
ಪೆಸರ್ಗೊಂಡನ್ನನಿಶಾಟರಂ ಪೆಸರ್ಗೊಳಲ್ವೇಡಿಂತತಿಕ್ರೂರರಿಂ
ತುಸಮುಚ್ಛೃಂಖಳರಿಂತು ಸಾಹಸಿಕರಿಂತುದ್ವೃತ್ತರಾರೆಂಬಿನಂ
ಗ್ರಸನಾಟೋಪದಿನೆಯ್ದಿದಂ ಹರಿಯನುತ್ಕರ್ಣಂ [1]ವಿದೀರ್ಣಾನನಂ ೪೫

ವ|| ಆಗಳಾ ಕೇಶಿಯಂ ಮುಂಜಕೇಶಿ ಮಾರ್ಕೊಂಡು

ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ವರ್ಧನೋದ್ರೇಕದಿಂ
ಸೆರೆಗಳ್ ಬೀಗಿ ನೆಳಿಲ್ ನೆಳಿಲ್ಲರೆಯೆ ನೆತ್ತರ್ ಮೂಗಿನೊಳ್ ತೀವಿ ಪಾ
ಯ್ತರೆ ನಿಟ್ಟೆಲ್ವು ಛಟಚ್ಛಟೆಂದೊಡೆಯೆ ತದ್ದೈತ್ಯಾಧಮಂ ನೀಳದಿಂ
ಬಿರಿದಂ ಭೂತಗಣಕ್ಕಮಂಡಜಗಣಕ್ಕಂ [2]ಪರ್ಚುಗೊಟ್ಟಂದದಿಂ ೪೬

ಬೊಂಬೆಗಳು ಒಪ್ಪುತ್ತಲೂ ಕೊಳಲಿನ ತುತ್ತುರುಧ್ವನಿಯು ಕೇಳಿಸುತ್ತಲೂ ಇರುವ ಗೋಪಾಲರಾಯನ ಲೀಲೆಯು ಮನೋಹರವಾಗಿದ್ದಿತು. ವ|| ಆ ಸಮಯದಲ್ಲಿ ೪೪. ಕೇಶಿಯೆಂಬ ಕಾಳರಾಕ್ಷಸನು ಕಂಸನ ಆಜ್ಞೆಯಿಂದ ಕುದುರೆಯ ರೂಪವನ್ನು ಧರಿಸಿ, ಮೂರುಲೋಕವನ್ನೂ ನುಂಗಲು ಬರುತ್ತಿರುವಂತೆ ಕ್ರೂರವಾದ ಗೊರಸಿನ ಹೊಡೆತದಿಂದ ಭೂಮಿಯನ್ನು ನುಗ್ಗೊತ್ತುತ್ತ ದಿಗ್ಗಜಗಳನ್ನು ಒದೆದೋಡಿಸಿ ಸಮುದ್ರವನ್ನು ಕಲಕಿ ಸೂರ್ಯಾಶ್ವಗಳನ್ನೂ ಎಟುಕಿಸಿಕೊಂಡು, ತೊಪ್ಪೆಂದು ಮೇಲೆ ಬೀಳುವ ಶಕ್ತಿಯುಳ್ಳವನಾಗಿ ಓಡಿ ಬಂದನು. ವ|| ಹಾಗೆ ತನ್ನ ನಡಿಗೆಯ ವೇಗಾತಿಶಯವು ಲೋಕವನ್ನೇ ಕಲಕಲು, ೪೫. "ರಾವಣನೇ ಮೊದಲಾದ ರಾಕ್ಷಸರು ಆದಿಯಲ್ಲಿ ಹೆಸರನ್ನು ಪಡೆದರು. ಆದರೆ ಕೇಶಿಯ ಹೆಸರನ್ನು ಹೇಳಿದ ಬಳಿಕ ಇನ್ನು ಬೇರೆಯ ರಾಕ್ಷಸರ ಹೆಸರನ್ನು ಎತ್ತುವಂತಿಲ್ಲ. ಹೀಗೆ ಅತಿ ಕ್ರೂರಿಗಳೂ ತಡೆಯಿಲ್ಲದೆ ಸ್ವೇಚ್ಛೆಯಿಂದ ವ್ಯವಹರಿಸುವವರೂ ದುರ್‌ವೃತ್ತರೂ ಸಾಹಸಿಗಳೂ ಯಾರಿರುವರು?!" ಎನ್ನುವಂತೆ ಕಿವಿಯನ್ನು ಎತ್ತಿ ನೆಟ್ಟಗೆ ಮಾಡಿಕೊಂಡು ದೊಡ್ಡದಾಗಿ ಬಾಯನ್ನು ತೆರೆದು ಆಡಂಬರದಿಂದ ಕೃಷ್ಣನನ್ನು ನುಂಗಲು ಬಂದನು. ವ|| ಆಗ ಕೃಷ್ಣನು ಆ ಕೇಶಿಯನ್ನು ಪ್ರತಿಭಟಿಸಿ ೪೬. ಅವನ ಬಾಯಲ್ಲಿ ಕಯ್ಯನ್ನು ತುರುಕಿ ಕೈಯನ್ನು ಬೆಳೆಸಿದನು. ಬೆಳವಣಿಗೆಯ ಉದ್ರೇಕದಿಂದ ಕೇಶಿಯ ನರಗಳು ಬಿಗಿದು ಉಬ್ಬಿ ನೆಳಿಲ್ ನೆಳಿಲ್ ಎಂಬ ಶಬ್ದವನ್ನು ಮಾಡಿ ಮಾಡಿ, ಬಿರಿದವು. ರಕ್ತವು ಮೂಗಿನಲ್ಲಿ

---

೧. ವಿಶೀರ್ಣಾನನಂ (ಖಗ) ೨. ಪಚ್ಚುಕೊಟ್ಟಂದದಿಂ (ಕಗ)

ವ|| ಆ ವಧಕ್ರಮಮಂ ಕಣ್ಣಾರೆ ನೋಡಿ

ಅದೊಂದು ಪರಿ ತಾಟಿನಿಟ್ಟು ಖರದೈತ್ಯನಂ ಕೊಂದ ಪಾಂ
ಗದೊಂದು ಪರಿ ಗಂಟಲಂ ಮುರಿದರಿಷ್ಟನಂ ಕೊಂದಗು
ರ್ವದೊಂದು ಪರಿ ಕೇಶಿಯಂ ಸಮದೆ ಸೀಳ್ದು ಕೊಂದಂದವೆಂ
ದದೇಂ [1]ಕಹಕಹೋರು ನಿಸ್ವನದೆ ನಕ್ಕನಾ ನಾರದಂ ೪೭

ಅಭಿನವಭಂಗಿಯೊಳರಿಯಂ
ವಿಭು ಮಡಿಪಿದೆ ಬಾಪುಭಾಪೆನುತುತ್ಸವದಿಂ
ನಭದೊಳ್ ಮುನಿಪತಿ ನಾರದ
ನಭಿನುತಮತಿ [2]ಮುಖರನಾಗಿ ಹರಗಿಂತೆಂದಂ ೪೮

ಜಗಮಂ ನುಂಗುವ ಶೂಲಿ ನೀನೆ ಜಗಮಂ ಮಾಟ್ಪಬ್ಜಜಂ ನೀನೆ ತ
ಜ್ಜಗಮಂ ರಕ್ಷಿಪ ವಿಷ್ಣು ನೀನೆ ಜಗಮುಂ ಪೋ ನೀನೆ ಸರ್ವೇಶ ಸ
ರ್ವಗ ಸರ್ವಾತ್ಮಕ ಸರ್ವಭೂತಮಯ ನಿನ್ನಿಂ ಬಿನ್ನವಾಗಿರ್ಪ ವ
ಸ್ತುಗಳಿಲ್ಲೀ ರಿಪು ಭಿನ್ನನಾದನಿದು ಚಿತ್ರಂ ಪದ್ಮಪತ್ರಾಂಬಕಾ ೪೯

ಗತಿಗೆಟ್ಟ ಕೇಶಿ ಸಮರ
ಕ್ಷಿತಿಯೊಳ್ ಕೆಡೆದಿರ್ದುಮೀಗ ಮುನ್ನಿಲ್ಲದುದೊಂ
ದತಿಶಯಸುಗತಿಯನೊಳಕೊಂ
ಡು ತರಣಿಮಂಡಲಮನೆಯ್ದಿದಂ ಕಡುಚೋದ್ಯಂ ೫೦

ತುಂಬಿ ಹೊರಕ್ಕೆ ಹಾರಿತು. ಉದ್ದವಾದ ಎಲುಬುಗಳು 'ಛಟಚ್ಛಟ' ಎಂದು ಒಡೆದು ಹೋದವು. ಆ ದೈತ್ಯಾಧಮನು ಭೂತಗಣಕ್ಕೂ ಹದ್ದು ಕಾಗೆಗಳೇ ಮೊದಲಾದವುಗಳಿಗೂ ಹಂಚಿ ಕೊಟ್ಟಂತೆ ಉದ್ದವಾದ ಎರಡು ಸೀಳಾಗಿ ಬಿರಿದು ಬಿದ್ದನು. ಆ ವಧೆಯ ರೀತಿಯನ್ನು ಕಣ್ಣಾರೆ ನೋಡಿ, ನಾರದನು ೪೭. "ಕೃಷ್ಣನು ತಾಳೆಯ ಹಣ್ಣಿಗೆ ಹೊಡೆದು ಖರರಾಕ್ಷಸನನ್ನು ಕೊಂದುದು ಅದೊಂದು ಬಗೆ, ಅರಿಷ್ಟನನ್ನು ಗಂಟಲು ಮುರಿದು ಕೊಂದುದು ಮತ್ತೊಂದು ಬಗೆ, ಈ ಕೇಶಿಯನ್ನು ಸಮನಾಗಿ ಎರಡು ಸೀಳು ಮಾಡಿ ಕೊಂದ ರೀತಿಯು ಸಾಮಾನ್ಯವಾದುದೋ?! ಎಂದು ಗಹಗಹಿಸಿ ನಕ್ಕನು. ೪೮. "ವಿಭುವೇ ಹೊಸದಾದ ರೀತಿಯಲ್ಲಿ ಶತ್ರುವನ್ನು ಸಾಯಿಸಿದೆ ಭಾಪು ಭಾಪು ಎನ್ನುತ್ತ ಸಂತೋಷದಿಂದ ಆಕಾಶದಲ್ಲಿ ಸ್ತುತಿಸುತ್ತ ಇನ್ನೂ ಹೇಳಿದನು. ೪೯."ಕಮಲದಳನೇತ್ರಾ! ಜಗತ್ತನ್ನು ನುಂಗುವ ರುದ್ರನೂ ನೀನೆ; ಜಗತ್ತನ್ನು ಸೃಷ್ಟಿಸುವ ಬ್ರಹ್ಮನೂ ನೀನೆ. ಜಗತ್ತನ್ನು ರಕ್ಷಿಸುವ ವಿಷ್ಣುವೂ ನೀನೆ. ಹೋಗು! ಜಗತ್ತೂ ನೀನೆ. ಸರ್ವೇಶ! ಸರ್ವಗ, ಸರ್ವಾತ್ಮಕ, ಸರ್ವಭೂತಮಯ, ನಿನ್ನಿಂದ ಭಿನ್ನವಾದ ವಸ್ತುಗಳೇ ಇಲ್ಲ. ಆದರೂ ಈ ಶತ್ರು ಕೇಶಿ ನಿನ್ನಿಂದ ಭಿನ್ನ (ಸೀಳಲ್ಪಟ್ಟವನಾಗಿರುವುದು) ವಿಚಿತ್ರವಾಗಿದೆ! ೫೦. ಗತಿಗೆಟ್ಟ ಕೇಶಿಯು, ಯುದ್ಧರಂಗದಲ್ಲಿ ಬಿದ್ದಿದ್ದರೂ ಈಗ ಮುಂಚೆ ಇಲ್ಲದಿದ್ದ ಒಂದು ಅತಿಶಯವಾದ ಒಳ್ಳೆಯ ಗತಿಯನ್ನೇ

---

೧. ಕಹಕಹಾರ (ಕಗಖ) ೨. ಮುಕುರನಾಗಿ (ಖ)

ದಾನವರೊಳತಿಕ್ರೂರಂ
ತಾನಿವನೆನಿಸಿರ್ದ ಕೇಶಿಯಂ ಕೊಂದುದಱಿಂ
ನೀನಿಂ ಕೇಶವನೆಂಬಭಿ
ಧಾನದೆ ವರ್ತಿಸು ಮುರಾರಿ ಧರೆ ಕೀರ್ತಿಪಿನಂ ೫೧

ವ।। ಎಂದು ಅರವಿಂದನಂದನಸೂನುವಂತರ್ಧಾನಗತನಾಗಿ ಪೋಗಿ ಮಧುರಾಪುರನಿವಾಸಿಗುಗ್ರಸೇನಸೂನುಗದೊಂದು ಕಾರ್ಯಮನಱಿಪಲೆಂದಂದು ಬಗೆದಂದು

ಬಿಂಬದಧಿದೈವಮರ್ಕನ
ಬಿಂಬದೆ ತಳರ್ದಿೞಿದುದಿಂತಿದದ್ಭುತವಸುರಂ
ಗೆಂಬಿನಮಿನಬಿಂಬದ ದೆಸೆ
ಯಿಂ ಬಂದಿಳೆಗಿೞಿದನಮಲಕಾಂತಿಮುನೀಂದ್ರಂ ೫೨

ವ।। ಅಂತು ಬಂದು ದೈತ್ಯರಾಜನಿಂದಾತಿಥ್ಯಪೂಜೆಯಂ ಕೈಕೊಂಡು ವಿಶಿಷ್ಟವಿಷ್ಟರಾಸೀನನಾಗಿ

*ಪಿಸುಣಂ ಪೇೞ್ದೊಡದೇವುದೊ
ಕಿಸುಜಡೆಯುಂ ಬೂದಿ ಕಚ್ಚಟಂ ಬೊಕ್ಕಣಮುಂ
ಪಿಸುಣುಱೆ ಮತ್ತೆನೆ ಮಾಣ್ಬನೆ
ಪಿಸುಣರ ದೇವಂಗೆ ನಾರದಂಗಿದು ಸಹಜಂ ೫೩

ಪಡೆದು ಸೂರ್ಯಮಂಡಲವನ್ನು ಸೇರಿದನು. ಇದು ಇನ್ನೂ ಅತ್ಯಾಶ್ಚರ್ಯಕರ. ೫೧. ಮುರಾರೀ! ರಾಕ್ಷಸರಲ್ಲಿ ಅತಿಕ್ರೂರಿಯೆನಿಸಿಕೊಂಡಿದ್ದ ಕೇಶಿಯನ್ನು ನೀನು ಕೊಂದುದರಿಂದ ಪ್ರಪಂಚವೇ ಸ್ತುತಿಸುವಂತೆ ಇನ್ನುಮೇಲೆ ಕೇಶವ ಎಂಬ ಹೆಸರಿನಿಂದ ವಿರಾಜಿಸು. ವ।। ಎಂದು ಬ್ರಹ್ಮಪುತ್ರನಾರದನು ಕಣ್ಮರೆಯಾದನು. ಅಲ್ಲಿಂದ ಮಧುರೆಗೆ ಹೋಗಿ ಉಗ್ರಸೇನನ ಮಗನಾದ ಕಂಸನಿಗೆ ಅದೊಂದು ಕಾರ್ಯವನ್ನು ತಿಳಿಸಬೇಕೆಂದು ಮನಸ್ಸು ಮಾಡಿದನು. ೫೨. ಸೂರ್ಯಬಿಂಬದ ಅಧಿದೇವತೆಯೇ ಬಿಂಬದಿಂದ ಇಳಿದು ಬರುತ್ತಿದೆ! ಇದು ಕಂಸ ರಾಕ್ಷಸನಿಗೆ ಅದ್ಭುತವಾಗಿ ತೋರುವಂತೆ ನಿರ್ಮಲಕಾಂತಿಯುತನಾದ ನಾರದನು ಸೂರ್ಯಮಂಡಲದ ಕಡೆಯಿಂದ ಭೂಮಿಗಿಳಿದನು. ವ।। ಇಳಿದುಬಂದು ರಾಕ್ಷಸರಾಜನ ಅತಿಥ್ಯಪೂಜೆಯನ್ನು ಸ್ವೀಕರಿಸಿ, ಉತ್ತಮಪೀಠದಲ್ಲಿ ಕುಳಿತನು. ೫೩. ಚಾಡಿಯನ್ನು ಹೇಳಿದರೂ ಕೆಂಜೆಡೆಯೂ ವಿಭೂತಿಯೂ ಕೌಪೀನವೂ ಚೀಲವೂ ಏತಕ್ಕೋ? ಏನು ಮಾಡಬಲ್ಲುದೋ? ಚಾಡಿಯೂ ಮತ್ತೂ ಹೆಚ್ಚೇ ಎಂದರೆ ಬಿಡುವನೆ?!

* ಈ ರೀತಿಯಾದ ಪಾಠವು ತಾಳಪತ್ರ ಪುಸ್ತಕಗಳಲ್ಲಿದೆ.

ಪಿಸುಣಂ ಪೇೞಿದೊಡೇವುದೊ
[1] ಬಿಸು ಜಡೆಯಂ ಬೂದಿ ಕಚ್ಚುಟಂ ಬೊಕ್ಕಣಮುಂ
[2] ಪಿಸುಣರೆ ಮತ್ತೆಯುಮಾಟ್ಪುದೆ
ಪಿಸುಣರೆ ದೇವಂಗೆ ನಾರದಂಗಿದು ಸಹಜಂ

೧. ಬಸು (ಕ) ೨. ಪಿಸುಣರೆ ಮತ್ತೆನೆ ಮಾಣ್ಬನೆ (ಕ)

ಅಸುರನ ಮುಖಾಬ್ಜಮಂ ಕೊರ
ಗಿಸುವಲ್ಲಿಗಿದೊಂದು ಸಾಂಬ್ರಚಂದ್ರಿಕೆಯೆನೆ ದಂ
ತಸಮುಜ್ಜ್ವಲರುಚಿ ಪಸರಿಸ
ಲಸಹ್ಯಮಂ ದಿತಿಜಪತಿಗೆ ಯತಿಪತಿ ನುಡಿದಂ ೫೪

ದೇವಕಿಯ ಸುತನಿನಟಿಯೆ ಮ
ಹಾವೀರರ್ ಖರವೃಷೇಂದ್ರಕೇಶಿಪ್ರಮುಖರ್
ದೇವಾರಿ ತೀಕ್ಷ್ಣನಖದಂ
ಷ್ಟ್ರಾವಳಿಯಟಿದೊಂದು ಸಿಂಗಮಂ ನೀಂ ಪೋಲ್ತೈ ೫೫

ನಿನಗಂತಕನುಂ ದೇವಕ
ತನಯಾಷ್ಟಮಗರ್ಭಜಾತನಾ ಬಾಲನೆ ತ
ದ್ದನುಜರನಿಕ್ಕಿದನಿಂ ಪ್ರೌ
ಢನಾಗದನ್ನೆಗಮೊಡರ್ಚುಪಾಯಾಂತರಮಂ ೫೬

ವ|| ಎಂದು ನಾರದಂ ನೀರದಪಥಕ್ಕೆ ಪೋದಂ, ಆಗಳಾ ಭೋಜರಾಜಂ

ದೇವಮುನಿ ನುಡಿದ ನುಡಿಯಿಂ
ಭಾವಿಸಿ ವಸುದೇವಕೃತಕಮಂ ಭಯನಿಷ್ಟಂ
ದಾವಯವಂ ಪರ್ಯಾಕುಲ
ಜೀವಂ ಪಾವಡರ್ದ ಪಂದೆಯಂತೆವೊಲಿರ್ದಂ ೫೭

ವ|| ಅಂತು ಕಿಱಿದಾನು ಬೇಗಮಿರ್ದು ತನ್ನಂ ತಾನೆ ಸಂತೈಸಿಕೊಂಡು ನಿಜಾಂತಿಕದೊಳಿರ್ದ ಮಂತ್ರಿಗಳ ಮೊಗಮಂ ನೋಡಿ

ಚಾಡಿಕಾರರ ದೇವನಾದ ನಾರದನಿಗೆ ಇದು ಸಹಜ. ೫೪. ರಾಕ್ಷಸನ ಮುಖಕಮಲವನ್ನು ಕೊರಗಿಸುವುದಕ್ಕೆ ಇದು ದಟ್ಟವಾದ ಬೆಳುದಿಂಗಳು ಎನ್ನುವಂತೆ ತನ್ನ ಹಲ್ಲಿನ ಕಾಂತಿಯು ಹರಡುತ್ತಿರಲು ನಾರದನು ಕಂಸನಿಗೆ ಸಹ್ಯವಲ್ಲದ ವಿಚಾರವನ್ನು ಹೇಳಿದನು. ೫೫. "ದೇವಾರಿಯೇ? ದೇವಕಿಯ ಮಗನಿಂದ ಮಹಾವೀರರಾದ ಖರಾಸುರ ವೃಷಭಾಸುರ ಕೇಶಿ ಮೊದಲಾದವರು ಹತರಾದುದರಿಂದ ನೀನು, ಹರಿತವಾದ ಉಗುರು ಕೋರೆ ಹಲ್ಲುಗಳನ್ನು ಕಳೆದುಕೊಂಡ ಒಂದು ಸಿಂಹವನ್ನು ಹೋಲುತ್ತಿರುವೆ. ೫೬. ನಿನಗೆ ಯಮನೂ ದೇವಕಿಯ ಎಂಟನೆಯ ಗರ್ಭದಲ್ಲುದಿಸಿದವನೂ ಆದ ಆ ಬಾಲನೇ ಆ ರಾಕ್ಷಸರನ್ನು ಕೊಂದನು. ಅವನು ಪ್ರೌಢನಾಗುವಷ್ಟರಲ್ಲೇ ಉಪಾಯಾಂತರವನ್ನು ಮಾಡು." ವ|| ಎಂದು ನಾರದನು ಹೇಳಿ ಆಕಾಶಕ್ಕೆ ಹಾರಿದನು. ಆಗ ಆ ಭೋಜರಾಜನು ೫೭. ದೇವಋಷಿಯು ಹೇಳಿದ ಮಾತಿನಿಂದ ವಸುದೇವನು ಮಾಡಿದ ಕಪಟಕೃತ್ಯವನ್ನು ಭಾವಿಸಿ ನೋಡಿ, ಭಯದಿಂದ ಸ್ತಬ್ಧಾಂಗನೂ, ಅತಿ ಚಿಂತೆಗೊಳಗಾದ ಜೀವವುಳ್ಳವನೂ ಆಗಿ ಹಾವು ಮೇಲೇರಿದ ಹೇಡಿಯಂತೆ ಆದನು. ವ|| ಹಾಗೆ ಸ್ವಲ್ಪ ಹೊತ್ತಿದ್ದು, ತನ್ನನ್ನು ತಾನೇ ಸಂತೈಸಿಕೊಂಡು ತನ್ನ ಸಮೀಪದಲ್ಲಿದ್ದ ಮಂತ್ರಿಗಳ ಮುಖವನ್ನು ನೋಡಿ ಹೇಳಿದನು.

ದೇವಕಿಯ ಪುತ್ರನಸ್ಮ
ಜ್ಜೀವಾಂತಕನಲ್ಲದುಟಿದ ಪಗೆಯೆನಗರಿದೇ
ಗೋವಳಿಗರ ಶಿಶುವೆಂದಿರ
ಲಾ ವೈರಿಯೆ ದೇವಕೀಸುತಂ ಗಡದೆಂತೋ ೫೮

ಎನ್ನಂ ವಂಚಿಸಿ ಗೋಕುಲಕ್ಕೆ ವಸುದೇವಂ ದೇವಕೀಪುತ್ರನಂ
ಛನ್ನಾಕಾರದಿನುಯ್ದು ಪಲ್ಲಟಿಸೆ ಮಾಯಾಬಾಲೆಯೊಳ್ ನಂದನುಂ
ತನ್ನಂಗೋದ್ಭವನೆಂದೆ ರಕ್ಷಿಸಿದನಕ್ಕುಂ ಕೃಷ್ಣನಂ ಪೊಲ್ಲಕೆ
ಯ್ದನ್ನೋಡಿಂ ವಸುದೇವನಿಂತೆನಗೆ ಕೌಟಿಲ್ಯಜ್ಞರೇಗೆಯ್ಯರೋ ೫೯

ಇಡುವಳಿಯೊಳಿರ್ಪವೊಲ್ ಮೆ
ಲ್ಪಡಿಸಿದನೆಂತೆನ್ನನೆನಗೆ ವಸುದೇವನೆನಲ್
ಪೆಡದಲೆಯ ಪಾವು ಸೋಂಕಿಲ
ಕಿಡಿ ನಣ್ಪಿನ ಮೃತ್ಯುವಿಂಪುದೋಱುವ ಗರಳಂ ೬೦

ವ॥ ಎಂದು ನೊಂದು ನುಡಿದು ಪ್ರಧಾನಪುರುಷರೊಳಕ್ರೂರನಂ ಕರೆದು

ವದನಚತುಷ್ಕವಿಲ್ಲದ ರಜೋಗುಣವಿಲ್ಲದ ಪದ್ಮಪೀಠವಿ
ಲ್ಲದ ಕಳಹಂಸವಿಲ್ಲದ ಕಮಂಡಲುವಿಲ್ಲದ ಪಾಶರಜ್ಜುವಿ
ಲ್ಲದ ವಿಮಳಾಕ್ಷಮಾಲಿಕೆಯುಮಿಲ್ಲದಪೂರ್ವವಿರಿಂಚ ಧರ್ಮಕೋ
ವಿದ ನಯಯುಕ್ತ ದಾನಪತಿ ಪೇೞ್ದಪೆನಾಂ ನಿನಗೊಂದು ಕಾರ್ಯಮಂ ೬೧

ವ॥ ಅದೆಂತೆಂದೊಡೆ, ಬಳಸೂದನಸೂದನನಪ್ಪೆನಗೆ ನಂದನನಂದನದೊಳ್ ಸಂಧಾನಂ

೫೮. "ದೇವಕಿಯ ಮಗನು ನನ್ನ ಜೀವಕ್ಕೆ ಅಂತಕನೇ ಹೊರತು ಉಳಿದವರಾರೂ ನನಗೆ ಅಸಾಧ್ಯರಾದ ಹಗೆಗಳಲ್ಲ. ಅವನು ಗೋಪಾಲರ ಮಗು ಎಂದುಕೊಂಡಿದ್ದೆನು. ಆ ವೈರಿಯೇ ದೇವಕಿಯ ಮಗನೆಂಬುದು ಅದು ಹೇಗೋ! ೫೯. ವಸುದೇವನು ನನ್ನನ್ನು ವಂಚಿಸಿ, ವೇಷಾಂತರದಿಂದ ದೇವಕಿಯ ಮಗುವನ್ನು ಎತ್ತಿಕೊಂಡು ಗೋಕುಲಕ್ಕೆ ಹೋಗಿ, ಮಾಯಾಬಾಲಿಕೆಗೆ ಬದಲಿಸಿ ಇಟ್ಟನು. ನಂದಗೋಪನು ಕೃಷ್ಣನನ್ನು ತನ್ನ ಮಗನೆಂದೇ ರಕ್ಷಿಸಿರಬಹುದು. ವಸುದೇವನು ನನಗೆ ಹೇಗೆ ಕೇಡು ಮಾಡಿದನೋ ನೋಡಿ! ಕುಟಿಲರು ಏನನ್ನು ತಾನೆ ಮಾಡುವುದಿಲ್ಲ?! ೬೦. ವಸುದೇವನು ನನ್ನ ಬಂಧನದಲ್ಲೇ ಇರುವವನಂತೆ, ನನ್ನನ್ನು ಭ್ರಾಂತಿಗೊಳಿಸಿಬಿಟ್ಟನು ಎಂದಮೇಲೆ ಅವನು ನನಗೆ ಹೆಡದಲೆಯ ಹಾವು, ಮಡಿಲಿನಲ್ಲಿರುವ ಬೆಂಕಿಯ ಕಿಡಿ, ಪ್ರೀತಿಯ ಮೃತ್ಯು, ಇಂಪಾಗಿ ಕಾಣುವ ವಿಷ ಅಲ್ಲವೆ?! ವ॥ ಎಂದು ನೊಂದುಕೊಂಡು ಮಾತನಾಡಿ, ಪ್ರಧಾನಪುರುಷರಲ್ಲಿ ಒಬ್ಬನಾದ ಅಕ್ರೂರನನ್ನು ಕರೆದು ೬೧. "ನಾಲ್ಕುಮುಖಗಳೂ, ರಜೋಗುಣವೂ ಕಮಲಾಸನವೂ ಕಲಹಂಸವೂ ಕಮಂಡಲವೂ ಪಾಶವೂ ನಿರ್ಮಲ ಜಪಮಾಲೆಯೂ ಇಲ್ಲದ ಅಪೂರ್ವ ಬ್ರಹ್ಮನೇ! ಧರ್ಮಪಂಡಿತಾ, ನೀತಿಯುತಾ, ದಾನಪತೀ! ನಿನಗೆ ನಾನು ಒಂದು ಕೆಲಸವನ್ನು ಹೇಳುತ್ತೇನೆ. ವ॥ ಅದೇನೆಂದರೆ ಇಂದ್ರನಿಗೆ ವೈರಿಯಾದ ನನಗೆ ನಂದನ ಮಗನಲ್ಲಿ

ನೀತಿನಿಂದಿತಮುಂ, ಪ್ರಭಂಜನಸಖಪ್ರಭಾವಪ್ರಭಂಜನನಪ್ಪೆನಗೆ ಕುಲಹೀನ ವನಿತಾಸ್ತನ್ಯೋಪಪುಷ್ಟನೊಳನು ಬಂಧಿಕೆಯತಿಕಷ್ಟಮುಂ, ಕಾಲಪ್ರಳಯಕಾಲನಪ್ಪೆನಗೆ ಸಹಾಯಶೂನ್ಯದೊಳ್ ಯಾನವತಿಹೀನಮುಂ, ಕ್ರವ್ಯಾದಸಂಹನನಕ್ರವ್ಯಾದನಪ್ಪೆನಗೆ ಅನಭ್ಯಸ್ತಶಸ್ತ್ರದೊಳ್ ಸಾಮವಪ್ಪುದಕಾರ್ಯಮುಂ, ಪ್ರಕಂಪನಜೀನ ಪ್ರಕಂಪನನಪ್ಪೆನಗೆ ಗೋಪಾಲಯುಕ್ತನೊಳ್ ಭೇದಮಯುಕ್ತಮುಂ ಪುರಮಥನಮಿತ್ರಪುರಮಥನನಪ್ಪೆನಗೆ ನವನೀತಚೋರನೊಳ್ ಪ್ರದಾನಮಪ್ರಯೋಜನಮುಂ, ಉಗ್ರಸಂಗ್ರಾಮೋಗ್ರನಪ್ಪೆನಗೆ ಗೋನಿಯೋಗ ದಂಡಧರನೊಳ್ ದಂಡಮಪಹಾಸ್ಯಮುಮಪ್ಪುದು. ಅದು ಕಾರಣದಿಂ ಕೃಷ್ಣನೊಳ್ ಕುಟಿಲೋಪಾಯಮೆ ಕರಣೀಯಂ. ಆ ಮಾಯಾವಿಯಂ ಧನುರ್ಮಹೋತ್ಸವಾಮಂತ್ರಣವ್ಯಪದೇಶದಿಂ ವಿನಾಶಮನೆಯ್ದಿಸುವೆಂ. ಅಲ್ಲಿಂ ಬಳಿಯಂ

ಆಂ ದೇವಕಜೆಯನಾನಕ
ದುಂದುಭಿಯಂ ನಂದನಂ ಯಶೋದಾವಧುವಂ
ಕೊಂದವರ ರಕ್ತಜಲದಿಂ
ನಂದಿಸುವೆಂ ಮತ್ತ್ರಕೋಪತೀವ್ರಾನಳನಂ ೬೨

ಯಾದವರನಿಕ್ಕಿ ನಿರ್ದಾ
ಯಾದವರ ಪ್ರಾಜ್ಯರಾಜ್ಯಲಕ್ಷ್ಮೀವಧುಗಾಂ
ಕಾದಲನಪ್ಪೆಂ ಬಳಿಯಂ
ಕಾದಲಣಂ ಗೋತ್ರವೈರಿಯುಂ ನೆಱೆದಪನೇ ೬೩

ಸಂಧಾನವು ನೀತಿದೂಷಿತ, ಅಗ್ನಿಯ ಪ್ರಭಾವವನ್ನು ಭಂಜಿಸಿದ ನನಗೆ ಕುಲಹೀನವನಿತೆಯ ಸ್ತನ್ಯದಿಂದ ಪುಷ್ಟನಾದವನಲ್ಲಿ ಅನುವರ್ತನೆ ಅತಿಕಷ್ಟ, ಯಮನಿಗೆ ಪ್ರಳಯಕಾಲಯಮನಾದ ನನಗೆ ಅಸಹಾಯನಾದವನ ಮೇಲೆ ದಂಡೆತ್ತಿ ಹೋಗುವುದು. ಅತಿಹೀನ, ನಿರತಿ ರಾಕ್ಷಸನ ದೇಹಮಾಂಸವನ್ನು ಭಕ್ಷಿಸಬಲ್ಲ ನನಗೆ ಶಸ್ತ್ರಭ್ಯಾಸವಿಲ್ಲದವನೊಡನೆ ಯುದ್ಧವು ನಿಷಿದ್ಧ. ವರುಣನ ಹೃದಯರಕ್ತಪಾಯಿಯಾದ ನನಗೆ ಕಾಕಪಕ್ಷವೆಂಬ ಜುಟ್ಟುಳ್ಳವನೊಡನೆ ಸಾಮೋಪಾಯವು ಅಕಾರ್ಯ, ವಾಯುವಿನ ಜೀವವನ್ನು ನಡುಗಿಸುವ ನನಗೆ ಗೋಪಾಲರ ಜತೆಯವನೊಡನೆ ಭೇದೋಪಾಯವೂ ಅಯುಕ್ತ. ಈಶ್ವರಮಿತ್ರನಾದ ಕುಬೇರನ ಪುರವನ್ನು ಕೆಡೆದ ನನಗೆ ಬೆಣ್ಣೆಗಳ್ಳನೊಡನೆ ದಾನೋಪಾಯವೂ ಪ್ರಯೋಜನವಿಲ್ಲದುದು ಈಶ್ವರನೊಡನೆ ಯುದ್ಧಮಾಡುವದರಲ್ಲಿ ಉಗ್ರನಾದ ನನಗೆ ದನಗಳನ್ನು ಕಾಯಲು ಕೋಲನ್ನು ಹಿಡಿದವನೊಡನೆ ದಂಡೋಪಾಯವೂ ಅಪಹಾಸ್ಯಕರ. ಆದುದರಿಂದ ಕೃಷ್ಣನ ವಿಷಯದಲ್ಲಿ ಕುಟಿಲೋಪಾಯವೇ ಮಾಡಬೇಕಾದುದು. ಆ ಮಾಯಾವಿಯನ್ನು ಧನುರ್ಮಹೋತ್ಸವಕ್ಕೆ ಕರೆಯುವ ನೆಪದಿಂದ ವಿನಾಶಪಡಿಸುವೆನು. ಆಮೇಲೆ ೬೨. ನಾನು ದೇವಕಿಯನ್ನೂ ವಸುದೇವನನ್ನೂ ನಂದ ಯಶೋದೆಯರನ್ನೂ ಕೊಂದು ಅವರ ರಕ್ತಜಲದಿಂದ ನನ್ನ ಕೋಪವೆಂಬ ಪ್ರಬಲವಾದ ಬೆಂಕಿಯನ್ನು ಆರಿಸುವೆನು. ೬೩. ಯಾದವರನ್ನು ಕೊಂದು ದಾಯಾದಿಗಳಿಲ್ಲದ ಉತ್ತಮವೂ ವಿಸ್ತಾರವೂ ಆದ ರಾಜ್ಯಲಕ್ಷ್ಮೀವಧುವಿಗೆ ನಾನು ಪ್ರಿಯನಾಗುವೆನು. ಬಳಿಕ ನನ್ನೊಡನೆ ಕಾದುವುದಕ್ಕೆ ಪರ್ವತವೈರಿಯಾದ ಇಂದ್ರನು ತಾನೆ

ಧಿಷಣನೆನಿಪ್ಪ ಮಂತ್ರಿಗುಚಿತಂ ಪತಿಕಾರ್ಯಮದರ್ಕೆ ನೀನಕ
ಲ್ಮಷಮತಿ ಪೋಗಿ ಗೋಕುಲಕೆ ಗೋಪಕದಂಬಕಮಿಂದು ಗವ್ಯಮಾ
ಹಿಷರಸಸಂಕುಳಂಬೆರಸು ಕಾರ್ಮುಕಪೂಜೆಗೆ ಬರ್ಪುದೆಂದು ತ
ನ್ನಿಮಿಷದೊಳೆ ಚೆಚ್ಚರಂ ರಥಮನೇಱಿಸಿ ತರ್ಪುದು ರಾಮಕೃಷ್ಣರಂ ೬೪

ವ|| ಎನಲಂದು

ಕರ್ಕಶಮನಂ ಸುರಾರಿ ಕು
ತರ್ಕೋಕ್ತಿಯನೆಂತು ಪೂಣ್ದು ಬೆಸವೇೞ್ದನದಂ
ಮಾರ್ಕೊಂಡುಪಾಂಶುವೆನ್ನದು
ದರ್ಕಪರಿಜ್ಞಾನದಾನಪತಿ ಕೈಕೊಂಡಂ ೬೫

ಶುಭಲಕ್ಷಣಾಶ್ವಯುಕ್ತಮ
ನಭಿನುತಸಾರಥಿಸನಾಥಮಂ ಮಣಿಘಂಟಾ
ಸುಭಗಮನುದಿತಧ್ವಜಮಂ
ಪ್ರಭಾವಿರಾಜಿತಮನೇಱಿದಂ ಪೊಂದೇಱಂ ೬೬

ವ|| ಅಂತು ನಿಜರಥಮನೇಱಿ ಪೊೞಲಿಂ ತಳರ್ದು

ಮಖಪುರುಷನಿರ್ದ ದೆಸೆಗಭಿ
ಮುಖನಾದೊಡೆ ಪೋಯ್ತಘಂ ಪರಾಙ್ಮುಖಮಂತ
ರ್ಮುಖಮಾದುದು ಮಾನಸಮು
ನ್ಮುಖಮಾದುದು ಭೋಂಕನಲರ್ದುದಾಸ್ಯಾಂಭೋಜಂ ೬೭

ಶಕ್ತನಾಗುವನೇ?! ೬೪. ಬುದ್ಧಿವಂತನಾದ ಮಂತ್ರಿಗೆ ಸ್ವಾಮಿಕಾರ್ಯವು ಉಚಿತವಾದುದು. ಆದುದರಿಂದ ಅದಕ್ಕೆ ನಿರ್ಮಲಬುದ್ಧಿಯುಳ್ಳ ನೀನು ಗೋಕುಲಕ್ಕೆ ಹೋಗಿ, ಈ ದಿನ ಗೋಪರ ಗುಂಪೆಲ್ಲವೂ ಹಸುಗಳ ಮತ್ತು ಎಮ್ಮೆಗಳ ಹಾಲು-ಮೊಸರು ಬೆಣ್ಣೆ ಮೊದಲಾದ ರಸದ್ರವ್ಯಗಳೊಡನೆ ಬಿಲ್ಲಿನ ಪೂಜೆಗೆ ಬರಬೇಕು. ಎಂದು ಹೇಳಿ ಆ ನಿಮಿಷದಲ್ಲೇ ಬೇಗ ರಾಮಕೃಷ್ಣರನ್ನು ರಥದ ಮೇಲೇರಿಸಿ ತರಬೇಕು". ವ|| ಎಂದನು-ಆಗ ೬೫. ಕಠಿನ ಮನಸ್ಸಿನ ಕಂಸನು ಕುತರ್ಕರ ಮಾತನ್ನು ಹೇಗೆ ಪ್ರತಿಜ್ಞೆ ಮಾಡಿ ಹೇಳಿದನೋ ಹಾಗೆಯೇ ಅದಕ್ಕೆ ಪ್ರತಿಭಟಿಸದೆ ಅದು ಪಾಪವೆಂದೂ ಹೇಳದೆ ಮುಂದಿನ ಪರಿಜ್ಞಾನವುಳ್ಳ ಅಕ್ರೂರನು ಒಪ್ಪಿಕೊಂಡನು. ೬೬. ಶುಭಲಕ್ಷಣದ ಕುದುರೆಗಳನ್ನು ಹೂಡಿದುದೂ, ಹೆಸರಾದ ಸಾರಥಿಯುಳ್ಳುದೂ ಮಣಿಘಂಟೆಗಳಿಂದ ಸುಂದರವೂ ಎತ್ತಿ ಕಟ್ಟಿದ ಬಾವುಟವುಳ್ಳುದೂ ಪ್ರಭಾವದಿಂದ ಹೊಳೆಯುವುದೂ ಆದ ಸುವರ್ಣರಥವನ್ನು ಅಕ್ರೂರನು ಏರಿದನು. ವ|| ಹಾಗೆ ತನ್ನ ರಥವನ್ನೇರಿ ಪಟ್ಟಣದಿಂದ ಹೊರಟನು. ೬೭. ಯಜ್ಞಪುರುಷ ಕೃಷ್ಣನಿದ್ದ ದಿಕ್ಕಿಗೆ ಎದಿರಾಗುತ್ತಿದ್ದಂತೆ ಅವನ ಪಾದವು ಹಿಮ್ಮುಖವಾಗಿ ಹೊರಟುಹೋಯಿತು. ಚಿಂತೆಗೊಳಗಾಗಿದ್ದ ಅವನ ಮನಸ್ಸು ಅಂತರ್ಮುಖವಾಗಿ; ಉತ್ಸಾಹಗೊಂಡಿತು.

ಸನಕಾದ್ಯರನಂತಯುಗಂ
ಮನದೊಳ್ ಚಿಂತಿಸಿಯುಮೆಯ್ದಲಱಿಯದ ಲಕ್ಷ್ಮೀ
ಶನನಾನೆಯ್ದಿದಪೆಂ ಪೋ
ಗಿ ನಿಮಿಷದಿಂ[1]ದೆನ್ನಿನೆಯ್ದೆ ಧನಮೆಯ್ದಿದರಾರ್ ೬೮

ಯಮಿವರರುಂ ಲಕ್ಷಿಸಲ
[2]ಕ್ಷಮರೆನಲಾಕಾರಶೂನ್ಯಮಾದ ಪರಬ್ರ
ಹ್ಮಮೆ ಸಾಕಾರತೆವೆತ್ತಂ
ದಮನೀಕ್ಷಿಸುವೊಂದು ಸೈಪು ಸಮನಿಸಿತೆನ್ನೊಳ್ ೬೯

ತ್ರಿದಶಮುನಿಶ್ರೇಷ್ಠರ ಚಾ
ರುದೃಷ್ಟಿಗಂ ಕಾಣಲರಿದೆನಿಪ್ಪಮಿತಾಕಾ
ರದ ನಾರಾಯಣನಂ ಚ
ರ್ಮದೃಷ್ಟಿಯೊಳೆ ಕಂಡಪೆಂ ಗಡಾನೆ ಕೃತಾರ್ಥಂ ೭೦

ಪೊಡವಿಯೊಳಾಂ ಮೆಯ್ಯಿಕ್ಕಿರೆ
ನಡೆ ನೋಡಿ ದಯಾನ್ವಿತಂ ಸುದರ್ಶನಚಕ್ರಂ
ಬಿಡಿವ ನಿಜದಿವ್ಯಕರದಿಂ
ಪಿಡಿದೇಂ ನೆಗಪುಗುಮೆ ಕಮಳಲೋಚನನೆನ್ನಂ ೭೧

ಧರೆಯಿಂದೇಟ್ಟುದು[3]ಮಾನುಂ
ಬರೆತೆಗೆದು ಪುನಃಪುನಂ ಜನಾರ್ದನನಾ ಮಂ
ದರಮಂ ತಟ್ಕೈಸಿದ ಭುಜ
ಪರಿಘಂಗಳಿನೆನ್ನನೊಲ್ದು ತಟ್ಕೈಸುಗುಮೇ ೭೨

ಮುಖಕಮಲವು ಅರಳಿತು. ೬೮. "ಸನಕಾದಿಗಳು ಅನಂತಯುಗಕಾಲ ಧ್ಯಾನಿಸಿದರೂ ಪಡೆಯಲಾಗದ ಲಕ್ಷ್ಮೀಶನನ್ನು ನಾನು ಹೋಗಿ ಒಂದು ನಿಮಿಷದಲ್ಲಿ ಪಡೆಯುವೆನಲ್ಲಾ ನನಗಿಂತ ಧನ್ಯರು ಯಾರಿರುವರು? ೬೯. ಯೋಗಿವರ್ಯರು ನೋಡಲು ಅಸಮರ್ಥರಾಗುವಂತೆ ನಿರಾಕಾರವಾದ ಆ ಪರಬ್ರಹ್ಮವೇ ಸಾಕಾರತೆಯನ್ನು ಪಡೆದ ಅಂದವನ್ನು ನೋಡುವ ಸುಕೃತವು ನನಗೆ ಒದಗಿತು. ೭೦. ದೇವರ್ಷಿಶ್ರೇಷ್ಠರ ದಿವ್ಯದೃಷ್ಟಿಗೂ ಕಾಣಲಾಗದ ಅಮಿತಾಕಾರದ ನಾರಾಯಣನನ್ನು ಚರ್ಮದೃಷ್ಟಿಯಿಂದಲೇ ಕಾಣುತ್ತೇನಲ್ಲವೆ?! ನಾನೇ ಧನ್ಯ. ೭೧. ನಾನು ಭೂಮಿಯ ಮೇಲೆ ಅಡ್ಡಬಿದ್ದಿರಲು ಆ ಕಮಲನೇತ್ರನು ಚೆನ್ನಾಗಿ ನೋಡಿ, ದಯೆಯುಳ್ಳವನಾಗಿ, ಸುದರ್ಶನ ಚಕ್ರವನ್ನು ಹಿಡಿಯುವ ತನ್ನ ದಿವ್ಯ ಹಸ್ತದಿಂದ ಹಿಡಿದು ನನ್ನನ್ನು ಎತ್ತುವನಲ್ಲವೆ? ೭೨. ನಾನು ನೆಲದ ಮೇಲಿಂದ ಏಳುತ್ತಲೂ ಹತ್ತಿರಕ್ಕೆಳೆದುಕೊಂಡು ಆ ಜನಾರ್ದನನು ಮಂದರಪರ್ವತವನ್ನು ತಬ್ಬಿಕೊಂಡ

೧. ದೆನ್ನನೆಯ್ದೆ ಜಸಮೆಯ್ದದರಾರ್ (ಕಖ) ದೆನ್ನನೆಯ್ದೆ ಜನಮೆಯ್ದಿದರಾರ್ (ಗ)
೨. ಕ್ಷಮವೆನಲಾ (ಕಖಗ) ೩. ಮೆನ್ನಂ (ಕಖಗ)

ಅವನತಿಯಿಂ ಪೊರೆದ ಮದೀ
ಯವದನಭೂರಜಮನೊಲ್ದು ತೊಡೆಗುಮೆ ಲಕ್ಷ್ಮೀ
ಯುವತಿಯ ಮುಖಘರ್ಮಪಯೋ
ಲವಮಂ ತೊಡೆವರುಣಹಸ್ತತಳದಿಂ ಕೃಷ್ಣಂ ೨೩

ಸನ್ನುತಿಗೆಯ್ದಾರಾಧಿಸೆ
ತನ್ನಂ ಬ್ರಹ್ಮಾದಿದೇವರೊಳಗೆತ್ತಾನುಂ
ಮುನ್ನುಡಿದ ದಿವ್ಯವಚನಮ
ನೆನ್ನೊಳ್ ನುಡಿಗುಮೆ ನೃಕೀಟನೊಳ್ ನರಸಿಂಹಂ ೨೪

ಅಸುರನ ಚರನೆಂದಪಮಾ
ನಿಸುಗುಮೊ ಮೇಣ್ ಭಕ್ತನೆಂದು ಮನ್ನಿಸುಗುಮೊ ಭಾ
ವಿಸಿ ತಿಳಿದೆನಿಂತಿದಂ ಕ
ರ್ಮಸಾಕ್ಷಿ ಚೈತನ್ಯರೂಪನಱಿಯನೆ ಕೃಷ್ಣಂ ೨೫

ವ|| ಎಂದು ಪರಮಭಾಗವತಂ ಶುಭಧ್ಯಾನಪರಾಯಣನಾಗಿ

ನಿಜದಕ್ಷಿಣಾಕ್ಷಿ ದಕ್ಷಿಣ
ಭುಜಪರಿಘಸ್ಪಂದಮೊಗೆಯೆ ವನಮೃಗಖಗಸ
ವ್ರಜಶಕುನಂ ಶುಭಮೆನೆ ಪವ
ನಜವಾನ್ವಿತರಥದಿನೆಯ್ದಿದಂ ಗೋಕುಲಮಂ ೨೬

ಗೋಪಸ್ತ್ರೀದಧಿಮಂಥನಶ್ರಮಹರಂ ಗೋದೋಹನಕ್ಷೀರಧಾ
ರಾಪಾತೋತ್ಥಲವಾಪಹಾರಪಟು ಸದ್ಯಸ್ತಪ್ತಸರ್ಪಿಸ್ಸು ಗಂ
ಧೋಪೇತಂ ಸುಳಿಯಲ್ ವಿಭಾತಪವಮಾನಂ ಪೊಕ್ಕನಕ್ರೂರನಂ
ದಾ ಪೊಬ್ಬುತ್ತಿವದಿಂದೆ ವತ್ಸಕುಲ ಹಂಭಾ ಘೋಷಮಂ ಘೋಷಮಂ ೨೭

ನಿಡುದೋಳುಗಳಿಂದ ಪ್ರೀತಿಯಿಂದ ನನ್ನನ್ನು ಅಪ್ಪಿಕೊಳ್ಳುವನೇ! ೨೩. ಅಡ್ಡಬಿದ್ದಾಗ ನನ್ನ ಮುಖಕ್ಕೆ ಹತ್ತಿದ ನೆಲದ ಧೂಳನ್ನು ಆ ಕೃಷ್ಣನು ಲಕ್ಷ್ಮೀದೇವಿಯ ಮುಖದ ಬೆವರು ನೀರನ್ನು ಒರಸುವ ತನ್ನ ಕೆಂಪಾದ ಅಂಗಯ್ಯಿಂದ ಒಲಿದು ಒರಸುವನೇ! ೨೪. ಬ್ರಹ್ಮಾದಿದೇವತೆಗಳು ಸ್ತುತಿಸಿ ಪೂಜಿಸಿ ಸಂತೋಷಪಡಿಸಿದಾಗ ಮುಂಚೆ ಎಲ್ಲೋ ಅವರೊಡನೆ ಆಡಿದ ದಿವ್ಯವಚನವನ್ನು ಆ ನರಸಿಂಹನು ಮನುಜಕೀಟನಾದ ನನ್ನೊಡನೆ ಆಡುವನೇ? ೨೫. ರಾಕ್ಷಸನ ಚರನೆಂದು ನನ್ನನ್ನು ಅಪಮಾನಿಸುವನೋ? ಅಥವಾ ಭಕ್ತನೆಂದು ಮನ್ನಿಸುವನೋ?! ಆಹಾ ಇದನ್ನು ಯೋಚಿಸಿ ತಿಳಿದೆನು. ಕರ್ಮಸಾಕ್ಷಿಯೂ ಚೈತನ್ಯರೂಪನೂ ಆದ ಕೃಷ್ಣನು ಇದನ್ನು ಅರಿಯನೆ?!" ವ|| ಎಂದು ಪರಮ ಭಾಗವತನಾದ ಅಕ್ರೂರನು ಶುಭಧ್ಯಾನಾಸಕ್ತನಾದನು. ೨೬. ಆತನ ಬಲಗಣ್ಣೂ ನಿಡಿದಾದ ಬಲತೋಳೂ ಅದುರಿತು. ವನದ ಮೃಗಪಕ್ಷಿಗಳ ಶಕುನವು ಶುಭವೆಂದಿತು. ವಾಯುವೇಗದ ರಥದಿಂದ ಬೇಗ ಗೋಕುಲವನ್ನು ಸೇರಿದನು. ೨೭. ಗೋಪಸ್ತ್ರೀಯರಿಗೆ ಮೊಸರನ್ನು ಕಡೆಯುವುದರಿಂದಾಗುವ ಶ್ರಮವನ್ನು ಪರಿಹರಿಸುವುದೂ, ಹಸುಗಳಿಂದ ಹಾಲನ್ನು

ವ|| ಅಂತು ಪೊಕ್ಕು ನಂದಗೋಪನ ಮನೆಗೆ ಬಂದು ವರೂಥದಿಂ ಪ್ರಾಂಗಣತಳಕ್ಕವತರಿಸಿ

ಭುಜಯುಗಮಾದೊಡಂ ಭುಜಚತುಷ್ಟಯಮೆಂಬಿನಮೊಪ್ಪುತಿರ್ಪುವಾ
ಭುಜದೊಳ್ ಶಂಖಚಕ್ರನಳಿನೀಗದೆಗಳ್ ತೊಡರ್ದಂತೆ ಸೌಷ್ಠವಂ
ಭಜಿಯಿಸಿದತ್ತು ಕೌಸ್ತುಭಮನಾಂತವೊಲಿರ್ದುದು ವಕ್ಷಮಂತೆ ನೀ
ರಜದಳಲೋಚನಂಗಳೆಸೆದಿರ್ದಪುವೀತನೆ ಕೃಷ್ಣನಾಗನೇ ೭೮

ವ|| ಎಂದು ಮನದೊಳೆ ಭಾವಿಸಿ

ಗೋದೋಹನಲೀಲೆಯೊಳ
ಬ್ಜೋದರನಿರೆ ಕಂಡು ದಾನಪತಿ ಸಂತಸದಿಂ
ದಾದಿಸ್ವರೂಪದಿಂ ಚೆ
ಲ್ವಾದುದು ಲೀಲಾಸ್ವರೂಪಮೆಂದೀಕ್ಷಿಸಿದಂ ೭೯

ವ|| ಅಂತು ಸಂತೋಷದಿಂದಕ್ರೂರಂ ನಿರೀಕ್ಷಿಸುವುದುಂ ಭಕ್ತಜನಮನೋನಿವಾಸಂ ವಾಸುದೇವಂ ಗೋದೋಹನವಿನೋದಮಂ ಮಾಣ್ದು ಗೋಪಾಲವಿಭೂಷಣವಿಲಾಸಮೆಸೆವಿನ ಮಿದಿರೆಬ್ದುವಂದು

ಹೃಷ್ಟತೆಯಿಂದಕ್ರೂರಂ
ಸಾಷ್ಟಾಂಗಪ್ರಣತನಾಗೆ ಕಾರುಣ್ಯಸುಧಾ
ವೃಷ್ಟಿ ಪಸರಿಸಿದುದೆನೆ ನಿಜ
ದೃಷ್ಟಿಪ್ರಭೆ ನಿಮಿರೆ ನೋಡಿದಂ ಕಮಳಾಕ್ಷಂ ೮೦

ಕರೆಯುವಾಗ ಬೀಳುವ ಹಾಲಿನ ಧಾರೆಯಿಂದ ಎದ್ದ ಹಾಲಿನ ಕಣಗಳನ್ನು ಅಪಹರಿಸುವುದರಲ್ಲಿ ಸಮರ್ಥವೂ ಆಗತಾನೆ ಕಾಯಿಸಿದ ತುಪ್ಪದ ಸುವಾಸನೆಯಿಂದ ಕೂಡಿದುದೂ, ಆಗಿ ಬೆಳಗಿನ ಗಾಳಿಯು ಬೀಸುತ್ತಿದ್ದಿತು. ಕರುಗಳು 'ಅಂಬಾ' ಎಂದು ಕೂಗುತ್ತಿದ್ದವು. ಅಕ್ರೂರನು ಆಗ ಸಂತೋಷದಿಂದ ಗೋಕುಲವನ್ನು ಹೊಕ್ಕನು. ವ|| ಹಾಗೆ ಹೊಕ್ಕು ನಂದಗೋಪನ ಮನೆಗೆ ಬಂದು ವಿಸ್ತಾರವಾದ ಅಂಗಳದಲ್ಲಿ ರಥದಿಂದ ಇಳಿದನು. ೭೮. "ತೋಳುಗಳೆರಡೇ ಆದರೂ ನಾಲ್ಕರಂತೆ ಒಪ್ಪುತ್ತಿವೆ. ಆ ಭುಜಗಳಲ್ಲಿ ಶಂಖ ಚಕ್ರ ಗದಾಪದ್ಮಗಳು ಇರುವಂತೆ ಸ್ಪಷ್ಟವಾಗಿ ಕಾಣುತ್ತಿದೆ: ಎದೆಯು ಕೌಸ್ತುಭವನ್ನು ಧರಿಸಿದಂತಿದೆ. ಕಣ್ಣುಗಳು ಕಮಲದಳದಂತೆ ಹೊಳೆಯುತ್ತಿವೆ. ಈತನೆ ಕೃಷ್ಣನಲ್ಲವೆ?!" ವ|| ಎಂದು ಮನಸ್ಸಿನಲ್ಲೇ ಭಾವಿಸಿದನು. ೭೯. ಕಮಲನಾಭನು ಹಸುಗಳಿಂದ ಹಾಲುಕರೆಯುವ ಲೀಲೆಯಲ್ಲಾಸಕ್ತನಾಗಿರುವುದನ್ನು ನೋಡಿದನು. ಅವನ ಆದಿನಿತ್ಯ ಸ್ವರೂಪಕ್ಕಿಂತಲೂ ಲೀಲಾಸ್ವರೂಪವೇ ಚೆಲುವಾಗಿದೆಯೆಂದು ಸಂತೋಷಗೊಂಡನು. ವ|| ಹಾಗೆ ಸಂತೋಷದಿಂದ ಅಕ್ರೂರನು ಗಮನವಿಟ್ಟು ನೋಡುತ್ತಿರುವುದನ್ನು ಕಂಡ ಭಕ್ತಜನರ ಮನಸ್ಸಿನಲ್ಲಿ ವಾಸಿಸುವ ಕೃಷ್ಣನು ಹಾಲುಕರೆಯುವ ವಿನೋದವನ್ನು ಬಿಟ್ಟು ಗೋಪಾಲರ ವೇಷಭೂಷಣವಿಲಾಸವು ಚೆನ್ನಾಗಿರುವಂತೆಯೇ ಬಂದನು.

ಆರಿಂತು ಧನ್ಯರೆನಲ
ಕ್ರೂರಂ ತಾಂ ಪಡೆದನೆಂತು ಬಯಸಿದನಂತಾ
ಶೌರಿಯ ಕರಸಂಸ್ಪರ್ಶನ
ಕಾರುಣ್ಯನಿರೀಕ್ಷಣಪ್ರಸಾದೋಕ್ತಿಗಳಂ ೮೧

ವ|| ಅನ್ನೆಗಂ

ರಾಗದೆ ಬಂದಿದಿರೆಟ್ಟಿ
ಭ್ಯಾಗತಪೂಜೆಯನೊಡರ್ಚಿ ನಂದಂ ನುಡಿದಂ
ಸ್ವಾಗತಮೆ ಸುಖಮೆ ಭವದೀ
ಯಾಗಮದಿಂ ಸುದಿನಮಾದುದಿಂದಿನ ದಿವಸಂ ೮೨

ವ|| ಎಂದು ಸಂಭಾಷಣಂಗೆಯ್ದ ನಂದಗೋಪನ ಮುಖಾರವಿಂದಮಂ ನೋಡಿ ದಾನವಲ್ಲಭನಿಂತೆಂದಂ

ಏ ತೆಱದ ತಪೋದಾನ
ವ್ರಾತದೊಳೇಂ ಮೊಗ್ಗೆ ನಂದ ನೀನೀ ತ್ರಿಜಗ
ತ್ತಾತಂಗೆ ಜಳಧಿಶಾಯಿಗೆ
ತಾತನೆ ಆದೊಂದು ಪೆಂಪಜಂಗಮಲಭ್ಯಂ ೮೩

ರೂಡಿಯನಪ್ಪುಕೆಯ್ದಮರಮಾತೃಗಮಿಲ್ಲದ ಪುಣ್ಯಶಕ್ತಿ ಕೈ
ಗೂಡಿದುದೀಕೆಗಬ್ಧಿಶಯನಂ ಗಡ ನಂದನನೀ ಮನೋಹರ
ಕ್ರೀಡನನೆತ್ತಿಕೊಂಡು ಮೊಲೆಯೂಡಿದ ತಳ್ತಮರ್ದಪ್ಪಿದೊಲ್ದು ಮು
ದ್ದಾಡಿಸಿದೀ ಭವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೇ ೮೪

೮೦. ಅಕ್ರೂರನು ಸಂತುಷ್ಟನಾಗಿ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಕಾರುಣ್ಯಾಮೃತವೃಷ್ಟಿ ಪ್ರಸರಿಸುತ್ತಿರುವಂತೆ ತನ್ನ ಕಣ್ಣಿನ ಕಾಂತಿಯು ಹರಡುತ್ತಿರಲು ಕಮಲಾಕ್ಷನು ಅವನನ್ನು ನೋಡಿದನು. ೮೧. ಯಾರು ಹೀಗೆ ಧನ್ಯರಿರುವರು! ಅಕ್ರೂರನು ಮಾತ್ರ ಹೇಗೆ ಬಯಸಿದ್ದನೋ ಹಾಗೆಯೇ ಆ ಕೃಷ್ಣನ ಕರಸಂಸ್ಪರ್ಶನ ಕರುಣೆಯ ನೋಟವನ್ನು ಒಲುಮೆಯ ಮಾತುಗಳನ್ನೂ ಪಡೆದನು. ವ|| ಅಷ್ಟರಲ್ಲಿ ೮೨. ನಂದನು ಸಂತೋಷದಿಂದ ಎದ್ದು ಬಂದಿದಿರುಗೊಂಡು ಅತಿಥಿಪೂಜೆಯನ್ನು ಮಾಡಿ, "ಸೌಖ್ಯವೇ? ಸುಖದಿಂದ ಬಂದಿರೇ? ನೀವು ಬಂದುದರಿಂದ ಈ ದಿವಸ-ಸುದಿನವಾಯಿತು". ವ|| ಎಂದು ಸಂಭಾಷಿಸಿದ ನಂದಗೋಪನ ಮುಖಕಮಲವನ್ನು ನೋಡಿ ಅಕ್ರೂರನು ಹೀಗೆಂದನು. ೮೩. "ನಂದಾ! ನೀನು ಈ ಮೂರುಲೋಕಕ್ಕೂ ತಂದೆಯೂ ಸಾಗರಶಾಯಿಯೂ ಆದ ಕೃಷ್ಣನಿಗೆ ತಂದೆಯಾದ ಅದೊಂದು ಮಹಿಮೆಯು ಯಾವ ಬಗೆಯ ತಪೋದಾನಾದಿಗಳಿಂದ ತಾನೆ ಪಡೆಯಲು ಸಾಧ್ಯ?! ಬ್ರಹ್ಮನಿಗೂ ಅಲಭ್ಯ. ೮೪. ಲೋಕವನ್ನೇ ಪಡೆದ ದೇವಮಾತೆಯಾದ ಆದಿತಿದೇವಿಗೂ ಇಲ್ಲದ ಪುಣ್ಯಶಕ್ತಿ ಈಕೆಗೆ ಕೈಗೂಡಿತು. ವಿಷ್ಣುವು ಈಕೆಗೆ ನಂದನನಲ್ಲವೆ? ಈ ಮನೋಹರ ಕ್ರೀಡೆಯವನನ್ನು ಎತ್ತಿಕೊಂಡು ಮೊಲೆಯೂಡಿ ಬಿಗಿಯಾಗಿ ಅಪ್ಪಿಕೊಂಡು, ಪ್ರೀತಿಯಿಂದ ಮುದ್ದಾಡಿಸಿದ

ವ|| ಎಂದು ನುಡಿದ ನಂತರಂ

ಭುವನೋತ್ಸಾಹಕಂ ಧನುರ್ಮಹಮದರ್ಕಂ ಪಾಲ್ಮೊಸರ್ ತುಪ್ಪಮೆಂ
ಬಿವನುಯ್ದೀವುದು ಪೋಗಿ ನೀನಖಿಲಗೋಪಾಲಾನ್ವಿತಂ ನಂದ ಮುಂ
ದಿವರಂ ರಾಮಮುಕುಂದರಂ ರಥದ ಮೇಲಿಟ್ಟುಯ್ವೆಂ ನೋೞ್ಕೆ ಪ
ರ್ವವನೀ ಬಾಲಕರೆಂಬಿದರ್ಕೆ ಬೞಿವಂದೆಂ ಭೋಜರಾಜಾಜ್ಞೆಯಿಂ ೮೫

ಎನೆ ಮಿಕ್ಕು ಮನದೆ ಕೊಂಡಸು
ರನ ಪೊರೆಗಾತ್ಮಜರನಟ್ಟುವೆಡೆಗುತ್ತರಮೊಂ
ದಿನಿಸು ಪೊಱಮಡದೆ ಬಿಡೆ ಕ
ಣ್ಬನಿ ಪೊಱಮಟ್ಟುವು ಯಶೋದೆಗಂ ನಂದಂಗಂ ೮೬

ವ|| ಅಂತಿರ್ದರನಕ್ರೂರಂ ದರಸ್ಮಿತವದನಾರವಿಂದನಾಗಿ ನೋಡಿ

ಈ ತರುಣರನೆಂತಟ್ಟುವೆ
ವಾ ತೀಕ್ಷ್ಣಂ ಕಂಸನಲ್ಲಿಗೆಂಬೊಂದು ಭಯಾ
ಕೂತಂ ಬೇಡಟ್ಟಿದೊಡೇ
ನೀತಂಗಳನಾದಿಮಧ್ಯನಿಧನರಮೋಘಂ ೮೭

ಭುವನಂ ಸಹಸ್ರಶತವಾ
ಱವೞಿಯೆ ನಿಲ್ವಾ ಹಿರಣ್ಯಗರ್ಭನುಮಂ ನುಂ
ಗುವದೊಂದು ಮಹಾಪ್ರಳಯಮು
ನವಯುವದಿಂ ನುಂಗಿ ನೊಣೆವ ಹರಿಗರಿದುಂಟೇ ೮೮

ನಿನ್ನ ಸತಿ ಈ ಯಶೋದೆಯು ಕುಲಕ್ಕೇ ಯಶಸ್ಸನ್ನು ತಂದಳಲ್ಲವೇ?" ವ|| ಎಂದು ಹೇಳಿದನು. ೮೫. ನಂದಾ ಬಿಲ್ಲ ಹಬ್ಬವು ಲೋಕಕ್ಕೇ ಉತ್ಸಾಹಕರವಾದುದು. ಅದಕ್ಕೆ ನೀನು ಹಾಲು ಮೊಸರು ತುಪ್ಪಗಳನ್ನು ತೆಗೆದುಕೊಂಡು ಗೋಪಾಲರೆಲ್ಲರೊಡನೆ ಹೋಗಿ ಕೊಡಬೇಕು. ನಾನು ಮುಂಚೆ ಈ ರಾಮಮುಕುಂದರನ್ನು ರಥದಲ್ಲಿ ಕೂರಿಸಿಕೊಂಡು ಕರೆದುಕೊಂಡು ಹೋಗುತ್ತೇನೆ. ಈ ಬಾಲಕರು ಹಬ್ಬವನ್ನು ನೋಡಲಿ. ಇದಕ್ಕಾಗಿ ಭೋಜರಾಜನ ಆಜ್ಞೆಯಿಂದ ಬಂದೆನು. ೮೬. ಎನ್ನಲು ಅದನ್ನು ಚೆನ್ನಾಗಿ ಮನಸ್ಸಿಗೆ ತಂದುಕೊಂಡ ಯಶೋದೆಗೂ ನಂದನಿಗೂ ರಾಕ್ಷಸನ ಹತ್ತಿರಕ್ಕೆ ಮಕ್ಕಳನ್ನು ಕಳುಹಿಸುವ ವಿಚಾರದಲ್ಲಿ ಉತ್ತರವು ಒಂದಿಷ್ಟೂ ಹೊರಡಲಿಲ್ಲ, ಕಣ್ಣೀರುಮಾತ್ರ ಹೆಚ್ಚಾಗಿಯೇ ಹೊರಟಿತು. ವ|| ಹಾಗಿದ್ದ ಅವರನ್ನು ನೋಡಿ ಅಕ್ರೂರನು ಮುಗುಳುನಗು ನಗುತ್ತ ೮೭. "ಆ ಕ್ರೂರಿಯಾದ ಕಂಸನ ಹತ್ತಿರಕ್ಕೆ ಈ ತರುಣರನ್ನು ಹೇಗೆ ಕಳುಹಿಸುವುದು? ಎಂಬ ಭಯದ ಮನಸ್ಸು ಬೇಡ. ಕಳುಹಿಸಿದರೇನು! ನಿಜವಾಗಿಯೂ ಇವರು ಆದಿಮಧ್ಯಾಂತರವಿಲ್ಲದವರು. ೮೮. ಲೋಕಕ್ಕೆ ಒಂದು ಲಕ್ಷಾವೃತ್ತಿ ನಾಶವಾದರೂ ಜೀವಿಸಿರುವ ಬ್ರಹ್ಮವನ್ನು ನುಂಗುವ ಮಹಾಪ್ರಳಯವನ್ನು ಪೂರ್ತಿಯಾಗಿ ನುಂಗಿಹಾಕುವ

ಆ ಕಥೆಗಳನಱಿಯದೊಡೇ
ನೀ ಕೃಷ್ಣನ ಜಯಮನೀಗಳಱಿಯಿರೆ ಕಡುಕೆ
ಯ್ದಾ ಕೇಶಿಧೇನುಕರ್ಕಳ
ನೇಕಾಂಗದೆ ಗೆಲ್ದುದಲ್ಲವೇ ದೃಷ್ಟಾಂತಂ ೮೯

ವ॥ ಎಂದು ನುಡಿದು ನಂದಗೋಪನುಮಂ ಯಶೋದೆಯುಮನೆಂತಾನುಮೊಡಂಬಡಿಸಿ ರಾಮಕೃಷ್ಣರನೊಡಗೊಂಡುಯ್ಯಲುದ್ಯೋಗಿಸಿರ್ಪುದುಂ ಕಂಡು

ವನಜಾತಾಕ್ಷನನುಯ್ದಗಲ್ಚುವುದಱಿಂದಕ್ರೂರನಾಗಿರ್ದು ಮಾ
ಣ್ದನೆ ಹಿಂದೋಳರವಕ್ಕೆ ಮಲ್ಲಿಗೆಗೆ ಬೆಳ್ದಿಂಗಳ್ಗೆ ತಣ್ಗಾಳಿಗಿ
ನ್ನೆನಸುಂ ಕ್ರೂರತೆಯಂ ನೆಗಟ್ಚಿದಪನೋ ಅಕ್ರೂರನೆಂತಾದನೀ
ತನತಿಕ್ರೂರನಮೋಘಮೆಂದರಟಲಿಂದಕ್ರೂರನಂ ಗೋಪಿಯರ್ ೯೦

ದಿತಿಸುತನ ರಾಜಧಾನಿಯ
ಚತುರೆಯರಂ ಕಂಡೊಡೆಮ್ಮನೀ ಗ್ರಾಮ್ಯೆಯರಂ
ದಿತಿಜಾರಿ ನೆನೆಗುಮೇ ಮಾ
ಳತಿಗೆಱಗಿದ ತುಂಬಿ ನೆನೆಗುಮೇ ಮಿಕ್ಕಲರಂ ೯೧

ಆ ನಗರಮನಿಂ ಪೊಕ್ಕೊಡೆ
ದಾನವರಿಪು ಗೋಪಪಳ್ಳಿಯಂ ನೆನೆದಪನೇ
ಮಾನಸದೊಳಿರ್ಪ ಹಂಸಂ
ತಾನಿತರ ಸರೋಜಷಂಡಮಂ ನೆನೆದಪುದೇ ೯೨

ಈ ಹರಿಗೆ ಅಸಾಧ್ಯವಾದುದು ಉಂಟೇ? ೮೯. ನೀವು ಆ ಕಥೆಗಳನ್ನು ತಿಳಿಯದಿದ್ದರೇನು? ಈ ಕೃಷ್ಣನ ಜಯವನ್ನು ನೀವು ಈಗ ತಿಳಿದಿಲ್ಲವೇ ತೀವ್ರವಾಗಿ ವರ್ತಿಸಿದ ಆ ಕೇಶಿಧೇನುಕರನ್ನು ಏಕಾಂಗದಿಂದ ಗೆದ್ದುದು, ದೃಷ್ಟಾಂತವಲ್ಲವೆ?" ವ॥ ಎಂದು ಹೇಳಿ, ನಂದಗೋಪನನ್ನೂ ಯಶೋದೆಯನ್ನೂ ಹೇಗೋ ಒಪ್ಪಿಸಿ ರಾಮಕೃಷ್ಣರನ್ನು ಸಂಗಡ ಕರೆದುಕೊಂಡು ಹೋಗಲು ಉದ್ಯೋಗಿಸಿದನು. ಅದನ್ನು ಕಂಡು, ೯೦. ಗೋಪಿಯರು ಅಳಲಿನಿಂದ- "ಈತನು ಅಕ್ರೂರನಾಗಿದ್ದೂ ಕಮಲಾಕ್ಷನನ್ನು ನಮ್ಮಿಂದ ಅಗಲಿಸುತ್ತಿದ್ದಾನೆ. ಹಿಂದೋಳರಾಗಧ್ವನಿಗೂ ಮಲ್ಲಿಗೆಗೂ, ಬೆಳುದಿಂಗಳಿಗೂ ತಂಗಾಳಿಗೂ ಇನ್ನೆಷ್ಟು ಕ್ರೌರ್ಯವನ್ನು ಒದಗಿಸುವನೊ! ಈತನು ಅಕ್ರೂರನೆಂತಾಗುವನು? ಈತನು ನಿಜವಾಗಿ ಅತಿಕ್ರೂರನು[1] ಎಂದರು. ೯೧. ಕಂಸರಾಕ್ಷಸನ ರಾಜಧಾನಿಯ ಚತುರೆಯರನ್ನು ಕಂಡಮೇಲೆ ಕೃಷ್ಣನು ಹಳ್ಳಿಯವರಾದ ನಮ್ಮನ್ನು ನೆನೆಯುವನೇ! ಜಾಜಿಯ ಹೂಗೆರಗಿದ ಬಳಿಕ ತುಂಬಿ ಮಿಕ್ಕ ಹೂವನ್ನು ಜ್ಞಾಪಿಸಿಕೊಳ್ಳುವುದೇ? ೯೨. ಆ ನಗರವನ್ನು ಹೊಕ್ಕ ಮೇಲೆ ಕೃಷ್ಣನು ಗೊಲ್ಲರ ಹಳ್ಳಿಯನ್ನು ಜ್ಞಾಪಿಸಿಕೊಳ್ಳುವನೇ? ಮಾನಸಸರೋವರದಲ್ಲಿರುವ ಹಂಸವು

---

೧. ಶ್ರೀಕೃಷ್ಣನು ಹೊರಟುಹೋದರೆ ಹಿಂದೋಳಧ್ವನಿ ಮುಂತಾದವು ವಿರಹಿಣಿಯರಾದ ನಮ್ಮನ್ನು ಕ್ರೌರ್ಯದಿಂದ ಬಾಧಿಸುವುವು ಎಂದು ಅಭಿಪ್ರಾಯ. (ರಂ)

ಇಂತಪ್ಪ ಸುಭಗರೂಪನ
ನಂತನನಿಂ ಕಂಡರಪ್ಪೊಡಾ ಕಂಸಪುರೀ
ಕಾಂತೆಯರೇಂ ಬರಲೀಗುಮೆ
ತಂತಮ್ಮ ವಿಳಾಸನಿಗಡದಿಂ ಸೆಱೆಗೆಯ್ವರ್ ೯೩

ಸೋಗೆ ಕಚಂ ಸುರಧನು ಭ್ರೂ
ಪಾಗಣವಚಿರಾಂಶುವಕ್ಷಿ ಬೆಮರ್ವನಿ ಮೞೆ ತಾ
ನಾಗಿರೆ ಪೆಱತೊರ್ಬಳ್ ಮೇ
ಘಾಗಮಲಕ್ಷ್ಮಿವೊಲುಪೇಂದ್ರನಂ ಬಗೆಗೊಂಡಳ್ ೯೪

ಕರಯುಗಳಂ ತೆರೆ ಶೃಂಗಾ
ರರಸಂ ನೀರ್ ನಿಮ್ನನಾಭಿ ಸುೞಿಯಾಗೆ ತನೂ
ದರಿ ಪೆಱತೊರ್ವಳ್ ನದಿಯಂ
ತಿರೆ ಜಳಶಯನನ ಮನಕ್ಕೆ ಸುಖಮಂ ಪಡೆದಳ್ ೯೫

ಘನಜಘನಕೃತಕಗಿರಿಯಿಂ
ಸ್ತನಫಲದಿಂ ಬಾಹುಲತಿಕೆಯಿಂ ಪಿಕರವದಿಂ
ವನಮಾಲೆಯಂದದಿಂದಂ
ವನಮಾಲಾಧರನೊಳೊರ್ವಳೊಲವಂ ಪಡೆದಳ್ ೯೬

ಕುಂತಳಭೃಂಗಂ ನೇತ್ರಲ
ತಾಂತಂ ನಿಜಸೌರಭಂ ವಿಲಾಸಸ್ಥಿತಿ ಚೆ
ಲ್ವಂ ತಳೆಯೆ ಮಾಧವೀಲತೆ
ಯಂತಿರೆ ಮಾಧವನನೊರ್ಬ ವಧು ರಂಜಿಸಿದಳ್ ೯೭

ಬೇರೆ ತಾವರೆಯ ಕೊಳವನ್ನು ನೆನೆಯುವುದೇ! ೯೩. ಇಂತಹ ಸುಂದರ ರೂಪನಾದ ಬಲರಾಮನನ್ನು ಕಂಸನಗರದ ಸುಂದರಿಯರು ಕಂಡರಾದರೆ ಅವನಿಗೆ ಮತ್ತೆ ಇಲ್ಲಿಗೆ ಬರಲು ಅವಕಾಶ ಕೊಡುವರೇ! ತಂತಮ್ಮ ವಿಲಾಸವೆಂಬ ಸಂಕೋಲೆಯಿಂದ ಬಂಧಿಸುವರು" ೯೪. ಒಬ್ಬಳು ಗೋಪಿಯು ಅವಳ ತಲೆಕೂದಲೇ ನವಿಲುಗರಿ, ಒಡವೆಗಳ ಗುಂಪೇ ಕಾಮನ ಬಿಲ್ಲು, ಕಣ್ಣೇ ಮಿಂಚು, ಬೆವರುಹನಿಯೇ ಮಳೆಯಾಗಿರಲು ಮೇಘಾಗಮ ಲಕ್ಷ್ಮಿಯಂತೆ ಕೃಷ್ಣನ ಮನಸ್ಸಿಗೊಪ್ಪಿದಳು. ೯೫. ಮತ್ತೊಬ್ಬಳು ಕೃಶೋದರಿ ಶೃಂಗಾರರಸವೇ ನೀರು, ತೋಳುಗಳೇ ತೆರೆಗಳು, ಗುಳಿಯಾದ ಹೊಕ್ಕುಳೇ ಸುಳಿಯಾಗಿರಲು ನದಿಯಂತೆ ಜಲಶಯನನ ಮನಸ್ಸಿಗೆ ಸುಖವನ್ನುಂಟುಮಾಡಿದಳು. ೯೬. ಒಬ್ಬಳು ದಪ್ಪವಾದ ಕಿಬ್ಬೊಟ್ಟೆಯೆಂಬ ಕೃತಕಗಿರಿಯಿಂದಲೂ ತೋಳೆಂಬ ಬಳ್ಳಿಯಿಂದಲೂ ಸ್ತನವೆಂಬ ಫಲದಿಂದಲೂ ಕೋಗಿಲೆಯಂತಹ ಧ್ವನಿಯಿಂದಲೂ ಕೂಡಿದವಳಾಗಿ, ವನಪಂಕ್ತಿಯಂತೆ ವನಮಾಲಿ ಕೃಷ್ಣನಿಗೆ ಸಂತೋಷವನ್ನುಂಟುಮಾಡಿದಳು. ೯೭. ಒಬ್ಬಳು ಅವಳ ಮುಂಗುರುಳೇ ತುಂಬಿಯೂ, ಕಣ್ಣೇ ಹೂವೂ, ವಿಲಾಸಸ್ಥಿತಿಯೇ ಸಹಜ ಸುಗಂಧವೂ ಆಗಿ ಚೆಲುವಾಗಿದ್ದುದರಿಂದ ಮಾಧವೀಲತೆಯಂತೆ ಮಾಧವನನ್ನು ಸಂತೋಷಗೊಳಿಸಿದಳು.

ವ|| ಅಂತು ಗೋಪಿಯರ್ ತಮತಮಗೆ ನೆರೆದು ನೋಡುತ್ತುಮಿರೆ

ಒಡನೇಜೆ ರಥಮನಗ್ರಜ
ನೊಡವರಲಕ್ರೂರನೊಡನೆ ಹರಿ ಪೋಜಿಮೊಡಲಾ
ಗಡೆ ಪೊಱಮಟ್ಟುದದೊರ್ವಳ
ನಿಡುಸುಯ್ಲ ಸಮೀರನೊಡನೆ ಜೀವಸಮೀರಂ ೯೮

ವ|| ಮತ್ತಮಂತಂತೆ ಕಿಱಿದಂತರಮಂ ದೇವಕೀನಂದನಸ್ಯಂದನಂ ನಡೆಯೆ

[1]ಒಡನೆಯ್ದಿದುವಲರ್ಗಣ್ಗಳ್
ಬಿಡದೆ ಮನಂ ಪೊಯ್ತು ಮನದ ಪಿಂತಣೆ ಧೈರ್ಯಂ
ನಡೆಗೊಂಡುದು ಧೈರ್ಯದ ಬೆಂ
ಬಡಿದೊರ್ವಳ ಜೀವಮಿರದೆ ಪೋದತ್ತಾಗಳ್ ೯೯

ವ|| ಅದಲ್ಲದೆಯುಂ ಮತ್ತೊರ್ವಳ್ ವಿಯೋಗಂ ತನಗೆ ದುಸ್ಸಹಮಾಗೆ

ಪೊಡೆಯಲರಾತನಕ್ಷಿಗಮಗೋಚರಮಾಗಿರೆ ನಿಟ್ಕೆ ನೋಡಿ ಧೀಂ
ಕಿಡುವ ರಥಧ್ವಜಾಗ್ರಮನದುಂ ಮಸುಳುತ್ತಿರೆ ತೇರ ಧೂಳಿಯಂ
ಬಿಡೆ ನಡೆ ನೋಡಿ ಧೂಳಿಯುಮುಡಂಗಿರೆ ಕೃಷ್ಣನ ತೇರ ಧೂಳಿಯ
ಪ್ಪೊಡಮಿರದಾಯ್ತೆನುತ್ತಬಳೆ ಧೂಳಿವಿಡುತ್ತಿರೆ ಬಾಯ್ವಲುಂಬಿದಳ್ ೧೦೦

ನಯನಕ್ಕೆ ಗಮ್ಯನಲ್ಲಂ
ಪ್ರಿಯಂ ಮನೋಗಮ್ಯನೀಕ್ಷಿಪೆಂ ಮನದೊಳೆ ಶೌ
ರಿಯನೆಂದು ನಿಮೀಲಿತನಯ
ನೆಯುಮೊರ್ಬಳೆ ಗೋಪಿ ಯೋಗರೂಢೆವೊಲಿರ್ದಳ್ ೧೦೧

ವ|| ಹಾಗೆ ಗೋಪಿಯರು ತಮ್ಮ ತಮ್ಮಷ್ಟಕ್ಕೆ ಗುಂಪುಗೂಡಿ ನೋಡುತ್ತಿದ್ದರು. ೯೮. ಕೃಷ್ಣನು ಬಲರಾಮ ಸಂಗಡ ಅಕ್ರೂರನೊಡನೆ ರಥವನ್ನೇರಿ, ಒಡನೆಯೇ ಹೊರಟನು. ಆಗಲೇ ಒಬ್ಬಳು ಗೋಪಿಯ ನಿಟ್ಟುಸಿರಿನ ವಾಯುವಿನೊಡನೆ ಅವಳ ಪ್ರಾಣವಾಯುವೂ ಹೊರಟು ಹೋಯಿತು. ವ|| ಮತ್ತೂ ಹಾಗೆ ಹಾಗೆಯೇ ದೇವಕೀಪುತ್ರನ ರಥವು ಸ್ವಲ್ಪದೂರ ನಡೆಯಲು ೯೯. ಒಬ್ಬಳ ಅಲರ್ಗಣ್ಣುಗಳು ರಥದೊಡನೆಯೇ ಹೋದವು; ಅವುಗಳೊಡನೆ ಮನಸ್ಸೂ ಹೋಯಿತು. ಮನಸ್ಸಿನ ಹಿಂದೆ ಧೈರ್ಯವೂ ಹೋಯಿತು; ಧೈರ್ಯವನ್ನು ಹಿಂಬಾಲಿಸಿ, ಅವಳ ಜೀವವೂ ಹೋಯಿತು. ವ|| ಅಲ್ಲದೆ ಮತ್ತೊಬ್ಬಳು-ಕೃಷ್ಣನ ಅಗಲಿಕೆಯು ತನಗೆ ಸಹಿಸದಂತಾಗಲು ೧೦೦. ಕೃಷ್ಣನು ಕಣ್ಣಿಗೆ ಕಾಣದಂತಾದುದರಿಂದ ನಿಲುಕಿನಿಲುಕಿ, ಓಡುವ ರಥದ ತುದಿಯೂ ಬಾವುಟವೂ ಕಾಣುವವರೆಗೂ ನೋಡಿ, ಅವು ಕಾಣಿಸದಿರಲು ರಥದ ಧೂಳನ್ನು ಪೂರ್ತಿಯಾಗಿ ಚೆನ್ನಾಗಿ ನೋಡಿ, ಧೂಳೂ ಅಡಗಿದ ಮೇಲೆ, ಕೃಷ್ಣನ ತೇರಿನ ಧೂಳಾದರೂ ಇರದೆ ಹೊಯಿತೆಂದು ಬಾಯಿ ಬಿಟ್ಟು ಹಲುಬಿದಳು. ೧೦೧. ಒಬ್ಬಳು ಗೋಪಿ “ಪ್ರಿಯಶೌರಿಯು ಕಣ್ಣಿಗೆ ಕಾಣಿಸುವನಾಗಿಲ್ಲ.

---

೧. ಒಡನೆಯ್ದುವಲರ್ಗಣ್ಗಳ್ ಬಿಡಿದು (ಕಖಗ)

ವ॥ ಅನ್ನೆಗಮಿತ್ತಲಕ್ರೂರಂ

ತರುಪಟಲೀಪಿನದ್ಧವನರಾಜಿಯಿನಲ್ಲಿ ವನೇಚರೀ ವನೇ
ಚರಜನಲೀಲೆಯಿಂ ಶರಭಸಿಂಧುರಸಿಂಹತರಕ್ಷುಮುಖ್ಯಭೀ
ಕರವನಸತ್ತ್ವಸಂಭ್ರಮಮನೀಕ್ಷಿಸಿ ತೋಱುತುಮಚ್ಯುತಂಗೆ ಚಿ
ಚ್ಚರಮಿರದೆಯ್ದಿದಂ ಜಗುನೆಯಿಂ ಮಧುರೋಪವನಾಂತರಸ್ಥಮಂ ೧೦೨

ವ॥ ಅಂತೆಯ್ದಿ ವನಪವನ ಲೋಲತ್ಕಲ್ಲೋಲದೊಳಂ, ವಿಸ್ಫುರತ್ಫೇನದೊಳಂ, ಚಳಚ್ಚಳಿಚಿಮದೊಳಂ, ವಿಲುಠತ್ಕಮಠದೊಳಂ, ಜೃಂಭತ್ಕುಂಭೀರದೊಳಂ, ಪ್ರೇಂಖಚ್ಛಂಖದೊಳಂ, ವಿರುವತ್ಕುರವದೊಳಂ, ಗುಂಜತ್ಕುಂಜದೊಳಂ, ಭ್ರಮದ್ಭ್ರಮರದೊಳಂ, ಸಂಸನತ್ಕಳಹಂಸದೊಳಂ, ಚಂಚತ್ಕ್ರೌಂಚದೊಳಂ, ರಾರಟತ್ಕಾರಂಡದೊಳಂ, ರಂಗದ್ರಥಾಂಗದೊಳಂ, ಅತಿಮನೋಹರಮಾದ ಯಮುನಾಹ್ರದದ ಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ, ನೀವೀ ರಥದ ಮೇಲೆ ಕುಳ್ಳಿರಿಂ, ಆಂ ಮಾಧ್ಯಾಹ್ನಿಕಾನುಷ್ಠಾನಮಂ ಮಾಡಿ ಬಂದಪೆನೆಂದು ವಸುದೇವನಂದನರ್ಗೆ ಪೇೞ್ದು, ಆ ಹ್ರದಿನಿಯೊಳ್ [1]ಯದುಕುಲಾವನಘಮರ್ಷಣಂಗೆಯ್ದಿರ್ಪುದುಮಲ್ಲಿ

ಅನಿಮೇಷರ್ ಸುತ್ತುಗೊಂಡಿರ್ಪನಮಖಿಲಮರುದ್ವಂದಿಗಳ್ ಕೀರ್ತಿಸುತ್ತಿ
ರ್ಪನಮೆತ್ತಂ ದೇವಯೋಗಿಪ್ರತತಿ ಜಯಜಯಧ್ಯಾನಗರ್ಭಾಸ್ಯಮಾಗಿ
ರ್ಪನಮಿರ್ದಂ ಶ್ರೀಸನಾಥಂ ಪಣಿಪತಿಶಯನಂ ಶಂಖಚಕ್ರಾಂಕ ಹಸ್ತಂ
ವನಮಾಲಾಕೌಸ್ತುಭಾದ್ಯಾಭರಣಯುತನನಂತಾರ್ಕಕೋಟಿಪ್ರಕಾಶಂ ೧೦೩

ಮನಸ್ಸಿಗೆ ಕಾಣಿಸುವನು ಆದುದರಿಂದ ಅವನನ್ನು ಮನಸ್ಸಿನಿಂದಲೇ ನೋಡುವೆನು" ಎಂದು ಕಣ್ಣನ್ನು ಮುಚ್ಚಿಕೊಂಡು ಯೋಗಾರೂಢೆಯಂತೆ ಇದ್ದಳು ವ॥ ಅಷ್ಟರಲ್ಲಿ ಇತ್ತ ಅಕ್ರೂರನು ೧೦೨. ಮರಗಳ ಗುಂಪಿನಿಂದ ನಿಬಿಡವಾದ ಕಾಡನ್ನೂ ಬೇಡ ಬೇಡಿತಿಯರ ವಿನೋದವನ್ನೂ ಶರಭ ಸಿಂಹ ಹುಲಿ ಆನೆಗಳೇ ಮೊದಲಾದ ಭಯಂಕರ ಪ್ರಾಣಿಗಳ ಸಡಗರವನ್ನೂ ನೋಡಿ, ಕೃಷ್ಣನಿಗೆ ತೋರಿಸುತ್ತ ತಡಮಾಡದೆ ಬೇಗನೆ ಮಧುರೆಯ ಉದ್ಯಾನವನದ ನಡುವೆ ಇರುವ ಯಮುನಾನದಿಯ ಹತ್ತಿರ ಬಂದನು. ವ॥ ಹಾಗೆ ಬಂದು ವನದ ಗಾಳಿಯಿಂದ ಅತಿಚಂಚಲವಾದ ಅಲೆಗಳುಳ್ಳುದೂ ಹೊಳೆಯುವ ನೊರೆಯುಳ್ಳುದೂ, ಚಲಿಸುವ ಮೀನುಗಳಿಂದಲೂ ಹೊರಳುವ ಆಮೆಗಳಿಂದಲೂ ಮೇಲೇಳುತ್ತಿರುವ ಹಾವು ಮೊಸಳೆಗಳಿಂದಲೂ ತೂಗಾಡುತ್ತಿರುವ ಶಂಖಗಳಿಂದಲೂ ಗಟ್ಟಿಯಾಗಿ ಕೂಗುವ ಕುರವ ಹಕ್ಕಿಗಳಿಂದಲೂ ಶಬ್ದವಾಗುತ್ತಿರುವ ಪೊದೆಗಳಿಂದಲೂ ಸುತ್ತುತ್ತಿರುವ ತುಂಬಿಗಳಿಂದಲೂ ಇಂಪಾಗಿ ಧ್ವನಿಮಾಡುತ್ತಿರುವ ಹಂಸ ಕ್ರೌಂಚಕಾರಂಡ ಚಕ್ರವಾಕಗಳಿಂದಲೂ ಅತಿ ಮನೋಹರವಾದ ಯಮುನಾನದಿಯ ಮಡುವಿನ ಸಮೀಪದಲ್ಲಿ ಅಕ್ರೂರನು ರಥವನ್ನು ನಿಲ್ಲಿಸಿದನು. ಬಲರಾಮ ಕೃಷ್ಣರಿಗೆ "ನೀವು ಈ ರಥದ ಮೇಲೆಯೇ ಕುಳಿತಿರಿ ನಾನು ಮಾಧ್ಯಾಹ್ನಿಕಾನುಷ್ಠಾನವನ್ನು ಮಾಡಿ, ಬರುತ್ತೇನೆ". ಎಂದು ಹೇಳಿ, ಯದುಕುಲರಕ್ಷನಾದ ಆತನು ನದಿಯಲ್ಲಿ ಪಾಪಪರಿಹಾರಕ್ಕಾಗಿ ಮುಳುಗಿದನು. ಅಲ್ಲಿ ೧೦೩. ಶಂಖಚಕ್ರಧಾರಿಯೂ ಕೌಸ್ತುಭವೇ ಮೊದಲಾದ ಆಭರಣಗಳಿಂದಲಂಕೃತನೂ ಅನಂತಕೋಟಿ ಸೂರ್ಯಪ್ರಕಾಶನೂ ಶ್ರೀಯುತನೂ ಶೇಷಶಯನನೂ ಆದ ವಿಷ್ಣುವು

---

೧. ಯದುಕುಲಾವರನಘ (ಕ)

ಆ ಲಕ್ಷ್ಮೀ[1]ಕಾಂತನೊಳೊಸೆ
ದಾಲೋಚಿಸುತುಂ ಯದೃಚ್ಛೆಯಿಂದಂ ತದ್ಗ
ರ್ಭಾಲಯಮಂ ನಾಭ್ಯಂಬುಜ
ನಾಲದ ಮಾರ್ಗದೊಳೆ ಪೊಕ್ಕು ವಿಸ್ಮಿತಚಿತ್ತಂ ೧೦೪

ವನಜೋದರನುದರದ ಲೋ
ಕನಿಕಾಯದೊಳಾತನಾಜ್ಞೆಯಿಂ ದಿವ್ಯವಿಲೋ
ಚನನುಂ [2]ಕಾಮಾಕೃತಿಯಿಂ
ಮನೋಜವಾನ್ವಿತನುಮಾಗಿ ನಡೆದಕ್ರೂರಂ ೧೦೫

ಗೋಲೋಕ ಸತ್ಯಲೋಕ ತ
ಪೋಲೋಕ ಬ್ರಹ್ಮಲೋಕ ಜನಲೋಕ ದಿವೌ
ಕೋಲೋಕ ಧ್ರುವಲೋಕಮ
ನೇೞುಮನೇೞಧರಲೋಕಮಂ ನೆಱೆ ಕಂಡಂ ೧೦೬

ದಿಗಿಭಮನೆಂಟುಮನೆಣ್ಬರ್
ದಿಗಧಿಪರಂ ದ್ವೀಪವೇೞನೇೞುಂ ಕಡಲಂ
ನಗಕುಲಮಂ ಹಿಮವದ್ಗಂ
ಧ್ಯಗಂಧಮಾದನಹರಾದ್ರಿಯುತಮಂ ಕಂಡಂ ೧೦೭

ಇದ್ದನು. ಅವನನ್ನು ದೇವತೆಗಳು ಸಕಲ ದೇವಸ್ತುತಿ ಪಾಠಕರೂ ಕೀರ್ತಿಸುತ್ತಿದ್ದರು. ಸುತ್ತಲೂ ದೇವಯೋಗಿಗಳು ಜಯ ಜಯ ಧ್ವನಿಯನ್ನು ಮಾಡುತ್ತಿದ್ದರು. ೧೦೪. ಅಕ್ರೂರನು ಆ ಲಕ್ಷ್ಮೀಕಾಂತನೊಡನೆ ಪ್ರೀತಿಪೂರ್ವಕವಾಗಿ ಆಲೋಚಿಸುತ್ತ ಅಕಸ್ಮಾತ್ತಾಗಿ ಆತನ ಹೊಕ್ಕುಳ ತಾವರೆಯ ನಾಳದ ಮೂಲಕವಾಗಿ ಆತನ ಉದರಗೃಹವನ್ನು ಹೊಕ್ಕು ವಿಸ್ಮಿತಚಿತ್ತನಾದನು. ೧೦೫. ಆತನು ಕಮಲನಾಭನ ಉದರದಲ್ಲಿರುವ ಲೋಕಗಳ ಸಮೂಹದಲ್ಲಿ ಆತನ ಆಜ್ಞೆಯಿಂದ ದಿವ್ಯದೃಷ್ಟಿಯುಳ್ಳವನೂ, ತನಗೆ ಇಷ್ಟವಾದ ರೂಪವನ್ನು ಧರಿಸಿದವನೂ ಮನೋವೇಗವುಳ್ಳವನೂ ಆಗಿ ನಡೆದನು. ೧೦೬. ಭೂಲೋಕ, ಸತ್ಯ ಲೋಕ, ತಪೋಲೋಕ, ಬ್ರಹ್ಮಲೋಕ, ಜನಲೋಕ, ದೇವಲೋಕ, ಧ್ರುವಲೋಕಗಳೆಂಬ ಏಳನ್ನೂ ಅಧೋಲೋಕಗಳೇಳನ್ನೂ ಪೂರ್ಣವಾಗಿ ಚೆನ್ನಾಗಿ ನೋಡಿದನು. ೧೦೭. ಎಂಟು ದಿಗ್ಗಜಗಳನ್ನೂ ಅಷ್ಟದಿಕ್ಪಾಲಕರನ್ನೂ ಸಪ್ತದ್ವೀಪ ಸಪ್ತಸಾಗರಗಳನ್ನೂ ಹಿಮವದ್ಗಂಧ ಮಾದನ ವಿಂಧ್ಯ ಕೈಲಾಸಸಹಿತವಾದ ಪರ್ವತ ಸಮೂಹವನ್ನೂ ಕಂಡನು.

---

೧. ಕಾಂತನನೊಸೆದಾಲೋಕಿಸುತುಂ (ಮೊಲಿ) ೨. ಕಾಮಾಕೃತಿಯುಂ (ಮೊಲಿ)

ಭೂತಳಮಧ್ಯಸ್ಥಿತಮಂ
ಜ್ಯೋತಿರ್ಮಂಡಲಪರೀತಮಂ ಗಗನವಿನಿ
ರ್ಧೌತಶಿಖಂಡಮನಮರ
ವ್ರಾತಾಶ್ರಯಮಂ ಸುಮೇರುಗಿರಿಯಂ ಕಂಡಂ ೧೦೮

ಉಶನನನಮರ್ತ್ಯಗುರುವಂ
ಪಿಶಾಚ ಗಂಧರ್ವ ಯಕ್ಷ ರಾಕ್ಷಸರಂ ದ್ವಾ
ದಶಮಾರ್ತಂಡರನೇಕಾ
ದಶರುದ್ರರನಷ್ಟವಸುಗಳಂ ನೆಱೆ ಕಂಡಂ ೧೦೯

ವಿವಿಧನದೀನಿವಹಮುಮಂ
ವಿವಿಧಮಹಾರಣ್ಯತತಿಯುಮಂ ವಿವಿಧಮುನಿ
ಪ್ರವರರುಮಂ ವಿವಿಧಕ್ಷೇ
ತ್ರವರ್ಗಮುಮನಲ್ಲಿಗಲ್ಲಿಗಿಳೆಯೊಳ್ ಕಂಡಂ ೧೧೦

ನಿಖಿಳಜನಪದಮುಮಂ ನಗ
ರ ಖೇಡ ಖರ್ವಡ ಮಡಂಬ ನಿಗಮದ್ರೋಣಾ
ಮುಖ ಪತ್ತನಾಗ್ರಹಾರಾ
ದ್ಯಖಿಳಮಹಾಗ್ರಾಮಕೋಟಿಗಳುಮಂ ಕಂಡಂ ೧೧೧

ಗಣನಾತೀತಮಹಾಕ್ಷೌ
ಹಿಣೀಬಲಂಬೆರಸು ತಮ್ಮೊಳೋರೊರ್ವರ ಮೇ
ಲಣಿಯರಮೆತ್ತುವ ಮುತ್ತುವ
ಪೂಣರ್ವ ಕಱುತ್ತಿಱಿವನೇಕನೃಪರಂ ಕಂಡಂ ೧೧೨

೧೦೮. ಭೂಮಂಡಲಮಧ್ಯದಲ್ಲಿರುವುದೂ ಜ್ಯೋತಿರ್ಮಂಡಲದಿಂದ ಸುತ್ತುವರಿದುದೂ ಗಗನವನ್ನು ಬೆಳ್ಳಗೆ ಮಾಡಿದ ಶಿಖರವುಳ್ಳುದೂ ದೇವಸಮೂಹಕ್ಕೆ ಆಶ್ರಯವೂ ಆದ ಮೇರುಗಿರಿಯನ್ನು ಕಂಡನು. ೧೦೯. ಶುಕ್ರನನ್ನೂ ದೇವಗುರು ಬೃಹಸ್ಪತಿಯನ್ನೂ ಪಿಶಾಚ ಗಂಧರ್ವಯಕ್ಷ ರಾಕ್ಷಸರನ್ನೂ ದ್ವಾದಶಾದಿತ್ಯರನ್ನೂ ಏಕಾದಶರುದ್ರರನ್ನೂ ಅಷ್ಟವಸುಗಳನ್ನೂ ಚೆನ್ನಾಗಿ ನೋಡಿದನು. ೧೧೦. ಅಲ್ಲಲ್ಲಿ ಭೂಮಿಯ ಮೇಲಿರುವ ವಿಧವಿಧವಾದ ನದಿಗಳ ಸಮೂಹವನ್ನೂ ಬಗೆಬಗೆಯ ದೊಡ್ಡ ಕಾಡುಗಳನ್ನೂ ವಿವಿಧ ಮುನಿಶ್ರೇಷ್ಠರನ್ನೂ ವಿಧವಿಧವಾದ ತೀರ್ಥಕ್ಷೇತ್ರ ಸಮೂಹವನ್ನೂ ಕಂಡನು. ೧೧೧. ಸಕಲ ದೇಶಗಳನ್ನೂ ನಗರ ಖೇಡ ಖರ್ವಡ ಮಡಂಬ ನಿಗಮ ದ್ರೋಣಾಮುಖ ಪಟ್ಟಣಾಗ್ರಹಾರಾದಿಗಳಾದ ಮಹಾ ಗ್ರಾಮಕೋಟಿಗಳನ್ನೂ ಕಂಡನು. ೧೧೨. ಲೆಕ್ಕ ಮಾಡಲಾಗದ ಮಹಾಅಕ್ಷೌಹಿಣೀಸೇನೆಯೊಡಗೂಡಿ, ತಮ್ಮಲ್ಲೇ ಒಬ್ಬರ ಮೇಲೆ ಮತ್ತೊಬ್ಬರು ಪ್ರಕಟವಾಗಿ ದಂಡೆತ್ತಿ ಹೋಗುವ ಮುತ್ತುವ ಯುದ್ಧಮಾಡುವ ಉತ್ಸಾಹಗೊಂಡು ಗುರಿಯಿಟ್ಟು ಇರಿಯುವ ಅನೇಕ ದೊರೆಗಳನ್ನು ಕಂಡನು.

ವ॥ [೧]ಅಂತಸಂತಭುವನಾಂತರಮಂ ತೊೞಲ್ದು ನೋಡಿ ವಿಸ್ಮಯಾಕ್ರಾಂತನಾಗಿ ದಾನವಲ್ಲಭನಿದೆಂತಹಿಶಯನಂ ಕಾಳಿಂದಿಯೊಳಿರ್ದನೆಂತಾತನುದರದೊಳಾಂ ಪೊಕ್ಕೆಂ ಅಲ್ಲಿ ಚತುರ್ದಶ ಭುವನಮಿರ್ದುದೆಂತೆಂತೀ ಸಮಸ್ತಭುವನಾಂತರಾಳಮನೊಂದೆ ಮುಹೂರ್ತದೊಳ್ ತೊೞಲ್ದೆನೆಂತೆನಗಿನಿತುಂ ಸಾಮರ್ಥ್ಯಮಾದುದಿನ್ನಾವುದು ಕೃತ್ಯಮೆಂದು ನಿಜಾಂತರಂಗದೊಳ್ ಚಿಂತಿಸುತಿರ್ಪಿನಂ, ಒರ್ಮೊದಲೆ ಪೊಱಮಟ್ಟು ಮುನ್ನಿನಂತೆ ಯಮುನಾಹ್ರದದೊಳಘಮರ್ಷಣಮಿರ್ದ ತೆಱನಾದುದುಮನಾ ಸಲಿಲಮಧ್ಯದಲ್ಲಿ ಶೇಷಾಹಿಶಯನನಾಗಿ ದೇವರೂಪಮನುಡುಗಿ ಕೃಷ್ಣನಿರ್ದುದುಮಂ ಕಂಡು ರಥದ ಮೇಲಿರ್ದ ಕೃಷ್ಣನೆತ್ತ ಬಂದನೆಂದು ನಿಳ್ಕಿ ಪೊಱಗಂ ನೋಡಿ ಪೂರ್ವಸ್ಥಿತಿಯಿಂ ರಥದ ಮೇಲಿತ್ತಲ್ ಕೃಷ್ಣನಿರ್ದುದಂ ಕಂಡು ಸಂತುಷ್ಟಮಾನಸನನುಷ್ಠಾನಮಂ ತೀರ್ಚಿ ಬಂದು ವಿಕಸಿತಮುಖಾರವಿಂದನಾಗಿ ಪೊಂದೇರ ಮೇಲಿರ್ದ ವಸುದೇವನಂದನರ್ಗೆ ಮುಕುಳಿತಾಂಜಲಿಯಾಗಿ

ಲಲಿತರಗಳೆ

ದೇವ ಸಾಕ್ಷಾತ್ಪರಬ್ರಹ್ಮಸ್ವರೂಪ ಜಯ
ದೇವ ನಿಜಮಹಿಮಚಕಿತಾಗಮಕಳಾಪ ಜಯ
ದೇವ ಯೋಗೀಶ್ವರಮನೋಗಮ್ಯಮಾನ ಜಯ
ದೇವ ಪುರುಷತ್ರಯಾಕಾರಪ್ರಧಾನ ಜಯ
ದೇವ ಜನನಸ್ಥಿತಿ ಪ್ರಳಯೌಘಹೇತು ಜಯ
ದೇವ ಭಕ್ತಾಘವನದವಧೂಮಕೇತು ಜಯ
ದೇವ ಚಂದ್ರಾರ್ಕಗಗನಾದ್ಯಷ್ಟಮೂರ್ತಿ ಜಯ

ವ॥ ಹಾಗೆ ಅನಂತಲೋಕಾಂತರಗಳನ್ನು ಸುತ್ತಿ ನೋಡಿ, ಆಶ್ಚರ್ಯಚಕಿತನಾದ ಅಕ್ರೂರನು ಇದೇನು! ಶೇಷಶಯನ ಕೃಷ್ಣನು ಹೇಗೆ ಯಮುನಾನದಿಯಲ್ಲಿದ್ದನು?! ಹೇಗೆ ಆತನ ಉದರದಲ್ಲಿ ನಾನು ಹೊಕ್ಕೆನು! ಅಲ್ಲಿ ಹದಿನಾಲ್ಕು ಲೋಕಗಳಿದ್ದುದು ಹೇಗೆ? ಈ ಸಮಸ್ತ ಲೋಕಾಂತರಗಳನ್ನು ಒಂದೇ ಮಹೂರ್ತದಲ್ಲಿ ನಾನು ಹೇಗೆ ಸುತ್ತಿದೆನು?! ಹೇಗೆ ನನಗೆ ಇಷ್ಟು ಸಾಮರ್ಥ್ಯವುಂಟಾಯಿತು? ಇನ್ನು ನಾನು ಮಾಡಬೇಕಾದುದೇನು?!" ಎಂದು ತನ್ನ ಅಂತರಂಗದಲ್ಲಿ ಚಿಂತಿಸುತ್ತಿದ್ದನು. ಅಷ್ಟರಲ್ಲೇ ತಟ್ಟನೆ ಹೊರಟು ಮುಂಚಿನಂತೆ ಯಮುನೆಯ ಮಡುವಿನಲ್ಲಿ ಮುಳುಗಿದ್ದಂತೆಯೇ ಇರುವುದನ್ನೂ ಆ ನೀರಿನ ನಡುವೆ ಶೇಷಸರ್ಪಶಯನನಾಗಿ ದೇವರೂಪವನ್ನು ತ್ಯಜಿಸಿ, ಕೃಷ್ಣನಿದ್ದುದನ್ನೂ ಕಂಡನು. ರಥದ ಮೇಲಿದ್ದ ಕೃಷ್ಣನು ಇಲ್ಲೆಲ್ಲಿ ಬಂದನೆಂದು ಹೊರಗೆ ನೋಡಿದನು. ತಾನು ಆಹ್ನಿಕಕ್ಕೆ ಹೋಗಿ ಬರುವೆನೆಂದು ಹೇಳಿ, ರಥದಲ್ಲಿ ಕುಳ್ಳಿರಿಸಿ ಹೋದಾಗ ಇದ್ದಂತೆಯೇ ಕೃಷ್ಣನು (ರಥದಮೇಲೆ) ಇರುವುದನ್ನು ಕಂಡು, ಸಂತುಷ್ಟ ಮನಸ್ಕನಾಗಿ ಅನುಷ್ಠಾನವನ್ನು ಮುಗಿಸಿಬಂದನು. ಅರಳಿದ ಮುಖಕಮಲನಾಗಿ ಹೊನ್ನಿನ ತೇರಮೇಲಿದ್ದ ವಸುದೇವ ನಂದನರಿಗೆ ಕೈಮುಗಿದನು. ೧೧೩. ದೇವ ಸಾಕ್ಷಾತ್ಪರಬ್ರಹ್ಮರೂಪನೆ ಜಯಿಸು. ದೇವ, ನಿನ್ನ ಮಹಿಮೆಗೆ ಬೆದರಿದ ಆಗಮಸಂಘ ನೀ ಜಯಿಸು. ದೇವ, ಯೋಗೀಶ್ವರರ ಮನಕೆ ಗೋಚರಿಸುವವನೆ, ನೀ

೧. ಅನಂತರಂ (ಖ)

ದೇವ ಮಧುಕೈಟಭಪ್ರಳಯಸಮವರ್ತಿ ಜಯ
ದೇವ ನಿಜಕುಕ್ಷಿನಿಕ್ಷಿಪ್ತತ್ರಿಲೋಕ ಜಯ
ದೇವ ವಿನತಾಪ್ರಿಯತನೂಭವಪತಾಕ ಜಯ
ದೇವ ಶೇಷೋರಗವರಾನಲ್ಪತಲ್ಪ ಜಯ
ದೇವ ವಕ್ಷೋರುಚಿರಕೌಸ್ತುಭಾಕಲ್ಪ ಜಯ
ದೇವ ಚಂಪಕರುಚಿರಪೀತಪಟಲೀಲ ಜಯ
ದೇವ ಮಂಡಿತಮಕರಕುಂಡಲಕಪೋಲಜಯ
ದೇವ ವನಮಾಲಾಸ್ಫುರದ್ಬ್ರಹ್ಮಸೂತ್ರ ಜಯ
ದೇವ ನೀಲೋತ್ಪಲದಳಶ್ಯಾಮಗಾತ್ರ ಜಯ
ದೇವ ನಂದಕಗದಾಶಂಖಚಕ್ರಾಂಕ ಜಯ
ದೇವ ಲಕ್ಷ್ಮೀಲೋಚನೋತ್ಪಲಶಶಾಂಕ ಜಯ
ದೇವ ವಿಕಸಿತಪುಂಡರೀಕದಲನಯನ ಜಯ
ದೇವ ಪೀಯೂಷಪಾರಾವಾರಶಯನ ಜಯ
ದೇವ ಸತತಾನತ ಸಮಸ್ತಸುರಯೂಥ ಜಯ
ದೇವ ಸಂಸ್ತವಮುಖರ ಮುನಿಗಣಸನಾಥ ಜಯ
ದೇವ ಶುದ್ಧಸ್ಫಟಿಕಸಂಕಾಶವಿಮಳ ಜಯ
ದೇವ ವಾಕ್ಪತಿಭೃಂಗಯುತನಾಭಿಕಮಳ ಜಯ

ಜಯಿಸು ದೇವ, ಬ್ರಹ್ಮವಿಷ್ಣ್ವೀಶಮುಖ ರೂಪತ್ರಯನೆ ನೀ ಜಯಿಸು. ದೇವ, ಹುಟ್ಟುಳಿವಳಿವುಗಳ ಕಾರಣನೆ ನೀ ಜಯಿಸು. ದೇವ, ಭಕ್ತರ ಪಾಪವನದಹನಕ್ಕಗ್ನಿಯಾದವನೆ ನೀ ಜಯಿಸು, ದೇವ, ರವಿಚಂದ್ರಗಗನಾದಿ ಮೂರ್ತಿಗಳೆಂಟ ಪಡೆದಿರುವನೇ ಜಯಿಸು. ದೇವ, ಮಧುಕೈಟಭಪ್ರಳಯಯಮನೆ ನೀ ಜಯಿಸು ದೇವ, ನಿನ್ನುದರದೊಳು ಮೂರುಲೋಕವನಿರಿಸಿರುವವನೇ ಜಯಿಸು. ದೇವ, ವಿನತಾಪುತ್ರ ಗರುಡನ ಧ್ವಜವ ಪಡೆದಿರ್ಪವನೆ ನೀ ಜಯಿಸು. ದೇವ, ಶೇಷೋರಗನು ಉತ್ತಮಶಯ್ಯೆ ನೀನಾಗಿರ್ಪ ನೀ ಜಯಿಸು ದೇವ, ಹೃದಯದಿ ರುಚಿರ ಕೌಸ್ತುಭವಿರುವನೇ ಜಯಿಸು, ದೇವ, ಸಂಪಗೆಯಂತೆ ಹೊಳೆಯುವ ಪೀತವಸ್ತ್ರದೊಳೆಸೆವನೇ ಜಯಿಸು, ಮಕರಕುಂಡಲದಿಂದ ಶೋಭಿಪ ಕೆನ್ನೆಯವನೇ, ಜಯಿಸು. ವನಮಾಲೆಯಿಂ ಹೊಳೆವ ಯಜ್ಞಸೂತ್ರವು ನಿನಗೆ ನೀಂ ಜಯಿಸು. ದೇವ, ಕನ್ನೈದಿಲೆಯ ಬಣ್ಣದ ದಿವ್ಯಸುಂದರ ದೇಹ ನೀ ಜಯಿಸು. ದೇವ, ಶಂಖಚಕ್ರಗದಾಖಡ್ಗಪಾಣಿಯೇ ಜಯಿಸು. ದೇವ, ಲಕ್ಷ್ಮೀಲೋಚನೋತ್ಪಲಚಂದ್ರ ನೀ ಜಯಿಸು. ದೇವ, ಅರಳಿದ ಬಿಳಿಯ ತಾವರೆಯೆಸಳ ಕಣ್ಣುಳ್ಳವನೆ ನೀ ಜಯಿಸು. ದೇವ, ಅಮೃತಸಾಗರದಲ್ಲಿ ಶಯನ ಪಡೆದಿರುವಾತ ನೀ ಜಯಿಸು. ದೇವ, ಸತತವು ನಮಿಪ ದೇವಸಮೂಹ ನಿನಗೆ ಜಯ, ದೇವ, ಸಂಸ್ತುತಿಗೈವ ಮುನಿಗಣನಾಥ ನೀಂ ಜಯಿಸು. ದೇವ, ಶುದ್ಧಸ್ಫಟಿಕ ನಿರ್ಮಲ ನೀನು ನಿನಗೆ ಜಯ, ದೇವ, ನಾಭಿಕಮಲದಿ ಬ್ರಹ್ಮಭೃಂಗವದಿರ್ಪನೇ ನೀ ಜಯಿಸು. ದೇವ, ದಿವಿಜರಿಗಾಗಿ ಪಲವವತಾರ ಪಡೆದವ ನೀನು ನಿನಗೆ ಜಯ. ಸಂಸಾರನಾಟಕಸೂತ್ರಧಾರನೆ ದೇವ, ನೀಂ ಜಯಿಸು. ಕ್ರೂರಿ ತಮನೆಂಬ ಸುರನ ಮದಹರನೆ ನೀ ಜಯಿಸು ದೇವ, ಮಂದರಗಿರಿಯ ಕಡೆಗೋಲಾಗಿ

ದೇವ ದಿವಿಜಾರ್ಥಕೃತ ವಿವಿಧಾವತಾರ ಜಯ
ದೇವ ಸಂಸಾರನಾಟಕಸೂತ್ರಧಾರ ಜಯ
ದೇವ ದುರ್ಧರತಮೋದೈತ್ಯಮದಹರಣ ಜಯ
ದೇವ ಸಮುದಗ್ರಮಂಥಾಚಲೋದ್ಧರಣ ಜಯ.
ದೇವ ಸಂಹಾರಿತ ಹಿರಣ್ಯಾಕ್ಷವೀರ ಜಯ
ದೇವ ಸಂದಾರಿತ ಹಿರಣ್ಯಕಶರೀರ ಜಯ
ದೇವ ಬಲಿಬಂಧನೋಚ್ಛೃಂಖಲಾಕಾರ ಜಯ
ದೇವ ದಶಕಂಠಕಂಠದ್ರುಮಕುಠಾರ ಜಯ
ದೇವ ಹೈಹಯ ಬಾಹುಗಹನದವದಹನ ಜಯ
ದೇವ ದನುಜಾಹತ ಸುದರ್ಶನೋದ್ಯಮನ ಜಯ
ದೇವ ನುತದೇವಕೀಗರ್ಭಪ್ರಸೂತ ಜಯ
ದೇವ ಮಹಿಮಾಸ್ಪದ ಹಲಾಯುಧಸಮೇತ ಜಯ
ದೇವ ವಸುದೇವ ಹರ್ಷಾಂಬುನಿಧಿಚಂದ್ರ ಜಯ
ದೇವ ಯದುಕುಲ[೧]ಮಹೋತ್ಪಲ ವಾಸರೇಂದ್ರ ಜಯ
ದೇವ ನಂದಿತ ನಂದಗೋಪಪ್ರಮೋದ ಜಯ
ದೇವ ಶೈಶವಕೇಳಿತೋಷಿತ ಯಶೋದ ಜಯ
ದೇವ ಪರಿಪೀತಖಲಪೂತನಾಜೀವ ಜಯ
ದೇವ ವಿಘಟಿತಶಕಟಕುಟಿಲಪ್ರಭಾವ ಜಯ
*

ಧರಿಸಿದೆ ನೀನು ನಿನಗೆ ಜಯ ಆ ಹಿರಣ್ಯಾಕ್ಷನಂ ವೀರನಂ ನೀಂ ಕೊಂದೆ ದೇವ, ಜಯ ಆ ಹಿರಣ್ಯಕ ಕಶಿಪುವಿನ ದೇಹವಂ ಸೀಳ್ದವನೆ ದೇವ, ನೀ ಜಯಿಸು. ಬಲಿಯ ಬಂಧಿಗೆ ನೀಳ್ದ ದೇಹವ ಧರಿಸಿದಾತನೆ ದೇವ, ನೀಂ ಜಯಿಸು. ದೇವ, ರಾವಣ ಕಂಠವೃಕ್ಷಕೆ ಕೊಡಲಿಯಾದವ ನೀನು ನಿನಗೆ ಜಯ? ದೇವ, ಹೈಹಯ ಬಾಹುಕಾನನ ದಾಹ ದಾವಾನಲನೆ, ನೀ ಜಯಿಸು ದೇವ, ದನುಜರ ಹನನ ಲೀಲೆಯ ಚಕ್ರ ನಿನ್ನದು ಕೃಷ್ಣ ನೀ ಜಯಿಸು ದೇವ, ನುತದೇವಕೀಗರ್ಭಪ್ರಸೂತ ಜಯ. ದೇವ, ಮಹಿಮೆಯ ಬಲರಾಮಗೆ ತಮ್ಮನೇ ಜಯಿಸು. ದೇವ, ವಸುದೇವ ಹರ್ಷಾಂಬುನಿಧಿಚಂದ್ರ, ನೀ ಜಯಿಸು. ದೇವ, ಯದುಕುಲಕಮಲವರಳಿಪ ಸೂರ್ಯ ನೀ ಜಯಿಸು. ದೇವ ವೃದ್ಧಿಗೊಳಿಸಿದೆ ನಂದಗೋಪನ ಸಮ್ಮುದವ ಜಯಿಸು. ಬಾಲಲೀಲೆಯಲಾ ಯಶೋದೆಯ ತೃಪ್ತಿಪಡಿಸಿದೆ ದೇವ, ನೀ ಜಯಿಸು. ಆ ದುಷ್ಟೆ ಪೂತನಿಯು ಜೀವವನು ಹೀರಿದವನೇ ದೇವ, ನೀ ಜಯಿಸು. ಕುಟಿಲಶಕಟನನೊದೆದು ಪುಡಿಯಾಗಿಸಿದ ದೇವ, ನೀ ಜಯಿಸು ದೇವ, ಯಮಳಾರ್ಜುನರ ಭಂಗಿಸಿ ಕಿತ್ತವನೆ ನಿನಗೆ ಜಯ ಕಾಳಿಯುರಗನ

---

೧. ಪದ್ಮಿನೀವಾಸರೇಂದ್ರ (ಮೊಲ)

* (ಖ) ಪುಸ್ತಕದಲ್ಲಿ-ದೇವದುರ್ವೃತ್ತವಾತಾಸುರವಿಘಾತಿ ಜಯ । ದೇವ ನಗದನುಜ ಸಂಹರಣವಿಕ್ರಮಣ ಜಯ । ದೇವ ಗೋಪಾಂಗನಾನಿತ್ಯೋತ್ಸವಾತ್ಮ ಜಯ । ದೇವಕಾರುಣ್ಯಾಬ್ಧಿ ಭಕ್ತಸಂಸಾರಿಜಯ । ಎಂದು ಅಧಿಕ ಪಾಠವಿದೆ.

[೧]ದೇವ ನಿರ್ಮೂಲ ಯಮಳಾರ್ಜುನೋರ್ವೀಜ ಜಯ
ದೇವ ಚಾಳಿತಕಾಳಿಯವ್ಯಾಳರಾಜ ಜಯ
ದೇವ ಧೇನುಕಮಾಂಸಹೃಷ್ಟರಣಭೂತ ಜಯ
ದೇವ ಕೇಶಿಪ್ರಾಣತುಷ್ಟರವಿಜಾತ ಜಯ
ದೇವ ವೃಷಭಾಕಾರದನುಜರವಿರಾಹು ಜಯ
ದೇವ ಗೋವರ್ಧನೋದ್ಧಾರಪಟುಬಾಹು ಜಯ
ದೇವ ಚೇತೋಗುಪ್ತಕಂಸವಧರೋಷ ಜಯ
ದೇವ ಹೇಳಾರಚಿತ ಗೋಪಾಲವೇಷ ಜಯ
ದೇವ ಸುಸ್ನಿಗ್ಧತರ ಬರ್ಹಾವತಂಸ ಜಯ
ದೇವ ಸಂತಚಿತವೇಣುವಾದ್ಯಪ್ರಶಂಸ ಜಯ
ದೇವ ಗೋಪಾಂಗನಾ ಮಾನಸಮರಾಳ ಜಯ
ದೇವ ಗೋಪಾಂಗನಾ ನಯನಝುಷಜಾಳ ಜಯ
ದೇವ ಗೋಪಾಂಗನಾ ಸ್ತನತರಲಹಾರ ಜಯ
ದೇವ ಗೋಪಾಂಗನಾ ಮಣಿಕರ್ಣಪೂರ ಜಯ
ದೇವ ಗೋಪಾಂಗನಾ ಕನಕಕಟಿಸೂತ್ರ ಜಯ
ದೇವ ಗೋಪಾಂಗನಾ ಭುಜಮಕರಪತ್ರ ಜಯ
ದೇವ ಗೋಪಾಂಗನಾ ಮೃಗಮದಲಲಾಮ ಜಯ
ದೇವ ಗೋಪಾಂಗನಾಕಚಕುಸುಮದಾಮ ಜಯ
ದೇವ ನಿತ್ಯೋತ್ಸವದ ನಮಸ್ತೇ ನಮಸ್ತೇ ೧೧೩

ವ॥ ಎಂದಭಿಷ್ಟುತಿಗೆಯ್ದು ಕೃತಕೃತ್ಯನಾಗಿ

ಯುಮನೆಯಿಂದೋಡಿಸಿದೆ ನೀ ಜಯಿಸು ದೇವ, ಭೂತಗಣವನು ತೃಪ್ತಿಪಡಿಸಿದೆ ಧೇನುಕಾಸುರಮಾಂಸದಿಂ ಜಯಿಸು ಕೇಶಿನಾಶದೆ ತೃಪ್ತಿಪಡಿಸಿದೆ ಯಮನ ನಿನಗೆ ಜಯ. ವೃಷಭನೆಂಬಾ ರವಿಗೆ ರಾಹುವು ನೀನೆ ದೇವ, ಜಯ ದೇವ, ಗೋವರ್ಧನೋದ್ಧಾರ ಪಟುಬಾಹುವೇ ಜಯವು ನಿನಗೆ ದೇವ, ಚಿತ್ತದಿ ಗುಪ್ತದುದು ಕಂಸವಧೆಯಾ ರೋಷ ನಿನಗೆ ಜಯ ದೇವ, ಲೀಲೆಗೆ ಗೋಪವೇಷವ ಧರಿಸಿದಾತನೆ ನಿನಗೆ ನಿತ್ಯಜಯ ದೇವ, ಹೊಳೆಯುವ ನವಿಲುಗರಿಯ ಕಿರೀಟವನು ಧರಿಸಿರುವೆ ಜಯಿಸು ಕೊಳಲನೂದುವ ಲೀಲೆಯಧಿಕ ಖ್ಯಾತಿ ನಿನಗೆ ಜಯ. ದೇವ, ಗೋಪಿಯರ ಕಣ್ ಮೀನ್ಗೆ ಬಲೆಯು ನೀನಾಗಿರುವೆ ನಿನಗೆ ಜಯ ದೇವ ಗೋಪಾಂಗನಾ ಸ್ತನತರಲಹಾಲ ಜಯ ದೇವ ಗೋಪಾಂಗನಾಮಣಿಕರ್ಣಪೂರಜಯ ದೇವ ಗೋಪಾಂಗನಾಕನಕಕಟಿಸೂತ್ರ ಜಯ ದೇವ ಗೋಪಾಂಗನಾಭುಜಮಕರ ಪತ್ರ ಜಯ ದೇವ ಗೋಪಿಯರ ಕಸ್ತೂರಿ ತಿಲಕ ನೀ ಜಯಿಸು. ದೇವ, ಗೋಪಿಯರ ಮುಡಿಯ ಹೂಮಾಲೆಯಾಗಿಹನೆ ನಿನಗೆ ಜಯ ದೇವ, ನಿತ್ಯೋತ್ಸವಕರನೆ ನಿನಗೆ ವಂದನೆ ವಂದನೆ, ವ॥ ಎಂದು ಸ್ತೋತ್ರವನ್ನು ಮಾಡಿ, ಕೃತಕೃತ್ಯನಾಗಿ, "ನೀವು ನಿಮ್ಮ ಲೀಲಾಗಮನದಿಂದ ಪಟ್ಟಣಕ್ಕೆ ಬನ್ನಿ, ಕಂಸನು ನಾನು

---

೧. ದೇವ ಯಮಳಾರ್ಜುನವಿಶಾಪಕ ವಿನೋದಿ ಜಯ (ಖ) ೩. ಹೃದ್ಯನ್ಮರಾಳ (ಕಖಗ)

ನಿಜಲೀಲಾಗತಿಯಿಂದೆ ಬರ್ಪುದು ಪೊೞಲ್ಗಾಂ ಪೋದಪೆಂ ಭೋಜಭೂ
ಭುಜನೆನ್ನಂ ಬರವಾರ್ಗುಮೆಂದು ಸರಥಂ ಬೀೞ್ಕೊಂಡು ಪೋದಂ ಚಲ
ದ್ಧ್ವಜನಕ್ರೂರನನಂತರಂ ಕಿಱಿದುಬೇಗಂ ಕ್ರೀಡಿಸುತ್ತಿರ್ದನ
ಗ್ರಜಯುಕ್ತಂ ಮಧುರಾಪುರೋಪವನದೊಳ್ ಶ್ರೀದೇವಕೀನಂದನಂ ೧೧೪

ಇದು ಸಮಸ್ತಕಮಲಭವಾಂಡಮಾಲಾ ಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಮಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥವಿಜಯಮಹಾಪ್ರಬಂಧದೊಳ್ ರಾಸಕೇಳಿ
ಪುಂಗವಾಸುರಸಂಹರಣ ಕೇಶಿಮಥನಾಕ್ರೂರದರ್ಶನ
ಯಮುನಾಹ್ರದವರ್ಣನಂ
ಪಂಚಮಾಶ್ವಾಸಂ

ಬರುವುದನ್ನೇ ನಿರೀಕ್ಷಿಸುತ್ತಿರುವನು. ಆದುದರಿಂದ ನಾನು ಬೇಗನೆ ಹೋಗುತ್ತೇನೆ." ಎಂದು ಹೇಳಿ ಅಕ್ರೂರನು ಅವರಿಂದ ಬಿಡುವನ್ನು ಪಡೆದು ಚಲಿಸುವ ಧ್ವಜದ ರಥದೊಡನೆ ಹೊರಟುಹೋದನು. ಅನಂತರ ಕೃಷ್ಣನು ಅಣ್ಣನೊಡನೆ ಸ್ವಲ್ಪಕಾಲ ಮಧುರೆಯ ಉದ್ಯಾನವನದಲ್ಲಿ ಕ್ರೀಡಿಸುತ್ತಿದ್ದನು. ಇದು ಸಮಸ್ತ ಕಮಲಭವಾಂಡ.... ಲಕ್ಷ್ಮೀಕಾಂತ ಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ರಾಸಕೇಳಿ ಪುಂಗವಾಸುರಸಂಹರಣಕೇಶಿಮಥನಾಕ್ರೂರದರ್ಶನಯಮುನಾ ಹ್ರದವರ್ಣನಂ ಪಂಚಮಾಶ್ವಾಸಂ.

# ಷಷ್ಠಾಶ್ವಾಸಂ

ಶ್ರೀಕೃಷ್ಣಂ ಕಂಸಪುರಾ
ಲೋಕನಕೌತುಕರಸೋದಯಂ ವೀರರಸೋ
ದ್ರೇಕಕ್ಕೆಡೆಗುಡೆ ಬಲಖ
ರ್ವೀಕೃತನಾ ದೈತ್ಯಖಳನ ಪೊಱಲ್ಗೆಯ್ತಂದಂ ೧

ವ|| ಅಂತು ಬಂದು ನಗರದ್ವಾರಮಂ ಪೊಗುವಲ್ಲಿ

ವಿಪುಲೋದ್ಯತ್ಸ್ವರ್ಣಕೋಟಾಕಟಿಘನಪರಿಖಾಕಾಂಚಿ ತುಂಗಧ್ವಜಾಲೋ
ಲಪಟೀಸಂವ್ಯಾನೆ ದೇವಾಲಯಕಳಶಕುಚಾಭೋಗೆ ಸೌಧಾಂಶುಚಂದ್ರಾ
ತಪಹಾಸದ್ಯೋತೆ ನಾನಾಮಣಿಮಯವಿಲಸತ್ತೋರಣಸ್ಫಾರಹಾರೌ
ಘ ಪುರಶ್ರೀ ದೇವಕೀಪುತ್ರನ ಬಗೆಗೊಲವಂ ಬೀಱುತಿರ್ಪನ್ನವಾಗಳ್ ೨

ಸುರಧನುಪುಂಜವಿದಾಯ್ತು
ಚ್ಚರಿ ದಲ್ ಕಾರ್ಮುಗಿಲ ಮೇಲೆನಲ್ಕೆ ವಿಚಿತ್ರಾಂ
ಬರಭಾರಂ ಬೆರಸಿದಿರೊಳ್
ಬರುತಿರ್ದಂ ರಂಗಕಾರನಸಿತಾಕಾರಂ ೩

ವ|| ಅದಂ ಕಂಡು

ಎಲವೆಲವೋ ರಜಕಾ ನಿ
ಲ್ಲೆಲೊ ಪೋದೊಡೆ ಕಂಸನಾಣೆ ಕಾರ್ಮುಕಮಹಮಂ
ಗಲದರ್ಶನಕ್ಕೆ ಕೈಗೆ
ಯ್ಯಲಮೋಘಂ ಕುಡುವುದೆಮಗೆ ದಿವ್ಯಾಂಬರಮಂ ೪

೧. ಶ್ರೀಕೃಷ್ಣನು ತನಗೆ ಕಂಸನ ಮಧುರಾಪುರವನ್ನು ನೋಡಬೇಕೆಂಬ ಕುತೂಹಲ ರಸೋದಯವು ವೀರರಸೋದ್ರೇಕಕ್ಕೆ ಅವಕಾಶವಾದುದರಿಂದ ಹೀನಬಲನೆಂದು ಭಾವಿಸಿದ ಆ ನೀಚ ರಾಕ್ಷಸ ಪಟ್ಟಣಕ್ಕೆ ಬಂದನು. ವ|| ಬಂದು ನಗರದ ಹೆಬ್ಬಾಗಿಲನ್ನು ಹೊಗುವಾಗ ೨. ವಿಸ್ತಾರವೂ ಉನ್ನತವೂ ಆಗಿ ಹೊಳೆಯುವ ಸುವರ್ಣದ ಕೋಟೆಯೆಂಬ ನಡುವೂ ಘನವಾದ ಕಂದಕವೆಂಬ ವಡ್ಯಾಣವೂ ಉನ್ನತವಾದ ಧ್ವಜಪಟವೆಂಬ ಘನಸ್ತನಗಳೂ ಸೌಧಗಳ ಹೊಳವೆಂಬ ಚಂದ್ರಿಕೆಯಂತಿರುವ ನಗುವೂ ನಾನಾ ರತ್ನಮಯವಾದ ಹೊಳೆಯುವ ತೋರಣಗಳೆಂಬ ಭೂರಿಹಾರನ ಸಮೂಹವೂ ಉಳ್ಳ ಪುರಶ್ರೀಯು ಕೃಷ್ಣನ ಮನಸ್ಸಿಗೆ ಸಂತೋಷವನ್ನು ಬೀರುತ್ತಿದ್ದಳು. (ಆಗ) ೩. ಕರಿಯ ಅಗಸನೊಬ್ಬನು ಇದೇನು ಆಶ್ಚರ್ಯ ಕಪ್ಪುಮೋಡದ ಮೇಲೆ ಕಾಮನ ಬಿಲ್ಲೇರಿದೆ ಎನ್ನುವಂತೆ ವಿಚಿತ್ರ ವರ್ಣವಸ್ತ್ರಗಳ ಮೂಟೆಯನ್ನು ಹೊತ್ತುಕೊಂಡು ಎದುರಿಗೆ ಬರುತ್ತಿದ್ದನು ವ|| ಅದನ್ನು ಕಂಡು, ಎಲೆಲೋ! ಅಗಸಾ : ನಿಲ್ಲೋ! ಹೋದರೆ ಕಂಸನಾಣೆ; ೪. ಬಿಲ್ಲಿನ ಹಬ್ಬದ ಮಂಗಳದರ್ಶನಕ್ಕೆ ಅಲಂಕರಿಸಿಕೊಳ್ಳಲು ನಮಗೆ ದಿವ್ಯವಾದ ವಸ್ತ್ರಗಳನ್ನು ನೀನು ಅವಶ್ಯವಾಗಿ ಕೊಡಬೇಕು.

ವ|| ಎಂಬುದುಂ ರಂಗಕಾರಂ ನಿಜಾಂತರಂಗದೊಳ್ ಈ ಗೋಪಾಲಬಾಲಕರ್ ವಿವೇಕಶೂನ್ಯರೆಂದು ಮುಗುಳ್ನಗೆಯಂ ನಕ್ಕು

ಪಣ್ಣಣದೊಳಿರ್ದಿರಲ್ಲಿರ್
ನೆಟ್ಟನೆ ನೀವಡವಿಯೊಳ್ ಮೃಗಂಗಳ ತೆಱದಿಂ
ಪುಟ್ಟಿದಿರಲ್ಲದೊಡೇಂ ಮತಿ
ಗೆಟ್ಟೆಱೆವಿರೆ ಕಂಸದೇವನುಡುಪಂಬರಮಂ ೫

ಸಂಸಾರಸುಖಮನನುಪಮ
ಮಂ ಸುರಪಂ ಕಪ್ಪವಿತ್ತ ಮಡಿವರ್ಗಮನಾ
ವಂ ಸುಭಟನುಡುವನವನೇಂ
ಕಂಸಂ ಪುಟ್ಟಿದ ಮುಹೂರ್ತದೊಳ್ ಪುಟ್ಟಿದನೇ ೬

ವ|| ಎನೆ ವನರುಹಾಕ್ಷಂ ಕನಲ್ದು

ದನುಜೇಂದ್ರನ ಮಡಿವರ್ಗಮ
ನೆನಗೀಯದೊಡೂರ ಸೀರೆಗಸಗಂ ಬಡಿವೆ
ತ್ತನೆನಿಪ್ಪ ಜನದ ನಾಣ್ನುಡಿ
ನಿನಗಾಗಲ್ಕಸಗವೊಯ್ಲ್ಲ ಸವಿಯಂ ತೋರ್ಪೆ ೭

ವ|| ಎಂದು ಜಡಿದು ನುಡಿದು

ಇರದೆಯ್ದಿ ರಂಗಕಾರನೊ
ಳುರವಣೆಯಿಂ ಕೊಂಡ ಮೌಲ್ಯಮೆನಿಸಿದ ನೀಲಾಂ
ಬರಮಂ ರಾಮಂಗಿತ್ತೆಸೆ
ದಿರೆ ಕೃಷ್ಣನನರ್ಘ್ಯಪೀತವಸನಮನುಟ್ಟಂ ೮

ವ|| ಎನ್ನಲು ಆ ಅಗಸನು ತನ್ನ ಮನಸ್ಸಿನಲ್ಲಿ ಈ ಗೋಪಾಲಬಾಲಕರು ವಿವೇಕವಿಲ್ಲದವರು ಎಂದುಕೊಂಡು, ಮುಗುಳ್ನಗೆನಕ್ಕು ೫. ಪಟ್ಟಣದಲ್ಲಿದ್ದವರಲ್ಲ ನೀವು; ನಿಜವಾಗಿ ನೀವು ಕಾಡಿನಲ್ಲಿ ಮೃಗಗಳಂತೆ ಹುಟ್ಟಿ ಬೆಳೆದವರು, ಅಲ್ಲದಿದ್ದರೆ ಬುದ್ಧಿಗೆಟ್ಟು ಕಂಸದೇವನುಡುವ ವಸ್ತ್ರವನ್ನು ಬೇಡುತ್ತಿದ್ದಿರಾ?" ೬. ಸಂಸಾರಸುಖಕ್ಕೆ ಸಾಧಕವಾದುದೂ ಅನುಪಮವೂ ದೇವೇಂದ್ರನು ಕಾಣಿಕೆಯಾಗಿ ಕೊಟ್ಟುದೂ ಆದ ಈ ಮಡಿಬಟ್ಟೆಗಳನ್ನು ಬೇರೆ ಯಾವ ಸುಭಟನು ತಾನೆ ಉಡುವನು? ಅವನೇನು ಕಂಸನು ಹುಟ್ಟಿದ ಸುಮುಹೂರ್ತದಲ್ಲಿ ಹುಟ್ಟಿದವನೆ? ವ|| ಎನ್ನಲು ಕೃಷ್ಣನು ರೇಗಿ, ೭. ರಾಕ್ಷಸೇಂದ್ರನ ಮಡಿಬಟ್ಟೆಗಳನ್ನು ನಮಗೆ ನೀನು ಕೊಡದಿದ್ದರೆ, ಊರ ಸೀರೆಗಾಗಿ ಅಗಸನು ಪೆಟ್ಟು ತಿಂದನು' ಎಂಬ ಜನದ ಗಾದೆಗೆ ಸರಿಯಾಗಿ ಅಗಸಾ, ಹೊಡೆತದ ರುಚಿಯನ್ನು ತೋರಿಸುತ್ತೇನೆ. ವ|| ಎಂದು ಗದರಿಸಿ ಹೇಳಿ, ೮. ಸುಮ್ಮನಿರದೆ ಅವನ ಹತ್ತಿರ ಹೋಗಿ, ಕ್ರೌರ್ಯದಿಂದಲೇ ಅವನಿಂದ ಅಮೌಲ್ಯ ವಸ್ತ್ರಗಳನ್ನು ಕಿತ್ತುಕೊಂಡು ಚೆನ್ನಾಗಿರುವ ನೀಲವಸ್ತ್ರಗಳನ್ನು ಬಲರಾಮನಿಗೆ ಕೊಟ್ಟು, ಅನರ್ಘ್ಯವಾದ ಪೀತಾಂಬರವನ್ನು ಕೃಷ್ಣನು ತಾನು ಧರಿಸಿದನು.

ಎಳವಿಸಿಲೆಳಸಿದ ನೀಳಾ
ಚಳಶಿಖರದೊಳಸಿತಮೇಘವೆಳಸಿದ ತುಹಿನಾ
ಚಳಶಿಖರದೊಳೆಸೆಯೆನೆ ಹರಿ
ಬಳರೆಸೆದರ್ ಪೀತನೀಲಪಟಪರಿಧಾನರ್ ೯

ವ|| ಅಂತು ಭುಜಬಲಾಡಂಬರದಿನಂಬರಂಗಳಂ ಕಳೆದುಕೊಳ್ವುದುಂ ಅಂಬರಂಬರಂ ಸಿಡಿಲ್ದೆಬ್ಬಿ ದುರ್ಧರತರಕೋಪಾಟೋಪದಿಂ ಭಯಂಕರಾಕಾರನಾಗಿ ರಂಗಕಾರಂ ಸ್ವಕೀಯ ನಿಷ್ಠುರಭುಜಾಸ್ಫಾಲನದಿನೀ ಗೋಪಾಲಬಾಲಕರಂ [1]ಮಚ್ಚಿಸುವೆನೆಂದು ತಕ್ಕು ಮಿಕ್ಕುಬರೆ

ತಲವಜ್ರಾಘಾತದಿಂ ಮರ್ದಿಸಿ ರಜನಕನನಾತ್ಮಪ್ರವೇಶಕ್ಕಿದೇ ಮಂ
ಗಲಮೆಂಬಂತಾ ಪುರ[2]ದ್ವಾರದೊಳವನಡಗಿಂ ಬುತ್ತಿಯಿಟ್ಟೆಲ್ವಿನಿಂ ಪೂ
ವಲಿಗೆಯ್ದಸ್ರಾಂಬುವಿಂ ಚೆಟ್ಟಜೆದು ಕರುಳಿನಿಂ ತೋರಣಂಗಟ್ಟಿ ಕೋಲಾ
ಹಲನಾದಂ ಪೆರ್ಚೆ ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ ೧೦

ವ|| ಆ ಸಮಯದೊಳ್

ಅಂಬುಜದಳನೇತ್ರನ ಪೀ
ತಾಂಬರದೊಳ್ ಸೆಣಸಿ ಭೀತಿಯಿಂದೋಡಿದುದೀ
ಕೆಂಬಿಸಿಲೆನೆ ಪಡುನೇಸಱ
ಕೆಂಬಿಸಿಲೆಸೆದತ್ತು ಗಿರಿಕುಜಾಗ್ರಸ್ಥಳದೊಳ್ ೧೧

ವ|| ಆಗಳಾ ಪೂವಿನ ಪೊಟ್ಟಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತುಂ ಬರ್ಪಲ್ಲಿ

೯. ಪೀತಾಂಬರನೀಲವಸ್ತ್ರಧಾರಿಗಳಾದ ಕೃಷ್ಣ ಬಲರಾಮರು (ಅನುಕ್ರಮವಾಗಿ) ಎಳೆಬಿಸಿಲು ಹರಡಿದ ನೀಲಾಚಲಶಿಖರದಂತೆಯೂ ಕಪ್ಪುಮೋಡವು ಮುಸುಕಿದ ಹಿಮಗಿರಿ ಶಿಖರದಂತೆಯೂ ಹೊಳೆಯುತ್ತಿದ್ದರು. ವ|| ಹಾಗೆ ತೋಳಿನ ಬಲದ ಆಡಂಬರದಿಂದ ವಸ್ತುಗಳನ್ನು ಕಿತ್ತುಕೊಳ್ಳಲಾಗಿ ಅಗಸನು ಆಕಾಶದವರೆಗೆ ಸಿಡಿದು ರೇಗಿ, ಸಹಿಸಲಾಗದ ಕೋಪಾತಿಶಯದಿಂದ ಭಯಂಕರಾಕಾರನಾಗಿ ತನ್ನ ಕಠಿನವಾದ ತೋಳನ್ನು ತಟ್ಟಿಕೊಂಡು ಈ ಗೋಪಾಲಬಾಲಕರನ್ನು ಮಗ್ಗಿಸುವೆನೆಂದು ತನ್ನ ಶಕ್ತಿ ಮೀರಿ ಮೇಲೇರಿ ಬಂದನು. ೧೦. ಅಗ್ರಜಸಹಿತನಾದ ಕೃಷ್ಣನು ಆ ಅಗಸನನ್ನು ಕಯ್ಯೆಂಬ ವಜ್ರದ ಹೊಡೆತದಿಂದ ಮರ್ದಿಸಿ, ತಮ್ಮ ಪುರಪ್ರದೇಶಕ್ಕಿದೇ ಮಂಗಳವೆಂಬಂತೆ ಆ ಪಟ್ಟಣದ ಹೆಬ್ಬಾಗಿಲಿನಲ್ಲಿ ಅವನ ಮಾಂಸದಿಂದ ಬುತ್ತಿಯಿಟ್ಟು, ಎಲಬುಗಳಿಂದ ಪೂಬಲಿಯಿಟ್ಟು, ರಕ್ತದ್ರವದಿಂದ ಚೆಟ್ಟಿಟ್ಟು, ಕರುಳಿನಿಂದ ತೋರಣವನ್ನು ಕಟ್ಟಿ, ಕಲಕಲಧ್ವನಿಯು ಹೆಚ್ಚುತ್ತಿರಲು ಕಂಸನ ಪಟ್ಟಣವನ್ನು ಪ್ರವೇಶಿಸಿದನು. ವ|| ಆ ಸಮಯದಲ್ಲಿ ೧೧. ಕಮಲದಳನೇತ್ರ (ಕೃಷ್ಣ)ನ ಪೀತಾಂಬರದೊಡನೆ ಸ್ಪರ್ಧಿಸಿ ಹೆದರಿ, ಓಡಿಹೋಯಿತೆನ್ನುವಂತೆ ಮುಳುಗುವ ಸೂರ್ಯನ ಕೆಂಬಿಸಿಲು ಗಿರಿಶಿಖರದ ವೃಕ್ಷದ ಮೇಲೆ ಹೊಳೆಯುತ್ತಿದ್ದಿತು. ವ|| ಆಗ ಆ ಹೂವಿನ

೧. ಮಗ್ಗಿಸುವೆನೆಂಬ (ಕಗ) ೨. ದ್ವಾರಮನವನಡಗಿಂ (ಕಖಗ)

ಉಟ್ಟ ನವಾಂಬರಕ್ಕಮರೆ ಪೂದೊಡವಂ ತುಡುವೊಂದು ಕೌತುಕಂ
ಪುಟ್ಟೆ ಮುರಾರಿಗೀಯಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ
ಕೊಟ್ಟೊಡಗೊಂಡು ಬರ್ಪುದೆನುತುಂ ದನುಜೇಂದ್ರನ ಮಾಲೆಗಾಱನೊ
ಲ್ದಟ್ಟಿದ ದೂತನಂತಿದಿರೆವಂದದು ಪುಷ್ಪಸುಗಂಧಮಾರುತಂ ೧೨

ವII ಅಂತು ಬಂದ ಮಂದಮಾರುತನ ಕಂಪುಮಂ ಮನದೆಕೊಂಡಾ ಮಾರುತನ ಸೌರಭ್ಯದ ಬಟೆವಿಡಿದು ಮಾಲಾಕಾರಪರಿವೃಢನ ಮಂದಿರಮಂ ಸಸಹೋದರಂ ದಾಮೋದರಂ ಪುಗುವುದುಮತಿಪ್ರಮೋದದಿಂದಿರ್ವಂದು ನಿಜಮಂದಿರೋಚಿತವಿಷ್ಟರಂಗಳಂ ಕೊಟ್ಟು ಕುಳ್ಳಿರಿಸಿ

ಆ ಪುಷ್ಪಲಾವಕಪ್ರಭು
ಗೋಪಾಲಕನಪ್ಪ ನಂದಸುತನಂ ಕಂಡು
ಶ್ರೀ ಪುರುಷೋತ್ತಮನೆಂದು ಮ
ಹಾಪರಮಪ್ರೀತಿಯಿಂ ನಿರೀಕ್ಷಿಸುತಿರ್ದಂ ೧೩

ಹರಿಯಂ ಕಾಣ್ಬುದುಮಾದುದು
ಪರಮಜ್ಞತೆ ಪುಷ್ಪಲಾವಕಂಗಮಿದೊಂದ
ಚ್ಚರಿ ಕೃಷ್ಣನನುಗ್ರಹದಿಂ
ದೊರೆಕೊಳ್ಗುಂ ಝುಡಿತಿಯಿಂದೆ ಪರಮಜ್ಞಾನಂ ೧೪

ಹರಿಯುಮನಂತೆ ರಾಮನುಮನೀಕ್ಷಿಸಿ ಮುಂ ಮೃದುವಸ್ತ್ರದಿಂದಿವರ್
ಪರಿವೃತರಾದರಿನ್ನೆಸೆವ ಪೂದೊಡವಂ ತುಡುಗೆಂದು ಚೆಚ್ಚರಂ
ವಿರಚಿಸಿದಂ ವಿಚಿತ್ರತರಮಪ್ಪಲರ್ವಚ್ಚಮನುನ್ಮದಾಳಿಯಂ
ಹರಿಬಲಭದ್ರರೀಕ್ಷಣಮದಾಳಿಗಳೊಲ್ದೆಱಗುತ್ತುಮಿರ್ಪಿನಂ ೧೫

ಹೊತ್ತಿನಲ್ಲಿ ಕೃಷ್ಣನು ಹೂವಾಡಿಗರ ಕೇರಿಯಲ್ಲಿ ವಿಹರಿಸುತ್ತಾ ಬರುವಾಗ, ೧೨. ಉಟ್ಟ ಹೊಸ ಬಟ್ಟೆಗನುಗುಣವಾಗಿ ಒಪ್ಪುವಂತೆ ಹೂವಿನ ತೊಡವನ್ನು ತೊಡಬೇಕೆಂದು ಕೃಷ್ಣನಿಗೆ ಕುತೂಹಲವುಂಟಾಯಿತು. ಅದಕ್ಕೆ ಸರಿಯಾಗಿ ಹೂವಿನ ವಾಸನೆಯನ್ನೇ ಕಾಣಿಕೆಯಾಗಿ ಕೊಟ್ಟು ನೀನು ಸಂಗಡ ಕರೆದುಕೊಂಡು ಬರಬೇಕೆಂದು, ರಾಕ್ಷಸೇಂದ್ರನ ಮಾಲೆಗಾರನು ಕಳುಹಿಸಿದ ದೂತನಂತೆ ಹೂವಿನ ಸುವಾಸನೆಯಿಂದ ಕೂಡಿದ ಗಾಳಿಯು ಇದಿರುಗೊಂಡು ಬೀಸಿತು. ವII ಹಾಗೆ ಬಂದ ಮಂದಮಾರುತನ ಸುವಾಸನೆಯನ್ನು ಮೆಚ್ಚಿ ಸುವಾಸನೆಯ ಗಾಳಿಯ ಮಾರ್ಗವನ್ನೇ ಅನುಸರಿಸಿ, ಮಾಲೆಗಾರರಲ್ಲಿ ಮುಖ್ಯನಾದವನ ಮನೆಗೆ ಕೃಷ್ಣನು ಅಣ್ಣನೊಡನೆ ಹೋದನು. ಆ ಮಾಲೆಗಾರನು ಅತಿ ಸಂತೋಷದಿಂದ ಅವರನ್ನಿದಿರುಗೊಂಡು, ಒಳಕ್ಕೆ ಕರೆದುಕೊಂಡು ಹೋಗಿ ಉಚಿತವಾದ ಪೀಠಗಳನ್ನು ಕೊಟ್ಟು ಕೂರಿಸಿ, ೧೩. ಆ ಹೂವಾಡಿಗರೊಡೆಯನು ಗೋಪಾಲಕರಾದ ನಂದಕುಮಾರರನ್ನು ಕಂಡು ಶ್ರೀಕಾಂತನಾದ ಪುರುಷೋತ್ತಮನೆಂದು ಭಾವಿಸಿ, ಅತಿಶಯ ಭಕ್ತಿಯಿಂದ ನೋಡುತ್ತಿದ್ದನು. ೧೪. ಹರಿಯನ್ನು ನೋಡುತ್ತಿದ್ದಂತೆಯೇ ಆ ಹೂವಾಡಿಗನಿಗೂ ಪರಮಜ್ಞಾನವುಂಟಾಯಿತು. ಇದೊಂದಾಶ್ಚರ್ಯ ಕೃಷ್ಣನ ಅನುಗ್ರಹದಿಂದ ಎಂತಹವರಿಗೂ ತಟ್ಟನೆ ಪರಮಜ್ಞಾನ ವುಂಟಾಗುವುದು. ೧೫. ಕೃಷ್ಣನನ್ನೂ ಬಲರಾಮನನ್ನೂ ನೋಡಿದ ಆ ಮಾಲೆಗಾರನು, ಇವರು ಮೊದಲು ಮೃದುವಸ್ತ್ರಗಳಿಂದಲಂಕೃತರಾಗಿರುವರು. ಇನ್ನು ಹೊಳೆಯುವ

ವ|| ತದನಂತರಂ

ಮದನನ ಸುಗಂಧಭಂಡಾ
ರದ ಪುಟಿಕೆಗಳೆನಿಸಿ ಕಂಪು ಮಗಮಗಿಪಲರ್ವ
ಟ್ಟದ ಪಡಲಿಗೆಗಳನೊಟ್ಟೈ
ಸಿದನವನಚ್ಯುತನ ಮುಂದೆ ಮಾಲಾಕಾರಂ ೧೬

ವ|| ಅಂತು ಪೂವಿನ ಪಡಲಿಗೆಗಳಂ ಪಸರಿಸೆ, ಕೊಸಗಿನೆಸಳ ಕೇಸರಮಂ ತೊಡರ್ಚಿದ ತೋರಮಲ್ಲಿಗೆಯ ಮುಗುಳ್ಗಳಾರಂಗಳುಮಂ, ಸುರಹೊನ್ನೆಯ ಚೆನ್ನನಪ್ಪರಲಸೊತ್ತರದೆ ಸುತ್ತಿ ತೆತ್ತಿಸಿದ ಕೈರವದ ಕರ್ಣಪೂರಂಗಳುಮಂ, ಎಡ್ಡಮಾದ ಪಡ್ಡಳಿಯ ಕಿಱುನನೆಯ ಕೊನೆ ತರಂಬಿಡಿದು ತೋಱೆ ಮೂಱುಂ ಧಾರೆಗಳಿನಳವಡಿಸಿದ ಕಿಂಕಿರಾತದೆಸಳ ಕಂಕಣಂಗಳುಮಂ, ಅಶೋಕೆಯ ಪಲ್ಲವಮಂ ನಡುವೆ ಕೀಲಿಸೆ ಲೀಲೆವಡೆದ ನಸುವಿರಿದ ಸೇವಂತಿಗೆಯ ಕೇವಣದುಂಗುರಂಗಳುಮಂ, ಎಡೆಯೆಡೆಗೆ ಸಜ್ಜುಕವೆನಿಸಿದ ಗೊಜ್ಜಗೆಯರಲ ಮಿಶ್ರದಿನುಪಾಶ್ರಯುಂಬಡೆದ ಹೇಮತಾಮರಸದ ಮೊಗ್ಗೆಯ ತೋಳ್ಗಟ್ಟುಗಳುಮಂ, ಒಂದೊಂದೆಡೆಯೊಳ್ ಬಂದುಗೆಯಲರಿನಂದಂಬೆತ್ತದಿರ್ಮುತ್ತೆಯ ನೆತ್ತಿವಂದಂಗಳುಮಂ, ಅಲ್ಲಲ್ಲಿಗೆ ಬೆರಸಿದ ಮರುಗದ ಕೋದ ಪಾದರಿಯ ಬಳಸಿದ ತುಳಸಿಯ ಸಂಪಾದಿಸಿದ ಸಂಪಗೆಯ ಕುಟ್ಮಳದಿನಿಟ್ಟಳಂಗಟ್ಟ ದಿಟ್ಟಗೆಸೆಯೆ ದಂಡೆಗಟ್ಟದ ಮಾಲತಿಯ ಮುಗುಳ ವನಮಾಲೆಗಳುಮಂ, ಬೇಱೆವೇಱೆ ನೋಡಿ ಪೊನ್ನ ರನ್ನದ ತೊಡಪುಗಳ್ಗೆ ಕಂಪುಂ ಮೇಲ್ಪುಮಾದಂತೆ ಚೆಲ್ವಾದ ತೊಡವುಗಳೊಳಂ ನಿಜನಿಜಾಂಗರುಚಿಗೊಡಂಬಡುವ ಪೂದೊಡವಂ ತಾನುಮಗ್ರಜನುಮೆಸೆಯೆ ಪಸದನಂಗೆಯ್ದು ಮಾಲಾಕಾರನಂ ಕಾರುಣ್ಯದಿಂದೀಕ್ಷಿಸಿ

ಪುಷ್ಪಾಭರಣದಿಂದಲೂ ಅಲಂಕೃತರಾಗಲಿ ಎಂದು ಬೇಗನೆ ವಿಚಿತ್ರಕರವಾದ ಪೂದೊಡವುಗಳನ್ನು, ಕೊಬ್ಬಿದ ತುಂಬಿಗಳೂ ರಾಮಕೃಷ್ಣರ ಕಣ್ಣುಗಳೆಂಬ ತುಂಬಿಗಳೂ ಆಸೆಯಿಂದ ಎರಗುತ್ತಿರುವಂತೆ ರಚಿಸಿದನು. ವ|| ಆಮೇಲೆ ಆ ಮಾಲೆಗಾರನು ೧೬. ಮನ್ಮಥನ ಸುಗಂಧಭಂಡಾರದ ಭರಣಿಗಳೆನ್ನಿಸಿಕೊಂಡು ಸುವಾಸನೆಯು ಮಗಮಗಿಸುವ ಹೂದೊಡವುಗಳ ರಾಶಿಗಳನ್ನು ಅವರ ಮುಂದಿರಿಸಿದನು. ಬೆಟ್ಟದಾವರೆಯ ಎಸಳ ಕೇಸರವನ್ನು ತೊಡಕಿಸಿದ, ತೋರಮಲ್ಲಿಗೆಯ ಹಾರಗಳನ್ನೂ ಸುರಹೊನ್ನೆಯ ಚೆನ್ನಾಗಿರುವ ಹೂಗಳನ್ನೂ ಒಂದು ಕ್ರಮದಲ್ಲಿ ಸುತ್ತಿ ಒತ್ತಾಗಿ ಕಟ್ಟಿದ ನೈದಿಲೆಯ ಕರ್ಣಾಭರಣಗಳನ್ನೂ, ಮನೋಹರವಾದ ಪಾದರಿಯ ಚಿಕ್ಕ ಮೊಗ್ಗಿನ ಕೊನೆ ಒಂದು ಕ್ರಮದಲ್ಲಿ ಕಾಣುವಂತೆ ಮೂರೆಳೆಗಳಿಂದ ಸಿದ್ಧಪಡಿಸಿದ ಬೆಟ್ಟದಾವರೆಯ ಎಸಳಿನ ಕಂಕಣಗಳನ್ನೂ ಅಶೋಕದ ಚಿಗುರನ್ನು ನಡುವೆ ಕೀಲಿಸಿದ್ದುದರಿಂದ ಲೀಲೆಯನ್ನು ಪಡೆದ, ಸ್ವಲ್ಪ ಅರಳಿದ ಸೇವಂತಿಗೆಯ ಉಂಗುರಗಳನ್ನೂ, ಎಡೆಯೆಡೆಯಲ್ಲಿ ಹೊಸದಾದ ಗುಜ್ಜಿಗೆ ಹೂವಿನ ಬೆರಕೆಯಿಂದ ಕೂಡಿದ ಹೊಂದಾವರೆಯ ಮೊಗ್ಗಿನ ತೋಳಬಂದಿಗಳನ್ನೂ, ಒಂದೊಂದು ಕಡೆಯಲ್ಲಿ ಬಿಂದಿಗೆ ಹೂವಿನಿಂದ ಅಂದವಾದ ಇರುವಂತಿಗೆಯ ನೆತ್ತಿಬಾಸಿಂಗವನ್ನೂ, ಅಲ್ಲಲ್ಲಿ ಬೆರಸಿದ ಮರುಗದ, ಪೋಣಿಸಿದ ಪಾದರಿಹೂವಿನ, ಸುತ್ತಲಿರುವ, ತುಳಸಿಯ ಸರಿಯಾಗಿ ಸೇರಿಸಿದ ಸಂಪಗೆಯ ಮೊಗ್ಗಿನಿಂದ ಒತ್ತಾಗಿ ಕಟ್ಟಿ ಮನೋಹರವಾಗಿರುವ ಜಾಜಿಹೂವಿನ, ವನಮಾಲೆಗಳನ್ನು ಬೇರೆ ಬೇರೆ ನೋಡಿ, ಹೊನ್ನಿನ ರನ್ನದ ಆಭರಣಗಳಿಗೆ ಸುವಾಸನೆಯೂ ಮೃದುತ್ವವೂ ಆದ ಹಾಗೆ ಚೆಲ್ವಾದ ತೊಡಿಗೆಗಳಲ್ಲೂ ತಮ್ಮ ತಮ್ಮ

ಶ್ರೀ ನೆಲಸಿರ್ಕಖಂಡಿತಮೆನಲ್ ಪ್ರಿಯ ನಿನ್ನೊಳಮಂತೆ ನಿನ್ನ ಸಂ
ತಾನದೊಳಂ ಮನಂ ತಣಿಯೆ ನೀಂ ಸಿರಿಯೊಳ್ ನಲಿದಂತ್ಯದೊಳ್ ಸುಧಾಂ
ಭೋನಿಧಿತಳ್ಪನೊಳ್ [1]ನೆರವನಾಗೆನುತುಂ ಬರವಿತ್ತು ಮಾಲಿಕಂ
ಗಾ ನಳಿನೇಕ್ಷಣಂ ತಳರ್ದನುತ್ಸವದಿಂ ಬಟೆಯಂ ಬಳಾನ್ವಿತಂ . ೧೭

ಹರಿಬಲರಲ್ಲಿಂ ತಳರ್ದಾ
ದರದಿಂ ದೂಸಿಗರ ಕಂಚುಗಾಱರ ಬಳೆಗಾ
ಱರ ತಂಬುಲಿಗರ ಮಣಿಗಾ
ಱರ ಗಂದಿಗರಾವಣಂಗಳೊಳ್ ನಡೆತಂದರ್ ೧೮

ವ|| ಅಂತು ನಡೆತಂದು ಗಟ್ಟವಳ್ತಿಯರ ಕೇರಿಯೊಳಗಣಿ ಬರ್ಪಲ್ಲಿ ಕಟ್ಟಿದಿರೊಳ್ ಕಳಧೌತದ ಕೊಳವಿಗೆಗಳೊಳಂ, ರೂಪ್ಯದ ಕುಪ್ಪಿಗಳೊಳಂ, ಪಳಿಕಿನ [2]ಪುಟಿಕೆಗಳೊಳಂ, ಹರಿನೀಲದ ನಾಳಿಗಳೊಳಂ, ಮೌಕ್ತಿಕದ ಶುಕ್ತಿಕೆಗಳೊಳಂ, ಕೆಂಬರಲ ಸಂಬಳಿಗೆಗಳೊಳಂ, ಗರುಡೋದ್ಗಾರದ ಪಚ್ಚೆಯ ಕರಡಿಗೆಗಳೊಳಂ, ತೀವಿದೆನಿತಾನುಂ ತೆಱದ ಬಂಧುರ ಸುಗಂಧ ವಸ್ತುಸಂದೋಹಮಂ ಪಿಡಿದೊಡನೆ ಬರ್ಪ ಪರಿಚಾರಿಕಾನಿಕಾಯಂಬೆರಸು ಸಾಯಂಕಾಲ ಶೃಂಗಾರಸಮಯಮೆಂದು ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸೈರಂಧ್ರಿ ನಡೆತರೆ

ಅವಯವದ ವಿಕಟಚೇಷ್ಟೆಯ
[3]ನವವಯದಿಂ ಮುಖವಿಲಾಸದಿಂ ಮಱೆಯಿಸುತಿ
ರ್ಪವಳಂ ವಕ್ರಾಂಗಿಯನಿಂ
ದುವಕ್ತ್ರೆಯಂ ಗಟ್ಟವಳ್ತಿಯಂ ಹರಿ ಕಂಡಂ ೧೯

ದೇಹಕಾಂತಿಗೊಡಂಬಡುವ ಹೂದೊಡವುಗಳನ್ನು ತಾನೂ ಅಣ್ಣನೂ ಚೆನ್ನಾಗಿರುವಂತೆ ಅಲಂಕರಿಸಿಕೊಂಡು ಮಾಲೆಗಾರನನ್ನು ಕರುಣೆಯಿಂದ ನೋಡಿ, ೧೭. ಕಮಲನೇತ್ರನಾದ ಆ ಕೃಷ್ಣನು ಆ ಮಾಲೆಗಾರನಿಗೆ- "ಮಿತ್ರನೆ, ನಿನ್ನಲ್ಲೂ ನಿನ್ನ ಸಂತಾನದಲ್ಲೂ ಪೂರ್ಣವಾಗಿ ಶ್ರೀಯು ನೆಲಸಿರಲಿ. ಮನಸ್ಸಿಗೆ ತೃಪ್ತಿಯಾಗುವಂತೆ ನೀನು ಐಶ್ವರ್ಯದಲ್ಲಿ ನಲಿದು, ಕಡೆಯಲ್ಲಿ ಕ್ಷೀರಸಾಗರಶಯನನೊಡನೆ ಸೇರುವವನಾಗು" ಎಂದು ವರವನ್ನು ಕೊಟ್ಟನು. ಬಳಿಕ ಬಲರಾಮನೊಡನೆ ಸಂತೋಷದಿಂದ ಮುಂದೆ ಹೊರಟನು. ೧೮. ಬಲರಾಮಕೃಷ್ಣರು ಅಲ್ಲಿಂದ ಹೊರಟು ಆದರದಿಂದ ಜವಳಿಯ, ಕಂಚುಗಾರರ, ಬಳೆಗಾರರ, ವೀಳೆಯದ, ಮಣಿಗಾರರ, ಗಂದಿಗರ ಅಂಗಡಿಯ ಬೀದಿಗಳಲ್ಲಿ ಬಂದರು. ವ|| ಹಾಗೆ ಬಂದು, ಗಂಧತೇಯುವವರ ಕೇರಿಯಲ್ಲಿ ನಡೆಯುವಾಗ-ಚಿನ್ನ ಬೆಳ್ಳಿಗಳ ಕೊಳವೆಗಳಲ್ಲೂ ಬೆಳ್ಳಿಯ ಭರಣಿಗಳಲ್ಲೂ ಸ್ಫಟಿಕದ ಡಬ್ಬಿಗಳಲ್ಲೂ ಇಂದ್ರನೀಲದ ನಾಳಗಳಲ್ಲೂ, ಮುತ್ತಿನ ಚಿಪ್ಪುಗಳಲ್ಲೂ, ಕೆಂಪುರತ್ನದ ಸಂಬಳಿಗೆಗಳಲ್ಲೂ ಗರುಡಪಚ್ಚೆಯ ಕರಡಿಗೆಗಳಲ್ಲೂ, ತುಂಬಿದ ಎಷ್ಟೋ ವಿಧದ ಮನೋಹರ ಸುಗಂಧ ವಸ್ತುಸಮೂಹವನ್ನು ಎತ್ತಿ ಹಿಡಿದುಕೊಂಡು ಸಂಗಡ ಬರುವ ಪರಿಚಾರಿಕೆಯರ ಗುಂಪಿನೊಡನೆ, ಸಾಯಂಕಾಲದ ಶೃಂಗಾರ ಸಮಯವೆಂದು ಕಂಸಾಸುರನಲ್ಲಿಗೆ ಹೋಗಬೇಕೆಂದು ಹೊರಟು ಅವರ ಎದುರಿಗೆ ಸರಿಯಾಗಿ ಕುಬ್ಜೆಯೆಂಬ ಸೈರಂಧ್ರಿಯು ಬರುತ್ತಿದ್ದಳು. ೧೯. ತನ್ನ ಅವಯವದ ವಿಕಾರ ಚೇಷ್ಟೆಯನ್ನು ನವಯೌವನದಿಂದಲೂ ಮುಖವಿಲಾಸದಿಂದಲೂ ತಟ್ಟನೆ ಮರೆಸುವ

---

೧. ನೆರೆವೆಯಕ್ಕೆನುತಂ (ಕಖಗ) ೨. ಲಳಿಗೆಗಳೊಳಂ ೩. ನವಯವದಿಂ (ಕ)

ವ|| ಅಂತು ಕಂಡು

ವರಮುಖಿ ನಿನ್ನ ಕೈಗುಣದಿನಾದ ಸುಗಂಧವಿಲೇಪನಂಗಳೀ
ದೊರೆಯವಿವಾರ್ಗೆ ಯೋಗ್ಯಮೆನೆ ಯೋಗ್ಯನೆ [1]ನೀನೆ ದಲಂತರಾತ್ಮನಂ
ಬರೆ ತೆಗೆದಂಗ ಸೌಮ್ಯ ನಿನಗೆನ್ನಯ ಬಾಹ್ಯಸುಗಂಧವಸ್ತುವೇ
ನರಿದೆ ನಿಜೇಚ್ಛೆಯಿಂ ಕಳಿದುಕೊಳ್ [2]ಮನಮೊಲ್ದ ಸುಗಂಧವಸ್ತುವಂ ೨೦

ವ|| ಎಂದು ಮುಂದಿರಿಸೆ

ಬಳನ ರುಚಿ ಕೃಷ್ಣನೊಳ್ ಮಾ
ರ್ಪೊಳೆದುದೆನಲ್ ಕೃಷ್ಣನಂಗರುಚಿ ಬಳನೊಳ್ ಮಾ
ರ್ಪೊಳೆದುದೆನಲ್ ಕೃಷ್ಣ ಬಳರ್
ಮಳಯಜ ಮೃಗಮದ ಸುಗಂಧದಣ್ಪಂ ತಳೆದರ್ ೨೧

ತರುಣತಮೋರುಚಿ [3]ಕುಮುದಾ
ಕರದೊಳ್ ನವಚಂದ್ರಕಿರಣಮುತ್ಪಲವನದೊಳ್
ಪರಿಕಲಿಸಿದಂತೆ ಕತ್ತುರಿ
[4]ಸಿರಿಗಂಧಗಳಣ್ಪು ರಾಮಕೃಷ್ಣರೊಳೆಸೆಗುಂ ೨೨

ವ|| ಆಗಳ್

ಉಪಮಾತೀತಾಂಗ ಪೋಪಂ ನಡೆ ತಡೆಯದೆ ಕೇಳೀನಿವಾಸಕ್ಕೆನುತ್ತಾ
ಟಪಳಂ ಕಂಡಿಂತುಟೊಂದಾಕೃತಿ ತನಗಿದು ಚೇತೋವಿಕಾರಂ ನಿಸರ್ಗಂ
ಚಪಳತ್ವಂ ಸ್ತ್ರೀಗೆನುತ್ತುಂ ಮನದೊಳೆ ದಯೆಯಿಂ ಕೃಷ್ಣನಂಗುಷ್ಠಮಂ ಮೆ
ಟ್ಟಿ ಪತಾಕಾಹಸ್ತದಿಂದಂ ನೆಗಪೆ ಮುಖಮನಾ ಕುಬ್ಜೆ ಸೌಮ್ಯಾಂಗಿಯಾದಳ್ ೨೩

ವಕ್ರಾಂಗಿಯೂ ಚಂದ್ರಮುಖಿಯೂ ಆದ ಆ ಗಂಧವಿಕ್ರಯಿಯನ್ನು ಕೃಷ್ಣನು ಕಂಡನು. ವ|| ಹಾಗೆ ಕಂಡು, ೨೦. "ವರಮುಖೀ, ನಿನ್ನ ಕೈಗುಣದಿಂದ ಆದ ಈ ಬಗೆಯ ಈ ಸುಗಂಧಲೇಪನಗಳು ಯಾರಿಗೆ ಯೋಗ್ಯವಾದವು?" ಎನ್ನಲು, "ನೀನೇ ನಿಜವಾಗಿಯೂ ಯೋಗ್ಯನು. ನನ್ನ ಅಂತರಾತ್ಮವನ್ನು ಬರಸೆಳೆದ ಸೌಮ್ಯಾಂಗನೇ, ನಿನಗೆ ನನ್ನ ಹೊರಗಿನ ಸುಗಂಧವಸ್ತುಗಳು ಅಸಾಧ್ಯವೇ?! ನಿನ್ನ ಇಷ್ಟದಂತೆ ಮನಃಪ್ರೀತಿಯಿಂದ ಸುಗಂಧವಸ್ತುವನ್ನು ತೆಗೆದುಕೋ". ವ|| ಎಂದು ಮುಂದಿರಿಸಿದಳು. ೨೧. ಬಲರಾಮನ ಕಾಂತಿಯು ಕೃಷ್ಣನಲ್ಲೂ, ಕೃಷ್ಣನ ದೇಹಕಾಂತಿಯು ಬಲರಾಮನಲ್ಲೂ ಪ್ರತಿಬಿಂಬಿಸಿತೆನ್ನುವಂತೆ, ಕೃಷ್ಣನು ಶ್ರೀಗಂಧಲೇಪನವನ್ನೂ ಬಲರಾಮನು ಕಸ್ತೂರಿಯ ಸುಗಂಧಲೇಪನವನ್ನೂ ಧರಿಸಿದರು. ೨೨. ಬೆಳ್ನೈದಿಲೆಯ ವನದಲ್ಲಿ ಎಳೆಗತ್ತಲೆಯೂ, ನೀಲೋತ್ಪಲವನದಲ್ಲಿ ಹೊಸ ಬೆಳುದಿಂಗಳೂ ವ್ಯಾಪಿಸಿದಂತೆ ಕಸ್ತೂರಿಯ ಮತ್ತು ಶ್ರೀಗಂಧದ ಲೇಪನವು ಬಲರಾಮ ಕೃಷ್ಣರಲ್ಲಿ ಚೆನ್ನಾಗಿ ಕಾಣಿಸುತ್ತಿದ್ದಿತು. ವ|| ಆಗ ೨೩. "ಅನುಪಮಾಂಗಾ! ವಿಲಾಸಗೃಹಕ್ಕೆ ಹೋಗೋಣ ತಡಮಾಡಬೇಡ. ನಡೆ." ಎಂದು, ಆಶಿಸುತ್ತಿರುವ ಅವಳನ್ನು ನೋಡಿ,

---

೧. ನೀನೆನಲಂತರಾತ್ಮನಂ (ಕಗ) ೨. ಮನಮೊಲ್ದು (ಕಗ) ೩. ಕಮಲಾಕರದೊಳ್ (ಕಗ) ೪. ಸಿರಿಗಂಪುಗಳಣ್ಪು (ಕಗ)

ವ|| ಅಲ್ಲಿಂ ಬಟಿಯಂ

ಬೆಳಗಿದುದಲ್ಲಿಯ ಗಣಿಕಾ
ವಳಿಗಳ ಕಣ್ಬೆಳ್ಪೆ ಚಂದ್ರಿಕಾಚ್ಛಲದಿನೆನಲ್
ಬೆಳಗಿದುದು ವಿಮಲಚಂದ್ರಿಕೆ
ಬಳಕೃಷ್ಣರ್ ಸೂಳೆಗೇರಿವುಗುವವಸರದೊಳ್ ೨೪

ಬಿನದದಿನಂತಲ್ಲಿಯ ವರ
ವನಿತೆಯರಂ ಕೂಡೆ ನೋಡಿಯುಂ ನುಡಿಯಿಸಿಯುಂ
ನನೆಗಣೆಗೆಡೆಮಾಡಿಯುಮಿಂ
ತು ನಾಡೆಯುಂ ಪೊಟಲ್ವಗಳೆದು ತದನಂತರದೊಳ್ ೨೫

ಮುರರಿಪುರಾಮರ್ ಸುಟಿದರ್
ಕರಿಶಿಕ್ಷಕರಶ್ವಶಿಕ್ಷಕರ ಜೋಧರ ಮ
ಲ್ಲರ ಮಾವಂತರ ಮಂದುರಿ
ಗರ ನೆಗಟ್ದಾವಾಸವಾರಿಗಳ ಕೇರಿಗಳೊಳ್ ೨೬

ಕರಿಕಳಭಯುಗಮರಣ್ಯಾಂ
ತರದೊಳತಿಸ್ವೈರವೃತ್ತಿಯಿಂ ಚರಿಯಿಸುವಂ
ತಿರೆ ಮಧುರಾಪುರದೊಳ್ ಕೃ
ಷ್ಣರಾಮರುಚ್ಛೃಂಖಲಸ್ವಭಾವದೆ ಸುಟಿದರ್ ೨೭

ವ|| ಅಂತು ಪೊಟಲಂ ಕೂಡೆ ತೊಟಲ್ದು ಯಾಮಿನೀಯಾಮತ್ರಯವಿರಾಮಸಮಯದೊಳ್ ಭೋಜರಾಜನ ರಾಜಮಂದಿರೋಪಕಂಠಪ್ರದೇಶಮನೆಯ್ದೆ ವಂದು

ಕೃಷ್ಣನು ಇವಳ ಈ ಒಂದು ಬಗೆಯ ಆಕಾರವು ನನಗೆ ಮನೋವಿಕಾರಕವಾಗಿದೆ. ಸ್ತ್ರೀಯರಿಗೆ ಚಪಲತೆಯು ಸಹಜ ಎಂದುಕೊಂಡು ಮನಸ್ಸಿನಲ್ಲಿ ದಯೆಯಿಂದ ಅವಳ ಕಾಲಿನ ಹೆಬ್ಬೆರಳನ್ನು ಮೆಟ್ಟಿಕೊಂಡು ಪತಾಕಾಹಸ್ತದಿಂದ ಎತ್ತಿದ ಕೈಯಿಂದ ಅವಳ ಮುಖವನ್ನು ಹಿಡಿದು ಮೇಲೆತ್ತಲಾಗಿ ಆ ಕುಬ್ಜೆಯು ಸೌಮ್ಯಾಂಗಿಯಾದಳು. ವ|| ಆಮೇಲೆ ೨೪. ಬಲರಾಮ ಕೃಷ್ಣರು ಸೂಳೆಗೇರಿಯನ್ನು ಪ್ರವೇಶಿಸಿದರು, ಆಗ ಆ ವೇಶ್ಯಾಸ್ತ್ರೀಯರ ಕಣ್ಣಿನ ಬಿಳಿಯ ಕಾಂತಿಯೇ ಬೆಳುದಿಂಗಳೆಂಬ ನೆಪದಿಂದ ಹೊಳೆಯುತ್ತಿದೆಯೆನ್ನುವಂತೆ ಸ್ವಚ್ಛವಾದ ಬೆಳುದಿಂಗಳು ಹೊಳೆಯಿತು. ೨೫. ವಿನೋದದಿಂದ ಅಲ್ಲಿಯ ವಾರಾಂಗನೆಯರನ್ನು ನೋಡಿಯೂ ಮಾತನಾಡಿಸಿಯೂ, ಪುಷ್ಪಬಾಣಕ್ಕೆ ಗುರಿಮಾಡಿಯೂ ಹೊತ್ತುಗಳೆದು ಅನಂತರ ೨೬. ಬಲರಾಮಕೃಷ್ಣರು ಗಜಾಶ್ವಶಿಕ್ಷಕರು ಯೋಧರ, ಜಟ್ಟಿಗಳ, ಮಾವಟಿಗರ, ಅಶ್ವಶಾಲೆಯವರ ಹೆಸರಾಂತ ಕೇರಿಗಳಲ್ಲಿ ಸಂಚರಿಸಿದರು. ೨೭. ಮೂವತ್ತು ವಯಸ್ಸಿನ ಯೌವನದ ಆನೆಗಳೆರಡು ವನಮಧ್ಯದಲ್ಲಿ ಸ್ವೇಚ್ಛಾವೃತ್ತಿಯಿಂದ ಸಂಚರಿಸುವಂತೆ ರಾಮಕೃಷ್ಣರು ಮಧುರಾಪುರದಲ್ಲಿ ತಡೆಯಿಲ್ಲದೆ ಸ್ವೇಚ್ಛಾವೃತ್ತಿಯಿಂದ ಸಂಚರಿಸಿದರು. ವ|| ಹಾಗೆ ಪಟ್ಟಣದಲ್ಲಿ ಸುತ್ತಿಯಾಡಿ, ರಾತ್ರಿ ಮೂರನೆಯ ಜಾವವು ಕಳೆಯುವ ಸಮಯದಲ್ಲಿ ಭೋಜರಾಜನ ಅರಮನೆಯ ಸಮೀಪ ಪ್ರದೇಶಕ್ಕೆ ಬಂದು,

ಸಾಹಸಿಕಂ ಮುರಾರಿ ಪುಗುತಂದನಂತಯುತಂ ಧನುರ್ಮಹೋ
ತ್ಸಾಹನಿರೀಕ್ಷಣೋತ್ಸುಕತೆಯಿಂ ಪರಿಘೂರ್ಣಿತ ಗೀತವಾದ್ಯಸಂ
ದೋಹಮನುನ್ನತಧ್ವಜಸಮೂಹಮ[1]ನಪ್ರಮಿತಾಂಗರಕ್ಷಕ
ವ್ಯೂಹಮನುಗ್ರಯಾನಗ್ರಜವಾಹಮನಗ್ಗದ ಶಸ್ತ್ರಗೇಹಮಂ ೨೮

ವ|| ಅಂತು ಬಂದು ದೌವಾರಿಕಂ ನಿವಾರಿಪುದಂ ಕಂಡೊರ್ವ ಮಹಾಪ್ರತೀಹಾರನೀ ಗೋಪಾಲಬಾಲಕರಿನಪ್ಪುದೇಂ, ಇವರ್ ಪೋಗಿ ಅರ್ತಿಯಿಂ ನೋಡುಗೆಂದೊಡಗೊಂಡೊಯ್ದು ಶಸ್ತ್ರಶಾಲೆಯಂ ಪುಗಿಸಿ ಪೂಜಿಸಿರ್ದಾ ವಿವಿಧಾಸ್ತ್ರಂಗಳೊಳೆಮ್ಮರಸಂ ಕಂಸದೇವನೀ ಶಕ್ತಿಯಿಂ ಶಕ್ರನನೀ ತೋಮರದಿಂ ಧೂಮಕೇತುವನೀ ಕೋದಂಡದಿಂ ದಂಡಧರನನೀ ಕೃಪಾಣದಿಂ ಕೌಣಪನನೀ ಪಾಶದಿಂ ಜಲೇಶನನೀ ಬಾಣದಿಂದೇಣವಾಹನನನೀ ಪರಶುವಿಂ ಗಿರಿಶಬಂಧುವನೀ ಶೂಲದಿಂ ನೀಲಲೋಹಿತನಂ ಗೆಲ್ದನೆಂದು ಬೇಱೆವೇಱೆ ಪೆಸರ್ವೆಸರೊಳ್ ತೋಱೆ

ಅಮರೇಂದ್ರೋತ್ತುಂಗ ಮಾತಂಗದ ಬಿದುವಿನ ಮುಕ್ತಾವಳಿಯಿಂದಾದ ಮಂಜೂ
ಷಮಿದೀ ಮಂಜೂಷದೊಳ್ ಪೂಜಿಸಿ ದಿವಿಜಕುಜೋತ್ಫುಲ್ಲಪುಲ್ಲೌಘದಿಂ ಶೇ
ಷಮಹಾನಿರ್ಮೋಕದಿಂದಂ ಗವಸಣಿಸಿ ಸಮಂತಿರ್ಪುದೊಂದುಗ್ರಕೋದಂ
ಡಮುದಾರ್ಗಂ ತೋಱಲುಂ ನೋಡಲುಮರಿದತುಳಂ ದುರ್ಧರಂ ದುಷ್ಪ್ರಮೇಯಂ ೨೯

೨೮. ಸಾಹಸಿಕನಾದ ಕೃಷ್ಣನು ಬಲರಾಮನೊಡನೆ ಧನುರ್ಮಹೋತ್ಸವವನ್ನು ನೋಡುವ ಕುತೂಹಲದಿಂದ ವಾದ್ಯಘೋಷಯುತವೂ ಉನ್ನತ ಧ್ವಜಸಮೂಹವುಳ್ಳುದೂ ಅಪರಿಮಿತ ಅಂಗರಕ್ಷಕರ ಗುಂಪುಳ್ಳುದೂ ಉಗ್ರವಾದ ಯಾನ ಗಜಾಶ್ವಗಳುಳ್ಳುದೂ ಆದ ಉತ್ತಮ ಶಸ್ತ್ರಶಾಲೆಯನ್ನು ಹೊಕ್ಕನು. ವ|| ಹಾಗೆ ಪ್ರವೇಶಿಸುವವರನ್ನು ಒಬ್ಬ ಬಾಗಿಲು ಕಾಯುವವನು ತಡೆಯುವುದನ್ನು ಕಂಡ ದ್ವಾರಪಾಲಾಧ್ಯಕ್ಷನು "ಈ ಗೋಪಾಲಬಾಲಕರಿಂದ ಆಗುವುದೇನು?! ಇವರು ಆಸಕ್ತಿಯಿಂದ ಒಳಗೆ ಹೋಗಿ ನೋಡಲಿ" ಎಂದು ಸಂಗಡ ಕರೆದುಕೊಂಡು ಆಯುಧಶಾಲೆಯೊಳಕ್ಕೆ ಹೋದನು. ಪೂಜಿಸಿದ್ದ ವಿಧವಿಧವಾದ ಅಸ್ತ್ರಗಳಲ್ಲಿ ನಮ್ಮರಸನು-ಈ ಶಕ್ತ್ಯಾಯುಧದಿಂದ ಇಂದ್ರನನ್ನು ಈ ತೋಮರದಿಂದ ಅಗ್ನಿಯನ್ನು ಈ ಬಿಲ್ಲಿನಿಂದ ಯಮನನ್ನೂ ಈ ಕತ್ತಿಯಿಂದ ನೈಋತಿರಾಕ್ಷಸನನ್ನೂ ಈ ಪಾಶದಿಂದ ವರುಣನನ್ನೂ ಈ ಬಾಣದಿಂದ ವಾಯುವನ್ನೂ ಈ ಗಂಡುಗೊಡಲಿಯಿಂದ ಕುಬೇರನನ್ನೂ ಈ ಶೂಲದಿಂದ ಈಶ್ವರನನ್ನೂ ಗೆದ್ದನು" ಎಂದು ಬೇರೆ ಬೇರೆಯಾಗಿ ಹೆಸರಿನೊಡನೆ ಹೇಳಿ ತೋರಿಸಿದನು. ಅಲ್ಲದೆ ೨೯. "ಇದು ದೇವೇಂದ್ರನ ಉನ್ನತೈರಾವತದ ಕುಂಭಸ್ಥಳದ ಮುತ್ತುಗಳಿಂದ ನಿರ್ಮಿಸಿದ ಪೆಟ್ಟಿಗೆ; ಈ ಪೆಟ್ಟಿಗೆಯಲ್ಲಿ ಕಲ್ಪವೃಕ್ಷದ ಅರಳಿದ ಹೂಗಳಿಂದ ಪೂಜಿತವಾಗಿ, ಆದಿಶೇಷ ಪೊರೆಯಿಂದ ಗೌಸುಹಾಕಿದ ಉಗ್ರವಾದ ಬಿಲ್ಲೊಂದು ಇದೆ. ಅನುಪಮವೂ ಅಳೆಯಲಾಗದುದೂ ಆದ ಅದು ಯಾರಿಗೂ ತೋರಿಸುವುದಕ್ಕೂ ನೋಡುವುದಕ್ಕೂ ಧರಿಸುವುದಕ್ಕೂ ಅಸಾಧ್ಯವಾದುದು.

---

೧. ನಾಪ್ರಹಿತಾಂಗರಕ್ಷಣ (ಕಗ) ನಪ್ರಹಿತಾಂಗರಕ್ಷಣ (ಖ) ನಾಪ್ರಹಿತಾಂಗರಕ್ಷಕ (ಮೂಲ)

ಸೆಡೆವಂ ನಾಗೇಂದ್ರನತ್ತಲ್ ಕೆೞಗಡೆ ಪೊಡೆವಳ್ ಧಾತ್ರಿ ಮೇಲಿತ್ತಲತ್ತಲ್
ನಡುವಿಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ
ನಡುಕಂಗೊಳ್ವಂ ಸುರುಳ್ವಂ ಸುಗಿವನಗಿವನುಳ್ಳಳ್ಕುವಂ ಬಳ್ಕುವಂ ಪಾ
ವಡರ್ದಂತಿರ್ಪಂ ಬೆಮರ್ವಂ ಜಯೆವೊಡೆದ ರ್ಥವಕ್ಕದ್ಭುತಂ ಕಂಸಚಾಪಂ ೩೦

ಇದಱೊಳೆ ಗೆಲ್ವನೆಮ್ಮರಸನಿಂದ್ರನ[1]ನೆಂದೆನೆ ಕೇಳ್ದುಪೇಂದ್ರನು
ರ್ಬಿದ ಮುಳಿಸಿಂದೆ ಮಂದಸಿನ ಮುಚ್ಚುಳನುಂಗುಟದಿಂದೆ ಮೀಂಟಿ ಪೋ
ಗೊದೆದೆಡಗೈಯೊಳೆತ್ತಿ ಧನುವಂ [2]ಹೆದೆಯೇಱಿಸಿ ನೀಟ್ದಿ ಕೋಟಿಯು
ಗ್ಮದೊಳೆೞೆಯಲ್ಕೆ ತದ್ಬಲಕೆ ಸಾಲನೆ ತದ್ಧನು ಭಗ್ನಮಪ್ಪುದುಂ ೩೧

ದನುಜಾನೀಕಕ್ಕಕಾಂಡಪ್ರಳಯಘನರವಂ ಕ್ರುದ್ಧಕಾಲಾಂತಕಕ್ಷ್ವೇ
ಡನಿನಾದಂ ಮೃತ್ಯುದೇವೀಕಹಕಹಹಸನಧ್ವಾನಮೆಂಬನ್ನೆಗಂ ಕೃ
ಷ್ಣನಿನಾ ಕೋದಂಡಭಂಗಧ್ವನಿ ನೆಗೞ್ದುದು ಶಯ್ಯಾತಳಾಗ್ರೋಚ್ಚಲತ್ಕಂ
ಸನಿಶಾಟಂ ನಿರ್ಭರಾಸ್ಫಾಲಿತ ಕುಲಗಿರಿಕೂಟಂ ಸ್ಫುಟದ್ದಿಕ್ಕವಾಟಂ ೩೨

ಕಿಸುರಂ ಮಾರ್ಪೊಡೆ ಬರ್ಕೆ ಕಾಪಿನವರೆಂದಬ್ಜಾಕ್ಷನಂತಂತೆ ನಾ
ಲ್ದೆಸೆಯಂ ನೋೞ್ಪುದುಮಂತೆ ಮುನ್ನಮೆ ತದುಗ್ರಧ್ವಾನದಿಂದಂಗರ
ಕ್ಷಸಮೂಹಂ ದೆಸೆಗೆಟ್ಟು ಯಾನಗಜವಾಜಿಶ್ರೇಣಿ ಬೆಂಗೊಟ್ಟು ಪೋ
ಯ್ತಸುಹೃದ್ವೀರರೊಳಿಲ್ಲಿ ಮಾರ್ಪೊಡೆವರಾ ಪ್ರಸ್ತಾವದೊಳ್ ಕೃಷ್ಣನಂ ೩೩

೩೦. ಕಂಸನ ಈ ಬಿಲ್ಲು ಅದ್ಭುತವಾದುದು; ಇದರ ಟಂಕಾರಧ್ವನಿಗೆ ಅತ್ತ ಕೆಳಗಡೆ ನಾಗೇಂದ್ರನು ಸೆಡೆತುಕೊಳ್ಳುವನು. ಇತ್ತ ನಡುವೆ ಭೂಮಿಯು ನಡುಗುವಳು. ಅತ್ತ ಮೇಲುಗಡೆ ಇಂದ್ರನು ನಡುಗುವನು, ಅಗ್ನಿಯು ಸಂಕೋಚಗೊಳ್ಳುವನು. ಯಮನೂ ನೈಋತಿಯೂ ಭಯಗೊಳ್ಳುವರು, ವರುಣನು ಮನದಲ್ಲೆ ಅಳುಕುವನು. ವಾಯುವು ಬಳುಕುವನು. ಕುಬೇರನು ಹಾವು ಮೇಲೇರಿದಂತಿರುವನು. ಈಶ್ವರನು ಬೆವರುವನು. ೩೧. ಇದರಿಂದ ನಮ್ಮರಸನು ಇಂದ್ರನನ್ನೂ ಗೆಲ್ಲುವನು ಎನ್ನಲು ಉಪೇಂದ್ರನು ಅದನ್ನು ಕೇಳಿ, ಆ ಮಂದಾಸನದ ಮುಚ್ಚಳವನ್ನು ಕಾಲಿನ ಹೆಬ್ಬೆರಳಿನಿಂದ ಮೀಟಿ ದೂರ ಹೋಗುವಂತೆ ಒದೆದು, ಎಡಗಯ್ಯಿಂದ ಬಿಲ್ಲನ್ನೆತ್ತಿ ಹೆದೆಯೇರಿಸಿ ಉದ್ದವಾದ ಬಿಲ್ಲಿನ ಎರಡು ತುದಿಗಳನ್ನು ಹಿಡಿದು ಎಳೆಯಲು ಅವನ ಬಲಕ್ಕೆ ತಡೆಯದೆ ಆ ಬಿಲ್ಲು ಮುರಿದು ಹೋಯಿತು. ೩೨. ಕೃಷ್ಣನು ಮುರಿದ ಆ ಬಿಲ್ಲಿನ ಶಬ್ದವು ರಾಕ್ಷಸರ ಸೇನಾಸಮೂಹಕ್ಕೆ ಇದು ಅಕಾಲದಲ್ಲಿ ಆದ ಪ್ರಳಯ ಮೇಘದ ಧ್ವನಿ, ಕೋಪಗೊಂಡ ಪ್ರಳಯಕಾಲ ಯಮನ ವಿಷದ ಧ್ವನಿ, ಮೃತ್ಯುದೇವತೆಯು ಗಹಗಹಿಸಿ ನಗುವ ಧ್ವನಿ ಎಂಬಂತೆ ಹಾಸಿಗೆಯಲ್ಲಿ ಮಲಗಿದ್ದ ಉಗ್ರಕಂಸನನ್ನು ಚಲಿಸುವಂತೆ ಮಾಡಿ, ಜೋರಾಗಿ ಕುಲಗಿರಿಶಿಖರಗಳನ್ನು ತಾಕಿ, ದಿಕ್ಕುಗಳ ಬಾಗಿಲುಗಳೊಡೆಯುವಂತೆ ಹೆಚ್ಚಿತು. ೩೩. "ಕಾವಲಿನವರಿಗೆ ಸಿಟ್ಟು ಬಂದರೆ ಎದುರಿಗೆ ಬರಲಿ!" ಎಂದು ಕೃಷ್ಣನು ನಾಲ್ಕು ದಿಕ್ಕನ್ನೂ ನೋಡಿದನು. ಅದಕ್ಕೆ

---

೧. ನೆಂಬುದ ಕೇಳ್ದು (ಕಖಗ) ನೆಂಬುದುಗೇಳ್ದು (ಮೂಅ) ೨. ನಿಮಿರ್ದೇಱಿಸಿ ನೀಟ್ದಿಬಾಹು ಯುಗ್ಮದೆ ತೆಗೆಯಲ್ಕೆ (ಕಖಗ)

ವ|| ಅನ್ನೆಗಮತ್ತಲ್

ಸಮಮಲ್ತಗ್ಗದ ಶಾರ್ಙ್ಗಮಗ್ಗದ ಪಿನಾಕಂ ಬಲ್ಪಿನಿಂದೆಂಬ ಚಾ
ಪಮನೀ ಬಾಲಕನೆಂತು ಮೆಯ್ಸೊಡೆಯದೆಂತಲ್ಲಾಡದೆಂತಳ್ಕದ
ಶ್ರಮದಿಂ ಖಂಡಿಸಿದಂ ಮಹಾದ್ಭುತಮಿದೆಂತಪ್ಪಣ್ಮಿದೆಂತಪ್ಪ ದ
ರ್ಪಮಿದೆಂತಪ್ಪಳವೆಂದು ಕಂಸನತಿಚಿಂತಾಕ್ರಾಂತನಾಗಿರ್ಪುದುಂ ೩೪

ಪೊಡೆಮಟ್ಟು ಮಹಾಮಾತ್ಯಂ
ನುಡಿದಂ ಕೇಳಾಳ್ದ ನಿನ್ನ ಪಗೆಯಂ ಬಗೆಯಂ
ತಡೆಯದೆ ತೀರ್ಚುಗುಮಿಭದೊಳ್
ಕಡುಗಲಿ ತಾನೆನಿಪ ಕುವಲಯಾಪೀಡೆಭಂ ೩೫

ವ|| ಅದೆಂತೆಂದೊಡೆ ವಿಂಧ್ಯಭೂಭೃದಾಯಾಮದೊಳಂ ಮಹಾವರಾಹಪರಿಣಾಹದೊಳಂ ಮೇರುಭೂಧರೋತ್ಸೇಧದೊಳಂ ಐರಾವತಪ್ರಭಾವದೊಳಂ ಕ್ಷಯಾಶುಶುಕ್ಷಣಿಕ್ಷೇಪದೊಳಂ ಪ್ರಳಯಜಲಧರಧ್ವಾನದೊಳಂ ಸಂಹಾರಭೈರವಾರ್ಭಟೆಯೊಳಂ ತಾರ್ಕ್ಷ್ಯವಿಕ್ಷೇಪದೊಳಂ ಸಿಂಹಲಂಘನದೊಳಂ ಪವನವೇಗದೊಳಮಗುರ್ವುಮದ್ಭುತಮುಮೆನಿಸಿ

ಅದು ಪರಿಯಿತ್ತೆ ಮುಟ್ಟದುದು ಮುಟ್ಟಿತೆ ಪೊಯ್ಯುದು ಪೊಯ್ದುದೇ ಪೊರ
ಳ್ಚದುದು ಪೊರಳ್ಚಿತೇ ನಖರದಿಂದಿಜೆಯಿತ್ತಿಜೆಯಿತ್ತೆ ಪೋ ಕಟಿ
ಲ್ಚದುದು ಕಟಲ್ಚಿತೇ ಪದದಿನಿಟ್ಟೊರಸಿತ್ತೊರಸಿತ್ತೆ ಕೊಂದುದೆಂ
ಬುದನಜೆ ವೈರಿಯಂ ದನುಜ ಕೇವಳಮಲ್ತು ಮದೀಯಸಿಂಧುರಂ ೩೬

ಮುಂಚೆ ಆ ಉಗ್ರಧ್ವನಿಯನ್ನು ಕೇಳಿಯೇ ಅಂಗರಕ್ಷಕಸಮೂಹವೂ ಯಾನದ ಆನೆ ಕುದುರೆಗಳ ಗುಂಪೂ ಬೆಂಗೊಟ್ಟು ದಿಕ್ಕೆಟ್ಟೋಡಿತ್ತು. ಶತ್ರುವೀರರಲ್ಲಿ ಆಗ ಕೃಷ್ಣನನ್ನು ಪ್ರತಿಭಟಿಸುವವರು ಯಾರು? ವ|| ಅಷ್ಟರಲ್ಲಿ ಆ ಕಡೆ ೩೪. ಕಂಸನು "ಬಲದಲ್ಲಿ ಈ ಬಿಲ್ಲಿಗೆ ವಿಷ್ಣುವಿನ ಶಾರ್ಙ್ಗವೆಂಬ ಬಿಲ್ಲೂ ಈಶ್ವರನ ಪಿನಾಕವೆಂಬ ಬಿಲ್ಲೂ ಸಮವಲ್ಲ. ಈ ಬಿಲ್ಲನ್ನು ಈ ಬಾಲಕನು ಹೆದರದೆ ಅಳ್ಳಾಡದೆ ಶಕ್ತಿಹೀನನಾಗದೆ ನಿರಾಯಾಸದಿಂದ ಹೇಗೆ ಮುರಿದನು ಇದೂ ಮಹಾದ್ಭುತವಾಗಿದೆ! ಇದೆಂತಹ ಪೌರುಷ? ಇದೆಂತಹ ದರ್ಪ? ಇದೆಂತಹ ಸಾಮರ್ಥ್ಯ?" ಎಂದು ಅತಿ ಚಿಂತಾಕ್ರಾಂತನಾದನು. ೩೫. ಆಗ ಮುಖ್ಯಮಂತ್ರಿಯೊಬ್ಬನು-ಕಂಸನಿಗೆ ಅಡ್ಡಬಿದ್ದು ಸ್ವಾಮಿ, ಕೇಳು ಆನೆಗಳಲ್ಲಿ ಬಹುಶಕ್ತಿಯುಳ್ಳದೆನಿಸಿಕೊಂಡಿರುವ ಕುವಲಯಾಪೀಡಗಜವು ನಿನ್ನ ಹಗೆಯನ್ನೂ ನಿನ್ನ ಇಷ್ಟವನ್ನೂ ತೀರಿಸುತ್ತದೆ ವ|| ಅದು ಹೇಗೆಂದರೆ-ವಿಂಧ್ಯಪರ್ವತ ವಿಸ್ತಾರದಿಂದಲೂ, ಮಹಾವರಾಹ ಸ್ಥಲದಿಂದಲೂ ಮೇರುಪರ್ವತೌನ್ನತ್ಯದಿಂದಲೂ ಐರಾವತ ಪ್ರಭಾವದಿಂದಲೂ ಪ್ರಳಯಾಗ್ನಿಯಂತೆ ಆಕ್ರಮಿಸುವುದರಲ್ಲೂ ಗರುಡನಂತೆ ಮೇಲೆರಗುವುದರಲ್ಲೂ ಸಿಂಹದಂತೆ ನೆಗೆಯುವುದರಲ್ಲೂ ವಾಯುವೇಗದಲ್ಲೂ ಭಯಂಕರವೂ ಅದ್ಭುತವೂ ಎನಿಸಿದೆ. ೩೬. ಅದು ಓಡಿತೇ ವೈರಿಯನ್ನು ಮುಟ್ಟಿಯೇ ಬಿಡುವುದು, ಮುಟ್ಟಿತೆಂದರೆ ಹೊಡೆಯಿತೆನ್ನಿ, ಹೊಡೆದರೆ ಹೊರಳಿಸಿತೆನ್ನಿ, ಹೊರಳಿಸಿದರೆ ಉಗುರುಗಳಿಂದ ಇರಿಯದೆ ಬಿಡುವುದಿಲ್ಲ! ಇರಿದ ಮೇಲೆ ತಲೆಯನ್ನು ಕಳಚಿದಂತೆಯೇ

ಬವರಮನಪ್ಪುಕೆಯ್ದು ಪಗೆ ಕಣ್ಬೊಲದೊಳ್ ನಿಲೆ ಕಂಡು ಕಾಯ್ದು ಮೋ
ದುವ ಮುಳಿಸಟ್ಟಿ ಮುಟ್ಟುವ ಜವಂ ಕಿಡೆ ಪೊಯ್ವ ಬಲಂ ಪೊರಳ್ಚಿ ಕ
ಟ್ಟುವ ಕಡುಪೊತ್ತುವುರ್ಬು ಮೊಗಮಿಕ್ಕುವ ರೌದ್ರತೆ ಕೊಂದು ಕೋಡೊಳೆ
ತ್ತುವ ಚಲಮೊಪ್ಪೆ ಭಾಪೆನಿಕುಮೆನ್ನ ಮದದ್ವಿರದಂ ಸುರದ್ವಿಷಾ ೩೭

ವ|| ಎಂದು ಬಿನ್ನಪಂಗೆಯ್ದು ಮನದ ವಿಷಾದಮಂ ಕಳೆದ ನಿಶಾಟಂಗತ್ಯಂತ ಸಂತುಷ್ಟಿಯಿಂದಂಗಚಿತ್ತಮನಿತ್ತು ಎಲೆ ಮಾಹಾಮಾತ್ಯ ಶತಪತ್ರಮಿತ್ರೋದಯಸಮಯದೊಳ್ ಕುವಲಯಾಪೀಡಗಜಾರೂಢನಾಗಿ ಮಲ್ಲರಂಗದ್ವಾರದೊಳ್ ನಿಂದು ನೀನಾ ಕುಹಕ ಬಾಲಕರಂ ಕಾಲಮುಖದ್ವಾರಮಂ ಪುಗಿಸು ಪೋಗಾ ಮಹಾಸಾಮಜೇಂದ್ರದೊಳಂ ಮಾಱಾಂತು ಮೀಱಿ ಬಂದರಪ್ಪೊಡವಂದಿರ ಮಲ್ಲಯುದ್ಧದಿಂ ಮುಱಿದು ಕೊಲಿಸುವೆನೆಂದನಂತರಂ ಗೃಹಮಹತ್ತರನಂ ಕರೆದು ಮಲ್ಲರಂಗಪ್ರದೇಶಮಂ ಮಂಗಳದ್ರವ್ಯಪರಿಕರಂಗಳಿಂದಲಂಕರಿಸುವುದೆಂದು ಬೆಸಸುವುದುಂ

ತ್ರಿದಶವಿರೋಧಿಗೂರ್ಧ್ವಗತಿದೋಱುವವೊಲ್ ಮಣಿರಮ್ಯಹರ್ಮ್ಯಕೂ
ಟದೊಳೆಸೆದತ್ತು ಚೀನವಸನಧ್ವಜಸಂತತಿ ತದ್ಧ್ವಜಪ್ರಹಾ
ರದೆ ನೊರೆವಿಂಡದೊಂದು ಗಗನಾಪಗೆಯಿಂ ಸಿಡಿಲ್ದತ್ತದಸ್ತಶೈ
ಲದ ಶಿಖರಕ್ಕೆನಲ್ಕೆ ವಿಧುವಸ್ತನಗೇಂದ್ರಮನಾಗಳೆಯ್ದಿದಂ ೩೮

ಕಳಚಿದರೆ ಕಾಲಿಂದ ತುಳಿದು ಒರಸಿಬಿಡುವುದು, ಒರಸಿದ ಮೇಲೆ ಕೊಂದುದೆಂದೇ ತಿಳಿಯಬೇಕು. ರಾಕ್ಷಸೇಂದ್ರಾ, ನನ್ನ ಆನೆಯು ಸಾಮಾನ್ಯವಾದುದಲ್ಲ ೩೭. ಸುರವೈರೀ, ಆ ಮದ್ದಾನೆಯು ಯುದ್ಧಕ್ಕೆ ಸಿದ್ಧವಾಗಿ ಹಗೆಯು ಕಣ್ಣಿಗೆ ಕಾಣಿಸುವಷ್ಟು ದೂರದಲ್ಲಿ ನಿಂತರೆ ನೋಡಿ ಕೋಪಗೊಂಡು ಹೊಡೆಯುವವರೆಗೂ ಅಟ್ಟಿಸಿಕೊಂಡು ಹೋಗಿ ಹಿಡಿಯುವ ವೇಗವೂ ಬೀಳುವಂತೆ ಹೊಡೆಯುವ ಬಲವೂ, ಹೊರಳಿಸಿ ಕಟ್ಟುವ ಕ್ರೌರ್ಯವೂ ಆಕ್ರಮಿಸುವ ಉಬ್ಬೂ, ನೋಡುವ ರೌದ್ರತೆಯೂ, ಕೊಂದು ದಂತದಿಂದ ಎತ್ತುವ ಚಲವೂ ಒಪ್ಪುತ್ತಿರಲು ಭಪ್ಪರೇ! ಹೊಗಳಿಸಿಕೊಳ್ಳುವುದು" ವ|| ಎಂದು ವಿಜ್ಞಾಪಿಸಿದನು. ಕಂಸನು ಮನದ ವಿಷಾದವನ್ನು ಹೋಗಲಾಡಿಸಿದ ರಾಕ್ಷಸನಿಗೆ ಅತ್ಯಂತ ಸಂತುಷ್ಟಿಯಿಂದ ಬಹುಮಾನವನ್ನಿತ್ತು, "ಎಲೈ ಮಹಾಮಾತ್ಯಾ ಸೂರ್ಯೋದಯಸಮಯದಲ್ಲಿ ಕುವಲಯಾಪೀಡಗಜವನ್ನೇರಿ, ಮಲ್ಲರಂಗದ ಬಾಗಿಲಲ್ಲಿ ನಿಂತು ನೀನು ಆ ವಂಚಕ ಬಾಲಕರನ್ನು ಯಮನ ಬಾಯ ಬಾಗಿಲನ್ನು ಹೊಗಿಸು. ಹೋಗು. ಆ ಮಹಾಮದಗಜೇಂದ್ರನನ್ನೂ ಎದುರಿಸಿ ಪ್ರತಿಭಟಿಸಿ, ಮೀರಿ ಬಂದರೆ ಅವರನ್ನು ಜಟ್ಟಿಯ ಕಾಳಗದಿಂದ ಮುರಿಸಿ ಕೊಲ್ಲಿಸುತ್ತೇನೆ" ಎಂದು ಅನಂತರ ಗೃಹಾಧ್ಯಕ್ಷನನ್ನು ಕರೆದು, ಮಲ್ಲರಂಗಪ್ರದೇಶವನ್ನು ಮಂಗಳದ್ರವ್ಯಪರಿಕರಗಳಿಂದ ಅಲಂಕರಿಸಬೇಕೆಂದು ಅಪ್ಪಣೆ ಮಾಡಿದನು. ೩೮. ದೇವವಿರೋಧಿಯಾದ ಕಂಸನಿಗೆ ಊರ್ಧ್ವಲೋಕಗಮನವನ್ನು ತೋರಿಸುವಂತೆ ರತ್ನ ಖಚಿತವಾದ ಉಪ್ಪರಿಗೆಯ ಮನೆಯ ಶಿಖರಗಳಲ್ಲಿ ಚೀನಾಂಬರದ ಧ್ವಜಸಮೂಹವು ಹೊಳೆಯಿತು. ಆ ಧ್ವಜಗಳ ಹೊಡೆತದಿಂದ ಗಂಗಾನದಿಯ ಅದೊಂದು ನೊರೆಯ ಉಂಡೆಯು ಅಸ್ತಶೈಲದ ಶಿಖರಕ್ಕೆ ಸಿಡಿಯಿತೆನ್ನುವಂತೆ ಚಂದ್ರನು ಅಸ್ತಗಿರಿಯನ್ನೇರಿದನು.

ಇದಮೋಘಂ ಪೊಱಗಿರ್ಪ ಚಂದ್ರಿಕೆ ವಿತಾನವ್ಯಾಜದಿಂ ಪೊಕ್ಕುದೀ
ಸದನಾಭ್ಯಂತರಮಂ ಮಹಾದ್ಭುತಮಿದೆಂಬೊಂದಂದದಿಂದತ್ತ ಪೋ
ದುದು ಚಂದ್ರಾತಪಮಿತ್ತ ಪಾಂಡುರತವಿತಾನಶ್ರೇಣಿಯುಂ ಮಲ್ಲರಂ
ಗದ ಸುತ್ತುಂ ನೆಲಸಿತ್ತು ತೋರ್ಪ ಪರಿಗಳ್ ಚೆಲ್ವಾದುವಾ ಬೇಗದೊಳ್ ೩೯

ಸುರವೈರಿಯ ವಧದಿನದೊಳ್
ಧರೆಗುದಿರ್ದುವು ತಾರಕಂಗಳೆನೆ ಪೂವಲಿ ಭಾ
ಸುರಮಾಯ್ತು ಮಲ್ಲರಂಗದೊ
ಳಿರದುಡುಗಿದುವಭ್ರರಂಗದೊಳ್ ತಾರಗೆಗಳ್ ೪೦

ದನುಸುತವಿನಾಶಸೂಚನ
ವೆನಲಿರುಳೊಗೆದಿಂದ್ರಧನುವೆ ಪೋಗದೆ ನಿಂದ
ತ್ತೆನೆ ಪಂಚರತ್ನಮಯವಂ
ದನಮಾಲಿಕೆ ಮಲ್ಲಗಳದ ಬಾಗಿಲೊಳೆಸೆಗುಂ ೪೧

ವ|| ಆ ಸಮಯದೊಳ್

ಕರಶೀಕರಪರಿಕರಮಂ
ಕರಿರಾಜಂ ತಾಳ್ದುವಂತೆ ಧರಿಯಿಸಿ ಮುಕ್ತಾ
ಭರಣಪರಂಪರೆಯಂ ಭೋ
ಜರಾಜನಾ ಮಲ್ಲರಂಗದೆಡೆಯೊಳ್ ನಿಂದಂ ೪೨

ವ|| ಅಂತು ನಿಂದು

೩೯. ನಿಜವಾಗಿಯೂ ಇದೊಂದು ಆಶ್ಚರ್ಯ, ಹೊರಗಿದ್ದ ಬೆಳಂದಿಗಳು ಮೇಲುಕಟ್ಟೆಂಬ ನೆಪದಿಂದ ಈ ಮನೆಯ ಒಳಗೆ ಹೊಕ್ಕಿದೆಯೆನ್ನುವಂತೆ, ಹೊರಗಡೆಯು ಬೆಳದಿಂಗಳಿಲ್ಲವಾಯಿತು. ಇತ್ತ ಮನೆಯೊಳಗಡೆ ಬಿಳಿಯ ಮೇಲುಕಟ್ಟಿನ ಸಮೂಹವು ಮಲ್ಲರಂಗದ ಸುತ್ತಲೂ ನೆಲೆಸಿದ್ದಿತು. ಆ ಪ್ರದೇಶಗಳು ಚೆನ್ನಾಗಿ ಕಾಣಿಸುತ್ತಿದ್ದವು. ೪೦. ಸುರವೈರಿಯ ಕೊಲೆಯ ದಿನವಾದುದರಿಂದ ನಕ್ಷತ್ರಗಳು ಭೂಮಿಗುದುರಿದವು ಎನ್ನುವಂತೆ ಮಲ್ಲರಂಗದಲ್ಲಿ ಹೂಬಲಿಗಳು ಚೆನ್ನಾಗಿ ಕಾಣುತ್ತಿದ್ದವು. ಆಕಾಶದಲ್ಲಿ ನಕ್ಷತ್ರಗಳು ಕಾಣಿಸದಾದುವು ೪೧. ಕಂಸನ ವಿನಾಶವನ್ನು ಸೂಚಿಸುವುದಕ್ಕಾಗಿ ರಾತ್ರಿಯಲ್ಲಿ ಕಾಣಿಸಿಕೊಂಡ ಕಾಮನ ಬಿಲ್ಲು ಹೋಗದೆ ನಿಂತಿದೆಯೆನ್ನುವಂತೆ ಮಲ್ಲರಂಗದ ಬಾಗಿಲಿನಲ್ಲಿ ಪಂಚರತ್ನಮಯುವಾದ ತೋರಣಮಾಲೆಯು ಹೊಳೆಯುತ್ತಿದ್ದಿತು. ವ|| ಆ ಸಮಯದಲ್ಲಿ ೪೨. ಗಜರಾಜನು ಸೊಂಡಿಲಿನ ತುಂತುರುಹನಿಗಳ ಸಮೂಹವನ್ನು ಧರಿಸುವಂತೆ ಕಂಸನು ಮುತ್ತಿನ ಆಭರಣಗಳನೇಕವನ್ನು ಧರಿಸಿ ಬಂದು ಮಲ್ಲರಂಗದ ಸಮೀಪದಲ್ಲಿ ನಿಂತನು. ವ|| ಹಾಗೆ ನಿಂತು,

ಪರಿದೆಯ್ದಲುಮಡರ್ದೇಱಲು
ಮರಿದೆನೆ ನೀಟಿಲ್ದೊಂದು ಕಂಬದಗ್ರದೊಳಿರ್ದಾ
ಕರುಮಾಡಮನೇಱ ನಿಶಾ
ಚರನಿರ್ದಂ ಧವಳಲೋಲಚಾಮರಯುಗಳಂ ೪೩

ಮಣಿಕಾಂಚೀಮಣಿ ಪಾರಿಹಾರ್ಯಮಣಿ ಮಂಜೀರಸ್ವನಂ ಪೊಣ್ಮಲೀ
ಕ್ಷಣಕಾಂತಿ ಸ್ಮಿತಕಾಂತಿ ಮಂಗಳವಿಭೂಷಾಕಾಂತಿ ತಳ್ಪೊಯ್ಯೆ ತತ್
ಕ್ಷಣಮಂತಾ ಕ್ಷಣದಾವನೀಕ್ಷಣಸುಖಂ ಕೈಗಣ್ಮೆ ನಿಶ್ರೇಣಿಯಿಂ
ಗಣಿಕಾಶ್ರೇಣಿಯುಮೇಱ ನಿಂದುದು ತವಂಗಶ್ರೇಣಿಯಂ ಲೀಲೆಯಿಂ ೪೪

ಮೃಗಭೂಕುಂಕುಮಚಂದನದ್ರವವಿಲೇಪಂ ನೂತನಾನರ್ಘ್ಯರ
ತ್ನಗಣಾಲಂಕರಣಂ ವಿಚಿತ್ರವಸನಂ ಚೆಲ್ವಾಗೆ ದೇವೇಂದ್ರಲೀ
ಲೆಗಳಿಂ ಕ್ಷತ್ರಿಯಪುತ್ರಮಂಡಳಿಕದಂಡಾಧೀಶಸಾಮಂತಕೋ
ಟಿಗಳಂದೇಱ ತವಂಗಕೋಟಿಗಳ ಕೂಟವ್ರಾತದೊಳ್ ರಂಜಿಕುಂ ೪೫

ವ।। ಅನಂತರಂ

ಇಳೆಯಂ ಪಾತಾಳಮೂಲಕ್ಕಿಳಿಪುವ ಕಡಲಂ ಪೀರ್ವ[1]ಗೋತ್ರಾದ್ರಿಯಂ ಕೀ
ಟ್ಟಳವಿಂ ದಂಷ್ಟ್ರಾಕರಾಳಭ್ರುಕುಟಕುಟಲರುಜ್ಜೃಂಭಿತತಾಮ್ರನೇತ್ರರ್
ಜಳವಾಹಾಶ್ಯಾಮದೇಹರ್ ಸಮುಚಿತಯತಿತೂರ್ಯಸ್ವನರ್ ಬಂದು ರಂಗ
ಸ್ಥಳದೊಳ್ ನಿಂದರ್ ಭುಜಾಸ್ಫಾಲನರುಚಿ ಮಿಗೆ ಚಾಣೂರಮುಖ್ಯಾದಿಮಲ್ಲರ್೪೬

೪೩. "ಓಡಿಹೋಗಿ ಸೇರುವುದಕ್ಕೂ ಅಡರಿ ಏರುವುದಕ್ಕೂ ಅಸಾಧ್ಯವೆನ್ನುವಂತೆ ಎತ್ತರವಾದ ಒಂದು ಕಂಭದ ಮೇಲಿದ್ದ ಉಪ್ಪರಿಗೆಯನ್ನು ಏರಿದ ಕಂಸನು ಬಿಳಿಯ ಚಂಚಲಚಾಮರಗಳೆರಡರಿಂದ ಬೀಸಿಸಿಕೊಳ್ಳುತ್ತ ಕುಳಿತನು. ೪೪. ರತ್ನಖಚಿತವಾದ ವಡ್ಯಾಣ, ಕೈಬಳೆ, ತೋಳಬಂದಿ, ಕಾಲುಬಳೆಗಳ ಧ್ವನಿಯು ಹರಡುತ್ತಿರಲು, ಕಣ್ಣಿನ ಕಾಂತಿ, ನಗುವಿನಕಾಂತಿ, ಮಂಗಳಾಭರಣಗಳು ಒಂದನ್ನೊಂದು ೪೪. ಮೀರಿಸುತ್ತಿರಲು ಆ ರಾತ್ರಿಯಲ್ಲಿ ಪ್ರಪಂಚ ನೋಟದ ಸುಖವು ಹೆಚ್ಚುತ್ತ ಇರಲು ವೇಶ್ಯೆಯರ ಸಾಲೂ ಏಣಿಯಿಂದ ಅಟ್ಟಣೆಗಳನ್ನೇರಿ, ಲೀಲೆಯಿಂದ ಇದ್ದಿತು. ೪೫. ಕಸ್ತೂರಿ, ಕುಂಕುಮ ಕೇಸರಿ, ಚಂದನದ್ರವವಿಲೇಪನವೂ ಹೊಸದೂ ಅನ್ಯವೂ ಆದ ರತ್ನಸಮೂಹಾಲಂಕಾರವೂ ವಿಚಿತ್ರವಸ್ತ್ರವೂ ಚೆಲುವಾಗಿರಲು ಕ್ಷತ್ರಿಯಪುತ್ರ, ಮಾಂಡಳಿಕ, ದಂಡಾಧೀಶ ಸಾಮಂತಸಮೂಹವು ಅಟ್ಟಣೆಗಳನ್ನೇರಿ ಕುಳಿತು ರಂಜಿಸುತ್ತಿದ್ದಿತು. ವ।। ಅನಂತರ ೪೬. ಭೂಮಿಯನ್ನು ಪಾತಾಳದ ಮೂಲಕ್ಕಿಳಿಸುವ, ಸಮುದ್ರವನ್ನು ಹೀರುವ, ಕುಲಪರ್ವತವನ್ನು ಕೀಳುವ ಸಾಮರ್ಥ್ಯದಿಂದ ಕೂಡಿ ಕೋರೆಹಲ್ಲುಗಳಿಂದಲೂ ವಕ್ರವಾದ ಹುಬ್ಬುಗಂಟಿನಿಂದಲೂ ಭಯಂಕರರೂ ದೊಡ್ಡದಾಗಿ ತೆರೆದ ಕೆಂಗಣ್ಣುಳ್ಳವರೂ ಮೋಡದಂತೆ ಕಪ್ಪಾದ ದೇಹವುಳ್ಳವರೂ ಹೆಜ್ಜೆಯಿಡುವುದಕ್ಕೆ ತಕ್ಕಂತೆ ತಾಳ ವಾದ್ಯ ಧ್ವನಿಯೂ ಉಳ್ಳ

---

೧. ಗೋತ್ರಾಳಿಯಂ (ಖ)

ವ।। ಆಗಳ್

ಮಣಿಮನ್ನಕ್ಷತ್ರಮಾಲಾರುಚಿನಿಚಯಮರುಚ್ಚಾಪದಿಂ ಪ್ರಸ್ಫುರದ್ಬ್ರಂ
ಹಣವಜ್ರಧ್ವಾನದಿಂದಂಕುಶಕಿರಣತಟಜ್ಜಾಲದಿಂ ದಾನಧಾರಾ
ರುಣಧಾರಾವರ್ಷದಿಂ ಕಾರ್ಮುಗಿಲೆ ಗಜದ ರೂಪಾದುದೆಂಬಂತಿಭೇಂದ್ರಂ
ರಣರಂಗದ್ವಾರದೊಳ್ ನಿಂದುದು ಪದಭರದೊಳ್ ಬಳ್ಕೆ ತತ್‌ಕ್ಷೋಣೀಚಕ್ರಂ ೪೭

ವ।। ಅನ್ನೆಗಮಿತ್ತಲ್

ಅಮರವಿರೋಧಿಯಂ ಮಡಿಪಲಾಂ ಬರವೇಟ್ಟುದೊ ಕೃಷ್ಣ ಪೇಟ್ ತ್ವದ
ಪ್ರಮಿತತಳಪ್ರಹಾರವದೆ ಸಾಲ್ಗುಮೊ ನೀಂ ಬೆಸಸೆಂದು ಯಕ್ಷಕ
ರ್ದಮರಸಚರ್ಚೆಯಿಂ ಕಪಿಶಮಾದ ಸುದರ್ಶನಮೆಂಬ ಚಕ್ರರ
ತ್ನಮೆ ತಲೆದೋಱುವಂತುದಯದೊಳ್ ಬಗೆಗೊಂಡುದು ಭಾನುಮಂಡಲಂ ೪೮

ವ।। ಆಗಳೇಕಕುಂಡಲನತ್ತಲಾ ಭಾನುಮಂಡಲಮುಮನಿತ್ತಲೀ ಕುವಲಯಾಪೀಡವೇ ತಂಡಮುಮನೊಡನೊಡನೆ ಕಂಡು

ಈ ಭಾನುಬಿಂಬಮಂ ಲೀ
ಲಾಭಕ್ಷಿಕೆಯೆಂದು ಪೊಯ್ವವೊಲ್ ನಿಳ್ಕುವ ಹ
ಸ್ತಾಭೋಗದಿನೆಸೆದತ್ತಚ
ಲಾಭಂ ತಾನೆನಿಪ ಕುವಲಯಾಪೀಡೇಭಂ ೪೯

ಚಾಣೂರನೇ ಮೊದಲಾದ ಜಟ್ಟಿಗಳು ಮಲ್ಲರಂಗಕ್ಕೆ ಬಂದು, ತೋಳನ್ನು ತಟ್ಟಿಕೊಳ್ಳುತ್ತ ನಿಂತರು. ೪೭. ವಿವಿಧ ರತ್ನಖಚಿತವಾದ ನಕ್ಷತ್ರಮಾಲೆಯ ಕಾಂತಿಸಮೂಹವೆಂಬ ಕಾಮನ ಬಿಲ್ಲಿನಿಂದಲೂ, ಪ್ರಬಲವಾದ ಘೀಂಕಾರವೆಂಬ ಸಿಡಿಲಿನಿಂದಲೂ, ಅಂಕುಶದ ಕಿರಣವೆಂಬ ಮಿಂಚಿನಿಂದಲೂ ಮದೋದಕಧಾರೆಯೆಂಬ ಅರುಣವರ್ಣದ ಮಳೆಯ ಧಾರೆಯಿಂದಲೂ ವರ್ಷಾಕಾಲದ ಮೋಡವೇ ಆನೆಯ ರೂಪವಾಗಿದೆಯೆನ್ನುವಂತೆ ಕುವಲಯಾಪೀಡಗಜೇಂದ್ರನು ಕಾಲಿಡುವ ಜೋರಿಗೆ ಭೂಮಂಡಲವು ಬಳುಕುವಂತೆ ಬಂದು ಮಲ್ಲರಂಗದ ಬಾಗಿಲಲ್ಲಿ ನಿಂತಿತು. ವ।। ಅಷ್ಟರಲ್ಲಿ ಇತ್ತಕಡೆ ೪೮. ಯಕ್ಷಕರ್ದಮ ವೆಂಬ ಗಂಧದ ಲೇಪನದಿಂದ ಕಪಿಳವರ್ಣವಾದ ಶ್ರೇಷ್ಠವಾದ ಸುದರ್ಶನ ಚಕ್ರವೇ, 'ಕೃಷ್ಣಾ! ದೇವವಿರೋಧಿಯನ್ನು ಸಾಯಿಸಲು ನಾನು ಬರಬೇಕೋ ನಿನ್ನ ಅಪ್ರಮಿತವಾದ ಅಂಗಯ್ಯ ಹೊಡೆತವೇ ಸಾಕೋ? ಹೇಳು ಎಂದು ಕೇಳುವುದಕ್ಕಾಗಿ ಬಂದಿದೆಯೋ ಎನ್ನುವಂತೆ ಸೂರ್ಯಮಂಡಲವು ಉದಯಗಿರಿಶಿಖರದಲ್ಲಿ ಉದಿಸಿ ಪ್ರಕಾಶಿಸಿತು. ವ।। ಆಗ (ಏಕ ಕುಂಡಲ) ಬಲರಾಮನು, ಅತ್ತ ಕಡೆ ಸೂರ್ಯಮಂಡಲವನ್ನೂ ಇತ್ತ ಕಡೆ ಕುವಲಯಾಪೀಡವೆಂಬ ಆನೆಯುನ್ನೂ ಒಡನೆ ನೋಡಿ, ೪೯. "ಈ ಸೂರ್ಯಮಂಡಲವನ್ನು ತಿದಿ ಎಂದುಕೊಂಡು ಗಾಳಿ ಹಾಕುವುದಕ್ಕಾಗಿ ಉದ್ದವಾದ ಸೊಂಡಿಲನ್ನು ಮೇಲೆತ್ತಿದೆಯೋ ಎಂಬಂತಿರುವ ಪರ್ವತಾಕಾಲದ ಈ ಕುವಲಯಾಪೀಡಗಜವು ಚೆನ್ನಾಗಿ ಕಾಣಿಸುತ್ತದೆ.

ಶತಪತ್ರಾಂಬಕ ನೋಡು ರೌದ್ರರಸಕುಂಭಂ ಕುಂಭಮುಚ್ಚೈಶ್ಶಿಲಾ
ಪ್ರತಿಮಾನಂ ಪ್ರತಿಮಾನಮುಗ್ರಕರವಾಲಂ ವಾಲಮುದ್ಯತ್ಸದಾ
ಗತಿವೇಗಂ ಗತಿವೇಗವೆಂದೆನಿಸಿ ನಾಗಾರಿಚ್ಛದಾಕಾರದಿಂ
ಶ್ರುತಿಗಳ್ ವಿಶ್ರುತಿ ಮೀಱಿ ಬೀಱಿದಪುದೀ ಸ್ತಂಬೇರಮಂ ಬೀರಮಂ ೫೦

ವ|| ಎಂದು ನಿಜಾನುಜಂಗೆ ತೋಱಿ ಸಗರ್ವಾವಲೋಕನನಾ ಕುವಲಯಾಪೀಡಗಜಮಂ ಕಂಡು ಗಜಾಸುರನಂ ಕಂಡ ಖಂಡಪರಶುವಿನಂತುದ್ಭುಟಾರಭಟೆಯಿಂದಾರ್ದ ಭೈ ಭೈ ಕಾರದಿಂದಾ ದ್ವಿರದದಿದಿರಂ ನಡೆಯೆ

ದಿತಿಜಾರಿಯ ಭೈಕೃತದೊಡ
ನೆ ತಗುಳ್ದುಣ್ಮಿದುದು [1]ಕೆರಳ್ದಿಭೇಂದ್ರದ ಗಳಬೃಂ
ಹಿತಮುಂ ಮದಧಾರಾಝೂ
ತ್ಕೃತಮುಂ ಮದಗಂಧವಿಚಲದಳಿಝುಂಕೃತಮಂ ೫೧

ವ|| ಆ ಪ್ರಸ್ತಾವದೊಳ್

ಅಱಿಯಟ್ಟತ್ತಟ್ಟಿ ಮುಟ್ಟತ್ತಡಿಸಿ ಪಿಡಿದುದಿಕ್ಕಿತ್ತು ಮೆಟ್ಟಿತ್ತದೌಂಕಿ
ತ್ತೆಱಗಿತ್ತೆತ್ತಿತ್ತಿಭಂ ಕೃಷ್ಣನನೆನುತಮರರ್ ಬೆರ್ಚೆ ಗೋಪಾಲಕರ್ ಬೆ
ಚ್ಚುಱೆ ದೈತ್ಯರ್ ಪೊಂಗೆ ಕೃಷ್ಣಂ ರಿಪುಕರಿಗಿನಿಸಂ ಗೆಲ್ಲವೀವಂತೆ ಪೋರ್ದಂ
ಕಿಱಿದಾನುಂ ಬೇಗದಿಂದಚ್ಯುತನ ತೆಱದಿನಾವಂ ವಿನೋದೈಕಶೀಲಂ ೫೨

೫೦. ಕಮಲನೇತ್ರಾ, ನೋಡು, ಇದರ ಕುಂಭಸ್ಥಳವು ರೌದ್ರರಸಪೂರ್ಣವಾದ ದೊಡ್ಡ ಕೊಡವಾಗಿದೆ. ಈ ಕುಂಭಸ್ಥಳವು ಉನ್ನತವಾದ ಬಂಡೆಯಂತಿದೆ. ಬಾಲವು ಉಗ್ರವಾದ ಕತ್ತಿಯಾಗಿದೆ. ನಡಿಗೆಯು ಬಿರುಗಾಳಿಯ ವೇಗವುಳ್ಳದ್ದು, ಕಿವಿಗಳು ಗರುಡನ ರೆಕ್ಕೆಯಂತಿವೆ. ಈ ಆನೆ ತನ್ನ ಪರಾಕ್ರಮವನ್ನು ಪ್ರಸಿದ್ಧಿ ಮೀರುವಂತೆ ಬೀರುತ್ತಿದೆ. ವ|| ಎಂದು ತಮ್ಮನಿಗೆ ತೋರಿಸಿದನು. ಗರ್ವದಿಂದ ನೋಡುತ್ತಿದ್ದ ಆ ಕುವಲಯಾಪೀಡಗಜವನ್ನು ಕೃಷ್ಣನು ಕಂಡು, ಗಜಾಸುರನನ್ನು ಕಂಡ ಈಶ್ವರನಂತೆ ಅದ್ಭುತಾರುಭಟೆಯಿಂದ ಗರ್ಜಿಸಿ, ಭೈಭೈಕಾರಮಾಡುತ್ತಾ ಆನೆಯ ಎದಿರಿಗೆ ನಡೆದನು. ೫೧. ಕೃಷ್ಣನ ಭೈಕಾರದೊಡನೆ, ರೇಗಿ ಅದನ್ನು ಪ್ರತಿಭಟಿಸುವಂತೆ ಮಾಡಿದ ಆ ಗಜೇಂದ್ರನ ಕಂಠ ಘೀಂಕಾರವೂ ಮದಧಾರೆಯ ಝೂತ್ಕಾರವೂ ಮದಗಂಧಕ್ಕೆ ಮುತ್ತುವ ತುಂಬಿಗಳ ಝೇಂಕಾರವೂ ಹೆಚ್ಚಾಯಿತು. ವ|| ಆ ಪ್ರಸ್ತಾವದಲ್ಲಿ ೫೨. "ಆನೆಯು ಕೃಷ್ಣನನ್ನು ಅಟ್ಟಿಸಿಕೊಂಡೋಡಿತು, ಅಟ್ಟಿ ಮುಟ್ಟಿತು, ಗಟ್ಟಿಯಾಗಿ ಹಿಡಿದು ಹೊಡೆಯಿತು. ಮೆಟ್ಟಿತು, ಅದುಮಿತು, ಮೇಲೆ ಬಿದ್ದಿತು. ಎತ್ತಿತು." ಎನ್ನುತ್ತ ದೇವತೆಗಳು ಬೆಚ್ಚಿದರು; ಗೋಪಾಲಕರು ಹೆದರಿದರು. ದೈತ್ಯರು ಉಬ್ಬಿದರು. ಹಾಗಾಗುವಂತೆ ಕೃಷ್ಣನು ಸ್ವಲ್ಪಕಾಲ ಆ ಶತ್ರುಗಜಕ್ಕೆ ಜಯವನ್ನುಂಟು ಮಾಡುವವನಂತೆ ಹೋರಾಡಿದನು. ಕೃಷ್ಣನೋವಿನಂತೆ ದೈತ್ಯಶೀಲನಾವನಿರುವನು!

---

೧. ಕಳರ್ದಿಭೇಂದ್ರದ (ಕಗ)

ಸ್ತಂಬೇರಮದೊಳ್ ಪೊಣರ್ದಂ
ಕೊಂಬಿನ ವಾಲಧಿಯ ಕರದ ಪರದೆಣ್ಬತ್ತೆಂ
ಟೆಂಬ ವಧಕ್ಕೆಡೆಗುಡುತುಮ
ವಂ ಒಂಚಿಸುತಂ ಸಮಾನಬಲನೆನೆ ಕೃಷ್ಣಂ ೫೩

ವ॥ ಅಂತು ಪೊಣರ್ದು

ಹರಿ ಸೋಲ್ತಂ ಕರಿಗೆಂಬಿನಂ ಬವರದಿಂ ಗೆಲ್ವಂತೆ ಪೋರ್ದಾನೆಗಂ
ಹರಿಗಂ ನೋಡೆ ಸಮಾನಮೆಂಬಿನೆಗಮಂತೊಂದೊಪ್ಪದಿಂ ಪೋರ್ದನಂ
ತರಮೋಹೋ ಹರಿ ಗೆಲ್ದನೀ ಗಜಮನೆಂದಿಂದ್ರಾದಿಗಳ್ ಕೀರ್ತಿಸು
ತ್ತಿರೆ ಮೇಲ್ವೊಟ್ಟೆನೊಳಂದು ತೋಱಿ ಮೆಱೆದ ಕೃಷ್ಣಂ ಬಲಾಟೋಪಮಂ

ವ॥ ಅಲ್ಲಿಂ ಬಟಿಯಂ

ರದನಾಗ್ರದ್ವಂದ್ವಮಂ ಕೈದುಡುಕಿ ಪಿಡಿದುರೋಭಾಗಮಂ ಪಾದದಿಂ ಪೋ
ಗೊದೆಯುತ್ತುಂ ಕೋಟ್ಕಿಳಂ ಚಿಕ್ಕನೆ ಕಿಟ್ ರದನದ್ವಂದ್ವಮೆಂಬೀ ಗದಾದಂ
ಡದಿನುರ್ಚೀಡಾಡಿದಂ ಪೋಗವಸಣಿಗೆಯನೀ ಕೃಷ್ಣನೆಂಬಂತುರುಳ್ದಿ
ರ್ದುದನುಗ್ರೇಭೇಂದ್ರಮಂ ತದ್ರದನಯುಗಳದಿಂ ಮೋದಿ ಕೊಂದಂ ಮುಕುಂದಂ ೫೫

ವ॥ ಆಗಳಾ ಗಜದ ಪೋರ್ಕುಟಿಯಿನವಯವದಳಲ್ಲಲ್ಲಿಗಳವಟ್ಟ ರದನವಿಘಟ್ಟನ ರೇಖಾನಿಕಾಯಮುಂ ಮೇಳಂಗೊಂಡ ಕುಂಭಸ್ಥಲದ ಸಾಂದ್ರಸಿಂದೂರರೇಣುಪ್ರಸರಮುಂ ಪಗಿಲ್ತಿರ್ದ ಕಲಿಲಮದಸಲಿಲಮುಂ ಸಿಂಪಿಸಿರ್ದ ದಂತೋತ್ಪಾಟನೋಚ್ಚಲದರುಣಬಿಂದುಸಂದೋಹಮುಂ

೫೩. ಸ್ವಲ್ಪಕಾಲ, ಕೃಷ್ಣನು ಆನೆಗೆ ಸಮಬಲನೆನ್ನುವಂತೆ ಅದರ ದಂತದ ಬಾಲದ ಸೊಂಡಲಿನ ಕಾಲಿನ ಎಂಭತ್ತೆಂಟು ಬಗೆಯ ಹೊಡೆತಗಳಿಗೆ ಅವಕಾಶಕೊಡುತ್ತ ವಂಚಿಸುತ್ತ ಯುದ್ಧಮಾಡಿದನು. ವ॥ ಹಾಗೆ ಯುದ್ಧಮಾಡಿ ೫೪. ಕೃಷ್ಣನು ಯುದ್ಧದಲ್ಲಿ ಆನೆಗೆ ಸೋತನು ಎನ್ನುವಂತೆಯೂ ಗೆಲ್ಲುವಂತೆ ಯುದ್ಧಮಾಡಿ ಆನೆಗೂ ಹರಿಗೂ ಸಮ ಯುದ್ಧವೆನ್ನುವಂತೆಯೂ ಸ್ವಲ್ಪಸ್ವಲ್ಪಕಾಲ ವಿನೋದಕ್ಕಾಗಿ ಹೋರಾಡುತ್ತಿದ್ದು ಕಡೆಯಲ್ಲಿ ಓಹೋ ಕೃಷ್ಣನು ಈ ಆನೆಯನ್ನು ಗೆದ್ದನು ಎಂದು ಇಂದ್ರಾದಿಗಳು ಕೀರ್ತಿಸುತ್ತಿರಲಾಗಿ ತನ್ನ ಬಲಾಡಂಬರವನ್ನು ತೋರಿಸಿ ಪ್ರಕಾಶಿಸಿದನು. ವ॥ ಆಮೇಲೆ ೫೫. ಕೃಷ್ಣನು ದಂತಗಳೆರಡರ ತುದಿಯನ್ನೂ ತಟ್ಟನೆ ಗಟ್ಟಿಯಾಗಿ ಹಿಡಿದುಕೊಂಡು, ಎದೆಯನ್ನು ಕಾಲಿನಿಂದ ಹಿಂದೆ ಹೋಗುವಂತೆ ಒದೆದು, ದಂತಗಳನ್ನು ಬೇಗನೆ ಕಿತ್ತು, ದಂತಗಳೆಂಬ ಗದೆಗಳಿಗಿದ್ದ ಗವಸುಗಳನ್ನು ಕಳಚಿ ಬಿಸಾಡಿದನು ಎನ್ನುವಂತೆ ಹಿಂದಕ್ಕುರುಳಿದ ಆನೆಯನ್ನು ಅದರ ದಂತಗಳಿಂದಲೇ ಹೊಡೆದು ಕೊಂದನು. ವ॥ ಆಗ ಆ ಆನೆಯೊಡನೆ ಯುದ್ಧ ಮಾಡಿದುದರಿಂದ ಕೃಷ್ಣನ ಅವಯವಗಳಲ್ಲಿ ಅಲ್ಲಲ್ಲಿ ಬಿದ್ದ ಆನೆಯ ದಂತದಿಂದಾದ ಗೀರುಗಳೂ ಬತ್ತಿದ ಕುಂಭಸ್ಥಳದ ಸಿಂಧೂರರೇಣುಗಳ ಹರವೂ, ಅಂಟಿಕೊಂಡ ಹೆಚ್ಚಾದ ಮದಜಲವೂ ದಂತವನ್ನು ಕಿತ್ತೆಡೆಯಿಂದ ಹಾರಿ ಚಿಮುಕಿಸಿದಂತಿರುವ ರಕ್ತವೂ

ವಿರಳಮಾದ ಸಿರಿಗಂದದಣ್ಪುಂ ನಸುಮಱೆಯಾದ ಪೂದುಡುಗೆಯುಂ ಬೇಱೊಂದು ಚೆಲ್ವನವಟೈಸಿ ವೀರರಸಕ್ಕಾಗರಮಾಗೆ ತಾನುಮಗ್ರಜನುಂ ರದನದಂಡಮಂ ಭುಜಾದಂಡದೊಳಮರೆ ಪಿಡಿದು ನಡೆಗೊಂಡು

ಪ್ರತಿಮಲ್ಲರ್ ಗಿರಿಕಲ್ಪನೆಂದಿತರರೆಲ್ಲರ್ ಬಾಲನೆಂದಂಗನಾ
ತತಿ ಪುಷ್ಪಾಯುಧನೆಂದು ಗೋಪನಿವಹಂ ಸಾಮಾನ್ಯನೆಂದಾಕುಲಾ
ಕೃತಿ ಕಂಸಂ ಲಯಕಾಲನೆಂದು ದಿವಿಜರ್ ವಿಶ್ವಾತ್ಮನೆಂದೀಕ್ಷಿಸಲ್
ದಿತಿಜಾರಾತಿ ವಿಚಿತ್ರಮೂರ್ತಿ ಪುಗುತಂದಂ ಮಲ್ಲರಂಗಾಗ್ರಮಂ ೫೬

ವ|| ಅಂತು ಪೊಕ್ಕು ಸಕಲಜ್ಞಂ ಗಜೋನ್ಮೀಲನದಿಂ ನಿರೀಕ್ಷಿಸಿ

ನೆರೆದುಚ್ಚಸ್ಥಳದೊಳ್ ಜನಂಗಳಿರೆ ನೀಚಸ್ಥಾನದೊಳ್ ಭೀತಿಯಿಂ
ಕೊರಗಿರ್ದಾ ವಸುದೇವದೇವಕಿಗಳಂ ಕಂಡಬ್ಜನೇತ್ರಂ ನಿಜಾಂ
ತರದೊಳ್ ಪೂಣ್ದನದೊಂದನೀ ರಿಪುವನುಚ್ಚಸ್ಥಾನದಿಂದಿಕ್ಕುವೆಂ
ಧರೆಗೆಂದೀಗಳ್ ಮಾಟ್ಪೆನುನ್ನತಿಯನೀ ತಾತಂಗಮೀ ಮಾತೆಗಂ ೫೭

ವ|| ಆಗಳಾ ವಿಜಯತೇಜೋವಿಭವಸುಭಗರಪ್ಪ ನಿಜತನೂಭವರೊಳ್ ದೇವಕೀ ದೇವಿಗಪೂರ್ವದರ್ಶನಮಾಗೆ

ಪರಿದಾಲಿಂಗಿಸುವೆತ್ತಿಕೊಳ್ವ ಬಗೆ ಪುಟ್ಟಲ್ ಪುಟ್ಟದೌತ್ಸುಕ್ಯದಿಂ
ತೊರೆವನ್ನಂ ಕುಚಯುಗ್ಮಮಂದೆ ಸುತರಂ ಪೆತ್ತಂದದಿಂ ಪೆತ್ತಳಾ
ದರಮಂ ಕಾಣ್ಬುದುಮಂದಪತ್ಯರನಶೇಷಸ್ತುತ್ಯರಂ ಸೇವ್ಯಸ
ತ್ಯರನಸ್ತಾಖಿಲದೈತ್ಯರುಂ ಯದುಕುಲಾಬ್ಜಾದಿತ್ಯರಂ ನಿತ್ಯರಂ ೫೮

೫೬. ರಾಕ್ಷಸಾರಿಯಾದ ವಿಚಿತ್ರಮೂರ್ತಿ ಕೃಷ್ಣನನ್ನು ಎದಿರಾಳಿಗಳಾದ ಜಟ್ಟಿಗಳು ಗಿರಿಸಮಾನರೆಂದೂ, ಇತರ ಸಾಮಾನ್ಯರು ಬಾಲನೆಂದೂ, ಅಂಗನೆಯರು ಕಾಮನೆಂದೂ, ಗೋಪಾಲರು ತಮ್ಮಂತಹವನೆಂದೂ, ಚಿಂತಾಕ್ರಾಂತನಾದ ಕಂಸನು ಪ್ರಳಯಕಾಲದ ಯಮನೆಂದೂ, ದೇವತೆಗಳು ವಿಶ್ವಾತ್ಮನೆಂದೂ ತಿಳಿದು, ನೋಡುತ್ತಿರುವಾಗ ಅವನು ಮಲ್ಲರಂಗಾಗ್ರವನ್ನು ಪ್ರವೇಶಿಸಿದನು. ವ|| ಹಾಗೆ ಪ್ರವೇಶಿಸಿ, ಸರ್ವಜ್ಞನಾದ ಆ ಕಮಲನೇತ್ರನು ಗಜನಿಮೀಲಿಕೆಯಿಂದ ನೋಡಿ ೫೭. ಮೇಲೆ ಎತ್ತರದಲ್ಲಿ ಜನಗಳೂ ಕೆಳಗಡೆಯಲ್ಲಿ ಭೀತಿಯಿಂದ ಕೊರಗುತ್ತ ವಸುದೇವ ದೇವಕಿಯರೂ ಇರುವುದನ್ನು ಕಂಡು, "ಈ ಶತ್ರುವಾದ ಕಂಸನನ್ನು ಉನ್ನತ ಸ್ಥಾನದಿಂದ ಭೂಮಿಗೆ ಬೀಳಿಸುತ್ತೇನೆ. ಈ ತಾಯಿ ತಂದೆಗಳಿಗೆ ಈಗಲೇ ಉನ್ನತಿಯನ್ನೂ ಮಹಿಮೆಯನ್ನೂ ಉಂಟುಮಾಡುತ್ತೇನೆ" ಎಂದು ಒಂದು ಪ್ರತಿಜ್ಞೆಯನ್ನು ಮಾಡಿದನು. ವ|| ಆಗ ಆ ವಿಜಯದಿಂದುಂಟಾದ ತೇಜಸ್ಸಿನ ಆಧಿಕ್ಯದಿಂದ ಅತಿಸುಂದರರಾದ ತಮ್ಮ ಮಕ್ಕಳು ದೇವಕಿಗೆ ಅಪೂರ್ವವಾಗಿ ಕಾಣುತ್ತಿದ್ದರು. ೫೮. ಸಮಸ್ತರಿಂದಲೂ ಸ್ತುತ್ಯರೂ, ಸತ್ಯನಿಷ್ಠರೂ, ಸಕಲದೈತ್ಯನಾಶಕರೂ, ಯದುಕುಲ ಕಮಲಸೂರ್ಯರೂ ನಿತ್ಯರೂ ಆದ ಆ ಮಕ್ಕಳನ್ನು ಕಂಡುದರಿಂದ ದೇವಕಿಗೆ ಓಡಿಹೋಗಿ, ಅಪ್ಪಿಕೊಳ್ಳುವ ಮನಸ್ಸಾಯಿತು; ವಾತ್ಸಲ್ಯದಿಂದ ಸ್ತನಗಳಲ್ಲಿ ಹಾಲಿಳಿಯಿತು. ಅಂದೇ ಆ

ವII ಅನ್ನೆಗಂ ಮಲ್ಲರಂಗಕ್ಕವತರಿಸಿ ನಿಂದು ವಸುದೇವನಂದನರ್ ಕರುಮಾಡದ ಮೇಲಿರ್ದಾ ಭೋಜರಾಜನನುತ್ತಾನಿತಾನನಾಂಭೋಜರ್ ಉಪಾಲಂಭಸಂಭಾಷಣಸ್ಮಿತಚತುರರುಮಾಗಿ ನೋಡಿ

ಗರುಡಂಗಮೆಯ್ದಲರಿದೆನೆ
ಕರುಮಾಡವಿದುದ್ದಮಾದೇಕಸ್ತಂಭೋ
ಪರಿನಿರ್ಮಿತಮಿದ[1]ನೆಮ್ಮ
ನ್ನರ ದಿಟ್ಟಿಗಳೆಯ್ದುವೆಂತು ಬಣ್ಣಿಪೆವರಸಾ ೫೯

ಪೂತನೆ ನಂಜನೂಡೆ ಶಕಟಂ ಪರಿದೊತ್ತೆ ಖರಂ ಖುರಾಗ್ರದಿಂ
ಘಾತಿಸೆ ಪುಂಗವಂ ಮಲೆದು ಮಾರ್ಕೊಳೆ ಕೇಶಿ ಕಡಂಗಿ ನುಂಗೆ ಮು
ನ್ನಾತೆಱದಿಂದೆ ಪಿಂಗಿದುವು ನಿನ್ನ ಪ್ರಸಾದದೆ ಕಂಸ ನಿನ್ನ ಜಾ
ಮಾತೃಗಳಿಂದೊಡಾವ ದುರಿತಂಗಳುಮೆಮ್ಮೊಳೆ[2]ಪೊರ್ದಲಂಜುಗುಂ ೬೦

ಆರೊಡನಕ್ಕೆ ಪೋರ್ದು ಭವದೀಯಗಜಂ[3]ಹತಮಾದುದಿಂದು ಚಿಂ
ತಾರಯವೇಕದರ್ಕದಱ ತೋಲೊಳಮೆಲ್ವಿನೊಳಪ್ಪುದಿಲ್ಲ ತ
ತ್ಸಾರಧನಂಗಳೀಯೆರಡೆ ದಂತಮಿವಂ ಪಿಡಿ ಕಂಸ ನಿನ್ನ ಭಂ
ಡಾರದೊಳಿಕ್ಕಿಸೆಂದು ಬಿಸುಟರ್ ನಿಜಹಸ್ತದ ದಂತಯುಗ್ಮಮಂ ೬೧

ಮಕ್ಕಳನ್ನು ಪಡೆದಂತೆ ಆನಂದವನ್ನು ಪಡೆದಳು. ವII ಅಷ್ಟರಲ್ಲಿ ಮಲ್ಲರಂಗಕ್ಕೆ ಬಂದು ನಿಂತ ಬಲರಾಮ ಕೃಷ್ಣರು, ಉನ್ನತವಾದ ಉಪ್ಪರಿಗೆಯ ಮೇಲಿದ್ದ ಆ ಕಂಸನನ್ನು ನಿಂದಿಸಿ ಮಾತನಾಡುವುದರಲ್ಲಿ ಇಷ್ಟವುಳ್ಳವರಾಗಿ ಕಿರುನಗು ನಗುತ್ತಾ ಮೇಲೆತ್ತಿದ ಮುಖಕಮಲವುಳ್ಳವರಾಗಿ ನೋಡಿದರು. ೫೯. "ಅರಸಾ, ಒಂದೇ ಕಂಭದ ಮೇಲೆ ನಿರ್ಮಿತವಾಗಿ ಎತ್ತರವಾಗಿರುವ ಈ ಉಪ್ಪರಿಗೆಯು ಗರುಡನಿಗೂ ಬರುವುದಕ್ಕೆ ಅಸಾಧ್ಯವೆನ್ನುವಷ್ಟು ಉನ್ನತವಾಗಿದೆ. ನಮ್ಮಂತಹವರ ದೃಷ್ಟಿಗಳೂ ಅಲ್ಲಿಗೆ ಬರಲಾರವು ಅದನ್ನು ನಾವು ಹೇಗೆತಾನೆ ವರ್ಣಿಸುವೆವು?! ೬೦. ಕಂಸಾ, ನಿನ್ನ ಅನುಗ್ರಹದಿಂದ ಪೂತನೆ ವಿಷವನ್ನುಣಿಸಿದ, ಶಕಟನ ಮೇಲೆ ಓಡಿ ಖರಾಸುರನೂ, ಬಿದ್ದು ಅದುಮಿದ ಗೊರಸಿನ ತುದಿಯಿಂದ ಹೊಡೆದ, ವೃಷಭಾಸುರನು ಗರ್ವದಿಂದ ಪ್ರತಿಭಟಿಸಿದ, ಕೇಶಿಯು ಉತ್ಸಾಹದಿಂದ ನುಂಗಿದ ಮಿಂಚಿನ ಆ ಪ್ರಾಣಾಪಾಯಗಳೆಲ್ಲವೂ ತಪ್ಪಿಹೋದವು. ಮಾವಾ! ನಿನ್ನ ಸೋದರಳಿಯಂದಿರೆಂದ ಬಳಿಕ ಯಾವ ಕೇಡುಗಳೂ ಪಾಪಗಳೂ ನಮ್ಮ ಹತ್ತಿರ ಬರಲಂಜುವುವು. ೬೧. ಕಂಸಾ, ಯಾರೊಡನೆಯೋ, ನಿನ್ನ ಆನೆಯು ಹೋರಾಡಿ ಇಂದು ಹತವಾಯಿತು. ಅದಕ್ಕಾಗಿ ಹೆಚ್ಚಾಗಿ ಚಿಂತೆಬೇಡ, ಆಗಲಿ ಅದರ ಚರ್ಮದಿಂದಲೂ ಎಲುಬಿನಿಂದಲೂ ಆಗಬೇಕಾದುದೇನೂ ಇಲ್ಲ. ಅದರ ಸಾರಧನಗಳೆಂದರೆ ಈ ಎರಡು ದಂತಗಳೇ. ಇವನ್ನು ತೆಗೆದುಕೋ, ಹಿಡಿ. ನಿನ್ನ ಭಂಡಾರದಲ್ಲಿ ಇಡಿಸು" ಎಂದು ತಮ್ಮ

೧. ನೆಮ್ಮೀನರ (ಖ) ೨. ಪೊರ್ದವಂಜುಗುಂ (ಕಖಗ) ೩. ಹತಮಾದುದೀಗ (ಕಗ)

ವ|| ಅದಂ ಕಂಡು ಕಟ್ಟೇವಮುಂ ಕಡುಮುಳಿಸುಮೊಡವಳೆಯೆ ಕಂಗನೆ ಕನಲ್ದ ಕಂಸ ನಿಂಗಿತಮನಱೆದು ಪೂರ್ವಸೂಚನಾಕ್ರದಿನೆೞ್ದು ಚಾಣೂರಮುಷ್ಟಿಕರ್ ಕೃಷ್ಣರಾಮರೊಳ್ ಪೊಣರಲೆಂದು ಭುಜಾಸ್ಫಾಲನಂಗೆಯ್ವುದುಮಾ ನಿನಾದದೊಡನೆ

ಉರಗರ್ ಜೀರೇಟಿ ಪಾತಾಳದೊಳಖಿಳದಿಶಾಚಕ್ರಮುಂ ಗೆಲ್ಲವಾಱು<br>
ತ್ತಿರೆ ಪೊಯ್ದತ್ತಬ್ಧಿಯುಂಭೋರವಮೊಗೆಯೆ ಪಳಂಚಿತ್ತು ನಕ್ಷತ್ರಮಾರ್ಗಾಂ<br>
ತರಮಂ ಬೆಂಡೇೞ್ವಿನಂ ಪೋಗೊದೆದುದು ದಿವಮುಂ ಸ್ಫಾರಪೂತ್ಕಾರಶಂಕಾ<br>
ಭರಲೋಕಂ ರಾಮಕೃಷ್ಣಪ್ರಬಳತರಭುಜಾಸ್ಫಾಲನಾಭೀಳನಾದಂ ೬೨

ವ|| ಅಂತು ಭುಜಾಸ್ಫಾಲನಂಗೆಯ್ದು ಲಲಿತವಲ್ಗನಾವಷ್ಟಂಭದಿಂ ಮುಷ್ಟಿಕನೊಳ್ ಮುಸಲ ಪಾಣಿಯುಂ, ಚಾಣೂರನೊಳ್ ಚಕ್ರಪಾಣಿಯುಂ ಪೊಣರೆ

ಬಳವೆಳವಣ್ಮು ಕಾಯ್ಪೊವಜೆ ಬಿನ್ನಣಮೆಂಬಿವು ಪೊೞ್ತಿನಲ್ಲಿ ಕೈ<br>
ಕೊಳೆ ವನವಹ್ನಿಯಿಂ ಬಿದಿರ ಗಂಟೊಡೆವಂತೆ ಭಟಚ್ಚಟಸ್ವನಂ<br>
ಬಳೆದುದು ಯುದ್ಧದೊಳ್ ಘುಮುಘುಮುಧ್ವನಿ ಪೊಣ್ಮಿದುದುಣ್ಮಿತಾ ಸಭಾ<br>
ಕಳಕಳನಾದಮಾದುದುಲಿವಾ ಪ್ರತಿಹಾರರುಘೇಯುಘೇರವಂ ೬೩

ಧರೆಯಂ ಪೊತ್ತಿರ್ದ ಶೇಷಂ ಸುಗಿಯೆ ಭಯದಿನೋರೊರ್ವರಂ ತಾಗುವೋರೊ<br>
ರ್ವರನಾಟಂದೊತ್ತುವೋರೊರ್ವರನುರವಣೆಯಿಂದಿಕ್ಕುವೋರೊರ್ವರಂ ಚೊ<br>
ಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳಾ ವೇಗವಾ ಕೋಪವಾ ಮ<br>
ಚ್ಚರವಾ ಬಲ್ಪಾ ಪೊಡರ್ಪುರ್ವಿಗೆಯಣಕಮಗುರ್ವದ್ಭುತಂ ದುರ್ನಿವಾರಂ ೬೪

ಕಯ್ಯಲ್ಲಿದ್ದ ದಂತಗಳೆರಡನ್ನೂ ಅವನ ಮೇಲೆ ಬಿಸಾಡಿದರು. ವ|| ಅದನ್ನು ಕಂಡು ಹೆಚ್ಚಾದ ವ್ಯಥೆ ಮತ್ಸರ ಕೋಪಗಳು ಒಡನೆ ಬೆಳೆಯಲು ಅತಿಯಾಗಿ ರೇಗಿದ ಕಂಸನ ಇಂಗಿತವನ್ನರಿತು ಪೂರ್ವಸೂಚನಾಕ್ರಮದಿಂದ ಎದ್ದ ಚಾಣೂರ ಮುಷ್ಟಿಕರೆಂಬ ಜಟ್ಟಿಗಳು ಕೃಷ್ಣ ಬಲರಾಮರೊಡನೆ ಕಾಳಗಮಾಡಲು ತೋಳನ್ನು ತಟ್ಟಿಕೊಂಡರು. ಆ ಶಬ್ದದೊಡನೆ ೬೨. ಪಾತಾಳದಲ್ಲಿ ನಾಗರು ಕಿರುಚಿದರು; ದಿಙ್ಮಂಡಲವೆಲ್ಲ ಜಯವನ್ನು ನಿರೀಕ್ಷಿಸುತ್ತಿದ್ದಿತು. ರಾಮಕೃಷ್ಣರ ಪ್ರಬಲತರವಾದ ತೋಳನ್ನು ತಟ್ಟಿಕೊಳ್ಳುವುದರಿಂದಾದ ಭಯಂಕರವಾದ ಶಬ್ದವು ಲೋಕಕ್ಕೆ ಭೂರಿಪೂತ್ಕಾರವೆಂಬ ಶಂಕೆಯನ್ನು ತುಂಬಿ, ಭೋರೆಂಬ ಶಬ್ದವುಂಟಾಗುವಂತೆ ಸಮುದ್ರವನ್ನು ದೂರ ಹೊಡೆಯಿತು, ನಕ್ಷತ್ರಮಾರ್ಗವು ಬೆಂಡಾಗುವಂತೆ ತಾಕಿತು. ಸ್ವರ್ಗವನ್ನು ಹೋಗುವಂತೆ ಒದೆಯಿತು. ವ|| ಹಾಗೆ ಭುಜವನ್ನು ತಟ್ಟಿಕೊಂಡು ಲಲಿತವಾಗಿ ನೆಗೆದು ಗರ್ವದಿಂದಲೂ ಆತ್ಮವಿಶ್ವಾಸದಿಂದಲೂ ಮುಷ್ಟಿಕ ನೊಡನೆ ಬಲರಾಮನೂ ಚಾಣೂರನೊಡನೆ ಕೃಷ್ಣನೂ ಕಾಳಗವಾಡಿದರು. ೬೩. ಆ ಪ್ರಾತಃಕಾಲದಲ್ಲಿ ಬಲ ಸಾಮರ್ಥ್ಯ ಪರಾಕ್ರಮ ಶೌರ್ಯ ಓಜೆ ವಿಜ್ಞಾನ ಎಂಬಿವು ಒದಗಿರಲು ಆ ಯುದ್ಧದಲ್ಲಿ ಕಾಡುಕಿಚ್ಚಿನಿಂದ ಬಿದಿರಿನ ಗಂಟು ಒಡೆಯುವಂತೆ ಭಟರ ಛಟಚ್ಛಟ, ಠಳ್ ಠಳ್, ಘುಮುಘುಮು ಧ್ವನಿಯು ಹೆಚ್ಚಿತು. ಆ ಸಭೆಯಲ್ಲಿ ಕಲ ಕಲನಾದವೂ ದ್ವಾರಪಾಲಕರ ಉಘೇ ಉಘೇ ಎಂಬ ಧ್ವನಿಯೂ ಹೊಮ್ಮಿತು. ೬೪. ಭೂಮಿಯನ್ನು ಹೊತ್ತುಕೊಂಡಿರುವ ಆದಿಶೇಷನು ಭಯದಿಂದ ನಡುಗುತ್ತಿರುವಲ್ಲಿ,

ವ॥ ಅಲ್ಲಿ

ಪೊಣರ್ದೆಕ್ಕೆಕ್ಕೆಯಿನಿಕ್ಕುವಿಕ್ಕಿ ಜವದಿಂದಾರ್ದೇಱುತುಂ ಘರ್ಮವಾಃ
ಕಣಮಂ ರಂಗದ ಧೂಳಿಯಿಂ ತಡೆದು ಮತ್ತಂ ಪೋರ್ವ ಪೋರ್ದಾರ್ದು ಬಿ
ನ್ನಣಮಂ ಕೊಳ್ವ ಕೊಳಲ್ಕೆ ತಪ್ಪಿದುದು ಮಾಣೆಂಬೇಱ್ಗೆಯಿಂ ತಂದುದೀ
ಕ್ಷಣ ಕೌತೂಹಲಮಂ ಸಭಾವಳಿಗೆ ಯುದ್ಧಂ ಕೃಷ್ಣಚಾಣೂರರಾ ೬೫

ಒಂದೊಂದಾಶ್ಚರ್ಯಮಂ ಮಾನುಷಬಲದೊಳೆ ತೋರ್ಪಟ್ಟೆಯಿಂ ಕಣ್ಗೆಕೆಂಪಂ
ತಂದಂಗಕ್ಕೆಯ್ದೆ ಘರ್ಮಾಂಬುವನೊಡರಿಸಿ ಕೊಂಡಾಡಿ ಚಾಣೂರನೊಳ್ ಪೋ
ರ್ದಂ ದೈತ್ಯಧ್ವಂಸಿಯೆಂತುಂ ತ್ರಿಜಗದುದಯನಾಶಂಗಳಾತ್ಮೀಯಶಕ್ತಿ
ಸ್ಪಂದಾಸ್ಪಂದಗಳೆಂಬಚ್ಯುತನ ಭುಜಬಲಕ್ಕಂತದೊಂದಾವ ಲೆಕ್ಕಂ ೬೬

ಉಪಮಾತೀತಮೆನಲ್ ಜವಕ್ಕೆ ಜವವಣ್ಮಿಂಗಣ್ಮು ಬಲ್ಪಿಂಗೆ ಬ
ಲ್ಪು ಪೊಡರ್ಪಿಂಗೆ ಪೊಡರ್ಪು ರೌದ್ರತೆಗೆ ರೌದ್ರತ್ವಂ ಮಿಗಿಲ್ ಕಾಣಲಾ
ದಪುದೀ ಕೃಷ್ಣನೊಳಿಂ ಗೆಲಲ್ಕಱಿಯನೀ ಚಾಣೂರನೆಂದಿತ್ತ ಬಾ
ಜಿಪುದಂ ಮಾಣ್ದಿರೆ ಶಂಖತೂರ್ಯಮೆಸೆದತ್ತತ್ತಿಂದ್ರತೂರ್ಯಸ್ವನಂ ೬೭

ಒಬ್ಬರನ್ನೊಬ್ಬರು ತಾಕುವ, ಪ್ರತಿಭಟಿಸಿ ಒತ್ತುವ, ರೇಗಿ ಹೊಡೆಯುವ, ಕುತ್ತಿಗೆಯನ್ನು ಅಮುಕಿ ಹಿಡಿಯುವ, ಹಾಸ್ಯಮಾಡುವ, ಸೋಲಿಸುವ ಸಂದರ್ಭದಲ್ಲಿ ಕಾಣಿಸಿದ ಆ ವೇಗವೂ ಆ ಕೋಪವೂ ಆ ಮತ್ಸರವೂ ಆ ಬಲವೂ ಪ್ರತಿಷ್ಠೆಯೂ ಆ ಉತ್ಸಾಹವೂ ಪರಾಕ್ರಮವೂ ಭೂಮಿಗೇ ಕುಚೋದ್ಯಕರ, ಭಯಂಕರ; ಅದ್ಭುತ ದುರ್ನಿವಾರ. ವ॥ ಅಲ್ಲಿ ೬೫. ಕಾದಾಡಿ ಮೇಲೆ ಮೇಲೆ ಹೊಡೆಯುವ, ಹೊಡೆದು ವೇಗದಿಂದ ಅಬ್ಬರಿಸಿ, ಏರುತ್ತಾ ಬೆವರುಹನಿಗಳನ್ನು ರಂಗದ ಧೂಳಿನಿಂದೊರಸಿ, ಮತ್ತೆ ಕಾದುವ, ಕಾದಿ ಅಬ್ಬರಿಸಿ, ಉತ್ಸಾಹಗೊಂಡು ಚಾತುರ್ಯವನ್ನು ತೋರಿಸುವ, ಚಾತುರ್ಯವನ್ನು ಕೈಗೊಂಡರೂ 'ತಪ್ಪಿತು, ಬಿಡು' ಎಂಬ ಏಳಿಗೆಯಿಂದ ಕೃಷ್ಣಚಾಣೂರರ ಯುದ್ಧವು ಸಭಾಮಂಡಲಿಗೆ ನೋಡುವ ಕುತೂಹಲವನ್ನುಂಟುಮಾಡಿತು. ೬೬. ರಾಕ್ಷಸಧ್ವಂಸಿಯಾದ ಕೃಷ್ಣನು ಮನುಷ್ಯಬಲದಲ್ಲೇ ಒಂದೊಂದು ಆಶ್ಚರ್ಯವನ್ನು ತೋರಿಸುವ ಆಸಕ್ತಿಯಿಂದ ಕಣ್ಣನ್ನು ಕೆಂಪು ಮಾಡಿಕೊಂಡು ಮೈಗೆ ಬೆವರನ್ನು ಹೆಚ್ಚಾಗಿ ತಂದುಕೊಂಡು ಆಟವಾಡಿ ಚಾಣೂರನೊಡನೆ ಅಂತೂ ಹೋರಾಡಿದನು. ಮೂರುಲೋಕದ ಉದಯನಾಶಗಳು ಆತನ ಶಕ್ತಿಯ ಸ್ಪಂದಮಾತ್ರದಿಂದ ಆಗುತ್ತಿರುವಾಗ, ಅವನ ತೋಳ್ಬಲಕ್ಕೆ ಈ ಕಾಳಗವು ಯಾವ ಲೆಕ್ಕ! ೬೭. ಹೋಲಿಕೆಗೆ ಮೀರಿದುದೆನ್ನುವಂತೆ ವೇಗಕ್ಕೆ ವೇಗವೂ ಪೌರುಷಕ್ಕೆ ಪೌರುಷವೂ, ಬಲಕ್ಕೆ ಬಲವೂ, ಪರಾಕ್ರಮಕ್ಕೆ ಪರಾಕ್ರಮವೂ, ಗರ್ವಕ್ಕೆ ಗರ್ವವೂ, ರೌದ್ರತೆಗೆ ರೌದ್ರತ್ವವೂ ಕೃಷ್ಣನಲ್ಲೇ ಹೆಚ್ಚಾಗಿ ಕಾಣಿಸುತ್ತಿದೆ. ಇನ್ನು ಈ ಚಾಣೂರನು ಗೆಲ್ಲಲಾರನು ಎಂದು ಇತ್ತ ಕಂಸನ ಕಡೆ ಶಂಖ ಮೊದಲಾದ ವಾದ್ಯಗಳನ್ನು ಬಾರಿಸುವುದು ನಿಂತಿತು. ಅತ್ತ ಇಂದ್ರನ ಜಯಸೂಚಕವಾದ್ಯಧ್ವನಿಯು ಚೆನ್ನಾಗಿ ಕೇಳಿಸಿತು.

ವ|| ಅನ್ನೆಗಂ

ತವದ ನಿಜಕೋಪದಿಂ ಚಳ
ಕವಿನ್ನಣಂಗೊಂಡು ತಕ್ಕಿನೊಳ್ ಬಲನಂದಾ
ರ್ದವನ ನವರಂಧ್ರದಿಂ ರ
ಕ್ತವೊಗೆಯೆ ಡೊಕ್ಕರಿಸಿ ಕೊಂದನಾ ಮುಷ್ಟಿಕನಂ ೬೮

ವ|| ಅನಂತರಂ

ಕಡುಪಂ ಪಟ್ಟಿಸವೆಂಬ ಬಿನ್ನಣದೆ ಕೃಷ್ಣಂ ಗೆಲ್ದು ಪಿಂಗಾಲ್ಗಳಂ
ಪಿಡಿದಾರ್ದೆತ್ತಿ ನಿಶಾಟನಂ ತಿರಿಪೆ ತದ್ವಾಙ್ಮನ್ನಿಶಾಟಾಸ್ಯದಿಂ
ಪೊಡರ್ದಸ್ರಾಂಬುವಲಾತಚಕ್ರಮೆನೆ ವೃತ್ತಾಕಾರದಿಂದುಣ್ಮುತುಂ
ಪಡೆದತ್ತಾಗಸವೆಣ್ಗೆ ಪೊನ್ನ ಕಟಿಸೂತ್ರಶ್ರೀಯನಾ ಬೇಗದೊಳ್ ೬೯

ವ|| ಅಂತು ಚಾಣೂರನಂ ನೆಗಪಿ ನೂಱುಸೂಳ್ವರಂ ತಿಱ್ರನೆ ತಿರಿಪಿ ಸೊಪ್ಪು ಸೊವಡಾಗೆ ಕಳದೊಳಪ್ಪಳಿಸಿ ಕೊಂದಿಕ್ಕಿ ತನಗೆ ಮಾರ್ಮಲೆವ ಮಲ್ಲರಿಲ್ಲದಿರೆ

ಸುಲಲಿತ ವಲ್ಗನದಿಂ ಕಮ
ಳಲೋಚನಂ ಸುಟಿದು ರಂಗದೊಳ್ [1]ಗೋಪರುಮಂ
ನಲಿವತ್ತಲೆ ಚಾಳಿಪ ವಿಜ
ಯಲಕ್ಷ್ಮಿ ಕಂಸಂಗಸಹ್ಯಮಾದತ್ತಾಗಳ್ ೭೦

ವ|| ಅಷ್ಟರಲ್ಲಿ ೬೮. ಬಲರಾಮನು ಪ್ರಬಲವಾದ ಸಿಟ್ಟಿನಿಂದ ಚಳಕು ಬಿನ್ನಾಣಗಳಿಂದಲೂ ಬೇಕಾದಷ್ಟು ಶಕ್ತಿಯಿಂದಲೂ ಅಬ್ಬರಿಸಿ ಕುತ್ತಿಗೆಯನ್ನು ಹಿಡಿದು ಅಮುಕಿ, ಮುಷ್ಟಿಕನನ್ನು ಅವನ ದೇಹದ ನವರಂಧ್ರಗಳಿಂದಲೂ ರಕ್ತವು ಹೊರಡುವಂತೆ ಮಾಡಿ ಕೊಂದನು. ವ|| ಆಮೇಲೆ ೬೯. ಕೃಷ್ಣನು ತನ್ನ ಕಡುಪೇ ಒಂದು ಆಯುಧವೆಂಬಂತೆ ಚಾತುರ್ಯದಿಂದ ಚಾಣೂರನನ್ನು ಗೆದ್ದು, ಅವನ ಹಿಂಗಾಲುಗಳನ್ನು ಹಿಡಿದು ಆರ್ಭಟಿಸುತ್ತ ಎತ್ತಿ ಬೀಸಿ ತಿರುಗಿಸಿದನು. ೬೯. ಸುತ್ತ ತಿರುಗಿದ ಆ ರಾಕ್ಷಸನ ಬಾಯಿಂದ ಹೊರಟ ರಕ್ತವೂ ವೃತ್ತಾಕಾರದಲ್ಲಿ ಕೊಳ್ಳಿಯ ಚಕ್ರದಂತೆ ಚಲಿಸುತ್ತಾ ಆಕಾಶವನಿತೆಗೆ ಅಪರಂಜಿಯ ವಡ್ಯಾಣ ವನ್ನು ಧರಿಸಿದಂತೆ ಚೆನ್ನಾಗಿ ಕಾಣಿಸುತ್ತಿದ್ದಿತು. ವ|| ಕೃಷ್ಣನು ಹಾಗೆ ಚಾಣೂರನನ್ನು ಎತ್ತಿ ನೂರು ಸಾರಿ ಆಕಾಶದಲ್ಲಿ ತಿರ್ರನೆ ತಿರುಗಿಸಿ, ಅವನು ಸೊಪ್ಪು ಸೊವಡಾಗುವಂತೆ ಮಾಡಿ ರಂಗದಲ್ಲಿ ಅಪ್ಪಳಿಸಿ ಕೊಂದನು. ತನಗೆ ಪ್ರತಿಭಟಿಸುವ ಜಟ್ಟಿಗಳಿಲ್ಲದಿರಲು, ೭೦. ಕಮಲ ಲೋಚನ ಕೃಷ್ಣನು ಸುಲಲಿತವಾದ ಕುದುರೆ ನೆಗೆತದಿಂದ ಮಲ್ಲರಂಗದಲ್ಲಿ ಸಂಚರಿಸಿ, ಗೋಪರನ್ನು ತನ್ನ ಜಯದ ಕಡೆಗೇ ತಿರುಗಿಸಿದ ವಿಜಯಶ್ರೀಯು ಆಗ ಕಂಸನಿಗೆ

---

೧. ಗೋಕುಲಮಂ (ಕಖಗ)

ತಿಳಿದು ನಿಜಪತಿಯ ಮನಮಂ
ಬಳಾಧಿಕರ್ ಪಲಬರೆಟ್ದು ತೋಸಲಕಾದ್ಯರ್
ಕಳಭಕ್ಕೆ ಯೂಥಪತಿಗಳ
ಬಳಗಂ ಕವಿವಂತೆ ಮುಸುಕಿದರ್ ಮುರಹರನಂ ೭೧

ವ|| ಆಗಳಾ ಕಂಸಕೃತವಿಕೃತಿಯಂ ಪ್ರಕೃತಿಕ್ಷೋಭಮಾಗೆ

ಒರ್ವನೊಳಧಿಕಬಲರ್ ಸಾ
ಸಿರ್ವರ್ ಪೊಣರ್ದಪರಿದಕ್ರಮಂ ಹಾಹಾಯೆಂ
ದುರ್ವಿಜಮಿತ್ತಲತ್ತ ಸು
ಪರ್ವರ್ ಪುಯ್ಯಲ್ಚಿ ನೆಗೆದುದಾಕುಳನಿನದಂ ೭೨

ವ|| ಅನ್ನೆಗಂ

ಜವನೊಡವಟ್ಟು ಮಾರಿಯೊಡನಾಡಿ ಲಯಾಗ್ನಿಯ ನಂಟು ಕಾಲಮೃ
ತ್ಯುವ ಗುರು ಕಾಳಕೂಟದೆಣೆ ಸಿಂಗದ ಸಂಗತಿಯುಂ ಯುಗಾಂತಭೈ
ರವನ ಪರಿಗ್ರಹಂ ಸಿಡಿಲ ಸಂಗಡಮೀಶನ ಬೆಂಕೆಗಣ್ಣ ಬಾಂ
ಧವನೆನೆ ಶೌರಿ ಮರ್ದಿಸಿದನಪ್ರತಿಮಲ್ಲರೆನಿಪ್ಪ ಮಲ್ಲರಂ ೭೩

ಗರುಡಂ [೧]ವ್ಯಾಲಸ್ಫಟಾಸ್ಫಾಲನಸಮಯದೊಳೆಂತೆಂತು ಸಿಂಹಂ ಮಹಾಸಿಂ
ಧುರಶಂಭತ್ಕುಂಭನಿರ್ಭೇದನಸಮಯದೊಳೆಂತೆಂತು ವಜ್ರಂ ಕುಳೋರ್ವೀ
ಧರಪಕ್ಷಾನೀಕವಿಚ್ಛೇದನಸಮಯದೊಳೆಂತೆಂತು ಕಂಸಾರಿ ಕಂಸಾ
ಸುರದೇಹಾಸ್ಫಾಳನಾಡಂಬರಸಮಯದೊಳೆಂತಂತಗುರ್ವಾಗಿ ನಿಂದಂ ೭೪

ಸಹ್ಯವಾಗಲಿಲ್ಲ. ೭೧. ತಮ್ಮ ಅಧಿಪತಿಯ ಮನಸ್ಸನ್ನರಿತು ಅಧಿಕಬಲಶಾಲಿಗಳಾದ ತೋಸಲಕನೇ ಮೊದಲಾದ ಹಲವರು ಎದ್ದು ಮರಿಯಾನೆಯ ಮೇಲೆ ಸಲಗಗಳ ಗುಂಪು ಮುತ್ತುವಂತೆ ಕೃಷ್ಣನನ್ನು ಮುತ್ತಿದರು. ಆಗ ಆ ಕಂಸನ ವಿಕೃತ ಕಾರ್ಯದಿಂದ ಪ್ರಜಾಸ್ತೋಮವು ಕ್ಷೋಭೆಗೊಂಡಿತು. ೭೨. ಒಬ್ಬನ ಮೇಲೆ ಅಧಿಕ ಬಲವುಳ್ಳ ಸಾವಿರ ಜನರು ಕಾದುವರು ಇದು ಅಕ್ರಮ ಹಾ! ಹಾ! ಎಂದು ಇತ್ತ ಭೂಜನರೂ ಅತ್ತ ದೇವತೆಗಳೂ ಹುಯ್ಯಲಿಡಲು ವ್ಯಾಕುಲ ಧ್ವನಿಯು ಹೆಚ್ಚಿತು. ವ|| ಅಷ್ಟರೊಳಗೆ ೭೩. ಕೃಷ್ಣನು-ಇವರಿಗೆ ಪ್ರತಿಭಟಿಸುವ ಜಟ್ಟಿಗಳಿಲ್ಲವೆಂದೆನಿಸಿಕೊಂಡಿದ್ದ ಆ ಜಟ್ಟಿಗಳೆಲ್ಲರನ್ನೂ ಇವನು ಯಮನ ಒಡಹುಟ್ಟಿದವನು ಮಾರಿಯ ಒಡನಾಡಿ ಪ್ರಳಯಾಗ್ನಿಯ ನಂಟು, ಕಾಲಮೃತ್ಯುವಿನ ಗುರು, ಕಾಲಕೂಟ ವಿಷಕ್ಕೆ ಸಮಾನ, ಸಿಂಹದ ಜತೆ ಯುಗಾಂತ ಭೈರವನ ಪರಿವಾರ, ಸಿಡಿಲಿನ ಜತೆಯವ, ಈಶ್ವರನ ಅಗ್ನಿನೇತ್ರದ ಬಂಧು ಎಂದು ಮರ್ದಿಸಿದನು. ೭೪. ಗರುಡನು ಸರ್ಪದ ಹೆಡೆಯನ್ನು ಹೊಡೆಯುವ ಸಮಯದಲ್ಲಿ ಎನ್ನುವಂತೆ ಹೇಗೋ ಸಿಂಹವು ದೊಡ್ಡ ಆನೆಯ ಹೊಳೆಯುವ ಕಂಭ ನಿರ್ಭೇದನ ಸಮಯದಲ್ಲಿ ಹೇಗೋ, ವಜ್ರಾಯುಧವು ಕುಲಪರ್ವತಗಳ ರಕ್ಕೆಗಳ ಸಮೂಹವನ್ನು ವಿಚ್ಛೇದಿಸುವ ಸಮಯದಲ್ಲಿ ಹೇಗೋ ಕಂಸಾರಿ ಕೃಷ್ಣನು

೧ ವ್ಯಾಲಾಹಿನಾಶಕ್ಕೆಱಗುವ ತೆಱನೆಂತಂತು (ಕಗ)

ವ|| ಆ ಪ್ರಸ್ತಾವದೊಳ್

ತೆಗೆದೀಂಟಲ್ ವಾರ್ಧಿ ನುಂಗಲ್ ದಿಗಿಬಭಸಮಿತಿ ತುತ್ತಲ್ ವಿರಿಂಚಾಂಡಭಾಂಡಂ
ಮಿಗಿಲಲ್ತೀತಂಗೆನಲ್ ದಾನವರಿಪು ಮಸಕಂಗೊಡಂನಿಂ ಪೋರ್ವನೆಂಬೀ
ಬಗೆಯಿಂ ಪೆಣ್ಣಾನೆಯಂ ಪಲ್ಲಣಿಸು ಕುದುರೆಯಂ ಪೂಡು ತೇರಂ ಭಟರ್ ಕೈ
ದುಗಳಂ ಕೈಕೊಳ್ಳಿಮೆಂಬೀ ಭಟರ ಕಳಕಳಂ ಕೇಳಲಾದತ್ತದೆತ್ತಂ ೭೫

ವ|| ಅನ್ನೆಗಂ

ಪ್ರಕಟಂ ಸಿಂಹಸ್ಫುರಲ್ಲಂಘನಮೆಸೆಯೆ ತವಂಗಕ್ಕೆ ಧೀಂಕಿಟ್ಟು ಕೃಷ್ಣಂ
ಮಕುಟಾಗ್ರಸ್ಫಾಲನಂಗೆಯ್ದಲೆಲೆ ರವಿಯನಾ ರಾಹುವೀಂಟಿತ್ತೆನಲ್ ಕೌ
ತುಕಮಾಯ್ತೆಂದಭ್ರದೊಳ್ ಬೊಬ್ಬಿಱೆಯೆ ದಿವಿಜರಾ ಮಾಡದಿಂ ಕಂಸನಂ ಮ
ಲ್ಲಕಳಕ್ಕೆತ್ತಿಕ್ಕಿ ತಾಂ ಮೇಲೆಱಗಿದನೆಱಗಲ್ ಸ್ವರ್ಗದಿಂ ಪುಷ್ಪವರ್ಷಂ ೭೬

ಜಗದಾಧಾರಕದದಟಂ
ಧಿಗಿಲೆನೆ ಮೇಲೇಱೆ ತುಳಿದು ರಾಕ್ಷಸನಸುವಂ
ತೆಗೆದು ತೆಗೆದೆಱೆದು ಬೞೆಯಂ
ತೆಗೆದಂ ಶ್ರೀಕೃಷ್ಣನವನ ಮೇಗಣ ಮುಳಿಸಂ ೭೭

ಖಳನಂ ತುೞೆವೆಡೆಯೊಳ್ ಗೋ
ವಳರಾಯನ ತೊಡರ ಹಾಹೆ ತೊಡರ್ವೆರಸಂಘ್ರಿ
ಸ್ಥಳದಿನುರುಳ್ವಂತಿರೆ ನಿ
[೧]ರ್ಗಳಿತಾನ್ತ್ರನುರುಳ್ದು ಕಂಸನೆಸೆದಂ ಕಳದೊಳ್ ೭೮

ಕಂಸಾಸುರನ ದೇಹವನ್ನು ಅಪ್ಪಳಿಸುವ ಆಡಂಬರ ಸಮಯದಲ್ಲಿ ಹಾಗೆ ಭಯಂಕರವಾಗಿ ನಿಂತನು. ವ|| ಆ ಸಂದರ್ಭದಲ್ಲಿ, ೭೫. ಈತನಿಗೆ ತೆಗೆದು ಕುಡಿಯಲು ಸಮುದ್ರವೂ, ನುಂಗಲು ದಿಗ್ಗಜಗಳ ಗುಂಪೂ, ಕಬಳಿಸಲು ಬ್ರಹ್ಮಾಂಡ ಭಾಂಡವೂ ಹೆಚ್ಚೇನಲ್ಲ ಎನ್ನುವಂತೆ ರಾಕ್ಷಸ ವೈರಿ ಕೃಷ್ಣನು ಉಬ್ಬಿ ರೇಗಿದನು. "ಇನ್ನು ಹೋರಾಡುವನು" ಎಂಬ ಅಭಿಪ್ರಾಯದಿಂದ "ಆನೆಗೆ ಅಂಬಾರಿಯನ್ನು ಹಾಕು, ಕುದುರೆಗೆ ಜೀನನ್ನು ಹಾಕು; ರಥಕ್ಕೆ ಕುದುರೆಗಳನ್ನು ಹೂಡು, ಯೋಧರು ಆಯುಧಗಳನ್ನು ತೆಗೆದುಕೊಳ್ಳಿ ಎಂಬ ಭಟರ ಕಲಕಲಧ್ವನಿಯು ಎಲ್ಲೆಲ್ಲೂ ಕೇಳಿಸಿತು. ಅಷ್ಟರಲ್ಲಿ ೭೬. ಕೃಷ್ಣನು ಸಿಂಹದ ನೆಗೆತದಿಂದ ಉನ್ನತವಾದ ವೇದಿಕೆಯ ಮೇಲೆ ಹಾರಿ ನೋಡುತ್ತಿರುವವರು ಎಲೆಲಾ ಸೂರ್ಯನನ್ನು ರಾಹು ನುಂಗಿತು ಎನ್ನುತ್ತಿರಲು ಕಂಸನ ಕಿರೀಟದ ಮೇಲೆ ಹೊಡೆದು ವೇದಿಕೆಯಿಂದ ಕಂಸನನ್ನು ಮಲ್ಲರಂಗಕ್ಕೆ ಎತ್ತಿಹಾಕಿ ತಾನು ಅವನ ಮೇಲೆ ಧುಮುಕಿದನು. ದೇವತೆಗಳು ಆಕಾಶದಲ್ಲಿ ನಿಂತು ಅತ್ಯಾಶ್ಚರ್ಯವೆಂದು ಕೂಗಿದರು. ಸ್ವರ್ಗದಿಂದ ಹೂಮಳೆ ಸುರಿಯಿತು. ೭೭. ಜಗದಾಧಾರನಾದ ಕೃಷ್ಣನು, ಧಿಗ್ಗೆಂದು ಕಂಸನ ದೇಹದ ಮೇಲೇರಿ ಕುಳಿತು ಪ್ರಾಣವನ್ನು ತೆಗೆದು ಎಳೆದು ಬಳಿಕ ಅವನ ಮೇಲಿನ ಕೋಪವನ್ನೂ ತನ್ನಿಂದ ತೆಗೆದನು. ೭೮. ಆ ನೀಚನನ್ನು ಕೃಷ್ಣನು ತುಳಿಯುವಾಗ ಕೃಷ್ಣನ ಆಭರಣದ ಬೊಂಬೆಯು ಆಭರಣ ಸಹಿತ ಕಾಲಿನಿಂದ

೧. ಗಳಿತಾಸುವುರುಳ್ದು (ಖಗ)

ವ|| ಆ ಪ್ರಸ್ತಾವದೊಳ್

ಪವನವ್ಯೋಮವಸುಂಧರಾಸಲಿಲತೇಜೋಲೀಲೆ ಮೈವೆರ್ಚಲು
ತ್ಸವಮಾದತ್ತು ಸಮಸ್ತಭೂತಳದೊಳಾಗಳ್ ಭೂತಸರ್ವಸ್ವಮಂ
ಕವರ್ದಂಗೀಕರಿಸಿರ್ದ ಕಂಸನನುಜಂ ಪಂಚತ್ವಮಂ ಪೊರ್ದಲಿಂ
ತವು ತಂತಮ್ಮ ವಿಭಾಗಮಂ ಮಗುಳ್ ಕೈಕೊಂಡಿರ್ದುವೆಂಬನ್ನೆಗಂ ೭೯

ವ|| ಆ ಮಹೋತ್ಸವದೊಳ್

ಶರವಿದ್ಯಾಬಲದಿಂದೆ ಕೊಂಡು ಕೊನೆವಾ ಯುದ್ಧಂಗಳಂ ಮೆಚ್ಚೆ ನಾಂ
ಪಿರಿದುಂ ಮೆಚ್ಚುವೆನಿಂತುಟೊಂದು ನಿಮಿಷಂ ಧೀಂಕಿಟ್ಟು ಹರ್ಮ್ಯಾಗ್ರದಿಂ
ಧರೆಗಾರ್ದಿಕ್ಕಿ ವಿರೋಧಿಯಂ ಮಡಿಪಿದೊಂದಂ ಚೆಲ್ವನೆಂದಾಡಿದಂ
ಪರಮಾನಂದವಿನೋದದಿಂ ಸ್ಮಿತಹಟನ್ನಾನಾರದಂ ನಾರದಂ ೮೦

ವ|| ಅನ್ನೆಗಂ ಶತಮುಖಪ್ರಮುಖನಿಖಿಲದೇವತಾಸಂತಾನವಂತರ್ಧಾನದೊಳ್ ನಿಂದು ದಾನವಾಂತಕನ ಮೊಗಮಂ ನೋಡಿ

ಮುಂ ದೈತ್ಯಕೋಪಹುತವಹ
ನಿಂದಂ ಕಾಯ್ದುರಿವ ಭುವನಮಂ ವಿಜಯಯಶ
ಶ್ಚಂದನರಸದಿಂದಂ ತೊಳೆ
ದಿಂದು ಮುರಧ್ವಂಸಿ ನೀಂ ಕುಳಿರ್ಕೋಡಿಸಿದೈ ೮೧

ಕಳಚಿಬಿದ್ದಂತೆ ಕಂಸನು ತನ್ನ ಉದರದಿಂದ ಹೊರಬಿದ್ದ ಕರುಳಿನ ದಂಡೆಯ ಸಹಿತವಾಗಿಯೇ ನಡುವೆ ಉರುಳಿದ್ದುದು ಕಾಣಿಸಿತು. ವ|| ಆ ಸಮಯದಲ್ಲಿ ೭೯. ಪಂಚಭೂತಗಳ ಸರ್ವಸ್ವವನ್ನು ಅಪಹರಿಸಿದ್ದ ಕಂಸನು ಪಂಚತ್ವವನ್ನು ಹೊಂದಿದ್ದರಿಂದ ಆ ಪಂಚಭೂತಗಳು ಅವನ ದೇಹದಿಂದ ತಮ್ಮ ತಮ್ಮ ವಿಭಾಗವನ್ನು ಮತ್ತೆ ಪಡೆದಿರುವವು ಎನ್ನುವಂತೆ ಭೂಮಿ ಜಲವಾಯ್ವಾಕಾಶ ತೇಜಸ್ಸುಗಳ ಲೀಲೆಯು ಹೆಚ್ಚಿತು. ಭೂಮಂಡಲದಲ್ಲೆಲ್ಲೂ ಉತ್ಸವವಾಯಿತು. ವ|| ಆ ಮಹೋತ್ಸವದಲ್ಲಿ ೮೦. ಬಾಣ ವಿದ್ಯಾಬಲದಿಂದ ಹೊಗಳುವ ಯುದ್ಧಗಳನ್ನು ನಾನು ಮೆಚ್ಚೆನು. ಹೀಗೆ ಒಂದು ನಿಮಿಷದಲ್ಲಿ ಉಪ್ಪರಿಗೆಗೆ ಹಾರಿ ಆರ್ಭಟಿಸಿ, ವಿರೋಧಿಯನ್ನು ನೆಲಕ್ಕೆ ಬೀಳಿಸಿ, ಸಾಯಿಸಿದ ಈ ಸೊಗಸೊಂದನ್ನು ಮೆಚ್ಚುವೆನು". ಎಂದು ನಗುತ್ತ ಪ್ರಕಾಶಿಸುವ ನಾರದನು ಬಗೆಬಗೆಯ ಧ್ವನಿಯಿಂದ ಹಾಡುತ್ತ ಪರಮಾನಂದ ವಿನೋದದಿಂದ ಹೇಳಿದನು. ವ|| ಅಷ್ಟರಲ್ಲಿ ದೇವೇಂದ್ರನೇ ಮೊದಲಾದ ಸಮಸ್ತ ದೇವತಾ ಸಮೂಹವು ಅಂತರ್ಧಾನವಾಗಿ ಬಂದುನಿಂತು, ದಾನವಾಂತಕ ಕೃಷ್ಣನ ಮುಖವನ್ನು ನೋಡಿ ೮೧. "ಮುರಾಂತಕಾ! ಮುಂಚೆ ರಾಕ್ಷಸರ ಕೋಪಾಗ್ನಿಯಿಂದ ಕಾಯ್ದು ಉರಿಯುತ್ತಿದ್ದ ಪ್ರಪಂಚವನ್ನು ನೀನು ವಿಜಯಕೀರ್ತಿ ಚಂದನರಸದಿಂದ ತೊಳೆದು

ಗಡಿಗೆಟ್ಟಜಾಂಡಕೋಟಿಯ
ನೆಡೆಯುಡುಗದೆ ನುಂಗಿಯುಗುಳ್ವ ನಿನಗೀ ಪಗೆಯಂ
ಮಡಿಪುವುದು ಪಿರಿದೆ ಕೇಶವ
ಕಡಲಂ ಪೀರ್ವಂಗಮರಿದೆ ಕುಡಿತೆಯ ಸಲಿಲಂ ೮೨

ಕಮಲೋದ್ಭವ ವಾಗ್ವಿಲಸ
ತ್ಕ್ರಮಮಂ ಮೀಱಿದುದು ವೇದವೇದಾಂಗರಹ
ಸ್ಯಮನದಟಲೆದುದೆನಲ್ ಕಂ
ಸಮಥನ ಬಣ್ಣಿಸುವರಳವೆ ನಿನ್ನ ಮಹತ್ವಂ ೮೩

ವ|| ಎಂದಮರಸಮುದಯಮುಂ ಪುಷ್ಪದೊಳಂ ವಾಕ್ಪುಷ್ಪದೊಳಮರ್ಚಿಸಿ ಪೋಗೆ

ಆನತರಪ್ಪರಂಬುಜಭವಾದಿಗಳುಂ ತನಗಟ್ಕಱಿಂದೆ ತಾ
ನಾನಾತನಾರ್ಗಮಲ್ಲವಧಿಕರ್ ತನಗಿಲ್ಲದೆ ಪೆಂಪಿನಿಂದಮೆಂ
ಬಾ ನಳಿನಾಕ್ಷನಂದು ವಸುದೇವನ ದೇವಕಿಯಂಘ್ರಿಗಳ್ಗೆ ಬಂ
ದಾನತನಾದನದನುಚಿತಂ ಗುರುಸನ್ನತಿ ಮರ್ತ್ಯವೇಷದೊಳ್ ೮೪

ವ|| ಆಗಳಾ ವಸುದೇವನುಂ ದೇವಕಿಯುಮತ್ಯಂತ ಸಂತೋಷಮನಪ್ಪುಕೆಯ್ದು

ಮನದೊಳ್ ತೆಕ್ಕನೆ ತೀವಿದೊಂದು ಪರಮಸ್ನೇಹಾಮೃತಂ ಕಣ್ಗಳಿಂ
ದೆನಸುಂ ಪೊಣ್ಮಿದುದೆಂಬಿನಂ ಸುರಿವಿನಂ ಹರ್ಷಾಶ್ರು ಪಾದಾನತಾ
ಸ್ಯನನಿಂಬಿಂ ತೆಗೆದಪ್ಪಿಕೊಂಡೊಗೆದ ರೋಮಾಂಚಂಗಳೊತ್ತೊತ್ತಿನಿಂ
ತನುಗಳ್ ಪಿಂಗಿದುವೆಂಬಿನಂ ಕೆಲಕೆ ಸಾರ್ದಿಂತೆಂದರಾನಂದದಿಂ ೮೫

ಈಗ ತಂಪಾಗಿಸಿದೆ. ೮೨. ಲೆಕ್ಕವಿಲ್ಲದ ಕೋಟ್ಯಂತರ ಬ್ರಹ್ಮಾಂಡಗಳನ್ನು ಪೂರ್ಣವಾಗಿ ನುಂಗಿ ಮತ್ತೆ ಉಗಿಯುವ ನಿನಗೆ ಈ ಹಗೆಯನ್ನು ಸಾಯಿಸುವುದು ದೊಡ್ಡ ಕೆಲಸವೇ? ಕೇಶವಾ, ಸಮುದ್ರವನ್ನೇ ಹೀರುವವನಿಗೆ ಒಂದು ಬೊಗಸೆ ನೀರನ್ನು ಕುಡಿಯುವುದು ಕಷ್ಟವೆ? ೮೩. ಕಂಸಾಂತಕಾ! ನಿನ್ನ ಮಹತ್ತ್ವವು ಬ್ರಹ್ಮನ ವಾಗ್ವಿಲಾಸವನ್ನೂ ಮೀರಿದುದು. ವೇದ ವೇದಾಂಗ ರಹಸ್ಯಕ್ಕೂ ಸಿಕ್ಕದೆ ಅದನ್ನು ತಳ್ಳಿತು. ಹೀಗಿರುವಾಗ ಸಾಮಾನ್ಯರಿಗೆ ವರ್ಣಿಸಲು ಸಾಧ್ಯವೇ?" ವ|| ಎಂದು ಪುಷ್ಪದಿಂದಲೂ ವಾಕ್ಪುಷ್ಪದಿಂದಲೂ ಅರ್ಚಿಸಿ ತೆರಳಿತು. ೮೪. ಬ್ರಹ್ಮನೇ ಮೊದಲಾದವರು ತನಗೆ ಅಕ್ಕರೆಯಿಂದ ತಲೆಬಾಗುವರು, ತಾನು ಯಾರಿಗೂ ತಲೆಬಾಗುವವನಲ್ಲ. ಮಹಿಮೆಯಲ್ಲಿ ತನಗಧಿಕರಾದವರಿಲ್ಲ ಎನಿಸಿಕೊಂಡ ಆ ಕಮಲಾಕ್ಷನು ಆಗ ಬಂದು ವಸುದೇವ ದೇವಕಿಯರ ಪಾದಗಳಿಗೆ ನಮಸ್ಕರಿಸಿದನು. ಮನುಜವೇಷದಲ್ಲಿರುವಾಗ ವಂದನೆಯು ಉಚಿತವೇ ವ|| ಆಗ ವಸುದೇವನೂ ದೇವಕಿಯೂ ಅತ್ಯಂತ ಸಂತೋಷವನ್ನು ಪಡೆದರು. ೮೫. ಮನದಲ್ಲಿ ತಟ್ಟನೆ ತುಂಬಿದ ಸ್ನೇಹಾಮೃತವು ಅವರ ಕಣ್ಗಳಿಂದ ಉಕ್ಕುತ್ತಿದೆಯೆನ್ನುವಂತೆ ಆನಂದ ಬಾಷ್ಪವು ಸುರಿಯುತ್ತಿದ್ದಿತು. ಕಾಲಿಗೆ ವಂದಿಸಿದ ಕೃಷ್ಣನನ್ನು ಮೆತ್ತನೆ ಹಿಡಿದೆತ್ತಿ ಎಳೆದು ಅಪ್ಪಿಕೊಂಡರು. ಆಗ ಉಂಟಾದ ರೋಮಾಂಚನದಿಂದ ಬೇರಾದರೆಂಬಂತೆ ಪಕ್ಕಕ್ಕೆ ಸರಿದು

ಉದಯಿಸಿ ದಿವ್ಯಾಕೃತಿಯಿಂ
ಮೊದಲೊಳ್ ನೀನೆಮಗೆ ನುಡಿದ ತೆಱದಿಂದಡಿಗಿ
ಕ್ಕಿದೆ ಕಂಸನನೆಮ್ಮಂ ನೆಗ
ಪಿದೆ ಚಿಂತಾವಾರ್ಧಿಯೊಳಗೆ ಮುಳುಗಿರ್ದವರಂ ೮೬

ಪುಟ್ಟುವುದು ಜಗಂ ನಿನ್ನಿಂ
ಪುಟ್ಟುವೆ ನೀನಾವನಿಂ ಸ್ವಯಂಪ್ರಭು ಪಿರಿದುಂ
ಪುಟ್ಟುವೊಡಂಶಾಂಶದೆ ನೀಂ
ಪುಟ್ಟೆ ಜಗದ್ರಕ್ಷಣಾಕ್ಷಯಕ್ಷಮನಪ್ಪೈ ೮೭

ನಿಜಗರ್ಭದೇಕದೇಶದೊ
ಳಜಾಂಡಶತಮಿರ್ಪ ವಿಷ್ಣು ನೀನಸ್ಮದ್ಗ
ರ್ಭಜನೆಂತಾದೆಯಿದಂ ಭ್ರಾಂ
ತಿಜಾಲಮಂ ಬೀಸಿದೈ ಧರಿತ್ರಿಗಮೆಮಗಂ ೮೮

ಈ ತ್ರಿಲೋಕದ ಸೃಷ್ಟಿವರ್ತನಸಂಕ್ಷಯಂ ನಿಜಕಲ್ಪನಾ
ಮಾತ್ರಸೂತ್ರಮಿದೆಂದು ಬಲ್ಲೆವನಾದಿಮಧ್ಯವಿರಾಮನೈ
ಸ್ತೋತ್ರಪಾತ್ರರೆ ನಾಂ ನೃಕೀಟರದಾವುದೇದೊರೆಯಾದೊಡಂ
ಪುತ್ರನೆಂದಪುದೆಮ್ಮ ನಾಲಗೆ ನಿನ್ನನೆಂತದಹರ್ನಿಶಂ ೮೯

ತರತಮಮಾಗಿ ಯೋಗಿತತಿ ಯೋಗವಿಭೇದದೆ ನಿಟ್ಟಿಪಾ ಶಿವಂ
ಪರಮಶಿವಂ ಸದಾಶಿವನೆನಿಪ್ಪ ಗುಣಂ ಗುಣಿಯಾಗಿ ನೀನಜಂ
ಹರಿಹರನೆಂಬ ಮೂರ್ತಿಗಳನಾಂತ ಮಹಾತ್ಮನೆ ಮರ್ತ್ಯಮೂರ್ತಿಯಂ
ಧರಿಯಿಸಿ ದೇವಕೀಸುತನೆನಿಪ್ಪುದು ನಿನ್ನ ವಿನೋದಮಾಗದೇ ೯೦

ಆನಂದದಿಂದ ಹೀಗೆಂದರು. ೮೬. "ನೀನು ಮೊದಲು ದಿವ್ಯಾಕಾರದಿಂದ ಜನಿಸಿ ನಮಗೆ ಹೇಳಿದಂತೆಯೇ ಕಂಸನನ್ನು ಕೊಂದೆ. ಚಿಂತಾಸಾಗರದಲ್ಲಿ ಮುಳುಗಿದ್ದ ನಮ್ಮನ್ನು ಮೇಲೆತ್ತಿದೆ. ೮೭. ಜಗತ್ತು ನಿನ್ನಿಂದ ಉದಯಿಸುವುದು. ನೀನು ಯಾರಿಂದ ತಾನೆ ಜನಿಸುವೆ! ಸ್ವಯಂ ಪ್ರಭುವಾದ ನೀನು ಜನಿಸುವುದಾದರೆ ಅಂಶಾಂಶದಿಂದ ಜನಿಸಿ, ಜಗದ್ರಕ್ಷಣ ನಾಶಗಳಿಗೆ ಸಮರ್ಥನಾಗುವೆ. ೮೮. ನಿನ್ನ ಉದರದ ಒಂದು ಭಾಗದಲ್ಲಿ ನೂರಾರು ಬ್ರಹ್ಮಾಂಡಗಳನ್ನು ಧರಿಸಿರುವ ವಿಷ್ಣು ನೀನು, ನಮ್ಮ ಗರ್ಭದಲ್ಲುದಿಸಿದವನು ಹೇಗೆ ತಾನೆ ಆಗುವೆ? ಈ ಭ್ರಾಂತಿಜಾಲವನ್ನು ಭೂಮಿಗೂ ನಮಗೂ ಬೀಸಿದೆ ನೀನು. ೮೯. ಈ ಮೂರು ಲೋಕದ ಹುಟ್ಟು, ಉಳಿವು, ಅಳಿವುಗಳು ನಿನ್ನ ಕಲ್ಪನಾಮಾತ್ರಸೂತ್ರದಿಂದ ನಡೆಯುವುವು ಎಂದು ಬಲ್ಲೆವು. ನೀನು ಆದಿಮಧ್ಯಾಂತರಹಿತನು. ಹುಳುವಿನಂತಹ ಮನುಷ್ಯರಾದ ನಾವು ನಿನ್ನ ಸ್ತುತಿಗೆ ಅರ್ಹರೇ? ಯಾವುದು ಏನೋ ಹೇಗಾದರೂ ನಮ್ಮ ನಾಲಗೆಯು ಹಗಲುರಾತ್ರೆಯೂ ಪುತ್ರನೆನ್ನುತ್ತದೆ ನಿನ್ನನ್ನು. ೯೦. ಯೋಗಿಗಳು ತರತಮವಾಗಿ ಯೋಗವಿಭೇದದಿಂದ ನೋಡುವ, ಶಿವ, ಪರಮಶಿವ, ಸದಾಶಿವನೆನಿಸಿಕೊಳ್ಳುವ ನಿರ್ಗುಣನಾದ ನೀನು ಗುಣಿಯಾಗಿ, ಬ್ರಹ್ಮವಿಷ್ಣು ಮಹೇಶ್ವರ ಎಂಬ ಮೂರ್ತಿಗಳನ್ನು

ಪ್ರಾಕೃತಮನುಷ್ಯಶಿಶುಗೆ
ತ್ತೀ ಕಂಸನ ಭಯದೆ ನಿನ್ನೊಲ್ದಿರಿಸಿದೆವಾ
ಗೋಕುಲದೊಳ್ ಮಾಯಮೋ
ಹಾಕುಳದಿಂದಱಿದೆವಿಲ್ಲ ನಿನ್ನಯ ತೇಜಿನಂ ೯೧

ಕ್ಷಿತಿಯಂ ರಕ್ಷಿಸಲಂಶಾ
ಕೃತಿಯಿಂದುದಯಿಸಿದ ನಿನ್ನೊಳಿಮಗಿಂ ಲಕ್ಷ್ಮೀ
ಪತಿ ಭಕ್ತಿ ಪುಟ್ಟಿದಪ್ಪುದು
ಸುತನೆಂಬ ಮಮತ್ವಮಾದುದಿಲ್ಲವಮೋಘಂ ೯೨

ವ|| ಎಂದನೂನಜ್ಞಾನಸಂಪನ್ನರಾಗಿ ನುಡಿದ ಮಾತಾಪಿತೃಗಳಂ ಮಗುಟೆ ಕೃಷ್ಣಂ ವೈಷ್ಣವಮಾಯೆಯಿಂ ಮೋಹಿಸಿ ರೌಹಿಣೇಯಸಮನ್ವಿತಂ ಕರಕಮಲಂಗಳಂ ಮುಗಿದು

ಕೇಳಿಲೆ ತಾತ ಕೇಳ್ ಜನನಿ ಕಂಸನ ಕಾರಣದಿಂದಗಲ್ದು ಗೋ
ಪಾಲಯವಾಸರಾದೆಮಗೆ ನಿಮ್ಮ ಪದಾರ್ಚನೆಗೆಯ್ಯದಿನ್ನೆಗಂ
ಕಾಲಮಿದಿಂತು ಪೋಯ್ತು ಪಿತೃಮಾತೃಗುರುದ್ವಿಜದೇವಪೂಜೆಯಿಂ
ಕಾಲಮಿದೆಯ್ದೆ ಸಲ್ಲದನ ಬಾಳ್ಕೆ ನಿರರ್ಥಕಮಲ್ತೆ ಲೋಕದೊಳ್ ೯೩

ವ|| ಎಂದು ಸಂತಸಂಬಡಿಸಿ ಯದುಕುಲಪ್ರವೃದ್ಧಜನಂಗಳಂ ಯಥಾಯೋಗ್ಯಮಾಗಿ [1]ಸಂಭಾವಿಸುತಿರ್ದ ಪ್ರಸ್ತಾವದೊಳ್

ಧರಿಸಿದ ಮಹಾತ್ಮನು ಮನುಷ್ಯವೇಷವನ್ನು ಧರಿಸಿ, ದೇವಕೀಪುತ್ರನೆನಿಸಿಕೊಳ್ಳುವುದು ನಿನ್ನ ವಿನೋದವಲ್ಲವೆ? ೯೧. ಪ್ರಾಕೃತ ಮನುಷ್ಯ ಶಿಶುವೆಂದು ಭಾವಿಸಿ, ಈ ಕಂಸನ ಭೀತಿಯಿಂದ ನಿನ್ನನ್ನು ಗೋಕುಲಕ್ಕೆ ಕರೆದುಕೊಂಡು ಹೋಗಿ ಪ್ರೀತಿಯಿಂದ ಅಲ್ಲಿರಿಸಿದೆವು. ಮಾಯಾಮೋಹಾಕುಲತೆಯಿಂದ ನಿನ್ನ ಸ್ವರೂಪವನ್ನು ನಾವು ತಿಳಿಯದೆ ಹೋದೆವು. ೯೨. ಭೂಮಿಯನ್ನು ರಕ್ಷಿಸುವುದಕ್ಕಾಗಿ ಅಂಶಾಂಶದಿಂದ ಉದಯಿಸಿದ ನಿನ್ನಲ್ಲಿ ಇನ್ನು ನಮಗೆ ಲಕ್ಷ್ಮೀಪತಿ ವಿಷ್ಣು ಎಂಬ ಭಕ್ತಿಯು ಹುಟ್ಟುತ್ತದೆ. ಮಗನೆಂಬ ಮಮಕಾರವು ನಿಜವಾಗಿಯೂ ಆಗುವುದಿಲ್ಲ". ವ|| ಎಂದು ಪೂರ್ಣಜ್ಞಾನಸಂಪನ್ನರಾಗಿ ನುಡಿದ ತಾಯಿ ತಂದೆಗಳನ್ನು ಕೃಷ್ಣನು ಮತ್ತೆ ವೈಷ್ಣವಮಾಯೆಯಿಂದ ಮೋಹಗೊಳಿಸಿ, ಬಲರಾಮ ಸಮೇತನಾಗಿ ಕರಕಮಲಗಳನ್ನು ಮುಗಿದು ೯೩. "ತಂದೆಯೆ ಕೇಳು, ತಾಯಿ ಕೇಳು, ನಾವು ಕಂಸನ ಕಾರಣದಿಂದ ನಿಮ್ಮನ್ನಗಲಿ ಗೋಪಾಲರ ಮನೆಯಲ್ಲಿ ವಾಸಮಾಡಿದೆವು ಆದುದರಿಂದ ಇದುವರೆಗೂ ನಿಮ್ಮ ಪಾದಾರ್ಚನೆ ಮಾಡದೆ ಕಾಲವು ಕಳೆದು ಹೋಯಿತು. ಪಿತೃಮಾತೃಗುರುದ್ವಿಜ ದೇವ ಪೂಜೆಯಿಂದ ಕಾಲವನ್ನು ಕಳೆಯದವನ ಜೀವನವು ಈ ಲೋಕದಲ್ಲಿ ನಿರರ್ಥಕವಲ್ಲವೆ?!" ವ|| ಎಂದು ಸಂತೋಷಪಡಿಸಿ, ಯಾದವ ಕುಲದ ವೃದ್ಧಜನರನ್ನು ಯಥಾಯೋಗ್ಯವಾಗಿ ಗೌರವಿಸಿದರು. ಆ ಸಂದರ್ಭದಲ್ಲಿ

---

೧. ಸಂಭಾಷಿಸುತ್ತಿರ್ದನಾ ಪ್ರಸ್ತಾವದೊಳ್ (ಕಖ)

ಮಱಿದಿರ್ದೆಮ್ಮಣ್ಣನಂ ಮರ್ದಿಸಿದ ಕುಟಿಲನೆತ್ತೆತ್ತಲೆಂದೆಯ್ದೆ ವಂದ
ಳ್ಳುಱಿ ಕಚ್ಚಾವಾಲಮಂ ಕೈದುಡುಕಿ ಪಿಡಿದನಂ ನೋಡದಂತಿರ್ದ ಪಾಂಗಿಂ
ಪೊಱಕೈಯೊಳ್ ಮೋದಿ ಕಂಸಾನುಜನನಧಿಕನಂ ಕೊಂದು ಮಾರ್ಕೊಂಡರೆಂಬಂ
ತುಱಿದತ್ತಲ್ ಗೋಷ್ಠಿಗೆಯ್ದುಚ್ಯುತನ ಬಿನದಮಂತೊಂದಗುರ್ವೇನನೆಂಬೆಂ ೯೪

ವ|| ಅನ್ನೆಗಂ

ಸರಲಟಹಪಟಹರವವಂ
ಬರದೊಳ್ ನರ್ತಿಸಲೆ ನಾರದಂ ದೆಸೆಗಳೊಳು
ಣ್ಮಿರಲುಣ್ಮಿದುದಿತ್ತಲ್ ಮ
ಲ್ಲರಂಗದೊಳ್ ಕಂಸನಂಗನಾಕ್ರಂದರವಂ ೯೫

ತರುಣಿಯರಂದು ಕಂಸನ ವಿಯೋಗದ ಶೋಕದೆ ಬಿಟ್ಟು ಧಾತ್ರಿಯೊಳ್
ಪೊರಳೆ ಪೊದಟ್ಟ ಮೆಯ್ಯ ರಜವಶ್ರುಜಲೌಘದೆ ನಾಂದು ಕರ್ದಮಂ
ಬೊರೆದವೊಲಾಗ[1]ಲಂದುಮೆಸೆದಿರ್ದರೆಲರ್ಪೊಡೆದಭ್ರಕಾಲದೊಳ್
ಧರೆಯೊಳುರುಳ್ದು ಕರ್ದಮದೊಳಟ್ಟ ಲತಾನಿಕುರುಂಬಮೆಂಬಿನಂ ೯೬

ವ|| ಆ ಪೆಂಡವಾಸದೆಳವೆಂಡಿರೊಳಗ್ರಮಹಿಷಿಯರೆನಿಸಿದ ಅಸ್ತಿಪ್ರಾಸ್ತಿಯರೆಂಬ ಜರಾಸಂಧಸುತೆಯರ್ ಕಂಸನ ಕಳೇವರಮಂ ತಟ್ಕೈಸಿಕೊಂಡು ಮುಂಡಾಡಿ

೯೪. ಕಂಸನ ತಮ್ಮನು "ನನ್ನ ಅಣ್ಣನು ಮೈಮರೆತಾಗ ವಂಚನೆಯಿಂದ ಅವನನ್ನು ಕೊಂದ ಮೋಸಗಾರನು ಎಲ್ಲಿ?" ಎನ್ನುತ್ತ ಬಂದು ಕೃಷ್ಣನು ಉಟ್ಟಿದ್ದ ವಸ್ತ್ರದ ಅಂಚನ್ನು ಹಿಡಿದು ಹಿಂದುಗಡೆ ಜಗ್ಗಿದನು. ಕೃಷ್ಣನು ಅವನನ್ನು ನೋಡದೆಯೇ ಹೊರಗೈಯಿಂದ ಹೊಡೆದು ಕಂಸನ ತಮ್ಮನನ್ನು ಕೊಂದನು. ಆಮೇಲೆ ಇವರು ಪ್ರತಿಭಟಿಸುವರೆಂದು ನಟಿಸುತ್ತ ತನ್ನ ಗುಂಪಿಗೆ ಹೋಗಿ ಸೇರಿಕೊಂಡನು. ಅವನ ಲೀಲಾವಿನೋದವನ್ನು ಏನೆಂದು ಹೇಳಲಿ? ೯೫. ನಾರದನು ಕುಣಿದಾಡುತ್ತಿದ್ದನು. ಆಕಾಶದಲ್ಲಿ ದಿಕ್ಕು ದಿಕ್ಕುಗಳಲ್ಲೂ ದೇವತೆಗಳ ಮನೋಹರವಾದ ಪಟಹ (ಡೋಲು) ವಾದ್ಯಧ್ವನಿಯು ಹೆಚ್ಚಿತು. ಇತ್ತ ಕಡೆ ಮಲ್ಲರಂಗದಲ್ಲಿ ಕಂಸನ ಪತ್ನಿಯರ ಗೋಳಾಟವು ಹೆಚ್ಚಿತು. ೯೬. ಆ ತರುಣಿಯರು ಕಂಸನ ಅಗಲಿಕೆಯ ದುಃಖದಿಂದ ಭೂಮಿಯ ಮೇಲೆ ಬಿದ್ದು, ಉರುಳಾಡಿದರು; ಮೈಗೆ ಅಂಟಿಕೊಂಡ ಧೂಳು, ಸುರಿದ ಕಣ್ಣೀರಿನಿಂದ ನೆನೆದು ಮೈಗೆ ಕೆಸರನ್ನು ಬಳಿದಂತೆ ಆಯಿತು. ಆಗ ಅವರು ಮಳೆಗಾಲದಲ್ಲಿ ಗಾಳಿಯ ಹೊಡೆತದಿಂದ ನೆಲಕ್ಕೆ ಬಿದ್ದು ಕೆಸರಿನಲ್ಲಿ ಮುಳುಗಿದ ಬಳ್ಳಿಗಳಂತೆ ಕಾಣಿಸುತ್ತಿದ್ದರು. ವ|| ಕಂಸನ ರಾಣೀವಾಸದಲ್ಲಿ ಪಟ್ಟದ ರಾಣಿಯರಾದ ಅಸ್ತಿ ಪ್ರಾಸ್ತಿಯರೆಂಬ ಜರಾಸಂಧನ ಪುತ್ರಿಯರು ಕಂಸನ ಶರೀರವನ್ನು ಅಪ್ಪಿಕೊಂಡು

---

೧. ಅಂತುಮೆಸೆದಿರ್ದರವರ್ (ಕಖಗ)

ಪರಿಭವರಜದೊಳ್ ಪಗೆಯಂ
ಪೊರಳಿಸಲುಂ ಪುಷ್ಪಧೂಳಿಯೊಳ್ ವಿರಹಿಣಿಯಂ
ಪೊರಳಿಸಲುಂ ತಕ್ಕುದು ನೀಂ
ಪೊರಳಲ್ ತಕ್ಕುದೆ ಮದೀಶ ಭೂಪಾಂಸುವಿನೊಳ್ ೯೭

ಮೃದುಶೃಂಗಾರಮನಪ್ಪುಕೆಯ್ದು ಮೃದುಭಾವಂ ನಿನ್ನೊಳಿಂಬಾಗೆ ನೀಂ
ಮೃದುಶಯ್ಯಾ[1]ತಳದಲ್ಲಿರಲ್ಲಿ ಮಿಸುಪೆಮ್ಮೀ ತೋಳೊಳೆಮ್ಮೀ ನಿತಂ
ಬದೊಳೆಮ್ಮೀ ಕುಚಮಧ್ಯದೊಳ್ ಪೊರಳುತಿರ್ಪೀ ನಿನ್ನ ದಿವ್ಯಾಂಗಮೊ
ರ್ಮೊದಲೊಳ್ ಕರ್ಕಶಭೂಮಿಯೊಳ್ ಪೊರಳೆ ಕಂಡಾವೆಂತು ಸೈರಿಪ್ಪೆವೋ ೯೮

ಎತ್ತಿ ನಡೆವಮರರಂ ಬೆಂ
ಬತ್ತುವ ಸಮಯದೊಳಮಿಲ್ಲದೀ ವಿಧಿ ಹಾ ದೈ
ತ್ಯೋತ್ತಮ ಬಗೆಯದ ಬರಸಿಡಿ
ಲೆತ್ತಣಿನೈದಿದುದೊ ನಿನಗಿದಘಟಿತಘಟಿತಂ ೯೯

[2]ಪೊಱಮಟ್ಟರಿಬಲದೊಳ್ ತ
ಳ್ತಿಱಿಯದೆ ಕರುಮಾಡದಲ್ಲಿ ಲೀಲೆಯನಿರ್ದೆ
ಮ್ಮಱಿಯನನದೇಕೆ ಸೊಡರ್ಗೊಂ
ಡಱಿಸುತ್ತುಂ ಬಂದು ಕೊಂದೆಯಕಟ ವಿಧಾತ್ರಾ ೧೦೦

ವೈರಿವಧೋಪಾಯಾಬ್ಧಿಯ
ಪಾರಮನಕಟೆಯ್ದಲೀಯದೆಡೆಯೊಳ್ ಕೊಂದೈ
ಹಾ ರಾಕ್ಷಸನಂ ನೀಂ ನಡು
ನೀರೊಳ್ ಪಱುಗೋಲನಿಂತು ಕೊಯ್ವುದೆ ವಿಧಿಯೇ ೧೦೧

ಮುದ್ದಾಡಿ, ೯೭. "ನನ್ನ ಪ್ರಭುವೇ! ಹಗೆಯನ್ನು ಸೋಲಿನ ಧೂಳಿನಲ್ಲಿ ಹೊರಳಿಸುವುದಕ್ಕೂ ವಿರಹಿಣಿಪ್ರಿಯೆಯನ್ನು ಹೂವಿನ ಧೂಳಿನಲ್ಲಿ ಹೊರಳಿಸುವುದಕ್ಕೂ ಸಮರ್ಥನಾದ ನೀನು ಹೀಗೆ ಭೂಮಿಯ ಧೂಳಿನಲ್ಲಿ ಹೊರಳಬಹುದೆ!? ೯೮. ಕೋಮಲ ಶೃಂಗಾರವನ್ನು ಪಡೆದು, ಮೃದುಭಾವ ಪೂರ್ಣನಾಗಿ ಮೃದುಶಯ್ಯಾತಲದಲ್ಲಿ ಇರುವಾಗ ಹೊಳೆಯುವ ನಮ್ಮ ಈ ತೋಳ ಮೇಲೂ ನಿತಂಬದ ಮೇಲೂ ಸ್ತನಗಳ ನಡುವೆಯೂ ಹೊರಳುತ್ತಿರುವ ನಿನ್ನ ಈ ದಿವ್ಯಾಂಗವು ತಟ್ಟನೆ ಈ ಕಠೋರ ಭೂಮಿಯಲ್ಲಿ ಹೊರಳುವುದನ್ನು ಕಂಡು ನಾವು ಹೇಗೆ ಸಹಿಸಿಕೊಂಡೇವು? ೯೯. ದೈತ್ಯೋತ್ತಮಾ! ಎದುರಿಸಿ ಬಂದ ದೇವತೆಗಳ ಬೆನ್ನು ಹತ್ತಿ ಹೋದಾಗಲೂ ಇಲ್ಲದ ವಿಧಿಯು, ಬರಬಾರದ ಈ ಬರಸಿಡಿಲು ಈಗ ಎಲ್ಲಿಂದ ಬಂದಿತೋ? ೧೦೦. ಶತ್ರುಬಲದ ಮೇಲೆ ಬಿದ್ದು, ಯುದ್ಧ ಮಾಡದೆ, ಉನ್ನತವಾದ ಉಪ್ಪರಿಗೆಯಲ್ಲಿ ಲೀಲೆಯಿಂದಿದ್ದ ನಮ್ಮ ಸ್ವಾಮಿಯನ್ನು, ಅದೇಕೆ ವಿಧಿಯೇ! ದೀಪ ಹಿಡಿದುಕೊಂಡು ಹುಡುಕುತ್ತ ಬಂದು ಕೊಂದೆಯೋ! ೧೦೧. ವಿಧಿಯೇ; ಶತ್ರುವನ್ನು ಕೊಲ್ಲುವ ಉಪಾಯ ಸಮುದ್ರದ ದಡವನ್ನು ಸೇರಲು ಅವಕಾಶ ಕೊಡದೆ ಈತನನ್ನು

---

೧. ತಳದಲ್ಲಿನಲ್ಲ (ಕಗ) ೨. ಪೊಱಮಟ್ಟು ದಿವಿಜರೊಳ್ (ಖ)

ನಾನಾವಿಧದಿಂ [1]ಪಿಡಿದಾ
ವೇನೆಂದೊಡಮಱಿದೆಯಿಲ್ಲ ಮಱಿದೊಱಗಿದೆಯೋ
ನೀನೆಮಗೆ ಮುಳಿದು ನುಡಿಯೆಯೊ
ಜಾನಿಸುತಿರ್ದಪೆಯೊ ಮದ್ಗುಣಂಗಳನರಸಾ ೧೦೨

[2]ಮನದೊಲವೀರ್ಷ್ಯೆಯಂ ಪಡೆಯಲೊಂದಿರುಳೊಂದಿನಿಸೊಂದೆ ಮಂಚದೊಳ್
[3]ಮುನಿದನಿತೊಂದು ನಿನ್ನ ಮುನಿಸಾಕ್ಷಣದಿಂ ತನುಸೋಂಕುವೆಮ್ಮ ಸೋಂ
ಕಿನೆ ಸಲೆ ಪೋಪುದಿನ್ನೆಮಗಗಮ್ಯನಲಕ್ಷ್ಯನದೃಶ್ಯನಾಗಿ ನೀ
ನೆನಸುಮಗಲ್ದ ಬಲ್ಮುಳಿಸು ನಲ್ಲನೆ ಕಾಲ್ವಿಡಿಯಲ್ಕೆ ಮಾಣ್ಗುಮೇ ೧೦೩

ಭಾವವಭಿನ್ನವಿಚ್ಛೆ ಪೆಱತಲ್ತು ಸುಖಂ ಸಮಮೆಂಬ ನಲ್ಮೆಯಿಂ
ಜೀವವದೊಂದೆ ನಲ್ಲರೊಳೊಡಲ್ಗಳೆ ಬೇಱೆನುತಿರ್ಪೆವಾದೊಡಿಂ
ದಾವೆಡೆ ನಿನ್ನ ಜೀವಮೆನೆ ಜೀವಿಸುತಿರ್ದಪೆವಿನ್ನು ನೀಂ ಪೃಥ
ಗ್ಜೀವರೆ ನಲ್ಲರೆಂದಱಿದೊಡಕ್ಕಟ ಧಾತ್ರನೆ ಮಾಟವಿಂತುಟೇ ೧೦೪

**ವ|| ಎಂದನೇಕಪ್ರಕಾರದಿಂ ಬಾಯಟೆದು ಪಳವಿಸುವ ಕಂಸಕಾಂತೆಯರ ಪ್ರಳಾಪಮಂ ಕೇಳ್ದು ಕಾರುಣ್ಯದಿಂದಕ್ರೂರಾದ್ಯರಂ ಕರೆದು ನಿಶಾಟಕಾಂತೆಯರಂ ಸಂತೈಸಿ ಕಂಸ ಕಂಸಾನುಜಾದಿ ಮದ್ಬಾಹುನಿಹತರ್ಗೆ ಯಥೋಚಿತಾಚಾರಮಂ ನೆಗಳ್ವುದೆಂದು ಬೆಸಸಿ**

ಮಧ್ಯದಲ್ಲೇ ಕೊಂದೆಯಲ್ಲಾ! ನೀನು ಹೀಗೆ ನಡುಗಡಲಿನಲ್ಲಿ ಹರಿಗೋಲನ್ನು ಒಡೆಯಬಹುದೆ? ೧೦೨. ಅರಸಾ! ನಾನಾ ವಿಧದಲ್ಲಿ ನಾವು ಏನು ಹೇಳಿದರೂ ನಿನಗೆ ತಿಳಿಯುವುದಿಲ್ಲ. ಮೈಮರೆತು ನಿದ್ರಿಸುವೆಯೋ! ನಮ್ಮ ಮೇಲೆ ಕೋಪಿಸಿಕೊಂಡು ಮಾತನಾಡೆಯೋ! ಅಥವಾ ನಮ್ಮ ಗುಣಗಳನ್ನು ಜ್ಞಾಪಿಸಿಕೊಳ್ಳುತ್ತಿರುವೆಯೋ; ೧೦೩. ನಲ್ಲನೇ; ಒಂದು ರಾತ್ರೆ ಒಂದೇ ಮಂಚದಲ್ಲಿದ್ದಾಗ ನಿನಗೆ ಬಂದ ಪ್ರಣಯಕೋಪವು ಸ್ವಲ್ಪ ಆಲಿಂಗಿಸಿದ ನಮ್ಮ ಮೈಸೋಂಕಿನಿಂದಲೇ ಪೂರ್ತಿಯಾಗಿ ಹೊರಟು ಹೋಯಿತು. ಇನ್ನು ನಾವು ಹತ್ತಿರ ಬರಲು ಅಶಕ್ಯನೂ ಎಲ್ಲಿರುವೆಯೆಂಬುದನ್ನು ತಿಳಿಸದವನೂ ಅದೃಶ್ಯನೂ ಆಗುವಂತೆ ಪೂರ್ತಿಯಾಗಿ ಅಗಲಿದ ಅತಿ ಕೋಪವು ಕಾಲು ಹಿಡಿದುಕೊಂಡರೆ ಹೋಗುವುದೇ!? ೧೦೪. 'ನಮ್ಮಿಬ್ಬರ ಭಾವವು ಒಂದೇ ಆದುದು. ಇಚ್ಛೆ ಬೇರಾದುದಲ್ಲ ಸುಖವು ಸಮವಾದುದು' ಎಂಬ ನಲ್ಮೆಯಿಂದ ನಲ್ಲರಲ್ಲಿ ದೇಹಗಳು ಬೇರೆಯಾದರೂ ಜೀವವು ಒಂದೇ ಎನ್ನುತ್ತಿದ್ದೆವು. ಆದರೆ ಇಂದು 'ಎಲ್ಲಿ ನಿನ್ನ ಜೀವ?' ಎನ್ನುವಂತೆ ಜೀವಿಸಬೇಕಾಗಿದೆ. ಇನ್ನು ನೀನು "ನಲ್ಲರು, ಬೇರೆ ಬೇರೆ ಜೀವವುಳ್ಳವ" ರೆಂದು ತಿಳಿಯುವೆ ಇದು, ಅಯ್ಯೋ, ವಿಧಿಯ ಮಾಟವಲ್ಲವೆ? ವ|| ಎಂದು ಅನೇಕ ರೀತಿಯಲ್ಲಿ ಬಾಯಿ ಬಿಟ್ಟು ಹಲುಬುತ್ತಿರುವ ಕಂಸಕಾಂತೆಯರ ಪ್ರಲಾಪವನ್ನು ಕೇಳಿ ಕೃಷ್ಣನು ಕರುಣೆಯಿಂದ ಅಕ್ರೂರನೇ ಮೊದಲಾದವರನ್ನು ಕರೆದು, ಕಂಸಕಾಂತೆಯರನ್ನು ಸಂತೈಸಿ, ಕಂಸ, ಕಂಸನ

---

೧. ಪಳವಿಸಲೇ (ಕಗ) ೨. ಮನದೊಲವಿಂದೆ ಪೆಂಡಿರೊಳಗೊಂದಿ (ಕಗ)
೩. ಮುನಿದಿನಿಸೊಂದು (ಕಗ)

ನಿಗಡನಿರುದ್ಧನಂ ತನಯಶೋಕವಿಲಾಪಿಯನುಗ್ರಸೇನನಂ
ನಗಧರನೊಲ್ದು ಸಂತವಿಸೆ ಯಾದವರಾಜ್ಯಮನೀತನೀಟಿಕೊಳಲ್
ಬಗೆದು ಮದೀಯಸೂನುಗಳನಿಕ್ಕಿದನೆಂದವಿವೇಕಿಯಾ ಮುರಾ
ರಿಗೆ ಕೊಡಲೆಂದು ರಾಜ್ಯಪದಮಂ ನುಡಿದಂ ಭಯದಿಂದಮಾಹುಕಂ ೧೦೫

ಕೊನೆವುರ್ವಿಂ ನಸುಜರ್ವಿ ಪದ್ಮಭವಚಂದ್ರೇಂದ್ರಾರ್ಕಮುಖ್ಯಾಮೃತಾ
ಶನರ್ಗಂತಪ್ಪ ಪದಂಗಳಂ ಕುಡುವತರ್ಕೈಶ್ವರ್ಯನಾ ರಾಜ್ಯಮಂ
ಮನದೊಳ್ ಭಾವಿಸದುಗ್ರಸೇನನನೆ ಬಂಧೋನ್ಮುಕ್ತನಂ ಮಾಡಿ ತ
ತ್ತನಯಶ್ರೀಸ್ಥಿತನಾಗೆ [1]ಮಾಡಲೊಸೆದಂ ಶ್ರೀದೇವಕೀನಂದನಂ ೧೦೬

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಮಾಮ್ನಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥ ವಿಜಯ ಮಹಾಪ್ರಬಂಧದೊಳ್ ರಜಕಾಸುರಪ್ರ
ಹರಣ ಧನುರ್ಭಂಗ ಕುವಲಯಾಪೀಡನಿಷ್ಪೀಡನ
ಚಾಣೂರಮುಷ್ಟಿಕ ತೋಸಲಕಾದಿಮಲ್ಲ
ಮಥನ ಕಂಸಧ್ವಂಸವರ್ಣನಂ
ಷಷ್ಠಾಶ್ವಾಸಂ

ತಮ್ಮನ್ನೇ ಮೊದಲಾದವರಿಗೆ ತಕ್ಕ ಅಂತ್ಯಕ್ರಿಯೆಯನ್ನು ಮಾಡಬೇಕೆಂದು ಆಜ್ಞಾಪಿಸಿದನು. ೧೦೫. ಆಮೇಲೆ ಕೃಷ್ಣನು ಸಂಕೋಲೆಯಿಂದ ಬಂಧಿತನಾಗಿದ್ದು ಪುತ್ರಶೋಕದಿಂದ ಪೀಡಿತನಾಗಿ ವಿಲಾಪಿಸುತ್ತಿದ್ದ ಉಗ್ರಸೇನನನ್ನು ಸಂತೈಸಿದನು. ಯಾದವರಾಜ್ಯವನ್ನು ಕಿತ್ತು ಕೊಳ್ಳುವುದಕ್ಕಾಗಿ ನನ್ನ ಮಕ್ಕಳನ್ನು ಕೃಷ್ಣನು ಕೊಂದನೆಂದು ಭಾವಿಸಿದ್ದ ಆ ಅವಿವೇಕಿ ಉಗ್ರಸೇನನು ರಾಜಪದವಿಯನ್ನು ಕೃಷ್ಣನಿಗೇ ಕೊಡುವುದಾಗಿ ಭಯದಿಂದ ಹೇಳಿದನು. ೧೦೬. ಹುಬ್ಬಿನ ಕೊನೆಯನ್ನು ಸ್ವಲ್ಪ ಅಲುಗಿಸಿ, ಬ್ರಹ್ಮ ಚಂದ್ರಸೂರ್ಯರೇ ಮೊದಲಾದ ಅಮೃತಾನ್ನ ಭೋಜನರಿಗೆ ಅಂತಹ ಪದವಿಗಳನ್ನು ಕೊಡುವ ಊಹೆಗೆ ನಿಲುಕದ ಐಶ್ವರ್ಯವುಳ್ಳ ಕೃಷ್ಣನು ಆ ರಾಜ್ಯವನ್ನು ಮನಸ್ಸಿನಲ್ಲೂ ಸ್ವಲ್ಪವೂ ಆಶಿಸದೆ ಉಗ್ರಸೇನನನ್ನು ಬಂಧನದಿಂದ ಬಿಡಿಸಿ, ಅವನ ಮಗನ ರಾಜ್ಯಶ್ರೀಯಲ್ಲಿ ಅವನನ್ನೇ ನಿಲ್ಲಿಸಿ ಕೃಪೆದೋರಿದನು. ಇದು ಸಮಸ್ತ ಕಮಲಭವಾಂಡ... ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರ ಪ್ರಣೀತ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ರಜಕಾಸುರ ಸಂಹಾರ, ಧನುರ್ಭಂಗ ಕುವಲಯಾಪೀಡ ಮರ್ದನ, ಚಾಣೂರ ಮುಷ್ಟಿಕ ತೋಸಲಕರೇ ಮೊದಲಾದ ಜಟ್ಟಿಗಳ ಕೊಲೆ, ಕಂಸ ಧ್ವಂಸಗಳ ವರ್ಣನಗಳ ಆರನೆಯ ಆಶ್ವಾಸ.

---

೧. ಮಾಡಲೆಸದಂ (ಕಖಗ)

# ಸಪ್ತಮಾಶ್ವಾಸಂ

ಶ್ರೀಮತ್ಸಿಂಹಾಸನ ಸಿತ
ಚಾಮರಧವಳಾತಪತ್ರಭೇರೀಚಿಹ್ನೋ
ದ್ದಾಮ ಯದುರಾಜ್ಯಸವನಮ
ನಾ ಮುರಹರನುಗ್ರಸೇನನೃಪತಿಗೆ ನೆಗಟ್ದಿಂ ೧

ವನಿತಾಸಂಕುಳಮಿಂಬುಕೆಯ್ಯೆ ನಿಜತೇಜಂ ದಿಗ್ಜಯಂಗೆಯ್ಯೆ ಭೃ
ತ್ಯನಿಕಾಯಂ ಬೆಸಕೆಯ್ಯೆ ಸಜ್ಜನಚಯಂ ಸಂಕೀರ್ತನಂಗೆಯ್ಯೆ ವೈ
ರಿನೃಪರ್ ಪೇಟ್ದುದುಗೆಯ್ಯೆ ವಿಶ್ವಜನವಾಜ್ಞಾರಕ್ಷಣಂಗೆಯ್ಯೆ ಕೃ
ಷ್ಣನ ಕಾರುಣ್ಯಮನಪ್ಪುಕೆಯ್ದರಸುಗೆಯ್ದಂ ಲೀಲೆಯಿಂದಾಹುಕಂ ೨

ವ|| ಅಂತು ಸಿಂಹಾಸನಾಸೀನನಾಗಿರ್ದ ಯದುಸಿಂಹನಂ ಪುರುಷಸಿಂಹನಾಜ್ಞಾಪನಂ ಗೆಯ್ದು

[1]ಭೂಪರ್ಗಣಿದಮೆ ನೀನಾ
ಜ್ಞಾಪಿಸು ಮದ್ಬಾಹುಬಲದಿನಮರರನೆಂದಾ
ಟೋಪದಿನಾಮಂತ್ರಿಸೆ ನಿಜ
ರೂಪದೆ [2]ಬೆಸನೇನೆನುತ್ತೆ ಪವನಂ ಬಂದಂ ೩

ವ|| ಅಂತು ಬಂದಭಿಮುಖದೊಳಿರ್ದೇಣವಾಹನನಂ ಮನಂಗೊಂಡು – ಎಲೆ ವಾಯುದೇವ ದೇವೇಂದ್ರನಲ್ಲಿಗೆ ಪೋಗಿ ನೀನಿಂತೆಂದು ಪೇಟ್ವುದು – ಎಂತೆನೆ

೧. ಶ್ರೀಯುತವಾದ ಸಿಂಹಾಸನ ಶ್ವೇತಛತ್ರ ಚಾಮರ ಭೇರಿ ಚಿಹ್ನೆಗಳುಳ್ಳ ಉತ್ತಮವಾದ ಯದುರಾಜ್ಯದ ಪಟ್ಟಾಭಿಷೇಕವನ್ನು ಉಗ್ರಸೇನ ರಾಜನಿಗೆ ಶ್ರೀಕೃಷ್ಣನು ಮಾಡಿದನು. ೨. ಉಗ್ರಸೇನನು ಕೃಷ್ಣನ ಕೃಪಾಪಾತ್ರನಾಗಿ ಲೀಲೆಯಿಂದ ರಾಜ್ಯಭಾರವನ್ನು ವಹಿಸಿದನು. ಅವನ ತೇಜಸ್ಸು ದಿಗ್ಜಯವನ್ನು ಪಡೆಯಿತು. ಭೃತ್ಯಸಮೂಹವು ಹೇಳಿದಂತೆ ನಡೆಯುತ್ತಿದ್ದಿತು. ಸಜ್ಜನವರ್ಗವು ಸಂಕೀರ್ತನ ಮಾಡುತ್ತಿದ್ದಿತು. ವನಿತಾಸಮೂಹವು ವಿಧೇಯತೆಯಿಂದ ನಡೆಯುತ್ತಿದ್ದರು. ಶತ್ರುರಾಜರೂ ಹೇಳಿದುದನ್ನು ಮಾಡುತ್ತಿದ್ದರು. ಸಕಲಜನರೂ ಆಜ್ಞೆಯನ್ನು ಪರಿಪಾಲಿಸುತ್ತಿದ್ದರು. ವ|| ಹಾಗೆ ಸಿಂಹಾಸನವನ್ನೇರಿದ ಉಗ್ರಸೇನನಿಗೆ ಪುರುಷೋತ್ತಮ ಕೃಷ್ಣನು ಆಜ್ಞಾಪಿಸಿದನು. ೩. "ನನ್ನ ಬಾಹುಬಲವಿರುವಾಗ ನಿನಗೆ ಭೂಪಾಲಕರು ಲೆಕ್ಕವೇ; ದೇವತೆಗಳಿಗೆ ಆಜ್ಞಾಪಿಸು." ಎಂದು ದರ್ಪದಿಂದ ಕರೆಯಲಾಗಿ, ವಾಯುದೇವನು, ತನ್ನ ನಿಜರೂಪದಿಂದ ಬಂದು 'ಆಜ್ಞೆಯೇನು" ಎಂದನು. ವ|| ಹಾಗೆ ಬಂದು ಎದುರಿಗೆ ನಿಂತಿದ್ದ ವಾಯುವನ್ನು ನೋಡಿ ಉಗ್ರಸೇನನು "ಎಲೈ ವಾಯುದೇವ, ನೀನು ದೇವೇಂದ್ರನಲ್ಲಿಗೆ ಹೋಗಿ, ಹೀಗೆಂದು ಹೇಳಬೇಕು. ಹೇಗೆಂದರೆ-

---

೧. ಭೂಪರ್ಗಧಿಕನೆ (ಗ) ೨. ನೀಂ ಬೆಸೆಸೆನುತ್ತೆ (ಗ)

ಬಿಡುವುದು ಗರ್ವಮಂ ಪಿಡಿವುದಾರ್ಜವಮಂ ಸಭೆಯಂ ಸುಧರ್ಮೆಯಂ
ಕುಡುವುದು ಜಿಷ್ಣು ವಿಷ್ಣುಭುಜಾಪಾಲಿತಯಾದವರ್ಗೆಂ ಮದಾಜ್ಞೆಯಿಂ
ನಡೆವುದು ದೇವಕೀಸುತನನುಜ್ಞೆಯೊಳಾಹುಕನೆನ್ನನಟ್ಟಿದಂ
ನುಡಿದಿದನಿಂತು ನೀನಜೆಪು ವಜ್ರಧರಂಗೆ ಕುರಂಗವಾಹನಾ ೪

ವ|| ಎಂಬುದುಮಂತೆಗೆಯ್ವೆನೆಂದು ಪೋಗಿ ಪುರುಹೂತಂಗೆ ಮಾತರಿಶ್ವನಾ ಮಾತಂ ಸವಿಸ್ತರಂ ಪೇಟೆ ಪೌಲೋಮೀವರಂ ಗೋವರ್ಧನ ಗಿರೀಂದ್ರಧರನ ಸಾಮರ್ಥ್ಯಮಂ ನೆನೆದು ಮನದೊಳಳ್ಕಿ

ಉದಯಿಸೆ ಭಾನು ಭಾನುಮಣಿಯೊಳ್ ಕಡುಗಾಯ್ಪೊಗೆವಂದದಿಂದಮಾ
ಸ್ಪದವತಿತಿಣ್ಣಮಾಗೆ ದೊರೆಕೊಂಡುದು ಗಂಡಗುಣಂ ಯದುವ್ರತಾ
ನದೊಳದಱಿಂ ಪೊಡರ್ಪು ನಿಜವಲ್ಲದ ಯಾದವರ್ಗಂಜೆನಂಜೆನಂ
ಜಿದಪೆನಧೋಕ್ಷಜಂಗೆ ಮೆಳೆಗಂಜದೊಡಂ ಪುಲಿಗಂಜುವಂತೆವೋಲ್ ೫

ಕಂಸವಧಂಗೆಯ್ದ ಮುರ
ಧ್ವಂಸಿಗೆ ಪೂಜಾರ್ಥಮೆಂದು ಮಾರುತ ಕೊಟ್ಟೆಂ
ನೀಂ ಸಭೆಯಂ ಕೊಂಡುಯ್ವುದಿ
ದಂ ಸಲಿಸಿದೆನೆಂದು ವಜ್ರಿ ನುಡಿವುದುಮಾಗಳ್ ೬

ವನಜಾಕ್ಷಾಜ್ಞೆಯೊಳಿಂದ್ರರಾಜಪದವೆಟ್ಟಿಂದಪ್ಪುದಿಂದುಗ್ರಸೇ
ನನೃಪಂಗೆಂಬಿನೆಗಂ ಜಗನ್ನಯನನುಂ ಕಣ್ಬುಳ್ಕುವಂತಾತ್ತ ರ
ತ್ನನಿಕಾಯದ್ಯುತಿ ಪೊಣ್ಮೆ ಕಾಮವಿಪುಳಂ ಕಾಮಪ್ರದಂ ಕಾಮಗಾ
ಮಿ ನಭೋಮಾರ್ಗದೆ ಬಂದುದಿಂದ್ರನ ಸಭಾಹರ್ಮ್ಯಂ ಸುಧರ್ಮಾಹ್ವಯಂ ೭

೪. 'ಇಂದ್ರಾ! ಇನ್ನು ನೀನು ನಿನ್ನ ಗರ್ವವನ್ನು ಬಿಟ್ಟು ಸರಳಮಾರ್ಗವನ್ನು ಹಿಡಿಯಬೇಕು. ನಿನ್ನ ಸುಧರ್ಮ ಸಭೆಯನ್ನು ವಿಷ್ಣುವಿನ ಭುಜಪಾಲಿತರಾದ ಯಾದವರಿಗೆ ಕೊಡಬೇಕು. ಇನ್ನು ನನ್ನ ಆಜ್ಞೆಯಂತೆ ನಡೆಯಬೇಕು. ದೇವಕೀಪುತ್ರನ ಅನುಜ್ಞೆಯಿಂದ ಉಗ್ರಸೇನನು ನನ್ನನ್ನು ಕಳುಹಿಸಿದನು.' ಎಂದು ಇಂದ್ರನಿಗೆ ಹೇಳು ಕುರಂಗವಾಹನಾ." ವ|| ಎನ್ನಲು 'ಹಾಗೆಯೇ ಮಾಡುವೆನೆಂದು' ಹೇಳಿ, ವಾಯುವು ಇಂದ್ರನಲ್ಲಿಗೆ ಹೋಗಿ, ಅವನಿಗೆ ಆ ಮಾತನ್ನು ವಿಸ್ತರವಾಗಿ ಹೇಳಿದನು. ಇಂದ್ರನು ಗೋವರ್ಧನಗಿರಿಧರನ ಸಾಮರ್ಥ್ಯವನ್ನು ನೆನಸಿಕೊಂಡು, ಮನಸ್ಸಿನಲ್ಲೇ ಭೀತಿಗೊಂಡನು. ೫. "ಸೂರ್ಯನು ಉದಯಿಸಿದರೆ ಸೂರ್ಯಕಾಂತಮಣಿಯಲ್ಲಿ ಹೆಚ್ಚಾಗಿ ಕಾವು ಉರಿ ಉಂಟಾಗುವಂತೆ ಆಶ್ರಯವು ಅತಿ ತೀಕ್ಷ್ಣವಾಗಿರುವುದರಿಂದ ಯದುಸಮೂಹಕ್ಕೂ ಪೌರುಷಗುಣವುಂಟಾಗಿದೆ. ಆದುದರಿಂದ ಸ್ವಪ್ರತಾಪವಿಲ್ಲದ ಯಾದವರಿಗೆ ನಾನು ಅಂಜುವುದಿಲ್ಲ. ಅಳುಕುವುದಿಲ್ಲ. ಮೆಳೆಗೆ ಅಂಜದಿದ್ದರೂ ಅದರ ನಡುವೆ ಇರುವ ಹುಲಿಗೆ ಅಂಜುವಂತೆ ಕೃಷ್ಣನಿಗೆ ಅಂಜುವೆನು. ೬. ಮಾರುತಾ! ಕಂಸವಧೆಯನ್ನು ಮಾಡಿದ ಕೃಷ್ಣನಿಗೆ ಪೂಜಾರ್ಥವಾಗಿ ನನ್ನ ಸಭಾಭವನವನ್ನು ಕೊಟ್ಟಿದ್ದೇನೆ. ನೀನು ಇದನ್ನು ಒಯ್ಯಬೇಕು. ಇದನ್ನು ಸಲ್ಲಿಸಿದ್ದೇನೆ" ಎಂದು ಇಂದ್ರನು ಹೇಳಿದನು. ಆಗ ೭. ಕೃಷ್ಣನ ಆಜ್ಞೆಯಿಂದ ಇಂದು ಉಗ್ರಸೇನ ರಾಜನಿಗೆ ಇಂದ್ರರಾಜ ಪದವೇ ಬರುತ್ತದೆ ಎನ್ನುವಂತೆ, ಸೂರ್ಯನ ಕಣ್ಣುಕೋರೈಸುವಂತೆ ಅದರ

ವ॥ ಅಂತು ಬಂದ ದಿವ್ಯಸಭೆಯಂ ಯದುಪುಂಗವಂ ದೇವಕೀತನೂಭವರ ಭುಜಾಶ್ರಯದ ಬಲದಿನುಪಭೋಗಿಸುತ್ತುಂ ಸುಖದಿನಿರೆ

ಅನಿತುಂ ವಿದ್ಯಾಪ್ರಪಂಚಂ ತನಗೆ ವಿದಿತಮಾಗಿರ್ದೊಡಂ ಶ್ರೀಮುಕುಂದಂ
ಮನುಜರ್ಗಾಚಾರ್ಯಶಿಷ್ಯಕ್ರಮಮನಱಿಪುವೊಂದಟ್ಟೆಯಿಂ ರೋಹಿಣೇಯನಂ
ದನಯುಕ್ತಂ ಪೋಗಿ ಕಾಶೀಕ್ಷಿತಿಯೊಳೆಸೆವವಂತೀಪುರಾವಾಸಿ [1]ಸಾಂದೀ
ಪನಿಯೊಳ್ ಶಿಷ್ಯತ್ವಮಂ ಪೊರ್ದಿದ ನೆವದೆ ಕಲಾಪ್ರೌಢಿಯಂ ತಾಳ್ದಿ ನಿಂದಂ ೮

[2]ಸಾಂದೀಪನಿಯ ಸುವಿದ್ಯೆ ಮು
ಕುಂದನ ಸಂಗತಿಯೊಳತಿವಿಕಾಸಮನೊಳಕೊಂ
ಡಂದೆಸೆದುದು ಪೂಗೊಳದರ
ವಿಂದಿನಿ ದಿನಕರನ ಸಂಗದಿಂ ವಿಕಸಿಪವೋಲ್ ೯

ಗುರುವಿನ ವಿದ್ಯೆ ನಿತಾಂತಂ
ಪುರುಷೋತ್ತಮನಂತರಂಗದೊಳ್ ಕೋಟಿವಿಧಂ
ಸ್ಫುರಯಿಸಿದುದಭ್ರಶಶಿಕಳೆ
ತರಂಗಿತಾರ್ಣವದೊಳೆಸೆವವೋಲ್ ಬಹುವಿಧದಿಂ ೧೦

ಜಳಜಿನಿ ದಿನಕರನಿಂದು
ತ್ಪಳಿನಿ ಸುಧಾಕರನಿನಾಮ್ರವಲ್ಲರಿ ಮಧುವಿಂ
ಬೆಳಪಂತೆ ಕೃಷ್ಣನಿಂದಂ
ಬೆಳಗಿದುವೆನಿತೊಳವು ರಾಜವಿದ್ಯೆಗಳನಿತುಂ ೧೧

ರತ್ನಕಾಂತಿಯು ಉಕ್ಕುತ್ತಿರಲು ಕಾಮಬಹುಲವೂ ಕಾಮಪ್ರದವೂ ಕಾಮಗಾಮಿಯೂ ಆದ ಸುಧರ್ಮವೆಂಬ ಇಂದ್ರನ ಸಭಾಭವನವು ಆಕಾಶಮಾರ್ಗದಿಂದ ಬಂದಿತು. ವ॥ ಹಾಗೆ ಬಂದ ದಿವ್ಯಸಭೆಯನ್ನು ಯದುರಾಜನು, ಕೃಷ್ಣನ ಭುಜಾಶ್ರಯಬಲದಿಂದ ಅನುಭವಿಸುತ್ತ ಸುಖದಿಂದಿದ್ದನು. ಶ್ರೀಕೃಷ್ಣನು ತನಗೆ ಸಕಲ ವಿದ್ಯೆಯೂ ವಿದಿತವಾಗಿದ್ದರೂ ಮನುಜರಿಗೆ ಗುರು ಶಿಷ್ಯ ಕ್ರಮವನ್ನು ತಿಳಿಸುವ ಆಸಕ್ತಿಯಿಂದ ಬಲರಾಮನೊಡನೆ ಕಾಶೀಕ್ಷೇತ್ರಕ್ಕೆ ಹೋಗಿ ಅಲ್ಲಿದ್ದ ಅವಂತೀಪುರದ ಸಾಂದೀಪನಿಯೆಂಬ ಪಂಡಿತರಲ್ಲಿ ಶಿಷ್ಯತ್ವವನ್ನು ಪಡೆದು ಕಲಿತ ನೆಪದಿಂದ ಸಕಲ ಕಲೆಯಲ್ಲೂ ಪ್ರೌಢಿಮೆಯನ್ನು ಪಡೆದನು. ೯. ಕೊಳದ ಕಮಲವು ಸೂರ್ಯನ ಸಂಗದಿಂದ ವಿಕಾಸಗೊಳ್ಳುವಂತೆ ಸಾಂದೀಪನಿಯ ಸದ್ವಿದ್ಯೆಯು ಕೃಷ್ಣನ ಸಂಗದಿಂದ ಅತಿವಿಕಾಸವನ್ನು ಪಡೆದು ಪ್ರಕಾಶಿಸಿತು. ೧೦. ಆಕಾಶದ ಚಂದ್ರಕಳೆಯು ಅಲೆಗಳಿಂದ ಕೂಡಿದ ಸಮುದ್ರದಲ್ಲಿ ಬಹುವಿಧದಲ್ಲಿ ಹೊಳೆಯುವ ಹಾಗೆ, ಸಾಂದೀಪನಿಯ ವಿದ್ಯೆಯು ಕೃಷ್ಣನ ಅಂತರಂಗದಲ್ಲಿ ಕೋಟಿ ವಿಧವಾಗಿ ಪ್ರಕಾಶಿಸಿತು. ೧೧. ಕಮಲವು ಸೂರ್ಯನಿಂದಲೂ ನೈದಿಲೆಯು ಚಂದ್ರನಿಂದಲೂ ಎಳೆಮಾವಿನ ಮರವು ವಸಂತ ಋತುವಿನಿಂದಲೂ ಬೆಳೆದು ಹೊಳೆಯುವಂತೆ ರಾಜವಿದ್ಯೆಗಳೆಷ್ಟಿವೆಯೋ ಅಷ್ಟೂ

೧. ಸಾಂದೀಪನೊಳಂ (ಋಗ) ೨. ಸಾಂದೀಪನೆಸೆವ ವಿದ್ಯೆ

ಕೌಮುದಿಯಿಂ ವಿಧು ವಿಧುವಿಂ
ಕೌಮುದಿಯೆಸೆವಂತೆ ಸಕಲವಿದ್ಯೆಗಳಿಂದಂ
ತಾಮರಸೇಕ್ಷಣನೆಸೆದಂ
ತಾಮರಸೇಕ್ಷಣನಿನೆಸೆದುವಾ ವಿದ್ಯೆಗಳುಂ ೧೨

ಅಂತಱುವತ್ತುನಾಲ್ಕುದಿನದೊಳ್ ವಿದಿತಾಖಿಲವಿದ್ಯರಾದ ಕಂ
ಸಾಂತಕರೌಹಿಣೇಯರತಿಮಾನುಷಕರ್ಮಮನಂತರಂಗದೊಳ್
ಚಿಂತಿಸಿ ಚಂದ್ರಸೂರ್ಯರೆ ಮನುಷ್ಯಕುಮಾರಕರಾಗಿ ಬಂದರೇ
ನುಂ ತೊದಳಲ್ತೆನುತ್ತವರನಾ ಗುರು ವಿಸ್ಮಿತನಾಗಿ ನೋಡಿದಂ ೧೩

ಧರೆಗಾಚಾರಮನಱಿಪಲ್
ಗುರುವಿಂ ಕೃತವಿದ್ಯನಾದ ಕೃಷ್ಣಂ ಗುರುವಂ
ಗುರುದಕ್ಷಿಣೆಯಂ ಬೇಡೆನೆ
ಗುರುವುಂ ಬೇಡಲ್ಕೆ ಬಗೆದನೊಂದಘಟಿತಮಂ ೧೪

ವ|| ಎಲೆ ಕೇಳಮಾನುಷಪ್ರಭಾವಮುಂ ಪ್ರಭಾಸಲವಣಾರ್ಣವದೊಳ್

ವಿಗತಾಸುತ್ವಮನೆಯ್ದಿದಂ ಸುರರುಮಂ ಸೌಭಾಗ್ಯದಿಂ ಭಾಗ್ಯದಿಂ
ಮಿಗುವಸ್ಮತ್ಸುತನಿಂದೆ ತಂದು ಕುಡು ಭೂಯೋವತ್ಸನಂ ವತ್ಸನಂ
ನೆಗಟ್ದಾ ಸೌಮ್ಯನನೆಂದಜಾಂಡಘಟಮಾಲಾಚಕ್ರಿಯೊಳ್ ಚಕ್ರಿಯೊಳ್
ಮಗನಂ ಬೇಡಿದನೊಲ್ದನಿಲ್ಲ ಗುರು ವಿದ್ಯಾವಿತ್ತಮಂ ವಿತ್ತಮಂ ೧೫

ವ|| ಎಂಬುದುಂ ಗುರುಪುತ್ರಾಹರಣಪ್ರತಿಜ್ಞಾರೂಢನಾಗಿ ಮಕರಾಕರಮನೆಯ್ದಿ

ಕೃಷ್ಣನಿಂದ ಬೆಳಗಿದವು. ೧೨. ಬೆಳದಿಂಗಳಿನಿಂದ ಚಂದ್ರನೂ ಚಂದ್ರನಿಂದ ಬೆಳುದಿಂಗಳೂ ಪ್ರಕಾಶಿಸುವಂತೆ ಸಕಲವಿದ್ಯೆಗಳಿಂದ ಕೃಷ್ಣನೂ ಕೃಷ್ಣನಿಂದ ಸಕಲವಿದ್ಯೆಗಳೂ ಪ್ರಕಾಶಗೊಂಡುವು. ೧೩. ಹಾಗೆ ಅರವತ್ತುನಾಲ್ಕು ದಿನಗಳಲ್ಲಿ ಸಕಲ ವಿದ್ಯಾವಿಶಾರದರಾದ ಕೃಷ್ಣ ಬಲರಾಮರುಗಳ, ಮನುಜರಿಗೆ ಅಶಕ್ಯವಾದ ಕಾರ್ಯವನ್ನು ಮನದಲ್ಲೇ ಚಿಂತಿಸಿದ ಗುರುಸಾಂದೀಪನಿಯು ಚಂದ್ರಸೂರ್ಯರೇ ಮನುಷ್ಯಕುಮಾರರಾಗಿ ಬಂದಿರುವರು, ಇದು ಸ್ವಲ್ಪವೂ ಸುಳ್ಳಲ್ಲ ಎಂದುಕೊಂಡು ಅತ್ಯಾಶ್ಚರ್ಯದಿಂದ ಅವರನ್ನು ನೋಡಿದನು. ೧೪. ವಿದ್ಯಾಭ್ಯಾಸವನ್ನು ಮಾಡಿದ ಕೃಷ್ಣನು ಲೋಕಕ್ಕೆ ಆಚಾರವನ್ನು ತಿಳಿಸುವುದಕ್ಕಾಗಿ ಗುರುದಕ್ಷಿಣೆಯನ್ನು ಕೇಳಬೇಕೆಂದು ಗುರುವನ್ನು ಪ್ರಾರ್ಥಿಸಿದನು. ಗುರುವೂ ಒಂದು ಅಸಾಧ್ಯವಾದ ಗುರುದಕ್ಷಿಣೆಯನ್ನು ಕೇಳಲು ಯೋಚಿಸಿದನು. ವ|| "ಎಲೈ ಅಮಾನುಷ ಪ್ರಭಾವಾ! ಕೇಳು. ಹಿಂದೆ ಪ್ರಭಾಸಲವಣ ಸಮುದ್ರದಲ್ಲಿ ೧೫. ಸೊಬಗಿನಿಂದಲೂ ಭಾಗ್ಯದಿಂದಲೂ ದೇವತೆಗಳನ್ನೂ ಮೀರಿದ ನಮ್ಮ ಮಗನು ಪ್ರಾಣವನ್ನು ಕಳೆದುಕೊಂಡನು. ನನಗೆ ಪ್ರಿಯತಮನೂ ಸೌಮ್ಯನೂ ಆದ ಆ ಮಗನನ್ನು ಇಂದೇ ತಂದುಕೊಡು" ಎಂದು ಬೇಡಿದನು. ವಿದ್ಯಾಶುಲ್ಕವಾಗಿ ಹಣವನ್ನು ಆತನು ಬೇಡಲಿಲ್ಲ. ಗುರು ಹಾಗೆ ಬೇಡಲು ಕೃಷ್ಣನು ಗುರುಪುತ್ರನನ್ನು ತರುವ ಪ್ರತಿಜ್ಞೆಯನ್ನು ಮಾಡಿ, ಸಮುದ್ರವನ್ನು ಸಮೀಪಿಸಿದನು.

ಡಿಂಡೀರಾವಳಿಶಂಖವಲ್ಲರಿಯಿನೂರ್ಮಿಸ್ತೋಮಮುದ್ಯತ್ತಯ
ಶ್ಶುಂಡಾಲೌಘದಿನುಗ್ರನಕ್ರಕುಲಮಾವರ್ತಂಗಳಿಂ ವಿದ್ರುಮಂ
ಚಂಡೌರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪಾ ಮಹಾಂಭೋಧಿಯಂ
ಕಂಡುತ್ಕೋಪದಿನೊಂದು ಬೆಂಚೆಯನೆ ಕಂಡೆಂತಾದನಬ್ಜೋದರಂ ೧೬

ತುಳುಕುವೊಡೆಯ್ದದೊರ್ಕುಡಿತೆಗಂ ತೆಗೆದೀಂಟುವೊಡಾಗದೊಂದು ಮು
ಕ್ಕುಳಿಗೆನೆ ಸಾಲ್ವುದಿಲ್ಲ ಪುಗಲುಂ ಕರದಿಂದೆ ಕಲಂಕಿ ನೋಡಲುಂ
ಜಳನಿಧಿಯೆಂಬ ಕೋಪದೆ ನಿರೀಕ್ಷಿಸಿ ಲೋಚನರಾಗದಿಂದಮ
ಗ್ಗಳಿಸಿದನಬ್ಧಿತೀರವನವಿದ್ರುಮರಾಗಮನಬ್ಜಲೋಚನಂ ೧೭

ವII ಅಂತಾಕ್ಷೇಪದಿಂ ನಿರೀಕ್ಷಿಸಿ

ದೊರೆಗೆಟ್ಟಂದೊಳಕೊಂಡೆಯಿನ್ನುಗುಳುಗುಳ್ ನೀಂ ವಾಹಿನೀನಾಥ ಮ
ದ್ಗುರು[1]ಸಾಂದೀಪನಿ ಪುತ್ರನಂ ತಡೆಯದೆಂದಾಟೋಪದಿಂ ಪೊಕ್ಕು ಸಾ
ಗರಮಂ ಕೂಡೆ ತೆರಳ್ಚಿದಂ ತೊಳಸಿದಂ ತುಳ್ಕಾಡಿದಂ ತೂಳಿದಂ
ತೆರೆಯೇಟಲ್ ಕದಡಲ್ ಕೆಸರ್ಮಸಗಲಂತಾ ದೇವಕೀನಂದನಂ ೧೮

ವII ಆಗಳಾ ಸರಿನ್ನಾಥಂ ಸಾರ್ಘ್ಯಹಸ್ತನಾಗಿ ಜಗನ್ನಾಥನಂ ಶರಣ್ಪೊಕ್ಕು [2]ಸಾಂದೀಪನಿತನಯನನೆನ್ನೊಳಿರ್ಪ ಪಂಚಜನನೆಂಬ ನಕ್ತಂಚರಂ ನುಂಗಿದನೆಂದು ಬಿನ್ನವಿಸೆ ಕೃಷ್ಣಂ ಸಿಂಹನಾದಂಗೆಯ್ದು ಪೊಱಮಡೆಂದು ಗಜಱಿ ಗರ್ಜಿಸೆ

೧೬. ನೊರೆಗಳ ಸಾಲು, ಶಂಖಗಳ ಸಾಲಿನಿಂದಲೂ ಅಲೆಗಳ ಸಮೂಹವು ದೊಡ್ಡ ನೀರಾನೆಗಳ ಗುಂಪಿನಿಂದಲೂ ಕ್ರೂರವಾದ ಮೊಸಳೆಗಳ ಗುಂಪು ಸುಳಿಗಳಿಂದಲೂ ಹವಳವು ಕ್ರೂರವಾದ ಬಡಬಾಗ್ನಿಯ ಹೊಳಪಿನಿಂದಲೂ ಎರಡರಷ್ಟಾಗುತ್ತಿರುವ ಮಹಾಸಮುದ್ರವನ್ನು ಕಂಡು ಕೃಷ್ಣನು ಅತಿ ಕೋಪದಿಂದ ಅದನ್ನು ಒಂದು ಕುಂಟೆಯಂತೆ ಭಾವಿಸಿ ಅಲಕ್ಷ್ಯದಿಂದ ನೋಡಿದನು. ೧೭. ತುಳುಕೋಣವೆಂದರೆ ಒಂದು ಸೇರೆಗೂ ಬರುವುದಿಲ್ಲ. ಮೊಗೆದು ಕುಡಿಯೋಣವೆಂದರೆ ಒಂದು ಸಾರಿ ಬಾಯಿತುಂಬಿಕೊಳ್ಳುವುದಕ್ಕೂ ಆಗುವುದಿಲ್ಲ, ಹೊಗುವುದಕ್ಕೂ ಕಯ್ಯಿಂದ ಕಲಕಿನೋಡುವುದಕ್ಕೂ ಸಾಲದು, ಈ ಸಮುದ್ರ, ಎಂಬ ಕೋಪದಿಂದ ಅದನ್ನು ನೋಡಿದನು. ಕಣ್ಣಿನ ಕೆಂಪಿನಿಂದ ಸಮುದ್ರತೀರದಲ್ಲಿದ್ದ ವನದ ಚಿಗುರುಗಳ ಕೆಂಪು ಹೆಚ್ಚಿತು. ವII ಹಾಗೆ ಆಕ್ಷೇಪಪೂರ್ವಕವಾಗಿ ನೋಡಿ, ೧೮. "ನದೀಪತಿಯೇ! ನೀನು ರೀತಿಗೆಟ್ಟು, ಅಂದು ನನ್ನ ಗುರು ಸಾಂದೀಪನಿಯ ಪುತ್ರನನ್ನು ಒಳಕೊಂಡೆ. ಇಂದು ಇನ್ನು ತಡಮಾಡದೆ ಉಗುಳು ಉಗುಳು!" ಎಂದು, ಕೃಷ್ಣನು ಆಟೋಪದಿಂದ ಆ ಸಾಗರವನ್ನು ಹೊಕ್ಕು ಅಲ್ಲಾಡಿಸಿದನು; ತೊಳಸಿದನು, ಕೆಸರು ಹೆಚ್ಚಾಗುವಂತೆಯೂ ತೆರೆಯೇಳುವಂತೆಯೂ ತುಳುಕಾಡಿ ತೂರಿದನು. ವII ಆಗ ಆ ನದೀನಾಥನು ಪೂಜಾದ್ರವ್ಯಹಸ್ತನಾಗಿ ಆ ಜಗನ್ನಾಥನನ್ನು ಮರೆಹೊಕ್ಕು ಸಾಂದೀಪನಿಯ

೧. ಸಾಂದೀಪನ (ಖಗ) ೨. ಸಾಂದೀಪನತನಯನ (ಖಗ)

ಏಕಾರ್ಣವಮಾಗೆ ಜಗಂ
ವೈಕುಂಠನ ಕಿವಿಯ ಕೊಗ್ಗಿಯಿಂದಂದೊಗೆತಂ
ದಾ ಕೈಟಭನಿವನೆನೆ ನೀ
ರಾಕರದೊಳ್ ನೆಗಟ್ದನತಿಬಳಂ ಪಂಚಜನಂ ೧೯

ಏನುದಧಿಗುಂಟೆ ಪೆಱತೌ
ರ್ವಾನಳನೀ ಕ್ರೂರದಾನವೇಂದ್ರನ ಕೋಪೋ
ಗ್ರಾನಳನೆ ಜಳಧಿಗಾಯ್ತೌ
ರ್ವಾನಳನೆನಿಸಿದುದು ಪಂಚಜನನುತ್ಕೋಪಂ ೨೦

ಇಳೆಯೊಳ್ ಮುನ್ನಮೆ ಪುಟ್ಟಿದಾ ದನುಜರಿಂತೀ ಧೈರ್ಯಮೀ ಶೌರ್ಯಮೀ
ಬಳಮೀ ಸಾಹಸಮೀ ಭುಜಾಸ್ಫುರಣಮೀ ಸಂರಂಭಮೀ ಕ್ಷೋಭಮೀ
ಚಳಮೀ ವಿಕ್ರಮಮೀ ಮಹಾರಭಸಮೀ ರೌದ್ರತ್ವಮೀ ವೀರಮಾ
ರಳವಲ್ಲೆಂಬಿನಮಂತು ಪಂಚಜನನುಗ್ರಾಟೋಪಮಂ ತಾಳ್ದಿದಂ ೨೧

ಕ್ಷಿತಿ ಕಂಪಂಗೊಳೆ ಕೃಷ್ಣ ಪಂಚಜನಯುದ್ಧಂ ನಾಡೆಯುಂ ಬೇಗಮ
ದ್ಭುತಮಾದತ್ತಿತರೇತರಕ್ಷುಭಿತನೇತ್ರಾಳೋಕಮನ್ಯೋನ್ಯ ಹ
ಸ್ತತಳಾಘಾತಪರಸ್ಪರಪ್ರಮಥನಂ ಕಣ್ಗುರ್ಬಿಸಲ್ ಪುಂಗವಾ
ಯಿತ ಸಿಂಹಾಯಿತ ಕುಂಜರಾಯಿತ ನಿಯುದ್ಧಂ ತಾನಿದೆಂಬನ್ನೆಗಂ ೨೨

ಮಗನನ್ನು ನನ್ನಲ್ಲಿರುವ ಪಂಚಜನನೆಂಬ ರಾಕ್ಷಸನು ನುಂಗಿದನೆಂದು ಬಿನ್ನವಿಸಿದನು. ಕೃಷ್ಣನು ಆ ರಾಕ್ಷಸನನ್ನು 'ಹೊರಡು' ಎಂದು ಸಿಂಹದಂತೆ ಗರ್ಜಿಸಿ ಗದರಿಸಿದನು. ೧೯. ಜಗತ್ತು ಒಂದು ಸಾಗರವಾದಾಗ ವಿಷ್ಣುವಿನ ಕಿವಿಯ ಗುಗ್ಗೆಯಿಂದ ಉದಿಸಿದ ಆ ಕೈಟಭನೇ ಇವನೆನ್ನುವಂತೆ ಅತಿ ಬಲಶಾಲಿಯಾದ ಪಂಚಜನನು ಸಮುದ್ರದೊಳಗೆ ಪ್ರಖ್ಯಾತನಾಗಿದ್ದನು. ೨೦. ಔರ್ವಾನಲವೆಂದರೆ ಬೇರಾವುದೋ ಅಲ್ಲ. ಈ ಕ್ರೂರರಾಕ್ಷಸನ ಕೋಪವೆಂಬ ಉಗ್ರಾಗ್ನಿಯೇ ಸಮುದ್ರದಲ್ಲಿ ಔರ್ವಾಗ್ನಿ ಎನಿಸಿಕೊಂಡಿತು ಎನ್ನುವಂತೆ ಇತ್ತು ಆ ಪಂಚಜನನ ಅತಿಕೋಪ. ೨೧. ಭೂಮಿಯಲ್ಲಿ ಮುಂಚೆ ಹುಟ್ಟಿದ ರಾಕ್ಷಸರಾರಲ್ಲೂ ಹೀಗೆ ಧೈರ್ಯಶೌರ್ಯಗಳೂ ಈ ಬಲವೂ ಈ ಪರಾಕ್ರಮವೂ ಈ ಮಹಾರಭಸವೂ ಈ ರೌದ್ರವೂ ಈ ಸಾಹಸವೂ ಈ ತೋಳ ತೀಟೆಯೂ ಈ ಸಡಗರವೂ ಈ ಹಟವೂ ಈ ಚಾಂಚಲ್ಯವೂ ಈ ವೀರತೆಯೂ ಇರಲಿಲ್ಲವೆನ್ನುವಂತೆ ಆ ಪಂಚಜನನು ಉಗ್ರಾಟೋಪವನ್ನು ತಾಳಿದನು. ೨೨. ಭೂಮಿಯು ನಡುಗುವಂತೆ ಕೃಷ್ಣ ಪಂಚಜನರ ಯುದ್ಧವು ತೊಡಗಿತು. ಪರಸ್ಪರ ರೇಗಿನೋಡುವುದೂ, ಅನ್ಯೋನ್ಯವಾಗಿ ಕಯ್ಯ ಹೊಡೆತವೂ, ಒಬ್ಬರನ್ನೊಬ್ಬರು ಮರ್ದಿಸುವುದೂ, ಗೂಳಿಗಳ ಕಾಳಗ, ಸಿಂಹಗಳ ಜಗಳ, ಆನೆಗಳು ಸೊಂಡಿಲಿನಿಂದ ಮಾಡುವ ಯುದ್ಧವೇ ಇದು ಎನ್ನುವಷ್ಟು ಜನರ ಕಣ್ಣಿಗೆ ಅದ್ಭುತವಾಯಿತು.

ತ್ರಿಜಗದ್ವೀರಾಗ್ರಣಿಯಂ
ಭುಜಯುದ್ಧದಿನಿಕ್ಕಿ ಪಂಚಜನನಂ ತತ್ಪಂ
ಚಜನಾಸ್ಥಿಜನಿತಮಂ ಪಾಂ
ಚಜನ್ಯಶಂಖಮನುಪೇಂದ್ರನೀಟಿಕ್ಕೊಂಡೊಲವಿಂ ೨೩

ಎಸೆವನ್ನಂ ಕಾರ್ಮುಗಿಲ್ ಚಂದ್ರನನುಗುಳ್ವವೊಲಾತ್ಮಸ್ಯದೊಳ್ ಪಾಂಚಜನ್ಯಂ
ಬಿಸಜಾಕ್ಷಂ ಶಂಖಮಂ ಪೂರಿಸೆ ಕುಲಗಿರಿಕುಂಜಂಗಳೊಳ್ ಘೂರ್ಣಿಸುತ್ತಿ
ಣ್ದೆಸೆಯೊಳ್ ತಳ್ಪೊಯ್ದುದಾಕಾಶದೊಳೊದವಿತ್ತು ದತ್ತಾಸುರೋನ್ಮಾದಮುದ್ಯು
ಕ್ತಸುರವ್ರಾತಪ್ರಮೋದಂ ಕೃತಜಗದಘವಿಚ್ಛೇದಮಾ ಶಂಖನಾದಂ ೨೪

ವ|| ಅಂತು ಶಂಖಮಂ ಪೂರಿಸಿ ಯಮನ ಸಂಯಮನೀಪುರಕ್ಕೆ ಪರಿಯಿಟ್ಟು

ಕುಡು ಸಾಂದೀಪನಿಪುತ್ರನಂ ಯಮ ಕುಡಲ್ಕೇಂ ತೀರದೇ ಯುದ್ಧಮಂ
ಕುಡು ಮೇಣೀಗಳದರ್ಕೆಮಳ್ಕಿ ಭಯದಿಂ ಪಾತಾಳಮಂ ಪೊಕ್ಕೊಡಂ
ಕಡಲಂ ಪೊಕ್ಕೊಡಮಂತರಿಕ್ಷತಳಮಂ ನೀಂ ಪೊಕ್ಕೊಡಂ ನಿನ್ನ ಪೊ
ಕ್ಕೆಡೆಯಂ ಪೊಕ್ಕಿನಬಿಂಬಮಂ ಪುಗಿಪೆನಿಂದಾಂ ನಿನ್ನನಾರ್ ಕಾವೊಡಂ ೨೫

ವ|| ಎಂದು ಕೈಟಭಾಂತಕನಾಸ್ಫೋಟಿಸೆ ಕಲ್ಪಾಂತಸಮಯಸಂರಂಭಮನಪ್ಪುಕೆಯ್ದುಮೇಕಾಂಗದಿಂ ಯುದ್ಧಕೇಳಿಗೆ ಬಂದ ಕಾಳಿಂದೀಸೋದರನಂ ದಾಮೋದರಂ ನೋಡಿ

೨೩. ಕೃಷ್ಣನು, ತ್ರಿಲೋಕವೀರಾಗ್ರೇಸರನಾದ ಆ ಪಂಚಜನನನ್ನು ಬಾಹುಯುದ್ಧದಿಂದಲೇ ಕೊಂದು, ಅವನ ಎಲುಬುಗಳಿಂದಾದ ಪಾಂಚಜನ್ಯವೆಂಬ ಶಂಖವನ್ನು ಆಸಕ್ತಿಯಿಂದ ಧರಿಸಿದನು. ೨೪. ಕಪ್ಪುಮೋಡವು ಹೊಳೆಯುತ್ತಿರುವ ಚಂದ್ರನನ್ನು ಉಗುಳುತ್ತಿರುವಂತೆ ಕೃಷ್ಣನು ತನ್ನ ಬಾಯಿಂದ ಆ ಶಂಖವನ್ನೂದಿದನು. ಆ ಶಂಖದ ನಾದವು ಕುಲಗಿರಿಗಳ ಪೊದೆಗಳಲ್ಲಿ ಹೊಕ್ಕು ಮೊರೆಯುತ್ತಾ ಎಂಟುದಿಕ್ಕುಗಳಲ್ಲೂ ವ್ಯಾಪಿಸಿ ತಾಕಿತು, ರಾಕ್ಷಸರಿಗೆ ಹುಚ್ಚು ಹಿಡಿಸುವುದೂ ಉತ್ಸುಕದೇವತೆಗಳ ಸಮೂಹಕ್ಕೆ ಪ್ರಮೋದಕರವೂ ಜಗತ್ಪಾದಕ ವಿಚ್ಛೇದಕವೂ ಆಗಿ ಆಕಾಶವನ್ನೇ ತುಂಬಿತು. ಕೃಷ್ಣನು ಹಾಗೆ ಶಂಖವನ್ನು ಊದಿ ಯಮನ ಸಂಯಮನೀಪುರಕ್ಕೆ ಧಾವಿಸಿದನು. ೨೫. "ಯಮನೇ! ಸಾಂದೀಪನಿಯ ಪುತ್ರನನ್ನು ಕೊಡು; ಕೊಡಲಾಗದಿದ್ದರೆ ನನ್ನೊಡನೆ ಯುದ್ಧಮಾಡು. ನೀನು ಈಗ ಹೆದರಿ ಪಾತಾಳವನ್ನು ಹೊಕ್ಕರೂ ಸಮುದ್ರವನ್ನು ಹೊಕ್ಕರೂ ಆಕಾಶತಳವನ್ನು ಹೊಕ್ಕರೂ ನೀನು ಹೊಕ್ಕೆಡೆಗೆ ಬಂದು, ನಿನ್ನನ್ನು ಯಾರು ರಕ್ಷಿಸಲು ಬಂದರೂ ಬಿಡದೆ ಸೂರ್ಯಮಂಡಲವನ್ನು ಹೊಗಿಸುವೆನು ವ|| ಎಂದು ಕೈಟಭನೆಂಬ ರಾಕ್ಷಸನನ್ನು ಕೊಂದ ಕೃಷ್ಣನು ಗರ್ಜಿಸಿದನು. ಯಮುನೆಯ ಸಹೋದರನಾದ ಯಮನು ಪ್ರಳಯಕಾಲದ ಆಡಂಬರವನ್ನು ಪಡೆದು ಏಕಾಕಿಯಾಗಿ ಕೃಷ್ಣನೊಡನೆ ಯುದ್ಧಕ್ಕೆ ಬಂದು ನಿಂತನು. ಕೃಷ್ಣನು ಅವನನ್ನು ನೋಡಿ,

ಬರಿಸಮರೇಂದ್ರನಂ ಬರಿಸು ಪಾವಕನಂ ಬರಿಸಾತ್ಮಸೈನ್ಯಮಂ
ಬರಿಸು ನಿಶಾಟನಂ ಬರಿಸು ವಾರ್ಧಿಪನಂ ಬರಿಸಗ್ನಿಮಿತ್ರನಂ
ಬರಿಸು ಕುಬೇರನಂ ಬರಿಸು ರುದ್ರನನಿಂತವರೆಲ್ಲರುಂ ನೆರಂ
ಬರೆ ನಿನಗಾಂತು ನಿಲ್ ನಿನಗೆ ತೋಱುವೆನೆನ್ನ ಭುಜಪ್ರತಾಪಮಂ ೨೬

ವ।। ಎನೆ ವನಜಮಿತ್ರಪುತ್ರಂ ದರಹಸಿತವದನಾರವಿಂದನಾಗಿ

ನೆರ ನೀಂ ಲೆಕ್ಕಮೆ ಶಕ್ರಾ
ದ್ಯರುಮಂ ಪರಿದಟ್ಟಿ ಮುಟ್ಟುವಾ ಕಾಲನೆನಾಂ
ನೆರವೆನಗೇವುದೊ ಕಾಲಂ
ನೆರವಂ ಪಾರ್ದೆಡೆಗಳೊಳವೆ ನೀಂ ಕೇಳ್ದಱಿಯಾ ೨೭

ತ್ರಿಣಯನಶೌರ್ಯಂ ತಾಂ ಘೋ
ಷಣೆವಡೆವುದೆ ಲೋಕಲಯದೊಳಿನ್ನಂ ಪೋಲ್ತಿ
ರ್ದನಿತಱೊಳೆನೆ ಸಾಕ್ಷಾತ್ಕಾ
ಲನೆ ನಾಂ ಮತ್ತೆನಗೆ ಮರ್ತ್ಯ ನೀನಿದಿರಾಂಪೈ ೨೮

ವ।। ಎಂದಾಟೋಪದಿಂ ಮುಟ್ಟೆವರ್ಪುದುಂ

ಅಳವಿಗೆ ಸಾರ್ದನೇ ಬೆರಗುವಾರ್ದನೆ ಮೆಯ್ಸುಟೆಯಿಂದೆ ಪೋರ್ದನೇ
ತಿಳಿವೊಡದಿಲ್ಲ ಕಂಡಳತೆಗೆಯ್ದಿದನೆಯ್ದಿದ ಬೇಗದಿಂದಮ
ಪ್ಪಳಿಸಿದನೆತ್ತಿಕೊಂಡು ಧರೆಗಿಕ್ಕಿದನಾಸ್ಯದಿನುಣ್ಮೆ ನೆತ್ತರು
ಚ್ಚಳಿಪಿನಮಾರ್ದು ಡೊಕ್ಕರಿಸಿದಂ ನೆಗಟ್ದಂತಕನಂ ಮುರಾಂತಕಂ ೨೯

೨೬. "ನೀನು ದೇವೇಂದ್ರನನ್ನು ಬರಿಸು, ಅಗ್ನಿಯನ್ನು ಬರಮಾಡು, ನಿನ್ನ ಸೈನ್ಯವನ್ನು ಕರೆಸು, ನಿಋತಿಯನ್ನು ಬರಿಸು, ವರುಣನನ್ನು ಬರಹೇಳು, ವಾಯುವಿಗೂ ಹೇಳಿ ಕಳುಹಿಸು, ಕುಬೇರನನ್ನೂ ರುದ್ರನನ್ನೂ ಬರಮಾಡು, ಹೀಗೆ ಅವರೆಲ್ಲರೂ ಬಂದು, ನಿನಗೆ ನೆರವಾಗಿ ನಿಂತಮೇಲೆ ನನಗೆದುರಾಗಿ ನಿಲ್ಲು. ಆಗ ನಿನಗೆ ನನ್ನ ಭುಜಪರಾಕ್ರಮವನ್ನು ತೋರಿಸುವೆನು" ಎಂದನು. ವ।। ಕೃಷ್ಣನು ಹೀಗೆ ಹೇಳಲು, ಸೂರ್ಯಪುತ್ರನಾದ ಯಮನು, ಮಂದಹಾಸ ಮುಖಕಮಲನಾಗಿ, ೨೭. "ಇಂದ್ರನೇ ಮೊದಲಾದವರನ್ನು ಅಟ್ಟಿಸಿಕೊಂಡು ಓಡಿ ಕೊಲ್ಲುವ ಯಮನೇ ನಾನಾಗಿರುವಾಗ ಮನುಜನಾದ ನೀನು ನನಗೆ ಲೆಕ್ಕವೇ! ನನಗೆ ಸಹಾಯವೇತಕ್ಕೆ! ನೀನು ಕೇಳಿ ತಿಳಿದಿಲ್ಲವೇ, ಯಮನು ನೆರವನ್ನು ಅಪೇಕ್ಷಿಸಿದ ಸಮಯ ಸಂದರ್ಭಗಳುಂಟೆ?! ೨೮. "ರುದ್ರನು ನನ್ನನ್ನು ಹೋಲುತ್ತಿದ್ದ ಮಾತ್ರದಿಂದಲೇ ಲೋಕಪ್ರಳಯಕಾಲದಲ್ಲಿ ಅವನ ಶೌರ್ಯವು ಪ್ರಕಟವಾಗುವುದು. ಹೀಗಿರಲು ಪ್ರತ್ಯಕ್ಷಯಮನೇ ನಾನಾಗಿರುವಾಗ ಮನುಷ್ಯನಾದ ನೀನು ನನಗೆದುರಾಗಿ ನಿಲ್ಲುವೆಯಾ?!" ವ।। ಎಂದು ಆಡಂಬರದಿಂದ ಹತ್ತಿರಬಂದನು. ೨೯. ಕೃಷ್ಣನು ಯುದ್ಧಕ್ಕೆ ತಕ್ಕಷ್ಟು ದೂರ ಹಿಂದಕ್ಕೆ ಸರಿದನೆ? ಸಹಾಯವನ್ನು ನಿರೀಕ್ಷಿಸಿದನೇ? ತನ್ನ ದೇಹಶಕ್ತಿಯನ್ನೆಲ್ಲಾ ಉಪಯೋಗಿಸಿ ಹೋರಾಡಿದನೇ? ಯೋಚಿಸಿದರೆ ಅದಾವುದೂ ಇಲ್ಲ. ಕೂಡಲೇ ಸಮೀಪಕ್ಕೆ ಹೋದನು.

ವ|| ಅಂತಿಕ್ಕಿ ಡೊಕ್ಕರಂಗೊಂಡುರಸ್ಸ್ಥೋಪರಿವಿಷ್ಟರನಾಗಿರ್ದ ಕೃಷ್ಣನಂ ದಕ್ಷಿಣ ದಿಕ್ಪಾಲಕಂ ನಿರೀಕ್ಷಿಸಿ

ಅಱಿದೆನಱಿದೆಂ ನಿನ್ನಂ ಚಾಣೂರಮುಷ್ಟಿಕಮಲ್ಲರಂ
[1]ಮುಱಿದುಪರಿಗಂ ಧೀಂಕಿಟ್ಟಾ ಕಂಸನಂ ನೆಲಕಿಕ್ಕಿ ಮೇ
ಲೆಱಗಿ ತುಳಿದುಂ ಮತ್ತಂ ಭಾರಾಪಹಾರನಿಮಿತ್ತದಿಂ
ದಱಸಿ ಖಳರಂ ಕೊಂದಿಕ್ಕಲ್ಕಿರ್ದ ಕೃಷ್ಣನೆ ನೀಂ ದಿಟಂ ೩೦

ಕರುಣಿಪುದೆನಗಿತ್ತಪೆನಾಂ
ಗುರುಪುತ್ರನನೆಂದು ಯಾತನಾಸಂಸ್ಥಿತನಂ
ತ್ವರಿತಂ ಕುಡೆ ಪೂರ್ವಕ್ರಮ
ಶರೀರಿಯಂ ಸುತನನುಯ್ದು ಹರಿ ಗುರುಗಿತ್ತಂ ೩೧

ವ|| ಅಂತವಂತೀಪುರವಾಸಿಯಪ್ಪ ಗುರುವಿಂಗಭಿಮತಾರ್ಥಮನಿತ್ತು

ಸ್ಫುರಯಿಸುವಸ್ತ್ರಶಾಸ್ತ್ರಕಳೆಯಿಂದುದಿತೋದಿತತೇಜನುತ್ತರೋ
ತ್ತರಬಳನುನ್ನತೋನ್ನತಪರಾಕ್ರಮನಾಗಿ ನಿಜಾಗ್ರಜಾನ್ವಿತಂ
ಮುರರಿಪು ಬಂದು ಪೊಕ್ಕು ಮಧುರಾಪುರಮಂ ಪುರಕಾಮಿನೀಪರಂ
ಪರೆಯ ಮನಂಗಳಂ ಪುಗುತೆ ಪೊಕ್ಕನುದಾರನರೇಂದ್ರಗೇಹಮಂ ೩೨

ಹೋದಷ್ಟು ಬೇಗನೆ ವೇಗವಾಗಿ ಯಮನನ್ನು ಅಪ್ಪಳಿಸಿದನು. ಎತ್ತಿಕೊಂಡು, ಭೂಮಿಗೆ ಕೆಡವಿದನು. ಬಾಯಿಂದ ರಕ್ತವು ಉಕ್ಕಿ ಮೇಲೆ ಹಾರುವಂತೆ ಅಬ್ಬರಿಸಿ, ಅದುಮಿ ಹಿಸುಕಿದನು. ವ|| ಹಾಗೆ ಹೊಡೆದು ಬೀಳಿಸಿ, ಅದುಮಿ, ಎದೆಯಮೇಲೆ ಕುಳಿತಿದ್ದ ಕೃಷ್ಣನನ್ನು ನೋಡಿ ದಕ್ಷಿಣದಿಕ್ಪಾಲಕನಾದ ಯಮನು ೩೦. "ತಿಳಿದೆನು ತಿಳಿದೆನು! ನೀನು ಚಾಣೂರ ಮುಷ್ಟಿಕರೆಂಬ ಜಟ್ಟಿಗಳನ್ನು ಮುರಿದು, ಮೇಲಕ್ಕೂ ನೆಗೆದು ಕಂಸನನ್ನು ನೆಲಕ್ಕೆ ತಳ್ಳಿ ಮೇಲೆರಗಿ ಕುಳಿದೆ. ಅಲ್ಲದೆ, ಇನ್ನೂ ಭೂಭಾರಹರಣಕ್ಕಾಗಿ ನೀಚರನ್ನು ಕೊಂದುಹಾಕುವುದಕ್ಕಾಗಿ ಅವತರಿಸಿರುವ ಕೃಷ್ಣನೇ ನೀನು ಇದು ನಿಶ್ಚಯ. ೩೧. "ನನ್ನ ಮೇಲೆ ಕರುಣೆಯಿಡು ನಾನು ನಿನ್ನ ಗುರುಪುತ್ರನನ್ನು ಕೊಡುತ್ತೇನೆ." ಎಂದು ಯಾತನೆಯಲ್ಲಿದ್ದ ಅವನನ್ನು ಬೇಗ ಕರೆಸಿ, ಒಪ್ಪಿಸಿದನು. ತಮ್ಮನ್ನಗಲಿದಾಗ ಹಿಂದೆ ಇದ್ದಂತೆಯೆ ದೇಹವನ್ನು ಧರಿಸಿದ್ದ ಮಗನನ್ನು ಕರೆದುಕೊಂಡು ಹೋಗಿ ಗುರುವಿಗೆ ಹರಿ ಒಪ್ಪಿಸಿದನು. ವ|| ಹಾಗೆ ಅವಂತೀಪುರವಾಸಿಯಾದ ಗುರುವಿಗೆ ಅಭೀಷ್ಟಾರ್ಥವನ್ನು ಕೊಟ್ಟು, ೩೨. ಹೊಳೆಯುವ ಅಸ್ತ್ರಶಾಸ್ತ್ರ ಕಳೆಯಿಂದ ಉದಿತೋದಿತ ತೇಜನೂ, ಉತ್ತರೋತ್ತರ ಬಲಸಂಪನ್ನನೂ, ಉನ್ನತೋನ್ನತ ಪರಾಕ್ರಮಿಯೂ ಆದ ಕೃಷ್ಣನು ತನ್ನ ಅಣ್ಣನೊಡನೆ ಮಧುರಾಪುರಿಗೆ ಬಂದು, ಪುರಕಾಮಿನಿಯರ ಮನಸ್ಸಿಗೆ ಆನಂದವನ್ನುಂಟುಮಾಡುತ್ತಾ ಭವ್ಯವಾದ

---

೧. ಮುರಿದ ಪರಿಗಂ (ಕಖಗ)

ಮಸೃಣೋಕ್ತಿಯಿನವನತಿಯಿಂ
ಪ್ರಸನ್ನ ವೀಕ್ಷಣದಿನಿವರ್ಗಿದುಚಿತಮೆನಲ್ ಮ
ನ್ನಿಸುತಂ ಯದುಕುಲಮಂ ಮ
ನ್ನಿಸುತಿರ್ದಂ [೧]ಮನುಜಭಾವಮಂ ದನುಜಹರಂ ೩೩

ವ|| ಅನ್ನೆಗಮಿತ್ತಲ್

ವ್ಯಸ್ತಾಲಂಕೃತಿಕರ್ಣೆಯರ್ ಪ್ರವಿಗಳದ್ಬಾಷ್ಪಾಂಬುಲೋಲಾಕ್ಷಿಯರ್
ಸ್ರಸ್ತಾನೀಳಕಚೌಘೆಯರ್ ಪ್ರಚುರಹಾಹಾನಿಸ್ವನಾಕ್ರಾಂತೆಯರ್
[೨]ಹಸ್ತೋಗ್ರೋದ್ಘಟಿತೋದಿತೋದರಿಯರತ್ಯಂತಾರ್ತಿಯರ್ ಕಂಡರಂ
ದಸ್ತಿಪ್ರಾಸ್ತಿಯರೆಂಬ ಕಂಸಸತಿಯರ್ ವಿಖ್ಯಾತನಂ ತಾತನಂ ೩೪

ವ|| ಆಗಳಾ ಪ್ರಿಯತನೂಜೆಯರ ನವ್ಯವೈಧವ್ಯಮಂ ಕಂಡು ತದ್ವೃತ್ತಾಂತಮಂ ತಿಳಿದು ಮಗಧೇಶ್ವರಂ ಜರಾಸಂಧನತಿಕ್ರೋಧಮಂ ಕೈಕೊಂಡು

ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ ವಾರಾಶಿಯಂ ತಾಯ್ಮಟ
ಲ್ದೆಱಿವಂತೀಂಟುವೆನೋ ಕಳಲ್ಚುವೆನೊ ಚಂದ್ರಾದಿತ್ಯರಂ ಶಕ್ರನಂ
ಸೆಱಿಗೆಯ್ದಾಳ್ವೆನೊ ಕೀಲ್ವೆನೋ ದಿಗಿಭದಂತವ್ರಾತಮಂ ಮೇರುವಂ
ಪೆಱತೇನೂದಿಯೆ ಬೆಂಡುಮಾಡಿಸುವೆನೋ ಬ್ರಹ್ಮಾಂಡಮಂ ಪೋಟ್ವೆನೋ ೩೫

ಅರಮನೆಯನ್ನು ಹೊಕ್ಕನು. ೩೩. ಮೃದುವಾಣಿಯಿಂದಲೂ, ತಲೆಬಾಗಿ ವಂದಿಸುವುದರಿಂದಲೂ ಪ್ರೀತಿ ಪ್ರಸನ್ನವಾದ ನೋಟದಿಂದಲೂ, ಅವರವರಿಗೆ ಉಚಿತವಾದ ರೀತಿಯಲ್ಲಿ ವರ್ತಿಸಿ, ಕೃಷ್ಣನು ಯದುಕುಲವನ್ನೂ ಮನುಜಭಾವವನ್ನೂ ಮನ್ನಿಸುತ್ತಿದ್ದನು. ವ|| ಅಷ್ಟರಲ್ಲಿ ಇತ್ತಕಡೆ ೩೪. ಕರ್ಣಾಭರಣಹೀನೆಯರೂ ಹೆಚ್ಚಾಗಿ ಕಣ್ಣೀರನ್ನು ಸುರಿಸುತ್ತಿರುವವರೂ, ಕೆದರಿ ಜೋಲುವ ಮುಡಿಯುಳ್ಳವರೂ, ಗಟ್ಟಿಯಾಗಿ ಹಾಹಾ ಧ್ವನಿಯಿಂದಳುವವರೂ, ಕಯ್ಯಿಂದ ಉಗ್ರವಾಗಿ ಹೊಡೆದುಕೊಂಡು ಊದಿದ ಉದರವುಳ್ಳವರೂ ಅತ್ಯಂತ ದುಃಖಿತೆಯರೂ ಆದ ಅಸ್ತಿ ಪ್ರಾಸ್ತಿಯರೆಂಬ ಕಂಸನ ರಾಣಿಯರು ಹೋಗಿ ತಂದೆಯಾದ ಪ್ರಖ್ಯಾತ ಜರಾಸಂಧನನ್ನು ಕಂಡರು. ವ|| ಆಗ ಆ ಪ್ರಿಯಪುತ್ರಿಯರು ವಿಧವೆಯರಾಗಿರುವುದನ್ನು ನೋಡಿ ಆ ವೃತ್ತಾಂತವನ್ನು ತಿಳಿದ ಮಗಧೇಶ್ವರ ಜರಾಸಂಧನು ಅತಿಯಾಗಿ ಕೋಪಗೊಂಡನು. ೩೫. ಆ ಜರಾಸಂಧನು ಕುಲಪರ್ವತಗಳ ಸಮೂಹದಿಂದ ತಿರಿಕಲ್ಲಾಟವಾಡಲೋ; ಸಮುದ್ರವನ್ನು ತಾಯ್ಮಳಲು ಕಾಣಿಸುವಂತೆ ಕುಡಿಯಲೋ; ಚಂದ್ರಸೂರ್ಯರನ್ನು ಕಳಚಲೋ! ಇಂದ್ರನನ್ನು ಸೆರೆಹಿಡಿದು ಆಳಲೋ? ದಿಗ್ಗಜಗಳ ದಂತಗಳನ್ನು ಕೀಳಲೋ! ಮೇರುಪರ್ವತವನ್ನು ಊದಿಯೆ ಬೆಂಡಿನಂತೆ ಹಾರಿಸಲೋ? ಬೇರೇನು, ಬ್ರಹ್ಮಾಂಡವನ್ನೇ ಸೀಳಿ ಹೋಳುಮಾಡಲೋ!

---

೧. ಮನುಜಭಾವದಿಂ (ಕಗ)

೨. ಹಸ್ತಾಗ್ರಸ್ಫುಟಿತೋದಿತೋದರಿ (ಕಖ) ಹಸ್ತೋಗ್ರಸ್ಫುಟಿತೋದಿತೋದರಿ (ಗ)

ಹರಿಯೊಳ್ ಬೇಡ ವಿರೋಧಮೆಂಬವರ ಮಾತಂ ಮೀಱುವೆಂ ಮೀಱುವೆಂ
ಧುರದೊಳ್ ರಾವಣನಂಧಕಾಸುರನ ಕೂರ್ಪಂ ತೋಱುವೆಂ ತೋಱುವೆಂ
ಪರಸೈನ್ಯಾಮಿಷಮಂ ಪಿಶಾಚನಿವಹಕ್ಕಾಂ ಬೀಱುವೆಂ ಬೀಱುವೆಂ
ಸುರರ್ಗಾಂ ಬೀರಮನೆನ್ನ ಚಾಪರವದಿಂದಂ ಸಾಱುವೆಂ ಸಾಱುವೆಂ ೩೬

ಧುರದೊಳ್ ಬಂದಿದಿರೊಡ್ಡೆ ಕಂಸಹರನೊಡ್ಡಂ ತುತ್ತುವೆಂ ತುತ್ತುವೆಂ
ಮುರವಿಧ್ವಂಸಕನಂಜಿ ಮೆಯ್ಸಿಡೆಯೆ ಬೆನ್ನಂ ಪತ್ತುವೆಂ ಪತ್ತುವೆಂ
ಹರಿ ಮೇಣ್ ಪೊಕ್ಕಿರೆ ಕೋಂಟೆಯಂ ಮಧುರೆಯಂ ಪೋ ಮುತ್ತುವೆಂ ಮುತ್ತುವೆಂ
ಪರಭೂಚಕ್ರಮನೆನ್ನ ತೇಜದುರಿಯಿಂದಂ ಸುತ್ತುವೆಂ ಸುತ್ತುವೆಂ ೩೭

ನರನಾಥರ್ ಬೆಸಕೆಯ್ವ ಪೆಂಡಿರೆಳಸಿರ್ಪೀ ರೂಢಿಯುಂ ಗಾಡಿಯುಂ
ಧರೆಯೆಲ್ಲಂ ತಣಿವನ್ನಮುಂ ಮನದೆ ಕೊಳ್ವೀ ಚಾಗಮುಂ ಭೋಗಮುಂ
ಸುರರಳ್ಳಾಡುವ ಮೇರುವಳ್ಕುಳಿಸುವೆನ್ನೀ ಶೌರ್ಯಮುಂ ಧೈರ್ಯಮುಂ
ಹರಿಯೊಳ್ ಕಾದಿ ಕೃತಾರ್ಥಮಕ್ಕುಮಿದು ಲೋಕಸ್ತುತ್ಯಮುಂ ಕೃತ್ಯಮುಂ ೩೮

ವ|| ಎಂದು ನಿಶ್ಚೈಸಿ ಮಗಧರಾಜಂ ಪ್ರಸ್ಥಾನಭೇರಿಯಂ ಪೊಯ್ಸೆಂದು ಸೇನಾಗ್ರಣಿಗೆ ಬೆಸಸಿದಾಗಳ್

ಗಗನಕ್ಕಂಭೋಧಿ ತುಳ್ಕಾಡಿದುದವನಿಗೆ ತಾರಾಳಿ ಸೂಸಿತ್ತು ದಿಕ್ಪಾ
ಲಗಣಕ್ಕಾಶಂಕೆ ಪುಟ್ಟತ್ತಿದು ಮಗಧನ ಭೇರೀರವಂ ಕೆಟ್ಟೆವಾತಂ
ಗಗಿದಾವಾವಾಳ್ವೆಸಂಗೆಯ್ದಪೆವೆನೆ [1]ಮಹಿಪರ್ ಪೊಣ್ಮೆತುಚ್ಛ್ವಂಖಲಂ ಗೋ
ತ್ರಗಿರಿಚ್ಛಾತ್ರಾನುವಾದಾಧ್ಯಯನಗುರು ಜರಾಸಂಧಭೇರೀನಿನಾದಂ ೩೯

೩೬. ಹರಿಯೊಡನೆ ವಿರೋಧವು ಬೇಡ ಎಂಬುವರ ಮಾತನ್ನು ಮೀರುವೆನು ಯುದ್ಧದಲ್ಲಿ ರಾವಣನ ಮತ್ತು ಅಂಧಕಾಸುರನ ಕ್ರೌರ್ಯವನ್ನು ತೋರಿಸುತ್ತೇನೆ. ಶತ್ರುಸೈನ್ಯದ ಮಾಂಸವನ್ನು ಪಿಶಾಚಿಗಳ ಗುಂಪಿಗೆ ನಾನು ಬೀರುವೆನು ಬೀರುವೆನು. ನನ್ನ ಬಿಲ್ಲಿನ ಟಂಕಾರದಿಂದ ದೇವತೆಗಳಿಗೆ ನನ್ನ ಪರಾಕ್ರಮವನ್ನು ಸಾರುವೆನು, ಸಾರುವೆನು. ೩೭. ಯುದ್ಧದಲ್ಲಿ ಬಂದು ಎದಿರುನಿಂತರೆ ಆ ಕೃಷ್ಣನ ಸೈನ್ಯವನ್ನು ಕಬಳಿಸಿಯೇ ಕಬಳಿಸುತ್ತೇನೆ. ಆತನು ಹೆದರಿ ಹಿಂದೆಗೆದು ಹೋದರೆ ಬೆನ್ನು ಹತ್ತಿ ಹೋಗಿಯೇ ಹೋಗುವೆನು. ಮತ್ತೆ ಆ ಕೃಷ್ಣನು ಕೋಟೆಯಲ್ಲಿ ಹೊಕ್ಕಿದ್ದರೆ ಮಧುರೆಯನ್ನು ಮುತ್ತಿಯೇ ಮುತ್ತುವೆನು. ಹೋಗು: ಪರರಾಜರ ರಾಷ್ಟ್ರವನ್ನು ನನ್ನ ತೇಜಸ್ಸಿನ ಉರಿಯಿಂದ ಸುತ್ತುಗಟ್ಟುವೆನು. ೩೮. ರಾಜರು ಆಜ್ಞೆಯನ್ನು ಪಾಲಿಸುತ್ತ ಇರುವ ಈ ಭೂಮಿಯೂ ಸ್ತ್ರೀಯರು ನನ್ನನ್ನು ಬಯಸುವ ಸೊಬಗೂ ಭೂಮಿಯೆಲ್ಲ ತೃಪ್ತಿಪಡುವವರೆಗೂ ಮನಸ್ಸಿಟ್ಟು ಮಾಡುವ ತ್ಯಾಗ ಭೋಗಗಳೂ ದೇವತೆಗಳು ಹೆದರಿ ನಡುಗುವ, ಮೇರು ಹೆದರಿ ಸಂಕುಚಿತವಾಗುವ, ನನ್ನ ಈ ಶೌರ್ಯವೂ ಧೈರ್ಯವೂ ಹರಿಯೊಡನೆ ಕಾದಿದರೆ ಸಾರ್ಥಕವಾಗುವುದು. ಇದು ಲೋಕಸ್ತುತ್ಯವೂ ಕರ್ತವ್ಯವೂ ಆದುದು". ವ|| ಎಂದು ನಿಶ್ಚಯಿಸಿ ಮಗಧರಾಜನು ಪ್ರಸ್ಥಾನ ಭೇರಿಯನ್ನು ಹೊಡೆಯಿಸೆಂದು ಮುಖ್ಯಸೇನಾಪತಿಗೆ ಆಜ್ಞಾಪಿಸಿದನು. ೩೯. ಗೋತ್ರ ಪರ್ವತಗಳೆಂಬ ಶಿಷ್ಯರು ಅನುಕರಿಸಿ ಹೇಳುತ್ತಿದ್ದಾರೋ ಎಂಬಂತೆ ಪ್ರತಿಧ್ವನಿಸಿದ ಗುರುವಾದ ಜರಾಸಂಧನ

---

೧. ಮಹಿಮರ್ (ಗ)

ವ|| ಅಂತು ಗಂಭೀರನಾದಂ ನೆಗೞೆ

ಎಣಿಕೆಗಳುಂಬಮಿೞ ಬಳಮದೊಂದು ವಿಚಿತ್ರಮದೊಂದಗುರ್ವದೊಂ
ದಣಕಮದೊಂದತರ್ಕ್ಯಮೆನೆ ರೌದ್ರರಸಂ ಮಿಗೆ ಪಣ್ಣಿದಾನೆ ಪ
ಲ್ಲಣಿಸಿದ ವಾಜಿ ಪೂಡಿದ ರಥಂ ವಿವಿಧಾಯುಧವಾಂತ ಪತ್ತಿ ಸಂ
ದಣಿಸಿರೆ ಬಂದುದಂದು ಚತುರಂಗಬಲಂ ಮಗಧಕ್ಷಿತೀಶನಾ ೪೦

ವ|| ಅನಂತರಂ

ಬಳವತ್ಸೈನ್ಯಪದೋತ್ಥಪಾಂಸುಚಯದಿಂ ಸೇನಾಮಹಾಭಾರದಿಂ
ಬಳಕೋಳಾಹಳದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್
ಪೊಲಗೆಟ್ಟೋಡೆಯಳುರ್ಕೆಗೆಟ್ಟು ಕಿವಿ ಶಬ್ದಂಗೆಟ್ಟು ನಿಲ್ವನ್ನೆಗಂ
ತಳರ್ದಂ ಸಾಹಸಕೀರ್ತನಾಚತುರನಾನಾಮಾಗಧಂ ಮಾಗಧಂ ೪೧

ಘನಬಾಹಾವಿಕ್ರಮಂ ಮುನ್ನಮೆ ತನಗೆ ನಿಜಂ ಮತ್ತೆ ಚೇದೀಶ ದುರ್ಯೋ
ಧನ ಮಾದ್ರಾಂಗಾಧಿರಾಜಪ್ರಭೃತಿನೃಪವರರ್ ಕೂಡಿದರ್ ತನ್ನೊಳೀ ವೀ
ರನೊಳಿನ್ನಾರಾಂಪರಿನ್ನಾರ್ ಚಲದೆ ಮಲೆವರಿನ್ನಾರ್ ಭರಂಗೆಯ್ವರಿನ್ನಾರ್
ಮೊನೆಯೊಳ್ ಮಾರ್ಕೊಳ್ವರೆಂಬೊಂದೆಸಕಮೆಸೆಯೆ ಬಂದಂ ಜರಾಸಂಧಭೂಪಂ ೪೨

ಭೇರಿಯ ಶಬ್ದದಿಂದ ಸಮುದ್ರವು ಆಕಾಶಕ್ಕೆ ತುಳುಕಿತು. ನಕ್ಷತ್ರಗಳ ಸಮೂಹವು ಭೂಮಿಗೆ ಉದುರಿತು. ದಿಕ್ಪಾಲಕರ ಸಮೂಹಕ್ಕೆ ಭಯವುಂಟಾಯಿತು. "ಇದು ಮಗಧ ರಾಜನ ನಗಾರಿಯ ಶಬ್ದ; ಕೆಟ್ಟೆವು, ಆತನಿಗೆ ಹೆದರಿ ಸೇವಕವೃತ್ತಿಯನ್ನು ಅನುಸರಿಸುವೆವು" ಎಂದರು ಪಾಲಕರು. ವ|| ಹಾಗೆ ಗಂಭೀರನಾದವು ಹರಡಿತು. ೪೦. ಯುದ್ಧಕ್ಕೆ ಸಿದ್ಧಪಡಿಸಿದ ಆನೆ, ಕುದುರೆ, ಹೂಡಿದ ರಥ, ಬಗೆ ಬಗೆಯ ಆಯುಧಗಳನ್ನು ಹಿಡಿದ ಕಾಲಾಳುಗಳು ಇವೆಲ್ಲವೂ ಗುಂಪುಕೂಡಿದ ಈ ಸೈನ್ಯವು ಎಣಿಕೆಗೆ ಮೀರಿದುದು, ವಿಚಿತ್ರವಾದುದು, ಭಯಂಕರವಾದುದು, ಪೀಡೆ, ಊಹೆಗೆ ನಿಲುಕದುದು, ಎನ್ನುವಂತೆ, ರೌದ್ರ ರಸಪೂರ್ಣವಾದ ಮಗಧರಾಜನ ಚತುರಂಗಬಲವು ಬಂದಿತು. ವ|| ಅನಂತರ ೪೧. ಬಲಿಷ್ಠವಾದ ಸೇನಾಸಮೂಹದ ಕಾಲಿನಿಂದೆದ್ದ ಧೂಳಿನಿಂದ ಆಕಾಶಗಾಮಿಗಳ ಸಮೂಹವೂ, ಸೇನೆಯ ಮಹಾಭಾರದಿಂದ ಆದಿಶೇಷನೂ, ಸೈನ್ಯದ ಕಲಕಲಶಬ್ದದಿಂದ ದಿಕ್ಪಾಲಕರೂ ಅವಧಿಗೆಟ್ಟು ನೆಲೆಗೆಟ್ಟೋಡುವಂತಾಯಿತು. ಕಿವಿ ಕಿವುಡಾಗಿಹೋಯಿತು. ಆತನ ಸಾಹಸಗಳನ್ನು ಕೀರ್ತನಮಾಡುತ್ತಿರುವ ಅನೇಕ ಸ್ತುತಿಪಾಠಕರೊಂದಿಗೆ ಮಗಧ ರಾಜನು ಹೊರಟನು. ೪೨. ಆ ಜರಾಸಂಧನ ಬಾಹುಪರಾಕ್ರಮವು ಸಹಜವಾಗಿಯೇ ಘನವಾದುದು, ಅವನೊಡನೆ ಚೇದಿರಾಜ ದುರ್ಯೋಧನ ಮಾದ್ರೇಶ ಅಂಗಾಧಿರಾಜರೂ ತಾವಾಗಿ ಒಟ್ಟಿಗೆ ಸೇರಿದರು. ಈ ವೀರನ ಮೇಲೆ ಯುದ್ಧದಲ್ಲಿ ಪ್ರತಿಭಟಿಸುವವರೂ ಹಟದಿಂದ ಎದುರಿಸಿ, ಕಾದಾಡುವವರೂ, ರಭಸ ತೋರಿಸುವವರೂ ಇನ್ನಾರಿರುವರು! ಎಂಬುದು ಪ್ರಕಟವಾಗುವಂತೆ ಜರಾಸಂಧರಾಜನು ಕೃಷ್ಣನ ಮೇಲೆ ದಂಡೆತ್ತಿಬಂದನು.

5

ಘನವೀಧೀಸಿಂಧು ಪೂೞ್ದಂಬರತಳದೊಳಪೂರ್ವಾವನೀಚಕ್ರಮಾಗಿ
ರ್ಪಿನೆಗಂ ವಾರಾಸಿಗಳ್ ಪೂೞ್ದೆಳೆಯೊಳಭಿನವದ್ವೀಪರೂಪಂಗಳಾಗಿ
ರ್ಪಿನೆಗಂ ಬ್ರಹ್ಮಾಂಡಭಾಂಡಂ ನಿಜಬಹುಳತೆಯಿಂ ಮೃತ್ತಿಕಾಭಾಂಡದಂತಿ
ರ್ಪಿನೆಗಂ ಪರ್ಬಿತ್ತದೆತ್ತಂ ಮಗಧನೃಪಬಲೋದ್ಭೂತಧೂಳೀಪ್ರತಾನಂ ೪೩

ವ|| ಅಂತು ಭುವನಕ್ಷೋಭಮಾಗೆ ನಡೆತಂದು ಮಥುರಾಪುರಮನೆಯ್ದೆವರ್ಪ ಸಮಯದೊಳ್

ಇದು ಸಪ್ತಾಂಬುಧಿಘೋಷಮೊಂದೆಡೆಗೆವಂದಂತಾಯ್ತೆನಿಪ್ಪನ್ನಸೈ
ನ್ಯದ ಘೋಷಂ ಕಿವಿಗೆಯ್ದೆ ಮಾಗಧನ ಸೇನಾಘೋಷಮೆಂದಚ್ಯುತಂ
ಕದನೋತ್ಸಾಹದೆ ಸೊಟಿಸೊಟಿದರೆ ಮುಯ್ವಂ ನೋಡುತಂ ಬಾಹುಕಾಂ
ಡದ ಕಂಡೂತಿಗಳಂ ತೆರಳ್ಚಲೆಡೆಯಾಯ್ತೆಂದಂದು ಮೆಯ್ವೆರ್ಚಿದಂ ೪೪

ವ|| ಅಂತು ಕಂಸಾಂತಕಂ ಸಮರಸಂರಂಭದಿನಿರೆ ಯಾದವರ್ ತಮ್ಮೊಳಾಳೋಚನಂಗೆಯ್ದು ಮಾಗಧನತಿಬಲಾಧಿಕಂ ನಮಗೆ ಕೋಂಟೆಯೊಳಿರ್ದು ಕಾದುವುದು ಕಜ್ಜಮೆಂದು ನಿಶ್ಚೈಸಿ ಪುರದ ಗೋಪುರಾಟ್ಟಾಳಕಂಗೊಳೊಳಲ್ಲಲ್ಲಿಗೆ ಪೆಸರ[1]ನಾಯಕರಂ ಸಮಕಟ್ಟಿ ನಿಲ್ವುದುಂ ಜರಾಸಂಧಂ ಮುಟ್ಟೆವಂದು ಕಾಳಿಂದೀಸಿಂಧುತೀರದೊಳ್ ಸಕಲರಾಜಲೋಕಪರಿವೃತನಾಗಿ ಕುಳ್ಳಿರ್ದು

೪೩. ಆಗ ಆ ಜರಾಸಂಧನ ಸೇನಾಸಮೂಹದ ಚಲನೆಯಿಂದ ಎದ್ದ ಅಪರಿಮಿತವಾದ ಧೂಳು ಎಲ್ಲೆಲ್ಲೂ ಹರಡಿತು. ಅದರಿಂದ ಆಕಾಶಗಂಗೆಯು ಹೂಳಿಹೋಗಿ, ಆಕಾಶದಲ್ಲೆ ಮತ್ತೊಂದು ಅಪೂರ್ವ ಭೂಮಂಡಲವು ಉದಿಸುವಂತಾಯಿತು. ಸಮುದ್ರಗಳೆಲ್ಲವೂ ಹೂತುಹೋಗಿ ಹೊಸ ಹೊಸದಾದ ದ್ವೀಪಗಳಂತಾದುವು. ಬ್ರಹ್ಮಾಂಡದ ಸುತ್ತಲೂ ಧೂಳು ವ್ಯಾಪಿಸಿ ಅಂಟಿದುದರಿಂದ ಆ ಬ್ರಹ್ಮಾಂಡವು ಒಂದು ಮಣ್ಣಿನ ಮಡಕೆಯಂತಾಯಿತು. ವ|| ಹಾಗೆ ಪ್ರಪಂಚದಲ್ಲೆಲ್ಲಾ ಗಲಭೆಯಾಗುವಂತೆ ದಂಡೆತ್ತಿ ನಡೆದು, ಮಥುರೆಯನ್ನು ಸಮೀಪಿಸಿದಾಗ ೪೪. ಸಪ್ತಸಮುದ್ರಗಳ ಮೊರೆತವೂ ಒಂದು ಕಡೆ ಸೇರಿದಂತಿದೆ ಯೆನ್ನುವಂತಿರುವ ಆ ಸೇನೆಯ ಶಬ್ದವು ಕಿವಿಗೆ ಬೀಳಲು ಕೃಷ್ಣನು ಇದು ಜರಾಸಂಧನ ಸೇನೆಯ ಶಬ್ದವೆಂದುಕೊಂಡನು. ಕದನದ ಉತ್ಸಾಹದಿಂದ ಭುಜವು ಬಾರಿ ಬಾರಿಗೆ ಅದುರಿತು. ಅಡಿಗಡಿಗೆ ಹೆಗಲನ್ನು ನೋಡುತ್ತ ತೋಳಿನ ತೀಟೆಯನ್ನು ಕಳೆದುಕೊಳ್ಳುವುದಕ್ಕೆ ಇದು ಒಂದು ಅವಕಾಶವಾಯಿತು ಎಂದು ಮೈಯ್ಯುಬ್ಬಿದನು. ವ|| ಹಾಗೆ ಕೃಷ್ಣನು ಯುದ್ಧಾಸಕ್ತಿಯ ಸಡಗರದಿಂದಿದ್ದಾಗ ಯಾದವರು ತಮ್ಮಲ್ಲಿ ಆಲೋಚನೆ ಮಾಡಿ, ಜರಾಸಾಂಧನು "ಅಧಿಕ ಬಲಶಾಲಿ. ನಾವು ಕೋಟೆಯೊಳಗಡೆಯಿದ್ದು ಕಾದುವುದು ಉಚಿತವೆಂದು" ನಿಶ್ಚಯಿಸಿದರು. ಮಥುರೆಯ ಗೋಪುರ ಅಟ್ಟಣೆಗಳಲ್ಲಿ ಅಲ್ಲಲ್ಲಿ ಹೆಸರು ಪಡೆದ ನಾಯಕರನ್ನು ನಿಯಮಿಸಿ ನಿಂತರು. ಜರಾಸಂಧನು ಹತ್ತಿರ ಬಂದು, ಯಮುನಾ ನದಿಯ ತೀರದಲ್ಲಿ ಸಕಲರಾಜಸಮೂಹದಿಂದ ಸುತ್ತುವರಿದವನಾಗಿ ಕುಳಿತು,

---

೧. ನಾಯಕರೆಂದು ಸಮಕಟ್ಟಿ (ಕಗ)

ಅವನೀಕಂಪನಮಬ್ಧಿ[1]ಶೋಷಣಮರಣ್ಯೋನ್ಮೂಲನಂ ಭೂಮಿಭೃ
ನ್ನಿವಹಕ್ಷೇಪಣಮಿಂದ್ವಿನಸ್ಖಲನಮಭ್ರಾಳೋಡನಂ ತಾರಕಾ
ಚ್ಯವನಂ ಪದ್ಮಭವಾಂಡನಿರ್ದಳನಮಯ್ತಸ್ಮದ್ಬಲಾಟೋಪದಿಂ
ನವಗಿನ್ನುಂ ಪೊಟಿಲಳ್ಕದೆಂದು ಮಗಧೇಶಂ ಕ್ರೋಧಮಂ ತಾಳ್ದಿದಂ ೪೫

ವ|| ಆಗಳತಿಕ್ರೋಧಮಂ ತಳೆದು ಮಗದರಾಜಂ ಚೇದಿರಾಜನಂ ನಿರೀಕ್ಷಿಸೆ

ನರನಾಥಾಗ್ರಣಿ ನೀಂ ಮೊಗಕ್ಕೆ ಮುಳಿಸಂ ತರ್ಪನ್ನಮೇನುಂಟೆ ಸಂ
ಗರವೆಮ್ಮನ್ನೆ ದೇವಂ ನೀಂ ಬೆಸಸಿದರ್ಕಾವಾವೆ ಹೋ ಸಾಲ್ವೆವೆಂ
ದು ರಣಕ್ರೋಧವಿಜೃಂಭಿತಾಂಬಕರಿಳೇಶರ್ ಗರ್ಜಿಸಲ್ ಭೂರಿವೀ
ರರಸಾಂಭೋಧಿಯೆ ಗರ್ಜಿಪಂತೆವೊಲಗುರ್ವಾಯ್ತಾ ಸಭಾಮಂಡಲಂ ೪೬

ವ|| ಅಂತನೇಕಪ್ರಕಾರವೀರಾಳಾಪಗಂಭೀರಭೂರಿಘೋಷಣಮುಂ, ನಿಟಿಲತಟತರಂಗಿತ ತ್ರಿಪಥಾಕಾರತರತ್ತರಂಗಸಂಘಾತಮುಂ, ಉತ್ಕಟವಿಕಟಬದ್ಧಭ್ರುಕುಟಿಜನಿತತಮಸ್ತಮಾಳವೇಳಾವನಮುಂ, ಉಜ್ಜೃಂಭಿತಾತಾಮ್ರಲೋಚನಾರುಣಕಿರಣತರಳಪ್ರವಾಳಪಟಲಮುಂ, ಅಂತರಂಗಜ್ವಳಿತಕೋಪಾನಳೌರ್ವಾನಳಮುಂ, ಅನ್ಯೋನ್ಯಸಂಘಟ್ಟನೋಚ್ಚಳಿತಕಟಕಕೇಯೂರಹಾರಾದ್ಯಾಭರಣಮುಕ್ತಾಫಲಪ್ರಕರ ಶೀಕರಮುಮೆನಿಸಿ ಘೂರ್ಣಿಸುವ ಅಸಂಖ್ಯಾತನೃಪವೀರರಸಾರ್ಣವಕ್ಕೆ ಭಟಕೋಟಿ ನಿಗ್ರಹಾನುಗ್ರಹಮೆಂಬ ಚಂಡ[2]ಪವನನಿನತಿಕ್ಷೋಭಮಂ ಪಡೆದು ವಿಚಿತ್ರಯಂತ್ರ ಬದ್ಧಾಂಗಾರಕುದ್ದಾಲಪರಶುಕ್ಷಾರಪ್ರಕಂಟಕ ನಿಶ್ರೇಣಿಮುಖ್ಯಾನೇಕದುರ್ಗಸಾಧನಪರಿಕರಂಗಳ್ವೆರಸು ನಡೆದು, ಭೋರ್ಗರೆವ ಲಗ್ಗೆವಱೆಗಳ್ಮೊಳಗೆ ಸುತ್ತಿ ಮುತ್ತಿ, ಪರಿಖಾಚಕ್ರಮನತಿಕ್ರಮಿಸೆ ಅಟ್ಟಾಳ ಪ್ರಾಕಾರತಳದೊಳಿರ್ದ ಯದುಸೈನ್ಯಸುಭಟರಿಸುವಿಜೆವ ಬೀಸುವ ಯಂತ್ರಮುಕ್ತಕರಮುಕ್ತಮುಕ್ತಾಮುಕ್ತಂಗಳೆಂಬ ವಿವಿಧೋಪಾಯ ಶಸ್ತ್ರಂಗಳೊಳಂ ಬಿಡುವ

೪೫. "ನಮ್ಮ ಬಲಾಡಂಬರದಿಂದ ಭೂಮಿ ನಡುಗಿತು. ಸಮುದ್ರವು ಇಂಗಿತು. ಅರಣ್ಯವು ಬೇರೆದ್ದಿತು. ರಾಜಸಮೂಹವು ಬಿದ್ದುಹೋಯಿತು. ಚಂದ್ರಸೂರ್ಯರು ಜಾರಿದರು. ಮೋಡವು ಕಲಕಿಹೋಯಿತು. ನಕ್ಷತ್ರಗಳೂ ಜಾರಿದವು. ಬ್ರಹ್ಮಾಂಡವು ಸೀಳಿಹೋಯಿತು. ಇಷ್ಟಾದರೂ ಈ ಪಟ್ಟಣವು ನಮಗೆ ಹೆದರುವುದಿಲ್ಲವಲ್ಲಾ" ಎಂದು ರೇಗಿದನು. ವ|| ಹಾಗೆ ರೇಗಿದ ಜರಾಸಂಧನು ಶಿಶುಪಾಲನ ಮುಖವನ್ನು ನೋಡಿದನು. ೪೬. ಆಗ "ನರನಾಥಾಗ್ರೇಸರಾ; ಈ ಯುದ್ಧವು ನೀನು ಕೋಪಿಸಿಕೊಳ್ಳುವಷ್ಟು ಮಟ್ಟಿನದೆ?! ದೇವಾ ನಮಗೆ ಆಜ್ಞಾಪಿಸು ಇದಕ್ಕೆ ನಾವೇ ಸಾಕು" ಎಂದು, ಯುದ್ಧ ಕೋಪದಿಂದ ದೊಡ್ಡದಾಗಿ ಕಣ್ಣುಬಿಟ್ಟು ಸಭೆಯಲ್ಲಿದ್ದ ದೊರೆಗಳನೇಕರು ಗರ್ಜಿಸಿದರು. ಅದು ವಿಸ್ತಾರವಾದ ವೀರರಸಸಾಗರವೇ ಗರ್ಜಿಸುವಂತೆ ಭಯಂಕರವಾಗಿ ಕೇಳಿಸಿತು. ವ|| ಆ ಸಭೆಯು ಮೊರೆಯುವ ಅಸಂಖ್ಯಾತರಾಜರ ವೀರರ ಸಾಗರವಾಗಿದ್ದಿತು. ಅನೇಕ ವಿಧವಾದ ವೀರರ ಭಾಷಣವೇ ಗಂಭೀರವಾದ ಆ ಸಾಗರಧ್ವನಿ, ರಾಜರ ಹಣೆಯಲ್ಲಿ ಪತಾಕೆಯಂತೆ ಮೇಲೆದ್ದ ಮೂರು ಮಡಿಪುಗಳೇ ಅಲೆಗಳು. ವಿಕಾರವಾಗಿ ಹುಬ್ಬುಗಂಟು ಹಾಕಿಕೊಂಡುದರಿಂದ ಉಂಟಾದ ಕತ್ತಲೆಯೇ ಸಾಗರತೀರದ ಹೊಂಗೆಯ ಮರಗಳ ವನ. ಉಬ್ಬೇರಿದ ರಾಜರ

---

೧. ಘೋಷಣ (ಕ) ೨. ಪವನನತಿಕ್ಷೋಭಮಂ ತಳೆದು (ಕಖಗ)

**ಘಟಸರ್ಪಕೋಟಗಳೊಳಂ ಚಿಮ್ಮುವ ಜಂತ್ರದುರಿಯೆಣ್ಣೆಯೊಳಂ ಚೆಲ್ಲುವ ತಪ್ತವಾಳುಕಜಾಲದೊಳಂ ಸೂಸುವ ಕಾದ ಸಜ್ಜರಸದೊಳಂ ಸಿಂಪಿಸುವ ಕರಗಿದ ಮಯಣದೊಳಂ ಕೆದಱುವ ಕೆಂಡಗಳೊಳಂ, ಮಡಿದು ಕೆಡೆವ ವೀರರ ಹೆಣದ ಬಣಂಬೆಯಂ ಮೆಟ್ಟಿ, ಸರವಿದ್ಧಕೋಟಾವಳಯಮನಿಸಿ, ಕೋಟೆಯ ಕೆಳದಿಸಗ್ರಂಬರಮೆಡರ್ದು, ಯದುವೀರರೊಳ್ ಕೇಶಾಕೇಶಿಯುದ್ಧದಿಂ ತಳ್ತಿಜಿದೊಳಪುಗುವ ಮಗಧಸೈನ್ಯಮಂ ಕಂಡು ಪುಂಡರೀಕಾಕ್ಷಂ ರೌಹಿಣೇಯುಂಬೆರಸು ವಿಜಯವರೂಥಾರೂಢನಾಗಿ ಅಗುಟೆಯನುರ್ಚಿ ಪೊಱಮಡುವಾಗಳ್**

**ವಾರಿಧಿ [೧]ಮೇರೆಯೊಳ್ ಪ್ರಳಯದೊಳ್ ತಳರ್ವಂತೆವೊಲಾಗಳಾ ಪುರ**
**ದ್ವಾರಚತುಷ್ಕದೊಳ್ ಯದುಬಲಂ ತಳರ್ದತ್ತು ಮದೇಭಘೋರಘಂ**
**ಟಾರವಮಶ್ವಹೇಷಿತರವಂ ಭಟಸಿಂಹರವಂ ವರೂಥಚೀ**
**ತ್ಕಾರರವಂ ಪದಿರ್ಮಡಿಸೆ ಕಾಹಳದುಂದುಭಿಶಂಖನಾದದಿಂ** ೪೭.

ಕೆಂಪೇರಿದ ಕಣ್ಣುಗಳ ಕಾಂತಿಯೇ ಹವಳದ ಬಳ್ಳಿಯ ಗುಂಪು, ಅವರ ಉಜ್ವಲವಾದ ಕೋಪಾಗ್ನಿಯೇ ಬಡಬಾಗ್ನಿ, ಒಂದಕ್ಕೊಂದು ತಾಕುವುದರಿಂದ ಕಿತ್ತು ಹಾರುವ ಕೈಬಳೆ ತೋಳಬಂದಿ ಮೊದಲಾದ ಆಭರಣಗಳ ಮುತ್ತುಗಳೇ ಆ ಸಾಗರದ ಮುತ್ತುಗಳು ಆಗಿದ್ದವು. ಆ ವೀರಸಾಗರದ ಭಟಕೋಟಿಯು ನಾಯಕರ ನಿಗ್ರಹಾನುಗ್ರಹವೆಂಬ ಚಂಡಮಾರುತನಿಂದ ಅಲ್ಲೋಲ ಕಲ್ಲೋಲವಾಗಿ ಯಂತ್ರಬದ್ಧವಾದ ಕುಲಿಮೆ, ಗುದ್ದಲಿ, ಗಂಡುಗೊಡಲಿ, ಮುಳ್ಳುಗಳು, ಏಣಿ ಮೊದಲಾದ ದುರ್ಗವನ್ನು ಏರಿಹೋಗಲು ಬೇಕಾದ ಸಾಮಗ್ರಿಗಳೊಡನೆ ನಡೆದು ಭೋರ್ಗರೆಯುತ್ತಿರುವ ವಾದ್ಯಗಳು ಧ್ವನಿಮಾಡುತ್ತಿರಲು ಕೋಟೆಯನ್ನು ಸುತ್ತಿಮುತ್ತಿ ಕೋಟೆಯ ಹೊರಗಿನ ಕಂದಕವನ್ನು ದಾಟಿತು. ಆಗ ಅಟ್ಟಣೆ ಪ್ರಾಕಾರಗಳಲ್ಲಿದ್ದ ಯದು ಸೈನ್ಯದ ಸುಭಟರು ಯಂತ್ರ ಮುಕ್ತ ಕರಮುಕ್ತ, ಮುಕ್ತಾ ಮುಕ್ತಗಳೆಂಬ ಹೊಡೆಯುವ, ಬೀಸುವ ಬಗೆ ಬಗೆಯ ಉಪಾಯದ ಶಸ್ತ್ರಗಳನ್ನು ಪ್ರಯೋಗಿಸಿದರು. ಕೋಟಿ ಘಟ ಸರ್ಪಗಳನ್ನು ಬಿಟ್ಟರು. ಯಂತ್ರದಿಂದ ಉರಿಯೆಣ್ಣೆಯನ್ನು ಚಿಮ್ಮಿದರು, ಕಾದಮಳಲನ್ನು ಚಲ್ಲಿದರು. ಕುದಿವ ಅರಗಿನ ರಸವನ್ನು ಸುರಿದರು. ಕರಗಿದ ಮೇಣವನ್ನು ಚಿಮುಕಿಸಿದರು. ಕೆಂಡಗಳನ್ನು ಸುರಿದರು, ಇವೆಲ್ಲದರಿಂದ ಜರಾಸಂಧನ ಕಡೆಯ ವೀರರನೇಕರು ಸತ್ತುಬಿದ್ದರು. ಉಳಿದವರು ಹಾಗೆ ಬಿದ್ದ ಹೆಣಗಳ ರಾಶಿಯನ್ನೇ ತುಳಿದುಕೊಂಡು ಮನುಷ್ಯರಿಂದಾಗಿರುವ ಕೋಟೆಯೆನ್ನುವಂತೆ ಮೇಲೇರಿ, ಕೋಟೆಯ ಬುಡದಿಂದ ತುದಿಯವರೆಗೆ ನಿಂತು, ಯದುವೀರರೊಡನೆ ಕೇಶಾಕೇಶಿ ಯುದ್ಧವನ್ನುಮಾಡಿ ಇರಿದು, ಕೋಟೆಯ ಒಳಗೆ ನುಗ್ಗುವಂತೆ ಕಾಣಿಸಿತು. ಆಗ ಕೃಷ್ಣನು ಬಲರಾಮನೊಡನೆ ವಿಜಯರಥವನ್ನೇರಿ, ಕೋಟೆಯ ಹೆಬ್ಬಾಗಿಲ ಅಗುಳಿಯನ್ನು ತೆಗೆಯಿಸಿ ಹೊರಟನು. ೪೭. ಆಗ ಪ್ರಳಯಕಾಲದಲ್ಲಿ ಸಮುದ್ರದ ಮೇರೆಯನ್ನು ಮೀರಿ ನುಗ್ಗುವಂತೆ ಯದುಬಲವು ಮಧುರೆಯ ನಾಲ್ಕು ದಿಕ್ಕಿನ ಬಾಗಿಲುಗಳಿಂದಲೂ ಹೊರ ನುಗ್ಗಿತು. ಆಗ ಆದ ಮದ್ದಾನೆಗಳ ಘೋರವಾದ ಘಂಟೆಗಳ ನಾದವೂ ಕುದುರೆಗಳ ಕೆನೆತದ ಶಬ್ದವೂ ಭಟರ ಸಿಂಹನಾದವೂ ರಥಗಳ ಚೀತ್ಕಾರ

---

೧. ಮೇರೆಯಂ (ಕಗ)

ಯದುಮಗಧಸೈನ್ಯಯುಗದೊಳ್
ಕದನಂ ಮಸೆದೊಡೆ ಮರುಳ್ಗಳಡದಿಂಬುತ್ಸಾ
ಹದೆ ಪಲ್ಲಂ ಮಸೆದುವು ನಾ
ರದನುಗುರಂ ಮಸೆದು ನೋಡುತಿರ್ದಂ ನಭದೊಳ್ ೪೮

ವ|| ಅನ್ನೆಗಂ

ನಿಜನಿಜವಿಭವಂ ಜನಿಯಿಸೆ
ನಿಜನಿಜವಾಹನಮನೇಱೆ ಪುರಹರ ಪಂಕೇ
ಜಜ ಪುರುಹೂತಾದ್ಯಮರರ್
ನಿಜನಿಜಕಾಂತಾಸಮೇತರಿರ್ದರ್ ನಭದೊಳ್ ೪೯

ವ|| ಅನ್ನೆಗಂ

ಗುಣರುತಿ ಹೇಷಿತಂ ಪ್ರಚುರಚೀತ್ಕೃತಿ ಹೂಂಕೃತಿ ಗರ್ಜಬೃಂಹಿತೋ
ಲ್ಬಣರವಮುಣ್ಮೆ ಬಿಲ್ಪಡೆಗೆ ಬಿಲ್ಪಡೆ ವಾಜಿಗೆ ವಾಜಿ ತೇರ್ಗೆ ತೇ
ರಣೆಗಣೆ ಕುಂತವಾಹಿನಿಗೆ ಕುಂತದ ವಾಹಿನಿ ವಾರಣಕ್ಕೆ ವಾ
ರಣವಿದಿರೊಡ್ಡನೊಡ್ಡಿದುದು ಯಾದವಮಾಗಧಸೈನ್ಯದಾಜಿಯೊಳ್ ೫೦

ಶಬ್ದಾದ್ವೈತಂ ಜಗಮೆನ
ಲಬ್ದರವೋದಾರಮಾದ ವಾದಿತ್ರಮಹಾ
ಶಬ್ದದೆ ಭೂಮಿವ್ಯೋಮಕ
ಕುಬ್ಬಳನಮೊಡರ್ಚೆ ತಾಗಿದತ್ತುಭಯಬಲಂ ೫೧

ಶಬ್ದವೂ, ಕಹಳೆ ಭೇರಿ ಶಂಖಗಳ ಧ್ವನಿಯೊಡನೆ ಸೇರಿ ಹತ್ತರಷ್ಟಾಯಿತು. ೪೮. ಯದುರಾಜ ಮಗಧರಾಜ ಸೇನೆಗಳೆರಡಕ್ಕೂ ಯುದ್ಧವು ಮಸೆಯಲಾಗಿ ಪಿಶಾಚಿಗಳು ಮಾಂಸವನ್ನು ಭಕ್ಷಿಸುವ ಉತ್ಸಾಹದಿಂದ ತಮ್ಮ ಹಲ್ಲುಗಳನ್ನು ಮಸೆದವು. ಗಗನದಲ್ಲಿ ನಾರದಋಷಿಯು ವೀಣೆಯನ್ನು ಬಾರಿಸಲು ತನ್ನ ಉಗುರುಗಳನ್ನು ಮಸೆದು ನೋಡುತ್ತಿದ್ದನು! ಅಷ್ಟರಲ್ಲಿ ೪೯. ತಮ್ಮ ತಮ್ಮ ವೈಭವದಿಂದ ಈಶ್ವರ ಬ್ರಹ್ಮೇಂದ್ರಾದಿ ದೇವತೆಗಳು ತಮ್ಮ ತಮ್ಮ ಕಾಂತೆಯರೊಡನೆ ವಾಹನವನ್ನು ಏರಿಬಂದು ಆಕಾಶದಲ್ಲಿ ನಿಂತರು. ವ|| ಅಷ್ಟರಲ್ಲಿ ೫೦. ಯಾದವ ಮಾಗಧರ ಸೈನ್ಯದ ಬಿಲ್ಲಿನ ಹೆದೆಯ ಟಂಕಾರವೂ, ಕುದುರೆಗಳ ಕೆನೆತವೂ, ರಥದ ಚೀತ್ಕಾರವೂ ಹೂಂಕಾರವೂ ಗರ್ಜನೆಯೂ, ಘೀಂಕಾರವೂ ಹೆಚ್ಚುತ್ತಿರುವಲ್ಲಿ ಕ್ರಮವಾಗಿ ಬಿಲ್ಗಾರರು ಬಿಲ್ಗಾರರೊಡನೆಯೂ ರಾವುತರು ರಾವುತರೊಡನೆಯೂ ತೇರಿನವರು ತೇರಿನವರೊಡನೆಯೂ ಕಾಲಾಳುಗಳು ಕಾಲಾಳುಗಳೊಡನೆಯೂ ಕುಂತಾಯುಧಧಾರಿಗಳು ಕುಂತಾಯುಧಧಾರಿಗಳೊಡನೆಯೂ ಆನೆಗಳವರು ಆನೆಗಳವರೊಡನೆಯೂ ಪರಸ್ಪರ ಇದಿರಾಂತು ನಿಂತು ಯುದ್ಧಕ್ಕೆ ಸಿದ್ಧವಾದರು. ೫೧. "ಜಗತ್ತು ಎನ್ನುವುದು ಶಬ್ದಕ್ಕಿಂತ ಬೇರೆಯಾದುದಲ್ಲ ಶಬ್ದವೇ ಜಗತ್ತು" ಎನ್ನುವಂತೆ ಇರುವ ವಾದ್ಯಗಳ ಮತ್ತು ವೀರರ ಆರ್ಭಟದ ಶಬ್ದದಿಂದ ಭೂಮ್ಯಾಕಾಶ ದಿಕ್ಕುಗಳನ್ನು ಸೀಳಿ ಒಡೆಯುವಂತೆ ಎರಡು ಸೈನ್ಯವೂ ಒಂದನ್ನೊಂದು ಎದುರಿಸಿ ತಾಕಿತು.

ಭರದಿನೆರಟ್ಟಿಬಲಂಗಳ ಪದಾತಿ ಪದಾತಿಯೊಳಶ್ವಮಶ್ವದೊಳ್
ಕರಿ ಕರಿಯೊಳ್ ರಥಂ ರಥದೊಳಾರ್ದು ಪಳಂಚೆ ನಭಂ ದಿಶಾತಟಂ
ಧರೆ ಕಡುಗೆಂಪದಾಯ್ತೊಗೆವ ಶೋಣಿತದಿಂದೆ ಜಗಂ ಮಹಾವನಾಂ
ತರಮೆ ಪೊದಟ್ಟಿ ರೌದ್ರರಸಸೇಚನದಿಂ ತಳಿರ್ವೇಱಿತೆಂಬಿನಂ ೫೨

ಬಿಗಿದ ಡೊಣೆ ತೆಗೆದ ಪದವಿಲ್
ಪುಗುವಡಿ ನಿಟ್ಟಿಸುವ ದಿಟ್ಟಿ ತೊಟ್ಟ ಸರಲ್ ದಿ
ಟ್ಟಿಗೆ ವರೆ ಸಾರ್ದಿದಿರಂ ಕಡು
ಪುಗಿಡಿಸಿ ಕೆದಱಿದರ್ ಕಣೆಗಳಂ ಸುಭಟರ್ಕಳ್ ೫೩

ಕಣೆಯಿಂ ಸಮೆದುದೊ ಧಾರಿಣಿ
ಕಣೆಯಿಂ ಕೇರ್ಗಟ್ಟಿತೋ ದಿಶಾವಳಿ ಕಣೆಯಿಂ
ಪೆಣೆದುದೊ ಗಗನಾಂಗಣಮೆನೆ
ಕಣೆಗಳನಿರ್ವಲದ ಬಿಲ್ಲ ವೀರರ್ ಕಱಿದರ್ ೫೪

ಮುಳಿಸಿಂದಿಸಲೊಡವಾಱುವ
ಶಿಳೀಮುಖಂಗಳೆ ಶಿಳೀಮುಖಂ ಕಂಜಾತಂ
ಗಳೆ ಕಂಜಾತಮೆನಲ್ ಪೂ
ಗೊಳನಂ ಪೋಲ್ತುದು ನಭಂ ಧನುರ್ಧರ[೧]ಧುರದೊಳ್ ೫೫

೫೨. ರಭಸದಿಂದ, ಉಭಯ ಸೇನೆಯೂ ಕಾಲಾಳುಗಳು ಕಾಲಾಳುಗಳೊಡನೆಯೂ, ಕುದುರೆಗಳವರು ಕುದುರೆಗಳವರೊಡನೆಯೂ ಆನೆಗಳವರು ಆನೆಗಳವರೊಡನೆಯೂ, ರಥಿಕರು ರಥದವರೊಡನೆಯೂ, ತಾಕಿದುದರಿಂದ ಹೊರಟ ರಕ್ತದಿಂದ ಆಕಾಶವೂ, ದಿಗಂತಗಳೂ, ಭೂಮಿಯೂ ಬಹಳ ಕೆಂಪಾದುವು. ಜಗತ್ತೆಂಬ ಮಹಾವನಾಂತರವೇ ರೌದ್ರರಸವನ್ನು ಚಿಮುಕಿಸಿದುದರಿಂದ ಚಿಗುರೇರಿತೆಂಬಂತೆ ಕಾಣಿಸುತ್ತಿತ್ತು. ೫೩. ಬೆನ್ನಿಗೆ ಬಿಗಿದುಕೊಂಡಿರುವ ಬತ್ತಳಿಕೆಯೂ, ಹದವಾಗಿ ಹೆದೆಯೇರಿಸಿ ಹಿಡಿದಿರುವ ಬಿಲ್ಲೂ, ಗರಿಯನ್ನು ಸರಿಯಾಗಿ ನೋಡುತ್ತಿರುವ ದೃಢವಾದ ಬಾಣವೂ ಕಣ್ಣಿಗೆ ಕಾಣಿಸುವಂತೆ ಸುಭಟರು ಎದುರಿನವರ ಕಾರ್ಯವನ್ನು ಕೆಡಿಸುತ್ತ ಬಾಣಗಳನ್ನು ಕೆದರಿದರು. ೫೪. ಭೂಮಿಯು ಬಾಣಗಳಿಂದ ಮಾಡಲ್ಪಟ್ಟಿದೆಯೋ? ದಿಕ್ಕುಗಳೆಲ್ಲ ಬಾಣಗಳ ಗೋಡೆಯುಳ್ಳುವೋ? ಗಗನಾಂಗಳವನ್ನು ಬಾಣಗಳಿಂದ ಹೆಣೆದಿದೆಯೋ ಎನ್ನುವಂತೆ ಎರಡು ಪಕ್ಕದ ವೀರರಾದ ಬಿಲ್ಗಾರರೂ, ಬಾಣಗಳನ್ನು ಕರೆದರು. ೫೫. ಕೋಪದಿಂದ ಹೊಡೆದುದರಿಂದ ಆಕಾಶಕ್ಕೆ ಹಾರಿದ ತಲೆಗಳ ಸಮೂಹವೇ ಕಮಲಗಳ ಸಮೂಹವೂ, ಅವುಗಳಿಗೆ ನಾಟಿಕೊಂಡಿರುವ ಬಾಣಗಳೇ ಆ ಕಮಲಗಳಿಗೆ ಮುತ್ತಿರುವ ತುಂಬಿಗಳೂ ಆಗಿದ್ದುದರಿಂದ ಬಿಲ್ಗಾರರ ಯುದ್ಧದಿಂದ ಆಕಾಶವು ಒಂದು ಹೂವಿನ ಕೊಳದಂತೆ ಆಗಿತ್ತು.

೧. ನಭದೊಳ್ (ಗ)

ಕುಂತದೆ ಕುತ್ತೀಡಾಡಿ ನ
ಭೋಂತಕ್ಕೊಗೆದಿರ್ದ ಸುಭಟತತಿ ಖಚರಬಲ
ಭ್ರಾಂತಿಯನನಿಸಂ ಜನಿಯಿಸೆ
ಕುಂತಧರರ್ ಕಾದಿ ಮೆಱೆದರದ್ಭುತರಸಮಂ ೫೬

[1]ಕರುಳೊಕ್ಕೊಕ್ಕುರ್ವಿಯೊಳ್ ಕುಪ್ಪಳಿಸೆ ನೆಣಳಿದರ್ ಸೂಸೆ ಬಂಬಲ್ಮಿದುಳ್ ಪಾ
ಯ್ತರೆ ನೆತ್ತರ್ ಸುರ್ರೆನುತ್ತುಂ ನಿಮಿರೆ ಕೆದಱೆ ಖಂಡಂ ಕೊರಲ್ ಸೆಕ್ಕೆವೋಗು
ತ್ತಿರೆ ತೋಳ್ ಬೇಱಾಗೆ ಕಾಲ್ ಖಂಡಿಸೆ ನಡು ಕಡಿವೋಗಲ್ಕೆ ಜೇರೇಱೆ ಮೂರ್ಧಂ
ಕರವಾಳೊಳ್ ಬಾಳ್ಪಳಂಚುತ್ತುರಿಯನುಗುಳೆ ಕಾದಿತ್ತು ಖಡ್ಗಿಪ್ರತಾನಂ ೫೭

ಬಳೆದುದು ಕೆಂದೂಳಿ ಖುರಾ
ವಳಿಯಿನೆನಲ್ ನೆಗೆದ ತಮ್ಮ ರಜಮಂಬರದೊಳ್
ಬೆಳಗುವ ಕಿಸುಸಂಜೆಮುಗಿಲ್
[2]ಪೊಳೆವಾಳ್ ಮಿಂಚೆನಿಸೆ ಕಾದಿದರ್ ಘೋಟಾಯ್ತರ್ ೫೮

ತವದ ಪೊಡರ್ಪಿನಿಂದಿಸುವ ಕೂರ್ಗಣೆ ಕುತ್ತುವ ಕೊಂತಮೆತ್ತಿ ಮೋ
ದುವ ಗದೆ ಪೊಯ್ವ ಬಾಳ್ ಬಿಡುವ ಕರ್ಕಡೆ ತೂಗುವ ವಜ್ರಮುಷ್ಟಿ ಬೀ
ಸುವ ಸಬಳಂ ವಿಚಿತ್ರಮೆನೆ ತಳ್ತಿಱಿದರ್ [3]ಮನೆಯಲ್ಲಿ ಕಲ್ತ ಪಾ
ರ್ಥಿವಕುಲವಿದ್ಯೆಯಂ ಮೊನೆಯೊಳಂ ನೆಱೆ [4]ತೋರ್ಪುರುಸಾಸವಾಸಿಗಳ್ ೫೯

೫೬. ಕುಂತಾಯುಧಧಾರಿಗಳು ಕುಂತದಿಂದ ಘಾತಿಸಿ ಆಕಾಶಕ್ಕೆ ಹಾರಿಸಿದ ಸುಭಟರ ಗುಂಪು, ಅಲ್ಲಿ ಖೇಚರ ಸೈನ್ಯವಿದೆಯೆಂಬ ಭ್ರಾಂತಿಯನ್ನು ಸ್ವಲ್ಪ ಉಂಟುಮಾಡುವಂತೆ ಯುದ್ಧಮಾಡಿ ಅದ್ಭುತರಸವನ್ನು ಮೆರೆದರು. ೫೭. ಕರುಳು ಸುರಿದು ಸುರಿದು ಭೂಮಿಯ ಮೇಲೆ ಕುಪ್ಪಳಿಸಿತು. ನೆಣವು ಚಿಗುರಿನಂತೆ ಚಲ್ಲಿತು. ಹೆಚ್ಚಾಗಿ ಮಿದುಳು ಹಾರಿತು. ರಕ್ತವು ಸುರ್ರೆಂದು ಹರಿಯುತ್ತಿದ್ದಿತು. ಮಾಂಸಖಂಡವು ಹರಡಿತು. ಕೊರಳಲ್ಲಿ ಚೆಕ್ಕೆಯೆದ್ದಿತು. ತೋಳು ಮುಂಡದಿಂದ ಬೇರಾಯಿತು. ಕಾಲು ತುಂಡಾಯಿತು. ನಡು ಕಡಿದುಹೋಯಿತು. ತಲೆಯು ತುಂಡಾಯಿತು. ಹೀಗಾಗುವಂತೆಯೂ ಕತ್ತಿಗೆ ಕತ್ತಿಯು ತಾಕಿ ಉರಿಯನ್ನುಗುಳುವಂತೆಯೂ ಖಡ್ಗಧಾರಿಗಳಾದ ಯೋಧರು ಕಾದಿದರು. ೫೮. ರಾವುತರು ತಮ್ಮ ಕುದುರೆಗಳ ಗೊರಸಿನಿಂದೆದ್ದ ಕೆಂಧೂಳು ಆಕಾಶಕ್ಕೆ ಹಾರಿ, ಅಲ್ಲಿ ಸಂಜೆಯ ಕೆಂಪು ಮೋಡದಂತೆಯೂ ತಮ್ಮ ಕತ್ತಿಯ ಹೊಳಪು ಆ ಮೋಡದಲ್ಲಿ ಮಿಂಚಿನಂತೆಯೂ ಕಾಣಿಸುತ್ತಿರಲು ಯುದ್ಧ ಮಾಡಿದರು. ೫೯. ತಾವು ಮನೆಯಲ್ಲಿ ಕಲಿತ ರಾಜವಿದ್ಯೆಯನ್ನು ಮೊನೆಯಲ್ಲಿ (ಯುದ್ಧದಲ್ಲಿ) ತೋರಿಸುವ ಮಹಾ ಸಾಹಸದಲ್ಲಿ ಹೆಸರು ಪಡೆದ ವೀರರು, ಕ್ಷೀಣವಾಗದ ಪರಾಕ್ರಮದಿಂದ ಮಾಡುವ ಹರಿತವಾದ ಬಾಣಗಳ ಪ್ರಯೋಗವೂ, ಕುಂತಾಯಧದ ಇರಿತವೂ, ಹತ್ತಿರ ಹೋಗಿ ಗದೆಯಿಂದ ಹೊಡೆಯುವುದೂ, ಕತ್ತಿಯ

---

೧. ಕರುಳೊಕ್ಕುರ್ಕ್ಕುವಿಯೊಳ್ (ಕಗ) ೨. ಪೊಳೆವೆಳಮಿಂಚೆನಿಸೆ (ಕಗ) ಪೊಳೆವೆಳೆಮಿಂಚೆನಿಸೆ (ಖ) ೩. ಮೊನೆಯಲ್ಲಿ (ಕಗ) ೪. ತೋರ್ಪ ರಸಾಸವಾರಿಗಳ್ (ಕ) ತೋರ್ಪರಸಾಸವಾಸಿಗಳ್ (ಖ)

ಕರದೊಳ್ ಕೂರಂಕುಸಂಗಳ್ ಪೊಳೆಯೆ ಪರಿಯಿಪಾಧೋರಣರ್ ತೀರ್ಶಿಕಾತೋ
ಮರನಾರಾಚಂಗಳಿಂದಾರ್ದಿಸುವತಿಬಳರ್ಜೋದರ್ ವಿಯಚ್ಚಕ್ರದೊಳ್ ಸಂ
ಚರಿಪುಚ್ಚೈಃಕೇತನಂಗಳ್ ತೊಳಪ ಗುಳಮವಿಂಬಾಗೆ ಕಣ್ಗೊಂಡುದೆತ್ತಂ
ಪರಿಯುತ್ತುಂ ಭೌಮವೈಹಾಯಸವಧವಿಧಮಂ ತೋಱುತುಂ ದಂತಿಸೈನ್ಯಂ ೬೦

ಮಸ್ತಕದಿಂ ಮುತ್ತುಗಳುಂ
ಮಸ್ತಿಷ್ಕಮುಮುದಿರೆ ಕೋಟ್ಕಳಿಂ ಕಿಡಿಯುಂ ಶ
ಳ್ಕಸ್ತೋಮಮುಮುಚ್ಚಳಿಸೆ ಮ
ದಸ್ತಂಬೇರಮಘಟಾಳಿ ಪೋರ್ದುದು ರಣದೊಳ್ ೬೧

ಪೊಂಗಾಲಿ ಮಿಱುಗೆ ಪಟಿಯಿಗೆ
ಬಾಂಗೆ ಪೆಡಂಮಗುಳೆ ಸೂತರೆಸಗುತ್ತಿರೆ ವಾ
ಹಂಗಳತಿಜವದೆ ಪರಿಯೆ ರ
ಥಂಗಳ್ ಪರಿದುವು ಬಳಾಬ್ಧಿನಕ್ರಾಕೃತಿಯೊಳ್ ೬೨

ಜೇರ್ಗರೆಯೆ ತೆಗೆದು ಬಿಲ್ಲಂ
ಭೋರ್ಗರೆದು [1]ವರೂಥಿಯೂಥಮಿಸಲನ್ಯೋನ್ಯಂ
ಕೂರ್ಗಣೆ ನಟ್ಟುವು ನೇರ್ದುವು
[2]ನೇರ್ಗೋಲ್ ಪರಿದುವು ಪಳಂಚಿದುವು ದಿಕ್ತಟಮಂ ೬೩.

ಹೊಡೆತವೂ ಕಕ್ಕಡೆಯೆಂಬ ಆಯುಧವನ್ನು ಬಿಡುವುದೂ ವಜ್ರದಂತಿರುವ ಕಯ್ಯುಮುಷ್ಟಿಯನ್ನು ತೂಗುವುದೂ, ಈಟಿಯನ್ನು ಬೀಸುವುದೂ ವಿಚಿತ್ರವೆನ್ನುವಂತೆ ಪ್ರತಿಭಟಿಸಿ, ಯುದ್ಧವನ್ನು ಮಾಡಿದರು. ೬೦. ಆನೆಗಳ ಸೇನೆಯು, ಕಯ್ಯಲ್ಲಿ ಹರಿತವಾದ ಅಂಕುಶಗಳು ಹೊಳೆಯುತ್ತಿರಲು ನಡೆಸುವ ಮಾವುತರೂ ಕತ್ತಿ ಈಟಿಬಾಣಗಳಿಂದ ಅಬ್ಬರಿಸಿ ಹೊಡೆಯುವ ಅತಿ ಶಕ್ತರಾದ ಯೋಧರೂ ಆಕಾಶಮಂಡಲದಲ್ಲಿ ಚಲಿಸುವ ಉನ್ನತವಾದ ಬಾವುಟಗಳೂ ಹೊಳೆಯುವ ಪಕ್ಕರಕ್ಕೆಯೂ ಚೆನ್ನಾಗಿರಲು ಎಲ್ಲ ಕಡೆಯೂ ಓಡುತ್ತ ಭೂಮ್ಯಾಕಾಶಗಳೆರಡರಲ್ಲೂ ಆಗುವ ಕೊಲೆಯ ರೀತಿಯನ್ನು ತೋರಿಸುತ್ತಾ ತೊಳಗಿತು. ಮದ್ದಾನೆಗಳ ಗುಂಪು ತಲೆಯಿಂದ ಮುತ್ತುಗಳೂ ಮೆದುಳೂ ಉದುರುತ್ತಲೂ ೬೧. ದಂತಗಳಿಂದ ಕಿಡಿಯೂ ಪುಡಿಯೂ ಮೇಲೆ ಹಾರುತ್ತಲೂ ಇರಲು ಯುದ್ಧದಲ್ಲಿ ಹೋರಾಡಿತು. ೬೨. ರಥಗಳ ಚಿನ್ನದ ಗಾಲಿಗಳು ಹೊಳೆಯುತ್ತಿರುವಲ್ಲಿ, ಸಾರಥಿಗಳು ಅಟ್ಟಲು ರಥದ ಕುದುರೆಗಳು ಅತಿವೇಗವಾಗಿ ಓಡುತ್ತಿದ್ದುದರಿಂದ ಬಾವುಟಗಳು ಹಿಂದಕ್ಕೆ ಆಕಾಶದಲ್ಲಿ ಚಲಿಸುತ್ತಿರಲು ಸೇನಾಸಮುದ್ರದ ಮೊಸಳೆಗಳಂತೆ ರಥಗಳು ಓಡಿದವು. ೬೩. ರಥಸೈನ್ಯವು ಬಿಲ್ಲನ್ನು ಹಿಡಿದು ಟಂಕಾರ ಮಾಡಿ ಭೋರ್ಗರೆದು, ಬಾಣವನ್ನು ಹೊಡೆಯಿತು. ಎರಡು ಕಡೆಯುವರ ಹರಿತವಾದ ಬಾಣಗಳು ಎದುರು ಕಡೆಯವರಿಗೆ ನೆಟ್ಟವು; ಕತ್ತರಿಸಿದವು; ನೇರವಾಗಿ ಹೋಗಿ, ದಿಗಂತವನ್ನು ತಾಕಿದವು.

---

೧. ವರೂಥಯೂಥ (ಕಖಗ) ೨. ನಟ್ಟುವು ನೀರ್ಗೋಲ್ಪರಿದುವು (ಕಗ)

ವ|| ಅಂತತಿಭಯಂಕರಮಾದ ಸಂಕುಲಯುದ್ಧದೊಳುಗ್ರಸೇನವಾಹಿನಿ ಸಮುದ್ರದೊಳ್ ಬೆರಸಿದ ವಾಹಿನಿಯಂತೆ ಮಗಧಸೇನಾಸಮುದ್ರದೊಳಟ್ಟಾಡುತ್ತಮಿರಲದಂ ಕಂಡು ಸಂಕರ್ಷಣನಮರ್ಷಣನಾಗಿ [೧]ನಿಜಪೂರ್ವ ದಿವ್ಯಾಯುಧಂಗಳಂ ಮನದೊಳ್ ನೆನೆದಂತರಿಕ್ಷತಳಮಂ ನಿರೀಕ್ಷಿಸೆ

ನಹುಷನಗಸ್ತ್ಯನ ಶಾಪದೆ
ಮಹೋಗ್ರಫಣಿಯಾಗಿ ಬಿಬ್ದುದಂ ನೆನೆಯಿಸೆ ಬಂ
ದು ಹಲಂ ದಿವದಿಂ ಬಲಭ
ದ್ರಹಸ್ತದೊಳ್ ನಿಂದುದತಿಭಯಂಕರರೂಪಿಂ ೬೪

ಪಗಲುಳ್ಕಂ ಬಿಬ್ದಪುದೀ
ಮಗಧಂಗೆನೆ ರಕ್ತಮಾಲ್ಯಭೂಷಿತಮುಸಲಂ
ಗಗನದಿನೆಬ್ದಿಂದರಿಸೇ
ನೆಗಳಬ್ಳುಱೆ ನೆಲಸಿದತ್ತನಂತನ ಕರದೊಳ್ ೬೫

ವ|| ಆಗಳ್

ಪರಿಪರಿದು ನೇಗಿಲಿಂದಂ
ಬರೆ [೨]ತೆಗೆತೆಗೆದಲ್ಲಿ ಮುಟ್ಟೆ ಮುಸಲದೆ ಪೊಯ್ಯೊ
ಯ್ದರಿಬಲಮನಿಕ್ಕಿದಂ ಹಲಿ
ಸುರನಿವಹಂ ನೋಡಿ ಭಾಪುಭಾಪೆಂಬಿನೆಗಂ ೬೬

ಎತ್ತ ದವಾನಳನಬುಱಿದು
ದತ್ತಲೆ ಪೇರಡವಿ ತವುವ ತೆಱದಿಂ ಬಲನಂ
ದೆತ್ತೆತ್ತಮೊಗದೆ ಕಾದಿದ
ನತ್ತತ್ತಲೆ ಮಗಧಸೇನೆ ಮಡಿದುದನಂತಂ ೬೭

ವ|| ಹಾಗೆ ಅತಿಭಯಂಕರವಾದ ಕೂಟಯುದ್ಧದಲ್ಲಿ ಉಗ್ರಸೇನನ ಸೇನೆಯು ಸಮುದ್ರದಲ್ಲಿ ಸೇರಿದ ನದಿಯಂತೆ ಮಗಧ ಸೇನಾ ಸಮುದ್ರದಲ್ಲಿ ಸೇರಿ, ನಿಶ್ಶೇಷವಾಗುವಂತೆ ಇರಲು, ಅದನ್ನು ಕಂಡ ಬಲರಾಮನು ಸಹಿಸದವನಾಗಿ ತನ್ನ ಪೂರ್ವದ ದಿವ್ಯಾಯುಧಗಳನ್ನು ಮನಸ್ಸಿನಲ್ಲೇ ನೆನೆದು ಅಂತರಿಕ್ಷವನ್ನು ನೋಡಿದನು. ೬೪. ನಹುಷನು ಅಗಸ್ತ್ಯರ ಶಾಪದಿಂದ ದೊಡ್ಡ ಹಾವಾಗಿ ಬಿದ್ದುದನ್ನು ಜ್ಞಾಪಿಸುವಂತೆ ಹಲಾಯುಧವು ಅತಿ ಭಯಂಕರವಾದ ರೂಪದಿಂದ ಅಂತರಿಕ್ಷದಿಂದ ಬಂದು ಬಲರಾಮನ ಕಯ್ಯಲ್ಲಿ ನಿಂತಿತು. ೬೫. ಈ ಜರಾಸಂಧನಿಗೆ ಹಗಲೇ ಉಲ್ಕಾಪಾತವಾಗುತ್ತಿದೆಯೆನ್ನುವಂತೆ ರಕ್ತಮಾಲೆಗಳಿಂದ ಅಲಂಕೃತವಾದ ಒನಕೆಯು ಗಗನದಿಂದಿಳಿದು ಬಂದು ಶತ್ರುಸೇನೆಗಳು ಹೆದರುವಂತೆ ಬಲರಾಮನ ಕೈ ಸೇರಿ ನಿಂತಿತು. ವ|| ಆಗ ೬೬. ಬಲರಾಮನು, ಓಡಿ ಓಡಿ ಹೋಗಿ, ಶತ್ರುಸೇನೆಯನ್ನು ನೇಗಿಲಿನಿಂದ ಎಳೆದು ಹಿಡಿದುಕೊಂಡು, ದೇವತೆಗಳ ಸಮೂಹವು ಭಾಪು ಭಾಪೆನ್ನುವಂತೆ ಒನಕೆಯಿಂದ ಹೊಡೆದು ಹಾಕಿದನು. ೬೭. ಕಾಡುಕಿಚ್ಚು ಎತ್ತಕಡೆ ಹರಡುವುದೋ ಅತ್ತಕಡೆಯೆ ದೊಡ್ಡ ಕಾಡು ನಾಶವಾಗುವಂತೆ ಬಲರಾಮನು ಆದಿನ

---

೧. ನಿಜವಿದ್ಯಾ (ಕಗ) ೨. ತೆಗೆತೆಗೆದಟ್ಟೆ (ಕಖ)

ತುರಗದೆ ತುರಗಮನಿಟ್ಟುಂ
ನರರಿಂದಂ ನರರನಿಟ್ಟು ಪೊಡೆದುಂ ಕರಿಯಿಂ
ಕರಿಯಂ ರಥದಿಂ ರಥಮಂ
ಭರದಿಂದಪ್ಪಳಿಸಿ ಮೋದಿದಂ ಬಲಭದ್ರಂ ೭೮

ಉಗಿಬಗಿಮಾಡಿ ದಂತಿಘಟೆಯಂ ಹಲಪಾಣಿ ಹಲಪ್ರಹಾರದಿಂ
ನೆಗೆವ ತದೀಯಮಸ್ತಕದ ಮೌಕ್ತಿಕರಾಜಿಯನಿತ್ತನಾಜಿಯೊಳ್
ಗಗನತಳಕ್ಕೆ ತಾರೆಗೆಗಳಂ ಜಲರಾಶಿಗೆ ರತ್ನರಾಶಿಯಂ
ದಿಗಿಭಗಣಕ್ಕೆ ಶೀಕರಮನುರ್ವಿಗೆ ಪುಷ್ಪಚಯೋಪಹಾರಮಂ ೭೯

ಭಟರಶ್ವಮನಶ್ವಂ ಗಜ
ಘಟೆಯಂ ಗಜಘಟೆ ತೆರಳ್ದು ರಥಮಂ ರಥಮು
ತ್ಕಟಭಯದಿಂದೋಡಿ ದಿಶಾ
ತಟಮಂ ಮಱೆಗೊಳೆ ಹಲಾಯುಧಂ [1]ಮರ್ದಿಸಿದಂ ೮೦

ವ|| ಅಂತು ಬಲಹಲಪ್ರಹಾರದಿಂ ಭಯ[2]ಚಕಿತಮಾಗಿ ಬೆಂಗೊಟ್ಟು ಪೋಪ ನಿಜಸೈನ್ಯಮಂ ಕೂಡಿಕೊಂಡು ಸರ್ವಾಂಗಸನ್ನಾಹರುಂ ಪರಿಚೋದಿತಸ್ಯಂದನರುಂ ಪ್ರಣಿಧಿತ್ರಯಪ್ರೇರಿತಭದ್ರಗಜರುಂ ಅತಿಜವಕ್ಷಿಪ್ತಜಾತ್ಯಶ್ವರುಮಾರೋಪಿತಚಾಪರುಮುತ್ತಾನಿತಾಂಕುಶರು[3]ಮುದ್ಧೃತ ಗದಾದಂಡರುಮುತ್ಖಾತ ಖಡ್ಗರುಮುಜ್ಜೃಂಭಿತಾಮ್ರನೇತ್ರರುಂ ವಿಚಿತ್ರವಾದಿತ್ರರುಮಾಗಿ ಮಾಗಧಪ್ರಮುಖನಿಖಿಲನರಪಾಲಕರ್ ನೂಂಕೆ ಸಂಕರ್ಷಣಂಗೆ ಸಮರವತಿಭರವಾದುದಂ ಕಂಡು ಭುಜಕಂಡುವಂ ತೆರಳ್ಚುವುದರ್ಕಿದುವೆ ಪದನೆಂದು ಕದನೋದ್ಯುಕ್ತನಾಗಿ ನಕ್ತಂಚರಾಂತಕಂ ತನ್ನ ದಿವ್ಯಾಯುಧಂಗಳಂ ಸ್ಮರಿಸೆ

ಯಾವ ಕಡೆಗೆ ತಿರುಗಿ ಯುದ್ಧ ಮಾಡಿದನೊ ಆ ಕಡೆಯ ಮಗಧಸೇನೆಯು ಲೆಕ್ಕವಿಲ್ಲದಷ್ಟು ಮಡಿಯಿತು. ೭೮. ಬಲರಾಮನು, ಕುದುರೆಗಳಿಂದಲೇ ಕುದುರೆಗಳನ್ನು ಮನುಷ್ಯರಿಂದಲೇ ಮನುಷ್ಯರನ್ನು ಹೊಡೆದು ಆನೆಗಳಿಂದಲೇ ಆನೆಗಳನ್ನು ರಥಗಳಿಂದಲೇ ರಥಗಳನ್ನು ಅಪ್ಪಳಿಸಿ ನಾಶಮಾಡಿದನು. ೭೯. ಬಲರಾಮನು ಆನೆಗಳ ಸಮೂಹವನ್ನು ನೇಗಿಲ ಹೊಡೆತದಿಂದ ನಜ್ಜುಗುಜ್ಜು ಮಾಡಿ, ಹಾರಿದ ಆನೆಗಳ ತಲೆಯ ಮುತ್ತುಗಳಿಂದ ಗಗನಪ್ರದೇಶಕ್ಕೆ ನಕ್ಷತ್ರಗಳನ್ನಾಗಿಯೂ, ಸಮುದ್ರಕ್ಕೆ ರತ್ನರಾಶಿಯನ್ನಾಗಿಯೂ ದಿಗ್ಗಜಗಳ ಸಮೂಹಕ್ಕೆ ತುಂತುರುಗಳನ್ನಾಗಿಯೂ, ಭೂಮಿಗೆ ಹೂಗಳ ರಾಶಿಯ ಉಪಹಾರವನ್ನಾಗಿಯೂ ಮಾಡಿದನು. ೮೦. ಯುದ್ಧದಲ್ಲಿ ಕಾಲಾಳುಗಳು ಕುದುರೆಗಳನ್ನೂ ಕುದುರೆಗಳು ಆನೆಗಳನ್ನೂ ಆನೆಗಳು ರಥಗಳನ್ನೂ, ಹೆದರಿ ಓಡಿ ಹೋಗಿ ಮರೆಗೊಳ್ಳುವಂತೆಯೂ ರಥಗಳು ದಿಗಂತವನ್ನು ಮರೆಹೋಗುವಂತೆಯೂ ಬಲರಾಮನು ಮರ್ದಿಸಿದನು. ವ|| ಹಾಗೆ ಬಲರಾಮನ ಹೊಡೆತದಿಂದ ಭಯಾಶ್ಚರ್ಯವುಳ್ಳುದಾಗಿ ಹಿಮ್ಮೆಟ್ಟಿ, ಹೋಗುವ ತಮ್ಮ ಸೈನ್ಯವನ್ನು ಕೂಡಿಕೊಂಡು ಸರ್ವಾಂಗಸನ್ನಾಹರೂ ರಥವನ್ನಟ್ಟುವವರೂ ಮೂರು ಮೂರು ಅನುಯಾಯಿಗಳಿಂದ ಪ್ರೇರಿತವಾದ ಭದ್ರಗಜವುಳ್ಳವರೂ ಅತಿ ವೇಗವಾಗಿ ಓಡಿಸಿದ ಜಾತಿಯ ಕುದುರೆಗಳುಳ್ಳವರೂ ಹೆದೆಯೇರಿಸಿದ ಬಿಲ್ಲುಳ್ಳವರೂ ಎತ್ತಿಹಿಡಿದ

---

೧. ತಳ್ತಿಱಿದಂ (ಕಗ) ೨. ಚಕಿತರಾಗಿ (ಕಖಗ) ೩. ಉದ್ಧೃತ್ತ (ಕಖ)

ಪ್ರತಿಬಿಂಬಾಭಾಸಮಂ ವ್ಯೋಮದೊಳೆ ನಿಲಿಸಿ ಸಾಕ್ಷಾದ್ದಿನಾಧೀಶಬಿಂಬಂ
ಕ್ಷಿತಿಗೆಟ್ಟಿಂದತ್ತೆನಲ್ ಭಾಸುರಕಿರಣಸಟಾಟೋಪದಿಂ ಭಾನುಬಿಂಬ
ದ್ಯುತಿಯಂ ಬೀಱುತ್ತುಮಾಕಾಶದಿನಿೞಿದು ಮುರಾರಾತಿಹಸ್ತಾಗ್ರದೊಳ್ ಸಂ
ಗತಿವೆತ್ತಿರ್ದತ್ತು ಚಕ್ರಂ ಬೆದಱಿ ಪುಗೆ ದಿಶಾಚಕ್ರಮಂ ವೈರಿಚಕ್ರಂ ೭೧

ಚೋದ್ಯಂ ನಿರಭ್ರನಭದಿಂ
ವಿದ್ಯುಲ್ಲತೆ ಘಟಿಲನಿೞಿದುದೆನೆ ಖಡ್ಗಂ ಚಂ
ಚದ್ದ್ಯುತಿಯಿಂ ಭುವನಾಂತರ
ಮುದ್ದ್ಯೋತಿಸೆ ಬಂದು ನಿಂದುದಚ್ಯುತಕರದೊಳ್ ೭೨

ರಿಪುಧೂಮಕೇತು ನೆಗೞ್ದ
ರ್ದಪುದೆನೆ ತಾಂ ಮೊದಲೆ ಬಂದು ನಿಂದುದು [1]ಗದೆ ತಾ
ರ್ಕ್ಷ್ಯಪತಾಕನ ಕರದೊಳ್ ವೈ
ರಿಪತಾಕಿನಿ ಕಂಡು [2]ಮನದೊಳುಳ್ಳಳ್ಕುವಿನಂ ೭೩

ನೆಗೆದುದಕಾಲದೊಳ್ ರಿಪುಹರಂ ಸುರಕಾರ್ಮುಕಮಿಂತಿದಭ್ರದೊಳ್
ನೆಗೆದಿರದಿತ್ತಲೀ ಬರುತುಮಿರ್ದುದೆ ಬಂದುದಿದೊಂದು ಕೌತುಕಂ
ನಗಧರಹಸ್ತದೊಳ್ ನೆಲಸಿದತ್ತೆನೆ ಚಿತ್ರಮಣಿಪ್ರಭಾವಿಳಂ
ಗಗನದಿನಂದು ಬಂದು ನೆಲಸಿರ್ದುದು ಶಾರ್ಙ್ಗಮುಪೇಂದ್ರಹಸ್ತದೊಳ್ ೭೪

ಅಂಕುಶವುಳ್ಳವರೂ ಮೇಲೆತ್ತಿದ ಗದೆಯುಳ್ಳವರೂ ಹಿರಿದ ಕತ್ತಿಯುಳ್ಳವರೂ ದೊಡ್ಡದಾಗಿ ತೆರೆದ ಕೆಂಪಾದ ಕಣ್ಣುಳ್ಳವರೂ ವಿಚಿತ್ರವಾದ್ಯವುಳ್ಳವರೂ ಆಗಿ, ಜರಾಸಂಧನೇ ಮೊದಲಾದ ರಾಜರು ಮುನ್ನುಗ್ಗಿದರು. ಆಗ ಅದರಿಂದ ಬಲರಾಮನಿಗೆ ಯುದ್ಧವು ಅತಿಕಠಿನವಾಯಿತು. ಅದನ್ನು ಕಂಡ ಕೃಷ್ಣನು ತೋಳನವೆಯನ್ನು ತೀರಿಸುವುದಕ್ಕೆ ಇದೇ ತಕ್ಕ ಸಮಯವೆಂದು ಯುದ್ಧೋತ್ಸುಕನಾಗಿ ತನ್ನ ದಿವ್ಯಾಯುಧಗಳನ್ನು ಸ್ಮರಿಸಿದನು. ೭೧. ಸಾಕ್ಷಾತ್ತಾದ ಸೂರ್ಯಬಿಂಬವು ತನ್ನ ಪ್ರತಿಬಿಂಬದಂತೆ ಸ್ವಲ್ಪಕಾಣುವುದನ್ನು ಆಕಾಶದಲ್ಲಿ ನಿಲ್ಲಿಸಿ, ತಾನು ಭೂಮಿಗೆ ಬಂದಿತೆನ್ನುವಂತೆ ಪ್ರಕಾಶವಾದ ಕಿರಣಗಳೆಂಬ ಜಟೆಯ ಆಡಂಬರವುಳ್ಳದಾಗಿ ಸೂರ್ಯಮಂಡಲದ ಕಾಂತಿಯನ್ನೇ ಬೀರುತ್ತಾ ವಿಷ್ಣುಚಕ್ರವು ಆಕಾಶದಿಂದ ಇಳಿದು ವೈರಿಮಂಡಲವು ಹೆದರಿ ದಿಙ್ಮಂಡಲವನ್ನು ಹೊಗುವಂತೆ ಕೃಷ್ಣನ ಕೈಗೆ ಬಂದು ಸೇರಿತು. ೭೨. ಆಶ್ಚರ್ಯ! ಮೋಡವೇ ಇಲ್ಲದೆ ವಿದ್ಯುಲ್ಲತೆಯು ತಟ್ಟನೆ ಇಳಿದುದು ಎನ್ನುವಂತೆ ವಿಷ್ಣುವಿನ ಕತ್ತಿಯು ಹೊಳೆಯುವ ಪ್ರಭೆಯಿಂದ ಲೋಕವೆಲ್ಲವನ್ನೂ ಬೆಳಗುತ್ತ ಬಂದು ಕೃಷ್ಣನ ಕಯ್ಯಲ್ಲಿ ನಿಂತಿತು. ೭೩. ಶತ್ರುಗಳಿಗೆ ಧೂಮಕೇತುವು ಚೆನ್ನಾಗಿ ಕಾಣಿಸುತ್ತಿದೆಯೆನ್ನುವಂತೆ ವಿಷ್ಣುವಿನ ಗದೆಯು, ವೈರಿಸೇನೆಯು ನೋಡಿ ಮನಸ್ಸಿನಲ್ಲೆ ಹೆದರುವಂತೆ ತಟ್ಟನೆ ಬಂದು ಗರುಡಧ್ವಜ ಕೃಷ್ಣನ ಕೈಗೆ ಬಂದು ನಿಂತಿತು. ೭೪. "ಶತ್ರುನಾಶಕವಾದ ಇಂದ್ರ (ಕಾಮ)ನಬಿಲ್ಲು ಅಕಾಲದಲ್ಲಿ ಆಕಾಶದಲ್ಲಿ ಎದ್ದಿದೆ. ಇದು ಹೀಗೆ ಆಕಾಶದಲ್ಲೇ ಇರಲಾರದು ಓ! ಇತ್ತಕಡೆಯೇ ಇದೋ ಬರುತ್ತಿದೆ. ಬಂದೇ

೧. ಕೌಮೋದಕಿ (ಕಗ) ೨. ನಭ (ಕಗ)

ಬಾಣಾಸನಮಿರೆ ಕರದೊಳ್
ಚಾಣೂರಾಂತಕನ ಬೆನ್ನೊಳಂ ವಕ್ಷದೊಳಂ
ಕಾಣಲ್ಬಂದತ್ತಕ್ಷಯ
ಬಾಣಧಿಯುಂ ವಜ್ರಕವಚಮುಂ ತತ್‌ಕ್ಷಣದೊಳ್ ೭೫

ಪೊಣರ್ದೀ ಮಾರ್ಪಡೆ ಪಕ್ಷಿಚಂಚುಗೊಳಗಾಯಿತ್ತನ್ಯಸೈನ್ಯಂ ಮರು
ಳ್ಗುಣಿಸಾಯ್ತೀ ರಿಪುಸೇನೆಯಂತಕನ ವಕ್ತ್ರಕ್ಕೆಯ್ದಿತೀ ದ್ವಿಟ್ಬಲಂ
ರಣರಂಗಕ್ಕುಪಹಾರಮಾಯ್ತೆನೆ ಮಹಾಸಂಗ್ರಾಮಕೇಳೀವಿಜೃಂ
ಭಣದಿಂದೇಱಿಸಿದಂ ಮುರಾರಿ ಯಮದಂಡೋಚ್ಚಂಡಕೋದಂಡಮಂ ೭೬

ಮುಳಿಸಿಂದೇಱಿಸಿ ನೀವಿ ಜೇವೊಡೆಯೆ ದೈತ್ಯಾರಾತಿ ಬಿಲ್ಲಂ ರಸಾ
ತಳಮಂ ತಾಗಿ ಸಿಡಿಲ್ದು ಮುಟ್ಟಿ ದಿವಮಂ ಬಂದುರ್ವಿಯಂ ಭೋಂಕನ
ಪ್ಪಳಿಸಿತ್ತೆಂಬಿನಮುಣ್ಮಿ ತಟ್ಟುಱಿ ಭುಜಂಗರ್ ಬೆರ್ಚೆ ದೇವರ್ ಭಯಂ
ಗೊಳೆ ಮರ್ತ್ಯರ್ ಪ್ರತಿಜಾತನಾಗಗೃಹನಾಕಜ್ಯಾರವಂ ಜ್ಯಾರವಂ ೭೭

ವ|| ಅಂತು ಜಗತ್ತ್ರಯಂ ಜಾತಶಂಕಾಕುಳಿತಮಾಗೆ ನೀವಿ ಜೇವೊಡೆದು [೧]ಬದ್ಧ ಕರಾಂಗುಲಿತಳ ತ್ರಾಣನುಮಾಗಿ ಸವ್ಯಾಪಸವ್ಯಮತಿವೇಗದಿಂ ಕೀವಿ ತೆಗೆದಿಸಲೊಡಂ

ಬಿಟ್ಟಿತು ಇದೊಂದು ಆಶ್ಚರ್ಯ. ಗಿರಿಧರ ಕೃಷ್ಣನ ಕಯ್ಯಲ್ಲಿ ಬಂದ ನಿಂತಿದೆ" ಎನ್ನುವಂತೆ ವಿಚಿತ್ರ ರತ್ನ ಕಾಂತಿಯಿಂದ ಕೂಡಿದ ಶಾರ್ಙ್ಗವೆಂಬ ಬಿಲ್ಲು ಆಕಾಶದಿಂದ ಬಂದು ಕೃಷ್ಣನ ಹಸ್ತದಲ್ಲಿ ನೆಲೆಸಿತು. ೭೫. ಚಾಣೂರನನ್ನು ಕೊಂದ ಕೃಷ್ಣನ ಕಯ್ಯಲ್ಲಿ ಶಾರ್ಙ್ಗವೆಂಬ ಬಿಲ್ಲು ಬಂದು ನಿಂತಿರುವಾಗ ಅವನ ಬೆನ್ನಿನಲ್ಲಿ ಅಕ್ಷಯತೂಣೀರವೆಂಬ ಬತ್ತಳಿಕೆಯೂ ವಜ್ರಕವಚವೂ ತತ್‌ಕ್ಷಣದಲ್ಲೇ ಕಾಣಬಂದಿತು. ೭೬. ಕೃಷ್ಣನು ಯಮದಂಡದಂತೆ ಅತಿಕ್ರೂರವಾದ ಬಿಲ್ಲಿಗೆ ಮಹಾಯುದ್ಧವೆಂಬ ಆಟದಲ್ಲಿ ಅತ್ಯಾಸಕ್ತಿಯಿಂದಲೂ ಆಡಂಬರದಿಂದಲೂ ಹೆದೆಯೇರಿಸಿದನು. ಒಡನೆಯೇ ವೀಕ್ಷಕರು "ಇನ್ನು ಯುದ್ಧಮಾಡಿದ ಈ ಶತ್ರುಸೇನೆಯು ಹದ್ದು ಕಾಗೆಗಳ ಕೊಕ್ಕಿಗೆ ಒಳಗಾಯಿತು, ಪರಸೈನ್ಯವು ಪಿಶಾಚಿಗಳಿಗೂಟವಾಯಿತು. ವೈರಿಸೈನ್ಯವು ಯಮನ ಬಾಯಿಗೆ ಹೋದಂತೆಯೇ ಈ ದ್ವೇಷಿಗಳ ದಂಡು ಯುದ್ಧರಂಗಕ್ಕೆ ಕಾಣಿಕೆಯಾಯಿತು" ಎನ್ನುತ್ತಿದ್ದರು. ೭೭. ಕೃಷ್ಣನು ಕೋಪದಿಂದ ಬಿಲ್ಲಿಗೆ ಹೆದೆಯೇರಿಸಿ ನೀವಿ ಟಂಕಾರಮಾಡಿದನು. ಪಾತಾಳ ಸ್ವರ್ಗ ಭೂಲೋಕಗಳಿಂದ ಪ್ರತಿಧ್ವನಿಯನ್ನು ಪಡೆದ ಆ ಹೆದೆಯ ಟಂಕಾರಧ್ವನಿಯು ನಾಗರು ಹೆದರುವಂತೆ ಪಾತಾಳವನ್ನು ತಾಕಿ, ಅಲ್ಲಿಂದ ಸಿಡಿದು, ದೇವತೆಗಳು ಬೆಚ್ಚುವಂತೆ ಸ್ವರ್ಗವನ್ನು ಮುಟ್ಟಿ ಅಲ್ಲಿಂದ, ಮನುಷ್ಯರೂ ಭಯಪಡುವಂತೆ ತಟ್ಟನೆ ಬಂದು ಭೂಮಿಯನ್ನು ಅಪ್ಪಳಿಸಿತು ಎನ್ನುವಂತೆ ಹೆಚ್ಚಿತು. ವ|| ಹಾಗೆ ಮೂರುಲೋಕವೂ ಭಯಪೀಡಿತವಾಗುವಂತೆ ಹೆದೆಯನ್ನು ನೀವಿ ಟಂಕಾರಮಾಡಿ ಕೈಬೆರಳೌಸುಗಳನ್ನು

೧. ಬದ್ಧತಳಾಂಗುಳಿತಳ (ಕಖಗ)

ಮಗಧ[1]ನೃಪಾದಿ ಭೂಭುಜರ್ಗೆ ಪಲ್ಲೊಣೆವಂತಿರೆ [2]ಭೂರಿಟಂಕೃತಂ
ನೆಗೞೆ ಪೊದಟ್ಟಿ ಬೆಳ್ಸವಿಸಿಲ್ ರಣದೇವತೆಯಟ್ಟಹಾಸದಂ
ತೊಗೆಯೆ ವಿರೋಧಿಸೇನೆಗಿದು ಸೂಸುವ ಜೀವನಮೂಲ್ಯನಿಷ್ಕರಾ
ಜಿಗಳೆನೆ ವಿಸ್ಫುಲಿಂಗಮಲಗಿಂ ಕೆದಱುತ್ತಿರೆ ಪಾಯ್ದುವಂಬುಗಳ್ ೭೮

ಅಂಬಂಬಂ ಬಿಡೆ ಕಾಱುತಿರ್ಪ ತೆಱನಾಯ್ತಂಬಂಬನೀಂಬಂತುಟಾ
ಯ್ತಂಬಂಬಂ ಕರೆವಂದಮಾಯ್ತು ಬಗೆವಂದಂತಲ್ತು ಮೇಣೀತನೆ
[3]ಚ್ಚಂಬೊಂದೊಂದೆ ಸಹಸ್ರರೂಪಮನೆ ಕೈಗೊಂಡಿರ್ದುವೋರಂದದಿಂ
ದೆಂಬನ್ನಂ [4]ಲಘುಚಿತ್ರವೇಧಿ ಕರೆದಂ ಕೃಷ್ಣಂ ಶರಾಸಾರಮಂ ೭೯

ಪುದಿಯೆ ಘನಾಧ್ವಮಂ ಸರಲ ಪಂಜರದಿಂ ಹರಿ ಗಾಳಿಯೆತ್ತವೋ
ದುದು ದೆಸೆಯೆತ್ತವೋದುದು ದಿವಾಕರಮಂಡಲಮೆತ್ತಡಂಗಿ ಪೋ
ದುದು ನಭಮೆತ್ತವೋದು[5]ದೆನಿಸಲ್ ನಡೆಗೆಟ್ಟುದು ಗಾಳಿ ರೂಪುಗೆ
ಟ್ಟುದು ದೆಸೆ ತೋರ್ಕೆಗೆಟ್ಟು ದಿನಮಂಡಲಮಾಕೃತಿಗೆಟ್ಟುದಾಗಸಂ ೮೦

ತರ್ಕೈಸಿ ಸುರಿವ ತೆಱದಿಂ
ದುರ್ಕಂಬುಗಳೆಱಗಿ ರೋಮರೋಮಕ್ಕೆ ನೆೞಲ್
ನೆಕ್ಕು ಚೞಲ್ ಚಕ್ಕು ದೊಗಲ್
ದೊಕ್ಕೆನೆ ನಾಂಟಿದುವರಾತಿಭಟರವಯವಮಂ ೮೧

ಧರಿಸಿ, ಎಡಬಲಕೈಗಳೆರಡರಿಂದಲೂ ಬಾಣವನ್ನು ಹೂಡಿ, ಅತಿವೇಗದಿಂದ ಪೂರ್ಣವಾಗೆಳೆದುಬಿಟ್ಟನು. ೭೮. ಆ ಬಾಣಗಳ ಹೆಚ್ಚಾದ ಧ್ವಾಂಕಾರವು ಜರಾಸಂಧನೇ ಮೊದಲಾದ ದೊರೆಗಳ ಮೇಲೆ ಹಲ್ಲು ಕಡಿಯುವಂತೆ ಕಾಣಿಸುತ್ತಿತ್ತು. ಬೆಳ್ಳಗಾಗುವಂತೆ ಮಾಡಿದ ಮಸೆತದ ಬಿಸಿಲು ರಣದೇವತೆಯ ಹಿರಿನಗುವಿನಂತೆ ಕಾಣಿಸಿತು. ಅಲಗಿನಿಂದ ಹಾರುವ ಕಿಡಿಗಳು ಇದು ವಿರೋಧಿಸೇನೆಗೆ ಅವರು ಬಿಟ್ಟು ಕೊಡುವ ಜೀವದ ಮೌಲ್ಯವಾದ ಚಿನ್ನದ ನಾಣ್ಯಗಳು ಎನ್ನುವಂತೆ ಕಾಣಿಸಿದವು. ಬಾಣಗಳು ಭಯಂಕರವಾಗಿದ್ದವು. ೭೯. ಸುಲಭವಾಗಿ ವಿಚಿತ್ರ ರೀತಿಯಲ್ಲಿ ಕೃಷ್ಣನು ಬಾಣಗಳ ಮಳೆಯನ್ನು ಸುರಿಸಿದನು. ಅದನ್ನು ನೋಡಿದರೆ ಬಾಣವು ಬಾಣವನ್ನು ಕಕ್ಕುತ್ತಿದೆ. ಬಾಣವು ಬಾಣವನ್ನು ಹೆರುತ್ತಿದೆ. ಬಾಣವು ಬಾಣವನ್ನು ಸುರಿಸುತ್ತಿದೆ. ಹಾಗಲ್ಲ, ಸರಿಯಾಗಿ ಯೋಚಿಸಿ ನೋಡಿದರೆ ಈ ಕೃಷ್ಣನು ಪ್ರಯೋಗಿಸುವ ಒಂದು ಬಾಣವೇ ಸಹಸ್ರ ರೂಪವನ್ನು ತಾಳುತ್ತದೆ ಎನ್ನುವಂತೆ ಇದ್ದಿತು. ೮೦. ಕೃಷ್ಣನು ಮೇಘಮಾರ್ಗವನ್ನು ಬಾಣಗಳ ಹಂಜರದಿಂದ ತುಂಬಿದನು. ಆದುದರಿಂದ ಗಾಳಿ ಎಲ್ಲಿ ಹೋಯಿತು? ದಿಕ್ಕು ಎಲ್ಲಿ ಹೋಯಿತು? ಸೂರ್ಯಮಂಡಲವು ಎಲ್ಲಿ ಅಡಗಿ ಹೋಯಿತು? ಆಕಾಶವು ಎತ್ತ ಹೋಯಿತು ಎನ್ನುವಂತೆ ಗಾಳಿ ಬೀಸುವುದೇ ನಿಂತಿತು. ದಿಕ್ಕು ರೂಪಗೆಟ್ಟಿತು. ಸೂರ್ಯಮಂಡಲವು ಕಾಣಿಸದಾಯಿತು. ಆಕಾಶವು ಆಕಾರಗೆಟ್ಟಿತು. ೮೧. ಕ್ರೂರವಾದ ಬಾಣಗಳು ಶತ್ರುಸೇನೆಯ ಭಟರ ಅವಯವವನ್ನು ಅಪ್ಪಿ ಸುರಿಯುವಂತೆ ರೋಮರೋಮಕ್ಕೂ ನೆೞಲ್ ನೆಕ್ಕು, ಚೞಲ್ ಚಕ್ಕು, ದೊಗಲ್

---

೧. ನೃಪಾಲ (ಕಗ) ೨. ಭೂರಿಭಂಕೃತಂ (ಕಖಗ) ೩. ಅಂಬಂಬೊಂದೆ ಸಹಸ್ರರೂಪಮೆನೆ (ಕಖ) ೪. ಲಘುಚಿತ್ರವೇದಿ (ಕಖಗ) ೫. ಎನಿಸಲ್ಕೆಡೆಗೆಟ್ಟುದು (ಮೂಲ)

ನಗಧರನ ನಿಶಿತನಾರಾ
ಚಗಣಂ ನಡೆ ಪಾಯ್ದು ರಿಪುಭಟಾರುಣಜಲಧಾ
ರೆಗಳಂ ಜವನಿಟ್ಟಱವ
ಟ್ಟಿಗೆಯೆನೆ ಪೂತನೆಯರಾಂತು ಕುಡಿದರ್ ಘುರದೊಳ್ ೮೨

ತೆಗೆನೆಱೆದಬ್ಜನಾಭನಿಸೆ ತೋಮರಮುರ್ಚ [1]ಸುರುಳ್ದುರುಳ್ದ ದಂ
ತಿಗಳ ಶರೀರದೊಳ್ ಸುಟಿದು ಕೆತ್ತುವ ಪುಣ್ಗಳ ಬಾಯ್ಗಳಿಂದೆ [2]ಮೆ
ಲ್ಲೊಗೆವರುಣಾಂಬುಧಾರೆಗಳಗುರ್ವಿಸುತಿರ್ದುವು ದಿಟ್ಟಗೊಟ್ಟದಾ
ವಿಗೆಯ ಘಟಂಗಳಾನನದಿನುಣ್ಮುವ ಕೇಸುರಿಯೊಂದು ಮಾಳ್ಕೆಯಿಂ ೮೩

ಪೆಣದ ಬಣಂಬೆ ಕೋಟ್ಲೆಮಿದುಳ ಕೋಟೆಸರೆಲ್ವಿನ ಪರ್ವತಂ ಕರು
ಳ್ವಿಣಿಲ ಪೊದಱ್ಕೆ ರುಂಡದಡಕಿಲ್ ನರದುರ್ಬು ಕಪಾಲದೋಳಿ ಬಾ
ಳ್ವೆಣದೆಡೆ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲರ್ಬಿಸಲ್ಕೆ ಮಾ
ರ್ಗಣಗಣಘಾತದಿಂ ತವಿಸಿದಂ ದಿತಿಜಾರಿ ವಿರೋಧಿಸೈನ್ಯಮಂ ೮೪

**ವII ಅಂತು ಗೋಪಮಾರ್ತಂಡನ ಕಾಂಡಂಗಳಹಿಮಕರಕಿರಣದಂತೆ ಅರಾತಿಬಲಮೆಂಬ ತಿಮಿರಪಟಲಮಂ ತೆರಳೆ ತೂಳ್ದಿಯುಂ ದನುಜಬಳಜಲಧಿಬಾಡಬಾನಲನ ಬಾಣಂಗಳೌರ್ವಶಿಖಿಯಂತೆ ತುರಂಗಮ ದಟ ತರಂಗಿತಾರ್ಣವಮನಟ್ಟುಡಿಸೆಯುಂ, ಇಂದ್ರಾವರಜನ ಶರಂಗಳ್ [3]ವಜ್ರಶನಿಗಳಂತೆ ದಂತಿಗಟೆಗಳೆಂಬ ಪರ್ವತಂಗಳಂ ನುಚ್ಚುನೂಱಾಗೆ ಮಾಡೆಯುಂ, ದೈತ್ಯಕುಲಸಂಹಾರಭೈರವನ ಕೂರಂಬುಗಳ್ ಭೂತಗಣಂಗಳಂತೆ ಪೊಂದೇರ್ಗಳೆಂಬ ಮಾಂಸಕಬಳಂಗಳಂ ನುಂಗಿ ನೊಣೆಯೆಯುಂ**

ದೊಕ್ಕು" ಎಂದು ಶಬ್ದಮಾಡುತ್ತ ಎರಗಿ ನಾಟಿಕೊಂಡವು. ೮೨. ಕೃಷ್ಣನ ಹರಿತವಾದ ಬಾಣಗಳು ನಾಟಿಕೊಂಡುದರಿಂದ ಚಿಮ್ಮುವ ಶತ್ರುಭಟರ ರಕ್ತಧಾರೆಗಳನ್ನು ಯುದ್ಧದಲ್ಲಿ ಯಮನಿಟ್ಟ ಅರವಟ್ಟಿಗೆಯೆನ್ನುವಂತೆ ಪೂತನಿಯರು ಕುಡಿದರು. ೮೩. ಕೃಷ್ಣನು ತೋಮರವನ್ನು ತೆಗೆದೆಳೆದು ತಿವಿಯಲಾಗಿ ಆನೆಗಳು ಉರುಳಿ ಬಿದ್ದವು. ಅವುಗಳ ಮೈಯಲ್ಲಾದ ಗಾಯಗಳಿಂದ ಕೆನ್ನೆತ್ತರಿನ ಧಾರೆ ಚಿಮ್ಮಿತು. ಆವಿಗೆಯಲ್ಲಿ ಒಟ್ಟಿದ ಗಡಿಗೆಗಳಿಂದ ಬೆಂಕಿಯ ಜ್ವಾಲೆ ಹೊಮ್ಮುತ್ತಿದೆಯೋ ಎಂಬಂತೆ ಆ ದೃಶ್ಯವು ಕಾಣಿಸಿತು. ೮೪. ಹೆಣದ ಮೆದೆ, ಭಯಂಕರವಾದ ಮಿದುಳ ತಣ್ಣಗಿರುವ ಕೆಸರು, ಎಲುಬಿನ ಪರ್ವತ, ಕರುಳಿನ ಜಡೆಯ ರಾಶಿ, ರುಂಡಗಳ ಅಡುಕು, ನರಗಳ ದಿಣ್ಣೆ, ತಲೆಯ ಬುರುಡೆಗಳ ಸಾಲು, ಹೊಸ ಹಸಿಯ ನೆಣದೆಡೆ, ಮಾಂಸದ ರಾಶಿ, ಬಿಸಿರಕ್ತದ ಜಲಪಾತ, ಇವೆಲ್ಲವೂ ಆಗುವಂತೆ ಕೃಷ್ಣನು ಬಾಣಗಳ ಹೊಡೆತದಿಂದ ಶತ್ರುಸೈನ್ಯವನ್ನು ನಾಶಮಾಡಿದನು. ವII ಹಾಗೆ ಗೋಪಾಲ ಸೂರ್ಯನ ಬಾಣಕಿರಣವು ಶತ್ರುಸೇನೆಯೆಂಬ ಕತ್ತಲೆಯ ರಾಶಿಯನ್ನು ಧ್ವಂಸಮಾಡಿತು. ರಾಕ್ಷಸಬಲ ಸಾಗರ ಬಡಬಾನಲ ಕೃಷ್ಣನ ಬಾಣಗಳು ಔರ್ವಾಗ್ನಿಯ ಉರಿಯಂತೆ ಕುದುರೆಗಳ ಸೈನ್ಯವೆಂಬ ಅಲೆಗಳುಳ್ಳ ಸಾಗರವನ್ನು ನಿಶ್ಶೇಷ

೧. ಸುರುಳ್ದ ವೈರಿ (ಕಗ) ೨. ಮೇಗೊಗೆವ (ಮೊಅ) ೩. ವಜ್ರಾಶನಿಗಳೆಂಬಂತೆ (ಕಖ)

ಇಂತು ಕೋದಂಡಚತುರ್ಭುಜನ ಕೋದಂಡಪರಿಘಾತದಿಂ ದಂಡಧರ ಮುಖಕುಹರಕ್ಕೋಸರಿಸುವ ನಿಜಚಾತುರ್ಬಲಮಂ ಕಂಡು ಜರಾಸಂಧಂ ಕಡುಮುಳಿದು ನಿಜೋಭಯಪಾರ್ಶ್ವದೊಳಿರ್ದ ರಾಜಭಟ ಕೋಟಿಯೊಳತಿವೀರರೆನಿಸಿದ ಮಾದ್ರರಾಜಾಂಗರಾಜ ಚೇದಿರಾಜಕುರುರಾಜರ್ಕಳಂ ನೋಡಿ ನಿಮ್ಮ ಭುಜಬಲಾವಷ್ಟಂಭಮಂ ಪೇೞ್ವೊಡೀ ಧರೆಯಂ ಪೊಸೆದು ಮುಕ್ಕಲುಂ, ಕುಳನಗಮನಗೆಯೆತ್ತಿ ಕಳೆಯಲುಂ, ಕಡಲನೆಡೆಗಿಡಿಸಲುಂ, ನಾಕಲೋಕಮಂ ನೆಲಕ್ಕಿೞಿಪಲುಂ ಸಿಡಿಲಂ ತುಡುಕಿ ಪಿಡಿಯಲುಂ, ಹಾಲಾಹಲಮಂ ಗುಳಿಗೆಯಿಕ್ಕಲುಂ, ಉರಿಲಿಂಗಮನಾಲಿಂಗಿಸಲುಂ, ಯುಗಾಂತಹುತವಹನಂ ನಂದೆಪೊಯ್ಯಲುಂ, ಧೂರ್ಜಟಿಯ ನಿಟಿಲಲೋಚನಮಂ ಕರಪುಟದಿಂ ಮುಚ್ಚಲುಂ ನೆಱೆವ ನಿಮ್ಮಿದಿರೊಳೊರ್ವ ಗೋಪಕುಟಲಂ ಗಂಡಗರ್ವಮಂ ಮೆಱೆದಪನೆಂದು ಮೂದಲಿಸಿ ನುಡಿಯೆ

ಅತಿರಥನೆಂಬ ಗೋಸಣೆಯ ಮದ್ರಮಹೀತಳನಾಥನೆಂಬ ವಿ
ಶ್ರುತಿಯ ಮಹಾಸ್ತ್ರಶಸ್ತ್ರವಿದನೆಂಬ ನೆಗೞ್ತೆಯ ಶಲ್ಯನೆಯ್ದಿದಂ
ದಿತಿಜವಿರೋಧಿಯಂ ನಿಜಶರಾಸನಟಂಕೃತನಾದವೆಯ್ದೆ ದಿ
ಗ್ವಿತತಿಯನಭ್ರಮಂಡಲಮನೆಯ್ದೆ ರಥೋತ್ಥಮಹಾಮಹೀರಜಂ ೮೫

ಮಾಡಿದವು. ಉಪೇಂದ್ರನ ಬಾಣಗಳು ಇಂದ್ರನ ವಜ್ರಾಯುಧದಂತೆ ಆನೆಗಳ ಗುಂಪುಗಳೆಂಬ ಪರ್ವತಗಳನ್ನು ನುಚ್ಚು ನೂರಾಗಿಸಿದವು. ರಾಕ್ಷಸ ಕುಲಸಂಹಾರ ಭೈರವನ ಹರಿತವಾದ ಬಾಣಗಳು ಭೂತ ಪಿಶಾಚಿ ಗಣಗಳಂತೆ (ಶತ್ರುಗಳ) ಸುವರ್ಣ ರಥಗಳೆಂಬ ಮಾಂಸ ಕಬಳಗಳನ್ನು ನುಂಗಿದವು. ಹೀಗೆ ಧನುರ್ಧಾರಿಯೂ ಚತುರ್ಭುಜನೂ ಆದ ಕೃಷ್ಣನ ಬಿಲ್ಲಿನ ಪರಿಘಾತದಿಂದ ಯಮನ ಬಾಯಿ ಬಿಲಕ್ಕೆ ನುಗ್ಗುವ ತನ್ನ ಚತುರ್ಬಲವನ್ನು ಕಂಡ ಜರಾಸಂಧನು ಅತಿಯಾಗಿ ಕೋಪಗೊಂಡನು. ತನ್ನ ಎರಡು ಪಕ್ಕಗಳಲ್ಲಿದ್ದ ರಾಜಭಟ ಕೋಟಿಯಲ್ಲಿ ಅತಿವೀರರೆನಿಸಿಕೊಂಡ ಮಾದ್ರೇಶ ಶಲ್ಯ, ಅಂಗರಾಜ ಕರ್ಣ, ಚೇದಿರಾಜ ಶಿಶುಪಾಲ, ಕುರುರಾಜ ದುರ್ಯೋಧನರ ಮುಖಗಳನ್ನು ನೋಡಿದನು. "ನಿಮ್ಮ ಭುಜಬಲಾತ್ಮವಿಶ್ವಾಸ ಗರ್ವವನ್ನು ಹೇಳುವುದಾದರೆ, ಈ ಭೂಮಿಯನ್ನು ಹೊಸೆದು ಮುಕ್ಕುವುದಕ್ಕೂ, ಕುಲಪರ್ವತಗಳನ್ನು ಬೇರು ಸಹಿತ ಕಿತ್ತು ಬಿಸಾಡುವುದಕ್ಕೂ, ಸಮುದ್ರವನ್ನು ನೆಲೆದಪ್ಪಿಸುವುದಕ್ಕೂ ಸ್ವರ್ಗಲೋಕವನ್ನು ಭೂಮಿಗೆ ಇಳಿಸುವುದಕ್ಕೂ, ಸಿಡಿಲನ್ನು ತಟ್ಟನೆ ಹಿಡಿದುಕೊಳ್ಳುವುದಕ್ಕೂ ಹಾಲಾಹಲ ವಿಷವನ್ನು ಗುಳಿಗೆಯಾಗಿ ಮಾಡುವುದಕ್ಕೂ ಉರಿಯುವ ಗೋಳವನ್ನು ಅಪ್ಪಿಕೊಳ್ಳುವುದಕ್ಕೂ ಪ್ರಳಯಕಾಲಾಗ್ನಿಯನ್ನು ಆರುವಂತೆ ಹೊಡೆಯುವುದಕ್ಕೂ ರುದ್ರನ ಅಗ್ನಿನೇತ್ರವನ್ನು ಸೇರೆಯಿಂದ ಮುಚ್ಚುವುದಕ್ಕೂ ಸಮರ್ಥ ರಾಗಿರುವಿರಿ. ಇಂತಹ ನಿಮ್ಮೆದುರಿಗೆ ಮೋಸಗಾರನಾದ ಗೋಪಾಲ ಬಾಲಕನೊಬ್ಬನು ಪೌರುಷವನ್ನು ತೋರಿಸುತ್ತಿದ್ದಾನಲ್ಲಾ ನೋಡಿ!" ಎಂದು ಮೂದಲಿಸಿ ಮಾತನಾಡಿದನು.

೮೫. (ಆಗ) ಅತಿರಥನೆಂಬ ಘೋಷಣೆಯನ್ನು ಮದ್ರದೇಶಾಧೀಶ, ಮಹಾಸ್ತ್ರಶಸ್ತ್ರವಿದ ಎಂಬ ಪ್ರಖ್ಯಾತಿಯನ್ನು ಪಡೆದ ಶಲ್ಯಮಹಾರಾಜನು ತನ್ನ ಧನುಷ್ಟಂಕಾರವು ದಿಗಂತವನ್ನು, ರಥಗಳಿಂದೇಳುವ ಧೂಳು ಆಕಾಶಮಂಡಲವನ್ನು, ತುಂಬುತ್ತಿರುವಲ್ಲಿ ಬಂದು, ಕೃಷ್ಣನನ್ನು

ಎಕ್ಕತುಳಕ್ಕೆವಂದು ಶರಮಂ ಶರದಿಂ ಕಡಿದಿಕ್ಕುತುಂ ಮಹಾ
ಸ್ತ್ರಕ್ಕೆ ಮಹಾಸ್ತ್ರಮಂ ತುಡುತುಮೊಟ್ಟಜೆಗೊಟ್ಟಜೆದೋಱುತುಂ ವರೂ
ಥಕ್ಕೆ ವರೂಥಮಂ ಸೆಣಸಿ ಚೋದಿಸುತುಂ ನೆರೆದಾಂತ ಶಲ್ಯನಂ
ಚೆಕ್ಕಸಮುತ್ತು ನೋಡಿ ಬಗೆದಂದು ನಿಮೇಷದೆ ಗೆಲ್ವುಪಾಯಮಂ ೮೬

ಜೃಂಭಾಸ್ತ್ರದಿಂ ಮುಕುಂದಂ
ಸ್ತಂಭಿಸಿ ರಥಮಂ ರಥಾಶ್ವಮಂ ಸಾರಥಿಯಂ
ಸ್ತಂಭಿಸಿದಂ ಶಲ್ಯನ ದೋ
ಸ್ಸ್ತಂಭಮನಿನಿಸಿಜೆಯದಿರ್ಪಿನಮಾಗಳ್ ೮೭

ಜಲರುಹಮಿತ್ರಪುತ್ರನೆನಿಪುನ್ನತಿಯುಂ ಸಹಜಾತದಿವ್ಯಕುಂ
ಡಲಕವಚಪ್ರಭಾವದಿನಜಯ್ಯನೆನಿಪ್ಪ ನೆಗಟ್ತೆಯುಂ ನೃಪ
ಪ್ರಲಯಕೃತಾಂತನಿಂ ಪರಶುರಾಮನಿನಸ್ತ್ರವಿದಗ್ಧನಾದ ದೋ
ರ್ವಲಯಮುಮಿಂದು ಸಾರ್ಥಕಮಿವಂಗೆನೆ ಶಾರ್ಙ್ಗಿಗೆ ಕರ್ಣನೆಯ್ದಿದಂ ೮೮

ಚಿತ್ರಗತಿಯಿಂದ ರಥಮತಿ
ಮಾತ್ರಜವಂ ಬೆರಸು ಪರಿಯೆ ಶರವರ್ಷದೆ ಲೋ
ಕತ್ರಯಮಂ ಪೂಟ್ಚಿಪೊಲಿನ
ಪುತ್ರಂ ದುರ್ಲಕ್ಷ್ಯವೇಗನಿಸುವವಸರದೊಳ್ ೮೯

ರಥಹಯಮಂ ನಾಲ್ಕಂಬಿಂ
ರಥಮಂ ಮೂಱಸ್ತ್ರದಿಂದೆರಟ್ಕಣೆಯಿಂ ಸಾ
ರಥಿಯಂ ಕೆಡೆಯಲ್ಕೆಚ್ಚಂ
ರಥಾಂಗಧರನೊಂದೆ ಶರದಿನಿನಜನ ಧನುವಂ ೯೦

ಎದುರಿಸಿದನು. ೮೬. ಶಲ್ಯನು ಕೃಷ್ಣನಿಗೆ ಸಮಾನನಾಗಿ ಅವನ ಬಾಣವನ್ನು ಬಾಣದಿಂದ ಕಡಿದುಹಾಕುತ್ತಲೂ, ಮಹಾಸ್ತ್ರಕ್ಕೆ ಮಹಾಸ್ತ್ರವನ್ನು ತೊಡುತ್ತಲೂ ಪರಾಕ್ರಮಕ್ಕೆ ಪರಾಕ್ರಮವನ್ನು ತೋರಿಸುತ್ತಲೂ ರಥಕ್ಕೆ ರಥವನ್ನು ಸ್ಪರ್ಧಿಸಿ ಅಟ್ಟುತ್ತಲೂ ಪ್ರತಿಭಟಿಸಿದನು. ಕೃಷ್ಣನು ಆಶ್ಚರ್ಯಚಕಿತನಾಗಿ, ಒಂದು ನಿಮಿಷದಲ್ಲಿ ಅವನನ್ನು ಗೆಲ್ಲುವ ಉಪಾಯವೊಂದನ್ನು ಯೋಚಿಸಿದನು. ೮೭. ಕೃಷ್ಣನು ಜೃಂಭಾಸ್ತ್ರದಿಂದ ಶಲ್ಯನ ರಥವನ್ನೂ ರಥದ ಕುದುರೆಗಳನ್ನೂ ಸಾರಥಿಯನ್ನೂ ಸ್ತಂಭಿಸಿದುದಲ್ಲದೆ ಯುದ್ಧ ಮಾಡಲ್ಲು ಸಾಗದಂತೆ ಅವನ ಕುಂಭದಂತಿರುವ ತೋಳನ್ನು ಸ್ತಂಭಿಸಿದನು. ೮೮. (ಆಗ) ಸೂರ್ಯಪುತ್ರನೆಂಬ ಔನ್ನತ್ಯವೂ ಸಹಜವಾದ ದಿವ್ಯಕುಂಡಲ ವಜ್ರಕವಚ ಪ್ರಭಾವದಿಂದ ಅಜೇಯನಾದವನೆಂಬ ಪ್ರಸಿದ್ಧಿಯೂ, ರಾಜಪ್ರಳಯಕಾಲನೆನಿಸಿಕೊಂಡ, ಪರಶುರಾಮನಿಂದ ಅಸ್ತ್ರವಿದ್ಯಾವಂತನಾದ ತೋಳ್ಬಲವೂ ಇಂದು ಇವನಿಗೆ ಸಾರ್ಥಕವೆನ್ನುವಂತೆ ಕರ್ಣನು ಕೃಷ್ಣನ ಮೇಲೆ ಬಿದ್ದನು. ೮೯. ಕರ್ಣನು, ತನ್ನ ರಥವು ಅತಿ ವೇಗದಿಂದ ವಿಚಿತ್ರಗತಿಯಿಂದ ಓಡುತ್ತಿರುವಲ್ಲಿ, ನಿರೀಕ್ಷಿಸಲಾಗದಷ್ಟು ವೇಗವುಳ್ಳವನಾಗಿ ಬಾಣಗಳ ಮಳೆಯಿಂದ ಲೋಕತ್ರಯವನ್ನು ಹೂಳುವಂತೆ ಬಾಣಪ್ರಯೋಗ ಮಾಡಿದನು. ೯೦. ಚಕ್ರಧಾರಿ ಕೃಷ್ಣನು ಕರ್ಣನ ರಥದ ಕುದುರೆಗಳನ್ನು ನಾಲ್ಕು ಬಾಣಗಳಿಂದಲೂ ರಥವನ್ನು ಮೂರು ಬಾಣಗಳಿಂದಲೂ

ಪ್ರಿಯಮಿತ್ರಂ ರವಿಸೂನು ಸೋಲ್ತೊಡಳಲುಂ ಕಟ್ಟೇವಮುಂ ಮುಟ್ಟೆ ತ
ನ್ನಯ ತೇರಿಂದೆ ನೆಲಕ್ಕೆ ಪಾಯ್ದು ಕುರುಲಕ್ಷ್ಮೀವಲ್ಲಭಂ ವಿಕ್ರಮೋ
ದಯಸದ್ಮಂ ಮಧುಪಿಂಗಳಾಕ್ಷನಭಯಂ ಸಾರ್ತಂದನುದ್ಯದ್ಭುಜ
ದ್ವಯದಂಡಾಗ್ರಿಮತೋರಣಾಯಿತ ಗದಂ ದುರ್ಯೋಧನಂ ಕೃಷ್ಣನಂ ೯೧

ಗದೆಗೊಂಡೆಯ್ತರ್ಪ ದುರ್ಯೋಧನನ ಮುಸಕಮಂ ಕಂಡು ಕಂಸಾರಿ ತಾನುಂ
ಗದೆಗೊಂಡಾಯೆಂದು ತಾಗಲ್ ಪದಹತಿಗೆ ನೆಲಂ ಬಳ್ಕೆ ವಾರಾಶಿಗಳ್ ತು
ಳ್ಕೆ ದಿಶಾದಂತಿವ್ರಜಂ ಘೀಳಿಡೆ ಪೊಣರ್ದು ಕುರುಶ್ರೇಷ್ಠನೊಳ್ ಕಾದುವಾ ಯು
ದ್ಧದಗುರ್ವು ಪೂವಿನೊಳ್ [1]ಪೊಕ್ಕಳಿ ನೆಗಟ್ದವೊಲಾಯ್ತು ಮುರಧ್ವಂಸಿಗಾಗಳ್ ೯೨

ಗದೆಯಂ ತೂಗುತ್ತೆ ಸಾರ್ವೊಟ್ಟಜೆ ತಿರಿಪಿ ಗದಾದಂಡದಿಂ ಪೊಯ್ವ ಕೋಪಂ
ಗದೆಯಿಂದಂ ಪೊಯ್ಯುಳ್ಗಂ [2]ಬಂಚಿಪ ನೆವವೆಸೆಯಲ್ ಚಂಚಲತ್ಕರ್ಣಪೂರಾಂ
ಗದ ಹಾರಾಪೀಡರೋರೊರ್ಮೆವನಿತಳದೊಳೋರೊರ್ಮೆ ವಿದ್ಯಾಧರಾಕಾ
ರದಿನಂತರ್ಧಾನದೊಳ್ ತಾಗಿದರತುಳಬಳರ್ ಕೃಷ್ಣದುರ್ಯೋಧನರ್ಕಳ್ ೯೩

•

ಸಾರಥಿಯನ್ನು ಎರಡು ಬಾಣಗಳಿಂದಲೂ ಬೀಳುವಂತೆ ಹೊಡೆದನು. ಮತ್ತೊಂದು ಬಾಣದಿಂದ ಕರ್ಣನ ಬಿಲ್ಲನ್ನು ಕತ್ತರಿಸಿಬಿಟ್ಟನು. ೯೧. ಪ್ರಿಯಮಿತ್ರನಾದ ಕರ್ಣನು ಸೋತು ಹೋದುದರಿಂದ ಅಳಲೂ ಅತಿವ್ಯಥೆಯೂ ಮತ್ಸರವೂ ಉಂಟಾಗಲು ಕುರುರಾಜ್ಯ ಲಕ್ಷ್ಮೀವಲ್ಲಭನೂ ಪರಾಕ್ರಮೋದಯಗೃಹವೂ ಜೇನುತುಪ್ಪದಂತೆ ಪಿಂಗಳವರ್ಣದ ಕಣ್ಣುಳ್ಳವನೂ ಆದ ದುರ್ಯೋಧನನು, ತನ್ನ ರಥದಿಂದ ನೆಲಕ್ಕೆ ಧುಮಿಕಿ, ಎರಡು ಕೈಗಳಲ್ಲಿಯೂ ತೋರಣದಂತೆ ಗದೆಯನ್ನು ಹಿಡಿದೆತ್ತಿ ನಿರ್ಭೀತನಾಗಿ ಕೃಷ್ಣನ ಸಮೀಪಕ್ಕೆ ನುಗ್ಗಿದನು. ೯೨. ಗದೆಯನ್ನು ಹಿಡಿದು ಬರುತ್ತಿರುವ ದುರ್ಯೋಧನನ ಜೋರನ್ನು ಕಂಡು, ಕೃಷ್ಣನು, ತಾನೂ ಗದೆಯನ್ನೇ ತೆಗೆದುಕೊಂಡು ದುರ್ಯೋಧನನ ಮೇಲೆ ತಾಕಿದನು. ಅವರ ಕಾಲಿನ ತುಳಿತಕ್ಕೆ ನೆಲವು ಬಳುಕಿತು. ಸಮುದ್ರಗಳು ತುಳುಕಾಡಿದವು. ದಿಗ್ಗಜಗಳು ಘೀಳಿಟ್ಟವು. ಹಾಗೆ ಕುರುಶ್ರೇಷ್ಠನೊಡನೆ ಹೋರಾಡಿ ಕಾದುವ ಆ ಭಯಂಕರ ಯುದ್ಧವೂ ಮುರಹರನಾದ ಅವನಿಗೆ ತುಂಬಿಯು ಹೂವಿನಲ್ಲಿ ಹೊಕ್ಕು ಕೆಲಸ ಮಾಡಿದಂತೆ ಆಯಿತು. ೯೩. ಅಸಮ ಬಲಶಾಲಿಗಳೂ ಚಂಚಲವಾಗಿ ತೂಗಾಡುತ್ತಿರುವ ಕರ್ಣಾಭರಣವೂ ಭುಜಕಿರೀಟವೂ ಉಳ್ಳವರಾದ ಕೃಷ್ಣ ದುರ್ಯೋಧನರು ಗದೆಯನ್ನು ತೂಗುತ್ತ ಹತ್ತಿರ ಬರುವ ಆ ಪರಾಕ್ರಮವೂ, ಗದಾದಂಡವನ್ನು ತಿರುಗಿಸಿ, ಹೊಡೆಯುವ ಕೋಪವೂ ಗದೆಯ ಹೊಡೆತವನ್ನು ವಂಚಿಸುವ, ತಪ್ಪಿಸಿಕೊಳ್ಳುವ ನೆವವೂ ಚೆನ್ನಾಗಿರುತ್ತಿರಲು, ಒಂದು ಸಾರಿ ಭೂಮಿಯ ಮೇಲೂ ಒಂದೊಂದು ಸಾರಿ ವಿದ್ಯಾಧರಾಕಾರದಿಂದ ಆಕಾಶದಲ್ಲಿ ಅಂತರ್ಧಾನವಾಗಿಯೂ ಯುದ್ಧ ಮಾಡಿದರು.

---

೧. ಪೊರ್ಕುಳಿ (ಕಗ) ೨. ಬಂಚಿಪ ನೆರವೆಸೆಯಲ್ (ಕಗ) ಬಂಜಿಪ ನೆವವೆಸೆಯಲ್ (ಖ)

'6

ದಶಕಂಠವೈರಿಯೊಳ್ ಪೊಣ
ರ್ದು ಶೀರ್ಣತನುವಾಗಿ ಸೆಡೆದು ಧೃತರಾಷ್ಟ್ರಸುತಂ
ಪ್ರಶಮಿತಪರಾಕ್ರಮಮಂ ಗಂ
ಡಶೈಲದೊಳ್ ಪೊಣರ್ದರಣ್ಯಗಜದಂತಾದಂ ೯೪

ವ॥ ತದನಂತರಂ

ಪುಟ್ಟೆ ಸಮಸ್ತಧಾತ್ರಿಗೆ ಭಯಂ ನಿಟಿಲಾಕ್ಷಚತುರ್ಭುಜಾನ್ವಿತಂ
ಪುಟ್ಟಿದಗುರ್ವು ರಾವಣನ ರೌದ್ರತೆವೆತ್ತವತಾರ[1]ವೀತನೊಂ
ದೊಟ್ಟಜೆ ಲೋಕಪಾಲಕರನಾಟಲೆದಿರ್ಪ ಪೊಡರ್ಪಿನಿಂದೊಡಂ
ಬಟ್ಟುದು ನೋಡಿಮೀತನೊಳೆನಲ್ ಶಿಶುಪಾಲನಿದಿರ್ಚೆ ಸಾರ್ಚಿದಂ ೯೫

ತೇರಂ ಪರಿಯಿಸಿ ಬಿಲ್ಗೊಂ
ಡೀ ರಣಮಂ ಕೊಂಡು ಕೊನೆಯಲೊಲ್ಲೆಂ ಕ್ಷಣದಿಂ
ವೈರಿಯನಿಕ್ಕುವೆನೆನುತುಂ
ಕೂರಸಿಗೊಂಡೊದಜೆ ಚೈದ್ಯನೆಯ್ದಿದನಾಗಳ್ ೯೬

ನಂದಕಮಂ ದಿವಿಜಗಣಾ
ನಂದಕಮಂ ಕೊಂಡು ಚೇದಿಪತಿಯೊಳ್ ಪೊಣರ್ದಂ
ಮಂದರಧರನಾಹವದೊಳ್
ಮಂದರಧರರಾದರಹಿತರೆಂದೆಂಬಿನೆಗಂ ೯೭

೯೪. ರಾವಣವೈರಿಯಾದ ಕೃಷ್ಣನೊಡನೆ ಹೋರಾಡಿ ಯುದ್ಧಮಾಡಿ ಗಾಯಗೊಂಡು ಬಾಡಿದ ದೇಹವುಳ್ಳ ದುರ್ಯೋಧನನು ಹೆದರಿ ಕುಗ್ಗಿ ಶಾಂತ ಪರಾಕ್ರಮನಾಗಿ, ಬೆಟ್ಟದಿಂದ ಜಾರಿದ ದೊಡ್ಡ ಗುಂಡು ಬಂಡೆಯೊಡನೆ ಯುದ್ಧ ಮಾಡಿದ ಕಾಡಾನೆಯಂತೆ ಆದನು. ವ॥ ಆಮೇಲೆ ೯೫. ಭೂಲೋಕಕ್ಕೆಲ್ಲಾ ಭಯವು ಹುಟ್ಟುವಂತೆ ಹಣೆಗಣ್ಣೂ ನಾಲ್ಕು ತೋಳುಗಳೂ ಉಳ್ಳವನಾಗಿ ಹುಟ್ಟಿದ ಅತಿಶಯವೂ ರಾವಣನ ರೌದ್ರತೆಯನ್ನು ಪಡೆದ ಅವತಾರವೂ ಈತನ ಪರಾಕ್ರಮವೂ, ಲೋಕಪಾಲಕರನ್ನು ಪ್ರತಿಭಟಿಸಿದ ತೇಜಸ್ಸು ಗರ್ವಗಳೊಡನೆ ಸೇರಿ ಈತನಿಗೆ ಒಪ್ಪುತ್ತಿವೆ ನೋಡಿ ಎನ್ನುವಂತೆ ಶಿಶುಪಾಲನು ಕೃಷ್ಣನನ್ನು ಎದುರಿಸಲು ಅವನ ಹತ್ತಿರ ಬಂದನು. ೯೬. ಶಿಶುಪಾಲನು "ಈ ಯುದ್ಧವು ಬಿಲ್ಲನ್ನು ಹಿಡಿದು ರಥವನ್ನೇರಿ ಮಾಡುವಷ್ಟು ದೊಡ್ಡದೆಂದು ಹೊಗಳಲಾರೆನು. ವೈರಿಯನ್ನು ಒಂದು ಕ್ಷಣದಲ್ಲೇ ಕೊಲ್ಲುವೆನು". ಎನ್ನುತ್ತ ಹರಿತವಾದ ಕತ್ತಿಯನ್ನು ತೆಗೆದುಕೊಂಡು ಝಳಪಿಸಿ, ಅಬ್ಬರಿಸುತ್ತ ಕೃಷ್ಣನ ಮೇಲೆ ಬಂದನು. ೯೭. ಕೃಷ್ಣನು ದೇವತೆಗಳ ಸಮೂಹಕ್ಕೆ ಆನಂದಕರವಾದ ನಂದಕವೆಂಬ ತನ್ನ ಕತ್ತಿಯನ್ನೇ ಹಿಡಿದು, ಶಿಶುಪಾಲನೊಡನೆ ಶತ್ರುಗಳು ಮಂದರಗಿರಿಯನ್ನೇರಿದರು[2] ಎನ್ನುವಂತೆ ಯುದ್ಧವನ್ನು ಮಾಡಿದನು.

---

೧. ಈತನೆಂಬೊಟ್ಟಜೆ (ಕ) ೨. ಸ್ವರ್ಗಸ್ಥರಾದರು ಎನ್ನುವಂತೆ (ರಂ).

ಅಳವಿಗೆ ಸಾರ್ವ ಸಾರ್ವ ತೆಱಪಂ ನಡೆನೋಡುವ ನೋಡಿ ಪೊಯ್ವಪೊ
ಯ್ಗುಳನೆಡೆಯೊಳ್ ನಿವಾರಿಪ ನಿವಾರಿಸಿ ಕುತ್ತುವ ಖಡ್ಗವಿದ್ಯೆ ತ
ಮ್ಮೊಳೆ ನೆಲಸಿತ್ತೆನಲ್ [1]ಕೊನೆದು ಕಾಳೆಗದಿಂ ಶಿಶುಪಾಲದೈತ್ಯನೊಳ್
ಬಲಿರಿಪು ಕಾದಿದಂ ಮುಳಿದು ತಾಗುವಿನಂ ಹರಿಗುಂಟೆ ಕಾಳೆಗಂ ೯೮

ಮದಗಜದ ರದನಮಂ ಸಿಂ
ಗದ ದಾಡೆಯನುಗ್ರಫಣಿಯ ಪಲ್ಲಂ ಮುಱಿವಂ
ದದೆ ಮುಱಿಯೆ ಪೊಯ್ದು ನಿಜಖ
ಡ್ಗದೆ ತತ್ಖಡ್ಗಮನುಪೇಂದ್ರನಾಂತಂ ಜಯಮಂ ೯೯

ಅರಿವಧಮನನಾಗತಮಂ
ಸ್ಮರಿಯಿಸೆ ಕೈಗಾದು ಕಾದಿದಂ ಶಿಶುಪಾಲಾ
ದ್ಯರೊಳಂದಚ್ಯುತನಿಂತುಂ
ಹರಿಗಂ ಮಿಟ್ಟುಗಮಿದಿರ್ಚಿ ಜೀವಿಪರೊಳರೇ ೧೦೦

ವ|| ಆಗಳ್ ಭಗ್ನಖಡ್ಗನಾಗಿ ಮತ್ತಂ ಕಡುಪುಗೆಯ್ವ ಶಿಶುಪಾಲನಂ ಮಗಧನರಪಾಲಂ ಕಂಡು

ಉಡಿಯೆ ನಿಜಾಸಿ ನಿಯುದ್ಧ
ಕ್ಕೊಡರಿಸಲುಂ ಮತ್ತೆ ಕೈದುಗೊಳಲುಂ ಬೇಡಿಂ
ಪಡುನೇಸಱಾದುದಿಂದಿನ
ಕಡುಪಂ ಕೃಷ್ಣಂಗೆ ನಾಳೆ ತೋರ್ಪುದು ಚೈದ್ಯಾ ೧೦೧

೯೮. ಹೊಡೆಯುವುದಕ್ಕೆ ಅನುಕೂಲವಾಗುವಷ್ಟು ಹತ್ತಿರಕ್ಕೆ ಬರುವ, ಬರುವುದಕ್ಕೆ ಅವಕಾಶವನ್ನು ಸರಿಯಾಗಿ ನೋಡುವ, ಹಾಗೆ ನೋಡಿ ಹೊಡೆಯುವ, ಹೊಡೆತಗಳನ್ನು ಮಧ್ಯದಲ್ಲೇ ತಪ್ಪಿಸಿಕೊಂಡು ಶತ್ರುವನ್ನು ಹೊಡೆಯುವ, ಖಡ್ಗವಿದ್ಯೆಯು ತಮ್ಮಲ್ಲೇ ನೆಲೆಸಿದ್ದಿತು, ಎನ್ನುವಂತೆ ಆ ಕಾಳಗವನ್ನೇ ಹೊಗಳುತ್ತ ಕೃಷ್ಣನು ಶಿಶುಪಾಲನೊಡನೆ ನಗುತ್ತ ಯುದ್ಧವನ್ನು ಮಾಡಿದನು. ಕೋಪಗೊಂಡು ಮಾಡುವಷ್ಟು ಮಟ್ಟಿನ ಯುದ್ಧವು ಕೃಷ್ಣನಿಗುಂಟೇ?! ೯೯. ಕೃಷ್ಣನು, ಮದ್ದಾನೆಯ ದಂತವನ್ನೂ ಸಿಂಹದ ಕೋರೆಹಲ್ಲನ್ನೂ ಕ್ರೂರಸರ್ಪದ ಹಲ್ಲನ್ನೂ ಮುರಿಯವಂತೆ ಶಿಶುಪಾಲನ ಕತ್ತಿಯು ಮುರಿದು ಹೋಗುವಂತೆ ತನ್ನ ಕತ್ತಿಯಿಂದ ಹೊಡೆದು, ಜಯವನ್ನು ಪಡೆದನು. ೧೦೦. ಶತ್ರುವಾದ ಶಿಶುಪಾಲನೆ ಮೊದಲಾದವರನ್ನು ಕೊಲ್ಲಲು ಇನ್ನೂ ಕಾಲವು ಒದಗಿಲ್ಲವೆಂಬುದನ್ನು ಜ್ಞಾಪಿಸಿಕೊಂಡ ಕೃಷ್ಣನು ಆಗ ಅವರನ್ನು ಕೊಲ್ಲದೆ ರಕ್ಷಿಸಿ ಕಾದಿ ಜಯಿಸಿದನು. ಇಲ್ಲವಾದರೆ ಹರಿಗೂ ಯಮನಿಗೂ ಇದಿರಾಂತು ಜೀವಿಸುವವರುಂಟೇ? ವ|| ಆಗ ಕತ್ತಿಯನ್ನು ಮುರಿಸಿಕೊಂಡರೂ ಮತ್ತೆ ಪರಾಕ್ರಮವನ್ನು ತೋರಿಸುತ್ತಿರುವ ಶಿಶುಪಾಲನನ್ನು ನೋಡಿ ಜರಾಸಂಧರಾಜನು ೧೦೧. "ಕತ್ತಿಯು ಮುರಿದು ಹೋಗಿರುವಾಗ ಬಾಹುಯುದ್ಧಕ್ಕೆ ತೊಡಗುವುದೂ ಮತ್ತೆ ಬೇರೆ ಆಯುಧವನ್ನು ತೆಗೆದುಕೊಳ್ಳುವುದೂ ಬೇಡ ಶಿಶುಪಾಲಾ

---

೧. ಕೊನರ್ದು (ಖಗ)

ಆಂ ಪಿರಿಯಂ ಸಮಸ್ತಬಲದಿಂ ನೃಪಕೋಟಿಗೆ ಚೈದ್ಯರಾಜನೆ
ನ್ನಿಂ ಪಿರಿಯಂ ಮನೋಬಲಭುಜಾಬಲಶಸ್ತ್ರಬಲಂಗಳಿಂದಮೀ
ಪೆಂಪಿನ ಚೈದ್ಯನಂ ಕ್ಷಣದೆ ಗೆಲ್ದನಧೋಕ್ಷಜನೀ ಮುಕುಂದನಾ
ರ್ಗಂ ಪಿರಿಯಂ ಬಲೋದಯದಿನೆಂದು ಮನಂ ಸೆಡೆದಳ್ಕಿ ಮಾಗಧಂ ೧೦೨

ಪಗೆ [1]ಪಳಸೆ ಕಿಡದು ನಾಳೆಯೆ
ಮಗುಳ್ದುಂ ಮೇಲೆತ್ತಿ ಬಂದು ಮಾಳ್ಪಂ ಕಂಸಾ
ರಿಗೆ ತಕ್ಕುದನೆಂದೀಗಳ್
ಪೊಗಸುಂ ಪೋಯ್ತೆಂದು ನೆವದೆ ರಣದಿಂ ತಳರ್ದಂ ೧೦೩

ವಿಶಸನಭೀತಿಯಿನೋಡುವ
ವಸುಧೇಶರನಾತ್ಮಭೂರಿಭಾಂಕೃತರವದಿಂ
ಮಸೆವೆಳಗಿಂ ನಗುತಿರ್ಪಂ
ತೆಸೆದುವು ಬೆನ್ನಟ್ಟುತಿರ್ದ ಕೃಷ್ಣಶರಂಗಳ್ ೧೦೪

ಸಂಗರಧರಿತ್ರಿ ನಾಡೆ ಮ
ನಂಗೊಳಿಸಿದುದಂದು ಜವನ ಪೆರ್ಬೆಣವೆಳೆ ಭೂ
ತಂಗಳ ಕೊಟ್ಟಾರಂ ವಿಹ
ಗಂಗಳ ಬೆಳೆಗೆಯ್ಯನಲ್ಕೆ ಬಿಟ್ಟರಿಬಲದಿಂ ೧೦೫

ಸೂರ್ಯನು ಮುಳುಗುವಂತಾದನು. ಈ ದಿನದ ಕಾರ್ಯವನ್ನು ಕೃಷ್ಣನಿಗೆ ನಾಳೆ ತೋರಿಸೋಣ" ಎಂದನು. ೧೦೨. "ಕೋಟಿ ಸಂಖ್ಯೆಯ ರಾಜರಲ್ಲಿ ಎಲ್ಲ ಬಗೆಯಲ್ಲೂ ಸೈನ್ಯದಲ್ಲೂ ನಾನು ಹಿರಿಯನು. ಚೇದಿರಾಜ ಶಿಶುಪಾಲನು ಮನೋಬಲ ಭುಜಬಲ ಶಸ್ತ್ರಬಲಗಳಿಂದ ನನಗಿಂತ ಹಿರಿಯನು. ಈ ಮಹಿಮೆಯ ಶಿಶುಪಾಲನನ್ನು ಕ್ಷಣದಲ್ಲಿ ಜಯಿಸಿದ ವಿಷ್ಣು, ಈ ಕೃಷ್ಣನು, ಬಲಾತಿಶಯದಲ್ಲಿ ಎಲ್ಲರಿಗೂ ಹಿರಿಯನು." ಎಂದು ಮನಸ್ಸಿನಲ್ಲೇ ಹೇಳಿಕೊಂಡು ಹೆದರಿ ಕುಗ್ಗಿದನು, ಆ ಜರಾಸಂಧ. ೧೦೩. "ಹಗೆ ಹಳಸಿದರೇನೂ ಕೆಡುವುದಿಲ್ಲ" ನಾಳೆಯೇ ಮತ್ತೆ ಮೇಲೆತ್ತಿ ಬಂದು ಕಂಸಾರಿಗೆ ತಕ್ಕದ್ದನ್ನು ಮಾಡೋಣ. ಈಗ ಹಗಲೂ ಕಳೆದು ಹೋಯಿತು" ಎಂದು ನೆವ ಹೇಳಿ ರಣರಂಗದಿಂದ ಹೊರಟುಹೋದನು. ೧೦೪. ಕೊಲೆಯ ಭೀತಿಯಿಂದ ಓಡಿಹೋಗುತ್ತಿರುವ ರಾಜರನ್ನು ಬೆನ್ನಟ್ಟಿ ಹೋಗುವ ಕೃಷ್ಣನ ಬಾಣಗಳು ಮಸೆತದಿಂದಾದ ತಮ್ಮ ಬೆಳಕಿನಿಂದಲೂ, ಹೆಚ್ಚಾದ ಭಾಂಕಾರದಿಂದಲೂ ನಗುತ್ತಿರುವಂತೆ ಕಾಣಿಸಿದವು. ೧೦೫. ರಣರಂಗಭೂಮಿಯು ತನ್ನ ಮೇಲೆ ಬಿದ್ದು ಹೋಗಿರುವ ಶತ್ರುಸೈನ್ಯದಿಂದ ಅಂದು ಯಮನ ಹೆಣಗಳ ದೊಡ್ಡ ಬೆಳೆ, ಭೂತಗಳ ಕೊಟ್ಟಿಗೆ, ಹದ್ದು ಕಾಗೆಗಳ ಬೆಳೆಯ ಗದ್ದೆ ಎನ್ನುವಷ್ಟು ಮನೋಹರವಾಗಿದ್ದಿತು.

---

೧. ಪಳಸಿ (ಕ)

ಮಸಕಂಗೊಂಡಟ್ಟೆಗಳ್ ನರ್ತಿಸೆ ಸಮರಮಹೀರಂಗದೊಳ್ ನಾರದಂ ನ
ರ್ತಿಸೆ ರೋದೋರಂಗದೊಳ್ ಸಂಗರಜಯವಧುವಾತ್ಮೀಯ ದೋರ್ಯುಗ್ಮದೊಳ್ ನ
ರ್ತಿಸೆ ಗೆಲ್ಲಂಗೊಂಡು ತಮ್ಮೊಳ್ ಪೊಣರ್ದಗಿದು ತೆರಳ್ದೋಡುವಾ ಭೂಪರಂ ಸಂ
ತಸದಿಂ ನೋಡುತ್ತುಮಿರ್ದಂ ಪ್ರಹಸಿತವದನಂ ಗೋಪಮಾರ್ತಂಡದೇವಂ ೧೦೬

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥ ವಿಜಯ ಮಹಾಪ್ರಬಂಧದೊಳ್ ಉಗ್ರಸೇನಾಭಿಷೇಕ ಪಾಕಶಾಸನಸಭಾ
ಕರ್ಷಣ ಗುರುಪುತ್ರಾಹರಣ ಮಕರಾಕರಾಲೋಡನ ಪಾಂಚಜನ್ಯ
ಲಾಂಛನ ನಂದಕಸುದರ್ಶನಶಾರ್ಙ್ಗಕೌಮೋದಕೀಸಮಾ
ಗಮನ ಜರಾಸಂಧಯುದ್ಧವರ್ಣನಂ
ಸಪ್ತಮಾಶ್ವಾಸಂ

೧೦೬. ಯುದ್ಧ ಭೂರಂಗದಲ್ಲಿ ಯೋಧರ ಮುಂಡಗಳು ಉದ್ರೇಕಗೊಂಡು ರಭಸದಿಂದ ನರ್ತಿಸುತ್ತಿದ್ದವು. ನಾರದ ಋಷಿಯು, ಗಗನರಂಗದಲ್ಲಿ ನರ್ತಿಸುತ್ತಿದ್ದನು. ರಣ ಜಯಲಕ್ಷ್ಮಿಯು ಜಯವನ್ನು ಪಡೆದು ಕೃಷ್ಣನ ತೋಳುಗಳೆರಡರಲ್ಲಿ ನರ್ತಿಸುತ್ತಿದ್ದಳು. ತಮ್ಮಲ್ಲಿ ಯುದ್ಧಮಾಡಿ, ಹೆದರಿ ಓಡಿಹೋಗುತ್ತಿರುವ ಆ ಶತ್ರುರಾಜರನ್ನು ಆ ಗೋಪಾಲ ಸೂರ್ಯದೇವನು ನಗುಮುಖವುಳ್ಳವನಾಗಿ ಸಂತೋಷದಿಂದ ನೋಡುತ್ತಿದ್ದನು. ಭೂಪಾಲಕನೂ ಕಿರಣಪಾಲಕನೂ ಆದ ಸೂರ್ಯದೇವನೂ ಸಾಕ್ಷಿಯಾಗಿ ನೋಡುತ್ತಿದ್ದನು.

ಇದು ಸಮಸ್ತ ಬ್ರಹ್ಮಾಂಡಮಾಲಾ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರ ರುದ್ರಕೃತ ಜಗನ್ನಾಥ ವಿಜಯ ಮಹಾ ಪ್ರಬಂಧದಲ್ಲಿ ಉಗ್ರಸೇನಾಭಿಷೇಕ, ಇಂದ್ರಸಭಾಕರ್ಷಣೆ, ಸಾಗರಾಲೋಡನೆ, ಪಾಂಚಜನ್ಯ ಶಂಖಧಾರಣೆ, ನಂದಕಖಡ್ಗ, ಸುದರ್ಶನ ಚಕ್ರ, ಶಾರ್ಙ್ಗಧನುಸ್ಸು, ಕೌಮೋದಕೀಗದೆಗಳ ಆಗಮನ, ಜರಾಸಂಧ ಯುದ್ಧ ವರ್ಣನೆಗಳ ಏಳನೆಯ ಆಶ್ವಾಸ.

# ಅಷ್ಟಮಾಶ್ವಾಸಂ

ಶ್ರೀವತ್ಸಲಾಂಛನಂ ಬಲ
ದೇವಸಹಾಯಂ ಜಯಾನಕಧ್ವನಿಮುದಿತ
ಕ್ಷ್ಮಾವಳಯಜನಂ ವೀರರ
ಸಾವ್ಯತಮುಖ[1]ಕಮಲಮೆಸೆಯೆ ಪೊಱಲಂ ಪೊಕ್ಕಂ ೧

ಅವಿರಳವಾಸ್ಯದಿಂ ಪರಕೆ ಪೊಣ್ಮುವಿನಂ ವನಿತಾಕದಂಬಮಿ
ಕ್ಕುವ ಧವಳಾಕ್ಷತಂ ಕುಡುವ ಚಂದನಕರ್ದಮಮೀವ ದೂರ್ವೆ ಸೂ
ಸುವ ಸಿತಸರ್ಷಪಂ ತಳಿವ ಲಾಜಕಮೆತ್ತುವ ಪುಷ್ಪಮಾಲೆ ನೀ
ಡುವ ನವಮಾತುಳುಂಗಫಲಮೆಂಬಿವನಚ್ಯುತನೊಲ್ದು ತಾಳ್ದಿದಂ ೨

ವ|| ಅಂತು ಮಂಗಲಾಚಾರಪರಂಪರೆ ವಿರಾಜಿಸೆ ರಾಜಮಂದಿರಮಂ ಪೊಕ್ಕು ಸುಖದಿನಿರೆ ಕತಿಪಯದಿನಂಗಳ್ಗೆ

ಮೊನೆಯೊಳ್ ಬೆಂಗೊಟ್ಟು ಮುಂ [2]ಪೋದಟಲೊಳೆ ಮಗುಟ್ದುಂ ತ್ರಿಂಶದಕ್ಷೌಹಿಣೀವಾ
ಹಿನಿಯಂ ಲೋಕಕ್ಕಕಾಂಡಪ್ರಳಯಮೆನೆ ಮಹಾಕಂಪಮಪ್ಪನ್ನವಾ ಮು
ನ್ನಿನಗುರ್ವಾ ಮುನ್ನಿನ ಭುಜಬಲಮಾ ಮುನ್ನಿನಾಟೋಪವಾ ಮು
ನ್ನಿನ ಧಾತ್ರೀನಾಥರಾ ಮುನ್ನಿನಾಡಂಬರವೆಸೆಯೆ ಜರಾಸಂಧನೆಟ್ಟಿಂದು ನಿಂದಂ ೩

೧. ತನ್ನ ವಿಜಯವಾದ್ಯಧ್ವನಿಯಿಂದ ಭೂಮಂಡಲಕ್ಕೇ ಸಂತೋಷವನ್ನುಂಟುಮಾಡಿದ ಶ್ರೀವತ್ಸಲಾಂಛನ ಕೃಷ್ಣನು ವೀರರಸಪೂರ್ಣವಾಗಿ ಹೊಳೆಯುವ ಮುಖಕಮಲವುಳ್ಳವನಾಗಿ, ಬಲರಾಮನೊಡನೆ ಮಧುರಾಪುರವನ್ನು ಪ್ರವೇಶಿಸಿದನು. ೨. ಪುರವನಿತೆಯರು ಎಡೆಬಿಡದೆ ಬಾಯಿಂದ ಹರಸುತ್ತ ತಳಿಯುವ ಬಿಳಿಯ ಅಕ್ಷತೆ, ಕೊಡುವ ಗಂಧ, ಗರಿಕೆ, ಚೆಲ್ಲುವ ಬಿಳಿಯ ಸಾಸಿವೆ, ತಳಿಯುವ ಅರಳು, ಎತ್ತಿ ಹಿಡಿದ ಹೂಮಾಲೆ, ಕೈಗೆ ಕೊಡುವ ಹೊಸಮಾದಲದ ಹಣ್ಣು ಎಂಬವುಗಳನ್ನು ಕೃಷ್ಣನು ಒಲಿದು, ಸ್ವೀಕರಿಸಿದನು. ವ|| ಹಾಗೆ ಮಂಗಳಾಚಾರ ಪರಂಪರೆಯು ನಡೆಯುತ್ತಿರುವಲ್ಲಿ ಅರಮನೆಯನ್ನು ಸೇರಿ, ಸುಖದಿಂದ ಇರುತ್ತಿದ್ದನು. ಕೆಲವು ದಿನಗಳಲ್ಲಿ ೩. ಜರಾಸಂಧನು ಹಿಂದೆ ಯುದ್ಧದಲ್ಲಿ ಸೋತು ಹಿಮ್ಮೆಟ್ಟಿ ಹೋಗಿದ್ದ ಆ ಅಳಲು ಚಿಂತೆಗಳಿಂದಲೇ ಹಿಂದಿನ ರಾಜರೊಡನೆ ಮೂವತ್ತು ಅಕ್ಷೌಹಿಣೀಸೇನಾಸಮೇತನಾಗಿ, ಮುಂಚಿನ ಅದೇ ತೋಳ್ಬಲವೂ, ಅದೇ ಆಡಂಬರವೂ, ಅದೇ ಆಟೋಪವೂ, ಅದೇ ಭಯಂಕರತೆಯೂ ಪ್ರಕಟವಾಗುವಂತೆಯೂ ಲೋಕಕ್ಕೇ ಅಕಾಲದಲ್ಲಿ ಪ್ರಳಯವಾಗುವುದೋ ಎಂಬ ನಡುಕವುಂಟಾಗುವಂತೆಯೂ ಕಾಳಗಕ್ಕೆ ಬಂದು ನಿಂತನು.

---

೧. ಕಮಲನೆಸೆಯೆ (ಕಗ) ೨. ಪೋದಂದಳಲೊಳೆ (ಖ)

ವ|| ಅಂತು ಜರಾಸಂಧನಾ ಪ್ರಕಾರದಿಂ ಪದಿನೆಂಟುಸೂಟಿಕ್ತಿಬರೆ ಮುರಾಂತಕನನಿತು ಸೂಟಿಯೊಳಂ ಪೂರ್ವಸಮರಕ್ರಮದೊಳೇಕಾಂಗದಿಂ ಜಯೋತ್ತರಮಾಗೆ ಕಾದಿ ಮಧುರೆಯಂ ಪೊಕ್ಕು ಬಲವದ್ವಿಪಕ್ಷ ತ್ರಿಂಶಕ್ಷೌಹಿಣೀಬಲ ಪುನಃಪುನರಾಗಮನಸಂಗಟ್ಟದಿಂ[1] ದಳ್ವವಿಳ್ವೆಯಾದ ಯಾದವ ದೇಶದ ಜನಕ್ಲೇಶಮಂ ಸ್ವಕೀಯಕಾರುಣ್ಯವಚನದಿನಾಜಿಸುತ್ತಿರ್ಪಿನಮದೊಂದು ಸಮಯದೊಳೊರ್ವ ಗುಪ್ತಚರನತಿಸಂಭ್ರಮತ್ವರಿತಗತಿಯಿಂ ಬಂದಾಸ್ಥಾನಮಂ ಪೊಕ್ಕು ಸಭಾಳಸ್ಥಳೀಕುಟ್ಮಳಿತಕರಾರವಿಂದನಾಗಿ ನಿಂದಿರ್ದು

ಸುರದೈತ್ಯಾಹವದೊಂದು ಸೈನ್ಯವಿನಿತಿಲ್ಲೀ ತ್ರಿಂಶದಕ್ಷೌಹಿಣೀ
ಭರದಿಂ ಬಳ್ಕುವ ಭೂಮಿಯಂ ತಳೆವೊಡಿರ್ವರ್ ಕೂರ್ಮರಿರ್ವರ್ ಫಣೀ
ಶ್ವರರೀರೆಂಟುದಿಶಾಗಜಂಗಳೆರಡೇೞುಂ ಗೋತ್ರಶೈಲಂಗಳಾ
ಗಿರವೇೞ್ಕುಂ ದಿಟವೆಂಬಿನಂ ತಳರ್ದು ಮತ್ತಂ ಮಾಗಧಂ ಬಂದಪಂ ೪

ವ|| ಎಂದು ಬಿನ್ನಪಂಗೆಯ್ದ ಚರನ ವಚನಮಂ ಕೇಳ್ದುಗ್ರಸೇನ ವಸುದೇವ ವೃಷ್ಣ್ಯಂಧಕ ಪ್ರಭೃತಿ ಯದುಕುಲವೃದ್ಧರುಮನುದ್ಧವಾಕ್ರೂರ ಸಾತ್ಯಕಿಪ್ರಮುಖ ಬುದ್ಧಿ ವೃದ್ಧರುಮಂ ಸರೋಜಾಕ್ಷಂ ನಿರೀಕ್ಷಿಸಿ

ಮಾನವನಾಟಕಪ್ರಕಟನಂ ನುಡಿದಂ ಪಗೆ ಮತ್ತೆ ಬಂದಪಂ
ತಾನಿದಿರೆತ್ತಿ ಮುಂ ಪಲವು ಸೂಟ್ ಬರೆ ಕೆಟ್ಟುೞಿದೀ ಸ್ವದೇಶಮಿ
ನ್ನಾ ನರಪಾಲಸೈನ್ಯಪರಿಪೀಡೆಗೆ ಸೈರಿಸಲಾರದಿಂದಿದ
ರ್ಕೇನನುಪಾಯಮಂ ನೆಗೞ್ವಮೆಂದೊಡೆ ಪೇೞ್ವಪೆನಾನುಪಾಯಮಂ ೫

ವ|| ಹಾಗೆ ಜರಾಸಂಧನು ಹದಿನೆಂಟು ಸಾರಿ ಮತ್ತೆ ಮತ್ತೆ ಎತ್ತಿ ಬಂದನು. ಕೃಷ್ಣನು, ಅಷ್ಟುಸಾರಿಯೂ ಏಕಾಂಗದಿಂದಲೇ ಹಿಂದಿನಂತೆ ಕಾದಿ ಜಯವನ್ನು ಪಡೆದು ಪಟ್ಟಣಪ್ರವೇಶಮಾಡಿದನು. ಆದರೂ ಬಲಿಷ್ಠವಾದ ಶತ್ರು ಅಕ್ಷೌಹಿಣೀಸೇನೆಯು ಮತ್ತೆ ಮತ್ತೆ ಹದಿನೆಂಟು ಸಾರಿ ಯುದ್ಧಮಾಡಿದುದರಿಂದ ಯಾದವ ಸೈನ್ಯವು ಅತಿಕಷ್ಟನಷ್ಟಗಳಿಗೆ ಗುರಿಯಾದುದನ್ನೂ ಜನಕ್ಲೇಶವನ್ನೂ ಸಹಿಸದವನಾದನು. ತನ್ನ ಕರುಣಾಪೂರ್ಣಪಾರ ವಚನಾಮೃತದಿಂದ ಅದನ್ನು ಆರಿಸುತ್ತಿದ್ದನು. ಹೀಗಿರುತ್ತಿರುವಲ್ಲಿ ಅಂದೊಂದು ದಿನ ಒಬ್ಬ ಗೂಢಚಾರನು ಅತಿಸಡಗರದಿಂದ ಬೇಗಬೇಗನೆ ನಡೆದುಬಂದು ಸಭೆಯನ್ನು ಹೊಕ್ಕನು. ಸಭೆಯಲ್ಲಿ ಕೈ ಮುಗಿದು ನಿಂತು, ೪ "ದೇವರಾಕ್ಷಸರ ಯುದ್ಧ ಸೈನ್ಯವಾವುದೂ ಇಷ್ಟಿಲ್ಲ. ಜರಾಸಂಧನು ಮತ್ತೆ ಮೂವತ್ತು ಅಕ್ಷೌಹಿಣಿ ಸೇನೆಯೊಡನೆ ಯುದ್ಧಕ್ಕೆ ಬರುತ್ತಿದ್ದಾನೆ. ಅವನ ಆ ಸೇನಾಭಾರದಿಂದ ಬಳುಕುವ ಭೂಮಿಯನ್ನು ಧರಿಸಬೇಕಾದರೆ ಇಬ್ಬರು ಕೂರ್ಮರೂ, ಇಬ್ಬರು ಆದಿಶೇಷರೂ, ಹದಿನಾರು ದಿಗ್ಗಜಗಳೂ, ಹದಿನಾಲ್ಕು ಗೋತ್ರ ಗಿರಿಗಳೂ ನಿಜವಾಗಿಯೂ ಬೇಕಾಗುವುದು." ವ|| ಎಂದು ಬಿನ್ನಹಮಾಡಿದನು. ಚರನ ಮಾತನ್ನು ಕೇಳಿ, ಕೃಷ್ಣನು-ಉಗ್ರಸೇನ ವಸುದೇವ ವೃಷ್ಣಿ ಅಂಧಕರೇ ಮೊದಲಾದ ಯದುಕುಲ ವೃದ್ಧರನ್ನೂ ಉದ್ಧವ ಅಕ್ರೂರ ಸಾತ್ಯಕಿ ಪ್ರಮುಖರಾದ ಜ್ಞಾನವೃದ್ಧರನ್ನೂ ನೋಡಿದನು. ೫. ಮನುಜನಾಟಕವಾಡುವ ಆ ಕೃಷ್ಣನು, "ಹಗೆಯು ಮತ್ತೆ ದಂಡೆತ್ತಿ ಬರುತ್ತಿದ್ದಾನೆ. ಹಿಂದೆ ಹಲವು ಸಾರಿ ಎತ್ತಿ ಬಂದುದರಿಂದ ನಮ್ಮ ಈ ದೇಶವು ಕೆಟ್ಟುಳಿದಿದೆ. ಮತ್ತೆ

೧. ದಳವಿಳೆ (ಖ)

ಪಗೆಯುಮಸೂಯೆಯುಮೆಮ್ಮೊಳ್
ಮಗಧಂಗಾವೀ ಸ್ವದೇಶದಿಂ ಪರದೇಶೋ
ರ್ವಿಗೆ ಪೋದೊಡೆಮ್ಮ ಬಟೆಯನೆ
ಮಗಧಂ ಗಟಿವಟೆಯ ಪಾವಿನಂತಿರೆ ಬರ್ಕುಂ ೬

ರಿಪುವೆಮ್ಮಿರ್ದನ್ಯದೇಶಕ್ಕೆಡಟಿ ನಡೆದೊಡೀ ನಮ್ಮ ದೇಶಕ್ಕಮೀ ನ
ಮ್ಮ ಪುರಕ್ಕಂ ಕ್ಷೇಮವಕ್ಕುಂ ಧುರದೊಳವನನಾವತ್ತಲೇಕಾಂಗದಿಂ ಗೆ
ಲ್ವಪೆವಾವಾ ತ್ರಿಂಶದಕ್ಷೌಹಿಣಿಯನುರುಪಿ ಬಾಣಾಗ್ನಿಯಿಂ ಮತ್ತೆ ಮೇಲೆ
ತ್ತಿ ಪೊಡರ್ಪಿಂ ಬಾರದಂತಾಗಿಪೆವಿದೆ ವಿಗತಾಪಾಯಮಪ್ಪೊಂದುಪಾಯಂ ೭

ವ|| ಎಂದು ನಿಶ್ಚಯಿಸಿ ವಸುದೇವನಂದನರ್ ಗೃಹೀತನಿಜನಿಜಾಯುಧರಾಗಿ ಬಂಧುಜನಪುರಜನಪರಿಜಂಗಳಾಶೀರ್ವಾದನಾದಮೊದವೆ ಪೊಟಲಂ ಪೊಱಮಟ್ಟೇಕಾಂಗದಿಂ ದಕ್ಷಿಣದಿಗ್ವಿಭಾಗಾಭಿಮುಖರಾಗಿ

ಜನಪದಮುಮನವನೀಶ್ವರ
ಜನಪದಮುಮನಖಿಲನದನದೀತೀರ್ಥಸರೋ
ಜನಿಷಂಡಮುಮಂ ತತ್ಪಾ
ವನನಗನಿವಹಮುಮನೀಕ್ಷಿಸುತ್ತೆ ಬರುತ್ತುಂ ೮

ವ|| ಅಂತು ನಡೆಯೆ ಕಟ್ಟಿದಿರೊಳ್

ಆಗಬಹುದಾದ ಆ ರಾಜರ ಸೇನೆಯ ಪರಿಪೀಡೆಗೆ ಸೈರಿಸಲಾರದು. ಇದಕ್ಕೇನುಪಾಯವನ್ನು ಮಾಡೋಣವೆಂದರೆ ನಾನು ಉಪಾಯವನ್ನು ಹೇಳುತ್ತೇನೆ. ೬. ಜರಾಸಂಧನಿಗೆ ನಮ್ಮ ಮೇಲೆ ದ್ವೇಷವೂ ಅಸೂಯೆಯೂ ಇದೆ. ಆದುದರಿಂದ ನಾವು ನಮ್ಮ ದೇಶವನ್ನೂ ಬಿಟ್ಟು, ಪರದೇಶಕ್ಕೆ ಹೋದರೆ ನಮ್ಮ ದಾರಿಯನ್ನೇ ಹಿಡಿದು, (ಹೊಡೆಯಲು ನೀಡಿದ) ಕೋಲಿನ ಜತೆಯಲ್ಲೇ ಬರುವ ಹಾವಿನಂತೆ ಬರುವನು! ೭. ಶತ್ರುವು ನಾವಿದ್ದ ಅನ್ಯದೇಶಕ್ಕೆ ಎಡವಿ ಬಂದನಾದರೆ ನಮ್ಮ ದೇಶಕ್ಕೂ ನಮ್ಮ ಈ ಪುರಕ್ಕೂ ಕ್ಷೇಮವಾಗುವುದು. ಯುದ್ಧದಲ್ಲಿ ನಾವು ಅವನನ್ನು ಅನ್ಯದೇಶದಲ್ಲೇ ಏಕಾಂಗದಿಂದ ಗೆಲ್ಲುತ್ತೇವೆ. ಆ ಮೂವತ್ತು ಅಕ್ಷೌಹಿಣಿಯನ್ನು ಬಾಣಾಗ್ನಿಯಿಂದ ಸುಟ್ಟು, ಮತ್ತೆ ಪರಾಕ್ರಮದಿಂದ ನಮ್ಮ ಮೇಲೆ ದಂಡೆತ್ತಿ ಬರದಂತೆ ಮಾಡುತ್ತೇನೆ. ಇದೇ ಅಪಾಯರಹಿತವಾದ ಒಂದು ಉಪಾಯ". ವ|| ಎಂದು ನಿಶ್ಚಯಿಸಿದನು. ಆಮೇಲೆ ರಾಮಕೃಷ್ಣರು ತಮ್ಮ ತಮ್ಮ ಆಯುಧಗಳನ್ನು ತೆಗೆದುಕೊಂಡು ಬಂಧುಜನ ಪುರಜನಗಳಾಶೀರ್ವಾದ ಧ್ವನಿಯು ಸಮೃದ್ಧಿಯಾಗುತ್ತಿರಲು ಮಧುರೆಯನ್ನು ಬಿಟ್ಟು ಹೊರಟು, ಏಕಾಂಗವೀರರಾಗಿ ದಕ್ಷಿಣಕ್ಕೆ ಅಭಿಮುಖರಾಗಿ ನಡೆದರು. ೮. ತಮ್ಮ ಜನಪದವನ್ನೂ ಬೇರೆ ರಾಜರ ದೇಶವನ್ನೂ ನದ ನದೀತೀರ್ಥಸರೋವರ ಸಮೂಹವನ್ನೂ ಅಲ್ಲಿಯ ಪರಿಶುದ್ಧ ಪರ್ವತಗಳನ್ನೂ ನೋಡುತ್ತ ಬಂದರು. ವ|| ಹಾಗೆ ನಡೆಯುತ್ತಿರುವಾಗ

ವಸುಧಾಂಗನೆ ಮೇಲ್ಕೊಂಡಳೊ
ಪೊಸಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂ
ಲಸಿಚಯಕಮನೆನೆ ತನ್ನದಿ
ಯೆಸೆದುದದೊಂದುಭಯತಟವನಾಚ್ಛಾಂಬುಗಳಿಂ ೯

ವ|| ಆ ಖಟ್ವಾಂಗಿಯೆಂಬ ತರಂಗಿಣಿಯ ತೀರಮನಿನಿತಾನುಮೆಯ್ದಿವರ್ಪಲ್ಲಿ

ಜಳಧರಲಪಟಲದೆ ಪೊರೆವೊರೆ
ಯೊಳುಣ್ಮುವುದಿತಾರ್ಕತೇಜವೆನೆ ವನತರುಸಂ
ಕುಳದೆಡೆಯೆಡೆಯೊಳ್ ತೇಜೋ
ವಳಯಂ ತೋಱತ್ತದೊಂದು ದೂರಾಂತರದೊಳ್ ೧೦

ವ|| ಅದಂ ನೋಡುತ್ತುಮೆಯ್ದೆವಂದರವಿಂದಲೋಚನಂ ನಿಜಾವತಾರರೂಪನಂ ನಿರುಪಮತಪಸ್ತೇಜೋಭಿಯುಕ್ತಜಟಾಕಲಾಪನಂ ಪುಣ್ಯಪ್ರಭಾವಾಭಿರಾಮನಂ ಜಮದಗ್ನಿರಾಮನಂ ಕಂಡು ಬಲಭದ್ರರಾಮನ ಮೊಗಮಂ ನೋಡಿ ; ಈ ಮಹಾಪುರುಷಂ ಕುಭೃತ್ಪಕ್ಷವಿಚ್ಛೇದನನಾಗಿಯುಂ ವಜ್ರಧರನಲ್ತು, ಸಪ್ತಾರ್ಚಿಯಾಗಿಯುಂ ಹುತವಹನಲ್ತು, ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು, ಪೂರ್ವದೇವನಾಗಿಯುಂ ನೈಋತನಲ್ತು, ವನನಿವಾಸಿಯಾಗಿಯುಂ ವರುಣನಲ್ತು, ಪವಮಾನನಾಗಿಯುಂ ಕುರಂಗವಾಹನನಲ್ತು, ಮನುಷ್ಯಧರ್ಮನಾಗಿಯುಂ ಧನಾಧ್ಯಕ್ಷನಲ್ತು, ಕಾಮಧ್ವಂಸಿಯಾಗಿಯುಂ

ಎದುರಿನಲ್ಲಿ ೯. ತನ್ನ ಉಭಯತಟಗಳಲ್ಲೂ ವನವುಳ್ಳುದೂ, ತನ್ನಲ್ಲಿ ಸ್ವಚ್ಛವಾದ ನೀರುಳ್ಳುದೂ ಆದ ಒಂದು ನದಿಯು, ಭೂದೇವಿಯು ಹಸುರಂಚಿನ ಪಟ್ಟೆಯ ವಸ್ತ್ರದ ಹೊಸ ಕುಪ್ಪಸವನ್ನು ವಿಲಾಸದಿಂದ ತೊಟ್ಟುಕೊಂಡಿರುವಳೋ ಎನ್ನುವಂತೆ ಹೊಳೆಯುತ್ತಿತ್ತು. ವ|| ಖಟ್ವಾಂಗಿಯೆಂಬ ಆ ನದಿಯ ತೀರವನ್ನು ಸ್ವಲ್ಪ ಸಮೀಪಿಸಿ ಬರುವಲ್ಲಿ ೧೦. ವನದ ಮರಗಳ ಗುಂಪಿನ ನಡುನಡುವೆ ಸಂದಿನಲ್ಲಿ ದೂರದಲ್ಲಿ ಅದೊಂದು ತೇಜೋಮಂಡಲವು, ಮೋಡಗಳ ಗುಂಪಿನ ನಡುವೆ ಸಂದು ಸಂದಿನಲ್ಲಿ ಹೊಮ್ಮುವ ಬಾಲಸೂರ್ಯನ ತೇಜಸ್ಸಿನಂತೆ ಕಾಣಿಸಿತು. ವ|| ಅದನ್ನು ನೋಡುತ್ತ ಸಮೀಪಕ್ಕೆ ಬಂದ ಕಮಲಾಕ್ಷನು, ತನ್ನ ಅವತಾರರೂಪನೂ ನಿರುಪಮವಾದ ತಪಸ್ತೇಜಸ್ಸಿನಿಂದ ಕೂಡಿದ ಜಟೆಯಿಂದಲಂಕೃತನೂ ಪುಣ್ಯಪ್ರಭಾವದಿಂದ ಮನೋಹರನೂ ಆದ ಜಮದಗ್ನಿ ರಾಮನನ್ನು ಕಂಡು, ಬಲರಾಮನ ಮುಖವನ್ನು ನೋಡಿ, "ಈ ಮಹಾಪುರುಷನು,* ಕುಭೃತ್ಪಕ್ಷ ವಿಚ್ಛೇದನನಾಗಿಯೂ (೧=ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದವನು (=ಇಂದ್ರ) ನಾಗಿದ್ದರೂ ವಜ್ರಧರ (=ಇಂದ್ರ)ನಲ್ಲ ೨. ಕುಭೃತ್ಪಕ್ಷ ವಿಚ್ಛೇದನನಾಗಿಯೂ = ೨ ಕ್ಷತ್ರಿಯ ರಾಜರ ಪಕ್ಷ (ವಂಶ)ವನ್ನು ಛೇದಿಸಿ, ನಾಶ ಮಾಡಿದವನಾಗಿದ್ದಾನೆ, ಇಂದ್ರ (=ವಜ್ರಧರ) ನಲ್ಲ. ಸಪ್ತಾರ್ಚಿ = ಸಪ್ತಜ್ವಾಲೆಯುಳ್ಳವನು. (೧ ಅಗ್ನಿ) ಆಗಿದ್ದರೂ, ಹುತವಹನಲ್ತು=ಅಗ್ನಿಯಲ್ಲ. ೨. ಸಪ್ತರ್ಷಿಗಳನ್ನು ಪೂಜಿಸತಕ್ಕವನು ಅಥವಾ ಯಜ್ಞಾಗ್ನಿಸಮೇತನು, ಅಗ್ನಿಯಲ್ಲ.

---

* ಈ ಚಿಹ್ನೆಯಿಂದ ಮುಂದೆ ಬರೆದಿರುವ ಎರಡು ವಿಧವಾದ ಅರ್ಥಗಳಲ್ಲಿ ಮೊದಲನೆಯದು ವಿರೋಧವಾಗಿರುವ ಅರ್ಥ, ಎರಡನೆಯದು ವಿರೋಧ ಪರಿಹಾರಕವಾದ ಸರಿಯಾದ ಅರ್ಥ. ವಿರೋಧಾಭಾಸಾಲಂಕಾರ.

**ತ್ರಿಲೋಚನನಲ್ತು, ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ತು, ತೀವ್ರತೇಜನಾಗಿಯುಂ ಮಾರ್ತಂಡನಲ್ತು, ದ್ವಿಜರಾಜನಾಗಿಯುಂ ನಕ್ಷತ್ರಪತಿಯಲ್ತು, ಕ್ರೌಂಚಾರಾತಿಯಾಗಿಯುಂ ಷಣ್ಮುಖನಲ್ತು, ಪರಶುಧರನಾಗಿಯುಂ ದ್ವಿರದಾಸ್ಯನಲ್ತು ಎಂದು [೧]ವಕ್ರೋಕ್ತಿಯಿಂ ತೋಱುತ್ತುಮತ್ಯಾಸನ್ನನಾದ ಸಮಯದೊಳ್**

ಸಮವರ್ತಿಯಾಗಿಯೂ (=೧ ಯಮನಾಗಿದ್ದರೂ) ದಕ್ಷಿಣ ದಿಕ್ಪಾಲಕ (= ಯಮ)ನಲ್ಲ. ಸಮವರ್ತಿ = ೨ ಎಲ್ಲರಲ್ಲೂ ಎಲ್ಲಾ ಬಗೆಯಲ್ಲೂ ಸಮವಾಗಿ ವರ್ತಿಸುವವನಾಗಿ ಇದ್ದಾನೆ, ಯಮನಲ್ಲ. ಪೂರ್ವದೇವ = ೨. ನೈಋತಿಯಾಗಿದ್ದರೂ ನೈಋತಿಯಲ್ಲ. ೨. ಪೂರ್ವಿಕನಾದ ದೇವ = ವಿಷ್ಣು = ನೈಋತಿಯೆಂಬ ರಾಕ್ಷಸನಲ್ಲ. ವನ ನಿವಾಸಿಯಾಗಿಯೂ = ಜಲನಿವಾಸಿ ವರುಣನಾಗಿದ್ದರೂ, ವರುಣನಲ್ಲ (ವಿರೋಧ) ವನನಿವಾಸಿಯಾಗಿಯೂ = ೨ ವನದಲ್ಲಿ ವಾಸ ಮಾಡುವವನಾಗಿದ್ದಾನೆ. ವರುಣನಲ್ಲ (ಪವಮಾನನಾಗಿಯೂ = ೧ ವಾಯುವಾಗಿದ್ದರೂ (ಕುರಂಗವಾಹನ = ವಾಯು ಅಲ್ಲ) ಪಪಮಾನನಾಗಿಯೂ = ೧ ವಾಯುದೇವನಾದರೂ (ಕುರಂಗವಾಹನ) = ವಾಯುವಲ್ಲ. ಪವಮಾನನಾಗಿಯೂ = ೨ ಪವಿತ್ರನಾಗಿಯೂ (ಪವಮಾನ) = ವಾಯು ಅಲ್ಲ. ಮನುಷ್ಯ ಧರ್ಮನಾಗಿಯೂ = ೧ ಮನುಷ್ಯ ಧರ್ಮನೆಂಬ ಹೆಸರುಳ್ಳವನು = ಕುಬೇರನಾಗಿಯೂ ಧನಾಧ್ಯಕ್ಷನಲ್ಲ = ಕುಬೇರನಲ್ಲ (ವಿರೋಧ) ಮನುಷ್ಯಧರ್ಮನಾಗಿಯೂ = ೨ ಮನುಷ್ಯ ವೇಷಾಚಾರಾದಿಗಳುಳ್ಳವನು, ಕುಬೇರನಲ್ಲ. ಕಾಮಧ್ವಂಸಿಯಾಗಿಯೂ ೧ ಕಾಮನನ್ನು ಧ್ವಂಸಮಾಡಿದವನು = ಈಶ್ವರನಾಗಿದ್ದರೂ ತ್ರಿಲೋಚನನಲ್ಲ = ೧. ಮೂರು ಕಣ್ಣುಳ್ಳವನು = ಈಶ್ವರನು ಅಲ್ಲ (ವಿರೋಧ) ಕಾಮಧ್ವಂಸಿಯಾಗಿಯೂ = ಅರಿಷಡ್ವರ್ಗದಲ್ಲಿ ಮೊದಲನೆಯದಾದ ಕಾಮವನ್ನು ಧ್ವಂಸಮಾಡಿದವನು = ದೂರಮಾಡಿದವನು) ಆಗಿರುವವನು ಈಶ್ವರ (= ಶಿವ) ನಲ್ಲ. ಚತುರಾಸ್ಯನಾಗಿಯೂ = ೧ ನಾಲ್ಕು ಮುಖಗಳುಳ್ಳವನಾದರೂ, ಹಿರಣ್ಯಗರ್ಭನೆಂಬ ಹೆಸರುಳ್ಳವನು = ಬ್ರಹ್ಮನು ಆಗಿಲ್ಲ. ಚತುರಾಸ್ಯನಾಗಿಯೂ = ಚಾತುರ್ಯದ ಮಾತಿನವನಾಗಿರುವವನು ಮತ್ತು ನಾಲ್ಕು ಕಡೆಯೂ ದೃಷ್ಟಿಯಿಡುವವನು, ಹಿರಣ್ಯಗರ್ಭ (=ಬ್ರಹ್ಮ)ನಲ್ಲ. ತೀವ್ರತೇಜನಾಗಿಯೂ = ೧ ತೀವ್ರವಾದ ಕಾಂತಿ ತೇಜಸ್ಸುಳ್ಳವನು = ಸೂರ್ಯನಾದರೂ ಮಾರ್ತಂಡನಲ್ಲ = ಸೂರ್ಯನಲ್ಲ (ವಿರೋಧ) ತೀವ್ರತೇಜನು = ೨ ಉಗ್ರವಾದ ತೇಜಸ್ಸುಳ್ಳವನು, ಆದರೆ ಸೂರ್ಯನಲ್ಲ. ದ್ವಿಜರಾಜನಾಗಿಯೂ = ೧ ನಕ್ಷತ್ರರಾಜನಾದ ಚಂದ್ರನಾದರೂ (ನಕ್ಷತ್ರಪತಿ) ಚಂದ್ರನಲ್ಲ ದ್ವಿಜರಾಜನಾಗಿಯೂ = ೨ ಬ್ರಾಹ್ಮಣ ಶ್ರೇಷ್ಠನಾದವನು ಆಗಿದ್ದಾನೆ. ಚಂದ್ರನಲ್ಲ ಕ್ರೌಂಚಾರಾತಿಯಾಗಿಯೂ = ೧ ಕ್ರೌಂಚ ಪರ್ವತವನ್ನು ಕೊರೆದವನು = ಷಣ್ಮುಖನು ಆದರೂ ಷಣ್ಮುಖನಲ್ಲ (ವಿರೋಧ) ಕ್ರೌಂಚಾರಾತಿಯಾಗಿಯೂ = ೨ ರಾವಣನಿಗೂ ಬೇರೆ ರಾಕ್ಷಸರಿಗೂ ಶತ್ರುವಾದವನು ಷಣ್ಮುಖನಲ್ಲ (= ಕುಮಾರಸ್ವಾಮಿಯಲ್ಲ) ಪರಶುಧರನಾಗಿಯೂ = ೧ ಗಂಡುಗೊಡಲಿಯನ್ನು ಧರಿಸಿರುವವನು ವಿನಾಯಕನಾದರೂ ದ್ವಿರದಾಸ್ಯನಲ್ಲ = ಗಜಮುಖನಲ್ಲ. (ವಿರೋಧ) ೨ ಗಂಡುಗೊಡಲಿಯನ್ನು ಧರಿಸಿದವನು

---

೧. ವಕ್ರೋಕ್ತಿಯಂ (ಖ)

ಏಕತ್ವಮನಱಿಪುವವೋ
ಲಾ ಕೇಶವ ಪರಶುರಾಮರಾಲಂಗಿಸಿ ಭಿ
ನ್ನಾಕೃತಿಗಳ್ ಕಾರ್ಯಾರ್ಥಂ
ಲೋಕಕ್ಕೆನೆ ಬೇಱೆವೇಱೆ ಕುಳ್ಳಿರ್ದಾಗಳ್ ೧೧

ಮಿಸುಪ ರದನಾಂಶುಜಾಳಂ
ಪಸರಿಸಿ ವಾಕ್ಶ್ರೀಯ ಧವಳಚಾಮರಮೆಂಬಂ
ತೆಸೆದಿರ್ಪಿನೆಗಂ ಜಮದ
ಗ್ನಿಸೂನು ವಸುದೇವಸೂನುಗಂದಿಂತೆಂದಂ ೨೧

ಅಱಿದೆಂ ತ್ವದೀಯಚರಿತದ
ತೆಱನಂ ಮಾನುಷವಿಡಂಬಮಂ ಮೆಱೆದಪೆ ನೀಂ
ಪೆಱತಾದುದಕ್ಕುಪಾಯದ
ತೆಱನಿಚ್ಛಾಮಾತ್ರದಿಂದೆ ಮಡಿಪೈ ಪಗೆಯಂ ೧೩

ಈ ದೆಸೆಯೊಳ್ ಗೋಮಂತಮ
ಹಾದುರ್ಗನಗೇಂದ್ರಮಿರ್ಪುದದನಾತ್ಮಶ್ರೀ
ಪಾದರಮಣೀಯಮಪ್ಪಂ
ತಾದರಿಪುದದರ್ಕೆ ಪೇೞ್ವೆಪೆಂ ಕಾರಣಮಂ ೧೪

ಪಸರಿಸುತೆ ತನ್ನ ಕಂಪಂ
ದೆಸೆವೆಣ್ಗಳ ಸುಯ್ಲ ಕಂಪನಂಡಲೆಯುತ್ತುಂ
ಕುಸುಮಿತಕದಂಬಭೂರುಹ
ಮೆಸೆವುದು ಸಾರ್ವರ್ತುಕಂ ತದಗ್ರಸ್ಥಳದೊಳ್ ೧೫

= ಪರಶುರಾಮನಾಗಿದ್ದಾನೆ, ಗಜಮುಖನಲ್ಲ. ಎಂದು ವಕ್ರೋಕ್ತಿಯಿಂದ ಅವನನ್ನು ಕಾಣಿಸುತ್ತ ಸಮೀಪಕ್ಕೆ ಬಂದನು. ೧೧. ಆ ಕೃಷ್ಣ ಪರಶುರಾಮರು ತಮ್ಮ ಏಕತ್ವವನ್ನು ತಿಳಿಸುವಂತೆ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು. ಲೋಕಕಾರ್ಯಾರ್ಥವಾಗಿ ಭಿನ್ನಾಕೃತಿಗಳಾಗಿರುವುದನ್ನು ತಿಳಿಸಲು ಆಲಿಂಗನಾನಂತರ ಬೇರೆ ಬೇರೆ ಕುಳಿತುಕೊಂಡರು. ೧೨. ಹೊಳೆಯುವ ತನ್ನ ಹಲ್ಲಿನ ಕಾಂತಿಸಮೂಹವು ಹರಡಿ, ವಾಕ್ ಎಂಬ ಲಕ್ಷ್ಮಿಯ ಬಿಳಿಯ ಚಾಮರವೆಂಬಂತೆ ಕಾಣುತ್ತಿರುವಲ್ಲಿ ಪರಶುರಾಮನು ಕೃಷ್ಣನಿಗೆ ಹೀಗೆ ಹೇಳಿದನು. ೧೩. "ನಿನ್ನ ಚರಿತೆಯ ರೀತಿಯನ್ನು ತಿಳಿದೆನು. ಮನುಷ್ಯ ನಟನೆಯನ್ನು ನೀನು ಪ್ರಕಟಿಸುತ್ತಿದ್ದೀಯೆ. ಉಪಾಯದ ರೀತಿಯು ಬೇರೆ. ಏಕೆಂದರೆ, ಶತ್ರುವನ್ನು ಇಚ್ಛಾ ಮಾತ್ರದಿಂದಲೇ ನಾಶಮಾಡಬಲ್ಲೆ. ೧೪. ಈ ದಿಕ್ಕಿನಲ್ಲಿ ಗೋಮಂತಕ ಮಹಾದುರ್ಗವೆಂಬ ಉತ್ತಮ ಪರ್ವತವಿದೆ. ಅದನ್ನು ನಿನ್ನ ಶ್ರೀಪಾದದಿಂದ ರಮಣೀಯವಾಗುವಂತೆ ಆದರಿಸಬೇಕು. ಅದಕ್ಕೆ ಕಾರಣವನ್ನು ಹೇಳುತ್ತೇನೆ. ೧೫. ಆ ಪರ್ವತದ ಮೇಲೆ ಸಕಲ ಋತುಗಳಲ್ಲಿಯೂ ಪುಷ್ಪಯುತವೂ ಆದ ಕದಂಬವೃಕ್ಷವು ತನ್ನ ಸುವಾಸನೆಯನ್ನು ಹರಡಿ, ದಿಗಂಗನೆಯರ ನಿಶ್ವಾಸದ ಸುವಾಸನೆಯನ್ನು ಅಡಗಿಸಿ ಮೆರೆಯುತ್ತದೆ.

ಅದಱೊಳಗುನ್ಮದಕಾರಿಣಿ
ಮದಿರಾಹ್ವಯದೇವಿಯಿರ್ಪಳಾ ದೇವಿ ಮನೋ
ಮುದದಿಂದನಂತನೊಳ್ ಕೂ
ಡಿದಪಳ್ ಯೌವನಮದಂ ಪದಿರ್ಮಡಿಸುವಿನಂ ೧೬

ವ|| ಅದಲ್ಲದೆಯುಂ

ತಾಲಧ್ವಜಂಗೆ ದಿವ್ಯ ವಿ
ನೀಲಾಂಬರಮೇಕಕುಂಡಲಂ ಬಂದಪುದಾ
ಶೈಲಾಗ್ರದೊಳಂತವಱಿಂ
ನೀಲಾಂಬರನೇಕಕುಂಡಲಂ ತಾನಕ್ಕುಂ ೧೭

ಆ ಕುಧರದಲ್ಲಿ ನಿನಗಂ
ಶ್ರೀಕೇಶವ ದಿವ್ಯಮಕರಕುಂಡಲಕೋಟೀ
ರಾಲ್ಪಮಂ ಖಗೇಶ್ವರ
ನಾಕಾಶದೆ ಬಂದು ತುಡಿಸಿ ಪೋಕುಮಮೋಘಂ ೧೮

ತನ್ನಂಶಾಂಶದ ಶೋಭೆಯಿ
ನೆನ್ನರನಿಂದ್ರಾದಿ ಸುರರುಮಂ ರಂಜಿಸುವಾ
ನಿನ್ನ ಸಿರಿಕಾಂತೆ ನಿಮಿಷದೆ
ನಿನ್ನೊಳ್ ನೆರೆಗುಂ ಯದೃಚ್ಛೆಯಿಂದಾ ನಗದೊಳ್ ೧೯

ಪ್ರತ್ಯರ್ಥಿಮಗಧನೆಟ್ಟಿರ
ಲತ್ಯದ್ಭುತಸಮರಮಕ್ಕುಮಾಗೆ ಚತುರ್ವಿಂ
ಶತ್ಯಕ್ಷೌಹಿಣಿ ತದಗೋ
ಪತ್ಯಕದೊಳ್ ಲಯಮನೆಯ್ದುಗುಂ ನಿಮ್ಮಿಂದಂ ೨೦

೧೬. ಅದರಲ್ಲಿ ಉನ್ಮದಕಾರಿಣಿಯಾದ ಮದಿರೆಯೆಂಬ ಹೆಸರಿನ ದೇವಿಯಿದ್ದಾಳೆ. ಆ ದೇವಿ ಮನಸ್ಸಂತೋಷದಿಂದ ಬಲರಾಮನೊಡನೆ, ಅವನ ಯೌವನವು ಹತ್ತರಷ್ಟಾಗುವಂತೆ ಕೂಡುವಳು. ವ|| ಅದೂ ಅಲ್ಲದೆ ೧೭. ತಾಳಧ್ವಜನಾದ ಬಲರಾಮನಿಗೆ ಆ ಪರ್ವತದಲ್ಲಿ ದಿವ್ಯವಾದ ನೀಲಾಂಬರವೂ ಏಕಕುಂಡಲವೆಂಬ ಕರ್ಣಾಭರಣವೂ ದೊರೆಯುವುದು. ಆದುದರಿಂದ ಇವನು ನೀಲಾಂಬರನೂ ಏಕಕುಂಡಲನೂ ಆಗುವನು. ೧೮. ಶ್ರೀಕೇಶವಾ ನಿನಗೂ ದಿವ್ಯವಾದ ಮಕರಕುಂಡಲ ಕಿರೀಟಗಳೆಂಬ ಭೂಷಣಗಳನ್ನು ಗರುಡನು ಆಕಾಶದಿಂದ ಬಂದು, ನಿಜವಾಗಿಯೂ ತೊಡಿಸಿ ಹೋಗುವನು. ೧೯. ತನ್ನ ಅಂಶಾಂಶದ ಕಾಂತಿಯಿಂದಲೇ ಇಂದ್ರಾದಿಗಳಾದ ಎಂಥವರನ್ನೂ ಬಲ್ಲ ನಿನ್ನ ಆ ಶ್ರೀಕಾಂತೆಯು ಆ ಪರ್ವತದಲ್ಲಿ ಅಕಸ್ಮಾತ್ತಾಗಿ ನಿಮಿಷಮಾತ್ರದಲ್ಲಿ ನಿನ್ನೊಡನೆ ಸೇರುವಳು. ೨೦. ನಿನಗೆ ಎದುರಾಳಿಯಾದ ಜರಾಸಂಧನು ದಂಡೆತ್ತಿ ಅಲ್ಲಿಗೆ ರಂಜಿಸಬಂದರೆ ಅತ್ಯದ್ಭುತವಾದ ಯುದ್ಧವಾಗುವುದು. ಹಾಗೆ ಯುದ್ಧವಾದರೆ ಅವನ ಇಪ್ಪತ್ತು ನಾಲ್ಕು ಅಕ್ಷೌಹಿಣಿಸೇನೆಯು ಆ ಪರ್ವತ ತಪ್ಪಲಿನಲ್ಲಿ ನಿಮ್ಮಿಂದ ನಾಶಹೊಂದುವುದು. ವ|| ಹಾಗೆ ಸಕಲರಾಜ ಸಮೂಹವನ್ನೂ ಏಕಾಂಗದಿಂದ ಗೆದ್ದು ಪಶ್ಚಿಮಮುಖರಾಗಿ ನಡೆಯುವಲ್ಲಿ

ವ|| ಅಂತು ಸಕಲರಾಜಲೋಕಮನೇಕಾಂಗದಿಂ ಗೆಲ್ದು ಪಶ್ಚಿಮಮುಖರಾಗಿ ನಡೆವಲ್ಲಿ

ಕರವೀರಪುರವರೇಶನ
ನುರುವಿಕ್ರಮನಂ ಸೃಗಾಲನಂ ನೀಂ ಧುರದೊಳ್
ಪರಿಮರ್ದಿಸೆ ನಿನಗಚ್ಯುತ
ದೊರೆಕೊಂಡಪುದವನ ಸೂರ್ಯದತ್ತ ವರೂಥಂ ೨೧

ವ|| ಎಂದು ಪರಶುರಾಮನಾಗಾಮಿಕಾರ್ಯಮನಱಿಪಿ ಕಳುಪಲಾ ಪ್ರದೇಶದಿಂ ತಳರ್ದು ನಡೆಗೊಂಡು ಸಕಳಕೇಳೀನಿಳಯಮೆನಿಪ ನೀಳಾಚಳ ಮಹಾದುರ್ಗಮಂ ಕಂಡು

ಖರಕಿರಣಂಗೆ ಕೇಳಿವನಲೀಲೆಯನಾಗಿಸುವಂಘ್ರಿಪೋತ್ಕರಂ
ಸುರನದಿಗೇಱಿಯಂ ಸಮೆವ ಕೂಟತಟಂ ದಿಗಿಭವ್ರಜಕ್ಕೆ ಸೆ
ಜ್ಜರದ ಬೆಡಂಗನೀವ ಕಟಕಂ ತನಗೊಪ್ಪಿರೆ ಮೇರುವಂ ತಿರ
ಸ್ಕರಿಸಿದುದಿಂತಿದಾ ಪರಶುರಾಮನೆ ಪೇಳ್ದ ನಗೇಂದ್ರಮಾಗದೇ ೨೨

ವ|| ಎಂದು ಮನದೆಕೊಂಡು

ಪದಪದ್ಧತಿಯಿಂ ಸ್ಥಳಕಮ
ಳದ ಚೆಲ್ವಂ ಪಡೆದ ಕೃಷ್ಣ ಬಳರಸಿತಸಿತಾಂ
ಬುದಯುಗಳದಂತಳಂಕರಿ
ಸಿದರಾ ಗೋಮಂತಶೈಲಶಿಖರಸ್ಥಳಮಂ ೨೩

ವ|| ಆ ಶೈಲದ ಚೂಳಿಕೆಯೊಳನೇಕವಿಧಾನೋಕಹಂಗಳನಾಳೋಕಿಸುತುಂ ಪೊೞ್ತುಗಳೆವಲ್ಲಿ

ಎನಗೆ ನಭಂ ದಿಕ್ತಟಮಿ
ನ್ನೆನಿತಂತರಮೆಂದು ನಿಳ್ಕಿ ನೋಡುವ ಗಿರಿರಾ
ಜನ ತೋಳ್ದುಱುಗಲೆನಲ್ ನೀ
ಳ್ದನೇಕಶಾಖೆಗಳಿನೆಸೆದುದೊಂದು ಕದಂಬಂ ೨೪

೨೧. ನೀನು ಕರವೀರಪುರಾಧಿಪತಿಯಾದ ಸೃಗಾಲನನ್ನೂ ಯುದ್ಧದಲ್ಲಿ ಪರಿಮರ್ದಿಸಿದರೆ ಅವನಿಗೆ ಸೂರ್ಯನು ಕೊಟ್ಟಿರುವ ರಥವು ನಿನಗೆ ದೊರೆಯುವುದು." ವ|| ಎಂದು ಪರಶುರಾಮನು ಮುಂದಿನ ಕಾರ್ಯವನ್ನು ತಿಳಿಸಿ ಕಳುಹಿಸಿದನು. ರಾಮಕೃಷ್ಣರು ಅಲ್ಲಿಂದ ಹೊರಟು ನಡೆದು, ಸಕಲಕ್ರೀಡಾನಿಲಯವೆನಿಸಿಕೊಂಡ ನೀಲಾಚಲ ಮಹಾದುರ್ಗವನ್ನು ಕಂಡರು. ೨೨. ಸೂರ್ಯನಿಗೆ ವನಕ್ರೀಡೆಗೆ ಅವಕಾಶವನ್ನುಂಟುಮಾಡಿರುವ ಮರಗಳ ಗುಂಪೂ ದೇವಗಂಗೆಗೆ ಕಟ್ಟೆಯನ್ನು ಮಾಡುವ ಶಿಖರಗಳ ದಡವೂ ದಿಗ್ಗಜಗಳಿಗೆ ಮಲಗುವ ಮನೆಯಾಗುವ ತಪ್ಪಲುಪ್ರದೇಶವೂ ಚೆನ್ನಾಗಿರುವುದರಿಂದ ಮೇರುವನ್ನೂ ತಿರಸ್ಕರಿಸುತ್ತಿರುವ ಇದೇ ಆ ಪರಶುರಾಮನು ಹೇಳಿದ ಪರ್ವತರಾಜನಲ್ಲವೇ ವ|| ಎಂದು ಮನಸ್ಸಿಗೆ ತಂದುಕೊಂಡು ೨೩. ತಮ್ಮ ಹೆಜ್ಜೆಯಿಂದ ನೆಲದಾವರೆಯ ಚೆಲುವನ್ನು ಉಂಟುಮಾಡುತ್ತ ಆ ಬಲರಾಮ ಕೃಷ್ಣರು ಬಿಳಿಯ ಮತ್ತು ಕಪ್ಪುಮೋಡಗಳ ಜೋಡಿಯಂತೆ ಆ ಗೋಮಂತ ಶೈಲದ ಶಿಖರವನ್ನು ಅಲಂಕರಿಸಿದರು. ವ|| ಆ ಪರ್ವತದ ಮೇಲೆ ಅನೇಕ ವಿಧವಾದ ವೃಕ್ಷಗಳನ್ನು ನೋಡುತ್ತ ಕಾಲವನ್ನು ಕಳೆಯುತ್ತಿದ್ದರು. ಆಗ ೨೪. "ನನಗೆ ಆಕಾಶವೂ ದಿಗಂತಗಳ ದಡವೂ ಇನ್ನು ಎಷ್ಟು ದೂರದಲ್ಲಿದೆ?" ಎಂದು ನಿಲುಕಿ ನೀಡಿ ನೋಡುವ

ಮದಗಂಧ[1]ಮನೋಹರೆ ಸಂ
ಮದಕಾರಿಣಿ ಯೌವನಪ್ರವರ್ಧಿನಿ ಕಾಂತಿ
ಪ್ರದೆ ಸುಖದಾಯಿನಿಯೆನಿಸಿದ
ಮದಿರಾವಧುವಿರ್ದಳಾ ಕದಂಬದ್ರುಮದೊಳಾ ೨೫

ಪುಳಕಸ್ವೇದಾಂಬುಗಳೊಗೆ
ಯೆ ಲೋಚನಂ ಕೆಂಪುವೀಱೆ ಪಾಂಡಿಮಮಧರ
ಕ್ಕಳವಡೆ ರಾಮಂ ಮದಿರಾ
ವಿಳಾಸಿನೀಸಂಗದಿಂದೆ ಸುಖಮಂ ಪಡೆದಂ ೨೬

ವ|| ಆ ಕ್ಷಣದೊಳಂತರಿಕ್ಷತಳದಳೀಕ್ಷಣಗೋಚರಮಾಗಿ

ತಮದ ನೆಲೆಯೆನಿಸುವೀ ವಿಪಿ
ನಮನೆ ಶರಣ್ಬುಗಲೆ ಬರ್ಪ ತಮವಿಂತಿದು ತ
ತ್ತಮಮಂ ಬೆಂಕೊಳ್ವಿನಬಿಂ
ಬ[2]ಮಿದೆನಿಸಿದುದಸಿತವಸನಮುಂ ಕುಂಡಲಮುಂ ೨೭

ವ|| ಅಂತು ಬಂದ ನೀಲವಸನದೊಳಮೇಕಕುಂಡಲದೊಳಂ ಸಂಕರ್ಷಣನಲಂಕೃತನಾಗೆ ತದನಂತರಂ

ಇದು ಹೇಮಾದ್ರಿಯಿನುನ್ನತಂ [3]ಸುವಿಪುಲಂ ಸುಸ್ಥಾನಮೆಂದೀ ನಗೇಂ
ದ್ರದೊಳಿರ್ಪೊಂದೊಲವಿಂದೆ ಬಂದಪುದಲೇ ಜ್ಯೋತಿರ್ಗಣಂ ಚಿತ್ರವ
ರ್ಣದ ಮೇಘಂ ಪುದುವಾಳ್ಕೆಯಿಂ ಬರಲೆನಲ್ ಬಂದತ್ತು ನಾಗಾರಿ ಹ
ಸ್ತದೊಳುದ್ಭಾಸಿತದಿವ್ಯಕುಂಡಲಕಿರೀಟಾಕಲ್ಪವಾಕಾಶದಿಂ ೨೮

ಗಿರಿರಾಜನ ತೋಳುಗಳಂತಿರುವ ಅನೇಕ ಶಾಖೆಗಳುಳ್ಳ ಕದಂಬವೃಕ್ಷವೊಂದು ಚೆನ್ನಾಗಿ ಕಾಣಿಸಿತು. ೨೫. ಆ ಕದಂಬವೃಕ್ಷದಲ್ಲಿ ಮದಗಂಧದಿಂದ ಮನೋಹರೆಯೂ ಸಮ್ಮದ ಕಾರಿಣಿಯೂ ಯೌವನ ಪ್ರವರ್ಧಿನಿಯೂ ಆದ ಮದಿರಾವಧುವಿದ್ದಳು. ೨೬. ಬಲರಾಮನಿಗೆ ಆ ಮದಿರಾವಿಳಾಸಿನೀಸಂಗದಿಂದ ರೋಮಾಂಚನವೂ ಬೆವರು ನೀರೂ ಒದಗಿತು. ಕಣ್ಣು ಕೆಂಪೇರಿತು. ತುಟಿ ಬಿಳುಪೇರಿತು. ಸುಖವಾಯ್ತು. ವ|| ಆ ಕ್ಷಣದಲ್ಲೇ ಅಂತರಿಕ್ಷದಲ್ಲಿ ಕಣ್ಣಿಗೆ ಕಾಣಿಸಿಕೊಂಡು, ೨೭. ಕತ್ತಲೆಯ ನೆಲೆಯೆನಿಸಿಕೊಂಡ ಈ ಕಾಡನ್ನೇ ಮರೆಹೋಗಲು ಬೇರೆ ಕತ್ತಲೆಯು ಬರುತ್ತಿದೆ. ಅದನ್ನು ಹಿಂದಟ್ಟಿಕೊಂಡು ಸೂರ್ಯ ಮಂಡಲವು ಬರುತ್ತಿದೆ ಎನ್ನುವಂತೆ ನೀಲವಸ್ತ್ರವೂ ಕುಂಡಲವೂ ಬಂದಿತು. ವ|| ಹಾಗೆ ಬಂದ ನೀಲವಸ್ತ್ರದಿಂದಲೂ ಏಕಕುಂಡಲದಿಂದಲೂ ಬಲರಾಮನು ಅಲಂಕೃತನಾದನು. ಆಮೇಲೆ ೨೮. ಇದು ಮೇರುಗಿರಿಗಿಂತಲೂ ಉನ್ನತವಾದುದು ಬಹು ವಿಸ್ತಾರವಾದುದು

---

೧. ಮನೋಹರಿ ಸಂಮದಕಾರಿ ಮನಃಪ್ರಮೋದವರ್ಧಿನಿ (ಕಗ) ೨. ಮೆನಿಸಿದತ್ತಸಿತವಸನಮುಂ (ಕಗ) ೩. ಸುವಿಮಲಂ (ಖ)

ವ॥ ಆಗಳಾ ಮಕರಕುಂಡಲಕಿರೀಟಂಗಳಂ ವಿಹಗರಾಜಂ ರಾಜೀವಲೋಚನಂಗೆ ತುಡಿಸಿ ಪೋಪುದುಂ

ಜಲಜಾಸನೆ ಜಲರುಹಕರೆ
ಜಲದಾಧ್ವದೆ ಬಂದು ಲಕ್ಷ್ಮಿ ಕ್ರಾಂತಿಚ್ಛಲದಿಂ
ಜಲಜಾಕ್ಷನೊಡನೆ ನೆರೆದಳ್
ಜಲದರವೋದಾರಮೆಸೆಯೆ ಸುರಪಟಹರವಂ ೨೯

ವ॥ ಅಂತು ಪರಶುರಾಮನೆಂದಂತೆ ನಿಜಸಮಗ್ರವೈಷ್ಣವಪ್ರಭಾವಮುಂ ತಳೆದು ಕೈಟಭಾಂತಕಂ ಗೋಮಂತಕೂಟಸ್ಥಲದೊಳಿರ್ಪನ್ನೆಗಂ

ಕ್ಷಿತಿ ಚಾತುರ್ವಳವಿದ್ಧ
ಕ್ಷಿತಿ ಗಗನಂ ಕೇತುವಿದ್ಧಗಗನಂ ದಿಕ್ಸಂ
ತತಿ ಧೂಳಿವಿದ್ಧದಿಕ್ಸಂ
ತತಿಯೆನೆ ಬಟಿಸಂದು ಬಂದು ಮಗಧನೃಪೇಂದ್ರಂ ೩೦

ನಿರಧಿಷ್ಠಾನಂ [೧]ದಿವಮೆಂ
ಬರಂತಧಿಷ್ಠಾನಮಲ್ಲವೇ ನಗವಿದು ತ
ತ್ಸುರಸದನಕ್ಕೆಂದಾ ಭೂ
ಧರತಟದೊಳ್ ನಿಂದು ನೋಡಿ ನೃಪಕೋಟಿಗಳಂ ೩೧

ಒಳ್ಳೆಯ ಎಡೆ, ೨೯. ಎಂದು ಈ ಪರ್ವತದಲ್ಲಿ ಒಡಗೂಡಿ ಇರುವ ಪ್ರೀತ್ಯಾಸಕ್ತಿಯಿಂದ ಜ್ಯೋತಿರ್ಗಣವೂ ಚಿತ್ರವರ್ಣದ ಮೋಡವೂ ಬರುತ್ತಿವೆಯೆನ್ನುವಂತೆ ಗರುಡನ ಹಸ್ತದಲ್ಲಿ ಹೊಳೆಯುವ ಆಭರಣವಾದ ದಿವ್ಯಕುಂಡಲವೂ ಕಿರೀಟವೂ ಆಕಾಶದಿಂದ ಬಂದಿತು. ವ॥ ಆಗ ಗರುಡನು ಆ ಮಕರಕುಂಡಲ ಕಿರೀಟಗಳನ್ನು ಕಮಲನೇತ್ರನಿಗೆ ಧರಿಸಿ ಹೊರಟು ಹೋದನು. ೨೯. ಕಮಲನೇತ್ರೆಯೂ ಕಮಲಧಾರಿಣಿಯೂ ಆದ ಲಕ್ಷ್ಮಿಯು ಕಾಂತಿರೂಪದಿಂದ ಬಂದು, ದೇವತೆಗಳ ಪಟಹಧ್ವನಿಯು ಮೇಘಧ್ವನಿಯಂತೆ ಆಗುತ್ತಿರುವಲ್ಲಿ ಕಮಲಲೋಚನನೊಡನೆ ಸೇರಿದಳು. ವ॥ ಹಾಗೆ ಪರಶುರಾಮನು ಹೇಳಿದಂತೆ ತನ್ನ ಸಮಗ್ರವೈಷ್ಣವ ಪ್ರಭಾವವನ್ನು ತಳೆದ ಕೃಷ್ಣನು ಗೋಮಂತಕಗಿರಿ ಶಿಖರಪ್ರದೇಶದಲ್ಲಿರುತ್ತಿದ್ದನು. ೩೦. ಆಗ ಭೂಮಿಯು ನಾಲ್ಕು ಬಗೆಯ ಸೈನ್ಯದಿಂದ ಆಕ್ರಾಂತವಾಯಿತು, ಆಕಾಶವು ಬಾವುಟಗಳಿಂದ ಆಕ್ರಮಿಸಲ್ಪಟ್ಟಿತು, ದಿಕ್ಕುಗಳು ಸೇನೆಯ ಧೂಳಿನಿಂದ ತುಂಬಿದವು, ಎನ್ನುವಂತೆ ಜರಾಸಂಧನು ಸೇನೆಯೊಡನೆ ಆ ಗಿರಿಯ ಹತ್ತಿರಕ್ಕೆ ಬಂದನು. ೩೧. ಜರಾಸಂಧನು ಆ ಪರ್ವತತಟದಲ್ಲಿ ನಿಂತು, "ಸ್ವರ್ಗವು ಆಧಾರವಿಲ್ಲದೆ (ಅಂತರಿಕ್ಷದಲ್ಲಿ) ಇದೆಯೆನ್ನುತ್ತಾರೆ. ಈ ಪರ್ವತವೇ ಸ್ವರ್ಗವನ್ನು ಹೊತ್ತು ಆಧಾರಸ್ತಂಭವಾಗಿರಲಿಕ್ಕಿಲ್ಲವೇ!" ಎಂದು ಆ ಗಿರಿಯನ್ನು (ಅಚ್ಚರಿಯಿಂದ) ನೋಡಿ,

೧. ದಿವಮೆಂಬರಂತಧಿಷ್ಠಾನಮಲ್ಲದೆನಗಿಂತಿದು (ಕಖಗ)

ಪ್ರತಿಕಾರೋಪಾಯಮೇನಿಲ್ಲಿಗೆ ನುಡಿಯಿಮೆನಲ್ ಕರ್ಣ ದುರ್ಯೋಧನಾದಿ
ಕ್ಷಿತಿಪರ್ ತಂತಮ್ಮುಪಾಯಂಗಳನುಸಿರ್ವುದುಮುತ್ತಾನಿತಾಸ್ಯಂ ಸಮುತ್ತಂ
ಭಿತಬಾಹಾದಂಡನಾಂದೋಳಿತಕರಯುಗಳಂ ಮಾಣಿಮೆಂದೆಂದು ಮಾರ್ಕೊಂ
ಡತಿಮಾತ್ರೋಪಾಯಮಂ ತಾನಱಿಪುವ ಬಗೆಯಿಂ ಚೈದ್ಯನಿಂತೆಂದನಾಗಳ್ ೩೨

ಇದನೊಂದಂ ಮಾಡೆ ಬೇಡಿಂ ಪೆಱಪೆಱವು ಮತಂ ವಾಹನಾರೂಢರೆಂದ
ನ್ನದೆ ಬಂದಂತೆಯ್ದಿ ಬೇಗಂ ಗಿರಿಯನುರುಮುದಂ ತ್ರಿಂಶದಕ್ಷೌಹಿಣೀಸೈ
ನ್ಯದ ವೀರರ್ ಕೂಡೆ ಕಾಂತಾರದ ತರುತತಿಯಂ ಕಿೞ್ತು ತಂದೊಟ್ಟುಗೀ ಶೈ
ಲದ ಸುತ್ತುಂ ಮತ್ತದಂ ನಾಮುರಿಪಲದಱೊಳಟ್ಟಾಡುಗುಂ ರಾಮಕೃಷ್ಣರ್ ೩೩

ವ॥ ಎಂದು ಶಿಶುಪಾಲಂ ಪೇೞಲದರ್ಕೊಡಂಬಟ್ಟು

ಲೋಕಮನರಣ್ಯಮೆನಿಸಲ
ನೋಕಹನಿಕುರುಂಬಮಂ ನಿಜಾನೇಕಭಟಾ
ನೀಕದೆ ತರಿಸಿ ನರೇಶ್ವರ
ರಾ ಕುಧರದ ಸುತ್ತಲೊಟ್ಟಿ ಸುಡುವುದುಮಾಗಳ್ ೩೪

ಪೊಸತೊಂದಾಯಿತ್ತಿದೇಂ ಕಾರಿರುಳಿನ ಶಿಖೆಗಳ್ ಸಂಜೆಗೆಂಪಂ ಸ್ಫುಲಿಂಗ
ಪ್ರಸರಂ ತಾರಾಳಿಯಂ ಕರ್ಬೊಗೆ ತಮದೊದವಂ ಪೋಲ್ತುರ್ವಾಗಲೆಂದೆ
ಣ್ದೆಸೆವೆಣ್ಗಳ್ ತೊಟ್ಟ ಕರ್ಣೋತ್ಪಲವಲರ್ದುವು ಸಪ್ತಾಬ್ಧಿವೇಳಾಲತಾಂಗಂ
ಬಿಸುಪೇಱಿತ್ತಭ್ರಗಂಗಾಬ್ಜಿನಿ ಮುಗಿದುದದೇಂ ರೌದ್ರಮೋ ಶೈಲದಾಹಂ ೩೫

ತನ್ನೊಡನೆ ಬಂದ ಭೂಪಾಲರಿಗೆ ಹೀಗೆಂದನು. ೩೨. "ಇಲ್ಲಿಗೆ ತಕ್ಕ ಪ್ರತೀಕಾರೋಪಾಯ ವೇನೆಂಬುದನ್ನು ಹೇಳಿ" ಎಂದನು. ಕರ್ಣ ದುರ್ಯೋಧನನೇ ಮೊದಲಾದ ಕೆಲವರು ರಾಜರು ತಮ ತಮಗೆ ತಿಳಿದ ಉಪಾಯವನ್ನು ಹೇಳಿದರು. ಆಗ ಶಿಶುಪಾಲನು ಮೇಲೆತ್ತಿದ ಮುಖವುಳ್ಳವನೂ ಬಹಳ ಮೇಲೆತ್ತಿದ ದಂಡಾಕಾರವಾದ ತೋಳುಳ್ಳವನೂ ತೂಗುವ ಕೈಗಳುಳ್ಳವನೂ ಆಗಿ "ಬಿಡಿ ಬಿಡಿ ನಿಲ್ಲಿ" ಎಂದು ಅವರಿಗೆ ಪ್ರತಿಭಟಿಸಿ, ಅತ್ಯುತ್ತಮವಾದ ಉಪಾಯವನ್ನು ತಾನು ತಿಳಿಸಬೇಕೆಂದುಕೊಂಡು ಹೀಗೆ ಹೇಳಿದನು. ೩೩. "ಇದನ್ನೊಂದನ್ನು ಮಾಡಿಬಿಟ್ಟರೆ ಬೇರಾವ ಅಭಿಮತಗಳೂ ಬೇಕಿಲ್ಲ, ವಾಹನಾರೂಢರಾಗಿ ಎಲ್ಲರೂ ನಾವು ಬಂದಂತೆ ಬೇಗ ಹೋಗೋಣ. ಮೂವತ್ತು ಅಕ್ಷೌಹಿಣಿ ಸೈನ್ಯದ ವೀರರು ಒಟ್ಟಿಗೆ ಕಾಡಿನ ಮರಗಳನ್ನೆಲ್ಲಾ ಕಿತ್ತು ತಂದು ಈ ಬೆಟ್ಟದ ಸುತ್ತಲೂ ಒಟ್ಟಲಿ. ಆಮೇಲೆ ನಾವು ಅದನ್ನು ಹತ್ತಿಸಿ ಉರಿಸಿದರೆ ಅದರಲ್ಲಿ ರಾಮಕೃಷ್ಣರು ಉರಿದು, ನಿಶ್ಶೇಷರಾಗುವರು!" ವ॥ ಎಂದು ಶಿಶುಪಾಲನು ಹೇಳಿದನು. ಅದಕ್ಕೆ ಒಡಂಬಟ್ಟು, ೩೪. ಆ ರಾಜರು, ಲೋಕವು ವನವಿಲ್ಲದುದು ಎನ್ನಿಸುವಂತೆ ಮರಗಳ ಸಮೂಹವೆಲ್ಲವನ್ನೂ ತಮ್ಮ ಭಟರಿಂದ ತರಿಸಿ, ಆ ಪರ್ವತದ ಸುತ್ತಲೂ ಒಟ್ಟಿ ಬೆಂಕಿಯನ್ನು ಹತ್ತಿಸಿದರು. ೩೫. ಬೆಂಕಿಯ ಉರಿಯ ತುದಿಗಳು ಸಂಜೆಗೆಂಪನ್ನೂ ಹಾರುವ ಕಿಡಿಗಳು ನಕ್ಷತ್ರಗಳ ಸಮೂಹವನ್ನೂ ಕರಿಯ ಹೊಗೆಯು ಹೆಚ್ಚು ಕತ್ತಲೆಯನ್ನು ಹೋಲುತ್ತಾ ಇದೇನು ಇದೊಂದು ಕಗ್ಗತ್ತಲೆಯ ರಾತ್ರಿ ಹೊಸದಾಗಿದೆಯೆನ್ನುವಂತೆ ಭಯಂಕರವಾಗಿದ್ದಿತು. ಆಗಲೇ ಎಂಟು ದಿಗ್ವನಿತೆಯರು

ವ॥ ಆಗಳಾ ಶೈಲರಾಜನ ಶೃಂಗಾರರಸಮೆ ಕುದಿದಟ್ಟೋಡುವಂತಟ್ಟೋಡುವ ನಿರ್ಝರ ಜಲಂಗಳುಮಂ, ಆ ಮಹೀಧರೇಂದ್ರನ ಮಂಡನ ಮಹಾರತ್ನಂಗಳೆ ಸಿಡಿಲ್ವಂತೆ ಸಿಡಿಲ್ದೊಡೆದು ಸೂಸುವ ಹೇಮರತ್ನಂಗಳುಮಂ, ಆ ಭೂಭೃತ್ಪ್ರಭುವಿನ ಭಯಾತಿಶಯಯುತೋತ್ತರೀಯ ಪಟಲಮೆ ಪಾಱುವಂತೆ ಚೂಳಿಕಾವಲಯದಿಂ ಮೆಯ್ದೆಗೆದು ಪೋಪ ಮೇಘಜಾಲಂಗಳುಮಂ ಆ ಮಹಾಚಲಪತಿಯ ರಮಣೀಯಜಂಗಮಾವತಾರಮೂರ್ತಿಗಳ ಮುಂಗೊಳ್ವಾಯದಿಂ ಪರಿದು ಕೆಡೆದುವೆಂಬಂತೆ ದೆಸೆದೆಸೆಗೆ ಪರಿದು ಕೋಡನೂಱಿ ಕೆಡೆವನೇಕದ್ವಿಪಸಂಕುಳಂಗಳುಮಂ ಆ ನಗೇಶ್ವರನ ನಿಡುಸುಯ್ಯೆಲರ್ಗಳೆ ಪೊಱಮಟ್ಟುವೆಂಬಂತೆ ಗುಹಾಮುಖದಿಂ ಪೊಱಮಟ್ಟು ಜೀವಮಂ ಬಿಡುವ ಜರದಜಗರಂಗಳುಮಂ, ಆ ಶಿಲೋಚ್ಚಯಚಕ್ರವರ್ತಿಯ ವಿಕ್ರಮಾವಷ್ಟಂಭಪ್ರಭಾವರೌದ್ರಂಗಳೆ ರೂಪಧರಂಗಳಾಗಿ ನೆಗೆದು ಲಯವನೆಯ್ದಿದುವೆಂಬಂತೆ ಅಂಬರಕ್ಕುಚ್ಚಳಿಸಿ ಬೀೞ್ವ ಶರಭ ಶಾರ್ದೂಲ ಭೇರುಂಡಾದಿಗಳುಮಂ, ನೋಡಿ ಕಂಡೇಕಕುಂಡಲಂಗೆ ಗಿರೀಶನೊಳ್ ಕಾರುಣ್ಯಮುಂ ಜರಾಸಂಧ ಸೈನ್ಯದೊಳ್ ಕೋಪಾನುಬಂಧಮುಮೊಡನೊಡನೆ ಪೆರ್ಚಿದುದನಱಿದು ದನುಜಾಂತಕಂ ವಿಕಸಿತಮುಖಾರವಿಂದನಾಗಿ ಆಂ ಪರ್ವತಕ್ಕಮೇನಾನುಮೊಂದುಪಾಯದಿಂ ಶಾಂತಿಯಂ ಪಡೆದು ಬಂದು ಕಾದಿದಪ್ಪೆನನ್ನೆಗಂ ನೀವೀ ಶಿಖರದಿಂ ಮಗಧಸೇನಾಸಾಗರಕ್ಕೆ ಪಾಯ್ದು ಕಾದುತ್ತುಮಿರಿಮೆಂದು ಪೇೞೆ

ಪಿರಿದುಮನಲಾಧಿದೇವತೆ
ಪರನರವಧಕೆಂದು ಬೆಸಲೆಯಾದಳೊ ಪೇೞೇ
ಪುರುಷನನೆನೆ ತೇಜೋಮಯ
ನುರಿವಗದಿಂ ಪಾದನನನ್ಯಸೇನೆಗನಂತಂ ೩೬

ಧರಿಸಿದ ಕಿವಿಯ ನೈದಿಲೆಯು ಅರಳಿತು! ಸಪ್ತಸಮುದ್ರಗಳ ದಡವೆಂಬ ಬಳ್ಳಿಯ ತುದಿ ಬಿಸಿಯಾಯಿತು. ಆಕಾಶಗಂಗೆಯ ಕಮಲವು ಮೊಗ್ಗಾಯಿತು. ಬೆಟ್ಟದುರಿಯು ಅದೆಷ್ಟು ರೌದ್ರವಾದುದೋ! ವ॥ ಆಗ ಆ ಪರ್ವತರಾಜನ ಶೃಂಗಾರ ರಸವೇ ಕುದಿದು ಇಂಗಿಹೋದಂತೆ ಗಿರಿಝರಿಗಳು ನೀರು ಬತ್ತಿ ಒಣಗಿದವು. ಆ ಪರ್ವತೇಂದ್ರನ ಆಭರಣಗಳ ಮಹಾರತ್ನಗಳೇ ಸಿಡಿಯುವಂತೆ ಸುವರ್ಣರತ್ನಗಳು ಸಿಡಿದೊಡೆದು ಚಲ್ಲಿದವು. ಆ ಗಿರೀಂದ್ರನು ಉರಿಯ ಭಯದಿಂದ ಬಿಸಾಡುವ ಉತ್ತರೀಯದಂತೆ ಶಿಖರಾಗ್ರದಿಂದ ಮೋಡಗಳು ಬಿಟ್ಟು ಹಾರಿ ಓಡಿದವು. ಆ ಮಹಾಗಿರಿರಾಜನ ರಮಣೀಯ ಚರಮೂರ್ತಿಗಳೇ ಹೋರಾಡಲು ಬಂದು ನುಗ್ಗಿದವೆಂಬಂತೆ, ಹಲವು ಆನೆಗಳ ಗುಂಪುಗಳು ಉರಿ ತಾಕಿ ದಿಕ್ಕು ದಿಕ್ಕಿಗೆ ಓಡಿ, ದಂತವನ್ನು ಊರಿ ಬಿದ್ದವು. ಆ ಪರ್ವತೇಶ್ವರನ ನಿಟ್ಟುಸಿರಿನ ಗಾಳಿಗಳೇ ಹೊರಟುವೆಂಬಂತೆ ಹೊರಟು ಮುದಿ ಅಜಗರಗಳು ಪ್ರಾಣಗಳನ್ನು ಬಿಟ್ಟವು. ಆ ಪರ್ವತ ಚಕ್ರವರ್ತಿಯ ಪರಾಕ್ರಮ ಗರ್ವಪ್ರಭಾವ ರೌದ್ರತೆಗಳೇ ರೂಪವನ್ನು ಧರಿಸಿ ಹಾರಿ ಬಿದ್ದು ನಾಶವಾದುವೆಂಬಂತೆ ಬೆಟ್ಟದಲ್ಲಿದ್ದ ಶರಭಶಾರ್ದೂಲ ಗಂಡಭೇರುಂಡಾದಿಗಳು ಆಕಾಶಕ್ಕೆ ಹಾರಿಬಿದ್ದುವು. ಇದನ್ನು ಕಂಡ ಬಲರಾಮನಿಗೆ ಗಿರೀಶನಲ್ಲಿ ಕರುಣೆಯೂ ಜರಾಸಂಧನ ಸೇನೆಯ ಮೇಲೆ ಅತಿಕೋಪವೂ ಒಡನೆಯೇ ಹೆಚ್ಚಿದುದನ್ನು ಕಂಡ ಕೃಷ್ಣನು ಅರಳಿದ ಮುಖಕಮಲವುಳ್ಳವನಾಗಿ, ನಾನು ಪರ್ವತಕ್ಕೂ ಏನಾದರೊಂದು ಉಪಾಯದಿಂದ ಶಾಂತಿಯನ್ನುಂಟು ಮಾಡಿ ಬಂದು ಕಾದುವೆನು. ಅಷ್ಟರಲ್ಲಿ ನೀವು ಈ ಶಿಖರದಿಂದ ಜರಾಸಂಧನ ಸೇನಾಸಾಗರಕ್ಕೆ ಹಾರಿ ಕಾದುತ್ತಿರಿ" ಎಂದು ಹೇಳಿದನು. ೩೬. 'ಮಹಾಮಹಿಮಳಾದ ಅಗ್ನಿದೇವತೆಯೇ ಶತ್ರುರಾಜರ ಕೊಲೆಗೆಂದು ಈ ಮಹಾಪುರುಷನನ್ನು ಹೆತ್ತಳೋ? ಹೇಳಿ!' ಎನ್ನುವಂತೆ ತೇಜೋಮಯನಾದ ಬಲರಾಮನು

ಫಣಿಲೋಕದಿಂದೆ [1]ಪೊಱಮಡ
ಲಣಿಯೆರಲದ್ರೀಂದ್ರದಿಂದೆ ಪೊಱಮಟ್ಟುಮಿದೊಂ
ದಣಕಂ ಲಯೋಗ್ರಸಂಕ
ರ್ಷಣನೆನೆ ಸಂಕರ್ಷಣಂ ಭಯಂಕರನಾದಂ ೩೭

ವ॥ ಅಂತುಮಲ್ಲದೆ

ಪೇೞೆವನಂದಮೆಂತೊ ಬಲಭದ್ರನೊ ರುದ್ರನೊ ನೀಲವಸ್ತ್ರನೋ
ನೀಳಘನಾವೃತಾಚಲನೊ ಲಾಂಗಲಪಾಣಿಯೊ ದಂಡಪಾಣಿಯೋ
ತಾಳಪತಾಕನೋ ಪ್ರಳಯಧೂಮಪತಾಕನೊ ತಾನೆನಲ್ ಮಹಾ
ಭೀಳತೆವೆತ್ತು ತೋಱಿದನರಾತಿನೃಪಾಳಿಗೆ ಕಾಮಪಾಲಕಂ ೩೮

ಧುರದೊಳ್ ರಾಮಂ ವಿಸಟಂ
ಬರಿದು ಜರಾಸಂಧನೃಪಚತುರ್ಬಲಮಕರಾ
ಕರಮಂ ಕದಡಿದನತಿಭೀ
ಕರ ಮಕರಂ ಕದಡುವಂತೆ ಮಕರಾಕರಮಂ ೩೯

ತೇರ್ಕೈಸಿ ಪಾಯ್ದು ಪಿಡಿದತಿ
ವೀರರ ಹಯದಿಂದೆ ಹಯವನಾಳಿಂದಾಳಂ
ವಾರಣದಿಂ ವಾರಣಮಂ
ತೇರಿಂ ತೇರಂ ಹಲಾಯುಧಂ ಮರ್ದಿಸಿದಂ ೪೦

ಉರಿಯುತ್ತಿದ್ದ ಬೆಟ್ಟದಿಂದ ಹಾರಿ ಶತ್ರುಸೇನೆಯ ಮೇಲೆ ಬಿದ್ದನು. ೩೭. ಇದೊಂದು ಪ್ರಳಯಕಾಲದಲ್ಲಿ ಎಲ್ಲವನ್ನೂ ಸೆಳೆಯುವ ಸಿದ್ಧವಾಯುವು, ಪಾತಾಳದಿಂದ ನೇರವಾಗಿ ಹೊರಡುವುದಕ್ಕೆ ಬದಲಾಗಿ ಬೆಟ್ಟದ ಮೂಲಕ ಕುಚೋದ್ಯಕರವಾಗಿ ಹೊರಟಿತು ಎನ್ನುವಂತೆ ಬಲರಾಮನು ಭಯಂಕರನಾಗಿದ್ದನು. ವ॥ ಅದೂ ಅಲ್ಲದೆ ೩೮. ಆ ವಿಚಾರವನ್ನು ಹೇಳುವವನು ಹೇಗೆ ತಾನೆ ಹೇಳಬಲ್ಲನೋ!! ಅವನು ಬಲಭದ್ರನೋ ರುದ್ರನೋ ನೀಲವಸ್ತ್ರಧಾರಿಯೋ? ಅಥವಾ ನೀಲಮೇಘಾವೃತವಾದ ಪರ್ವತವೋ? ನೇಗಿಲನ್ನು ಹಿಡಿದಿರುವ ಬಲರಾಮನೋ? ದಂಡಧರನೋ? ತಾಳಧ್ವಜನೋ ಪ್ರಳಯಕಾಲದ ಧೂಮಧ್ವಜನಾದ ಅಗ್ನಿಯೋ?' ಎನ್ನುವಂತೆ ಬಲರಾಮನು ವೈರಿರಾಜಸಮೂಹಕ್ಕೆ ಅತಿಭಯಂಕರನಾಗಿ ಕಾಣಿಸಿದನು. ೩೯. ಅತಿಭಯಂಕರವಾದ ಮೊಸಳೆಯು ಸಮುದ್ರವನ್ನು ಕದಡುವಂತೆ ಬಲರಾಮನು ಯುದ್ಧದಲ್ಲಿ ಸ್ವೇಚ್ಛೆಯಿಂದ ಓಡಾಡುತ್ತಾ ಜರಾಸಂಧನ ನಾಲ್ಕು ಬಗೆಯ ಸೇನಾಸಾಗರವನ್ನು ಕದಡಿದನು. ೪೦. ಬಲರಾಮನು ಶತ್ರುಸೇನೆಯ ಮೇಲೆ ಹಾರಿ, ಅತಿವೀರರಾದ ಅವರನ್ನು ಆಕ್ರಮಿಸಿ, ಅವರ ಕುದುರೆಗಳಿಂದಲೇ ಅವರ ಕುದುರೆಗಳನ್ನು ಆನೆಗಳಿಂದಲೇ ಆನೆಗಳನ್ನು ಕಾಲಾಳುಗಳಿಂದಲೇ ಕಾಲಾಳುಗಳನ್ನು

೧. ಪೊಱಮಡದಣಿಯರಮದ್ರೀಂದ್ರದಿಂದೆ ಪೊಱಮಟ್ಟನಿದೊಂದಣಕಂ (ಮೂಲ)

[1]ಕೆಲವಂ ಚರಣಾಹತಿಯಿಂ
ಕೆಲವಂ ಮುಷ್ಟಿಪ್ರಹಾರದಿಂ ಗಜಘಟೆಯಂ
ಕೆಲವಂ ಬಲಭದ್ರಂ ಲಾಂ
ಗಲದಿಂ ಬರೆತೆಗೆದು ಮುಸಲದಿಂ ಕೆಡೆವೊಯ್ದಂ ೪೧

ದೆಸೆಯಾನೆ ಮುನ್ನವೊಳವೆಂ
ಬಸದುಕ್ತಿಯದಿರ್ಕೆ ಪಿಡಿದು ಪೇರಾನೆಗಳಂ
ದೆಸೆದೆಸೆಗೀಡಾಡೆ ಬಲಂ
ದೆಸೆಯಾನೆಗಳಾದುವವಱೊಳೆಂಟುಗಜಂಗಳ್ ೪೨

ಹಲದಿಂದರಿಕರಿಕುಂಭ
ಸ್ಥಲಮಂ ಬಳನುಗಿಯೆ ನೆಗೆದು ಸೂಸಿದ ಮುಕ್ತಾ
ಫಲಮನೊಳಕೊಂಡು ಮುಕ್ತಾ
ಫಲಜನ್ಮಸ್ಥಾನವಾದುದಂಭೋನಿಧಿಯುಂ ೪೩

ಅಸುಹೃತ್ಕರಿಯಂ ಹಲಿ ದಳಿ
ಯಿಸುವಂದುಚ್ಚಳಿಸಿ ಪುದಿದ ನೆತ್ತರ ಕೆಂಪಾ
ಗಸದೊಳ್ ತೋಱುವುದಿನ್ನುಂ
ಕಿಸುಸಂಜೆಯ ನೆವದೆ ದಿವದ ರಾತ್ರಿಯ ಪುಗಿಲೊಳ್ ೪೪

ತಾಳಧ್ವಜನಿಱಿದೆಡೆಯೊಳ್
ಲೀಳೆಯಿನಂದಾಯ್ದು ಕೋದು ತೊಟ್ಟರ್ದ ಶಿರೋ
ಮಾಳೆಯೆ ದಲ್ ಮಾರಿಯ ಮಾ
ಕಾಳಿಯ ಚಂಡಿಕೆಯ ಕೊರಲ ಮಾಲೆಗಳೆಲ್ಲಂ ೪೫

ರಥಗಳಿಂದಲೇ ರಥಗಳನ್ನು ಹೊಡೆದು ಮರ್ದಿಸಿದನು. ೪೧. ಅವನು ವೈರಿಸೇನೆಯ ಆನೆಗಳಲ್ಲಿ ಕೆಲವನ್ನು ಕಾಲಿಂದ ಒದೆದು ತುಳಿದು ಕೆಲವನ್ನು ಮುಷ್ಟಿಯಿಂದ ಗುದ್ದಿಯೂ ಕೆಲವನ್ನು ಬಾಲವನ್ನು ಹಿಡಿದೆಳೆದುಕೊಂಡು, ಮುಸಲಾಯುಧದಿಂದ ಹೊಡೆದೂ ಕೊಂದನು. ೪೨. ದಿಗ್ಗಜಗಳೆಂಬುವು ಮೊದಲಿಂದಲೂ ಇದ್ದವೆಂಬುದು ಸುಳ್ಳು. ಅದು ಹಾಗಲ್ಲ. ಬಲರಾಮನು ಶತ್ರುಸೈನ್ಯದ ಹಲವು ದೊಡ್ಡ ಆನೆಗಳನ್ನು ದಿಕ್ಕು ದಿಕ್ಕಿಗೂ ಬಿಸಾಡಿದನಷ್ಟೆ. ಅವುಗಳಲ್ಲಿ ಎಂಟು ಮಾತ್ರ ದಿಗ್ಗಜಗಳಾಗಿ ಉಳಿದವು! ೪೩. ಬಲರಾಮನು ಆನೆಗಳ ಕುಂಭಸ್ಥಳವನ್ನು ನೇಗಿಲಿನಿಂದ ಸೀಳುವಾಗ ಹಾರಿ ಚೆಲ್ಲಿದ ತಲೆಯ ಮುತ್ತುಗಳನ್ನು ಒಳಕೊಂಡು ಸಮುದ್ರವು ಮುತ್ತುಗಳಿಗೆ ಜನ್ಮಸ್ಥಾನವಾಯಿತು. ೪೪. ಬಲರಾಮನು ಆನೆಗಳ ತಲೆಯನ್ನು ಸೀಳುವಾಗ ಮೇಲೆ ಆಕಾಶಕ್ಕೆ ಹಾರಿ ಹರಡಿದ ರಕ್ತದ ಕೆಂಪೇ ಪ್ರಾತಃಕಾಲ ಸಾಯಂಕಾಲಗಳಲ್ಲಿ ಸಂಜೆಗೆಂಪೆಂಬ ನೆವದಿಂದ ಇನ್ನೂ ಕಾಣಿಸುತ್ತಿದೆ. ೪೫. ಈಶ್ವರನ ಮತ್ತು ಕಾಳಿಯ ಕೊರಳ ಮಾಲೆಗಳೆಲ್ಲವೂ ಬಲರಾಮನು ಯುದ್ಧದಲ್ಲಿ ಕಡಿದು ಬೀಳಿಸಿದ ತಲೆಗಳನ್ನು ಲೀಲೆಯಿಂದ ಆರಿಸಿಕೊಂಡು ಪೋಣಿಸಿ ಮಾಡಿದ ರುಂಡ

---

೧. ಕೆಲರಂ ಚರಣಾಹತಿಯಿಂ ಕೆಲರಂ (ಕಗ)

ಎಣಿಕೆಗೆ ಪನ್ನೆರಡಕ್ಷೌ
ಹಿಣಿಯಂ ತವೆ ತಿಂದು ತೇಗುವಂದವೊಲರಿವಾ
ರಣಮೌಕ್ತಿಕದಿಂದುದಿತೋ
ಲ್ಬಣಾಸ್ಯವೇನೆಸೆದುದೋ ಹಲಂ ಹಲಧರನಾ ೪೬

ವ|| ಅನ್ನೆಗಂ

ಚರಣಾಂಗುಷ್ಠಾಗ್ರದಿಂದಂ [1]ಕಿಳನಿಲಮನಹೀಂದ್ರಾಲಯಕ್ಕೊತ್ತೆ ವಿಶ್ವಂ
ಭರೆ ಬಿಣ್ಪಿಂ ಮಧ್ಯಭಾಗಂ ನಳಿದು ಮುಗಿಯೆ ತಳ್ಪೊಯ್ದ ವಾರಾಸಿಯಿಂ ತ
ದ್ಗಿರಿವಹ್ನಿಜ್ವಾಲೆಯಂ ನಂದಿಸಿ ಬಟಿಕ ಜರಾಸಂಧ[2]ಸೇನಾಸಮೂಹಾಂ
ತರಮಂ ಕಾಲಾಗ್ನಿರುದ್ರಂ ಪುಗುವ ತೆಱದೆ ದೈತ್ಯಾಂತಕಂ ಬಂದು ಪೊಕ್ಕಂ ೪೭

ಪೊಕ್ಕು ಮುರಾರಿ ಮಾರ್ಪಡೆಯೊಳಿರ್ಪುದುಮಾ ರಿಪುಸೈನ್ಯಜೀವನಂ
ಪೊಕ್ಕುದು ಕಾಲವಕ್ತ್ರಮನರಾತಿಬಲಾರುಣತೋಯಸಿಂಧುಗಳ್
ಪೊಕ್ಕುವು ವಾರ್ಧಿಯಂ ರಿಪುಚಮೂಪಶಿರಂ ಪಿಶಿತಾಶಿಕುಕ್ಷಿಯೊಳ್
ಪೊಕ್ಕುವೆನುತ್ತುಮಂಬರದೊಳೀಕ್ಷಿಸುತಿರ್ದುದು ದೇವಸಂಕುಳಂ ೪೮

ವ|| ಆಗಳ್

ಆವಂ ಕೋಟಿಯುಗಾನುಷಂಗ ಖಗವಾಹತ್ವಂಗಳಿಂ ಪೋಲ್ವನೀ
ದೇವಂಗೆನ್ನವೊಲಾ ಮಹತ್ವಮೆನಗಂ ದ್ವಿಟ್ಸೇನೆಗಂ ಮಾಟ್ಪುಮೀ
ಜೀವಾಕೃಷ್ಟಿಯನೀತನೆಂದು ಧನು ಲಜ್ಜಾನಮ್ರಪಾಯ್ತೆಂಬಿನಂ
ಶ್ರೀವತ್ಸಾಂಕನಜೇಯನೇಱಿಸಿದನುಗ್ರಾಟೋಪಮಂ ಚಾಪಮಂ ೪೯

ಮಾಲೆಗಳೇ. ೪೬. ಬಲರಾಮನ ನೇಗಿಲು ಶತ್ರುಗಳ ಹನ್ನೆರಡು ಅಕ್ಷೌಹಿಣೀ ಸೇನೆಯನ್ನು ಪೂರ್ತಿಯಾಗಿ ತಿಂದಿತಷ್ಟೆ. ಆನೆಗಳ ತಲೆಯನ್ನು ಸೀಳಿ ತಿನ್ನುವಾಗ ತಲೆಯ ಮುತ್ತುಗಳು ನೇಗಿಲಿಗೆ ಅಂಟಿಕೊಂಡು ಹೊಳೆಯುತ್ತಿರುವುದನ್ನು ನೋಡಿದರೆ. ನೇಗಿಲು ತೇಗುವಾಗ ಆ ಮುತ್ತುಗಳು ಕಾಣಿಸುತ್ತಿವೆ ಎನ್ನುವಂತೆ ಇದ್ದಿತು. ವ|| ಅಷ್ಟರಲ್ಲಿ ೪೭. ಕೃಷ್ಣನು ತನ್ನ ಕಾಲಿನ ಹೆಬ್ಬೆರಳಿನಿಂದ ಕೆಳಗಿನ ಭೂಮಿಯನ್ನು ಒತ್ತಿದನು. ಅದರಿಂದ ಭೂಮಿಯ ಮಧ್ಯಭಾಗವು ಕುಗ್ಗಿ ಹಳ್ಳವಾಯಿತು. ಸಮುದ್ರದ ನೀರು ಆಯೆಡೆಗೆ ಬಂದು ಸೇರಿತು. ಆ ನೀರಿನಿಂದ ಬೆಟ್ಟದ ಬೆಂಕಿಯುರಿಯನ್ನು ಆರಿಸಿದನು. ಆಮೇಲೆ ಜರಾಸಂಧನ ಸೇನಾಸಮೂಹದ ಮಧ್ಯಭಾಗವನ್ನು ಪ್ರಳಯಕಾಲದ ರುದ್ರನಂತೆ ಹೊಕ್ಕನು. ೪೮. ಕೃಷ್ಣನು ಹಾಗೆ ಹೊಕ್ಕು ಎದುರಿಸಲು ಆ ಶತ್ರುಸೇನೆಯ ಜೀವವು ಯಮನ ಬಾಯನ್ನು ಹೊಕ್ಕಿತು. ಶತ್ರುಸೇನೆಯ ರಕ್ತ ಜಲದ ನದಿಗಳು ಸಮುದ್ರವನ್ನು ಹೊಕ್ಕವು. ಶತ್ರುಗಳ ತಲೆಗಳು ಪಿಶಾಚಿಗಳ ಹೊಟ್ಟೆಯನ್ನು ಹೊಕ್ಕವು ಎಂದು ಹೇಳುತ್ತ ಆಕಾಶದಲ್ಲಿ ನಿಂತು ದೇವತೆಗಳು ನೋಡುತ್ತಿದ್ದರು. ವ|| ಆಗ ೪೯. ಕೃಷ್ಣನ ಬಿಲ್ಲು, ಈ ದೇವನಿಗೆ ಯಾರು ತಾನೆ ನನ್ನ ಹಾಗೆ ೧ ಕೋಟಿ ಯುಗಗಳಿಂದ ಬಿಡದೆ (ತಪ್ಪದೆ) ಇರುವಿಕೆ ಗರುಡನನ್ನು ವಾಹನವನ್ನಾಗಿ

---

೧. ಕಿಳನಲನ (ಮೊಅ) ೨. ಸೇನಾಸಮುದ್ರಾಂತರಮಂ (ಖ)

ವ|| ಅಂತೇಱಿಸಿ ಭುಜಬಲಾಟೋಪಾಖರ್ವಗರ್ವದಿಂ ಮೌರ್ವೀಲತಾಸ್ಫಾಲನಂಗೆಯ್ಯೆ

ಕುಳಭೂಭೃತ್ಸಂಧಿಬಂಧಂ ಕಳಲೆ ಕದಡೆ ವಾರಾಶಿಗಳ್ ದೈವತಾಸಂ
ಕುಳಪತ್ತ್ಯಾಶಂಕೆಯಿಂ ಕೈಕೊಳಲದಿರೆ ಮಹೀಮಂಡಲಂ ವ್ಯೋಮಗಂಗಾ
ಸಳಿಳಂ ತುಳ್ಕಾಡೆ ಚಂಡದ್ಯುತಿರಥತುರಗಂ ಬೆರ್ಚೆ ಪೊಣ್ಮಿತ್ತರಾತಿ
ಪ್ರಳಯಪ್ರಧ್ವಾನಧೀರಂ ಮುರಮಥನಧನುರ್ಜ್ಯಾಲತಾಘೋರಘೋಷಂ ೫೦

ಗಗನಂ ಬಾಣಾತ್ಮಕಂ ಮಾರ್ಪಡೆ ಪೆಣಮಯಮಾದತ್ತಿದೆಂತೀತನಂಬಂ
೧ತೆಗೆವಂದಂ ಪೂಡುವಂದಂ ಬಿಡುವುದಱಿಯಲಾಯ್ತಿಲ್ಲ ಕರ್ಣಾಗ್ರದೊಳ್ ಪೊ
ರ್ದುಗೆವೆತ್ತಾ ಮುಷ್ಟಿಯುಂ ಮಂಡಳಿಸಿದ ಧನುವುಂ ದಿಟ್ಟಿಪಾಲೋಕಮುಂ ನೆ
ಟ್ಟಗೆ ತೋಱುತ್ತಿರ್ದುವೆಂಬಂತಗಧರನಿಸುತಿರ್ದಂ ಸುದುರ್ಲಕ್ಷ್ಯವೇಗಂ ೫೧

ಶರಶರವರ್ಷಮನತ್ಯು
ದ್ಧುರಧುರದೊಳ್ ಕೃಷ್ಣಕೃಷ್ಣಮೇಘಂ ಕಱೆಯಲ್
ಪರಬಲಜೀವನಜೀವನ
ವರೆಯಾಗುತ್ತಿರ್ದುದಂತದೇನಚ್ಚರಿಯೊ ೫೨

ಪಡೆದಿರುವಿಕೆಯಿಂದ ೨ ಬಿಲ್ಲಿನ ಎರಡು ತುದಿಗಳಲ್ಲೂ ತಪ್ಪದೆ ಸೇರಿದ್ದುಕೊಂಡು ಬಾಣಗಳನ್ನು ವಹಿಸುವಿಕೆಯಿಂದ ನನ್ನನ್ನು ಹೋಲುವವನು ಇರುವನು? ಆ ಮಹತ್ತ್ವವು ನನಗೂ ಈ ದೇವನಿಗೂ ಮಾತ್ರವೇ ಇದೆ. ಆದರೂ ಈತ ನನ್ನ ಮತ್ತು ಶತ್ರುಸೇನೆಯ ಜೀವಾಕರ್ಷಣೆಯನ್ನು ೧ (ನನ್ನ ಹೆದೆಯ) ಎಳೆತವನ್ನು ೨ ಪ್ರಾಣದ (ಜೀವದ) ಸೆಳೆತವನ್ನು ಮಾಡುವನು. (ನಾನು ಶತ್ರುವಿನಂತಾದೆನಲ್ಲಾ!) ಎಂದು ನಾಚಿಕೆಯಿಂದ ಬಾಗಿತೋ ಎಂಬಂತೆ ಅಜೇಯನಾದ ಕೃಷ್ಣನು ಉಗ್ರಾಡಂಬರದ ಬಿಲ್ಲನ್ನು ಬಾಗಿಸಿ ಹೆದೆಯೇರಿಸಿದನು. ವ|| ಹಾಗೆ ಏರಿಸಿ ಭುಜ ಬಲಾಡಂಬರಾತಿ ಗರ್ವಗಳಿಂದ ಬಳ್ಳಿಯಂತಿರುವ ಮೌರ್ವಿಯನ್ನು ನೀವಿ ಟಂಕಾರ ಮಾಡಿದನು. ೫೦. ಶತ್ರುಗಳಿಗೆ ಪ್ರಳಯವನ್ನುಂಟುಮಾಡುವುದರಲ್ಲಿ ಧೈರ್ಯವುಳ್ಳದ್ದೂ ಘೋರವೂ ಆದ ಕೃಷ್ಣನ ಬಿಲ್ಲಿನ ಹೆದೆಯ ಆ ಟಂಕಾರವು ಹೊಮ್ಮಿತ್ತು. ಅದರಿಂದ ಕುಲಪರ್ವತಗಳ ಮತ್ತು ಭೂಮಿಯ ಸೇರುವೆಯ ಬಿಗಿಯು ತಪ್ಪಿ ಸಡಿಲವಾಯಿತು. ಸಮುದ್ರಗಳು ಕದಡಿ ಹೋದವು. ದೇವತೆಗಳ ಸಮೂಹವು ಅತ್ಯಾಶಂಕೆಯನ್ನು ಪಡೆಯಿತು. ಭೂಮಂಡಲವು ಅದುರಿತು. ಆಕಾಶಗಂಗೆಯ ನೀರು ತುಳುಕಾಡಿತು. ೫೧. ಆಕಾಶವು ಬಾಣಮಯವಾಯಿತು. ಶತ್ರುಸೇನೆ ಶವಮಯವಾಯ್ತು. ಇದು ಹೇಗೆ?! ಈತನು ಬಾಣಗಳನ್ನೂ (ಬತ್ತಳಿಕೆಯಿಂದ) ತೆಗೆಯುವುದೂ ಹೂಡುವುದೂ ಬಿಡುವುದೂ ತಿಳಿಯುವುದಿಲ್ಲ. ಕಿವಿಯ ತುದಿಯಲ್ಲಿ ಸೇರಿ ನಿಂತಿರುವ ಆ ಮುಷ್ಟಿಯೂ ಗುಂಡಾಗಿ ಬಾಗಿರುವ ಬಿಲ್ಲೂ, ನೋಡುವ ನೋಟವೂ ಸರಿಯಾಗಿ ಕಾಣುತ್ತಿವೆ. ಎನ್ನುವಂತೆ ಕೃಷ್ಣನು ಪ್ರಯೋಗಿಸುವ ಬಾಣಗಳು ಕಣ್ಣಿಗೆ ಕಾಣಿಸದಷ್ಟು ವೇಗವುಳ್ಳವುಗಳಾಗಿದ್ದವು. ೫೨. ಅತಿ ಪ್ರಬಲವಾದ ಯುದ್ಧದಲ್ಲಿ ಕೃಷ್ಣನೆಂಬ ಕಾಳಮೇಘವು ಶರವರ್ಷವನ್ನು = ೧ ಜಲವೃಷ್ಟಿ (ಮಳೆ)ಯನ್ನು (= ೨ ಬಾಣಗಳ ಮಳೆಯನ್ನು) ಕರೆಯುತ್ತಿದ್ದರೂ ಶತ್ರುಸೇನೆಯ

---

೧. ತೆಗೆವಂಬಂ ಪೂಡುವಂಬಂ (ಕಖಗ)

ನಾಂಟಿದುವರಿಭಟರಂಗಮ
ನೀಂಟಿದುವಸ್ರುವನಡರ್ತು ಮೀಂಟಿದುವೆಲ್ವಂ
ಸೀಂಟಿದುವಗ್ಗಳವೆಸರಂ
ದಾಂಟಿದುವಾವೆಡೆಯನಸುರಹರನ ಶರಂಗಳ್ ೫೩

ಯಾದವಕುಲನಿಸೆ ತಿಂತಿಣಿ
ಯಾದವನೀಪಾಲಬಲದ ಹಯಸಂತತಿಯಂ
ಸಾದಿಗಳಂ ರಣರೌದ್ರರ
ಸಾದಿಗಳಂ ತುಱುಗಿ ನಟ್ಟುವಸ್ತ್ರಾವಳಿಗಳ್ ೫೪

ಲಘುವೇಗತ್ವದಿನರ್ಧಚಂದ್ರಶರದಿಂದೆಚ್ಚಾಡೆ ಕೃಷ್ಣಂ ಮದೇ
ಭಘಟಾಕೋಟಿಗಳೆತ್ತಿಬರ್ಪ ಕರದಂಡಂಗಳ್ ವಿಖಂಡಗಳಾ
ಗಿ ಘನಧ್ವಾಂತಮನೆಯ್ದೆ ಪಾಱೆ ಪುದಿದಿರ್ದಾಕಾಶವಾರಾಶಿಘೋ
ರಘನೋರ್ಮಿಪ್ರಕರಂಬೊಲೇನಿನಿಸುಬೇಗಂ ಕಣ್ಗುರ್ವಾದುದೋ ೫೫

ತಂಡದೆ ಪೊಯ್ದು ಕೋಟಿಪರಿಸಂಖ್ಯೆಯ ಕೈಟಭಸೂದನಾಸ್ತ್ರದಿಂ
ಖಂಡಿಸಿ ಪಾಱಿದನ್ಯಬಲಯೊದ್ಧೃಶಿರಂ ಶತಕೋಟಿಗಳ್ ಮನಂ
ಗೊಂಡುವದೊಂದುಬೇಗಮುಸುರಾರಿಜಯೋತ್ಸವದೊಳ್ ಸುರರ್ ನಭೋ
ಮಂಡಲದಲ್ಲಿ ಕಟ್ಟಿದ ಫಲಾವಳಿಗಳ್ ದಿಟವಿಂತಿವೆಂಬಿನಂ ೫೬

ಜೀವನವೆಂಬ ಜೀವನವು = ೧ ನೀರು, (೨ ಜೀವ) ಕ್ಷೀಣಿಸುತ್ತಿದ್ದಿತು. ಇದೇನಾಶ್ಚರ್ಯವೊ?! ೫೩. ಕೃಷ್ಣನ ಬಾಣಗಳು ವೈರಿ ಭಟರ ಅಂಗಗಳಲ್ಲಿ ನಾಟಿದವು. ರಕ್ತವನ್ನು ಹೀರಿದುವು. ಒಳ ಹೊಕ್ಕು ಎಲುಬುಗಳನ್ನು ಮೀಟಿದವು. ಶ್ರೇಷ್ಠರು ಶೂರರು ಎಂಬ ಹೆಸರನ್ನು ತೊಡೆದುವು. ಎಲ್ಲೆಡೆಯನ್ನೂ ದಾಟಿದವು. ೫೪. ಯದುಕುಲದ ಕೃಷ್ಣನು ಪ್ರಯೋಗಿಸಿದ ಆ ಬಾಣಗಳು ಗುಂಪಾದ ರಾಜರ ಸೇನೆಯ ಕುದುರೆಗಳನ್ನು ರಣರೌದ್ರ ರಸಪಾನ ಮಾಡುವ ಮಾವುತರನ್ನು ರಾವುತರನ್ನೂ ಅಟ್ಟಿ ಒತ್ತಾಗಿ ನೆಟ್ಟವು. ೫೫. ಕೃಷ್ಣನು ಲಘುವೇಗದಿಂದಲೇ ಅರ್ಧಚಂದ್ರ ಬಾಣದಿಂದ ಯುದ್ಧ ಮಾಡಿದನು. ಮದ್ದಾನೆಗಳು ಹೊಡೆಯಲು ಎತ್ತಿಕೊಂಡು ಬರುವ ದಂಡಾಕಾರದ ಸೊಂಡಿಲುಗಳು ತುಂಡಾಗಿ ಹಾರಿ ಆಕಾಶದ ಕೊನೆಯನ್ನು ಸೇರಲು, ಆ ಸೊಂಡಿಲುಗಳು ಆಕಾಶ ಸಮುದ್ರದ ಭಯಂಕರವಾದ ದೊಡ್ಡ ಅಲೆಗಳ ಸಾಲಿನಂತೆ ಕಣ್ಣಿಗೆ ಭಯಂಕರವಾಗಿ ಕಾಣಿಸಿದವು. ೫೬. ಗುಂಪಾಗಿ ಹೊಡೆದ ಕೃಷ್ಣನ ಕೋಟಿಸಂಖ್ಯೆಯ ಅಸ್ತ್ರಗಳಿಂದ ಕತ್ತರಿಸಲ್ಪಟ್ಟು ಆಕಾಶಕ್ಕೆ ಹಾರಿದ ಶತ್ರುಸೈನ್ಯಯೋಧರ ನೂರುಕೋಟಿ ತಲೆಗಳು ಕೃಷ್ಣನ ಜಯೋತ್ಸವದಲ್ಲಿ ದೇವತೆಗಳು ನಿಜವಾಗಿಯೂ ಆಕಾಶಮಂಡಲದಲ್ಲಿ ಕಟ್ಟಿದ ಫಲಗಳಂತೆ ಮನೋಹರವಾಗಿದ್ದವು.

ವಿಶಿಖಾಸಾರಮುಪೇಂದ್ರಚಾಪಘನದಿಂ ಸೂಸಿತ್ತದೆತ್ತಂ ವರೂ
ಥಶತಂ ಭಿನ್ನಶರೀರಮಾಗೆ ಶರವಲ್ತುಲ್ಕಾಗಣಂ ಬಾಣವ
ಲ್ತಶನಿಶ್ರೇಣಿ ಪತತ್ರಿಯಲ್ತುರಗಜಾಲಂ ಪತ್ರಿಯಲ್ತುಗ್ರವ
ಹ್ನಿಶಿಖಾಸಂತತಿ ಕಾಂಡಮಲ್ತು ಯಮದಂಡವ್ರಾತಮೆಂಬನ್ನೆಗಂ ೫೭

ವ|| ಅಂತು ಶರವರ್ಷಮಂ ಕಱೆಯುತ್ತುಮಿರ್ದದೊಂದಭಿನವಾರ್ಭಟೆಯನಪ್ಪುಕೆಯ್ದು

ಬಲಿರಿಪು ಕಾಲಚಕ್ರದವೊಲೊರ್ವನೆ ಮಾರ್ಪಡೆಯಂ ಸ್ವಕೀಯಮಂ
ಡಲಗತಿಯಿಂದೆ ಸುತ್ತಿದನಿತಲ್ಲದೆ ಮುಂತಣ ಪಿಂತಣೆರ್ಕಲಂ
ಗಳ ಭಟರ್ಗೆಲ್ಲವೆಲ್ಲೆಡೆಯೊಳಂ ನೆರೆದಾಂತುದುಮಲ್ಲದಾ ಮಹಾ
ಬಲದನಿಬರ್ಗಮಂತನಿಬರಾಗಿಯೆ ತೋಱೆದನಾಜಿರಂಗದೊಳ್ ೫೮

ವ|| ಅಂತುಮಲ್ಲದೆ

ಆನೆನಿತು ಕೊಂದು ಪೋರ್ವೆಂ
ಸೇನೆಯನಿಂದಿಕ್ಕುವೆಂ ಕ್ಷಣಾರ್ಧದಿನೆಂದಾ
ದಾನವರಿಪು ದಿವಿಜಜಯ
ಧ್ವಾನಂ ಮಿಗೆ ಮೋಹನಾಸ್ತ್ರಮಂ ತೊಟ್ಟೆಚ್ಚಂ ೫೯

ಧುರದೊಳ್ ತಾನೆಚ್ಚ ಸಮ್ಮೋಹನಶರವಹಿತಾಷ್ಟಾದಶಾಕ್ಷೌಹಿಣೀವೀ
ರರುಮಂ ಪ್ರತ್ಯೇಕವೋರಂತಳಱೆ ಸುಟಿಯೆ ಮೋಹಾಂಧಕರ್ ತಮ್ಮೊಳೋರೊ
ರ್ವರನೊರ್ವರ್ ಕೃಷ್ಣನೆಂದಾಂತಿಱೆದು ಪಡಲಿಡುತ್ತಿರ್ದುದಂ ನೋಡುತಿರ್ದಂ
ಸರಲಂ ತೂಗುತ್ತೆ ಕೃಷ್ಣಂ ನಿಜಧನುತಟವಿನ್ಯಸ್ತಹಸ್ತಂ ಸ್ಮಿತಾಸ್ಯಂ ೬೦

೫೭. ಇದು ಬಾಣವಲ್ಲ ಕೆಂಡಗೊಳ್ಳಿಗಳ ಗುಂಪು, ಬಾಣವಲ್ಲ ಸಿಡಿಲಿನ ಸಾಲು; ಸರ್ಪಸಮೂಹ; ಅಗ್ನಿ ಜ್ವಾಲೆಯ ಗುಂಪು; ಯಮದಂಡಗಳ ರಾಶಿ, ಎನ್ನುವಂತೆ ಕೃಷ್ಣನ ಬಿಲ್ಲೆಂಬ ಮೋಡದಿಂದ ಬಾಣಗಳ ಮಳೆಯು ನೂರಾರು ರಥಗಳು ಒಡೆದು ಹೋಗುವಂತೆ ಎಲ್ಲ ಕಡೆಯಲ್ಲೂ ಸುರಿಯಿತು. ವ|| ಹಾಗೆ ಬಾಣಗಳ ಮಳೆಯನ್ನು ಕರೆಯುತ್ತ ಇದ್ದು, ಅದೊಂದು ಹೊಸದಾದ ಆರ್ಭಟವನ್ನು ಮಾಡಿದನು. ೫೮. ಬಲಿವೈರಿಯಾದ ಆ ಕೃಷ್ಣನು ಯುದ್ಧರಂಗದಲ್ಲಿ ಕಾಲ ಚಕ್ರದಂತೆ ಒಬ್ಬನೇ ಎದಿರು ಸೇನೆಯನ್ನು ತನ್ನ ಮಂಡಲಗತಿಯಿಂದ ಸುತ್ತಿದ್ದನು; ಅಲ್ಲದೆ ತನ್ನ ಮುಂದಿನ ಹಿಂದಿನ ಎರಡು ಪಕ್ಕಗಳ ಭಟರಿಗೆಲ್ಲ ಎಲ್ಲ ಕಡೆಯಲ್ಲೂ ಹತ್ತಿರ ಹೋಗಿ ಪ್ರತಿಭಟಿಸಿದ್ದಲ್ಲದೆ ಆ ಮಹಾಸೈನ್ಯದಲ್ಲಿರುವಷ್ಟು ಜನಕ್ಕೂ ಅಷ್ಟು ಜನ ವೀರರಾಗಿ ಕಾಣಿಸಿದವು. ವ|| ಅದೂ ಅಲ್ಲದೆ ೫೯. ನಾನು ಎಷ್ಟು ಹೊತ್ತನ್ನು ತೆಗೆದುಕೊಂಡು ಈ ಸೇನೆಯೊಡನೆ ಹೋರಾಡಲಿ ಅರ್ಧಕ್ಷಣದಲ್ಲೇ ಕೊಂದು ಹಾಕುತ್ತೇನೆ. ಎಂದುಕೊಂಡ ಕೃಷ್ಣನು, ದೇವತೆಗಳು ಜಯಕಾರವನ್ನು ಹೆಚ್ಚಾಗಿ ಮಾಡುತ್ತಿರಲು ಮೋಹನಾಸ್ತ್ರವನ್ನು ತೊಟ್ಟು ಹೊಡೆದನು. ೬೦. ಯುದ್ಧದಲ್ಲಿ ತಾನು ಪ್ರಯೋಗಿಸಿದ ಸಂಮ್ಮೋಹನಾಸ್ತ್ರವು ಶತ್ರುಗಳ ಹದಿನೆಂಟು ಅಕ್ಷೌಹಿಣೀಸೇನೆಯ ವೀರರೊಬ್ಬರಿಗೂ ಭಯಂಕರವಾಗಿ ಕಾಣಿಸಿತು. ಮೋಹದಿಂದ ಕುರುಡರಾದ ಅವರು ತಮ್ಮಲ್ಲೇ ಒಬ್ಬರನ್ನು ಮತ್ತೊಬ್ಬರು ಕೃಷ್ಣನೆಂದು

ವ|| ಅಂತು ತಮ್ಮೊಳ್ತಮ್ಮೊಳೆ ತಳ್ತಿಱಿದರಿಸೈನ್ಯದೊಳ್ [1]ಪದಿನೆಂಟಕ್ಷೌಹಿಣೀಬಲವಶೇಷಮಾಗೆ

ವಸುಧೆಯ ವಾರಿದಾಧ್ವದೆಡೆಯೊಳ್ ಕಣೆಗಳ್ತಲೆ ಕೊರ್ವಿ ನಿಂದಗು
ರ್ವಿಸೆ ಘನಮಾರ್ಗದೊಳ್ ಸರಲ ಸಂತತಿ ಪಂದರವಿಕ್ಕಿದಂತೆ ಸಂ
ಧಿಸಿ ನಿಲೆ ದಿಕ್ತಟಾಂತರದೊಳುಗ್ರಧನುರ್ಗುಣಟಂಕೃತಂ ವಿಜೃಂ
ಭಿಸೆ ಮಗಧಾದ್ಯನೇಕನೃಪರೊರ್ಮೆಯೆ ತಾಗಿದರಂದು ಶಾರ್ಙ್ಗಿಯಂ ೬೧

ಇದು ನೆಲನಿದು ದೆಸೆಯಿದು ನಭ
ಮಿದು ತಾನಿವರನ್ಯರೆಂಬ ಬಗೆಗಿಡೆ ನೃಪವ್ರಂ
ದದ ಕಱಿವಿಷುಗಳನಿಷುಜಾ
ಲದಿನೊಡನೊಡನೆಚ್ಚು ಕಡಿದು ತದನಂತರದೊಳ್ ೬೨

ಎನಗಂ ಬಿಲ್ಬಲ್ಮೆದೋರ್ಪುದ್ಧತರನಿವರ್ಗಳಂ ಚೈದ್ಯ ಮಾದ್ರೇಶ ದುರ್ಯೋ
ಧನ ರಾಧೇಯ ತ್ರಿಗರ್ತಾಧಿಪ ಮಗಧನೃಪಾಲಾದ್ಯರಂ ಕೊಲ್ವೆನೆಂದಾ
ವನಜಾಕ್ಷಂ ವೈಷ್ಣವಾಸ್ತ್ರಂದುಡೆ ಸುರರಗಿದರ್ ಸ್ಥಾಣುವಲ್ಲಾಡಿದಂ ಮೇ
ದಿನಿ ಕಂಪಂಗೊಂಡುದಂಭೋನಿಧಿ ಕದಡಿದುದೇನುಗ್ರಮೋ ವೈಷ್ಣವಾಸ್ತ್ರಂ ೬೩

ವ|| ಆಗಳನಿಲಪಥದೊಳೊಂದಶರೀರವಾಕ್ಯಮಿಂತೆಂದುದು :- ಎಲೆ ಮುಕುಂದಾ ನೀನೀ ಜರಾಸಂಧಪ್ರಭೃತಿನರಪಾಲರೊಳಾವಂಗಾಪವನಂ ಮೃತ್ಯುವಾಗಿ ಕಲ್ಪಿಸಿದೆ ಮುನ್ನಾ ಕ್ರಮದೆ

ಭಾವಿಸಿ, ಪ್ರತಿಭಟಿಸಿ ಇರಿದು ಕೊಂದು ದಿಕ್ಕುಪಾಲಾಗಿ ಚದುರಿ ಬೀಳುತ್ತಿರುವುದನ್ನು, ಕೃಷ್ಣನು ಬಾಣಗಳನ್ನು ತೂಗುತ್ತಾ ತನ್ನ ಬಿಲ್ಲಿನ ಮೇಲೆ ಕಯ್ಯಿಟ್ಟುಕೊಂಡು ನಗುತ್ತ ನೋಡುತ್ತಿದ್ದನು. ವ|| ಹಾಗೆ ತಮ್ಮ ತಮ್ಮಲ್ಲೇ ಪ್ರತಿಭಟಿಸಿ ಇರಿದು ಕೊಲ್ಲಲು ಶತ್ರು ಸೇನೆಯ ಹದಿನೆಂಟು ಅಕ್ಷೌಹಿಣಿಯೂ ನಿಶ್ಶೇಷವಾಯಿತು. ೬೧. ಆಗ ಜರಾಸಂಧನೇ ಮೊದಲಾದ ಹಲವರು ದೊರೆಗಳು ಒಟ್ಟಾಗಿ ಒಂದೇಸಾರಿ ಕೃಷ್ಣನ ಮೇಲೆ ಬಿದ್ದರು. ಅವರು ಹೊಡೆದ ಬಾಣಗಳಿಂದ ಭೂಮಿ ಮೇಘಗಳ ಮಧ್ಯಪ್ರದೇಶವು ಕತ್ತಲೆಯಿಂದ ತುಂಬಿದಂತಾಯಿತು. ಮೇಘದ ದಾರಿಯಲ್ಲಿ ಚಪ್ಪರವನ್ನು ಹಾಕಿದಂತೆ ಬಾಣಗಳು ಒಂದಕ್ಕೊಂದು ಸೇರಿ ನಿಂತವು. ದಿಗಂತಗಳವರೆಗೂ ಬಿಲ್ಲಿನ ಹೆದೆಯ ಟಂಕಾರ ಧ್ವನಿಯು ಅತ್ಯಧಿಕವಾಯಿತು. ೬೨. ಇದು ನೆಲ, ಇದು ದಿಕ್ಕು, ಇದು ಆಕಾಶ, ಇದು ತಾನು, ಇವರು ಬೇರೆಯವರು ಎಂದು ತಿಳಿಯದಂತೆ ಆ ರಾಜಸಮೂಹವು ಸುರಿಸುವ ಬಾಣಗಳನ್ನು ಬಾಣಗಳಿಂದಲೇ ಕೃಷ್ಣನು ಒಡನೆಯೇ ಹೊಡೆದು ಕತ್ತರಿಸಿ, ೬೩. ನನಗೂ ತಮ್ಮ ಬಿಲ್ಲಿನ ಶಕ್ತಿಯನ್ನು ತೋರಿಸುವ ಈ ಚೈದ್ಯ, ಮಾದ್ರೇಶ, ದುರ್ಯೋಧನ, ಕರ್ಣ, ತ್ರಿಗರ್ತಾಧಿಪ, ಜರಾಸಂಧನೇ ಮೊದಲಾದವರನ್ನು ಕೊಲ್ಲುವೆನೆಂದು, ವೈಷ್ಣವಾಸ್ತ್ರವನ್ನು ತೊಟ್ಟನು. ಆಗ ದೇವತೆಗಳು ಹೆದರಿದರು. ಈಶ್ವರನು ಅಲ್ಲಾಡಿದನು. ಭೂಮಿ ನಡುಗಿತು. ಸಮುದ್ರವು ಕದಡಿತು. ಆ ವೈಷ್ಣವಾಸ್ತ್ರವು ಅದೆಷ್ಟು ಉಗ್ರವಾದುದೋ! ವ|| ಆಗ ಆಕಾಶದಲ್ಲಿ ಒಂದು ಅಶರೀರವಾಣಿಯು ಹೀಗೆಂದಿತು: "ಎಲೆ ಮುಕುಂದಾ! ನೀನು ಈ ಜರಾಸಂಧನೇ

---

೧. ಪನ್ನೆರಡಕ್ಷೌಹಿಣೀಬಲಾವಶೇಷಮಾಗೆ (ಕಖಗ)

ಭೀಮಾರ್ಜುನಾದಿವೀರನೃಪರೆ ನಿಮಿತ್ತಮಾತ್ರಮಾಗೆ ಕತಿಪಯಕ್ಷಿತಿಪಾಲರಂ ನಿರ್ಮೂಪುದು; ನಿನ್ನಂಶಾಂಶದವತಾರಮೂರ್ತಿಯಿಂ [೧]ಲೋಕಲುಂಟಾಕರನಾವ ಪದದೊಳ್ ಮಡಿಯಿಸಲ್ವೇಡಿರ್ದಪು ದವರವರನಂತಂತೆ ಮಡಿಯಿಪುದು; ಒಂದೆ ಸಮಯದೊಳಿಂದೆ ಸಕಲದುರ್ವಿಳಸಿತ ಕ್ಷತ್ರಿಯರಂ ಸಂಹಾರಂಮಾಡೆ ಮುಂದೆ ನೆಗಲ್ವ ಭಾರತಯುದ್ಧಂ ಕಿಡುಗುಂ; ಉಡುಗುಡುಗು ವೈಷ್ಣವಾಸ್ತ್ರಮಂ- ಎನೆ ಭುವನವ್ಯಾಪಾರನಾ ಮಹಾಸ್ತ್ರಮನುಪಸಂಹರಿಸಿ ಮತ್ತಂ ಸಮರವಿಜಯಚಿಹ್ನಮಂ ಪ್ರಕಟಿಸಲ್ ಬಗೆದು

ಪಱಿಯೆ ಕಿರೀಟಕೋಟಿಯನಿಸಲ್ ನೆಱಿದಂಗಿವರೀ ಶಿರಂಗಳಂ
ಪಱಿಯಿಸಲೊಲ್ಲೊಡೇನರಿದೆ ಶಾರ್ಙ್ಗಿಗೆನಲ್ ಹರಿ ಬಾಣಕೋಟಿಯಿಂ
ಪಱಿಯಿಸೆ ರಾಜಕೋಟಿಮಕುಟಂಗಳನಂತವು ಪಾಱಿ ಪೋಗಿ ಬಾಂ
ದೊಱಿಯ ವಿಚಿತ್ರವಾರಿರುಹಕೋಟಿವೊಲಿರ್ದುವದೊಂದು ಬೇಗದೊಳ್ ೬೪

ವ॥ ಅಂತು ಮಕುಟಭಂಗದೊಡನೆ ಮನೋಭಂಗಮಾಗೆ ಮಗಧಪ್ರಮುಖನಿಖಿಲ ನೃಪಾಲಕರ್ ಬೆಂಗೊಟ್ಟು ಪೋಪುದುಂ ಗಗನತಳದಿಂ ಭೂತಳದ ಮೇಲೆ ಕಱಿವನೇಕನೂತನಾನರ್ಘ್ಯ ಮಣಿಮಕುಟವೃಷ್ಟಿಯಿಂ ತಮ್ಮ ಮೇಲೆ ಕಱಿವ ಇಂದ್ರನ ವಿಚಿತ್ರ ಕುಸುಮಮಾಲಾವೃಷ್ಟಿ ಭ್ರಮರವೃಂದಕ್ಕೆ ಗಂಧಾನುಮೇಯಮಾಗೆ ವಸುದೇವನಂದನರ್ ವಿಜಯಲೀಲೆಯಂ ಕೈಕೊಂಡು ನಿಂದಾಗಳಾ ಮಹಾಹವಮಹೀವಳಯಮಂ ಕಣ್ಣೇವಿ ನೋಡಿ

ಮೊದಲಾದ ದೊರೆಗಳಲ್ಲಿ ಯಾವನಿಗೆ ಯಾವನನ್ನು ಮೃತ್ಯುವಾಗಿ ಕಲ್ಪಿಸಿರುವೆಯೋ ಅದೇ ಕ್ರಮದಲ್ಲಿ ಮುಂಚೆ ಭೀಮಾರ್ಜುನಾದಿಗಳೇ ನಿಮಿತ್ತಮಾತ್ರವಾಗುವಂತೆ ಕೆಲವರು ರಾಜರನ್ನು ಮಾತ್ರ ನಿರ್ಮೂಲಮಾಡಬೇಕು. ನಿನ್ನ ಅಂಶಾಂಶದ ಮೂರ್ತಿಯಿಂದ ಲೋಕಕಂಟಕರನ್ನು ಯಾವ ಯಾವ ಸಂದರ್ಭದಲ್ಲಿ ಕೊಲ್ಲಬೇಕಾಗಿದೆಯೋ ಅದೆ ಸಂದರ್ಭದಲ್ಲೇ ಹಾಗೆ ಹಾಗೆಯೇ ಕೊಲ್ಲಬೇಕು; ಒಂದೇ ಸಮಯದಲ್ಲಿ ಈಗಲೇ ಸಕಲ ದುರ್ವೃತ್ತ ಕ್ಷತ್ರಿಯರನ್ನೂ ಸಂಹಾರಮಾಡಿದರೆ ಮುಂದೆ ಪ್ರಸಿದ್ಧವಾಗಿ ನಡೆಯಬೇಕಾದ ಭಾರತ ಯುದ್ಧವು ಕೆಡುವುದು; ವೈಷ್ಣವಾಸ್ತ್ರವನ್ನು ಉಪಸಂಹರಿಸು, ಉಪಸಂಹರಿಸು" ಎನ್ನಲು ಪ್ರಪಂಚವ್ಯಾಪಾರವನ್ನರಿತ ಆ ಕೃಷ್ಣನು ಮಹಾಸ್ತ್ರವನ್ನು ಉಪಸಂಹರಿಸಿ ಮತ್ತೆ ಯುದ್ಧ ವಿಜಯ ಚಿಹ್ನೆಯನ್ನು ಪ್ರಕಟಿಸಲು ಯೋಚಿಸಿದನು. ೬೪. ಕಿರೀಟಕೋಟಿಯನ್ನು (ಅಗ್ರಭಾಗವನ್ನು) ಕತ್ತರಿಸುವಂತೆ ಬಾಣಗಳನ್ನು ಹೊಡೆಯಲು ಸಮರ್ಥನಾದ ಈ ಕೃಷ್ಣನಿಗೆ ಇವರ ತಲೆಗಳನ್ನು ಕತ್ತರಿಸುವುದು ಏನಸಾಧ್ಯ ಎನ್ನುತ್ತಿರಲು ಕೋಟಿ ಬಾಣಗಳಿಂದ ಕೋಟಿ ರಾಜರ ಕಿರೀಟಗಳನ್ನು ಹೊಡೆದನು. ಆ ಕಿರೀಟಗಳು ತಟ್ಟನೆ ಹಾರಿ ಹೋಗಿ, ದೇವಗಂಗೆಯಲ್ಲಿ ಸೇರಿ, ವಿಚಿತ್ರವಾದ ಕೋಟ್ಯಾಂತರ ಕಮಲಗಳಂತೆ ಕಾಣಿಸುತ್ತಿದ್ದವು. ವ॥ ಹಾಗೆ ಕಿರೀಟಭಂಗದೊಡನೆ ಮನೋಭಂಗವೂ ಆದುದರಿಂದ ಜರಾಸಂಧನೇ ಮೊದಲಾದ ರಾಜರೆಲ್ಲರೂ ಹಿಮ್ಮೆಟ್ಟಿಹೋದರು. ಆಗ ಆಕಾಶದಿಂದ ಭೂಮಿಯ ಮೇಲೆ ಸುರಿಯುವ ಅನೇಕ, ನವೀನವೂ ಅಮೂಲ್ಯವೂ ಆದ ಮಣಿಕಿರೀಟಗಳ ವೃಷ್ಟಿಯಿಂದ ತಮ್ಮ ಮೇಲೆ ಸುರಿಸುವ ಇಂದ್ರನ ವಿಚಿತ್ರ ಕುಸುಮ ವೃಷ್ಟಿಯೆಂಬ ಭ್ರಮೆಯು ತುಂಬಿಗಳಿಗೆ

---

೧. ಲೋಕಕಂಟಕರ (ಖ)

ಆಡಿದುವಿಂದರಾತಿಭಟರಟ್ಟೆಗಳಾಜಿಯೊಳೆನ್ನ ಕಾರ್ಯದ
ಚ್ಚಾಡಿದುದಿಂದು ಕೂಡಿದುದು ವೈರಿಬಲಾರುಣಸಿಂಧು ವಾರ್ಧಿಯಂ
ಕೂಡಿದುದೆನ್ನಪೇಕ್ಷೆ ಪಸಿವೋಡಿದುದಿಂದರಿಸೈನ್ಯದಿಂ ಜವಂ
ಗೋಡಿದುದೆನ್ನ ಕಣ್ಪಸಿವೆನುತ್ತೊಸೆದಾಡಿದನಂದು ನಾರದಂ ೬೫

ವ॥ ಅನ್ನೆಗಂ ಕೇಶೀಸೂದನಪ್ರಲಂಬಾಂತಕಲ್ಲಿಂ ತಳರ್ದು ಕರವೀರಪುರಾಭಿಮುಖರಾಗಿ ಬರುತ್ತಿರಲಂತದಂ ತತ್ಪುರವರೇಶ್ವರಂ ಸೃಗಾಲನರಪಾಲಂ ಕೇಳ್ದು ಪ್ರಳಯಕಾಲಜಲಧರದಂತೆ ಗಜಜಿ ಗರ್ಜಿಸಿ

ಗಣನೆಗೆ ಮೂವತ್ತಕ್ಷೌ
ಹಿಣಿಸೈನ್ಯಂ ಮಗಧನೃಪತಿಗಾದೊಡಮವನೊಳ್
ಪೊಣರಲ್ ಬರ್ಕುಂ ಬರ್ಕುಮೆ
ಪೊಣರಲ್ ರವಿದತ್ತದಿವ್ಯರಥಮುಳ್ಳೆನ್ನೊಳ್ ೬೬

ಸೇನಾಬಲದಿಂ ಪೊಣರ್ದಾ
ಭೂನಾಥರ ಮೊಗ್ಗು ಸಲ್ಲದೆನ್ನೊಳ್ ಕೃಷ್ಣಂ
ಗಾನೇಕಾಂಗದೆ ಗೆಲ್ವಪೆ
ನೀ ನೀರಜಮಿತ್ರದತ್ತ ರಥದಿನಮೋಘಂ ೬೭

ಪೋಗೆಲವೊ ದೂತ ಕೃಷ್ಣನ
ನೀಗಳೆ ಮೇಲೆತ್ತಿ ಬರಿಸು ಬಂದಪೆನಾನುಂ
ಬೇಗದಿನೆಂದಟ್ಟಿದ ಚರ
ನಾಗಳೆ ಬಂದೊದಜಿದಂ ಮುರಾಂತಕನಿದಿರೊಳ್ ೬೮

ಆಗಿದ್ದು ಆ ಕಿರೀಟಗಳಲ್ಲಿ ಸುಗಂಧವಿಲ್ಲದುದರಿಂದ ಪರಿಹಾರವಾಯಿತು! ವಸುದೇವ ನಂದನರು ವಿಜಯಲೀಲೆಯನ್ನು ಕೈಕೊಂಡು ನಿಂತರು. ಆಗ ಆ ಮಹಾಯುದ್ಧದ ಭೂಮಂಡಲವನ್ನು ಕಣ್ಣು ತುಂಬ ನೋಡಿ ೬೫. “ಇಂದು ಯುದ್ಧರಂಗದಲ್ಲಿ ಶತ್ರುಭಟರ ಮುಂಡಗಳು ಆಡಿದವು. ನನ್ನ ಕಾರ್ಯದ ಅಚ್ಚೂ ಆಡಿತು. ವೈರಿಸೇನೆಯ ರಕ್ತನದಿಯು ಸಮುದ್ರವನ್ನು ಸೇರಿತು. ನನ್ನ ಅಪೇಕ್ಷೆ ಕೈಗೂಡಿತು. ಶತ್ರುಸೇನೆಯಿಂದ ಯಮನ ಹಸಿವು ಓಡಿತು. ನನ್ನ ಕಣ್ಣಿನ ಹಸಿವೂ ಓಡಿತು” ಎಂದು ನಾರದನು ಸಂತೋಷದಿಂದ ಆಡಿದನು. ವ॥ ಅಷ್ಟರಲ್ಲಿ ಬಲರಾಮಕೃಷ್ಣರು ಅಲ್ಲಿಂದ ಹೊರಟು ಕರವೀರಪುರಾಭಿಮುಖವಾಗಿ ಬರುತ್ತಿದ್ದರು. ಅದನ್ನು ಆ ಪುರಾಧೀಶನಾದ ಸೃಗಾಲನೆಂಬುವನು ಕೇಳಿ ಪ್ರಳಯಕಾಲದ ಮೇಘದಂತೆ ಗಜರಿ ಗರ್ಜಿಸಿ, ೬೬. “ಲೆಕ್ಕಕ್ಕೆ ಮೂವತ್ತು ಅಕ್ಷೌಹಿಣೀ ಸೇನೆಯು ಮಗಧ ರಾಜನಿಗಿದ್ದರೂ ಅವನೊಡನೆ ಯುದ್ಧ ಮಾಡಬಹುದು; ಸೂರ್ಯದತ್ತವಾದ ರಥವುಳ್ಳ ನನ್ನೊಡನೆ ಯುದ್ಧವನ್ನು ಮಾಡಬಹುದೆ? ೬೭. ಸೇನೆಯ ಬಲದಿಂದ ಯುದ್ಧ ಮಾಡಿದ ಆ ರಾಜರನ್ನು ವಶಪಡಿಸಿಕೊಂಡಂತೆ ನನ್ನನ್ನು ಜಯಿಸಿ ವಶಪಡಿಸಿಕೊಳ್ಳಲು ಕೃಷ್ಣನಿಗೆ ಸಾಧ್ಯವಾಗುವುದಿಲ್ಲ. ಸೂರ್ಯನು ಕೊಟ್ಟಿರುವ ಈ ರಥದಿಂದ ನಾನು ಏಕಾಕಿಯಾಗಿಯೆ ನಿಜವಾಗಿಯೂ ಗೆಲ್ಲುತ್ತೇನೆ. ೬೮. ಎಲೋ; ದೂತ ಹೋಗು, ಕೃಷ್ಣನನ್ನು ಈಗಲೇ ನನ್ನ ಮೇಲೆತ್ತಿ ಬರಿಸು. ನಾನೂ ಬೇಗನೆ ಬರುತ್ತೇನೆ” ಎಂದು ಕಳುಹಿಸಿದ ಆ ಚರನು ಆಗಲೇ

ಆದಟಿಂ ಮುಂ ಗೆಲ್ದುದಂ ನೀಂ ನೆನೆನೆನೆದು ಭುಜಾಗರ್ವದಿಂ ಪೆರ್ಚದಿರ್ ಪೆ
ರ್ಚದಿರಿನ್ನೀ [1]ಗರ್ವದುರ್ವಂ ಬಿಡು ಬಿಡು ನಿನಗಿಂ ಸಲ್ಲದಿಂ ಸಲ್ಲದಿಂ ಸ
ಲ್ಲದು ಯುದ್ಧಕ್ರೀಡೆಗಣ್ಮಿಕ್ಕೆಲೆ ನಡೆ ನಡೆ ಕಂಸಾರಿ ಸೈತಾಗು ಸೈತಾ
ಗಿದಿರಾಂತೀಬಂದನೀಬಂದನೆ ಸಮರಧರಿತ್ರೀಕರಾಳಂ ಸೃಗಾಲಂ ೬೯

ಎಂದು [2]ಚರನೊದಱೆ ರಥಮುಂ
ಬಂದುದು ಹಯಖುರಮುಖಂಗಳಿಂ ನಭವಂ ಸೀ
ಳ್ವಂದದೆ ದಿಕ್ತಟಮಂ ಶರ
ವೃಂದದೆ ತೀವುತೆ [3]ಸೃಗಾಲರಥಿ ಬರ್ಪಿನೆಗಂ ೭೦

ಈ ರಥದ ರಥಿಯ ಪರಿ ಸಾ
ಧಾರಣವಲ್ಲೆಂದು ಶಾರ್ಙ್ಗಿ ಕಱಿವ ಮಹಾಸ್ತ್ರಾ
ಸಾರಕ್ಕಲಕ್ಷ್ಯಮಾಗೆ ಜ
ವಾರಭಟೆಯಿನಾಂತುವಾ ವರೂಥಹಯಂಗಳ್ ೭೧

ವಿವಿಧಗತಿಜವದಿನಭ್ರದೊ
ಳವನಿಯೊಳೆಣ್ದೆಸೆಯೊಳೆತ್ತಲುಂ ತೋಱುತ್ತುಂ
ಭುವನಂ ಕೂಡೆ ರಥಾದ್ವೈ
ತವಾದುದೆನೆ ಪರಿದುದಾ ಸೃಗಾಲವರೂಥಂ ೭೨

ಬಂದು ಕೃಷ್ಣನೆದುರಿಗೆ ಒದರಿದನು. ೬೯. "ಎಲೋ ಕಂಸಾರಿ, ನೀನು ಮುಂಚೆ ಗೆದ್ದ ಆ ಪರಾಕ್ರಮವನ್ನೇ ನೆನೆಸಿಕೊಂಡು ನೆನೆಸಿಕೊಂಡು, ಭುಜಗರ್ವದಿಂದ ಉಬ್ಬಬೇಡ, ಉಬ್ಬಬೇಡ. ಇನ್ನು ಈ ಗರ್ವವನ್ನು ಬಿಟ್ಟುಬಿಡು. ನಿನಗೆ ಇನ್ನು ಯುದ್ಧದ ಆಟ ನಡೆಯುವುದಿಲ್ಲ. ಪೌರುಷವನ್ನು ತೋರಿಸು ತೋರಿಸು. ಹೊರಡು ಹೊರಡು. ಸಿದ್ಧನಾಗು. ಯುದ್ಧಭೂಮಿಗೆ ಭಯಂಕರನಾದ ಸೃಗಾಲನು ನಿನಗಿದಿರಾಗಿ ಇದೋ ಈಗಲೇ ಬಂದನು" ೭೦. ಎಂದು ಚರನು ಒದರುತ್ತಿರುವಾಗಲೇ ಕುದುರೆಗಳ ಕಾಲ್ಗೊರಸುಗಳ ತುದಿಯಿಂದ ಆಕಾಶವನ್ನು ಸೀಳುವಂತೆ ದಿಗಂತಗಳನ್ನು ಬಾಣಗಳ ಸಮೂಹದಿಂದ ತುಂಬುತ್ತ ರಥಿಕನಾದ ಸೃಗಾಲನೂ ಬಂದನು. ೭೧. ಈ ರಥಿಕನ ರೀತಿಯು ಸಾಧಾರಣವಾದುದಲ್ಲ ಎಂದು ಕೃಷ್ಣನು ಸುರಿಸಲಾರಂಭಿಸಿದ ಮಹಾಸ್ತ್ರಗಳ ವೃಷ್ಟಿಗೆ ಗುರಿ ಸಿಕ್ಕದಂತೆ ವೇಗಾತಿಶಯಾಡಂಬರದಿಂದ ರಥದ ಕುದುರೆಗಳು ರಥವನ್ನು ವಹಿಸಿ ನಡೆದವು. ೭೨. ಆ ಸೃಗಾಲನ ತೇರು ವಿಧವಿಧವಾದ ಗಮನ ವೇಗದಿಂದ ಆಕಾಶದಲ್ಲೂ ಭೂಮಿಯಲ್ಲೂ ಎಂಟು ದಿಕ್ಕುಗಳಲ್ಲೂ ಎಲ್ಲ ಕಡೆಯಲ್ಲೂ ಕಾಣಿಸಿಕೊಳ್ಳುತ್ತ ಪ್ರಪಂಚವು ರಥಮಯವಾದುದೆಂಬಂತೆ ಓಡಾಡಿತು. ವ|| ಆ ದಿವ್ಯರಥದ ಚಿತ್ರಗತಿ ವೇಗವು ಅತಿ ಚಮತ್ಕಾರವಾಗಿರಲು ಕೃಷ್ಣನು ತನ್ನ

೧. ಗರ್ವಮಂ ನೀಂ ಬಿಡು ಬಿಡು ನಿನಗೀ ಪೌರುಷಂ (ಮೊಲ) ೨. ಚರನೊದಱುವಿನೆಗಂ (ಮೊಲ) ೩. ಸೃಗಾಲರಥವಾಕ್ಷಣದೊಳ್ (ಮೊಲ)

ವ|| ಆ ದಿವ್ಯರಥದ ಚಿತ್ರಗತಿವೇಗಮತಿಚಮತ್ಕಾರಮಾಗೆ ಚಾಣೂರಾಂತಕಂ ನಿಜಾಂತ ರಂಗದೊಳ್

ತಳೆದಪುದಾಜಿಕೇಳಿಗೆ ರಥಂ ಬಹುಮೂರ್ತಿಗಳಂ ರಥಂ ರಥಂ
ಗಳನುಗುಳ್ದಪ್ಪುದೆಣ್ದೆಸೆ ರಥಂಗಳನೀಂದಪುದೆತ್ತಲುಂ ಧರಾ
ತಳಮೆ ರಥಂಗಳಂ ಬೆಸಲೆಯಾಯ್ತೆನಲೊಂದೆ ಸಹಸ್ರಕೋಟಿವೋಲ್
ಬಳಸಿದುದಿಂತಿದಾ ಪರಶುರಾಮನೆ ಪೇಳ್ದ ರಥಂ ನಿರಾಕುಳಂ ೭೩

ಈ ರಥದ ಪರಿವ ಜವದಿಂ
ವೈರಿ ಸುದುರ್ಲಕ್ಷ್ಯನೆನಗಮಾಂ ಕಱಿವಸ್ತ್ರಾ
ಸಾರಂ ನಿಷ್ಫಲಮರಿಸಂ
ಹಾರಮದೆಂತಕ್ಕುಮೆಂದು ಹರಿ ಚಿಂತಿಸಿದಂ ೭೪

ಹರಿಯುಂ ಬ್ರಹ್ಮನುಮೆಯ್ದರಾ ರಥದ ಮೇಲಿರ್ದಂದು ತನ್ನೊಳ್ ದಿಟ
ಕ್ಕೆ ರಣಕ್ರೀಡೆಗೆನಿಪ್ಪುದಂ ಮಱೆದು ಕಟ್ಟಣ್ಮಿಂ ಸೃಗಾಲಂ ರಥಾಂ
ತರದಿಂ ತೊಟ್ಟನೆ ಪಾಯ್ದು ಕಟ್ಟಿದಲಗಂ ಕಿೞ್ತಿಯ್ದಿ ಕೃಷ್ಣಾಸಿಯಿಂ
ಧರೆಯೊಳ್ ಬಿಟ್ಟನದಂತೆ ಬುದ್ಧಿ ಕಿಡುಗುಂ ಕೇಡೆಯ್ದುವಂದಾರೊಳಂ ೭೫

ವ|| ಅಂತಾ ಸೃಗಾಲನಂ ಸೃಗಾಲ ಕೌಲೇಯಕ ಕಾಕ ಗೃಧ್ರಸಮಾಜಕ್ಕೆ ಭಾಜನಂ ಮಾಡಿ ಬೞಿಕ್ಕಮಾ ದಿವ್ಯರಥದ ಸಮೀಪಕ್ಕೆ ವಂದು, ಅನಂತದ್ಯುಮಣಿಪ್ರಕಾಶನದಱ ಮಣಿರಚನಾವಿಶೇಷಮಂ, ಕುಶೇಶಯದಳವಿಶಾಲಾಕ್ಷನದಱಕ್ಷವಿಸ್ತಾರಮುಮಂ, ಧೃತಸುದರ್ಶನಚಕ್ರನದಱ ಚಕ್ರಪರಿಕ್ರಮಮುಮಂ,

ಅಂತರಂಗದಲ್ಲಿ ೭೩. "ಈ ರಥವು ಯುದ್ಧಕ್ರೀಡೆಗೆ ಬಹುರೂಪಗಳನ್ನು ಧರಿಸುತ್ತದೆ, ಈ ರಥವೇ ರಥಗಳನ್ನು ಉಗುಳುತ್ತಿದೆ, ಎಂಟು ದಿಕ್ಕುಗಳೂ ರಥಗಳನ್ನು ಹೆರುತ್ತಿವೆ. ಭೂತಲವೇ ಎಲ್ಲ ಕಡೆಯಲ್ಲೂ ರಥಗಳನ್ನು ಈನುತ್ತಿದೆ. ಎನ್ನುವಂತೆ ಒಂದು ರಥವೇ ಸಾವಿರ ಕೋಟಿ ರಥದಂತೆ ಸುತ್ತುವರಿಯುತ್ತಿದೆ. ಆದುದರಿಂದ ಇದೇ ಸಂಶಯವಿಲ್ಲದೆ ಆ ಪರಶುರಾಮನು ಹೇಳಿದ ರಥವಾಗಿರಬೇಕು. ೭೪. ಈ ರಥವು ಅತಿಥಿವೇಗದಲ್ಲಿ ಓಡುವುದರಿಂದ ನನಗೂ ವೈರಿಯ ಗುರಿ ಸುತರಾಂ ಸಿಕ್ಕುವುದಿಲ್ಲ. ನಾನು ಕರೆಯುವ ಅಸ್ತ್ರವೃಷ್ಟಿ ನಿಷ್ಫಲ. ಆದುದರಿಂದ ಈ ವೈರಿಯನ್ನು ಹೇಗೆ ಸಂಹರಿಸಲಿ?" ಎಂದು ಚಿಂತಿಸಿದನು. ತಾನು ಆ ರಥದ ಮೇಲಿರುವಾಗ ಹರಿಯೂ ಬ್ರಹ್ಮನೂ ತನ್ನೊಡನೆ ಯುದ್ಧಕ್ರೀಡೆಗೆ ಬರುವುದಿಲ್ಲ ಎಂಬುದನ್ನು ಸೃಗಾಲನು ಮರೆತು ಕಠಿನವಾದ ಪೌರುಷವುಳ್ಳವನಾಗಿ ರಥದಿಂದ ಕೆಳಕ್ಕೆ ತಟ್ಟನೆ ದುಮಿಕಿ ಕಟ್ಟಿಕೊಂಡಿದ್ದ ಕತ್ತಿಯನ್ನು ಕಿತ್ತು ಕೃಷ್ಣನನ್ನು ಹೊಡೆಯುವುದಕ್ಕಾಗಿ ಅವನ ಮೇಲೆ ನುಗ್ಗಿ ಅವನ ಕತ್ತಿಯಿಂದ ಹತನಾಗಿ, ಭೂಮಿಯ ಮೇಲೆ ಬಿದ್ದನು. ಕೇಡು ಒದಗುವಾಗ ಯಾರಿಗಾದರೂ ಬುದ್ಧಿ ಕೆಟ್ಟು ಹೋಗುವುದು. ವ|| ಕೃಷ್ಣನು ಹಾಗೆ ಆ ಸೃಗಾಲನನ್ನು ನರಿನಾಯಿಕಾಗೆಹದ್ದುಗಳ ಗುಂಪಿಗೆ ಪಾತ್ರವನ್ನಾಗಿ ಮಾಡಿ, ಬಳಿಕ ಆ ದಿವ್ಯರಥದ ಸಮೀಪಕ್ಕೆ ಬಂದನು. ಅನಂತ ಸೂರ್ಯನಂತೆ ಪ್ರಕಾಶಿಸುವ ಅವನು ಅದರ ರತ್ನ ರಚನೆಯ ಅಪೂರ್ವತೆಯನ್ನು ಕಮಲಗಳ ವಿಶಾಲಾಕ್ಷನಾದ

ವಿನಿರ್ಮೂಲಿತಕಾಲನೇಮಿಯದಱ ನೇಮಿವಳಯವಿಳಾಸಮುಮಂ, ದಕ್ಷಿಣೇತರಕರತಳೋದ್ಧಾರಿತ ಗೋವರ್ಧನಾಭೀಳಕುತ್ಕೀಲನದಱ ಕೀಲ ಭಂಗಿಯುಮಂ, ದೈತ್ಯಕುಲಕದಳೀವನಮತ್ತವಾರಣನದಱ ಮತ್ತವಾರಣಸ್ಥಿತಿಯುಮಂ, ರೂಪಾಧರೀಕೃತಶೃಂಗಾರಜನ್ಮ ಜಯಂತ ನಳಕೂಬರನದಱ ನಳಕೂಬರವಿಭೂತಿಯುಮಂ, ಇಚ್ಛಾಮಾತ್ರವ್ಯವಸ್ಥಿತ ಸಮಸ್ತಯುಗನದಱ ಯುಗಶೋಭೆಯುಮಂ, ಯಾತುಧಾನಸಂತಾನ ಧೂಮಕೇತುವದಱ ಕೇತುದಂಡೋನ್ನತಿಯುಮಂ, ತನುಕಾಂತಿವಿಜಿತ ಸಜಳಬಳಾಹಕನದಱ ಬಳಾಹಕನೆಂಬ ವಾಹಮುಮಂ, ಪರಿಕಲಿತಕೌಸ್ತುಭವಿಭೂಷಾಲಂಕೃತಸುಗ್ರೀವನದಱ ಸುಗ್ರೀವನೆಂಬ ವಾಜಿಯುಮಂ, ಪಾಂಚಜನ್ಯನಿನದಶ್ರವಣಮಾತ್ರ ವಿತ್ರಾಸಿತ ಶತ್ರುಸೈನ್ಯನದಱ ಶತ್ರುಸೈನ್ಯನೆಂಬಶ್ವಮುಮಂ, ಅವಾರ್ಯಸಂಹೃತಾಸುಹೃದ್ಬಲಾಂಗನಾಬಾಷ್ಪಮೇಘಪುಷ್ಪನದಱ ಮೇಘಪುಷ್ಪನೆಂಬ ತುರಗಮುಮಂ, ನಿಜಾಗ್ರಜಂಗೆ ತೋಱಿ ನಾಡೆಯುಂ ಮೆಚ್ಚಿ ಬಿಚ್ಚಳಿಸಿ ರೌಹಿಣೇಯಸನಾಥನಾ ವರೂಥಮನಲಂಕರಿಸಿ ಕರವೀರಪುರಕ್ಕೆ ನಡೆದು ಸೃಗಾಲತನಯನಂ ತದ್ರಾಜ್ಯದೊಳ್ ನಿಲಿಸಿ ಮಗುಟ್ದು ಬಂದು ಮಧುರಾಪುರದ ಪೊಱವೊೞಲನೆಯ್ದಿದಲ್ಲಿ

ಆರುಮನಾತ್ಮವಿಭ್ರಮವದಿರ್ಪವಿನಂ ನಡೆತಂದು ಮಂಗಳ
ಶ್ರೀರಮಣೀಸಖೀಜನಮೆನಲ್ಕಿದಿರ್ಗೊಂಡು ನಿಜೇಕ್ಷಣಾಮೃತಾ
ಸಾರದೆ ಬೆಳ್ಪನಿರ್ಮಡಿಸಿ ನಿರ್ಮಲಮುಕ್ತಕಮೌಕ್ತಿಕಾಕ್ಷತಾ
ಸಾರಮನಂದು ಸೂಸಿದುದುಪೇಂದ್ರನ ಮೇಲೆ ಪುರಾಂಗನಾಜನಂ ೭೬

ಅವನು ಅದರ ಅಕ್ಷದ, ವಿಸ್ತಾರವನ್ನೂ, ಆ ಸುದರ್ಶನ ಚಕ್ರಧಾರಿಯು ಅದರ ಚಕ್ರದ ಸುಖವಾದ ತಿರುಗುವಿಕೆಯನ್ನೂ ಕಾಲಯವನನ್ನು ನಿರ್ಮೂಲಗೊಳಿಸಿದ ಅವನು ಚಕ್ರದ ಹೊರಸುತ್ತಿನ ಬಳೆಯ ಸೊಗಸನ್ನೂ ಎಡಗಯ್ಯಿಂದಲೇ ಭಯಂಕರವಾದ ಗೋವರ್ಧನ ಗಿರಿಯನ್ನು ಎತ್ತಿ ಹಿಡಿದವನು ಅದರ ಕೀಲಿನ ರೀತಿಯನ್ನೂ ರಾಕ್ಷಸಕುಲವೆಂಬ ಬಾಳೆಯ ಗಿಡಗಳಿಗೆ ಮತ್ತವಾರಣನು ಅದರ ಮತ್ತವಾರಣ (ಆಧಾರವಾಗಿ ಮುಂದಕ್ಕೆ ಚಾಚಿಕೊಂಡಿರುವ ಭಾಗ)ದ ಸ್ಥಿತಿಯ್ನೂ ತನ್ನ ರೂಪದಿಂದ, ಕಾಮ, ಜಯಂತ ನಳಕೂಬರರನ್ನು ಕೀಳೆನಿಸಿದವನು ಅದರ ನಳಕೂಬರ (ಮೂಈಸು)ದ ಐಶ್ವರ್ಯವನ್ನೂ ಇಚ್ಛಾಮಾತ್ರದಿಂದಲೇ ಸಕಲಯುಗಗಳನ್ನೂ ವ್ಯವಸ್ಥೆಗೊಳಿಸಿದವನು ಅದರ ನೊಗದ ಸೊಗಸನ್ನೂ ರಾಕ್ಷಸಸಂತಾನಕ್ಕೆ ಧೂಮಕೇತುವು ಅದರ ಕೇತು (ಧ್ವಜ)ದಂಡದ ಔನ್ನತ್ಯವನ್ನೂ ದೇಹಕಾಂತಿಯಿಂದ ಜಲಪೂರ್ಣವಾದ ಬಲಾಹಕ (ಮೇಘ)ವನ್ನು ಜಯಿಸಿದವನು ಅದರ ಬಲಾಹಕನೆಂಬ ಕುದುರೆಯನ್ನೂ, ಕೌಸ್ತುಭರತ್ನವನ್ನು ವಹಿಸಿರುವ ಸುವರ್ಣರತ್ನಹಾರದಿಂದ ಅಲಂಕೃತವಾದ ಸುಗ್ರೀವ ಸುಂದರವಾದ ಕೊರಳುಳ್ಳವನು ಅದರ ಸುಗ್ರೀವವೆಂಬ ಕುದುರೆಯನ್ನೂ, ಪಾಂಚಜನ್ಯ ಶಂಖಧ್ವನಿಯನ್ನು ಕೇಳಿಸಿಯೇ ಶತ್ರುಸೈನ್ಯವನ್ನು ನಡುಗಿಸಿದವನು, ಅದರ ಶತ್ರುಸೈನ್ಯವೆಂಬ ಕುದುರೆಯನ್ನೂ, ಅನಿವಾರ್ಯವಾಗಿ ಸಂಹರಿಸಿ, ಶತ್ರುಸೇನಾಭಟರ ಪತ್ನಿಯರ ಕಣ್ಣಿನಲ್ಲಿ ಮೇಘಪುಷ್ಪವು (ನೀರು) ಬರುವಂತೆ ಮಾಡಿದವನು ಅದರ ಮೇಘಪುಷ್ಪವೆಂಬ ಕುದುರೆಯನ್ನೂ ತನ್ನ ಅಣ್ಣನಿಗೆ ತೋರಿಸಿ, ಹೆಚ್ಚಾಗಿ ಮೆಚ್ಚಿ ವಿವರಿಸಿ, ಆ ಬಲರಾಮನೊಡನೆ ಆ ರಥವನ್ನಲಂಕರಿಸಿ, ಕರವೀರಪುರಕ್ಕೆ ನಡೆದು ಸೃಗಾಲನ ಮಗನನ್ನು ಅವನ ರಾಜ್ಯದಲ್ಲಿ ನಿಲ್ಲಿಸಿ, ಹಿಂದಿರುಗಿ ಮಧುರಾಪುರಿಯ ಹೊರವಳಯಕ್ಕೆ ಬಂದುನಿಂತನು. ೭೬. ಮಧುರಾಪುರದ ವನಿತೆಯರು, ತಮ್ಮ ಬೆಡಗು ಎಲ್ಲರನ್ನೂ ವಿಚಲಿತರನ್ನಾಗಿ ಮಾಡುತ್ತಿರಲು ಮಂಗಳಶ್ರೀಯ ಸಖೀಜನರಂತೆ ಕೃಷ್ಣನನ್ನು ಇದಿರುಗೊಂಡು ತಮ್ಮ ದರ್ಶನಾಮೃತಸಾರದಿಂದ ಬಿಡಿಮುತ್ತಿನ ಅಕ್ಷತೆಯ ಬಿಳುಪನ್ನು ಎರಡರಷ್ಟನ್ನಾಗಿ

ವ॥ ಅಂತು ಪೌರನಾರೀಜನದ ಸೂಸುವ ಸೇಸೆಗಳನಾಂತುಕೊಂಡ್ಮುತ್ಸವಾನೀಕನಿಕಾಯ ಗೇಯಪ್ರಘೋಷಮೆಸೆಯೆ ಪೊಟಲಂ ಪೊಕ್ಕು ಪಂಚರತ್ನಮಯತೋರಣದ್ವಾರಸಮಾಜವಿರಾಜಮಾನಮಪ್ಪ ರಾಜಮಾರ್ಗದೊಳಗೆ ನಡೆತಂದು ಅನೇಕಮಂಗಳ ಪರಿಕರಂಗಳಿಂ ಕರಂ ಸೊಗಯಿಸುವರಮನೆಯಿಂ ಪ್ರವೇಶವಿಲಾಸದಿಂದಲಂಕರಿಸಿ ವಸುದೇವೋಗ್ರಸೇನಾದಿಗಳ್ಗೆ ತಾಂ ಪೋಗಿ ಬಂದ ಕಾರ್ಯವೃತ್ತಾಂತಮಂ ಕಾಮಪಾಲಂ ಪೇಟ್ ನಿತ್ಯಲೀಲೆಯಿಂ ಕೆಲವು ದಿವಸಮಂ [1]ಕಳಿಪುತ್ತುಮನುದಿನಂ ಚರರ ಬಿನ್ನಪದಿಂ ದೇಶವಾರ್ತೆಗಳನಾಲಿಸುತ್ತಿರ್ಪನ್ನೆಗಮೊಂದು ಸಮಯದೊಳೊರ್ವಂ ವಿಖ್ಯಾತ ದೂತನೋಲಗಸಾಲೆಯಂ ಪೊಕ್ಕು ಪುರುಷೋತ್ತಮಂಗವನತೋತ್ತಮಾಂಗನಾಗಿ ಪೊಡೆಮಟ್ಟು

ಧರೆಯೊಳ್ ರಾಜ್ಯವಿಶೂನ್ಯರಿರ್ಕೆ ಬರಲಿಂ ಸಿಂಹಾಸನಸ್ಥರ್ ಸ್ವಯಂ
ವರಮುಸ್ಮತ್ಸುತೆಗೆಂದು ಕುಂಡಿನಪುರೇಶಂ ಭೀಷ್ಮಕಂ ಸಾರಿಸಲ್
ನೆರೆದೀಗಳ್ ಮಗಧಾದಿಗಳ್ ಮಣಿಮಯಶ್ರೀಮನ್ಮಹಾಮಂಡಪಾಂ
ತರ ಸಿಂಹಾಸನಕೋಟಿಯೊಳ್ ವಿಭವದಿಂ ಬಂದಿರ್ದಪರ್ ಭೂಭುಜರ್ ೭೭

ವ॥ ಎಂದು ಬಿನ್ನವಿಸೆ ಸಕಲಜ್ಞಂ ತನ್ನೊಳನುಮಾನಿಸಿ

*ಆನಂಶಾಂಶದೆ ಪುಟ್ಟಿರೆ
ತಾನುಂ ತನ್ನಂಶದಿಂದೆ ಭೀಷ್ಮಕಸುತೆಯಂ
ಬೀ ನೆವದೆ ಲಕ್ಷ್ಮಿ ಪುಟ್ಟಿದ
ಳಾನಿರೆ ತತ್ಕನ್ಯೆಗಾರಿದಿರ್ಗಡ ಭೂಪರ್ ೭೮

ಮಾಡುತ್ತಾ ಅದನ್ನು ಅವನ ಮೇಲೆ ಕಳಿಸಿದರು. ವ॥ ಹಾಗೆ ಪುರವನಿತೆಯರು ಎರಚುವ ಅಕ್ಷತೆಗಳನ್ನು ಧರಿಸಿ, ಮಂಗಳೋತ್ಸವ ಸೂಚಕವಾದ ವಾದ್ಯಗಾನ ಧ್ವನಿಯು ಹೊಮ್ಮುತ್ತಿರುವಲ್ಲಿ ಪಟ್ಟಣವನ್ನು ಪ್ರವೇಶಿಸಿ ಪಂಚರತ್ನಮಯವಾದ ಹೊರಬಾಗಿಲುಗಳಿಂದ ವಿರಾಜಿಸುವ ರಾಜಮಾರ್ಗದಲ್ಲಿ ಬಂದು, ಅನೇಕ ಮಂಗಳ ಪರಿಕರಗಳಿಂದ ವಿರಾಜಿಸುವ ಅರಮನೆಯನ್ನು ಪ್ರವೇಶ ವಿಲಾಸದಿಂದ ಅಲಂಕರಿಸಿದನು. ವಸುದೇವ ಉಗ್ರಸೇನನೇ ಮೊದಲಾದವರಿಗೆ ತಾವು ಹೋಗಿಬಂದ ವೃತ್ತಾಂತವನ್ನು ಬಲರಾಮನು ಹೇಳಲು, ಲೀಲೆಯಿಂದ ಕೆಲವು ದಿನಗಳು ಕಳೆದವು. ಒಂದು ದಿನ ಚರರ ಬಿನ್ನಪದಿಂದ ದೇಶಸಮಾಚಾರಗಳನ್ನು ಕೇಳುತ್ತಿರುವಾಗ, ಪ್ರಸಿದ್ಧನಾದ ಚಾರನೊಬ್ಬನು ಸಭಾಗೃಹವನ್ನು ಪ್ರವೇಶಿಸಿ ಕೃಷ್ಣನಿಗೆ ತಲೆಬಾಗಿ ವಂದಿಸಿದನು. ೭೭. "ಕುಂಡಿನ ಪುರೇಶನಾದ ಭೀಷ್ಮಕನು-ನನ್ನ ಮಗಳಿಗೆ ಸ್ವಯಂವರ. ಭೂಮಿಯಲ್ಲಿ, ರಾಜ್ಯವಿಲ್ಲದವರು ಬೇಡ. ಸಿಂಹಾಸನಾಧಿಪತಿಗಳು ಮಾತ್ರ ಸ್ವಯಂವರಕ್ಕೆ ಬರಲಿ" ಎಂದು ಸಾರಿಸಿದನು. ಆದುದರಿಂದ ಮಗಧೇಶಜರಾಸಂಧನೇ ಮೊದಲಾದ ರಾಜರು ಅಲ್ಲಿಗೆ ಬಂದು ಸೇರಿ ರತ್ನಖಚಿತವಾಗಿ ಪ್ರಕಾಶಿಸುವ ಸ್ವಯಂವರ ಮಂಟಪದಲ್ಲಿರುವ ಕೋಟಿ ಸಿಂಹಾಸನಗಳಲ್ಲಿ ವೈಭವಯುತವಾಗಿ ಕುಳಿತಿರುವರು". ವ॥ ಎಂದು ಆ ಚರನು ಬಿನ್ನವಿಸಿದನು. ಸರ್ವಜ್ಞನಾದ ಕೃಷ್ಣನು ತನ್ನಲ್ಲೆ ಅನುಮಾನಿಸಿ. ೭೮. ನಾನು ಅಂಶಾಂಶದಿಂದ ಹುಟ್ಟಿದ್ದೇನೆ. ಲಕ್ಷ್ಮಿಯೂ ತನ್ನ ಅಂಶದಿಂದ ಭೀಷ್ಮಕನ ಮಗಳೆಂಬ ನೆವದಿಂದ ಹುಟ್ಟಿದ್ದಾಳೆ. ಹೀಗಾಗಿ ನಾನಿರುವಾಗ ಆ ಕನ್ಯೆಯನ್ನು ಯಾವ

---

೧. ಕಳಿವುತ್ತು (ಖ)

* ಆನಿರುತಿರೆ ತ್ರಿಜಗದ್ವಿಭು । ಮಾನಿನಿ ಪೆಱಳಲ್ಲ ಲಕ್ಷ್ಮಿ ಲಕ್ಷ್ಮೀಶನೆನಾಂ ॥
ಏನಿದನಱಿಯರೆ ಮಿಕ್ಕಿನ । ಭೂನಾಥರ್ ಬಱಿದೆ ಬಯಸಲೇಂ ರುಕ್ಮಿಣಿಯಂ ॥ (ಖಗ)

ವ|| ಅಂತುಮಲ್ಲದೆಯಾ ಧೂರ್ತನೆನ್ನನೆ [1]ಕುಱಿತು ರಾಜ್ಯಾರ್ಹರಲ್ಲದವರ್ ಬರವೇಡ ಸಿಂಹಾಸನಸ್ಥರೆ ಬರ್ಪುದೆಂದು ಸಾಱಿಸಿ ಭೀಷ್ಮಕಂ ನೆರಪಿದಾ ದರ್ಪಿಷ್ಠದುಷ್ಟಸಭೆಯಂ ತಾರ್ಕ್ಷ್ಯಪಕ್ಷಪವನನಿಂದಲ್ಲಕಲ್ಲೋಲಮಪ್ಪಂತು ಮಾಡುವೆನಾ ಸಭಾಜನಂ ನೋಡೆ ದಿವಿಜರಾಜನಿಂದೆನಗೆ ರಾಜರಾಜಾಭಿಷೇಕಮಂ ಮೆಱೆಯಿಸುವೆನಲ್ಲಿಗೀಗಳೆ ಪರಿಯಿಡುವೆನೆಂದು ತನ್ನೊಳ್ ನಿಶ್ಚಯಿಸಿ

ನೀವಿರಿಮೆಂದು ಪೇೞ್ದು ಪುರರಕ್ಷೆಗೆ ಲಾಂಗಲಿಯಂ ಸಮಸ್ತಸೇ
ನಾವಳಿಯಂ ಬರಲ್ ಬೆಸಸಿ ಸೈನ್ಯಬಲಾಹಕ ಮೇಘಪುಷ್ಪ ಸು
ಗ್ರೀವಹಯಂಗಳಿಂದೆಸೆವ ದಾರುಕಚೋದಿತಮಪ್ಪ ತೇರನಿಂ
ದೀವರನಾಭನೇಱೆ ತಳರ್ದಂ ಮಧುರಾಪುರದಿಂದಧೋಕ್ಷಜಂ ೭೯

ವ|| ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ಯೆ

ಇದು ಚಿತ್ರಂ ತೇನತೇನಂ ನೆಗೆದುದು ಬಹುವರ್ಣಾಂಬುದಾನೀಕಮಾಕಾ
ಶದೊಳೆಂಬಂತಾತ್ಮಪಕ್ಷಪ್ರಬಳಶಬಳಿಮಚ್ಛಾಯೆ ಚೆಲ್ವಾಗೆ ಸಂರಂ
ಭದೆ ಬಂದಂ ಪಕ್ಷಿರಾಜಂ [2]ಪ್ಲುತ ಭರಮರುದುತ್ಥಾಬ್ಧಿವೀಚೀಸಮಾಜಂ
ಛದನಚ್ಛನ್ನಾರ್ಕತೇಜಂ ವಿಜಿತದಿವಿಜರಾಜಂ ಸುಪರ್ಣೀತನೂಜಂ ೮೦

ವ|| ಅಂತು ಬಂದು ವಿನಯವಿನಮಿತಮೂರ್ಧನುಂ ಬದ್ಧಾಂಜಲಿಯುಮಾಗಿ ಮುಂದೆ

ಭೂಪನು ತಾನೆ ವರಿಸಲು ಎದಿರಿಗೆ ನಿಲ್ಲಬಲ್ಲನು! ವ|| ಅದೂ ಅಲ್ಲದೆ ಆ ಧೂರ್ತನು ನನ್ನನ್ನೇ ಕುರಿತು, "ರಾಜ್ಯಾರ್ಹರಲ್ಲದವರು ಬರಬಾರದು. ಸಿಂಹಾಸನಸ್ಥರೇ ಬರಬೇಕು!' ಎಂದು ಸಾರಿಸಿರುವನು. ಆ ಭೀಷ್ಮಕನು ಸೇರಿಸಿರುವ ದರ್ಪಿಷ್ಠದುಷ್ಟರ ಸಭೆಯನ್ನು ಗರುಡನ ರಕ್ಕೆಯ ಗಾಳಿಯಿಂದ ಅಲ್ಲೋಲಕಲ್ಲೋಲವಾಗುವಂತೆ ಮಾಡುವೆನು. ಆ ಸಭಾಜನರು ನೋಡುತ್ತಿರುವಂತೆಯೇ ಇಂದ್ರನಿಂದ ನನಗೆ ರಾಜ ರಾಜ್ಯಾಭಿಷೇಕವನ್ನು ಮಾಡಿಸಿಕೊಳ್ಳುವೆನು. ಅಲ್ಲಿಗೆ ಈಗಲೇ ಧಾವಿಸುವೆನು ಎಂದು ತನ್ನಲ್ಲೇ ನಿಶ್ಚಯಿಸಿದನು. ೭೯. "ಮಧುರಾಪುರ ರಕ್ಷಣೆಗೆ ನೀವಿರಿ" ಎಂದು ಬಲರಾಮನಿಗೆ ಹೇಳಿದನು. ಸಮಸ್ತ ಸೇನಾಸಮೂಹಕ್ಕೂ ತನ್ನೊಡನೆ ಬರಲು ಆಜ್ಞಾಪಿಸಿದನು. ಬಲಾಹಕ, ಸುಗ್ರೀವ, ಸೈನ್ಯ, ಮೇಘಪುಷ್ಪ ಎಂಬ ಹೊಸ ಕುದುರೆಗಳನ್ನು ಕಟ್ಟಿ ದಾರುಕನೆಂಬ ಸಾರಥಿಯು ನಡೆಯಿಸುವ ದಿವ್ಯ ರಥವನ್ನೇರಿ, ಮಧುರಾಪುರದಿಂದ ಹೊರಟನು. ವ|| ಹಾಗೆ ನಡೆದು ಕುಂಡಿನೀಪುರಕ್ಕೆ ಅಭಿಮುಖವಾಗಿ ಹೋಗುತ್ತ ತನ್ನ ಮನಸ್ಸಿನಲ್ಲೇ ಗರುಡನನ್ನು ಕರೆದನು. ೮೦. ಇಂದ್ರನನ್ನೂ ಜಯಿಸಿದವನೂ, ವಿನತಾ ಪುತ್ರನೂ ಆದ ಗರುಡನು ಇದು ವಿಚಿತ್ರವಾಗಿದೆ. ಬಹಳ ಬಣ್ಣಗಳ ಮೋಡಗಳ ಗುಂಪು ಆಕಾಶದಲ್ಲಿ ಮತ್ತೆ ಮತ್ತೆ ತೇಲಿಬರುತ್ತಿದೆ ಎನ್ನುವಂತೆ ತನ್ನ ರೆಕ್ಕೆಯ ಮಿಶ್ರವರ್ಣದ ನೆಳಲು ಚೆನ್ನಾಗಿ ಕಾಣಿಸುತ್ತಿರುವಲ್ಲಿ ವೇಗವಾಗಿ ಹಾರುವಾಗ ಉಂಟಾಗುವ ಸೂರ್ಯನ ಕಾಂತಿಯನ್ನು ಮುಚ್ಚಿ ಸಡಗರದಿಂದ ಬಂದನು. ವ|| ಹಾಗೆ ಬಂದು ತಲೆ ಬಾಗಿ ವಂದಿಸಿ, ಕೈಮುಗಿದುಕೊಂಡು ನಿಂತಿದ್ದ ಗರುಡನನ್ನು ಕೃಷ್ಣನು

---

೧. ಕೂರ್ತು (ಕ) ೨. ಕೃತ (ಕಗ)

**ನಿಂದಿರ್ದ ದಂದಶೂಕಪ್ರಮಾಥಿಯಂ ಯಥೋಚಿತ ಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ ದೇವಕೀನಂದನಂ ಸ್ಯಂದನಮಂ ಕಿಱಿದು ನಡೆಯಿಸೆ ಕೆಲಗೆಲದೊಳಂಬರಗತಿಯಿಂ ಬರುತ್ತುಂ ಪನ್ನಗಾರಾತಿ ತನ್ನ ಮನದೊಳ್ ಬಗೆದು ನೋಡಿ**

**ವಾಹನಮುಂಟು ದಿವ್ಯರಥಮಾಂ ನೆರವಾಹವಕೇಳಿಗೆಂಬೊಡಿ**
**ಲ್ಲಾಹವಮೆನ್ನನೇಕೆ ಬರವೇೞ್ದನೆನಲ್ ತಿಳಿದೆಂ ಸ್ವಚಿಹ್ನಮಂ**
**ದ್ರೋಹಿಜನಕ್ಕೆ ತೋಱಿ ಮೆಱೆವಂದದಿನೀ ವಿಭು ಮರ್ತ್ಯನೆಂಬುದಂ**
**ಮೋಹಿಸುತಿರ್ದದೊಂದೆ ಪದದೊಳ್ ಮೆಱೆವಂ ಸಹಜಪ್ರಭಾವಮಂ** ೮೧

**ವ|| ಎಂದು**

**[1]ವಿನಮಿತಗಾತ್ರಂ ಕೃಷ್ಣನ**
**ಮನಮಱಿದಾ ದ್ರೋಹಿ ಸಭೆಗೆ ನಿಜಪಕ್ಷಸಮೀ**
**ರನನಿನಿಸೊದವಿಸೆ ಸಿಂಹಾ**
**ಸನದಿಂ ತಲೆಯೂಱಿ ಕೆಡೆದರತಿಬಳಭೂಪರ್** ೮೨

**ಮಕುಟಂಗಳನವನಿಯೊಳೂ**
**ಱಿ ಕೆಡೆದ ತೆಱನಚ್ಯುತಾಂಘ್ರಿಗಳ್ಗವನತಿಯಂ**
**ಪ್ರಕಟಿಪ ತೆಱನಾದನಿತಱೊ**
**ಳಕುಟಿಲಮನರಾದರಹಿತರೊಂದೆ ಮುಹೂರ್ತಂ** ೮೩

**ವ|| ಆಗಳವರೆಂತಾನುಂ ಸಂತೈಸಿ ಪದುಳಿಸಿ ಮಗುೞೆ ಕುಳ್ಳಿರೆ ಮಗಧಪತಿ ಜರಾಸಂಧಂ ಶಿಶುಪಾಲ ಸಾಲ್ವ ದಂತವಕ್ರಾದಿಗಳ ಮೊಗಮಂ ನೋಡಿ**

ಯಥೋಚಿತವಾದ ಮೃದು ಮಧುರವಾಣಿಯಿಂದ ಮಾತನಾಡಿಸಿ, ರಥವನ್ನು ಮುಂದೆ ನಡೆಯಿಸಿದನು. ಸ್ವಲ್ಪ ದೂರ ಪಕ್ಕಪಕ್ಕದಲ್ಲೇ ಹಾರಿ ಬರುತ್ತ ಗರುಡನು ತನ್ನ ಮನಸ್ಸಿನಲ್ಲೇ. ೮೧. ಕೃಷ್ಣನಿಗೆ ಪ್ರಯಾಣಕ್ಕೆ ವಾಹನವಾಗಿ ದಿವ್ಯರಥವಿದೆ. ಯುದ್ಧ ಕ್ರೀಡೆಗೆ ನೆರವಾಗಲು ನನ್ನನ್ನು ಕರೆದಿರಬಹುದೆಂದರೆ ಈಗ ಯುದ್ಧವೇ ಇಲ್ಲ! ನನ್ನನ್ನೇಕೆ ಬರಹೇಳಿದನೊ?! ಈಗ ತಿಳಿಯಿತು! ಈ ವಿಭುವು ನನ್ನ ಚಿಹ್ನೆಯ ಧ್ವಜವನ್ನು ಮಾತ್ರ ದ್ರೋಹಿಜನಕ್ಕೆ ತೋರಿಸಿ, ತಾನು ಮನುಷ್ಯನೆಂಬ ಭ್ರಾಂತಿಯನ್ನು ಉಂಟುಮಾಡುತ್ತ ಇದ್ದು ಇದೊಂದು ಸಂದರ್ಭದಲ್ಲಿ ತನ್ನ ಸಹಜ ಪ್ರಭಾವವನ್ನು ಪ್ರಕಟಿಸುವನು" ಎಂದು ಆಲೋಚಿಸಿದನು. ೮೨. ಕೃಷ್ಣನ ಮನಸ್ಸನ್ನು ಅರಿತವನಾಗಿ ದೇಹವನ್ನು ಬಾಗಿಸಿ ಕುಗ್ಗಿಸಿ ಆ ದ್ರೋಹಿಗಳ ಸಭೆಗೆ ತನ್ನ ರಕ್ಕೆಯ ಗಾಳಿಯನ್ನು ಸ್ವಲ್ಪ ಬೀಸಿದನು. ಆದರಿಂದ ಅತಿಬಲಶಾಲಿಗಳಾದ ರಾಜರೂ ಸಿಂಹಾಸನದಿಂದ ಕೆಳಕ್ಕೆ ತಲೆಯೂರಿ ಬಿದ್ದರು! ೮೩. ಆ ದೊರೆಗಳು ಕಿರೀಟಗಳನ್ನು ಭೂಮಿಗೂರಿ, ಬಿದ್ದುದು ಅಚ್ಯುತನ ಪಾದಕ್ಕೆ ಬಿದ್ದಂತಾದುದನ್ನು ಪ್ರಕಟಿಸುವಂತಾದಷ್ಟರಲ್ಲೇ ಆ ದ್ವೇಷಿಗಳೆಲ್ಲರೂ ಒಂದು ಮುಹೂರ್ತ ಕಾಲ ಸರಳ ಬುದ್ಧಿ ಯುಳ್ಳವರಾದರು. ವ|| ಆಗ ಅವರು ಹೇಗೋ ಸಂತೈಸಿಕೊಂಡು ಮತ್ತೆ ಎದ್ದು ಸುಖದಿಂದ ಕುಳಿತ ಬಳಿಕ ಜರಾಸಂಧನು ಶಿಶುಪಾಲ ಸಾಲ್ವ ದಂತವಕ್ರಾದಿಗಳ ಮುಖವನ್ನು ನೋಡಿ,

---

೧. ವಿನತಾಪುತ್ರಂ (ಕಖಗ)

ಕುಳಗಿರಿಯಂ ತೆರಳ್ಚಲರಿದಲ್ತು ತೆರಳ್ಚಲಶಕ್ಯಮೆಮ್ಮನೆಂ
ಬಳವಿನ ನಮ್ಮುಮಂ ಕೆಡಪಿದತ್ತಿದು ತಾರ್ಕ್ಷ್ಯನ ಪಕ್ಷಸಂಭವಾ
ನಿಳನಱಿದೆಂ ಖಗೇಂದ್ರನೊಡವಂದಪನಾದೊಡೆ ದೇವಕೀಸುತಂ
ಜಳಶಯನಾವತಾರತನುವೆಂಬುದು ನಿಶ್ಚಯಮಾಯ್ತು ನಮ್ಮೊಳಂ ೮೪

ಸುರರನದಟಲೆದು ವೇದವ
ನುರವಣೆಯಿಂದುಯ್ದು ಶರಧಿಯಿಂ ಪೊಕ್ಕ ತಮಾ
ಸುರನಂ ಮತ್ಸ್ಯಾಕೃತಿಯಿಂ
ದೆರೆಗೊಂಡಾ ವಿಷ್ಣುವೀತನೆಂಬುದನಱಿದೆಂ ೮೫

ಧರಿಯಿಸಿ ಮಂದರಮಂ ಕೂ
ರ್ಮರೂಪದಿಂ ಜಲಧಿಮಥನದೊಳ್ ಪುಟ್ಟಿದುವಂ
ಸುರರ್ಗಿತ್ತಾ ವಸ್ತುಗಳೊಳ್
ಸಿರಿಯಂ ಕೌಸ್ತುಭಮನಾಂತನೀತನೆ ದಿಟದಿಂ ೮೬

ಒಂದಳಿನಿ ಕಮಳಮುಕುಳದೊ
ಳೊಂದಿದ ತೆಱನಾಗೆ ಕೋಡೊಳೆತ್ತಿದ ನೆಲನಂ
ತಂದು ಹಿರಣ್ಯಾಕ್ಷನುಮಂ
ಕೊಂದಾದಿವರಾಹನೀತನಪ್ಪುದಮೋಘಂ ೮೭

ಕರಕಮಳನಾಳಮೆನೆ ನಿಜ
ಕರದೊಳ್ ಕರುಳಿರೆ ನೃಸಿಂಹರೂಪದಿನಂದಾ
ದೊರೆಯ ಹಿರಣ್ಯಕಶಿಪುವಿನ
ಕರುಳಂ ತೆಗೆದಾತನೀತನಾಗಲೆವೇಟ್ಕುಂ ೮೮

೮೪. ಕುಲಗಿರಿಗಳನ್ನು ಅಲುಗಿಸಿ, ಚಲಿಸುವಂತೆ ಮಾಡುವುದು ಅಸಾಧ್ಯವಲ್ಲ. ನಮ್ಮನ್ನು ಅಲ್ಲಾಡಿಸುವುದು ಅಶಕ್ಯ! ಎಂಬ ಸಾಮರ್ಥ್ಯವಿರುವ ನಮ್ಮನ್ನು ಈ ಗರುಡನ ರೆಕ್ಕೆಯ ಗಾಳಿಯು ಕೆಡವಿತು! ಇದರಿಂದ ನಾನು ಈಗ ತಿಳಿದೆನು. ಗರುಡನು ಸಂಗಡ ಬಂದವನಾದರೆ, ಅವನು ದೇವಕಿಯ ಪುತ್ರನಾದ ಕೃಷ್ಣ! ಆತನು ಸಾಗರಶಯನನಾದ ವಿಷ್ಣುವಿನ ಅವತಾರವೆಂಬುದು ನಮಗೆ ನಿಶ್ಚಯವಾಗಿ ತಿಳಿದಂತಾಯಿತು. ೮೫. ಪರಾಕ್ರಮದಿಂದ ದೇವತೆಗಳನ್ನು ಪೀಡಿಸಿ, ವೇದವನ್ನು ರಭಸದಿಂದ ಎತ್ತಿಕೊಂಡು ಹೋಗಿ ಸಮುದ್ರವನ್ನು ಹೊಕ್ಕಿದ ತಮಾಸುರನನ್ನು ಮತ್ಸ್ಯಾಕೃತಿಯಿಂದ ಕಬಳಿಸಿದ ವಿಷ್ಣುವು ಈತನೇ ಎಂಬುದನ್ನು ತಿಳಿದೆನು. ೮೬. ಕ್ಷೀರಸಾಗರವನ್ನು ಕಡೆಯುವಾಗ ಕೂರ್ಮರೂಪದಿಂದ ಮಂದರಗಿರಿಯನ್ನು ಧರಿಸಿದ್ದು, ಸಾಗರದಲ್ಲಿ ಹುಟ್ಟಿದ ವಸ್ತುಗಳಲ್ಲಿ ಲಕ್ಷ್ಮಿಯನ್ನೂ ಕೌಸ್ತುಭವನ್ನೂ ತಾನು ಸ್ವೀಕರಿಸಿ, ಉಳಿದುದೆಲ್ಲವನ್ನೂ ದೇವತೆಗಳಿಗೆ ಕೊಟ್ಟವನು ಈತನೇ. ೮೭. ತಾನು ದಾಡೆಯಿಂದ ಎತ್ತಿಕೊಂಡು ಬಂದ ಭೂಮಿಯು ತಾವರೆಯ ಹೂವಿನಲ್ಲಿ ಕುಳಿತ ಹೆಣ್ಣು ತುಂಬಿಯಂತೆ ಇರಲು, ಹಿರಣ್ಯಾಕ್ಷನನ್ನು ಕೊಂದ ಆದಿವರಾಹನು ನಿಜವಾಗಿಯೂ ಈತನೇ ಆಗಿರಬೇಕು. ೮೮. ಕರಕಮಲ ನಾಳ ಎನ್ನುವಂತೆ ತನ್ನ ಕಯ್ಯಲ್ಲಿರುವ ಹಿರಣ್ಯಕಶಿಪುವಿನ ಕರುಳು ಕಾಣುತ್ತಿರಲು, ನರಸಿಂಹರೂಪದಿಂದ ಆತನ

3

ಧರೆಯಂ ವಾಮನರೂಪದಿ
ನೆರೆದು ಬಟಿಕ್ಕಂ ತ್ರಿವಿಕ್ರಮವ್ಯಾಜದಿನು
ರ್ವರೆಯಂ ಕೊಂಡು ಬಲೀಂದ್ರನ
ನುರುಳ್ಚಿ ಕಟ್ಟಿದ ಮುಕುಂದನೇಂ ಕೇವಲಮೇ ೮೯

ಕಡಿದು ಸಹಸ್ರಾರ್ಜುನಭುಜ
ದಡವಿಯನೆಡೆಯುಡುಗದೇಕವಿಂಶತಿವಾರಂ
ಪೊಡವಿಯೊಳುಳ್ಳವನಿಪರಂ
ಕಡಿದೊಟ್ಟಿದ ಪರಶುರಾಮ ಗಿರಿಧರನಜಿದಂ ೯೦

ಶರಹತಿಯಿಂ ಮಕುಟೋಜ್ವಲ
ಶಿರಂಗಳುಚ್ಚಳಿಸೆ ವಿಳಯರವಿಗಳ್ ಪಲವಂ
ಬರದೊಳ್ ನೆಗೆದಂತಿರೆ ದಶ
ಶಿರನಂ ಮರ್ದಿಸಿದ ರಾಮನಕ್ಕುಂ ಕೃಷ್ಣಂ ೯೧

ವ॥ ಎನೆ ಜರಾಸಂಧನಂ ಸಾಲ್ವಂ ನಿರೀಕ್ಷಿಸಿ

ಜಗಮೇಕಾರ್ಣವಮಾಗಲೊರ್ವನುಳಿದಾ ನಾರಾಯಣಂ ತನ್ನ ಕ
ರ್ಣಗುಹಾಸಂಭವಕೈಟಭಾಸುರಮಧುಕವ್ಯಾದರಂ ಮರ್ದಿಸಲ್
ನೆಗಟ್ದಾ ದೈತ್ಯರುದಗ್ರವಿಗ್ರಹದ ಮೇದೋರಾಶಿಯಿಂ ಭೂಮಿಯಾ
ಗಿ ಗಡಂ ಮೇದಿನಿಯಾದುದೇವೊಗಟ್ವಪೆಂ ಸಾಮರ್ಥ್ಯಮಂ ಶಾರ್ಙ್ಗಿಯಾ ೯೨

ಕರುಳನ್ನು ಹಿರಿದವನು ಈತನೇ ಆಗಿರಬೇಕು. ೮೯. ವಾಮನರೂಪದಿಂದ ಬಲೀಂದ್ರನಲ್ಲಿ ಮೂರು ಅಡಿಯಷ್ಟು ಭೂಮಿಯನ್ನು ಯಾಚಿಸಿ, ಬಳಿಕ ತ್ರಿವಿಕ್ರಮ ರೂಪದಿಂದ ಭೂಮಿಯನ್ನೆಲ್ಲಾ ಪಡೆದು, ಆತನನ್ನು ಮೆಟ್ಟಿ ಕಟ್ಟಿ ಪಾತಾಳಕ್ಕುರುಳಿಸಿದ ಈ ಮುಕುಂದನೇನು ಸಾಮಾನ್ಯನೇ! ೯೦. ತಿಳಿಯಿತು! ಕಾರ್ತವೀರ್ಯಾರ್ಜುನನ ಸಾವಿರತೋಳುಗಳೆಂಬ ಕಾಡನ್ನೂ ಎಡೆಬಿಡದೆ ಇಪ್ಪತ್ತೊಂದು ಸಾರಿ ಭೂಮಿಯ ಮೇಲಿದ್ದ ರಾಜರನ್ನೂ ಕಡಿದೊಟ್ಟಿದ ಪರಶುರಾಮನೂ ಕೃಷ್ಣನೇ. ೯೧. ಈ ಕೃಷ್ಣನೇ, ಹರಿತವಾದ ಬಾಣಗಳಿಂದ ಹೊಡೆದ ಕಿರೀಟಗಳಿಂದ ಕೂಡಿದ ಹೊಳೆಯುವ ತಲೆಗಳು ಮೇಲೆ ಹಾರಿ ಪ್ರಳಯಕಾಲದ ಸೂರ್ಯರನೇಕರು ಆಕಾಶದಲ್ಲಿ ಉದಿಸಿದಂತೆ ಕಾಣುತ್ತಿರಲು, ಹತ್ತುತಲೆಯ ರಾವಣನನ್ನು ಕೊಂದ ರಾಮನಾಗಿರುವನು." ವ॥ ಎಂದನು. ಸಾಲ್ವರಾಜನು ಜರಾಸಂಧನನ್ನು ನೋಡಿ, ೯೨. "ಜಗತ್ತೆಲ್ಲವೂ ಒಂದೇ ಸಾಗರವಾದರೂ ತಾನೊಬ್ಬನೇ ಉಳಿದಿದ್ದ ನಾರಾಯಣನು ತನ್ನ ಕಿವಿಯೆಂಬ ಗುಹೆಯಿಂದ ಉದಿಸಿದ ಮಧು ಕೈಟಭರೆಂಬ ರಾಕ್ಷಸರನ್ನು ಮರ್ದಿಸಿದನು. ಪ್ರಸಿದ್ಧರಾದ ಆ ರಾಕ್ಷಸರ ಅತಿಸ್ಥೂಲವಾದ ದೇಹದ ಮೇದಸ್ಸಿನ ರಾಶಿಯಿಂದಲ್ಲವೇ ಭೂಮಿಯಾಗಿ ಮೇದಿನಿ ಎನಿಸಿಕೊಂಡಿತು. ಆ ವಿಷ್ಣುವಿನ ಸಾಮರ್ಥ್ಯವನ್ನು ಎಷ್ಟು

ಮನುಜರ್ ಚಿಂತಿಸಿ ನೋಡೆ ನೋಡೆ ದಿವಿಜರ್ ಬೆನ್ನೀಯೆ ೧ಕೂ
ರ್ಮನಿದೇನೇನೆನೆ ಮರ್ತ್ಯಲೋಕಸುರ೨ಲೋಕವ್ಯಾಳಲೋಕಂಗಳಂ
ಮುನಿದೀಟಿಕ್ಕೊಂಡ ನಿಶಾಟನಂ ಕೃತಯುಗಪ್ರಾರಂಭದೊಳ್ ಕೊಂದನೀ
ತನೆ ನೋಡಗ್ಗದ ಕಾಲನೇಮಿಯನದೇಂ ದೈತ್ಯಾರಿ ಸಾಮಾನ್ಯನೇ ೯೩

ವ|| ಎಂಬುದುಂ ಸಾಲ್ವಲ ನಿನ್ನ ನುಡಿ ಸಾಲ್ವುದೆಂದು ದಂತವಕ್ತ್ರಂ ಜರಾಸಂಧಂಗಭಿಮುಖನಾಗಿ

ನೆನೆದಾತಂ ನೆನೆಯಂ ಭವಾದಿಸುಖಮಂ ತನ್ನಂದಮಂ ಕಂಡ ಮ
ರ್ತ್ಯನಣಂ ಕಾಣನವಿದ್ಯೆಯಂ ನಿಜಪಯಸ್ಸಂಸೇವೆಯಂ ಮಾಡಿದಂ
ಜನನೀಸ್ತನ್ಯದ ಸೇವೆಯೊಳ್ ತೊಡರನೆಂಬಾ ಜಾಹ್ನವೀಸಿಂಧುವೀ
ತನ ಕಾಲ್ಗರ್ಚಿನ ನೀರೆನಲ್ ಹರಿಯ ಪೆಂಪಂ ನೀನದೇಂ ಬಣ್ಣಿಪೈ ೯೪

ಮುಂ ಗರ್ವೋದ್ಧತರಂ ಹಿರಣ್ಯಕಹಿರಣ್ಯಾಕ್ಷದಿದೈತ್ಯೇಂದ್ರರಂ
ತಾಂ ಗೆಲ್ದಾ ದಶಕಂಠವೈರಿಗಿತರರ್ ೩ಮಾಱಾಂಪರಾರಾನೆದಿಂ
ಬಂಗಾಡಾವರಿದೆಂಬವೋಲ್ ಪೊಸೆದು ಮುಕ್ಕಲ್ ಸಾಲನೇ ಶಾರ್ಙ್ಗಿ ನ
ಮ್ಮಂ ಗಂಡಾಳ್ತನಮೇವುದಾಶ್ರಯಿಸುವಂ ಶ್ರೀಪಾದಮಂ ಕೃಷ್ಣನಾ ೯೫

ವ|| ಎನೆ ತದನಂತರಂ ಮಗಧನರಪಾಲನಂ ಶಿಶುಪಾಲನಾಲೋಕನಂಗೆಯ್ದು

ಹೊಗಳಲಿ! ೯೩. ಕೃತಯುಗದ ಆರಂಭದಲ್ಲಿ ಮನುಷ್ಯರು ಚಿಂತಿಸಿ ಚಿಂತಿಸಿ ನೋಡುತ್ತಲೂ, ದೇವತೆಗಳು ಬೆಂಗೊಟ್ಟೋಡುತ್ತಲೂ ಕೂರ್ಮನು ಇದೇನು! ಇದೇನು ಎನ್ನುತ್ತಲೂ ಇರುವಲ್ಲಿ ಸ್ವರ್ಗಲೋಕ ಭೂಲೋಕ ಪಾತಾಳಲೋಕಗಳನ್ನು ವಶಪಡಿಸಿಕೊಂಡ ಅತಿ ಕ್ರೂರಿಯೂ ಶೂರನೂ ಆದ ಕಾಲನೇಮಿಯೆಂಬ ರಾಕ್ಷಸನನ್ನು ಕೊಂದ ಈ ದೈತ್ಯಾರಿ ಸಾಮಾನ್ಯನೇನು?" ವ|| ಎನ್ನಲು, "ಸಾಲ್ವಲ ನಿನ್ನ ಮಾತು ಸಾಕು" ಎಂದು, ದಂತವಕ್ರನು ಜರಾಸಂಧನಿಗೆ ಎದುರಾಗಿ, ೯೪. "ಯಾವ ಗಂಗೆಯನ್ನು ನೆನೆದವನು ಜನನಜೀವನಾದಿ ಸುಖವನ್ನು ನೆನೆಯನೋ, ಯಾರ ಅಂದವನ್ನು ಕಂಡವನು, ಅವಿದ್ಯೆಯನ್ನು ಕಾಣುವುದಿಲ್ಲವೋ, ಯಾವ ಗಂಗೆಯ ನೀರನ್ನು ಕುಡಿದವನು ಮತ್ತೆ ತಾಯಿಯ ಸ್ತನ್ಯವನ್ನು ಕುಡಿಯದಂತೆ ಆಗುವನೋ ಆ ಗಂಗಾನದಿಯು ಈತನ ಕಾಲವನ್ನು ತೊಳೆದ ನೀರು ಎನ್ನುವಾಗ ಈ ಹರಿಯ ಮಹಿಮೆಯನ್ನು ನೀನು ಏನು ವರ್ಣಿಸಬಲ್ಲೆ?!" ೯೫. "ಮುಂಚೆ ಗರ್ವದಿಂದ ಕೊಬ್ಬಿದ ಹಿರಣ್ಯಾಕ್ಷ ಹಿರಣ್ಯಕಶಿಪುವೇ ಮೊದಲಾದ ರಾಕ್ಷಸೇಂದ್ರರನ್ನು ಗೆದ್ದ ಆ ರಾವಣರಿಗೆ ಇತರರಾರು ಪ್ರತಿಭಟಿಸುವವರು?! ಆನೆಯನ್ನು ತಿನ್ನುವವನಿಗೆ ಅದೊಂದು ಲೆಕ್ಕವೇ! ಎನ್ನುವಂತೆ ಆ ಕೃಷ್ಣನು ನಮ್ಮನ್ನು ಹೊಸೆದು ಮುಕ್ಕುವುದಿಲ್ಲವೇ ನಮ್ಮ ಪೌರುಷದಿಂದೇನಾಗುವುದು?! ಕೃಷ್ಣನ ಶ್ರೀಪಾದವನ್ನು ಆಶ್ರಯಿಸೋಣ" ಎಂದನು. ವ|| ಆನಂತರ ಶಿಶುಪಾಲನು ಮಗಧರಾಜನನ್ನು ನೋಡಿ,

---

೧. ಬೊಮ್ಮನಿದೇನೇನೆನೆ (ಕಖಗ) ೨. ಲೋಕಂ ನಾಗಲೋಕಂಗಳಂ (ಕಖಗ)
೩. ಮಾಱಾಂಪರಾರಾನೆದಿಂಬಂಗಂಡಾವಳಿಯೆಂಬವೊಲ್ (ಕ)

[1]ಕತೆಯಂತಿರ್ಕೆಮ ನಿನ್ನಿನಿಂದಿನ ಮಹಾಸಂಗ್ರಾಮದೊಳ್ ಕಾಣೆಮೇ
ದಿತಿಜಾರಾತಿಯ ಬಾಹುಸಾಹಸದಗುರ್ವಂ ತ್ರಿಂಶದಕ್ಷೌಹಿಣೀ
ಪೃತನಾಸಂಯುತನೆತ್ತಿ ಮುಂ ಮಧುರೆಯಂ ಮತ್ತಂತೆ ಗೋಮಂತಪ
ರ್ವತಮಂ ಮುತ್ತೆ ತದೀಯಬಾಣಶಿಖಿಯಿಂದಾ ಸೈನ್ಯಮಟ್ಟಾಡದೇ ೯೬.

ಅರವಿಂದೋದರನೀ ಜಗತ್ತ್ರಯಮನಿಚ್ಛಾಮಾತ್ರದಿಂ ಪುಟ್ಟಿಸಲ್
ಪೊರೆಯಲ್ ಸಂಹರಿಸಲ್ ಸಮರ್ಥನಾದನಾನುಂ ಬಲ್ಲೆನಂತಾದೊಡಂ
ಪುರುಷಂ ವೈರಮನೆತ್ತಿಕೊಂಡ ಬಟಿಕಂ ಭೂಪಾಲ ಕೇಳಾಗದೇ
ದೊರೆಯಂಗಾದೊಡಮಂಜಲಂತೆ ನೆಗಟ್ಟಿಂ ತದ್ದುರ್ಯಶೋಡಿಂಡಿಮಂ ೯೭.

ವ|| ಎನೆ ಮತ್ತಂತೆ ಸಹಜವಿರೋಧಾನುಬಂಧದಿಂ ಜರಾಸಂಧಾದಿ ದುಷ್ಟಚತುಷ್ಟಯರ್ ಚಲಮನೊಳಕೊಂಡಿರ್ದರ್ ಆನ್ನೆಗಮತ್ತಲ್ ಪುರುಷೋತ್ತಮಂ ಕುಂಡಿನೀಪುರಕ್ಕನತಿದೂರಮೆನಿಪ ವಿದರ್ಭರಾಜಧಾನಿಯಂ ಮುಟ್ಟೆವರ್ಪುದುಮಿದಿರ್ಗೊಂಡು ಪೋಗಿ ನಿಜನಿವಾಸದೊಳುತ್ತುಂಗಸಿಂಹಾಸನದ ಮೇಲೆ ಕುಳ್ಳಿರಿಸಿ ವಿದರ್ಭನತಿಹರ್ಷಸಂದರ್ಭನಾಗಿ ದೇವ ನೀವೀ ಸ್ವಯಂವರಕ್ಕೆ ಪೋದಲ್ಲಿ ಮೂರ್ಧಾಭಿಷಿಕ್ತನಲ್ಲೆಂದು ನಿಮಗೆ ಸಿಂಹಾಸನಸ್ಥರ ಸಮೀಪದೊಳ್ ನಿಜಾಸನಮನಿಕ್ಕುವಂತಾಗದಂತಾಂ ನಿಮಗೆನ್ನ ರಾಜ್ಯಮಂ ಕೊಟ್ಟಭಿಷೇಕಮಂ ಮಾಡಿದಪೆನೆಂದು ನುಡಿದಾಗಳ್ ಉಪೇಂದ್ರನ ಮನೋಭಿಸಂಧಿಯಿಂದತ್ತಲಾ ಮಹೇಂದ್ರನಾ ಪ್ರಪಂಚಮಂ ತಿಳಿದು

೯೬. "ಹಿಂದಿನ ಕಥೆಯು ಹಾಗಿರಲಿ. ನೆನ್ನೆಯ ಇಂದಿನ ಮಹಾಯುದ್ಧದಲ್ಲಿ ನಾವು ನೋಡಲಿಲ್ಲವೆ? ತೋಳ್ಬಲ ಸಾಹಸದ ಭಯಂಕರತೆಯನ್ನು; ಮೂವತ್ತು ಅಕ್ಷೌಹಿಣೀಸಹಿತರಾಗಿ ಮುಂಚೆ ಮಧುರೆಯನ್ನೂ ಆಮೇಲೆ ಗೋಮಂತಗಿರಿಯನ್ನೂ ಮುತ್ತಲು ಆತನ ಬಾಣಾಗ್ನಿಯಿಂದ ಆ ಅಷ್ಟು ಸೈನ್ಯವೂ ನಿಶ್ಶೇಷವಾಗಲಿಲ್ಲವೇ?! ೯೭. ಭೂಪಾಲಾ! ಕೇಳು, ಆ ಪದ್ಮನಾಭನು ಈ ಮೂರು ಲೋಕಗಳನ್ನೂ ಇಚ್ಛಾನುಮಾತ್ರದಿಂದ ಹುಟ್ಟಿಸುವುದಕ್ಕೂ ಕಾಪಾಡುವುದಕ್ಕೂ ಸಂಹರಿಸುವುದಕ್ಕೂ ಸಮರ್ಥನು. ಅದನ್ನು ನಾನೂ ಬಲ್ಲೆನು. ಆದರೂ ಪುರುಷನು ವೈರವನ್ನು ವಹಿಸಿದ ಬಳಿಕ ಎಂತಹವನಿಗೂ ಅಂಜಬಾರದು. ಅಂಜಿದರೆ ಅಪಯಶಸ್ಸೆಂಬ ಡೋಲಿನ ಧ್ವನಿಯು ಹರಡುವುದು." ವ|| ಎನ್ನಲು, ಜರಾಸಂಧನೇ ಮೊದಲಾದ ನಾಲ್ಕು ಜನ ದುಷ್ಟರೂ ಹಿಂದಿನಂತೆಯೇ ಸಹಜ ವಿರೋಧದಿಂದ ಚಲವನ್ನೇ ಹಿಡಿದರು. ಅಷ್ಟರಲ್ಲಿ ಅತ್ತಕಡೆ ಕೃಷ್ಣನು ಕುಂಡಿನೀಪುರಕ್ಕೆ ಅತಿದೂರವಲ್ಲದ ವಿದರ್ಭ ರಾಜಧಾನಿಯ ಸಮೀಪಕ್ಕೆ ಬಂದನು. ವಿದರ್ಭರಾಜನು ಹೋಗಿ ಎದಿರುಗೊಂಡು ಕರೆದುಕೊಂಡು ಬಂದು, ತನ್ನರಮನೆಯಲ್ಲಿ ಉನ್ನತ ಸಿಂಹಾಸನದ ಮೇಲೆ ಕುಳ್ಳಿರಿಸಿ ಸಂತೋಷಗೊಂಡನು. "ದೇವಾ! ನೀವು ಈ ಸ್ವಯಂವರಕ್ಕೆ ಹೋದರೆ ರಾಜ್ಯಾಭಿಷಿಕ್ತನಲ್ಲವೆಂದು ನಿಮಗೆ ಸಿಂಹಾಸನಸ್ಥರ ಸಮೀಪದಲ್ಲಿ ಪೀಠವನ್ನು ಹಾಕುವುದಿಲ್ಲ. ಆದ್ದರಿಂದ ನಾನು ನನ್ನ ರಾಜ್ಯವನ್ನು ಕೊಟ್ಟು ಅಭಿಷೇಕವನ್ನು ಮಾಡುತ್ತೇನೆ" ಎಂದು ಹೇಳಿದನು. ಕೂಡಲೇ ಕೃಷ್ಣನ ಮನೋಭಿಸಂಧಿಯಿಂದ ಅತ್ತ ಮಹೇಂದ್ರನು ಆ ವಿವರವನ್ನು ತಿಳಿದನು.

---

೧. ಕತೆಯಂತಿರ್ಕದು (ಖಗ)

ರವಿಚಂದ್ರೇಂದ್ರವಿರಿಂಚಿಮುಖ್ಯಪದಮುಂ ತದ್ಭ್ರೂಲತಾಸ್ಪಂದಸಂ
ಭವಮಾ ವಿಷ್ಣುಗೆ ವಿಶ್ವಲೋಕವಿಭುಗೊರ್ವಂ ಭೂಪನಾತ್ಮೀಯಭೂ
ಲವಮಂ ಕೊಟ್ಟಭಿಷೇಕಮಂ ನೆಗಟ್ವೆನೆಂದಂ ಮರ್ತ್ಯವೇಷಂಗೆ ಬಾಂ
ಧವವಂ ತೋಱಲೆ ಬಲ್ಲನೇಕಱಿಗುಮಜ್ಞಂ ವಿಷ್ಣುಸಾಮರ್ಥ್ಯಮಂ ೯೮

ಅವತಾರೋಚಿತಮಾಗೆ ಕಂಸಮಥನಂಗೀ ರಾಜರಾಜಾಭಿಷೇ
ಕವನಾಂ ಮಾಡುವೆನೇಕರಾಜ್ಯಪದದೊಳ್ ತಾನಿರ್ಕೆ ಮೇಣ್ ಮಿತ್ರಪಾಂ
ಡವರಾಜ್ಯಂ ನೆಗಟ್ವಂತು ತನ್ನ ಪದಮಂ ಪ್ರಚ್ಛನ್ನಮಂ ಮಾಡಿ ಪಾ
ರ್ಥಿವಸಾಧಾರಣಮಾಗಿ [೧]ವರ್ತಿಸುಗದುಂ ತನ್ನಿಚ್ಛೆ ಸರ್ವೇಶನಾ ೯೯

ಅನಿಯತಪದಂ ಸ್ವಯಂಪ್ರಭು
ವಿನ ಮಾರ್ಗಮದಂ ವಿಚಾರಿಸುತ್ತಿರಲೇಕಿಂ
ವನರುಹನಾಭಂಗಭಿಷೇ
ಚನೋತ್ಸವಂ ನೆಗಟ್ಗೆ ರಿಪುನೃಪರ್ ನೋಟ್ಪೆನೆಗಂ ೧೦೦

ನೆರೆದ ಜರಾಸಂಧಾದ್ಯರ
ಪರಿಷದ್ಭವನಕ್ಕೆ ಪೋಗು ಚಿತ್ರಾಂಗದ ನೀಂ
ಬರವೇೞಖಿಳಜಗತ್ಪ್ರಭು
ಹರಿಯ ಮಹೋತ್ಸವಮನೀಕ್ಷಿಸಲ್ಕಾ ನೃಪರಂ ೧೦೧

ವ|| ಎಂದು ಪುರಂದರಂ ಬೆಸಸೆ ಗಂಧರ್ವರಾಜನೆನಿಸಿದ ಚಿತ್ರಾಂಗದಂ ಚಿತ್ರಮಣಿ ಭೂಷಣಂಗಳ್ ಚಿತ್ರಪಟಮಂ ಕೆದಱಿದಂತೆ ಪಸರಿಸೆ ನಭೋಂತರದಿಂದಾ ಸಭಾಂತರಕ್ಕವತರಿಸಿ

೯೮. "ಸೂರ್ಯ ಚಂದ್ರೇಂದ್ರ ಬ್ರಹ್ಮನೇ ಮೊದಲಾದವರ ಪದವಿಯು ಆ ವಿಷ್ಣುವಿನ ಹುಬ್ಬಿನ ಕೊನೆಯ ಚಲನೆಯಿಂದ ಸಂಭವಿಸಿದುದು. ಸಮಸ್ತಲೋಕಕ್ಕೂ ವಿಭುವಾದ ವಿಷ್ಣುವಿಗೆ ಭೂಮಿಯ ಒಬ್ಬ ದೊರೆಯು ತನ್ನ ಭೂಮಿಯನ್ನು ಕೊಟ್ಟು ಅಭಿಷೇಕವನ್ನು ಮಾಡುವೆನೆಂದನು. ಮನುಷ್ಯ ವೇಷದವನೊಡನೆ ಬಾಂಧವ್ಯವನ್ನು ತೋರಿಸಬಲ್ಲನೇ ಹೊರತು ವಿಷ್ಣುವಿನ ಸಾಮರ್ಥ್ಯವನ್ನು ಅಜ್ಞನಾದ ಅವನು ಹೇಗೆ ತಾನೆ ತಿಳಿಯಬಲ್ಲನು?! ೯೯. "ಕೃಷ್ಣನಿಗೆ ಅವನ ಅವತಾರಕ್ಕೆ ಉಚಿತವಾದ ರಾಜರಾಜಾಭಿಷೇಕವನ್ನು ನಾನು ಮಾಡುತ್ತೇನೆ! ಏಕ ರಾಜ್ಯ ವೈಭವದಿಂದ ಅವನಿರಲಿ. ಅಥವಾ ಮಿತ್ರರಾದ ಪಾಂಡವರಿಗೆ ರಾಜ್ಯವು ದೊರಕುವಂತೆ ತನ್ನ ಪದವಿಯನ್ನು ಗುಪ್ತವಾಗಿಯೇ ಇಟ್ಟುಕೊಂಡು, ಸಾಮಾನ್ಯ ರಾಜರಂತೆಯೇ ನಡೆಯಲಿ. ಯಾವುದೂ ಸರ್ವಜ್ಞನಾದ ಅವನ ಇಚ್ಛೆ. ೧೦೦. "ಸ್ವಯಂ ಪ್ರಭುವಿನ ಮಾರ್ಗವು ಒಂದು ನಿಷ್ಕರ್ಷೆಯಿಲ್ಲದುದು. ಅದನ್ನು ವಿಚಾರಮಾಡುತ್ತಿರುವುದೇಕೆ? ಇನ್ನು ಶತ್ರುರಾಜರು ನೋಡುವಂತೆಯೇ ಪದ್ಮನಾಭನಿಗೆ ಅಭಿಷೇಕೋತ್ಸವ ನಡೆಯಲಿ. ೧೦೧. ಚಿತ್ರಾಂಗದಾ, ನೀನು ಜರಾಸಂಧಾದಿಗಳು ನೆರೆದಿರುವ ಪರಿಷದ್ಭವನಕ್ಕೆ ಹೋಗು. ಅಖಿಲ ಜಗತ್ಪ್ರಭುವಾದ ಹರಿಯ ಮಹೋತ್ಸವವನ್ನು ನೋಡುವುದಕ್ಕೆ ಆ ರಾಜರನ್ನು ಬರಹೇಳು. ವ|| ಎಂದು ಇಂದ್ರನು ಆಜ್ಞಾಪಿಸಿದನು. ಗಂಧರ್ವರಾಜನಾದ ಚಿತ್ರಾಂಗದನು ತನ್ನ ವಿಚಿತ್ರಮಣಿಭೂಷಣಗಳು ಚಿತ್ರಪಟವನ್ನು ಬಿಚ್ಚಿ ಹರಡಿದಂತೆ ಮಾಡುತ್ತಿರುವಲ್ಲಿ

---

೧. ವರ್ತಿಸುದುಂ (ಖ)

ಸುರವರನಿಂದ್ರನುಪೇಂದ್ರಂ
ಗೆ ರಾಜರಾಜಾಭಿಷೇಕಮಂ ಮಾಡಿದಪಂ
ನರನಾಥರ್ ಬಂದು ವಿದ
ರ್ಭರಾಜಪುರದಲ್ಲಿ ನೋೞ್ಕೆ ತನ್ಮಂಗಳಮಂ ೧೦೨

ವನಜಾಕ್ಷಮಹೋತ್ಸವದ
ರ್ಶನದಿಂದಕ್ಕುಂ ಕುಟುಂಬಗೋತ್ರಪುನರ್ದ
ರ್ಶನಮಿಲ್ಲದೊಡಿಂದೆ ಸುದ
ರ್ಶನದಿಂ ನಿಮಗೂರ್ಧ್ವಲೋಕದರ್ಶನಮಕ್ಕುಂ ೧೦೩

ಅಗಧರನ ಪದಾಬ್ಜಕ್ಕೆಱ
ಗುಗೆ ನೃಪರೆಱಗದೊಡೆ ಶಾರ್ಙ್ಗಗುಣಮುಕ್ತಪತ
ತ್ರಿಗಳೆಱಗುಗುಮೆಱಗೆ [1]ಪತ
ತ್ರಿಗಳೇ ನಿಮ್ಮಯ ಕಳೇವರಪ್ರತತಿಗಳೊಳ್ ೧೦೪

ಪಾದಾಶ್ರಿತರಾದರ ತಲೆ
ಗಾದುದು ಪಗೆಗೊಂಡ ನೃಪರ [2]ತಲೆಗಾದುದು ಕೌ
ಮೋದಕಿ ನೀಮದಱಿಂ ಹರಿ
ಪಾದಾಶ್ರಿತರಾಗಿ [3]ಮೊಲ್ಲದೊಡೆ ಪಗೆಗೊಳ್ಳಿಂ ೧೦೫

ನಂದಕಧಾರಾಜಲಮದು
ಬಂದು ಶರಣ್ಬೊಕ್ಕ ನೃಪತಿಗಮೃತಂ ಮುಳಿಸಿಂ
ನಿಂದ ವಿರೋಧಿಗೆ ವಿಷಮದ
ಱಿಂದೆ [4]ಜಲಕ್ಕಾದುವಮೃತವಿಷನಾಮಂಗಳ್ ೧೦೬

ಆಕಾಶದಿಂದ ಇಳಿದು (ಕುಂಡಿನ) ಸಭಾಮಂದಿರಕ್ಕೆ ಬಂದನು. ೧೦೨. ಆತನು ದೇವೋತ್ತಮನಾದ ಇಂದ್ರನು ಉಪೇಂದ್ರನಿಗೆ ವಿದರ್ಭಪುರದಲ್ಲಿ ರಾಜರಾಜಾಭಿಷೇಕವನ್ನು ಮಾಡುತ್ತಾನೆ. ರಾಜರು ಬಂದು, ಆ ಮಂಗಳವನ್ನು ನೋಡಲಿ. ೧೦೩. ಕಮಲಾಕ್ಷನ ಉತ್ಸವ ದರ್ಶನದಿಂದ ಕುಟುಂಬ ಗೋತ್ರದ ಪುನರ್ದರ್ಶನವು ಆಗುವುದು. ಅಲ್ಲದಿದ್ದರೆ ಇಂದೇ ಸುದರ್ಶನದಿಂದ ನಿಮಗೆ ಊರ್ಧ್ವಲೋಕದ ದರ್ಶನವು ಆಗುವುದು. "೧೦೪. ರಾಜರೇ! ಗಿರಿಧರನ ಪಾದಕಮಲಕ್ಕೆ ಎರಗಿರಿ. ಎರಗದಿದ್ದರೆ ನಿಮ್ಮ ದೇಹಗಳ ಮೇಲೆ ಪತತ್ರಿ (ಪಕ್ಷಿ)ಗಳು ಎರಗುವಂತೆ ಶಾರ್ಙ್ಗ (ಚಾಪ)ದ ಹೆದೆಯಿಂದ ಬಿಡಲ್ಪಡುವ ಪತತ್ರಿ (ಬಾಣ)ಗಳು ನಿಮ್ಮ ಮೇಲೆರಗುವುವು! ೧೦೫. ಕೃಷ್ಣನ ಕೌಮೋದಕಿ (ಗದೆ)ಯು ಅವನ ಪಾದಾಶ್ರಿತರ ತಲೆಯನ್ನು ಕಾಯುತ್ತದೆ ದ್ವೇಷವನ್ನು ಮಾಡುವ ರಾಜರ ತಲೆಗೆ ಗದೆಯಾಗುವುದು, ಆದುದರಿಂದ ನೀವು ಹರಿಯ ಪಾದಾಶ್ರಿತರಾಗಿರಿ. ಇಲ್ಲವಾದರೆ ಅವನ ದ್ವೇಷಿಗಳಾಗಿ! ೧೦೬. ನಂದಕವೆಂಬ ಕತ್ತಿಯ ಅಲಗಿನ ಹೊಳಪೆಂಬ ಜಲವು ಬಂದು ಕೃಷ್ಣನ ಮರೆಹೊಕ್ಕವರಿಗೆ ಅಮೃತವಾಗುವುದು. ಕೋಪದಿಂದ ಇದಿರು ನಿಂತ ವಿರೋಧಿಗಳಿಗೆ

---

೧. ಪತತ್ರಿಗಳೀ (ಕ) ೨. ತಲೆಗೊಂಡುದು (ಗ) ೩. ಮಲ್ಲದೊಡೆ (ಖ) ೪. ಜಗಕ್ಕಾದು (ಕಗ)

ಮೌರವರವಮದು ಮೃದು ಕಂ
ಠೀರವರವವಲ್ಪವೆನಿಪ ಹರಿಶಂಖಮಹಾ
ಭೈರವರವಮದು ಕಿವಿವುಗೆ
ಫೇರವರವಮೊದವೆ ರಿಪುಬಲಂ ಕೆಡೆದಿರದೇ ೧೦೭

ವ|| ಎಂದು ನುಡಿದ ವಕ್ರಭಣಿತಿಗಳಾಶ್ಚರ್ಯಮಂ ಪುಟ್ಟಿಸೆ

ತಲೆಯಂ ತೂಗಿ ಬೆರಲ್ಗಳಂ ಮಿಡಿದು ದೈತ್ಯಾರಾತಿಸಾಮರ್ಥ್ಯಮಂ
ಪಲರುಂ ಭೂಪರುಮಾಲಿಪಂತು ನುಡಿದಿಂದ್ರಾದೇಶಮಂ ತತ್ಸಭಾ
ವಲಯಂ ಭಾವಿಸಿ ನೋೞ್ಪಿನಂ ಮಗಧಚೇತೋಭಂಗದಿಂ ಲೋಲಕುಂ
ಡಲಚಂಚತ್ಕಟಕಾಂಗದಂ ನೆಗೆದನಾಕಾಶಕ್ಕೆ ಚಿತ್ರಾಂಗದಂ ೧೦೮

ವ|| ಆಗಳ್

ನಿಂದರರಾತಿಗಳ್ ಮಗಧನುಂ ಶಿಶುಪಾಲಕಂ ಸಾಲ್ವ [1]ಸಾತ್ವತೀ
ನಂದನ ದಂತವಕ್ರರುೞಿದಗ್ಗದ [2]ಭೂಭುಜರೆಲ್ಲರೆೞ್ದರಾ
ನಂದದೆ ರತ್ನಹಾರಮಕುಟಾಂಗದಕಂಕಣಕುಂಡಲಂಗಳೊಂ
ದೊಂದನವುಂಕಿ ಮಾಱೊರಸಿ ಬೀಱೆ ಝುಣಜ್ಝಣಿತಪ್ರಣಾದಮಂ ೧೦೯

ವ|| ಅಂತಾ ಸ್ವಯಂವರಶಾಲೆಯಿಂ ತಳರ್ದನೇಕದೇಶದ್ವೀಪಾಧಿಪಭೂಪಾಲರ್ ಬಂದು

ವಿಷವಾಗುವುದು. ಆದುದರಿಂದಲೇ ಜಲಕ್ಕೆ 'ಅಮೃತ' 'ವಿಷ' ಎಂಬ ಎರಡೂ ಹೆಸರೂ ಇವೆ! ೧೦೭. ಮೌರವ ಧ್ವನಿಯು (?) ಮೃದುವಾದುದು. ಸಿಂಹಗರ್ಜನೆಯು ಅಲ್ಪ ಎನ್ನಿಸುವ ಹರಿಯ ಶಂಖದ ಅತಿ ಭಯಂಕರವಾದ ಧ್ವನಿಯು ಕೇಳಿಸಿದರೆ, ಶತ್ರುಸೇನೆಯು (ತನ್ನ ವಶಕ್ಕೆ) ನರಿಯ ಶಬ್ದವು ಒದಗುವಂತೆ ಬಿದ್ದಿರುವುದಲ್ಲವೆ?! ವ|| ಎಂದು ಹೇಳಿದ ವಕ್ರೋಕ್ತಿಗಳು ಆಶ್ಚರ್ಯವನ್ನುಂಟುಮಾಡಿದವು. ೧೦೮. ಹಲವರು ದೊರೆಗಳು ರಾಕ್ಷಸ ವೈರಿಯ ಸಾಮರ್ಥ್ಯವನ್ನೂ ಇಂದ್ರನ ಆಜ್ಞೆಯನ್ನೂ ತಲೆದೂಗಿ, ಬೆರಳುಗಳನ್ನು ಮಿಡಿದು ಕೇಳುವಂತೆ ಆ ಚಿತ್ರಾಂಗದನು ಹೇಳಿ ಆ ಸಭಾಮಂಡಲಿಯು ಅದನ್ನು ಭಾವಿಸಿ ನೋಡುವಂತೆಯೂ ಜರಾಸಂಧನಿಗೆ ಮನೋಭಂಗವಾಗುವಂತೆಯೂ ಮಾಡಿ ತೂಗಾಡುತ್ತಿರುವ ಕರ್ಣಾಭರಣವೂ ಹೊಳೆಯುವ ಕೈಕಪ್ಪವೂ ಭುಜಕಿರೀಟವೂ ಉಳ್ಳವನಾಗಿ ಆಕಾಶಕ್ಕೆ ನೆಗೆದನು. ೧೦೯. ಶತ್ರುಗಳಾದ ಜರಾಸಂಧ, ಶಿಶುಪಾಲ, ಸಾಲ್ವಲ, ಸಾತ್ವತೀತನಂದನ, ದಂತವಕ್ರರು ಸ್ವಯಂವರ ಸಭೆಯಲ್ಲೇ ಉಳಿದರು. ಮಿಕ್ಕ ಅನೇಕ ಪ್ರಸಿದ್ಧರಾದ ರಾಜರು ಅವರ ರತ್ನಹಾರ ಕಿರೀಟ ಕಂಕಣ ಭುಜಕಿರೀಟ ಕರ್ಣಾಭರಣಗಳು ಒಂದನ್ನೊಂದು ತಾಕಿ, ಅದುಮಿ, ಉಜ್ಜಿ ಝುಣ ಜ್ಝಣಿತ ಶಬ್ದವನ್ನು ಬೀರುತ್ತಿರಲು ಆನಂದದಿಂದ ಪೀಠದಿಂದ ಎದ್ದರು. ವ|| ಹಾಗೆ ಆ ಸ್ವಯಂವರ ಶಾಲೆಯಿಂದ ಹೊರಟು ಅನೇಕ ದೇಶ ದ್ವೀಪಾಧಿಪತಿಗಳು ಬಂದು ವಿದರ್ಭಪುರವನ್ನು ಹೊಕ್ಕು ಕೃಷ್ಣನಿದ್ದ ಅರಮನೆಯ

---

೧. ಸಾತ್ವಕೀ (ಕಖ) ಸಾತ್ಯಕೀ (ಗ) ೨. ಭೂಭುಜರಿರ್ದ್ದರಾ (ಖಗ)

ವಿದರ್ಭನಗರಮಂ ಪೊಕ್ಕು ದೇವಕೀನಂದನನಿರ್ದಾ ರಾಜಮಂದಿರಾಂಗಣದೊಳ್ ದೂರೋತ್ಸಾರಿತ ರಾಜಚಿಹ್ನರಾಗಿ ನೆರೆದು ನಿಲ್ವುದುಮಾ ಪ್ರಸ್ತಾವದೊಳ್

ಅಮಳಂ ಹಂಸಾನ್ವಿತಂ ಬಾಂದೊರೆಯ ಪುಳಿನವೆಟ್ಟಿರ್ಪವೋಲ್ ದೇವಕಾಂತಾ
ಚಮರೀಜಾಂದೋಳಲೀಲಂ ಗಗನತಳದಿನಿಂದ್ರಾಜ್ಞೆಯಿಂದಂದುಪೇಂದ್ರಂ
ಗೆ ಮಹಾಸಿಂಹಾಸನಂ ಬಂದುದು ದಿವಿಜಜಯಧ್ವಾನಮುಂ ಕಿನ್ನರೀಗೇ
ಯಮುಮಸ್ವಪ್ನಾನಕಧ್ವಾನಮುಮೆಸೆಯೆ ವಿದರ್ಭಾಧಿಪಂ ರಾಗಿಪನ್ನಂ ೧೧೦

ವ|| ಆ ಮಹಾಸಿಂಹಪೀಠದ ಮುಂದೆ

ಸ್ಫುರಿತಸ್ವರ್ಣವಿಚಿತ್ರರತ್ನಮಯಶಾಖಾಪಲ್ಲವೋತ್ಫುಲ್ಲಷ
ಟ್ಚರಣಾಲಂಕೃತಮೆಂಬ ಕಲ್ಪತರುವೃಂದಾರಾಮವೀ ಬಂದುದು
ವರೆಗೆಂಬಂತೆ ವಿಚಿತ್ರವಸ್ತುರಚನಾ ಕಿರ್ಮೀರಿತಂ ಬಂದುದಂ
ಬರದಿಂ ಭೋಂಕನೆ ವಿಶ್ವಕರ್ಮರಚಿತಂ ದಿವ್ಯಂ ಮಹಾಮಂಟಪಂ ೧೧೧

ವ|| ಆ ಸಮಯದೊಳ್

ಮಂದರಮಥನಂಗಾದಪು
ದಿಂದೇ ರಾಜ್ಯಾಭಿಷೇಕಮೆಂದಳಕೇಶಂ
ಮುಂದಱಿದಟ್ಟಿದೊಡಂದೆ
ಯ್ತಂದುವು ವರಕನಕಕಳಶಮುಂ ನವನಿಧಿಯುಂ ೧೧೨

ಹೊರ ಅಂಗಳದಲ್ಲಿ ದೂರದಲ್ಲೇ ತಮ್ಮ ರಾಜಚಿಹ್ನೆಗಳನ್ನು ತೆಗೆದು ಹಾಕಿ ನಿಂತರು. ಆಗ ೧೧೦. ನಿರ್ಮಲವೂ ಹಂಸಗಳಿಂದ ಕೂಡಿದುದೂ ಆದ ಮಹಾ ಸಿಂಹಾಸನವು ಇಂದ್ರನ ಆಜ್ಞೆಯಿಂದ ಉಪೇಂದ್ರನಿಗಾಗಿ ಆಕಾಶಗಂಗೆಯ ಮಳಲು ಬರುತ್ತಿದೆಯೆನ್ನುವಂತೆ ಚಾಮರವನ್ನು ಹಿಡಿದು ಬೀಸುತ್ತಿರುವ ದೇವಕಾಂತೆಯರುಳ್ಳುದಾಗಿ ದೇವತೆಗಳ ಜಯಕಾರವೂ ಕಿನ್ನರಿಯರ ಗಾನವೂ, ದೇವಭೇರಿಯ ನಾದವೂ ಕೇಳಿಸುತ್ತಿರುವಲ್ಲಿ ವಿದರ್ಭರಾಜನು ಸಂತೋಷಪಡುವಂತೆ ಆಕಾಶದಿಂದ ಬಂದಿತು. ವ|| ಆ ಸಿಂಹಾಸನದ ಮುಂದೆ ೧೧೧. ಹೊಳೆಯುತ್ತಿರುವ ಸುವರ್ಣಚಿತ್ರ ರತ್ನಮಯವಾದ ಕೊಂಬೆಗಳ ಚಿಗುರುಗಳಿಂದಲೂ ತುಂಬಿಗಳಿಂದಲಂಕೃತವಾದ ಹೂಗಳಿಂದಲೂ ಕೂಡಿದ ಕಲ್ಪವೃಕ್ಷದ ನಂದನವೇ ಇದೋ ಬಂದಿತು ಬಂದಿತು-ಎನ್ನುವಂತೆ ವಿಶ್ವಕರ್ಮ ನಿರ್ಮಿತವಾಗಿ ವಿವಿಧವಾದ ಚಿತ್ರವರ್ಣಗಳಿಂದ ಹೊಳೆಯುವ ಮಹಾಮಂಟಪವು ಆಕಾಶದಿಂದ ಬಂದಿತು. ವ|| ಅದೇ ಸಮಯದಲ್ಲಿ ಮಂದರಪರ್ವತಧರನಾದ ಕೃಷ್ಣನಿಗೆ ಇಂದೇ ರಾಜರಾಜಾಭಿಷೇಕವಾಗುವುದನ್ನು ಮುಂಚೆಯೇ ತಿಳಿದ ಕುಬೇರನು ಕಳುಹಿಸಿದ ಉತ್ತಮವಾದ ಸ್ವರ್ಣಕಲಶವೂ ನವನಿಧಿಯೂ ಒಡನೆಯೇ ಬಂದವು. ವ|| ಆಗ ೧೧೩. ದೇವೇಂದ್ರನ ಹೇಳಿಕೆಯಿಂದ ಕೃಷ್ಣನ ಅಭಿಷೇಕೋತ್ಸವಕ್ಕಾಗಿ ಮೇರುಗಿರಿಯ ಲತಾಗೃಹಗಳ ಪೊದೆಗಳ ವಿಧ ವಿಧವಾದ ಓಷಧಿಗಳೂ ದೇವಗಂಗೆಯ ತೀರ್ಥದಿಂದ ಪೂರ್ಣವಾದ ರತ್ನಕಲಶಗಳೂ ದೇವನಂದನವನದ ಹುತ್ತದ ಮೃತ್ತಿಕೆಯೂ

ವII ಆಗಳ್

ಸುರಗಿರಕೂಟಕುಂಜವಿವಿಧೌಷಧಿಗಳ್ ಸುರಸಿಂಧುವಾರಿನಿ
ರ್ಭರನವರತ್ನಕುಂಭತತಿಗಳ್ ಸುರನಂದನವಾಮಲೂರುಬಂ
ಧುರವರಮೃತ್ತಿಕಾತತಿಗಳುಂ ಸುರರಾಜನದೊಂದು ಪೇಟ್ಕೆಯಿಂ
ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ ೧೧೩

ಧರೆಯೆಲ್ಲಂ ಸಾನುರಾಗಂ ಘನಘುಸೃಣಪಯಸ್ಸಿಕ್ತಿಯಿಂ ದಿಕ್ಸಮೂಹಾಂ
ತರಮೆಲ್ಲಂ ಸಪ್ರಮೋದಧ್ವನಿ ವಿವಿಧಮಹಾತೂರ್ಯನಿರ್ಘೋಷದಿಂದಂ
ಬರಮೆಲ್ಲಂ ಸಾಟ್ಟಹಾಸಂ ದುಗುಲದ ಗುಡಿಯಿಂ ಭೂಪರೆಲ್ಲಂ ಸಹರ್ಷರ್
ಪರಮೌಚಿತ್ಯಂಗಳಿಂದೇವೊಗಟ್ವೆನನುಮಂ ತದ್ವಿಭೂತಿಪ್ರಪಂಚಂ ೧೧೪

ವII ಅನ್ನೆಗಂ ಶುಭಮುಹೂರ್ತದೊಳ್ ಸಮಸ್ತಮಂಗಳಾಶ್ರಯಂ ಪುರುಷೋತ್ತಮನನೇಕ ರಾಜಲೋಕ[1]ರತ್ನಕೋಟೀರಂಗಳೆ ಪಾದಪೀಠಂಗಳಾಗೆ ಮಹೋತ್ತುಂಗಸಿಂಹಾಸನದ ಮೇಲೆ ಕುಳ್ಳಿರ್ದುದುಂ

ಪ್ರಭೆಯಿಂ ನಯನಭ್ರಮೆಯಾ
ಸಭೆಗಾಗಿರೆ ಬಂದು ತಾನೆ ಕೃಷ್ಣಂಗಮರ
ಪ್ರಭು ಪೂರ್ಣಕಳಶಮಂ ಪಿಡಿ
ದಭಿಷೇಕಂಗೆಯ್ದು ಪರಸಿ ಪೋದಂ ಮುದದಿಂ ೧೧೫

ದೇವಮಾರ್ಗದಿಂದ ಬಂದವು. ೧೧೪. ಅನುರಾಗವುಳ್ಳ ಭೂಮಿಯೆಲ್ಲವೂ ಕುಂಕುಮ ಕೇಸರಿಯ ನೀರನ್ನು ಚುಮುಕಿಸಿದುದರಿಂದ ಕೆಂಪಾಯಿತು. ದಿಕ್ಕುಗಳ ಅಂತರಾಳವೆಲ್ಲವೂ ಸಂತೋಷ ಧ್ವನಿಗಳಿಂದಲೂ ವಿಧ ವಿಧವಾದ ನೃತ್ತಗೀತ ವಾದ್ಯ ಧ್ವನಿಗಳಿಂದಲೂ ತುಂಬಿತು. ಆಕಾಶವೆಲ್ಲ ದುಕೂಲದ ಧ್ವಜಪಟಗಳಿಂದ ಅಲಂಕೃತವಾಯಿತು. ರಾಜರೆಲ್ಲರೂ ಹರ್ಷಿತರಾದರು. ಪರಮೌಚಿತ್ಯದಿಂದ ಪೂರ್ಣವಾದ ಅನುಪಮವಾದ ಆ ಐಶ್ವರ್ಯ ಪ್ರಪಂಚವನ್ನು ಏನು ಹೊಗಳಲಿ! ವII ಅಷ್ಟರೊಳಗೆ ಶುಭಮುಹೂರ್ತದಲ್ಲಿ ಸಮಸ್ತ ಮಂಗಳಕ್ಕೂ ಆಶ್ರಯನಾದ ಕೃಷ್ಣನು ಹಲವರು ರಾಜರ ರತ್ನಕಿರೀಟಗಳೇ ಪಾದಪೀಠ ವಾಗಿರಲು ಮಹೋನ್ನತ ಸಿಂಹಾಸನದ ಮೇಲೆ ಕುಳಿತುಕೊಂಡನು. ೧೧೫. ದೇವೇಂದ್ರನು ತನ್ನ ಕಾಂತಿಯಿಂದ ಸಭೆಗೇ ಹಲವು ಕಣ್ಣುಗಳು ಬಂದಿವೆಯೆಂಬ ಭ್ರಮೆಯುಂಟಾಗುತ್ತಿರುವಲ್ಲಿ ತಾನೇ ಬಂದು, ಪೂರ್ಣಕಲಶವನ್ನು ಹಿಡಿದುಕೊಂಡು ಕೃಷ್ಣನಿಗೆ ಅಭಿಷೇಕವನ್ನು ಮಾಡಿ ಸಂತೋಷದಿಂದ ಹರಸಿ ಹೋದನು. ೧೧೬. ಸ್ತುತಿಪಾಠಕರ ಹೊಗಳಿಕೆಯ ಧ್ವನಿಯು ಡೋಲು ಮುಂತಾದ ಮಂಗಳ ವಾದ್ಯ ಧ್ವನಿಗಳನ್ನು ಮೀರಿದ್ದಿತು. ಬೇಡುವ ಯಾಚಕರಿಗೆ ಬೀರುತ್ತಿರುವ ಅಪರಂಜಿಯ ನಾಣ್ಯಗಳ ಕಾಂತಿಯು ಪಟವಾಸ (ವಸ್ತ್ರಗಳ ಸುವಾಸನೆಯ

---

೧. ರತ್ನಕಿರೀಟಕೋಟೀರಂಗಳೆ (ಕಗ)

ಪೊಗೞುತ್ತಿರ್ಪೊಂದು ವಂದಿವ್ರಜದುಲಿ ಪಟಹಧ್ವಾನಮಂ ಮೀಱೆ ಬೇೞ್ಪ
ರ್ಥಿಗೆ ಸೂಸುತಿರ್ಪ ಚೆಂಬೊಂಗಳ ರುಚಿಪಟವಾಸಸ್ಫುರತ್ಪಾಂಸುವಂ ಕೈ
ಮಿಗೆ ನಾನಾರಾಜಚಿಹ್ನಾವಳಿ ದೊರೆಯೆನೆ ಸಾಮ್ರಾಜ್ಯಲಕ್ಷ್ಮೀವಿಭೂಷಾ
ಳಿಗಳಂ ಪೋಲ್ತೊಪ್ಪೆ [1]ಕೃಷ್ಣಂಗೆಸೆದುದಸದಳಂ ರಾಜರಾಜಾಭಿಷೇಕಂ ೧೧೬

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀಪಾದ
ಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದೊಳ್
ಪರಶುರಾಮದರ್ಶನ ಗೋಮಂತದುರ್ಗಾರೋಹಣ ತದೀಯದುರ್ಗ
ದಾಹೋಪಶಮನ ವಿಪಕ್ಷಾಕ್ಷೌಹಿಣೀಚತುರ್ವಿಂಶತಿನಾಶನ ಜರಾಸಂಧ
ಪ್ರಮುಖಮಕುಟಭಂಗ ಸೃಗಾಲವಧ ದಿವ್ಯರಥೋಪಲಬ್ಧಿ
ದರ್ಪಿಷ್ಠನೃಪಸಭೋಚ್ಚಾಟನ ರಾಜರಾಜಾ
ಭಿಷೇಕವರ್ಣನಂ ಅಷ್ಟಮಾಶ್ವಾಸಂ

ಪುಡಿ)ದ ಧೂಳಿನ ಹೊಳಪನ್ನು ಮೀರಿದ್ದಿತು. ಬಗೆ ಬಗೆಯ ರಾಜ ಚಿಹ್ನೆಗಳು ಅರ್ಹವಾಗಿದೆಯೆನ್ನುವಂತಿದ್ದೂ ಸಾಮ್ರಾಜ್ಯಲಕ್ಷ್ಮಿಯ ಆಭರಣಗಳ ಸಮೂಹಗಳನ್ನು ಹೋಲುತ್ತ ಒಪ್ಪುತ್ತಿದ್ದವು. ಅಸಾಧ್ಯವೂ ಅಸದೃಶವೂ ಆದ ರಾಜರಾಜಾಭಿಷೇಕವು ಶ್ರೀಕೃಷ್ಣನಿಗೆ ಪ್ರಕಾಶವಾಗಿ ನಡೆಯಿತು. ಇದು ಸಮಸ್ತ ಕಮಲಭವಾಂಡ ಮಾಲಾ ಘಟೀಘಟಿತಾರಘಟ್ಟ ಘಟನಾ ಸ್ವತಂತ್ರ... ಶ್ರೀಲಕ್ಷ್ಮೀಕಾಂತ ಶ್ರೀಪಾದಭಕ್ತಿಯುಕ್ತ ಸುಕವೀಂದ್ರರುದ್ರ ಪ್ರಣೀತ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಪರಶುರಾಮದರ್ಶನ, ಗೋಮಂತ ದುರ್ಗಾರೋಹಣ, ಆ ದುರ್ಗದ ದಾಹೋಪಶಮನ, ಶತ್ರುಪಕ್ಷದ ಇಪ್ಪತ್ತನಾಲ್ಕು ಅಕ್ಷೌಹಿಣೀ ಸೇನೆಯ ನಾಶನ, ಜರಾಸಂಧನೇ ಮೊದಲಾದವರ ಕಿರೀಟಭಂಗ, ಸೃಗಾಲನ ವಧೆ, ದಿವ್ಯರಥದ ಪ್ರಾಪ್ತಿ, ದರ್ಪಿಷ್ಠರಾದ ರಾಜರ ಸಭೆಯ ಉಚ್ಚಾಟನೆ, ಕೃಷ್ಣನ ರಾಜರಾಜಾಭಿಷೇಕ ಇವುಗಳ ವರ್ಣನೆಯ ಎಂಟನೆಯ ಆಶ್ವಾಸ.

---

೧. ಕೃಷ್ಣಂಗೆಸೆದುದು ಸದಳಂ (ಖ)

# ನವಮಾಶ್ವಾಸಂ

ಶ್ರೀವರನ ಸಿಂಹಪೀಠಮ
ನಾವರಿಸಿದುವೆಱಪ ನೃಪರ ಮಣಿಮಕುಟಮಯೂ
ಖಾವಳಿಗಳುದಯಶೈಲಮ
ನಾವರಿಸಿದ ತರುಣತರಣಿಕಿರಣಾವಳಿವೊಲ್ ೧

ವಿಪುಳಭುಜರ್ [1]ಸಿಂಹಳ ಡಹ
ಳ ಪಾಂಡ್ಯ ಪಲ್ಲವ ಕಳಿಂಗ ಖಸರೆಂಬಱುವರ್
ನೃಪತಿಗಳಾಱುಂ ಧವಳಾ
ತಪತ್ರಮಂ ತಳ್ತು ಕಂಸವೈರಿಗೆ ಪಿಡಿದರ್ ೨

ಎರಡುಂ[2] ಪಕ್ಕದೊಳಿರ್ದಾ
ದರದಿಂ ಪಾಂಚಾಲ ಚೋಳರೆಂಬಪಹಸಿತಾ
ಮರರಿರ್ವರಿಕ್ಕಿದರ್ ತಾ
ಮರಸದಳಾಕ್ಷಂಗೆ ಧವಳಚಾಮರಯುಗಮಂ ೩

ಚಾರುಮಣಿವೇತ್ರಲತೆವಿಡಿ
ದಾ ರಾವಣದರ್ಪವಿದಳನೋಲಗದೊಳ್ ದೌ
ವಾರಿಕರಾಗಿರ್ದರ್ ಡೊ
ಕ್ಕಾರಂ ಹಂಮೀರನೆಂಬ ಭೂಭುಜರಿರ್ವರ್ ೪

ಮಕುಟಧರರ್ ಮಳಯನೃಪಾ
ಲಕ ಮಾಳವಮಹಿಪರೆಂಬ ವೀರರ್ ತಾಂಬೂ
ಲಕರಂಡಧರ ಶ್ರೀಪಾ
ದುಕಧರರಾಗಿರ್ದರಚ್ಯುತಂಗೋಲಗದೊಳ್ ೫

೧. ಉದಯಗಿರಿಯನ್ನಾವರಿಸಿದ ಬಾಲಸೂರ್ಯನ ಕಿರಣಗಳ ಸಾಲಿನಂತೆ ಶ್ರೀಕೃಷ್ಣನ ಸಿಂಹಾಸನವನ್ನು ಅವನಿಗೆ ಎರಗುವ ರಾಜರ ರತ್ನ ಕಿರೀಟಗಳ ಕಾಂತಿಸಮೂಹಗಳು ಆವರಿಸಿದವು. ೨. ದೀರ್ಘಬಾಹುಗಳಾದ ಸಿಂಹಳ ಡಹಳ ಪಾಂಡ್ಯ ಪಲ್ಲವ ಕಳಿಂಗಖಸರರೆಂಬ ಆರು ಜನ ರಾಜರು ಬೆಳ್ಗೊಡೆಗಳನ್ನು ಎತ್ತಿ ಹಿಡಿದರು ಕೃಷ್ಣನಿಗೆ. ೩. ದೇವತೆಗಳನ್ನೂ ಅಪಹಾಸ್ಯಮಾಡುವ ಪಾಂಚಾಲ ಚೋಳರೆಂಬಿಬ್ಬರು ದೊರೆಗಳು, ಕಮಲದಳನೇತ್ರನಾದ ಆ ಕೃಷ್ಣನ ಎರಡು ಪಕ್ಕಗಳಲ್ಲಿದ್ದು ಬಿಳಿಯ ಚಾಮರಗಳೆರಡನ್ನು ಆದರದಿಂದ ಬೀಸಿದರು. ೪. ಡೊಕ್ಕಾರ ಹಂಮೀರರೆಂಬ ದೊರೆಗಳಿಬ್ಬರು ಆ ರಾವಣದರ್ಪಹರನ ಸಭೆಯಲ್ಲಿ ಮನೋಹರವಾದ ರತ್ನಗಳಿಂದಲಂಕೃತವಾದ ಬೆತ್ತಗಳನ್ನು ಹಿಡಿದುಕೊಂಡು ದ್ವಾರಪಾಲಕರಾಗಿದ್ದರು. ೫. ಸಭೆಯಲ್ಲಿ ಕೃಷ್ಣನಿಗೆ ಮಲಯಮಾಳವ ದೇಶದ ವೀರ ರಾಜರಿಬ್ಬರಲ್ಲಿ ಒಬ್ಬನು ತಾಂಬೂಲ ಸಂಚಿಯನ್ನು ಹಿಡಿದು

---

೧. ಸಿಂಹಳ ಪಾಂಡ್ಯ ಪಲ್ಲವ ಕಳಿಂಗ ಬರ್ಬ ಖಸರೆಂಬಱುವರ್(ಕ)

೨. ಪಕ್ಕದೊಳಿರ್ದಾದರದಿಂ (ಕಗ)

ವ|| ಅಂತನೇಕಭೂಕಾಂತರೋರೊರ್ವರೊಂದೊಂದುತೆಱದ ಸದ್ಭಾವಮಂ ಮೆಱೆಯೆ ವಾಸವವಿಲಾಸದೋಲಗದೊಳಿರ್ದ ಜನಾರ್ದನಂ ತನ್ನಭಿಮುಖದೊಳಿರ್ದ ಭೀಷ್ಮಕನ ಮೊಗಮಂ ನೋಡಿ

ಭವದೀಯಾತ್ಮಜೆಗೇಂ ಸ್ವಯಂವರಮೆ ಭೂಪರ್ ಬಂದುದುಂ ತನ್ನಿಮಿ
ತ್ತವೆ ಯುಕ್ತಂ ನಿಮಗಜ್ಞರೆತ್ತಱಿವರ್ ಮೇಲಪ್ಪುದಂ ದೈವಯೋ
ಗವನಾ ಮಾತಿನೊಳೇನೊ ನಿಮ್ಮ ಮನದುತ್ಸಾಹಕ್ಕಣಂ ತಕ್ಕುದಾ
ಸವಕಟ್ಟಾ ಬಿಯಮಾ ವಿಭೂತಿ ಸಧನರ್ಗೇಗೆಯ್ದೊಡಂ ತೀಱದೇ ೬

ವ|| ಎನೆ ಕೇಳ್ದು

ಭಯದೂರರನೀ ನೃಪರಂ
ಸ್ವಯಂವರಕ್ಕಾರೊ ಕರೆದರಾ ಸಮಕಟ್ಟಾ
ಬಿಯವಾ ವಿಭೂತಿಯೆಂತೆ
ನ್ನಯ ಗೇಹದೊಳಾಯ್ತು ದಿಟದಿನಾನಿದನಱಿಯೆಂ ೭

ವ|| ಎಂದು ಭೀಷ್ಮಕಂ ಪುಸಿಯೆ ಬಿಸರುಹಾಕ್ಷನಾಕ್ಷೇಪಗರ್ಭನಿರ್ಭರೋಪಹಸನಸ್ಫುರದ ಧರಕಾಂತಿದಂತಪ್ರಭಾಶಬಲಿತಸಭಾಂತರಾಳನಿಂತೆಂದಂ : ಆ ನಿಜಪ್ರಿಯತನೂಜೆಗೆ ನೀಂ ಸ್ವಯಂವರವಂ ಮಾಟ್ಪೆನೆಂದು ಜಗದೊಳೆಯ್ದೆ ಸಾರಿಸಿ ನೆರಪಿದ ಕ್ಷತ್ರಿಯರ ಮೇಳಾಪಕಮುಮಂ ತನ್ಮಹೋತ್ಸವಕೆಂದು ಕಾಂಚನಪಂಚರತ್ನಮಯಂಗಳಾಗೆ ಮಾಡಿಸಿದ ಸುಧಾಧವಳಿತಂಗಳಪ್ಪುಪ್ಪರಿಗೆಗಳುಮಂ ಸಮುತ್ತುಂಗಂಗಳೆನಿಸುವ ತವಂಗಂಗಳುಮಂ ಆ ರಮ್ಯಂಗಳೆನಿಸುವ ಹರ್ಮ್ಯಂಗಳುಮಂ ಆ

ಕೊಂಡೂ ಮತ್ತೊಬ್ಬನು ಶ್ರೀಪಾದುಕೆಗಳನ್ನು ಹಿಡಿದುಕೊಂಡೂ ಸೇವಕರಂತಿದ್ದರು. ವ|| ಹಾಗೆ ಅನೇಕ ರಾಜರು ಒಬ್ಬೊಬ್ಬರು ಒಂದೊಂದು ಬಗೆಯ ಸದ್ಭಾವನೆಯನ್ನು ಪ್ರಕಟಿಸುತ್ತಿರಲು ಇಂದ್ರವಿಲಾಸದಿಂದ ಸಭೆಯಲ್ಲಿದ್ದ ಕೃಷ್ಣನು ತನ್ನೆದುರಿಗಿದ್ದ ಭೀಷ್ಮಕನ ಮುಖವನ್ನು ನೋಡಿ, ೬. "ನಿಮ್ಮ ಕುಮಾರಿಗೆ ಸ್ವಯಂವರವೇನು? ರಾಜರು ಬಂದುದೂ ಅದಕ್ಕಾಗಿಯೇ ತಾನೆ! ಅದು ನಿಮಗೆ ಯುಕ್ತವಾದುದೇ ಆಗಿದೆ. ಮೇಲಾಗುವ ದೈವಯೋಗವನ್ನು ಅಜ್ಞರು ಹೇಗೆ ತಾನೆ ತಿಳಿಯುವರು? ಈಗ ಆ ಮಾತಿನಿಂದೇನು! ನಿಮ್ಮ ಮನಸ್ಸಿನ ಉತ್ಸಾಹಕ್ಕೆ ಆ ವಿಧಾನವೂ ಆ ವ್ಯಯವೂ ಆ ಐಶ್ವರ್ಯವೂ ಪೂರ್ಣವಾಗಿ ಹೊಂದುತ್ತದೆ. ಧನಿಕರು ಏನು ಮಾಡಿದರೆ ತಾನೆ ನಡೆಯುವುದಿಲ್ಲ?" ವ|| ಎನ್ನಲು ಕೇಳಿ, ೭. "ಭಯವೆಂಬುದನ್ನು ದೂರವಾಗಿಸಿರುವ ಈ ರಾಜರನ್ನು ಸ್ವಯಂವರಕ್ಕೆ ಯಾರು ಕರೆದರೋ? ಆ ವಿಧಾನ ಆ ವ್ಯಯ ಆ ಐಶ್ವರ್ಯಗಳು ನನ್ನರಮನೆಯಲ್ಲಿ ಹೇಗಾಯಿತೆಂಬುದನ್ನು ನಿಜವಾಗಿಯೂ ನಾನು ತಿಳಿಯೆನು!" ವ|| ಎಂದು ಭೀಷ್ಮಕನು ಸುಳ್ಳು ಹೇಳಿದನು. ಕಮಲಾಕ್ಷ ಕೃಷ್ಣನು ಆಕ್ಷೇಪಗರ್ಭಪೂರ್ಣವೂ ಹಾಸ್ಯದ ನಗುವಿನಿಂದ ಹೊಳೆಯುವ ತುಟಿಯ ಮತ್ತು ಹಲ್ಲಿನ ಹೊಳಪುಗಳ ಮಿಶ್ರಕಾಂತಿಯಿಂದ ಸಭೆಯನ್ನು ತುಂಬುತ್ತ ಹೀಗೆಂದನು-ಆ ನಿಮ್ಮ ಪ್ರಿಯಪುತ್ರಿಗೆ ನೀವು ಸ್ವಯಂವರವನ್ನು ಮಾಡುವೆನೆಂದು ಲೋಕದಲ್ಲಿ ಚೆನ್ನಾಗಿ ಸಾರಿಸಿ, ಬರಮಾಡಿರುವ ಕ್ಷತ್ರಿಯಜ ಮಂಡಲಿಯನ್ನು, ಆ ಮಹೋತ್ಸವಕ್ಕೆಂದು ಮಾಡಿಸಿದ ಸುವರ್ಣಪಂಚರತ್ನಮಯಗಳಾದ ಉಪ್ಪರಿಗೆಗಳನ್ನೂ

ಚಿತ್ರಂಗಳೆನಿಸುವ ಚಿತ್ರಶಾಲೆಗಳುಮಂ ಆ ಜಗನ್ಮಂಗಲಂಗಳೆನಿಸುವ ಮಂಡಪಂಗಳುಮಂ ನೀವದೆಂತು ಪೇೞಲಱಿವಿರಂತುಟಲ್ಲದೆಯುಂ

ಕಲಹಂಮಾಡುವವೀ ಸ್ವಯಂವರಕೆ ಕೃಷ್ಣಂ ಬಂದೊಡೆಂದೀಗಳೆ
ಮ್ಮೊಳ್ಳೆ ಕಾದಲ್ ತಱಿಸಂದುದಂ ದಿಟಕೆ ನೀವೇಂ ಬಲ್ಲಿರೇ [1]ನೋಡಿಮಾ
ಮುಳಿಸಿಂ ಕೈದುವನಾಂತ ಪತ್ತಿಗಳನಾ ಪಣ್ಣಿರ್ದ ಮತ್ತದ್ವಿಪಂ
ಗಳನಾ ಪಲ್ಲಣಿಸಿರ್ದ ವಾಜಿಗಳನಾ ಪೂಡಿರ್ದ ಪೊಂದೇರ್ಗಳಂ ೮

ವII ಎಂಬುದುಂ ಭೀಷ್ಮಕಂ ದೇವರವಧಾರಿಸಿಮಿದಱ ವೃತ್ತಾಂತಮಂ ತಿಳಿದೆನೀಗಳೆಂತೆಂದೊಡೆ ಮದೀಯನಂದನಂ ರುಕ್ಮಿಯೆಂಬಂ ಸ್ವಭಾವಸುಭಗಾಕಾರದಿನಹಂಕಾರಿಯುಂ ಯೌವನೋದಯ [2]ಸಂಪತ್ತಿನಿನುನ್ಮತ್ತನುಂ ಯುವರಾಜಪದವಿಯಿಂ ಮಹಿಮಾಸ್ಪದನುಂ ನಿಖಿಲವಿದ್ಯಾಗರ್ವದಿಂ ಖರ್ವೀಕೃತಸರ್ವಲೋಕನುಂ ಅನೇಕದಿವ್ಯಾಯುಧನಿಕಾಯದಿಂದಜಯ್ಯನುಂ ಅಪ್ರತಿಹತಭುಜಪ್ರತಾಪ ದಿಂದಪ್ರತಿಮನುಂ ಅವಿಕಳಮಂತ್ರಶಕ್ತಿಯಿಂ ಸ್ವತಂತ್ರನುಮಾಗಿ ತನ್ನ ತಂಗೆಯಪ್ಪ ರುಕ್ಮಿಣೀದೇವಿಗೆ ಸ್ವಯಂವರಮಂ ಮಾೞ್ಪೆನೆಂದು ಜರಾಸಂಧ ಪ್ರಭೃತಿ ನರಪಾಲರಂ ಬರಿಸಿ ತನ್ನಿಮಿತ್ತಮಾಸವಕಟ್ಟಾಬಿಯಮಾ ವಿಭೂತಿಯುಮನಾತನೆ ಮಾಡಿಸಿದನಂತುಮಲ್ಲದೆಯುಂ

ಸಮುನ್ನತಗಳಾದ ನಾಟ್ಯರಂಗ ಅಟ್ಟಳೆಗಳನ್ನೂ ರಮ್ಯಗಳಾದ ಆ ಹರ್ಮ್ಯಗಳನ್ನೂ ವಿಚಿತ್ರಗಳಾದ ಆ ಚಿತ್ರಶಾಲೆಗಳನ್ನೂ ಜಗನ್ಮಂಗಳಗಳೆನಿಸುವ ಆ ಮಂಟಪಗಳನ್ನೂ ನೀವು ಹೇಗೆ ತಾನೆ ಹೇಳಬಲ್ಲಿರಿ?! ಅದೂ ಅಲ್ಲದೆ ೮. ಈ ಸ್ವಯಂವರಕ್ಕೆ ಕೃಷ್ಣನು ಬಂದರೆ ಜಗಳವಾಡೋಣವೆಂದು ಈಗಲೇ ನಮ್ಮೊಡನೆ ಕಾದಲು ನಿಶ್ಚಯಿಸಿರುವುದನ್ನು ನಿಜವಾಗಿ ನೀವು ಬಲ್ಲಿರೇನು?! ನೋಡಿ, ಕೋಪದಿಂದ ಆಯುಧವನ್ನು ಧರಿಸಿರುವ ಕಾಲಾಳುಗಳನ್ನೂ ಸಿದ್ಧಪಡಿಸಿರುವ ಆ ಮದ್ದಾನೆಗಳನ್ನೂ ಜೀನುಹಾಕಿರುವ ಆ ಕುದುರೆಗಳನ್ನೂ ಹೂಡಿರುವ ಆ ಹೊಂದೇರುಗಳನ್ನೂ" ವII ಎಂದು ಹೇಳಿದನು. ಭೀಷ್ಮಕನು "ದೇವರು ಕೇಳಬೇಕು. ಇದರ ವೃತ್ತಾಂತವನ್ನು ಈಗ ತಿಳಿದೆನು. ಹೇಗೆಂದರೆ ನನ್ನ ಮಗ ರುಕ್ಮಿಯೆಂಬುವನು ಸಹಜ ಸುಂದರನಾಗಿರುವುದರಿಂದ ಅಹಂಕಾರಿಯೂ, ಯೌವನೋದಯ ಸಂಪತ್ತಿನಿಂದ ಉನ್ಮತ್ತನೂ, ಯುವರಾಜಪದವಿಯಿಂದ ಮಹಿಮೆಯುಳ್ಳವನೂ, ಸರ್ವವಿದ್ಯಾಗರ್ವದಿಂದ ಸರ್ವಲೋಕವನ್ನೂ ಹ್ರಸ್ವವಾಗಿಸಿರುವವನೂ, ಅನೇಕ ದಿವ್ಯಾಯುಧಸಮೂಹದಿಂದ ಅಜೇಯನೂ, ಪ್ರತಿಭಟಿಸುವವರಿಲ್ಲದ ಭುಜಪ್ರತಾಪದಿಂದ ಅನುಪಮನೂ, ಸಂಶಯ ರಹಿತವಾದ ಮಂತ್ರಶಕ್ತಿಯಿಂದ ಸ್ವತಂತ್ರನೂ ಆಗಿ ತನ್ನ ತಂಗಿಯಾದ ರುಕ್ಮಿಣಿಗೆ ಸ್ವಯಂವರ ವನ್ನು ಮಾಡುವೆನೆಂದು ಜರಾಸಂಧನೇ ಮೊದಲಾದ ರಾಜರನ್ನು ಬರಿಸಿ, ಅದಕ್ಕಾಗಿ ಆ ವಿಧಾನ ಆ ವ್ಯಯ ಆ ಐಶ್ವರ್ಯಗಳನ್ನು ಆತನೇ ಮಾಡಿಸಿದನು. ಅದೂ ಅಲ್ಲದೆ,

---

೧. ನೋಡಿದಂ (ಕಖಗ) ೨. ಸಂಪತ್ತಿಯಿನುನ್ನತನುಂ (ಕಗ)

ಮುರವಿಧ್ವಂಸಕ ಕೇಳ ಕೈದುವಿಡಿದಾಳ್ ಪಣ್ಣಿರ್ದಿಭಂ ಪೂಣ್ದ ನಿಂ
ದ ರಥಂ ಪಲ್ಲಣಿಸಿರ್ದ ವಾಜಿ ವಿಭವಾರ್ಥಂ ತಾನವಂ ರುಕ್ಮಿ ನ
ಚ್ಚಿರನಂತಾ ಕಲಿ ನಚ್ಚುವಂ ಪ್ರಬಳಬಾಹಾದಂಡಮಂ ಜ್ಯಾರವೋ
ದ್ಧುರಕೋದಂಡಮನೂರುಪೀಡಿತವಿಶಾಲಸ್ಕಂಧವೇತಂಡಮಂ ೯

ವ|| ಎಂದು ಕುಟಿಲಹೃದಯಂ ತನ್ನ ಮಗನ ವಿಕ್ರಾಂತಮಂ ತೋಱಿ ನುಡಿಯೆ

ಕರಿವಿಘಟನಪಟು ಕೇಸರಿ
ಕುರಂಗಚೇಷ್ಟೆಯನವಜ್ಞೆಗೆಯ್ವವೊಲುಗ್ರಾ
ಸುರಮರ್ದನನಾ ರುಕ್ಮಿ
ಸ್ಫುರಣೆಗೆ ನಸುನಕ್ಕು ಭೀಷ್ಮಕಂಗಿಂತೆಂದಂ ೧೦

ಜಗಮಂ ರಕ್ಷಿಸಲೆಂದು ಕೃಷ್ಣವೆಸರಿಂ ಪುಟ್ಟಿರ್ದ ನಾರಾಯಣಂ
ಬಗೆವಂದಾಂ ಭವದೀಯನಂದನೆ ಮದರ್ಥಂ ರುಕ್ಮಿಣೀನಾಮದಿಂ
ದೊಗೆದಾ ಲಕ್ಷ್ಮಿಯೆನಲ್ಕೆಯಾನೆ ಒಡೆಯಂ ನಾರಾಯಣಂಗುಂಟು ಪೊ
ರ್ದುಗೆ ನೀವಾಕೆಯನೀ ಸ್ವಯಂವರದೊಳನ್ಯರ್ಗೀಯಲೇಂ ಬರ್ಕುಮೇ ೧೧

ವ|| ಎಂದು ಪುರುಷಸಿಂಹಂ ಸಿಂಹಪೀಠದಿಂದೆಟ್ದು ನಿಂದಿರ್ಪುದುಂ

ಅನಿತುಂ ಗಂಧಗಜೇಂದ್ರಕೋಟಿಗನಿತುಂ ಜಾತ್ಯಶ್ವಸಂತಾನಕ
ಕ್ಕನಿತುಂ ದಿವ್ಯವರೂಥವಾಜಿಗನಿತುಂ ವಾರಾಂಗನಾಸಂಕುಲ
ಕ್ಕನಿತುಂ ಭಾಸುರಕೋಶರಾಜಿಗಧಿನಾಥಂ ಶ್ರೀಜಗನ್ನಾಥನೆಂ
ದು ನೃಪಾಲರ್ ವನಮಾಲಿಗೋಲಗಿಸಿದರ್ ತಂತಮ್ಮ ಸರ್ವಸ್ವಮಂ ೧೨

೯. "ಮುರವಿಧ್ವಂಸಕನೇ, ಕೇಳು. ಆಯುಧಧಾರಿಗಳಾದ ಆಳುಗಳೂ ಸಿದ್ಧಪಡಿಸಿರುವ ಆನೆಯೂ ಹೂಡಿ ನಿಲ್ಲಿಸಿರುವ ರಥವೂ ಜೀನು ಹಾಕಿರುವ ಕುದುರೆಯೂ ವಿಭವಾರ್ಥವಾಗಿರುವುದು. ರುಕ್ಮಿಯು ಅದನ್ನು ನೆಚ್ಚಿರುವವನೂ ಅಲ್ಲ; ಆ ಶೂರನೂ ಪ್ರಬಲವಾದ ಭುಜದಂಡವನ್ನೂ ಜ್ಯಾಶಬ್ದದಿಂದ ಭಯಂಕರವಾದ ತನ್ನ ಬಿಲ್ಲನ್ನೂ ತನ್ನ ತೊಡೆಗಳಿಂದ ಪೀಡಿತವಾದ ವಿಶಾಲವಾದ ಹೆಗಲಿನ ಆನೆಯನ್ನೂ ನೆಚ್ಚುವನು." ವ|| ಎಂದು ಕಪಟ ಹೃದಯನಾದ ಆ ಭೀಷ್ಮಕನು ತನ್ನ ಮಗನ ಪರಾಕ್ರಮವನ್ನೇ ಕಾಣಿಸಿ ಮಾತನಾಡಿದನು. ೧೦. ಆನೆಯನ್ನು ಸೀಳುವುದರಲ್ಲಿ ಸಮರ್ಥವಾದ ಸಿಂಹವು ಜಿಂಕೆಯ ಚೇಷ್ಟೆಯನ್ನು ಅಲಕ್ಷ್ಯಮಾಡುವಂತೆ, ಉಗ್ರಾಸುರರನ್ನು ಮರ್ದಿಸುವ ಕೃಷ್ಣನು, ಭೀಷ್ಮಕನು ಮಾಡಿದ ರುಕ್ಮಿಯ ಪರಾಕ್ರಮಾದಿಗಳ ಹೊಗಳಿಕೆಗೆ ನಸುನಕ್ಕು, ಅವನಿಗೆ ಹೀಗೆ ಹೇಳಿದನು. ೧೧. "ಸರಿಯಾಗಿ ಯೋಚನೆ ಮಾಡಿದರೆ, ನಾನು ಪ್ರಪಂಚರಕ್ಷಣೆಗಾಗಿ ಕೃಷ್ಣನೆಂಬ ಹೆಸರಿನಿಂದ ಹುಟ್ಟಿರುವ ನಾರಾಯಣನು. ನಿನ್ನ ಮಗಳು ನನಗಾಗಿಯೇ ರುಕ್ಮಿಣಿಯೆಂಬ ಹೆಸರಿನಿಂದ ಉದಿಸಿರುವ ಆ ಲಕ್ಷ್ಮಿ ಆಗಿರುವಾಗ ನಾನೇ ಅವಳಿಗೆ ಪತಿ. ನಾರಾಯಣನಿಗೆ ಮಾತ್ರವೇ ಅವಳ ಸಂಬಂಧವಿರುತ್ತದೆ. ಹೀಗಿರುವಾಗ ಈ ಸ್ವಯಂವರದಲ್ಲಿ ನೀವು ಆಕೆಯನ್ನು ಬೇರೆಯವರಿಗೆ ಕೊಡಲಾಗುವುದೇನು?!" ವ|| ಎಂದು ಪುರುಷಸಿಂಹ (ಕೃಷ್ಣ)ನು ಸಿಂಹಾಸನದಿಂದ ಎದ್ದು ನಿಂತನು. ೧೨. ಅಷ್ಟು ಗಜೇಂದ್ರಕೋಟಿಗೂ ಅಷ್ಟು ಜಾತ್ಯಶ್ವ ಸಮೂಹಕ್ಕೂ ಅಷ್ಟು ದಿವ್ಯರಥಾಶ್ವಗಳಿಗೂ ಅಷ್ಟು ವೇಶ್ಯಾಂಗನಾ ಸಮೂಹಕ್ಕೂ ಅಷ್ಟು

ವ।। ಆ ವಸ್ತುವಾಹನಂಗಳಂ ಬೇಱಿವೇಱಿ ನೋಡಿ ಕೈಕೊಂಡು ತಾಂಬೂಲ ದಾನಾದಿಸನ್ಮಾನಂಗಳಿಂ ಭೂನಾಥರಂ ಬೀಳ್ಕೊಳಿಸಿ ದಿವ್ಯವರೂಥಮನೇಱಿ ಮಧುರಾಪುರಾಭಿಮುಖನಾಗಿ

ವಿಲುಳಚ್ಚಾಮರಸಂಕುಲಂ ನಿಜಯಶಃಕ್ಷೀರಾಬ್ಧಿಕಲ್ಲೋಲಮಂ
ಗೆಲೆ ನಾನಾತಪವಾರಣಧ್ವಜಸಮಾಜಂ ಜಂಗಮೋದ್ಯಾನಮಂ
ಗೆಲೆ ಸೇನೋತ್ಥಿತಸಾಂದ್ರಧೂಳಿ ವಿಜಯಶ್ರೀವಶ್ಯಚೂರ್ಣೌಘಮಂ
ಗೆಲೆ ಗೆಲ್ದಿಂದ್ರಮಹಾವಿಳಾಸಮನುಪೇಂದ್ರಂ ಬಂದನಾನಂದದಿಂ ೧೩

ವ।। ಅನ್ನೆಗಮತ್ತ ಶಿಶುಪಾಲ ಸಾಲ್ವ ದಂತವಕ್ರರುಮೆಂಬ ದೈತ್ಯಾವತಾರವೀರರೊಳ್ ಜರಾಸಂಧನಾಳೋಚನತತ್ಪರನಾಗಿ

ಜಯಮಕ್ಕೆ ಭಂಗಮಕ್ಕಾ
ಜಿಯೊಳುಚಿತಂ ಸ್ತ್ರೀನಿಮಿತ್ತದಿಂ ನೆರೆದ ಸಭಾ
ಲಯದಲ್ಲಿ ಭಂಗಮಂ ಕ್ಷ
ತ್ರಿಯಸಂಘಕ್ಕಿಂತು ಮಾಡಿ ಪೋಕುಮೆ ಕೃಷ್ಣಂ ೧೪

ಅವನ ಭುಜದರ್ಪಮಂ ಕಿಡಿ
ಸುವನಿರ್ದಪನಲ್ತೆ ಕಾಲಯವನಂ ಯದುಪಾ
ರ್ಥಿವಸುಭಟಮೇಘವಿಘಟನ
ಪವನಂ ರಣರಂಗವಿಜಯಲಕ್ಷ್ಮೀಭವನಂ ೧೫

ವಿಸ್ತಾರವೂ ಪ್ರಕಾಶಮಾನವಾದುದೂ ಆದ ಕೋಶ ಸಮೂಹಕ್ಕೂ ಶ್ರೀ ಜಗನ್ನಾಥ ಕೃಷ್ಣನೇ ಅಧಿಪತಿಯೆಂದು ರಾಜರು ಆತನಿಗೆ ತಮ್ಮ ತಮ್ಮ ಸರ್ವಸ್ವವನ್ನೂ ಒಪ್ಪಿಸಿದರು. ವ।। ಕೃಷ್ಣನು ಆ ವಸ್ತು ವಾಹನಾದಿಗಳನ್ನು ಬೇರೆ ಬೇರೆಯಾಗಿ ನೋಡಿ ಸ್ವೀಕರಿಸಿ ರಾಜರನ್ನು ತಾಂಬೂಲ ದಾನಾದಿ ಸನ್ಮಾನ ಪೂರ್ವಕವಾಗಿ ಕಳುಹಿಸಿಕೊಟ್ಟು, ದಿವ್ಯರಥ ವನ್ನೇರಿ ಮಧುರಾಪುರಾಭಿ ಮುಖನಾದನು. ೧೩. ಇಂದ್ರನ ವಿಲಾಸವನ್ನೂ ಗೆದ್ದ ಕೃಷ್ಣನು ತನಗೆ ಬೀಸುತ್ತಿರುವ ಚಾಮರ ಸಮೂಹವು ತನ್ನ ಯಶಸ್ಸಿನಂತೆ ಹೊಳೆಯುವ ಕ್ಷೀರ ಸಾಗರದ ಅಲೆಗಳನ್ನೂ ಅನೇಕ ಬಗೆಯ ಛತ್ರಿಗಳ ಮತ್ತು ಬಾವುಟಗಳ ಗುಂಪು ಚಲಿಸುವ ಉದ್ಯಾನವನವನ್ನೂ ಸೇನೆಯಿಂದ ಎದ್ದ ಒತ್ತಾದ ಧೂಳು ವಿಜಯಲಕ್ಷ್ಮಿಯನ್ನು ವಶಪಡಿಸಿಕೊಳ್ಳುವ ವಶ್ಯ ಚೂರ್ಣರಾಶಿಯನ್ನೂ ಗೆಲ್ಲುತ್ತಿರುವಲ್ಲಿ ಆನಂದದಿಂದ ಬಂದನು. ವ।। ಅಷ್ಟರಲ್ಲಿ ಅತ್ತಕಡೆ ಶಿಶುಪಾಲ ಸಾಲ್ವ ದಂತವಕ್ರರೆಂಬ ರಾಕ್ಷಸಾವತಾರ ವೀರರ ಸಂಗಡ ಜರಾಸಂಧನು ಆಲೋಚನೆಯಲ್ಲಿ ಆಸಕ್ತನಾದನು. ೧೪. ಯುದ್ಧದಲ್ಲಿ ಜಯವಾಗಲಿ, ಅಪಜಯವೇ ಆಗಲಿ, ಉಚಿತವಾದುದು. ಸ್ತ್ರೀಸ್ವಯಂವರಕ್ಕಾಗಿ ನೆರೆದ ಸಭಾಮಂದಿರದಲ್ಲಿ ಕ್ಷತ್ರಿಯ ಸಂಘಕ್ಕೇ ಹೀಗೆ ಕೃಷ್ಣನು ಭಂಗಮಾಡಿ ಹೋಗಬಹುದೆ?! ೧೫. ಅವನ ತೋಳಿನ ಕೊಬ್ಬನ್ನು ಕೆಡಿಸುವುದಕ್ಕೆ ಯದುರಾಜಸುಭಟಮೇಘವನ್ನು ವಿಘಟಿಸುವುದರಲ್ಲಿ ಸಮರ್ಥ ವಾಯುವೂ, ರಣರಂಗವಿಜಯಲಕ್ಷ್ಮಿಗೆ ನೆಲೆಯೂ ಆದ ಕಾಲಯವನನು ಇರುವನಲ್ಲವೇ?!

ವ|| ಅದೆಂತೆಂದೊಡೆ

ಯದುನಾಶಕ್ಷಮಪುತ್ರನಂ ಪಡೆವೆನೆಂದೋರಂತಯಶ್ಚೂರ್ಣಭ
ಕ್ಷ್ಯದಿನಾರಾಧಿಸಿ ರುದ್ರನಿಂ ಪಡೆದನಷ್ಟಾವಕ್ರನಿಷ್ಟಾರ್ಥಮಂ
ಪದಪಿಂದಂ ಯವನಂಗೆ ತತ್ಫಲಮನೀಯಲ್ ಯಾದವತ್ರಾಸಿ ಪು
ಟ್ಟಿದನಂತಾ ಯವನಂಗೆ ಕಾಲಯವನಂ ದುರ್ವಾರದೋರ್ವಿಕ್ರಮಂ ೧೬

ಕಡಲಂ ಪೀರಲುಮುರ್ವಿಯಂ ತಿಱಿಪಲುಂ ಚಂದ್ರಾರ್ಕರಂ ಮೀಂಟಲುಂ
ಸಿಡಿಲಂ ನುಂಗುಲುಮದ್ರಿಜೇಶನುರಿಗಣ್ಣಂ ಮುಚ್ಚಲುಂ ಮೇರುವಂ
ಪೊಡೆಸೆಂಡಾಡಲುಮಾರ್ಪ ಕಾಲಯವನಂಗೇನಾರ್ಪನೇ ಯುದ್ಧದೊಳ್
ತೊಡರಲ್ ಚಕ್ರಿ ದಿಶಾಗಜಕ್ಕೆ ಕಳಭಂ ಕೈಯಿಕ್ಕಲೇನಾರ್ಕುಮೇ ೧೭

ದೂತರನಟ್ಟಿದೊಡೇಟಿದ
ವಾತಂಗಕ್ಷೌಹಿಣೀತ್ರಯೋದಶನಾಥಂ
ಗೀ ತೆಱದಿಂ ತತ್ಸಮವಿ
ಖ್ಯಾತನೆ ನೀಂ ಪೋಗಿ ಪೇೞ್ ಕಜ್ಜಮದಕ್ಕುಂ ೧೮

ವ|| ಎಂಬುದುಂ ಸೌಭಪುರವರಾಧೀಶ್ವರಂ ಸಾಲ್ವಲನಾ ಮುಹೂರ್ತದೊಳೆ ಪೋಗಿ ನಿಜಸಾಮರ್ಥ್ಯಯೋಗ್ಯಾತಿಥ್ಯಸಂಸ್ಕಾರದಿಂ ಸಂತುಷ್ಟನಾಗಿ ಕುಳ್ಳಿರ್ದು ತನ್ನ ಬಂದ ವೃತ್ತಾಂತಮಂ ಕಾಲಯವನಂಗೆ ಸವಿಸ್ತರಂ ಪೇೞ್

ವ|| ಅದು ಹೇಗೆಂದರೆ- ೧೬. ಅಷ್ಟಾವಕ್ರನು ಯದುಗಳನ್ನು ನಾಶಮಾಡಲು ಶಕ್ತನಾದ ಮಗನನ್ನು ಪಡೆಯಬೇಕೆಂದು, ಕಬ್ಬಿಣದ ಪುಡಿಯನ್ನು ತಿನ್ನುತ್ತ ಸರಿಯಾಗಿ ಈಶ್ವರನನ್ನು ಆರಾಧಿಸಿ, ಅವನಿಂದ ಇಷ್ಟಾರ್ಥವನ್ನು ಪಡೆದನು. ಆದರೆ ಈಶ್ವರನು ಅನುಗ್ರಹಿಸಿದ್ದ ಫಲವನ್ನು, ಯವನನೊಬ್ಬನಿಗೆ ಕೊಟ್ಟುಬಿಟ್ಟನು. ಅದರಿಂದ ಯದುಗಳಿಗೆ ತ್ರಾಸ ಕೊಡುವವನೂ ದುರ್ನಿವಾರಭುಜಪರಾಕ್ರಮವುಳ್ಳವನೂ ಆದ ಕಾಲಯವನನೆಂಬವನು, ಆ ಯವನನಿಗೆ ಮಗನಾಗಿ ಹುಟ್ಟಿದನು. ೧೭. ಸಮುದ್ರವನ್ನು ಹೀರುವುದಕ್ಕೂ ಭೂಮಿಯನ್ನು ತಿರುಗಿಸುವುದಕ್ಕೂ ಚಂದ್ರಸೂರ್ಯರನ್ನು ಮೀಟುವುದಕ್ಕೂ ಸಿಡಿಲನ್ನು ನುಂಗುವುದಕ್ಕೂ ಪಾರ್ವತೀಪತಿಯ ಉರಿಗಣ್ಣನ್ನು ಮುಚ್ಚುವುದಕ್ಕೂ ಮೇರುವಿನಿಂದ ಪುಟ ಚೆಂಡಾಡುವುದಕ್ಕೂ ಆ ಕಾಲಯವನನು ಸಮರ್ಥನಾಗಿರುವನು. ಅಂತಹವನೆದುರಿಗೆ ಯುದ್ಧಕ್ಕೆ ನಿಲ್ಲಲು ಕೃಷ್ಣನು ಸಮರ್ಥನೇ? ದಿಗ್ಗಜದ ಮೇಲೆ ಸಾಮಾನ್ಯವಾದ ಆನೆಯ ಮರಿಯು ಜಗಳಕ್ಕೆ ಕೈಹಾಕಲು ಶಕ್ತಿಯುಳ್ಳುದಾಗಿರುವುದೇ! ೧೮. ಹದಿಮೂರು ಅಕ್ಷೌಹಿಣೀನಾಥನಾದ ಆತನೆಡೆಗೆ ನಾವು ದೂತರನ್ನು ಕಳುಹಿಸಿದರೆ ತಿರಸ್ಕಾರ, ಅಣಕ, ಅವನಿಗೆ ಸಮಪ್ರಸಿದ್ಧನಾದ ನೀನೇ ಅವನಲ್ಲಿಗೆ ಹೋಗಿ ಹೇಳಿದರೆ ನಮ್ಮ ಕಾರ್ಯವಾಗುವುದು. ವ|| ಎನ್ನುತ್ತಲೂ, ಸೌಭಪುರವರಾಧೀಶ್ವರನಾದ ಸಾಲ್ವನು, ಆ ಮುಹೂರ್ತದಲ್ಲೇ ಹೋಗಿ, ತನ್ನ ಸಾಮರ್ಥ್ಯಕ್ಕೆ ಯೋಗ್ಯವಾದ ಆದರಾತಿಥ್ಯದಿಂದ ಸಂತುಷ್ಟನಾಗಿ ಕುಳಿತು, ತಾನು ಬಂದ ವೃತ್ತಾಂತವನ್ನು ಕಾಲಯವನನಿಗೆ ಸವಿಸ್ತರವಾಗಿ

ಕಾಲಯುವನಂ ಪಡೆವೆನೆಂದು ಯದುವಂಶ
ಕ್ಕಾಲಯುವನಂಬುಧಿಶಯಂ ಪುಗುಗುಮಿಂ ನಾ
ಕಾಲಯುವನಂಚಿತಮೃದಂಗಕಹಳಾಢ
ಕ್ಕಾಲಯುವನಂಜದಿರಿಮೆಂದು ಪೊಱಮಟ್ಟಂ ೧೯

ವII ಅನ್ನೆಗಮತ್ತ ಶಿಶುಪಾಲ ಸಾಲ್ವಲ ದಂತವಕ್ರಜರಾಸಂಧಾದಿಗಳುತ್ಸವದಿನಿರಲಾಗಳೊರ್ವಂ ಗುಪ್ತವಾರ್ತಿಕನಾ ವಾರ್ತೆಯಂ ತಂದುಪೇಂದ್ರಂಗೆ ಬಿನ್ನಪಂಗೆಯ್ಯೆ ಮಧುರಾಪುರಕ್ಕನತಿ ದೂರದೊಳ್ ನಿಂದು

ಈ ತ್ರಿಜಗಂಗಳನಿಚ್ಛಾ
ಮಾತ್ರದೆ ಪುಟ್ಟಿಸುವ ಕಿಡಿಪ ದೇವನುಪೇಂದ್ರಂ
ಧಾತ್ರಿಗೆ ನಿಜಮಾನುಷಚಾ
ರಿತ್ರಂ ನೆಗಲ್ವಂತು ಬಗೆದನೊಂದುದ್ಯಮಮಂ ೨೦

ವII ಅಂತು ಬಗೆದು ತನ್ನ ಕೆಲದೊಳಿರ್ದ ಪನ್ನಗಾರಾತಿಯನತಿಪ್ರೀತಿಯಿಂ ನೋಡಿ

ಸ್ತ್ರೀರತ್ನಾರ್ಥಂ ನೃಪತಿಸ
ಭಾರತ್ನಾಕರಮನಾಂ ಕಲಂಕಿದೆನದಱಿಂ
ವೈರಂ ನೆಲೆವೆರ್ಚುಗುಮರಿ
ವೀರರೊಳಂ ಸ್ತ್ರೀಜವೈರಮೇಂ ಕೇವಲಮೇ ೨೧

ಹೇಳಿದನು. ಆಗ ೧೯. ಕಾಲಯವನನು, ಯದುವಂಶಕ್ಕೆ ಆಲಯವನ್ನು ಪಡೆಯುವೆನು. ಕಾಲಯವನನು "ಯದುವಂಶಕ್ಕೆ (ಲಯ) ನಾಶವನ್ನುಂಟುಮಾಡುತ್ತೇನೆ" ಎಂದು ಆ ಮಾತು ಯದುವಂಶಕ್ಕೆ ಬೇರೆ ದ್ವಾರಕಿಯಲ್ಲಿ ಆಲಯವು (ಮನೆಯು) ಆಗುವಂತೆ ಮಾಡುತ್ತೇನೆ ಎಂದು ಹೇಳುವಂತಾಯಿತು. ಸಾಗರಶಯನನಾದ ಕೃಷ್ಣನು, ಇನ್ನು ಮನೋಹರ ಮೃದಂಗ ಕಹಳೆ ಮನೆಯನ್ನು ಪ್ರವೇಶಿಸುವನು. ಹೆದರಬೇಡಿ ಎಂದು ಹೊರಟನು. ವII ಅಷ್ಟರೊಳಗೆ ಅತ್ತಕಡೆ ಶಿಶುಪಾಲ ಸಾಲ್ವಲ ದಂತವಕ್ರ ಜರಾಸಂಧಾದಿಗಳು ಸಂತೋಷದಿಂದ ಇದ್ದರು. ಆಗ ಗೂಢಚಾರನೊಬ್ಬನು ಆ ಸಮಾಚಾರವನ್ನು ತಂದು ಕೃಷ್ಣನಿಗೆ ಬಿನ್ನವಿಸಿದನು. ಕೃಷ್ಣನು ಮಧುರಾಪುರಿಗೆ ಸ್ವಲ್ಪದೂರದಲ್ಲಿ ನಿಂತು ೨೦. ಈ ಮೂರುಲೋಕಗಳನ್ನೂ ತನ್ನ ಇಚ್ಛಾಮಾತ್ರದಿಂದ ಸೃಷ್ಟಿಸುವ ಮತ್ತು ನಾಶಮಾಡುವ ದೇವನು ತಾನೇ ಆದರೂ, ಪ್ರಪಂಚಕ್ಕೆ ತನ್ನ ಮನುಜಚರಿತೆಯೇ ಪ್ರಕಟವಾಗುವಂತೆ ಒಂದು ಕಾರ್ಯವನ್ನು ಯೋಚಿಸಿದನು. ವII ಯೋಚಿಸಿ, ತನ್ನ ಪಕ್ಕದಲ್ಲಿದ್ದ ಗರುಡನನ್ನು ಅತಿಪ್ರೀತಿಯಿಂದ ನೋಡಿ ೨೧. ಸ್ತ್ರೀರತ್ನ (ರುಕ್ಮಿಣಿ)ಕ್ಕಾಗಿ ರಾಜಸಭಾ ರತ್ನಾಕರ (=ಸಮುದ್ರ)ವನ್ನು ನಾನು ಕಲಕಿದೆನು. ಅದರಿಂದ ವೈರಿವೀರರಿಗೆ ನನ್ನ ಮೇಲೆ ದ್ವೇಷವು ಮಿತಿಮೀರುವುದು. ಸ್ತ್ರೀನಿಮಿತ್ತವಾದ ವೈರವು ಸಾಮಾನ್ಯವಾದುದೇ?!

ಒಂದೆಸೆ ದಂತವಕ್ರದನುಜೇಂದ್ರನದೊಂದೆಸೆ ಮಾಗಧೇಶನಂ
ತೊಂದೆಸೆ ಸೌಭವಲ್ಲಭನದೊಂದೆಸೆ ಚೈದ್ಯನುಮಿಂತು ನೋಡೆ ನಾ
ಲ್ಕುಂದೆಸೆಯುಂ ವಿರೋಧಿಮಯಮಿನ್ನೆಮಗಂ ಮಧುರಾಪುರಾಶ್ರಯಂ
ನಿಂದಿತಮಿತ್ತ ಕಾಲಯವನಂ ಗಡ ಬಂದಪನಾಜಿದುರ್ಜಯಂ ೨೨

ರಿಪುಬಲದುರ್ಭೇದನಮತಿ
ವಿಪುಲಂ ಕ್ರೀಡೋಪಯೋಗ್ಯಮೆಂಬೆಡೆಯುಮನೀ
ಕ್ಷಿಪುದೊಂದು ಪೊಟಲುಮಂ ನಡೆ
ಯಿಪುದೀಗಳೆ ನಮ್ಮ ಕಟಕಮಂ ಖಗರಾಜಾ ೨೩

ವ|| ಎಂಬುದುಂ ಕರತಳಾಮಳಕೀಭೂತಭೂತಳಂ ವೈನತೇಯನಿಂತೆಂದಂ

ಜಳನಿಧಿ ಪರಿಖೆಯ ತೆಱದಿಂ
ಬಳಸಿರೆ ಬಹುಗಹನಶೈಲಸುಭಗಂ ಕ್ರೀಡಾ
ಚಳನಂದನಶೋಭಿ ಕುಶ
ಸ್ಥಳವಿರ್ದಪುದತಿವಿಶಾಲಮದನಾಂ ಬಲ್ಲೆಂ ೨೪

ಆ ಸ್ಥಳದೊಳಿನ್ನೆಗಂ ದೇ
ವಸ್ಥಪತಿ ನಿಜಾಜ್ಞೆಯಿಂದೆ ನಿರ್ಮಿಸುಗುಂ ರ
ತ್ನಸ್ಥಗಿತಮೆನಲ್ ಪುರಮಂ
ಪ್ರಸ್ಥಾನಂಗೆಯ್ಗೆ ತಡೆಯದಲ್ಲಿಗೆ ಕಟಕಂ ೨೫

೨೨. ಒಂದುಕಡೆ ರಾಕ್ಷಸೇಂದ್ರನಾದ ದಂತವಕ್ರ, ಇನ್ನೊಂದು ಕಡೆ ಜರಾಸಂಧ, ಮತ್ತೊಂದು ಕಡೆ ಸೌಭರಾಜ ಸಾಲ್ವ, ಬೇರೊಂದುಕಡೆ ಶಿಶುಪಾಲ-ಹೀಗಿರುವುದನ್ನು ನೋಡಿದರೆ ನಾಲ್ಕುದಿಕ್ಕೂ ವಿರೋಧಿಮಯವಾಗಿದೆ. ಯುದ್ಧದಲ್ಲಿ ದುರ್ಜಯನಾದ ಕಾಲಯವನನು ಇತ್ತ ನಮ್ಮ ಮೇಲೆ ಬರುತ್ತಾನೆ. ಆದುದರಿಂದ ಇನ್ನು ಮೇಲೆ ಮಧುಡಕ್ಕೆಗಳಿಗೆ ನೆಲೆಯಾದ ನಾಕಾಲಯವನ್ನು ೧ ಸ್ವರ್ಗಗೃಹವನ್ನು, ೨ ಸ್ವರ್ಗಸಮವಾದ ಮಧುರೆಯ ವಾಸವು ನಮಗೆ ನಿಂದಿತವಾದುದು. ೨೩. ಪಕ್ಷಿರಾಜನೇ ಶತ್ರುಸೈನ್ಯಪ್ರದೇಶಕ್ಕೆ ಅಸಾಧ್ಯವೂ ವಿಧವಿಧಕ್ರೀಡೆಗಳಿಗೆ ತಕ್ಕುದೂ ಆದ ಒಂದು ಪ್ರದೇಶವನ್ನು ನೀನು ನೋಡಿ, ಅಲ್ಲಿ ಒಂದು ಪಟ್ಟಣವನ್ನೂ ನಿರ್ಮಿಸಬೇಕು. ಅಲ್ಲಿಗೆ ನಮ್ಮ ಕಟಕವನ್ನು ಈಗಲೇ ಕರೆದುಕೊಂಡು ಹೋಗಬೇಕು." ವ|| ಎಂದು ಹೇಳಿದನು. ಅಂಗೈ ನೆಲ್ಲಿಯ ಕಾಯಂತೆ ಭೂಮಂಡಲವನ್ನು ಚೆನ್ನಾಗಿ ನೋಡಿರುವ ಗರುಡನು. ೨೪. "ಸಮುದ್ರವು ಕಂದಕದಂತೆ ಸುತ್ತುವರಿದಿರುವುದೂ ಬಹುಗಹನವಾದ ವನಶೈಲಗಳಿಂದ ಮನೋಹರವಾದುದೂ ಕ್ರೀಡಾಪರ್ವತ ನಂದನವನ ಗಳಿಂದ ಸೊಗಸುತ್ತಿರುವುದೂ ಅತಿ ವಿಶಾಲವೂ ಆದ ಕುಶಸ್ಥಳವೆಂಬುದೊಂದಿದೆ. ಅದನ್ನು ನಾನು ನೋಡಿದ್ದೇನೆ. ೨೫. "ಆ ಸ್ಥಳದಲ್ಲಿ ಇಷ್ಟರಲ್ಲೇ ದೇವಶಿಲ್ಪಿಯು ನಿಮ್ಮಾಜ್ಞೆಯಿಂದ ರತ್ನಖಚಿತವಾದುದೆನ್ನುವಂತೆ ಪಟ್ಟಣವನ್ನು ನಿರ್ಮಿಸುವನು. ಪರಿವಾರವು ತಡಮಾಡದೆ

ವ॥ ಎಂದು ವಿನತಾನಂದನಂ ನುಡಿಯೆ ಪೊಡೆಯಲರನಾಜ್ಞೆಯಿಂದಾಗಳುಗ್ರಸೇನ ವಸುದೇವಾದಿಯಾದವಪ್ರಧಾನಪುರುಷರ್ ಸಮಸ್ತಹಸ್ತ್ಯಶ್ವರಥಪದಾತಿಬಲಂಬೆರಸು ಮಧುರಾ ಪುರೀನಿವಾಸಿಗಳಂ ಮುಂದಿಟ್ಟೊಡಗೊಂಡು ಪೊಱಮಡೆ

ಇಳೆಯೆಲ್ಲಂ ಚಾತುರಂಗಪ್ರಬಲಬಲಪದಾಚ್ಛಾದಿ ರೋದೋಂತವೆಲ್ಲಂ
ಚಳನಾನಾವೈಜಯಂತೀಪಟಲಪಟಪಿನದ್ಧಂ ದಿಶಾಚಕ್ರವೆಲ್ಲಂ
ಜಳಧಿಧ್ವಾನೋಚ್ಚಕೋಳಾಹಳರವಬಧಿರೀಭೂತಮೆಂಬಂತಗುರ್ವಂ
ತಳೆದತ್ತಿತ್ತುತ್ತಮೆತ್ತಂ ನಡೆದುದು ಕಟಕಂ ರಾಮತಾರ್ಕ್ಷ್ಯಾಭಿಗುಪ್ತಂ ೨೬

ವ॥ ಅನ್ನೆಗಮತ್ತ ಮಧುರಾಪುರದ ಪೊಱವೊಳಲೊಳ್

ಪೀತಾಂಬರನಿರ್ದಂ ಸಮ
ರಾತಿಥಿ ಬರ್ಕೆಂದು ಸಾಱುವಂತೆ ಧನುರ್ಜ್ಯಾ
ಘಾತರವಾವೃತಸಕದಿ
ಶಾತಟನಾತ್ಮೀಯಭುಜಬಲೈಕಸಹಾಯಂ ೨೭

ವ॥ ಆಗಳ್

ಅನಿಮೇಷಾದ್ರಿಯನಬ್ಧಿಯಂ ಭಗಣಮಂ ಚಂದ್ರಾರ್ಕರಂ ವ್ಯೋಮವಾ
ಹಿನಿಯಂ ಕಾಣದೆ ಪದ್ಮಜಂ ವಿಕಳಚಿತ್ತಂ ಮತ್ತಮಂ ಪುಟ್ಟಿಸಲ್
ಮನಮಂ ತರ್ಪಿನೆಗಂ ಜಗದ್ವಿವರದೊಳ್ ಸೇನಾರಜಂ ಕೊರ್ವಿ ಪ
ರ್ವಿನಗುರ್ವಂ ಪಡೆವಂತೆ ಕಾಲಯವನಂ ಬಂದಂ ಬಳಾಟೋಪದಿಂ ೨೮

ಅಲ್ಲಿಗೆ ಪ್ರಸ್ಥಾನ ಮಾಡಲಿ. ವ॥ ಎಂದು ಗರುಡನು ಹೇಳಿದನು. ಆಗ ಪದ್ಮನಾಭನ ಆಜ್ಞೆಯಿಂದ ಉಗ್ರಸೇನ ವಸುದೇವಾದಿ ಯಾದವ ಪ್ರಧಾನಪುರುಷರು - ಆನೆಕುದುರೆತೇರುಕಾಲಾಳುಗಳ ಸೇನೆಯೊಡನೆ ಮಧುರಾಪುರನಿವಾಸಿಗಳನ್ನು ಮುಂದಿಟ್ಟೊಡಗೊಂಡು, ಹೊರಟರು. ೨೬. ಬಲರಾಮ ಗರುಡರಿಂದ ಅಭಿರಕ್ಷಿತವಾದ ಆ ಕಟಕವು ಇತ್ತ ಅತ್ತ ಉತ್ತ ಎನ್ನದೆ ಎಲ್ಲ ಕಡೆಯೂ ಭೂಮಿಯಲ್ಲಿ ದೊಡ್ಡದಾದ ಚತುರಂಗ ಸೇನೆಯ ಕಾಲುಗಳಿಂದ ಕವಿದುದಾಗಿದೆ. ಭೂಮ್ಯಾಕಾಶಗಳ ಮಧ್ಯಪ್ರದೇಶವು ಚಲಿಸುತ್ತಿರುವ ಅನೇಕ ಬಗೆಯ ಬಾವುಟಗಳ ವಸ್ತ್ರಗಳಿಂದ ಮುಚ್ಚಿಹೋಗಿದೆ. ದಿಙ್ಮಂಡಲವೆಲ್ಲ ಸಮುದ್ರಘೋಷದಂತೆ ಇರುವ ಸೇನೆಯ ಕಲಕಲಧ್ವನಿಯಿಂದ ಕಿವುಡಾದಂತಾಗಿದೆ ಎನ್ನುವಂತೆ ಅತಿಶಯವೂ ಭಯಂಕರವೂ ಆಗಿ ನಡೆಯಿತು. ವ॥ ಅಷ್ಟರಲ್ಲಿ ಮಧುರಾಪುರದ ಹೊರವಳಯದಲ್ಲಿ ೨೭. ತನ್ನ ಭುಜಬಲವೊಂದನ್ನೇ ಸಹಾಯವಾಗಿ ಪಡೆದಿರುವ ಪೀತಾಂಬರಧಾರಿಕೃಷ್ಣನು - ಯುದ್ಧಾತಿಥಿಯು ಬರಲಿ ಎಂದು ಸಾರುವುದೋ ಎನ್ನುವಂತಿದ್ದ ತನ್ನ ಬಿಲ್ಲಿನ ಹೆದೆಯ ಟಂಕಾರವು ದಿಕ್ಕುಗಳ ಕೊನೆಯನ್ನು ಮುಟ್ಟುವಂತೆ ಮಾಡುತ್ತ ನಿಂತಿದ್ದನು. ವ॥ ಆಗ ೨೮. ಬ್ರಹ್ಮನು ಮೇರುಗಿರಿಯನ್ನೂ ನಕ್ಷತ್ರ ಮಂಡಲವನ್ನೂ ಚಂದ್ರಸೂರ್ಯರನ್ನೂ ಆಕಾಶಗಂಗೆಯನ್ನೂ ಕಾಣದೆ ವಿಕಲ್ಪಚಿತ್ತನಾಗಿ ಅವುಗಳನ್ನು ಮತ್ತೆ ಸೃಷ್ಟಿಸಲು ಮನಸ್ಸು ಮಾಡುವಂತಾಗುವ ಹಾಗೆ ತನ್ನ ಸೇನೆಯ ಧೂಳು ಜಗತ್ತಿನಲ್ಲಿ

ವ|| ಆ ಸಮಯದೊಳ್

ಜ್ಯಾತತರುತಿ ಮಿಗೆ ಬಳಧೂ
ಳೀತತಿಯಂ ಗಱಿಯ ಗಾಳಿ ತೂಳ್ವಿನಮಿಷುಸಂ
ಘಾತದಿನಿಸುತುಂ ಕೃಷ್ಣನ
ರಾತಿಯ ಬಗೆಗಟ್ಟಿ ತಿಂಬ ಜವನಂತಿರ್ದಂ ೨೯

ವ|| ಅಂತಿರ್ದ ದನುಜಕುಳವಿಳಯಕಾಲನಂ ಕಾಲಯವನಂ ನೋಡಿ

ಅವಿಧೇಯಂ ಕ್ಷತ್ರಲೋಕಂ ನೆರೆದು ಪೊಣರ್ದೊಡಾ ತ್ರಿಂಶದಕ್ಷೌಹಿಣೀಸೈ
ನ್ಯವನೋರೊರ್ಮೊಂದೆಮೆಯ್ಯಿಂ ತವಿಸಿ ತವದಧೋಃಕಂಡುವಿಂದೀತನಿಂದೆ
ಮ್ಮುವನಿಂತೇಕಾಂಗದಿಂದಂ ಗೆಲಲೊಡರಿಪನೀ ತೇಜದಿಂ ದರ್ಪದಿಂ ಸೌ
ಷ್ಠವದಿಂ ಶಸ್ತ್ರಾಸ್ತ್ರವಿಜ್ಞಾನದ ಯದುಕುಲನೊಳ್ ಗೆಲ್ಲವೇಕಾಗದಿರ್ಕುಂ ೩೦

ವ|| ಎಂದು ಮನದೊಳೆ ಮೆಚ್ಚಿ ಬಿಚ್ಚಳಿಸಿ ತನ್ನ ಸೈನ್ಯಮಂ ಕೈವೀಸೆ

ಪಕ್ಕರೆಯಿಕ್ಕಿದಶ್ವತತಿ ಪಣ್ಣಿದ ದಂತಿಘಟಾಳಿ ಸನ್ನಣಂ
ಬೊಕ್ಕ ಪದಾತಿ ಹೇತಿ ರಥ ಸೂತ ಹಯಾನ್ವಿತವಾದ ತೇರ್ಗಳೆ
ಕ್ಕೆಕ್ಕೆಯಿನೆಯ್ದೆವರ್ಪಪರಿಬಲಾಬ್ಧಿಯನಚ್ಯುತನೊಂದೆ ಮುಷ್ಟಿಯೊಳ್
ಲಕ್ಕಸರಲ್ಗಳಂ ತುಡುತುಮೆಚ್ಚು ತಱುಂಬಿದನಸ್ತ್ರವೇಳೆಯಿಂ ೩೧

ವ|| ಅನಂತರಂ

ಅವಕಾಶವಿರುವೆಡೆಯಲ್ಲೆಲ್ಲಾ ಒತ್ತಾಗಿ ತುಂಬಿ ಭಯವನ್ನುಂಟು ಮಾಡುತ್ತಿರಲು ಕಾಲಯವನನು ಬಲಾಡಂಬರದಿಂದ ಬಂದನು. ವ|| ಆ ಸಮಯದಲ್ಲಿ ೨೯. ಬಿಲ್ಲಿನ ಹೆದೆಯ ವಿಸ್ತಾರಧ್ವನಿಯು ಹೆಚ್ಚಿ ಬಾಣಗಳ ಗರಿಯ ಗಾಳಿಯು ಸೇನೆಯ ಧೂಳಿನ ರಾಶಿಯನ್ನು ದೂರಕ್ಕೋಡಿಸುವಂತೆ ಬಾಣಗಳನ್ನು ಪ್ರಯೋಗಿಸುತ್ತಿದ್ದ ಕೃಷ್ಣನು ಶತ್ರುವಿಗೆ ತನ್ನನ್ನು ಅಟ್ಟಿಸಿಕೊಂಡು ಬಂದು ತಿನ್ನುವ ಯಮನಂತೆ ಕಾಣಿಸಿದನು. ವ|| ಹಾಗಿದ್ದ ರಾಕ್ಷಸಕುಲಪ್ರಳಯಕಾಲ ಯಮ (ಕೃಷ್ಣ)ನನ್ನು ಕಾಲಯವನನು ನೋಡಿದನು. ೩೦. “ಈತನಿಗೆ ಅವಿಧೇಯರಾದ ಕ್ಷತ್ರಿಯರೆಲ್ಲರೂ ಸೇರಿ, ಯುದ್ಧ ಮಾಡಿದರೂ ಮೂವತ್ತು ಅಕ್ಷೌಹಿಣೀ ಸೈನ್ಯವನ್ನೂ ಒಂದೊಂದು ಸಾರಿಯೂ ಏಕಾಕಿಯಾಗಿಯೇ ನಾಶಮಾಡಿ ಇನ್ನೂ ಕಡಿಮೆಯಾಗದ ತೋಳ ತೀಟೆಯಿಂದ ನಮ್ಮನ್ನೂ ಹೀಗೆ ಏಕಾಂಗದಿಂದಲೇ ಗೆಲ್ಲಲು ಯತ್ನಿಸುತ್ತಾನೆ. ಈ ತೇಜಸ್ಸಿನಿಂದಲೂ ದರ್ಪದಿಂದಲೂ ಸೌಷ್ಠವದಿಂದಲೂ ಶಸ್ತ್ರಾಸ್ತ್ರವಿಜ್ಞಾನದಿಂದಲೂ ಪೂರ್ಣನಾಗಿರುವ ಈ ಯದುಕುಲಕೃಷ್ಣನಿಗೆ ಜಯವು ಏಕೆ ಲಭಿಸದೆ ಇದ್ದೀತು?” ವ|| ಎಂದು ಮನಸ್ಸಿನಲ್ಲೇ ಮೆಚ್ಚಿ ವಿವರಿಸಿ, ತನ್ನ ಸೈನ್ಯಕ್ಕೆ ಯುದ್ಧವನ್ನಾರಂಭಿಸುವಂತೆ ಕೈಬೀಸಿ, ತಿಳಿಸಿದನು. ೩೧. ಪಕ್ಷರಕ್ಷೆಯನ್ನು ಹಾಕಿದ ಕುದುರೆಗಳ ಗುಂಪೂ ಸಿದ್ಧಪಡಿಸಿದ ಆನೆಗಳ ಸಮೂಹವೂ ಕವಚಧಾರಿಗಳಾದ ಕಾಲಾಳುಗಳೂ ಬಾಣ, ಸಾರಥಿಯುತರಾಗಿ ಕುದುರೆಗಳನ್ನು ಕಟ್ಟಿರುವ ರಥಗಳೂ ಒಟ್ಟೊಟ್ಟಾಗಿ ಹತ್ತಿರ ಬರುತ್ತಿರಲು ಆ ಸೇನಾಸಾಗರವನ್ನು ಒಂದೇ ಮುಷ್ಟಿಯಿಂದ ಲಕ್ಷಬಾಣಗಳನ್ನು ಕೊಡುತ್ತ ಪ್ರಯೋಗಿಸಿ, ಅಸ್ತ್ರಗಳ ಸಮೂಹವೆಂಬ ದಡದಿಂದ ದೂರ ತಳ್ಳಿದನು. ವ|| ಅನಂತರ

ಆನಿತಾಳನನಿತು ಕುದುರೆಯ
ನನಿತಾನೆಯನನಿತು ತೇರನೊರ್ಮೊದಲೊಂದಂ
ಬಿನ ಕೊನೆಯಿಂ ತವಿಸುವೆನೆಂ
ದನಲಾಸ್ತ್ರಮನಸುರವೈರಿ ತೊಟ್ಟಾರ್ದೆಚ್ಚಂ ೩೨

[1]ಪಡಿಮಾತೇನಿದು ಕೃಷ್ಣನಾಜ್ಞೆಯೊಳೆ ವಿದ್ವಿಟ್ಸೇನೆಯಂ ಸುಟ್ಟು ಮಾ
ಣ್ದೊಚೆ ಮಾಣ್ಗುಂ ಪೆಱತಾದೊಡೀ ತ್ರಿಜಗಮಂ ನಿಶ್ಶೇಷಮಪ್ಪನ್ನೆಗಂ
ಸುಡುಗುಂ [2]ತಾನಿದಿಱೊಳ್ ಲಯಾಗ್ನಿ ನೆಲಸಿತ್ತೆಂಬಂತು ತತ್ಸಾಯಕಂ
ಕಿಡಿಯುಂ ಕೇಸುರಿ ಸೂಸೆ ಬಂದಱುರ್ದು ಕೊಂದತ್ತಾ ಚತುಸ್ಸೈನ್ಯಮಂ ೩೩

ವೈಕುಂಠಶರಾಗ್ನಿ ಶಿಖಾ
ನೀಕದೆ ಭಸ್ಮಾವಶೇಷಮಾಗಿ ವಿಪಕ್ಷಾ
ನೀಕಂ ಚತುರಂಗವ್ಯೂ
ಹಾಕಾರದೆ ರಂಗವಲಿವೊಲಿರ್ದುದು ರಣದೊಳ್ ೩೪

ಪಡೆಯೆನಿತನಿತಱ ಬಲ್ಪುಂ
ಪೊಡರ್ಪುಮೀತನೊಳೆ ನೆಲಸಿದತ್ತೆನೆ ಸೈನ್ಯಂ
ಮಡಿವುದುಮದೊಂದಗುರ್ವಿಂ
ಗೆಡೆಗೊಂಡಿಸುತಿರ್ದನತಿಬಳಂ ಯವನಸುತಂ ೩೫

೩೨. ಕೃಷ್ಣನು ಕಾಲಯವನನ ಅಷ್ಟುಕಾಲಾಳುಗಳನ್ನು ಅಷ್ಟು ಕುದುರೆಗಳನ್ನೂ ಆನೆಯನ್ನೂ ತೇರನ್ನೂ ಒಂದೇ ಸಾರಿ ಒಂದು ಬಾಣದ ತುದಿಯಿಂದಲೇ ನಾಶಮಾಡುವೆನೆಂದು ಆಗ್ನೇಯಾಸ್ತ್ರವನ್ನು ತೊಟ್ಟು ಗರ್ಜಿಸಿ, ಪ್ರಯೋಗಿಸಿದನು. ೩೩. ಬೇರೆ ಮಾತೇನಿದೆ? ಇದು ಕೃಷ್ಣನ ಆಜ್ಞೆಯಿಂದ ಶತ್ರುಸೇನೆಯನ್ನು ಮಾತ್ರ ಸುಟ್ಟು ಅಷ್ಟಕ್ಕೇ ಬಿಡುವುದಾದರೆ ಬಿಡಬಹುದು. ಇಲ್ಲವಾದರೆ ಮೂರುಲೋಕವನ್ನೂ ನಿಶ್ಶೇಷವಾಗುವಂತೆ ಸುಡುತ್ತದೆ. ಇದಿರಾಗಿ ಪ್ರಳಯಾಗ್ನಿಯೇ ನೆಲೆಸಿದೆ ಎನ್ನುವಂತೆ ಆ ಅಸ್ತ್ರವು ಕಿಡಿಯನ್ನೂ ಕೆಂಪುರಿಯನ್ನೂ ಹರಡುತ್ತ ಬಂದು ಆ ನಾಲ್ಕು ಬಗೆಯ ಸೈನ್ಯವನ್ನೂ ಆವರಿಸಿ ಕೊಂದಿತು. ೩೪. ವಿಷ್ಣುವಿನ ಬಾಣಾಗ್ನಿಜ್ವಾಲೆಯಿಂದ ಸುಟ್ಟು ಬೂದಿಯಾದ ಆ ಸೇನೆಯು ಚತುರಂಗವು ನಿಂತಿದ್ದೆಡೆಯಲ್ಲೇ ಅದೇ ಆಕಾರದಲ್ಲಿ ರಣರಂಗದಲ್ಲಿ ರಂಗವಲ್ಲಿಯಂತೆ ಕಾಣಿಸುತ್ತಿದ್ದಿತು. ೩೫. ಸೈನ್ಯವೆಷ್ಟೋ ಅಷ್ಟರ ಶಕ್ತಿಯೂ ಪರಾಕ್ರಮವೂ ಈತನಲ್ಲೇ ನೆಲೆಸಿದೆಯೆನ್ನುವಂತೆ ಸೈನ್ಯವು ನಾಶವಾದ ಬಳಿಕ ಅತಿಬಲಶಾಲಿಯಾದ ಕಾಲಯವನನು ಅದೊಂದು ಅತಿಶಯವಾದ ಭಯಂಕರತೆಯನ್ನು ಪಡೆದು ಬಾಣಗಳನ್ನು ಹೊಡೆಯುತ್ತಿದ್ದನು.

---

೧. ಪಡೆಮಾತೇನಿದು (ಕಖಗ) ೨. ತಾನಿದಱೊಳ್ (ಕಗ)

ಜ್ಯಾತತಘೋಷಂ ಪುದಿಯೆ ದಿ
ಶಾತಟಮಂ ಕಾಲಯವನನಿಸೆ ತಚ್ಛರನಿ
ರ್ಘಾತಂ ಪಡೆದುದು ಹರಿಗಂ
ಕೌತುಕಮಂ ಹರವರೋದ್ಭವಂ [1]ಕೇವಲಮೇ ೩೬

ಕಾಳಾಹಿ ಕಾಳದಂಡಂ
ಕಾಳಾಗ್ನಿಜ್ವಾಲೆಯೆನಿಪ ಕಾಳಾಯಸಬಾ
ಣಾಳಿಗಳಿಂ ದಾನವಕುಲ
ಕಾಳಯಮಂ ಕಾಳಯವನನಂ ಪೂಣ್ದೆಚ್ಚಂ ೩೭

ಧನು ಶಾರ್ಙ್ಗಂ ದನುಜಾರಿ ಪೂಣ್ದೆಸುವನಂತುಂ ನಾಂಟದಸ್ತ್ರೌಘವಾ
ತನ ಮೆಯ್ಯಿಂ ಕಿಡಿ ಸೂಸೆ ತಾಗಿ ಸಿಡಿದುಂ ಪಿಂಮೆಟ್ಟಿಯುಂ ಪಿಕ್ಕಿ ಪಿಂ
ತನೆ ಬಂದುಂ ತಿಱುವಾಯ್ಗೆ ಪೊರ್ದಿಯುಮಗುರ್ವಾದತ್ತಯಶ್ಚೂರ್ಣಸೇ
ವನೆಗೆಯ್ದಾ ಫಲದಿಂದೆ ಪೆತ್ತ ತನಯಂಗಸ್ತ್ರೌಘಮೇನಾರ್ಕುಮೇ ೩೮

ವ।। ಆಗಳದರ್ಕೆ ವಿಸ್ಮಿತಸ್ವಾಂತನಾಗಿ

ಕೆಡೆಯೆ ರಥಾಶ್ವಂ ಸಾರಥಿ
ಮಡಿಯೆ ರಥಂ ಕಟಿಲೆ ಮುಱಿಯೆ ಕನಕಧ್ವಜಮಿ
ರ್ಕಡಿಯಾಗೆ [2]ಪಗೆಯ ಚಾಪಂ
ಕಡುಕೆಯ್ದು ಮುರಾರಿ ಬಾಣದಶಕದಿನೆಚ್ಚಂ ೩೯

೩೬. ಮೌರ್ವಿಯ ಅತಿಯಾದ ಟಂಕಾರಶಬ್ದವು ದಿಕ್ಕುಗಳ ದಡವನ್ನೂ ವ್ಯಾಪಿಸುವಂತೆ ಕಾಲಯವನನು ಬಾಣಗಳನ್ನು ಪ್ರಯೋಗಿಸುತ್ತಿರಲು, ಆ ಬಾಣಗಳ ಹೊಡೆತವು ಹರಿಗೂ ಆಶ್ಚರ್ಯವನ್ನುಂಟುಮಾಡಿತು, ಹರನ ವರದಿಂದ ಹುಟ್ಟಿದವನು ಸಾಮಾನ್ಯನೇ? ೩೭. ರಾಕ್ಷಸಕುಲಕ್ಕೆ ಪ್ರಳಯಕಾಲಯಮನಾದ ಕೃಷ್ಣನು, ಹಟವನ್ನು ತೊಟ್ಟು ಕಾಳಸರ್ಪ, ಕಾಲದಂಡ, ಪ್ರಳಯಕಾಲಾಗ್ನಿಜ್ವಾಲೆಯೆನಿಸಿಕೊಳ್ಳುವ ಉಕ್ಕಿನ ಬಾಣಗಳಿಂದ ಕಾಲಯವನನನ್ನು ಹೊಡೆದನು. ೩೮. ಬಿಲ್ಲಾದರೋ ಶಾರ್ಙ್ಗ, ಪ್ರತಿಜ್ಞೆಮಾಡಿ ಬಾಣವನ್ನು ಹೊಡೆಯುವವನು ರಾಕ್ಷಸಾರಿ ಕೃಷ್ಣನೇ. ಆದರೂ ಆ ಅಸ್ತ್ರಸಮೂಹವು ಕಾಲಯವನನ ಮೈಗೆ ನಾಟದೆ ಕಿಡಿ ಚೆಲ್ಲುವಂತೆ ಮೈಗೆ ತಾಕಿ ಸಿಡಿದು ಹಿಮ್ಮೆಟ್ಟಿಯೂ, ತಾಕಿ ಹಿಂದಕ್ಕೆ ಬಂದು ಹೆದೆಯಲ್ಲಿ ಸೇರಿಯೂ ಭಯಂಕರವಾಯಿತು. ಉಕ್ಕಿನ ಪುಡಿಯನ್ನು ತಿಂದು ತಪಸ್ಸುಮಾಡಿ, ಆ ಫಲದಿಂದ ಪಡೆದ ಮಗನಾದ ಕಾಲಯವನನಿಗೆ ಅಸ್ತ್ರಸಮೂಹವು ನಾಟಲು ಶಕ್ತವಾಗುವುದೇ? ವ।। ಅದಕ್ಕೆ ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ ೩೯. ಕೃಷ್ಣನು ಶತ್ರುವಿನ ರಥದ ಕುದುರೆಗಳು ಬೀಳುವಂತೆಯೂ ಸಾರಥಿ ಸಾಯುವಂತೆಯೂ ರಥವು ಕಳಲುವಂತೆಯೂ ಸುವರ್ಣಧ್ವಜವು ಮುರಿಯುವಂತೆಯೂ ಬಿಲ್ಲು ಎರಡು ತುಂಡಾಗುವಂತೆಯೂ ಹತ್ತು ಬಾಣಗಳಿಂದ ತೀವ್ರವಾಗಿ ಹೊಡೆದನು.

---

೧. ಕೇವಲನೇ (ಮೊಆ) ೨. ಕಡಿಯೆ (ಕಗ)

ವ|| ಅಂತು ವಿರಥನಂ ಮಾಡೆ ಬಾಹುಕದನಮನೊಡರ್ಚಲೆಂದು [1]ನಿಟ್ಟಾಸುರಂಗೊಂಡು ಮುಟ್ಟೆಬರ್ಪನಂ ಕಂಡು

ಯದುಕುಲದುರ್ಜಯನಪ್ಪಂ
ತದೊಂದು ವರಮಂ ತ್ರಿಣೇತ್ರರೂಪದೆ ತಾನಿ
ತ್ತುದನಜಿದು ಪಗೆಗೆ ವಧಮಂ
[2]ಯದುವಂಶ್ಯಂ ಪೆಱತುಪಾಯದಿಂ ಚಿಂತಿಸಿದಂ ೪೦

ಹರವರಮಂ ಮನ್ನಿಸಲೆಂ
ದರಿಯಂ ಪೆಱನಿಂದೆ ಕೊಲಲ್ಕೊಡರ್ಚಿದನುಂತು
ಹರಿ ರಿಪುವಧದೊಳ್ ಪಾರ್ಗುಮೆ
ಬೆರಗಂ ತ್ರೈಲೋಕ್ಯಹರಣಭರಣಸಮಗ್ರಂ ೪೧

ಕದನಮನಿತ್ತಪೆನಿಲ್ಲೆಂ
ದೊದಱುತ್ತುಂ ಪರಿವ ಕೃಷ್ಣನಂ ತತ್ಖಳನೆ
ಯ್ದಿದನಿಲ್ಲಂ ಕರ್ಮಿ ಸಂಸಾ
ರದ ಪಾರಮನೆಂತುಮೆಯ್ದಲಾಱದ ತೆಱದಿಂ ೪೨

ವಿಕ್ರಮದಿಂ ನೆಗೞ್ದುದಱೆಂ
ವಿಕ್ರಮದಿಂ ಪಾಱಿದಪ್ಪೆ ನೀನೆಂದು ಖಳಂ
ವಿಕ್ರಮದಿಂ ಹರಿ ಹರಿಯೆ ಪ
ವಿಕ್ರಮದಿಂ ಗರ್ಜಿಸುತ್ತೆ ಬಟೆಯನೆ ಪರಿದಂ ೪೩

ವ|| ಹಾಗೆ ರಥವಿಲ್ಲದವನನ್ನಾಗಿ ಮಾಡಲು, ಬಾಹುಯುದ್ಧವನ್ನು ಮಾಡಬೇಕೆಂದು ಅತಿ ಭಯಂಕರನಾಗಿ ಸಮೀಪಕ್ಕೆ ಬರುತ್ತಿರುವವನನ್ನು ಕಂಡು, ೪೦. ಯದುಕುಲದವರಿಂದ ಜಿತನಾಗದಂತೆ ಒಂದು ವರವನ್ನು ತ್ರಿಣೇತ್ರರೂಪದಿಂದ ತಾನೇ ಕೊಟ್ಟುದನ್ನು ಜ್ಞಾಪಿಸಿಕೊಂಡ ಯದುವಂಶೀಯ ಕೃಷ್ಣನು ಆ ಕಾಲಯವನನನ್ನು ಕೊಲ್ಲಲು ಬೇರೊಂದುಪಾಯವನ್ನು ಯೋಚಿಸಿದನು. ೪೧. ಹರನ ವರವನ್ನು ಪಾಲಿಸುವುದಕ್ಕಾಗಿ ಶತ್ರುವನ್ನು ಬೇರೆಯವರಿಂದ ಕೊಲ್ಲಿಸಲು ಪ್ರಯತ್ನಿಸಿದನು. ಹಾಗಿಲ್ಲದೆ ಇದ್ದರೆ ತ್ರಿಲೋಕಹರಣ ಭರಣ ಸಮರ್ಥನಾದ ಹರಿ ಶತ್ರುವಧೆಗೆ ಬೇರೆಯವರ ಸಹಾಯವನ್ನು ನಿರೀಕ್ಷಿಸುತ್ತಿದ್ದನೇ? ೪೨. ನಾನು ನಿನ್ನೊಡನೆ ಕದನಮಾಡುವುದಿಲ್ಲ ಎಂದು ಕೂಗಿ ಹೇಳುತ್ತ ಓಡುವ ಕೃಷ್ಣನನ್ನು ಆ ಖಳನು, ಕರ್ಮಿಯಾದವನು ಹೇಗೂ ಸಂಸಾರದ ದಡವನ್ನು ಹಿಡಿಯದಿರುವಂತೆ, ಹಿಡಿಯಲಾಗಲಿಲ್ಲ. ೪೩. ಆ ನೀಚನು "ನೀನು ಪರಾಕ್ರಮದಿಂದ ಮೆರೆಯುವ ನಿಮಿತ್ತ ಹಕ್ಕಿಯಂತೆ ಹಾರುತ್ತಿರುವೆ. (ಅಥವಾ) ಪರಾಕ್ರಮವನ್ನು ಕಳೆದುಕೊಳ್ಳುತ್ತಿರುವೆ". ಎಂದು ನುಡಿದು,

---

೧. ನಿಟ್ಟಾರಿಗೊಂಡು (ಕ) ನಿಟ್ಟಾಲಿಗೊಂಡು (ಗ) ೨. ಯದುವಂಶಂ ಪೆಱತುಪಾಯಮಂ (ಕಖಗ)

ಮುನಿಗಳ್ ದಿವ್ಯಜ್ಞಾನಿಗ
ಳನಘರ್ ಮನದಿಂದಮೆಯ್ದಲಾಱದ ಪರಮಾ
ತ್ಮನನಾ ದುಶ್ಚರಿತಂ ನಿಜ
ತನುವಿಂ ಪರಿದೆಯ್ದಲೆಂತುಮೇನಾರ್ತಪನೇ ೪೪

ವ॥ ಅಂತು ಪೋಗಿ ಕಾಲಯವನಂಗೆ ಕಾಲಯವನ ವದನದ್ವಾರವೆನಿಸಿದ ಗುಹಾದ್ವಾರಮಂ ಪೊಕ್ಕಾಗಳದಱೊಳಗಣ ಮಣಿಮಾಡದೋವರಿಯ ಮಂಚದೊಳ್

ಒಱಗಿರ್ದ ನಿದ್ರೆಯಿನೆ
ೞ್ಚಱಿಸಿದರಂ ಕೋಪಶಿಖಿಯಿನುರುಪುವ ವರದಿಂ
ನೆಱೆದು ಕೃತಯುಗದೊಳಸುರರೊ
ಳಿಱಿದ ಪರಿಶ್ರಮದೆ ರಾಜಮುನಿ ಮುಚುಕುಂದಂ ೪೫

ವ॥ ಆ ನಿದ್ರಾಮುದ್ರಿತನೇತ್ರನೆೞ್ಚಱದಂತಚ್ಯುತಂ ಮೆಲ್ಲನೆ ಕೆಲಕೆ ಸಾರ್ದು ನಿಲ್ವುದುಂ, ಪ್ರಾಪ್ತಕಾಲಂ ಕಾಲಯವನಂ ಮುಟ್ಟೆವಂದು ಪಟ್ಟಿರ್ದ ಮುಚುಕುಂದನಂ ಮುಕುಂದನೆ ಗೆತ್ತೊದೆಯೆ ತತ್ಪ್ರಬೋಧಿತನಾ ವಿರೋಧಿಯಂ ಕ್ರೋಧಹುತಾಶನಂಗಾಹುತಿ ಮಾಡಿ ಮುಳಿದು ನೋಡಿ ಸಮಕ್ಷದೊಳ್ ನಿಂದ ಪುಂಡರೀಕಾಕ್ಷನಂ ಕಂಡು ನೀನಾರ್ಗೆಂದು ಬೆಸಗೊಳೆ ಶಶಿವಂಶಜಾತನೆಂ ವಸುದೇವಪ್ರಸೂತನೆನೆಂದು ಪೇೞೆ

ಸ್ಮರಿಯಿಸಿದಂ ಮುಚುಕುಂದಂ
ಚಿರೋಕ್ತಮಂ ಮನದೊಳಿರ್ಪತ್ತೆಂಟನೆಯ ದ್ವಾ
ಪರದಂತ್ಯದಲ್ಲಿ ಧರೆಯೊಳ್
ಹರಿ ಪುಟ್ಟುಗುಮೆಂಬ ವೃದ್ಧವರ್ಗದ ನುಡಿಯಂ ೪೬

ಪರಾಕ್ರಮದಿಂದ ಗರ್ಜಿಸುತ್ತ ಅವನ ಹಿಂದೆಯೇ ಓಡಿದನು. ೪೪. ಪಾಪರಹಿತರೂ ದಿವ್ಯಜ್ಞಾನಿಗಳೂ ಆದ ಮುನಿಗಳೂ ಮನಸ್ಸಿನಿಂದಲೂ ಹಿಡಿಯಲಾಗದ ಆ ಪರಮಾತ್ಮನನ್ನು ಆ ದುಶ್ಚರಿತನು ತನ್ನ ಆ ದೇಹದಿಂದಲೇ ಓಡಿ ಹಿಡಿಯಬಲ್ಲನೆ? ವ॥ ಕೃಷ್ಣನು ಹಾಗೆ ಹೋಗಿ ಆ ಕಾಲಯವನನಿಗೆ ಪ್ರಳಯಕಾಲದ ಯಮನ ಬಾಯಿಯಂತಿದ್ದ ಒಂದು ಗುಹೆಯ ಬಾಗಿಲನ್ನು ಹೊಕ್ಕನು. ಆಗ ಆ ಗುಹೆಯೊಳಗಿನ ರತ್ನದುಪ್ಪರಿಗೆಯ ಕೋಣೆಯ ಮಂಚದಲ್ಲಿ ೪೫. ಮುಚುಕುಂದನೆಂಬ ರಾಜಋಷಿಯು, ತಾನು ಕೃತಯುಗದಲ್ಲಿ ರಾಕ್ಷಸರೊಡನೆ ಯುದ್ಧಮಾಡಿದುದರಿಂದ ಆದ ಆಯಾಸದಿಂದ ತನ್ನನ್ನು ನಿದ್ದೆಯಿಂದ ಎಬ್ಬಿಸಿದವರನ್ನು ಕೋಪಾಗ್ನಿಯಿಂದ ಉರಿಸುವೆನೆಂಬ ವರವನ್ನು ಪಡೆದು, ನಿದ್ರಿಸುತ್ತ ಮಲಗಿದ್ದನು. ವ॥ ನಿದ್ದೆಯಿಂದ ಕಣ್ಣು ಮುಚ್ಚಿಕೊಂಡಿದ್ದ ಆತನಿಗೆ ಎಚ್ಚರವಾಗದಂತೆ ಕೃಷ್ಣನು ಮೆಲ್ಲಗೆ ಪಕ್ಕಕ್ಕೆ ಹೋಗಿ ನಿಂತನು. ಮರಣಕಾಲವೊದಗಿದ್ದ ಕಾಲಯವನನು ಹತ್ತಿರ ಬಂದು, ಮಲಗಿದ್ದ ಮುಚುಕುಂದನನ್ನೇ ಮುಕುಂದನೆಂದು ಭಾವಿಸಿ, ಒದ್ದನು. ಅದರಿಂದ ಎಚ್ಚರಗೊಂಡ ಆ ಮುನಿ ಆ ವೈರಿಯನ್ನು ಕೋಪಾಗ್ನಿಗೆ ಆಹುತಿಯನ್ನಾಗಿ ಮಾಡಿ, ಪಕ್ಕಕ್ಕ ತಿರುಗಿ ನೋಡಿ ಹತ್ತಿರವೇ ನಿಂತಿದ್ದ ಪುಂಡರೀಕಾಕ್ಷನನ್ನು ಕಂಡು, ನೀನು ಯಾರೆಂದು ಕೇಳಿದನು. ಕೃಷ್ಣನು "ನಾನು ಚಂದ್ರವಂಶದಲ್ಲಿ ಉದಿಸಿದವನು. ವಸುದೇವನ ಮಗನು" ಎಂದು ಹೇಳಿದನು. ೪೬. ಮುಚುಕುಂದನು ಇಪ್ಪತ್ತೆಂಟನೆಯ ದ್ವಾಪರಯುಗಾಂತ್ಯದಲ್ಲಿ ಹರಿಯು ಭೂಮಿಯಲ್ಲಿ ಹುಟ್ಟುವನು ಎಂದು ಹಿಂದೆ ಹೇಳಿದ್ದ ವೃದ್ಧವರ್ಗದ ಮಾತನ್ನು ಜ್ಞಾಪಿಸಿಕೊಂಡನು.

ವ॥ ಅಂತು ನೆನೆದು ತನುವಿನೊಳ್ ಹರ್ಷಪುಳಕಮುಂ ನಯನದೊಳಾನಂದಬಾಷ್ಪಜಲಮುಂ ನೆಗೆಯಲೊಗೆದ ನಿರ್ಭರಭಕ್ತಿಯಿಂ ಗೋವರ್ಧನೋದ್ಧಾರಂಗೆ ಬದ್ಧಾಂಜಲಿಯಾಗಿ

ಪುರುಹೂತಂಗೆ ಸಹಾಯನಾಗಿ ಕಡುಕೆಯ್ದಾಂ ಕಾದುವಂದಾ ಸುರಾ
ಸುರರ್ಗಂ ದುಸ್ಸಹಮೆನ್ನ ತೇಜಮೆನಗಂ ನಿನ್ನೊಂದು ತೇಜಂ ಪಯೋ
ಧರಗಂಭೀರರವೋಕ್ತಿ ಪಾದತಳಪೀಠಾಕಂಪಿತ ಕ್ಷ್ಮಾತಲಂ
ಪಿರಿದುಂ ದುಸ್ಸಹವಾಗುತಿರ್ಪುದದಱಿಂ ನೀನೇ ಸರೋಜೇಕ್ಷಣಂ ೪೭

ನೀಂ ಶರಧಿತಲ್ಪನೈ ಶಶಿ
ವಂಶದೊಳುದಯಿಸಿದ ಮರ್ತ್ಯಲೋಕಹಿತಾರ್ಥಂ
ಸಂಶಯಮಿಲ್ಲದು ನಿನ್ನಂ
ಶಾಂಶದ ತನುವೀ ಪ್ರಭಾವಮನ್ಯರ್ಗುಂಟೇ ೪೮

ವಿವಿಧತರವರ್ಣನಿರ್ಣೀ
ತವೆನಿಸಿ ಸಂಕಲ್ಪತೂಲಿಕಾಭಿತ್ತಿಯೊಳೀ
ಭುವನತ್ರಯಮಂ ಚಿತ್ರಿಸು
ವ ವಿರಿಂಚನ ವಿದ್ಯೆಗಧಿಪ ನೀಂ ಗುರುವಲ್ತೇ ೪೯

ಶತಪತ್ರಾಕ್ಷ ನಿಜಸ್ವರೂಪಮನದಾರುಂ ಬಲ್ಲರೇ ನೀಂ ಗುಣ
ವ್ಯತಿರಿಕ್ತಂ ವಿತನುತ್ವದಿಂ ಗುಣಯುತಂ ಬ್ರಹ್ಮಾದಿಸಾಂಗತ್ಯದಿಂ
ದತಿಸೂಕ್ಷ್ಮಂ ಪರಮಾತ್ಮರೂಪದಿನತಿಸ್ಥೂಲಂ ಜಗದ್ರೂಪದಿಂ
ಹೃತಕಾಲಂ ಧ್ರುವಭಾವದಿಂ ಸ್ವಗತಕಾಲಂ ನಶ್ವರವ್ಯಕ್ತಿಯಿಂ ೫೦

ವ॥ ಹಾಗೆ ಜ್ಞಾಪಿಸಿಕೊಂಡು ದೇಹದಲ್ಲಿ ಸಂತೋಷದ ರೋಮಾಂಚನವೂ ಕಣ್ಣಿನಲ್ಲಿ ಆನಂದಬಾಷ್ಪವೂ ಬರಲು ಉದಯಿಸಿದ ಪರಿಪೂರ್ಣ ಭಕ್ತಿಯಿಂದ ಆ ಗೋವರ್ಧನೋದ್ಧಾರಿಗೆ ಕೈಮುಗಿದು ೪೭. "ನಾನು ಇಂದ್ರನಿಗೆ ಸಹಾಯನಾಗಿ ತೀವ್ರವಾಗಿ ಕಾದುವಾಗ ನನ್ನ ತೇಜಸ್ಸು ಅಸುರರಿಗೂ ದುಸ್ಸಹವಾಗಿದ್ದಿತು. ನಿನ್ನ ತೇಜಸ್ಸೂ ಸಾಗರ ಗಂಭೀರವಾದ ನಿನ್ನ ಮಾತೂ ನಿನ್ನ ಪಾದತಲದ ಪೀಠದಿಂದ ಅದಿರುತ್ತಿರುವ ಭೂತಲವೂ ನನಗೂ ದುಸ್ಸಹವಾಗುತ್ತಿದೆ. ಆದ್ದುದರಿಂದ ನೀನೇ ಪುಂಡರೀಕಾಕ್ಷ ವಿಷ್ಣು. ೪೮. "ನೀನು ಸಾಗರಶಯನನು, ಮನುಜಲೋಕ ಹಿತಾರ್ಥವಾಗಿ ಶಶಿವಂಶದಲ್ಲಿ ಉದಯಿಸಿದೆ, ಸಂಶಯವಿಲ್ಲ. ಇದು ನಿನ್ನ ಅಂಶಾಂಶದ ದೇಹ. ಈ ಪ್ರಭಾವವು ಬೇರೆಯವರಿಗುಂಟೇ? ೪೯. "ಸಂಕಲ್ಪವೆಂಬ ಕುಂಚಿಕೆಯಿಂದ ಬರೆಯುವ ಗೋಡೆಯಲ್ಲಿ ವಿವಿಧ ವರ್ಣರಂಜಿತವಾದ ಈ ಮೂರುಲೋಕವನ್ನೂ ಚಿತ್ರಿಸುವ ಬ್ರಹ್ಮನ ವಿದ್ಯೆಗೆ ಅಧಿಪತಿಯಾದ ಗುರುವು ನೀನಲ್ಲವೇ? ೫೦. "ಕಮಲಾಕ್ಷನೇ! ನಿನ್ನ ಸ್ವರೂಪವನ್ನು ಯಾರು ತಾನೆ ಬಲ್ಲರು? ದೇಹರಹಿತತೆಯಿಂದ ನಿರ್ಗುಣ ಬ್ರಹ್ಮಾದಿ ದೇಹಸಾಂಗತ್ಯದಿಂದ ಗುಣಯುತ ಪರಮಾತ್ಮ ರೂಪದಿಂದ ಅತಿಸೂಕ್ಷ್ಮನು, ಜಗದ್ರೂಪದಿಂದ ಅತಿಸ್ಥೂಲನು, ಸ್ಥಿರಭಾವದಿಂದ

ಇವನೀಶಂ ಹರಿಯೆಂದು ಬೇರ್ಪಡಿಸಿ ನಿನ್ನಂ ಪೂರ್ವಸಂಸ್ಕಾರವಾ
ಸನೆಯಿಂದೆಂತುಟು ದೈವವೆಂಬರವರ್ಗಂತಂತಪ್ಪೆ ನೀನಾದೊಡೊ
ರ್ವನೆ ನಿನ್ನಿಂ ಭುವನೋದಯಸ್ಥಿತಿಲಯಂ ನೀಂ ದೇವ ಚೈತನ್ಯರೂ
ಪನಮೇಯಂ ಸದಸದ್ವಿಕಲ್ಪರಹಿತಂ ನಿತ್ಯಂ ಮುನಿಪ್ರತ್ಯಯಂ ೫೧

ಒಂದೆರಡಿಲ್ಲ [೧]ದೈವವೆರಡಾಯ್ತದೆ ಮೂಱಱೆನಿಂತು ಮತ್ತೆ ನಾ
ಲ್ಕಂದದ ವೇದದಿಂದ್ರಿಯಮನೈದನಡಂಗಿಸಲಾಱನೇೞಿಪಂ
ದಿಂದೆನಗಾದುದೆಂಟನೆಯ ನಿನ್ನವತಾರಮನೀಕ್ಷಿಸಲ್ ವಿವೇ
ಕಂ ದಿಟವೊಂಬತುಂ ನಿಧಿ ಬರಲ್ ಮತಿ ಪತ್ತದು ದೃಷ್ಟಿಸೌಖ್ಯಮಂ ೫೨

[೨]ಪ್ರಿಯ ಕೀರ್ತಿಶ್ರೀ ದಶಾಶಾವಧಿಯೆನೆ ನವರತ್ನೋತ್ಕರಾಷ್ಟಾಪದಪ್ರೀ
ತಿಯನೊಕ್ಕೇವೈಸಿ ಸಪ್ತವ್ಯಸನದೊಳರಿಷಡ್ವರ್ಗಮಂ ಬಿಟ್ಟು ಪಂಚೇಂ
ದ್ರಿಯಮಂ [೩]ಮಟ್ಟೈಸಿ ಚಾತುರ್ವಿಧಕರಣಮನಂತಸ್ಥಮಂ ತೂಳ್ದಿ ತಾಪ
ತ್ರಯಮೆನ್ನೊಳ್ ಪಿಂಗಲಾಂ [೪]ದ್ವಂದ್ವಮನುೞಿದೆನಗಾದ್ಯೈಕ್ಯದಿಂಬೊಂದಿ ನಿಲ್ವೆಂ ೫೩

ಕಾಲರಹಿತನು. ನಶ್ವರ ವ್ಯಕ್ತಿತ್ವದಿಂದ ಕಾಲಪರಿಮಿತನು. ೫೧. "ಚೇತನರು ಅವರವರ ಪೂರ್ವಸಂಸ್ಕಾರವಾಸನೆಯಿಂದ ಸೂರ್ಯ, ಈಶ್ವರ, ಹರಿ ಎಂದು ನಿನ್ನನ್ನು ಬೇರೆಬೇರೆಯಾಗಿ ಹೇಗೆ ದೈವವೆನ್ನುವರೊ ಹಾಗೆಯೇ ನೀನು ಅವರವರಿಗೆ ಹಾಗೆ ಆಗುವೆ. ಆದರೂ ನೀನೊಬ್ಬನೇ. ನಿನ್ನಿಂದಲೇ ಪ್ರಪಂಚದ ಉದಯ ಸ್ಥಿತಿ ಲಯಗಳು. ದೇವ, ನೀನು ಚೈತನ್ಯರೂಪನು, ಅಪ್ರಮೇಯನು, ಸತ್ ಅಸತ್ ಎಂಬ ವಿಕಲ್ಪವಿಲ್ಲದವನು, ನಿತ್ಯನು, ಮುನಿಗಳ ನಂಬಿಕೆಗೆ ಪಾತ್ರನು, ಜ್ಞಾನರೂಪನು. ೫೨. "ಒಂದೇ ದೈವ ಎರಡಿಲ್ಲ. ಅದೇ ಸಗುಣ ನಿರ್ಗುಣವೆಂದೆರಡಾಯಿತು. ಮತ್ತೆ ಮೂರು ಮೂರ್ತಿಗಳಂತಾಯಿತು. ಬಳಿಕ ನಾಲ್ಕು ವೇದ ರೂಪವಾಯಿತು. ಆ ವೇದದಿಂದ ಐದು ಇಂದ್ರಿಯಗಳನ್ನೂ ಆರು ಅರಿಗಳನ್ನೂ ಅಡಗಿಸಿ, (ತಿರಸ್ಕರಿಸು) ಏಳಿಸುವಾಗ ಈಗ ನನಗೆ ನಿನ್ನ ಎಂಟನೆಯ ಅವತಾರವನ್ನು ನೋಡಲು ನಿಜವಾಗಿ ವಿವೇಕವೊದಗಿತು. ಇನ್ನು ಒಂಭತ್ತು ನಿಧಿ ಬಂದರೂ ನನ್ನ ದೃಷ್ಟಿಸೌಖ್ಯವನ್ನು ಹತ್ತದು. (ಪಡೆಯುವುದಿಲ್ಲ)* ೫೩. "ಪ್ರಿಯವಾದ ಕೀರ್ತಿಶ್ರೀಯು ದಶದಿಕ್ಕುಗಳ ಅವಧಿಯುಳ್ಳುದೆನ್ನುವಂತೆ ನವರತ್ನ ಸಮೂಹ ಅಷ್ಟಾಪದ (ಸುವರ್ಣ) ಚಿನ್ನಗಳ ಪ್ರೀತಿಯನ್ನು ಬಿಟ್ಟು, ಚಿಂತಿಸಿ, ಸಪ್ತವ್ಯಸನಗಳನ್ನೂ ಅರಿಷಡ್ವರ್ಗವನ್ನೂ ಬಿಟ್ಟು ಪಂಚೇಂದ್ರಿಯವನ್ನು ಮಟ್ಟ ಹಾಕಿ (ಜಯಿಸಿ) ಒಳಗಿನ ಚತುರ್ವಿಧ ಅಂತಃಕರಣವನ್ನೂ ಓಡಿಸಿ ತಾಪತ್ರಯವು ನನ್ನಿಂದ ದೂರವಾದರೆ ನಾನು ದ್ವಂದ್ವ (ಸುಖದುಃಖ)ವನ್ನು ಬಿಟ್ಟು

---

೧. ದೈವವೆರಡಂತದೆ ಮೂಱನೆಂತು (ಕಗ) ದೈವವೆರಡಂತದೆ ಮೂಱನದೆಂತು (ಖ) ೨. ಪ್ರಿಯೆ ಕೀರ್ತಿಶ್ರೀದಶಾಂಶಾವಧಿಯೆನೆ (ಕ) ಪ್ರಿಯಕೀರ್ತಿಶ್ರೀದಶಾಂಶಾವಧಿಯೆನೆ (ಗ) ೩. ಮಟ್ಟೈಸಿ (ಕಗ) ೪. ದ್ವಂದ್ವಮನುೞಿದು ನನಾಂದ್ಯೈಕ್ಯದಿಂದೊಂದಿ (ಕಗ) ದ್ವಂದ್ವಮನುೞಿದುಸಾಂದ್ಯೈಕ್ಯದಿಂದೊಂದಿ (ಖ)

* ಇಲ್ಲಿ ಒಂದರಿಂದ ಹತ್ತು ಸಂಖ್ಯೆಯ ವರೆಗಿನ ಶಬ್ದಗಳು ಅನುಲೋಮಕ್ರಮದಿಂದ ಬಂದಿರುವುದು ಚಮತ್ಕಾರಿ. ಮುಂದಿನ ಪದ್ಯದಲ್ಲಿ ಈ ಸಂಖ್ಯೆಗಳೇ ಪ್ರತಿಲೋಮಕ್ರಮದಿಂದ ಬಂದಿವೆ. (ರಂ)

ವ।। ಎಂದರವಿಂದನಾಭನ ದಯಾವಲೋಕನಪ್ರಸಾದದಿಂದಾದನೂನಜ್ಞಾನದಿಂದಾ ಮುಚುಕುಂದನಾ ಮಹಾಗುಹಾದ್ವಾರದಿಂ ಪೊಱಮಟ್ಟು ಗಂಧಮಾದನನಗೇಂದ್ರೋಪಾಂತದ ಬದರಿಕಾಶ್ರಮದ ನರನಾರಾಯಣಸ್ಥಾನಕ್ಕೆ ಪೋದಂ, ಆಗಳಾ ನಾಗಾರಿಕೇತನಂ ದಾರುಕಾನ್ವಿತ ವರೂಥಸ್ಥನಾಗಿ ಕುಶಸ್ಥಳಕ್ಕೆ ತಳರ್ದಂ, ಅನ್ನೆಗಮತ್ತ ಕುಂಭಕರ್ಣಾವತಾರಂ ದಂತವಕ್ರಂ ನಿಸರ್ಗವೈರದಿಂದ ಸುರವೈರಿಯ ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನನಾಕ್ರಮಿಸಿಯುಂ, ಪೀತಾಂಶುಕನೆಂದು ಪಾವಕನಂ ಮೂವೀದಿವಡಿಸಿಯುಂ, ಗೋಪನಂದನನೆಂದು ದಂಡಧರನನಂಡಲೆದುಂ, ನಾಗನಿಳಯನೆಂದು ನೈಋತಿಯಂ ನಿರಾಕರಿಸಿಯುಂ, ವನಮಾಲಾಸ್ಪದನೆಂದು ಯಾದಃಪತಿಯ ನದಿರ್ಪಿಯುಂ, ಅದ್ರಿಧರನೆಂದು ಪವಮಾನನನವಮಾನಿಸಿಯುಂ, ರಾವಣದ್ವೇಷಿಯೆಂದು ಕುಬೇರನಂ ದೂಷಿಸಿಯುಂ, ಶ್ರೀಧರನೆಂದು ಶಂಕರನಂ ಮಾಂಕರಿಸಿಯುಂ, ಧರಣೀಧರನೆಂದು ಸುರಶೈಳಮಂ ಚಾಳಿಸಿಯುಂ, ಶಂಖಚಕ್ರಾನ್ವಿತನೆಂದು ಉದಧಿಯಂ ಕಲಂಕಿಯುಂ, ಅನಂತಾಖ್ಯಮೆಂದು ಭೂಮಿಯಂ ತಿಗುಱೆದಿರುಪಿಯುಂ, ಅಬ್ಜೋದರಮೆಂದು ಗಗನಮಂ ಗರವಟಿಸಿಯುಂ ಮಾಣದೆ, ಚಾಣೂರ ಸೂದನನೊಳ್ ಕಾದಲೆಂದಟ್ಟಿದ ದೂತಂ ಜೀಮೂತನಾದನೆಂಬಂ ಬರುತ್ತುಮಕೂಪಾರತೀರಂ ಬಿಡಿದು ನಡೆತರ್ಪ ಕಾಳಿಯಸರ್ಪದರ್ಪದಳನನನದಿರದಿದಿರೊಳ್ ಕಂಡುಂ

ನನಗಾಗುವ ಐಕ್ಯದಿಂದ ಕೂಡಿ ನಿಲ್ಲುವೆನು". ವ।। ಎಂದು ಪದ್ಮನಾಭನ ದಯಾವಲೋಕನ ಪ್ರಸಾದದಿಂದ ಲಭಿಸಿದ ಪೂರ್ಣಜ್ಞಾನದಿಂದ ಆ ಮುಚುಕುಂದನು ಗುಹಾದ್ವಾರದಿಂದ ಹೊರಟು ಗಂಧಮಾದನ ಪರ್ವತ ಸಮೀಪದ ಬದರಿಕಾಶ್ರಮದ ನರನಾರಾಯಣ ಸ್ಥಾನಕ್ಕೆ ಹೋದನು. ಆಗ ಗರುಡಧ್ವಜನು ದಾರುಕನು ನಡೆಸುವ ರಥದಲ್ಲಿ ಕುಳಿತು ಕುಶಸ್ಥಳಕ್ಕೆ ನಡೆದನು. ಅಷ್ಟರಲ್ಲಿ ಅತ್ತ ಕುಂಭಕರ್ಣನ ಅವತಾರದ ದಂತವಕ್ರನು ಸಹಜವೈರದಿಂದ ರಾಕ್ಷಸ ವಿರೋಧಿಯ ಹೆಸರುಗಳೇ ತನಗೆ ಅಸಹ್ಯವಾದುದರಿಂದ ಹರಿ ಎಂಬ ಹೆಸರುಳ್ಳವನೆಂದು ಇಂದ್ರನನ್ನು ಆಕ್ರಮಿಸಿಯೂ, ಪೀತಾಂಶುಕ (೧ ಪೀತಾಂಬರ, ೨ ಪೀತಕಿರಣ) ನೆಂದು ಅಗ್ನಿಯನ್ನು ಮೂರು ಬೀದಿ ತಿರುಗಿಸಿಯೂ, ಗೋಪನಂದನ (೧ ನಂದಗೋಪನ ಮಗ, ೨ ಸೂರ್ಯಪುತ್ರ)ನೆಂದು ಯಮನನ್ನು ಪೀಡಿಸಿಯೂ, ನಾಗನಿಲಯ (೧ ಸರ್ಪಶಯನ, ೨ ಪಾತಾಳದವನು)ನೆಂದು ನೈಋತಿಯನ್ನು ನಿರಾಕರಿಸಿಯೂ, ವನಮಾಲಾಸ್ಪದ (೧ ವನಮಾಲೆಯನ್ನು ಧರಿಸಿದವನು, ಕೃಷ್ಣ ೨ (ವನ-ನೀರು) ಜಲರಾಶಿಗೆ ಅಧಿಪತಿ)ನೆಂದು ವರುಣನನ್ನು ನಡುಗಿಸಿಯೂ, ಅದ್ರಿಧರ (೧ ಮಂದರಗಿರಿಯನ್ನೂ ಗೋವರ್ಧನಗಿರಿಯನ್ನು ಧರಿಸಿದವ, ೨ ರಕ್ಕೆಗಳಿದ್ದ ಪರ್ವತಗಳನ್ನು ವಹಿಸುತ್ತಿದ್ದವನು) ನೆಂದು ವಾಯುವನ್ನು ಅವಮಾನಗೊಳಿಸಿಯೂ, ರಾವಣ ದ್ವೇಷಿ (೧ ರಾಮ ೨ ಕುಬೇರ) ಯೆಂದು ಕುಬೇರನನ್ನು ದೂಷಿಸಿಯೂ, ಶ್ರೀಧರ (೧ ವಿಷ್ಣು ೨ ವಿಷಧರನಾದ ಈಶ್ವರ) ನೆಂದು ಶಂಕರನನ್ನು ಮಾಂಕರಿಸಿಯೂ, ಧರಣಿಧರ (೧ ವಿಷ್ಣು ೨ ಭೂಧರ-ಪರ್ವತ)ನೆಂದು ಮೇರುಗಿರಿಯನ್ನು ಅಲುಗಿಸಿಯೂ, ಶಂಖಚಕ್ರಾನ್ವಿತ (೧ ವಿಷ್ಣು ಕೃಷ್ಣ ೨ ಶಂಖಗಳ ಸಮೂಹವನ್ನು ಧರಿಸಿದವ-ಸಮುದ್ರ)ನೆಂದು ಸಮುದ್ರವನ್ನು ಕಲಕಿಯೂ, ಅನಂತಾಖ್ಯ (೧ ವಿಷ್ಣು ೨ ಭೂಮಿ)ನೆಂದು (ಅನಂತ ಎಂಬ ಹೆಸರುಳ್ಳುದು ಎಂದು) ಭೂಮಿಯನ್ನು ಬುಗುರಿಯಂತೆ ತಿರುಗಿಸಿಯೂ, ಅಬ್ಜೋದರ (೧ ಪದ್ಮನಾಭ ೨ ಚಂದ್ರನನ್ನು ಪಡೆದಿರುವುದು)ನೆಂದು ಗಗನವನ್ನು ಪೀಡಿಸಿಯೇ ಬಿಡದೆ, ಚಾಣೂರಸಂಹಾರಿಯಾದ ಕೃಷ್ಣನೊಡನೆ ಯುದ್ಧ ಮಾಡಬೇಕೆಂದು ಕಳುಹಿಸಿದ ದೂತ ಜೀಮೂತನೆಂಬವನು ಬರುತ್ತ ಸಮುದ್ರತೀರವನ್ನು ಹಿಡಿದು ನಡೆಯುತ್ತಿದ್ದ ಕೃಷ್ಣನನ್ನು ಹೆದರದೆ ಇದಿರಿನಲ್ಲೆ ಕಂಡನು.

ಅಂಬುರುಹನಾಭ ನಿಲ್ ನಿ
ಲ್ಲಾಂ [1]ಬಂದೆಂ ದಂತವಕ್ರದೂತನೆನವನಾ
ಡಂಬರಮಂ ನೆಱೆಪೇೞೆ ಮ
ನಂ ಬೆದಱುಗುಮಂತದರ್ಕೆ ಪೇೞ್ವೆನೊಂದಂ ೫೪

ಜವನಧಿಕಾರಂ ಮಿೞ್ತುವ
[2]ಜವಕೆ ಮೊಗಂದಿರುಪೆ ಕೊಲ್ವ ಮೆಯ್ಸಿರಿ ನೆಲಸಿ
ತ್ತವನೊಂದು ಗದೆಯೊಳೆನಲಾಂ
ಪವನಾವಂ ದಂತವಕ್ರನೊಳ್ ರಿಪುವೀರಂ ೫೫

ಇಂ ಬಿಸುನೆತ್ತಱನೀಂಟಲ್
ಮುಂಬಸಿಱೊಳ್ ತೀವಿದಮರರಕ್ತಮನುಗುೞ್ದಿ
ತ್ತೆಂಬಂತೆ ಬದ್ಧ[3]ಕೌಸುಂ
ಭಾಂಬರದಂಚಲದ ಗದೆ ವಿಜೃಂಭಿಪುದವನಾ ೫೬

ತರಿಸಿ ಜವನದಱ ನಿರ್ಮಾ
ಲ್ಯರಕ್ತಪುಷ್ಪಮನೆ ಮುಡಿದು ಭೀಕರನಾದಂ
ಧರೆಗೆನೆ ರಕ್ತಸ್ರಗ್ಭೀ
ಕರಂ ಗದಾದಂಡಮಿರ್ಪುದಸುರನ ಕೈಯೊಳ್ ೫೭

ಎತ್ತಿ ತಿರುಪಲ್ಕೆ ತೆರಳ್ವ ವಿ
ಯತ್ತಳತಾರಕನಿಕಾಯವಿದಱೊಳ್ ತೊಡರ್ದಿ
ರ್ದತ್ತೆನೆ ವಜ್ರದ ಮೊಳೆಗಳ
ಮೊತ್ತಮಗುರ್ವಿಸುವುದಾ ನಿಶಾಟನ ಗದೆಯೊಳ್ ೫೮

೫೪. ಪದ್ಮನಾಭಾ! ನಿಲ್ಲು ನಿಲ್ಲು. ದಂತವಕ್ರನ ದೂತನಾದ ನಾನು ಬಂದಿದ್ದೇನೆ. ಅವನ ಆಡಂಬರವನ್ನು ಪೂರ್ತಿಯಾಗಿ ಹೇಳಿದರೆ ಮನವು ಬೆದರುತ್ತದೆ. ಆದುದರಿಂದ ಒಂದನ್ನು ಹೇಳುತ್ತೇನೆ. ೫೫. ಯಮನ ಅಧಿಕಾರವೂ ವೇಗದಿಂದ ಮೃತ್ಯುವನ್ನು ಹಿಂದಿರುಗಿಸಿ ಕೊಲ್ಲುವ ಸಾಮರ್ಥ್ಯವೂ ಅವನ ಗದೆಯಲ್ಲಿ ನೆಲಸಿದೆಯೆನ್ನುವಾಗ ದಂತವಕ್ರನಿಗೆ ಪ್ರತಿಭಟಿಸುವ ಶತ್ರುವೀರನಾರಿರುವನು? ೫೬. "ಇನ್ನು ಬಿಸಿರಕ್ತವನ್ನು ಕುಡಿಯುವುದಕ್ಕಾಗಿ ಮುಂಚೆ ಹೊಟ್ಟೆಯಲ್ಲಿ ತುಂಬಿದ್ದ ದೇವತೆಗಳ ರಕ್ತವನ್ನು ಉಗುಳಿತು, ಎನ್ನುವಂತೆ, ಕಟ್ಟಿರುವ ರಕ್ತವರ್ಣದ ವಸ್ತ್ರದ ಕೊನೆಯಿಂದ ಅವನ ಗದೆಯು ಆಡಂಬರವುಳ್ಳುದಾಗಿರುವುದು. ೫೭. "ಯಮನು ಆ ಗದೆಯ ನಿರ್ಮಾಲ್ಯದ ಹೂವನ್ನೇ ಮುಡಿದು ಭೂಮಿಗೆ ಭಯಂಕರನಾಗಿರುವನು ಎನ್ನುವಂತೆ ರಕ್ತಮಾಲೆಯಿಂದ ಭೀಕರವಾದ ಗದಾದಂಡವು ಅವನ ಕೈಯಲ್ಲಿದೆ. ೫೮. ಅದನ್ನು ಎತ್ತಿ ತಿರುಗಿಸಿದುದರಿಂದ ಚಲಿಸುವ, ಆಕಾಶದಲ್ಲಿದ್ದ ನಕ್ಷತ್ರಗಳು ಅದರಲ್ಲಿ ತೊಡರಿಕೊಂಡಿವೆಯೆನ್ನುವಂತೆ ಆ ರಾಕ್ಷಸನ ಗದೆಯಲ್ಲಿರುವ ವಜ್ರದ ಮೊಳೆಗಳ ಗುಂಪು ಭಯಂಕರವಾಗಿರುವುದು.

---

೧. ಬಂದಪೆ (ಕಖಗ) ೨. ಬವಕೆ (ಕಗ) ೩. ಕೌಸುಂಭಾಂಬರದಿಂ ತೆಗೆದ (ಕಗ)

ಪತ್ತಿದ ನೆತ್ತಱ ಪೊಲಸಿಂ
ದ್ವತಂ ಮೊಱೆದೆಱಪ ಮಶಕಮಕ್ಷಿಕಮಂ ಸೋ
ವುತ್ತುಮನವರತಮೋಲಗಿ
ಸುತ್ತಿರ್ಪುವು ಭೂತಕೋಟಿ ದನುಜನ ಗದೆಯಂ ೫೯

ಅಸುರನ ಗದೆ ಭೂತಪಿಶಾ
ಚಸಮಿತಿಗೆಱೆಯಿಸುವ ನೆತ್ತಱಅವಟ್ಟಿಗೆ ತೆ
ತ್ತಿಸಿದೆಲ್ವಿನ ಸೊದೆವನೆಯಿ
ಕ್ಕಿಸುವಡಗಿನ ವಾರಿಸತ್ತ್ರವಚ್ಚರಿ ರಣದಳ್ ೬೦

ತ್ರಿದಶೇಂದ್ರಮಕುಟಮಂ ಪೊಯ್ದೆ
ದ ದೈತ್ಯಗದೆಯಿಂ ಸಿಡಿಲ್ದ ಶಕಳಮೆ ತಾನಾ
ದುದು ಕೃಷ್ಣ ನಿನ್ನ ಗದೆಯೆನೆ
ಗದೆಯ ವಿಜೃಂಭಣೆ ಭಯಾವಹಂ ದಾನವನಾ ೬೧

ಲಯಮೆಯ್ದಿ ಯದುಬಲಂ ಪ
ಕ್ಕಿಯ ಗೋಸನೆಗುಡುಕು ಜವನ ಕೈಬೋನಂ ಮಾ
ರಿಯ ಬುತ್ತಿ ಮರುಳ್ಗಳ ಕ
ಜ್ಜಾಯಮೆನಿಸದೆ ಗದೆಗೆ ನೀಡೆ ದನುಜಂ ಕರಮಂ ೬೨

ನೆಗಪಿದೊಡೆ ನೆತ್ತಿಯಿಂದಸು
ನೆಗೆಗುಂ ತೂಗಿದೊಡೆ ಪಗೆಯ ದೇಹಂ ತೂಗಾ
ಡುಗುಮಸುರಂ ಗದೆಯಂ ತಿ
ಱ್ಱಿಗೆ ತಿರುಪಿದೊಡೊಡನೆ ತಿರುಗುಗಂ ಭೂಚಕ್ರಂ ೬೩

೫೯. "ಅದಕ್ಕೆ ಅಂಟಿಕೊಂಡಿರುವ ರಕ್ತದ ಹೊಲಸಿನಿಂದ ಸುತ್ತಲೂ ಮೊರೆಯುತ್ತ ಅದಕ್ಕೆ ಮುತ್ತುವ ನೊಣಗಳನ್ನು ಅಟ್ಟುತ್ತ ಭೂತಕೋಟಿಗಳು ಆ ರಾಕ್ಷಸನ ಗದೆಯನ್ನು ಯಾವಾಗಲೂ ಸೇವಿಸುತ್ತಿರುವವು ೬೦. "ಆಶ್ಚರ್ಯ! ಆ ರಾಕ್ಷಸ ಗದೆಯು ಯುದ್ಧದಲ್ಲಿ ಭೂತಪಿಶಾಚಿಗಳ ಗುಂಪಿಗೆ ಇಟ್ಟ ರಕ್ತದ ಅರವಟ್ಟಿಗೆ, ರಾಸಿಯಾದ ಎಲುಬುಗಳ ಸುಧಾಗೃಹ, ಮಾಂಸವನ್ನು ಬಡಿಸುವ ನೀರಿನ ಛತ್ರವಾಗಿದೆ. ೬೧. ಕೃಷ್ಣಾ, ದೇವೇಂದ್ರನ ಕಿರೀಟವನ್ನು ಹೊಡೆದ ಆ ದೈತ್ಯನ ಗದೆಯಿಂದ ಸಿಡಿದ ಚೂರೇ ನಿನ್ನ ಗದೆಯಾಗಿದೆಯೆನ್ನುವಾಗ ಅವನ ಆ ಗದೆಯ ಜೋರೇ ಆಡಂಬರವೇ ಭಯಂಕರವಲ್ಲವೆ? ೬೨. "ಆ ರಾಕ್ಷಸನು ಗದೆಗೆ ಕೈ ನೀಡಿದನಾದರೆ ಯದುಸೈನ್ಯವು ನಾಶವಾಗಿ ಹಕ್ಕಿಗಳ ಕೂಗಿಗೆ ಗುಟುಕು! ಯಮನ ಕೈಭೋಜನ, ಮಾರಿಯ ಬುತ್ತಿ, ಪಿಶಾಚಿಗಳ ಕಜ್ಜಾಯ ಎನ್ನಿಸುವುದಿಲ್ಲವೆ? ೬೩. "ಆ ಅಸುರನು ಗದೆಯನ್ನು ಎತ್ತಿದರೆ ಶತ್ರುವಿನ ನತ್ತಿಯಿಂದ ಪ್ರಾಣವು ನೆಗೆಯುವುದು. ಕೂಗಿದರೆ ಶತ್ರುವಿನ ದೇಹವು ತೂಗಾಡುವುದು, ತಿರುಗಿಸಿದರೆ ಒಡನೆಯೇ ಭೂಚಕ್ರವು ತಿರುಗುವುದು.

ರಯದೊಳಗಿಂದು[1]ಬಿಂಬವನುದಿರ್ಚುವ ಸಾಗರಮಂ ತುಳುಂಕುವ
ದ್ರಿಯನಗೆಯೆತ್ತುವುರ್ವಿಯನಡಂಗಿಪ ಭಂಗಿಯೊಳಿಲ್ಲ ಭೇದವಾ
ಕ್ಷಪವನಂಗಮಾತನ ಗದಾಪವನಂಗಮದೊಂದೆ ರಕ್ತ ಚ
ರ್ಚೆಯ ಪೊಲಸುಂಟೆ ದೈತ್ಯನ ಗದಾನಿಳನಲ್ಲದೊಡಾಕ್ಷಯಾನಿಳಂ ೬೪

[2]ಸಮದ ಮಹಾವಿಜೃಂಭಣದೆ ಪೆರ್ಚಿದನಪ್ಪೊಡೆ ತೊಟ್ಟನಬ್ಜಜಾಂ
ಡಮನೊಡೆದಾಸ್ಯಮುಂ ಭುಜಮುಮಂಘ್ರಿಗಳುಂ ಪೊಱಮಟ್ಟಿರಲ್ಕೆ ವ
ಕ್ಷಮನವಲಂಬಿಸಿರ್ದ ಕಮಳಪ್ರಭವಾಂಡಮದೊಂದು ಚರ್ಮವ
ರ್ಮಮನಿಟಿಕೆಯ್ವುದೇವೊಗಟ್ವೆನದ್ಭುತಮಾಕೃತಿ ದಂತವಕ್ತ್ರನಾ ೬೫

ವ|| ಎಂದು ಜೀಮೂತಂ ತನಗನ್ವರ್ಥನಾಮಮೆನೆ ಗಜಱೆ ಗರ್ಜಿಸೆ ಲೀಲೆಯಿಂದಾಲಿಸಿ

ತನ್ನ ರಣರಾಗಭರಮಂ
ತನ್ನ ರಣೋಚ್ಚಂಡಜಯಯಶಃಪಾಂಡಿಮಮಂ
ತನ್ನಧರದಂತರುಚಿಗಳ್
ಕನ್ನಡಿಸೆ ಸರೋಷಹರ್ಷನಾದಂ ಕೃಷ್ಣಂ ೬೬

ವ|| ಅನ್ನೆಗಂ

೬೪. ವೇಗದಿಂದ, ಚಂದ್ರಮಂಡಲವನ್ನು ಬೀಳಿಸುವ, ಸಾಗರವನ್ನು ತುಳುಕಾಡಿಸುವ, ಪರ್ವತವನ್ನು ಬುಡಸಹಿತ ಎತ್ತುವ, ಭೂಮಿಯನ್ನು ಅಡಗಿಸುವ ರೀತಿಯಲ್ಲಿ ಪ್ರಳಯ ಕಾಲ ವಾಯುವಿಗೂ ಆತನ ಗದೆಯ ವಾಯುವಿಗೂ ಭೇದವೇ ಇಲ್ಲ. ರಕ್ತವು ಬಳಿದುಕೊಂಡಿರುವುದರಿಂದ ಆಗಿರುವ ಹೊಲಸು ಉಂಟಲ್ಲಾ ಅದೊಂದೇ ಕ್ಷಯಕಾಲ ವಾಯುವಿಗೂ ರಾಕ್ಷಸನ ಗದೆಯ ಗಾಳಿಗೂ ಭೇದವಾಗಿದೆ! ಆ ಭೇದವಿಲ್ಲದಿದ್ದರೆ ಗದೆಯ ವಾಯುವೇ ಕ್ಷಯಕಾಲ ವಾಯುವಾಗುತ್ತಿದ್ದಿತು! ೬೫. "ಆ ದಂತವಕ್ತ್ರನು ವಿಜೃಂಭಣೆಯಿಂದ ತನ್ನ ದೇಹವನ್ನು ಹಿಗ್ಗಿಸಿದಲ್ಲಿ, ಅವನ ಶಿರಸ್ಸು ತೋಳು ಕಾಲುಗಳು ಈ ಬ್ರಹ್ಮಾಂಡವನ್ನು ಭೇದಿಸಿ ಹೊರಗೆ ಚಾಚಿಕೊಳ್ಳುತ್ತವೆ! ಆಗ ಆತನ ಎದೆಯ ಮೇಲೆ ಕಾಣಿಸುವ ಈ ವಿಶ್ವವು, ಆತನು ತೊಟ್ಟಿರುವ ಚರ್ಮದ ಕವಚದಂತೆ ಕಾಣಿಸುತ್ತದೆ! ದಂತವಕ್ತ್ರನ ಅದ್ಭುತಾಕೃತಿಯನ್ನು ಏನೆಂದು ವರ್ಣಿಸಲಿ." ವ|| ಎಂದು ಜೀಮೂತನು ತನಗನ್ವರ್ಥ ನಾಮವೆನ್ನುವಂತೆ (ಜೀಮೂತ = ಮೇಘ) ಗಜರಿ ಗರ್ಜಿಸಿದನು. ಅದನ್ನು ಲೀಲೆಯಿಂದ ಕೇಳಿ ೬೬. ಕೃಷ್ಣನು ತನ್ನ ಯುದ್ಧರಾಗ (ಆಸಕ್ತಿ)ವನ್ನೂ ತಾನು ಯುದ್ಧದಲ್ಲಿ ಪಡೆದಿರುವ ಅದ್ಭುತ ಜಯದ ಕೀರ್ತಿಯ ಬೆಳ್ಪನ್ನೂ ತನ್ನ ತುಟಿಯ ಕೆಂಪೂ ಹಲ್ಲಿನ ಬೆಳ್ಪೂ ಕ್ರಮ ವಾಗಿ ಸ್ಪಷ್ಟಪಡಿಸುತ್ತಿರಲು ಕೋಪಯುತಹರ್ಷವುಳ್ಳವನಾದನು. ವ|| ಅಷ್ಟರಲ್ಲಿ

೧. ಬಿಂಬವನದಿರ್ಚುವ (ಕಗ) ೨. ಸಮರ (ಖ)

ಪಡೆಯ ನಿಮಿರ್ಕೆಗೀ ಧರಣಿ ಸಾಲದು ಕೇತುಗಳೇಟ್ಗೆಗಂ ನಭಂ
ಕಡುಕಿಱಿದಾನಕಧ್ವನಿಯ ಪರ್ಬುಗೆಗೀ ಕಮಲೋದ್ಭವಾಂಡವಿ
ಟ್ಟೆಡೆಯೆನೆ ದಂತವಕ್ರದನುಜಂ ನಡೆತಂದಸಹಾಯಶೌರ್ಯದಿಂ
ಪೊಡರ್ವ ಮುರಾರಿಯಂ ಪ್ರಳಯಭೈರವನೆಂದು ಬಿಗುರ್ತು ನೋಡಿದಂ ೬೭

ವ|| ಅಂತು ಮುರಾಂತಕನಂ ನಿರೀಕ್ಷಿಸಿ ರಾಕ್ಷಸೇಶ್ವರಂ ತಾನುಮೇಕಾಂಗವೀರನಪ್ಪಹಂಕಾರದಿಂದಿಂತೆಂದಂ

ನೀನೊರ್ವನೆ ಪೊಣರ್ವೆ ಗಡಾಂ
ಸೇನಾನ್ವಿತನಾಗಿ ಕಾದುವಲ್ಲಿವರಂ ನೀಂ
ಗಾನಮೆ ಪೇಟಿನ್ನೀ ಗದೆ
ತಾನೊಂದೆ ಗೆಲಲ್ಕೆ ಸಾಲದೇ ಹರಿ ನಿನ್ನಂ ೬೮

ವ|| ಎಂದು ಗಂಡಮಚ್ಚರದಿಂ ದುರ್ಮುಖಂ ಪರಾಭವಿಸಿ

ಪೊಱಮಟ್ಟತ್ತಬ್ಧಿಯಿಂ ಬಾಡವಶಿಖಿಯೆನೆ ಕಾಂತಾರಸಂತಾನದಿಂದಂ
ಪೊಱಮಟ್ಟತ್ತುಗ್ರದಾವಾನಳನೆನೆ ಸಜಳಾಂಭೋದಸಂದೋಹದಿಂದಂ
ಪೊಱಮಟ್ಟತ್ತೊಂದು ವಜ್ರಜ್ವಲನಮೆನೆ ನಿಜವ್ಯೂಹದಿಂ ದೀಪ್ತದೇಹಂ
ಪೊಱಮಟ್ಟತ್ತಿಂದನಾಗಳ್ ನಿಜಭುಜಗದೆಯಂ ತೂಗುತುಂ ದಂತವಕ್ರಂ ೬೯

ತುಂಗಭುಜೋದ್ಧೃತಗದೆಗಳ್
ಶೃಂಗಂಗಳ ಪಾಂಗನಿಟಿಸಲುದಯಾಸ್ತನಗೇಂ
ದ್ರಂಗಳ್ ತಮ್ಮೊಳ್ ಪೊಣರ್ದುವು
ಸಂಗತಮೆನೆ ಕೃಷ್ಣ ದಂತವಕ್ರರ್ ಪೊಣರ್ದರ್ ೭೦

೬೭. ಸೇನೆಯು ಹರಡಿ ನಿಲ್ಲುವುದಕ್ಕೆ ಈ ಭೂಮಿ ಸಾಲದು. ಧ್ವಜಗಳು ಏರುವುದಕ್ಕೆ ಆಕಾಶವು ಬಹಳ ಚಿಕ್ಕದು. ಪಟಹವಾದ್ಯಧ್ವನಿ ಹಬ್ಬಲು ಈ ಬ್ರಹ್ಮಾಂಡವು ಇಕ್ಕಟ್ಟು, ಎನ್ನುವಂತೆ ದಂತವಕ್ರ ರಾಕ್ಷಸನು ಬಂದು, ಅಸಹಾಯಶೌರ್ಯದಿಂದ ಯುದ್ಧಮಾಡುವ ಕೃಷ್ಣನನ್ನು ಪ್ರಳಯ ಭೈರವನೆಂದು, ಭೀತಿಗೊಂಡು ನೋಡಿದನು. ವ|| ಹಾಗೆ ಆ ಮುರಹರನನ್ನು ನೋಡಿ ಆ ರಾಕ್ಷಸೇಶ್ವರನು ತಾನೂ ಏಕಾಂಗವೀರನಾಗಿರುವ ಅಹಂಕಾರದಿಂದ ಹೀಗೆಂದನು. ೬೮. "ಹರೀ, ನೀನು ಒಬ್ಬನೇ ಯುದ್ಧ ಮಾಡುವೆ ಯಲ್ಲವೇ? ನಾನು ಸೇನಾಸಮೇತನಾಗಿ ಯುದ್ಧ ಮಾಡಬೇಕಾದಷ್ಟು ನೀನು ಶೂರನೆ? ಹೇಳು. ನಿನ್ನನ್ನು ಗೆಲ್ಲುವುದಕ್ಕೆ ನನ್ನ ಈ ಗದೆಯೊಂದೇ ಸಾಲದೆ!" ವ|| ಎಂದು ಪೌರುಷದ ಮಾತ್ಸರ್ಯದಿಂದ ದುರ್ಮುಖನಾಗಿ ತಿರಸ್ಕರಿಸಿ, ೬೯. ಸಮುದ್ರದಿಂದ ಬಡಬಾಗ್ನಿಯೇ ಹೊರಟಿತು. ಮಹಾವನದಿಂದ ಅತ್ಯುಗ್ರವಾದ ಕಾಡುಕಿಚ್ಚೇ ಹೊರಟಿತು. ಜಲಪೂರ್ಣವಾದ ಮೇಘಸಮೂಹದಿಂದ ಒಂದು ಸಿಡಿಲೇ ಹೊರಟಿತು ಎನ್ನುವಂತೆ ವಿರಾಜಿಸುತ್ತಿದ್ದ ದಂತವಕ್ರನು ತನ್ನ ಸೇನಾಸಮೂಹದಿಂದ ಹೊರಟು ಗದೆಯನ್ನು ತೂಗುತ್ತ ಬಂದನು. ೭೦. ಉದ್ದವಾದ ತೋಳಿನಿಂದ ಮೇಲೆತ್ತಿ ಹಿಡಿದಿರುವ ಗದೆಗಳು ಗಿರಿಶಿಖರಗಳ ರೂಪವನ್ನು ಹೀನಗೊಳಿಸುತ್ತಿರಲು, ಉದಯಾಸ್ತಶೈಲಗಳೇ ತಮ್ಮಲ್ಲಿ ಯುದ್ಧಮಾಡುತ್ತಿವೆ. ಇದು ಸಂಗತವಾಗಿದೆ-ಎನ್ನುವಂತೆ ಕೃಷ್ಣ ದಂತವಕ್ರರು ಯುದ್ಧವನ್ನು ಮಾಡಿದರು.

ಇನಿಸಿನಿಸು ತಿರುಪಿ ಗದೆಗಳ
ನಿನಿಸಿನಿಸುಂ ಮುಟ್ಟಿ ಮುಟ್ಟಿ ಪೊಣರ್ದಿನಿಸಿನಿಸುಂ
ಮನದೊಳಗಂ ಸೂಸದೆ ತೂಂ
ಕಿ ನೋಡಿದರ್ ದಿಟ್ಟಗಲಿಗಳೊರ್ವರನೊರ್ವರ್ ೭೧

ಪದಚಾರಿಗೆ ಪದಚಾರಿಯ
ನೊದವಿಸುತಂ ಗಜಱಿ ಗಜಱುತುಂ ಗದೆಯಂ ಬೀ
ಸಿದೊಡನೆ ಬೀಸುತುಂ ಕೃ
ಷ್ಣ ದಾನವರ್ ಪೊಕ್ಕು ಪೊಯ್ದರೊರ್ವರನೊರ್ವರ್ ೭೨

ಪುಗೆ ಪೊಕ್ಕಡಿಗಡಿಯಂ ಜಂ
ಘೆಗೆ ಜಂಘೆಯನೂರುಗೂರುವಂ ಕಟಿಗೆ ಕಟೀ
ಯುಗಮನುರಕ್ಕುರಮಂ ನೆ
ತ್ತಿಗೆ ನೆತ್ತಿಯನೆತ್ತಿ [1]ಪೊಯ್ದರೊರ್ವರನೊರ್ವರ್ ೭೩

ಬಳ್ಕೆ ನೆಲಂ ಪದಭರದಿಂ
ತುಳ್ಕೆ ಪಯೋರಾಶಿ ಗದೆಯ ಗಾಳಿಯ ಕೋಳಿಂ
ಶಳ್ಕಂಗಳ್ ಗದೆಯಿಂ ನೆಗೆ
ದುಳ್ಕಂಗಳನಿಟಿಸೆ ಕಾದಿದರ್ ಕಡುಗಲಿಗಳ್ ೭೪

[2]ಅಧಮುಂ ಮಧ್ಯಮುಮೂರ್ಧ್ವಮೆಂಬ ಭುವನಂಗಳ್ ಪೊಯ್ದು ಬಾಹಾಗದಾ
ಯುಧವಿಕ್ಷೇಪವಿಜೃಂಭಣಭ್ರಮಣದಿಂ ಪ್ರಕ್ಷೋಭಿಸಲ್ ಯುದ್ಧಕೇ
ಳಿಧುರೀಣರ್ ದನುಜಾರಿಯುಂ ದನುಜನುಂ ಸೂಱೆಪ್ಪೊಯ್ಗಳಿಂ ಧೊಟ್ಟುಧಿ
ಟ್ಟು ಧೊಗಲ್ ಧೊಪ್ಪು ಭಟಲ್ ಭುಗಿಲ್ಗರೆವಿನಂ ಪೊಯ್ದರ್ ಗದಾದಂಡದಿಂ ೭೫

೭೧. ಸ್ವಲ್ಪಸ್ವಲ್ಪವಾಗಿ ಗದೆಗಳನ್ನು ತಿರುಗಿಸಿ ಸ್ವಲ್ಪಸ್ವಲ್ಪ ಹತ್ತಿರ ಬಂದು ಯುದ್ಧಮಾಡಿ, ಸ್ವಲ್ಪಸ್ವಲ್ಪವೂ ತಮ್ಮ ಮನಸ್ಸಿನಲ್ಲಿರುವುದನ್ನು ಹೊರಗೆಡಹದೆ ದೃಷ್ಟಿಶೂರರಾದ ಅವರು ಒಬ್ಬರನೊಬ್ಬರು ತೂಗಿ ನೋಡಿದರು. ಪಾದಚಾರದಿಂದ ಒಬ್ಬನು ನಡೆದಾಗ ಅದಕ್ಕೆ ತಕ್ಕಂತೆ ಇನ್ನೊಬ್ಬನೂ ಪಾದಚಾರದಿಂದ ಸುತ್ತುತ್ತ, ಒಬ್ಬನು ಗದರಿಸಿದರೆ ಮತ್ತೊಬ್ಬನೂ ಗದರಿಸುತ್ತಾ ಗದೆಯನ್ನು ಬೀಸಿದರೆ ಬೀಸುತ್ತಾ ಕೃಷ್ಣ ದಂತವಕ್ರರು, ಮುಂದೆ ನುಗ್ಗಿ ಒಬ್ಬರನ್ನೊಬ್ಬರು ಹೊಡೆದರು. ೭೩. ನುಗ್ಗಿದರೆ ನುಗ್ಗಿ ಒಬ್ಬನು ಕಾಲಿಗೆ ಹೊಡೆದರೆ ಮತ್ತೊಬ್ಬನೂ ಕಾಲಿಗೆ ಮೊಳಕಾಲಿಗೆ ಮೊಳಕಾಲನ್ನೂ ತೊಡೆಗೆ ತೊಡೆಯನ್ನೂ ನಡುವಿಗೆ ನಡುವನ್ನೂ ಎದೆಗೆ ಎದೆಯನ್ನೂ ನೆತ್ತಿಯನ್ನೂ ಗದೆಯನ್ನೆತ್ತಿ ಹೊಡೆದರು. ೭೪. ಬಹುಸಮರ್ಥರಾದ ಅವರಿಬ್ಬರೂ ಕಾಲಿನ ಭಾರದಿಂದ ನೆಲವು ಬಳುಕುವಂತೆಯೂ ೭೪. ಗದೆಯ ರಭಸದ ಗಾಳಿಯಿಂದ ಸಮುದ್ರವು ತುಳುಕುವಂತೆಯೂ, ಗದೆಯಿಂದ ಕಿಡಿಗಳು ಹಾರಿ ಉಲ್ಕಾಪಾತಗಳನ್ನು ಕೀಳು ಮಾಡುವಂತೆಯೂ, ಯುದ್ಧಮಾಡಿದರು. ೭೫. ಪಾತಾಳ ಭೂಮಿ ಸ್ವರ್ಗಗಳೆಂಬ ಮೂರುಲೋಕಗಳೂ ಅವರು ತೋಳನ್ನು ತಟ್ಟಿಕೊಳ್ಳುವುದರಿಂದಲೂ ಗದೆಗಳನ್ನು ಹೊಡೆಯುವುದರಿಂದಲೂ ಆದ ಹೆಚ್ಚಾದ ಧ್ವನಿಯು

---

೧. ಪಾಯ್ದು (ಕ) ೨. ಅಧಮಂ ಮಧ್ಯಮಮೂರ್ಧ್ವಮೆಂಬ (ಕ) ಅಧಮುಂ ಮಧ್ಯವ ಮೂರ್ಧ್ವಮೆಂಬ (ಗ)

ಚಲಮಂ ಚಲಮಣ್ಮಣ್ಮಂ
ಬಲಮಂ ಬಲಮೋಜೆಯೋಜೆಯಂ ಧೃತಿ ಧೃತಿಯಂ
ನಿಲವಂ ನಿಲವಳವಳವಂ
ಗೆಲೆ ಗೆಲಲರಿದಾಯ್ತು ತಮ್ಮೊಳೊರ್ವರನೊರ್ವರ್ ೭೬

ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್
ದೆಸೆಯಿಂ ಪಿಂಮೆಟ್ಟೆ ವೃಂದಾರಕಸಮಿತಿ ಗದಾಕ್ರಾಂತಿಯಿಂ ದೂರದಿಂದೀ
ಕ್ಷಿಸೆ ಯುದ್ಧಂ ದಂತವಕ್ರಾಚ್ಯುತಜನಿತಮಗುರ್ವಾದು[೧]ದಾಕ್ಷಿಪ್ತ ಶೈಲ
ಪ್ರಸರಂ ಪ್ರೋಜ್ಜೃಂಭಿತಾಶಾಮುಖವತಿಮಥಿತಾಂಭೋದರೋದೋಂತರಾಳಂ ೭೭

ಸಂಗಡಿಸಿ ಗದೆಯ ಘಟ್ಟನ
ದಿಂ ಗದೆಯ ಬಹುಪ್ರಹಾರದಿಂ ಪುಟ್ಟಿದ ಕಿ
ಚ್ಚುಂ ಗಾಳಿಯುಮಮರವಿಮಾ
ನಂಗಳನಡರ್ದತ್ತು ಭೀಮಮಾ ಸಂಗ್ರಾಮಂ ೭೮

ಸರದಿಯ ಬಾಡಬಂ ನಭದಿರಮ್ಮದಮೀಶನ ಲೋಚನಾಗ್ನಿ ಸಂ
ಹರಣದೊಳಟ್ಟಿ ಕೊಲ್ವ ದಹನಂ ನೆಗೆದೀ ಶಿಖಿಯಿಂ ಸಿಡಿಲ್ದು ಮೆ
ಯ್ಗರೆದ ಶಿಖಾಲವಂಗಳೆನೆ ತಮ್ಮ ಗದಾಪರಿಘಟ್ಟನಾಗ್ನಿ ಬಾಂ
ಬರಮೊಗೆದತ್ತದೇಂ ಪಿರಿದೊ ಯುದ್ಧಮಧೋಕ್ಷಜ ದಂತವಕ್ರರಾ ೭೯

ಉಬ್ಬೇರಿದುದರಿಂದ ನಡುಗುತ್ತಿರಲು, ಯುದ್ಧಕ್ರೀಡೆಯಲ್ಲಿ ಧುರೀಣರಾದ ದನುಜಾರಿ ಕೃಷ್ಣನೂ, ದನುಜದಂತವಕ್ರನೂ ಸರದಿಯ ಮೇಲೆ ಅನೇಕಸಾರಿ-ಧೊಟ್ಟುಧಿಟ್ಟು, ಧೊಗಲ್‌ದೊಪ್ಪು, ಘಟಿಲ್, ಭುಗಿಲ್ ಎಂದು ಶಬ್ದವು ಆಗುವಂತೆ ಗದೆಗಳಿಂದ ಹೊಡೆದಾಡಿದರು. ೭೬. ಚಲವು ಚಲವನ್ನೂ ಪೌರುಷವು ಪೌರುಷವನ್ನೂ ಬಲವು ಬಲವನ್ನೂ ಕ್ರಮವು ಕ್ರಮವನ್ನೂ ಯೋಗ್ಯತೆಯು ಯೋಗ್ಯತೆಯನ್ನೂ ಧೈರ್ಯವು ಧೈರ್ಯವನ್ನೂ ನಿಲವು ನಿಲವನ್ನೂ, ಸಾಮರ್ಥ್ಯವು ಸಾಮರ್ಥ್ಯವನ್ನೂ ಗೆದ್ದುದರಿಂದ ಅವರಲ್ಲಿ ಒಬ್ಬರನೊಬ್ಬರು ಗೆಲ್ಲುವುದು ಅಸಾಧ್ಯವಾಯಿತು. ೭೭. ಭೂಮಂಡಲವು ಕಾಲಿನ ತುಳಿತದಿಂದ ಅದಿರಿತು. ತೋಳಿನ ಆಕ್ರಮಣದಿಂದ ದಿಗ್ಗಜಗಳು ತಮ್ಮ ಸ್ಥಳದಿಂದ ಹಿಮ್ಮೆಟ್ಟಿದವು. ಗದೆಯು ಆಕಾಶವನ್ನು ಆಕ್ರಮಿಸಿದುದರಿಂದ ದೇವತೆಗಳು ದೂರದಿಂದ ನೋಡಬೇಕಾಯಿತು. ಬೆಟ್ಟಗಳನ್ನು ದೂರಹೋಗುವಂತೆ, ಮಾಡಿದುದೂ ದಿಗಂತವ್ಯಾಪ್ತವೂ, ಭೂಮ್ಯಾಕಾಶಸಮುದ್ರಗಳ ಅಂತರಾಳವನ್ನು ಕಡೆದುದೂ ಆದ ಕೃಷ್ಣ ದಂತವಕ್ರರ ಆ ಯುದ್ಧವು ಅತಿಭಯಂಕರವಾಗಿದ್ದಿತು. ೭೮. ಗಣೆಯ ಘಟ್ಟಣೆಯಿಂದಲೂ, ಬಹುವಿಧವಾದ ಗದೆಯ ಹೊಡೆತದಿಂದಲೂ ಹುಟ್ಟಿದ ಉರಿಯು ಗಾಳಿಯೂ ದೇವತೆಗಳ ವಿಮಾನಗಳನ್ನೂ ಅಡರಿತು. ಆ ಯುದ್ಧವು ಭಯಂಕರ. ೭೯. ಸಮುದ್ರದ ಬಡಬಾಗ್ನಿಯೂ, ಆಕಾಶದ ಸಿಡಿಲೂ, ಈಶ್ವರನ ಕಣ್ಣಿನ ಅಗ್ನಿಯೂ, ಪ್ರಳಯಕಾಲದಲ್ಲಿ ಆಕ್ರಮಿಸಿ ಕೊಲ್ಲುವ,

---

೧. ದಕ್ಷಿಪ್ತ (ಕಖಗ)

[1]ಅನಿಳಾನಳಾಂಬು ಗಗನಾ
ವನಿಭೂತಾತ್ಮಕವಜಾಂಡತತಿ ನಿಜತನುರೋ
ಮನಿವಿಷ್ಟವೆನಿಪ ಕೃಷ್ಣಂ
ಬನದದೆ ಸಮಸತ್ವನಂತೆ ಕಾದಿದನವನೊಳ್ ೮೦

ಅರಿಯಂ ಕೈಗಾವೊಡೆ ಪೊ
ತ್ತಿರವಕ್ಕುಂ ಕೊಲ್ವ ಬಗೆ ಬರಲ್ ನಿಮಿಷದಿನೇ
ದೊರೆಯನುಮಂ ಕೊಲ್ಗುಮೆನಲ್
ಹರಿ ಕೊಂದಂ ಗದೆಯೊಳೆಱಗಿ ಪೊಯ್ದಾ ರಿಪುವಂ ೮೧

ಪಾಯೆ ಭುಗಿಲೆಂದು ಮೂಗಿಂ
ಬಾಯಿಂ ಬಿಸುನೆತ್ತರಾಜಿಯೊಳ್ ಕೆಡೆದಾ ದೈ
ತೇಯಂ ನೆನೆಯಿಸಿದಂ ಶ
ಕ್ರಾಯುಧನಿಹತಾಗ್ರಧಾತುನಿರ್ಝರಿಗಿರಿಯಂ ೮೨

ಮೊಗದಿಂ ಕಣ್ಣಿಂದೆ ಮೂಗಿಂದೊದವಿರೆ ರುಧಿರಂ ನೆತ್ತಿಯಿಂ ಕೋಳ್ಮಿದುಳ್ ಸೂ
ಸೆ ಗದಾದಂಡಪ್ರಹಾರಪ್ರಬಳಭುಜಬಲಾಟೋಪದಿಂದಂದು ಕೊಂದಂ
ನೆಗಟ್ದಿರ್ದಾ ದಂತವಕ್ತ್ರಾಸುರನನಸುರಸೇನಾಸುರಾಕಾರಕೋಪಾ
ಗ್ನಿಗಳಜ್ವಾಲಾಕಲಾಪೋಲ್ಬಣರಣರಸರಕ್ತಾಕ್ಷನಂಭೋರುಹಾಕ್ಷಂ ೮೩

ಅಗ್ನಿಯೂ, ಮೇಲೆದ್ದ ಈ ಅಗ್ನಿಯಿಂದ ಸಿಡಿದು ಅಡಗಿಕೊಂಡಿದ್ದ ಚಿಕ್ಕಬೆಂಕಿಗಳು ಎನ್ನುವಂತೆ ಅವರ ಗದೆಯ ಸಂಘಟನೆಯಿಂದುದಿಸಿದ ಅಗ್ನಿ, ಆಕಾಶದವರೆಗೂ ವ್ಯಾಪಿಸಿತು. ಕೃಷ್ಣ ದಂತವಕ್ತ್ರರ ಯುದ್ಧವು ಅದೆಷ್ಟು ದೊಡ್ಡದೋ! ೮೦. ಆಕಾಶ ವಾಯು ಅಗ್ನಿ ಜಲ ಭೂಮಿಗಳೆಂಬ ಪಂಚಭೂತಾತ್ಮಕವಾದ ಬ್ರಹ್ಮಾಂಡಗಳ ಸಮೂಹವು, ತನ್ನ ರೋಮದಲ್ಲಡಗಿದೆ ಎನ್ನಿಸಿಕೊಂಡಿರುವ ಕೃಷ್ಣನು, ದಂತವಕ್ತ್ರನೊಡನೆ ಸಮಬಲವುಳ್ಳವಂತೆ ನಟಿಸಿ ವಿನೋದಕ್ಕಾಗಿ ಕಾದಿದನು. ೮೧. ಶತ್ರುವನ್ನು ಕೃಷ್ಣನು ರಕ್ಷಿಸುವುದಾದರೆ ಇನ್ನೂ ಸಮಯ ಬರಬೇಕಾಗುವುದು! ಕೊಲ್ಲುವ ಮನಸ್ಸು ಬಂದರೆ ಎಂತಹವನನ್ನೂ ನಿಮಿಷದಲ್ಲಿ ಕೊಂದುಬಿಡುವನು!- ಎನ್ನುವಂತೆ ಆ ವೈರಿಯನ್ನು ಗದೆಯಿಂದ ಹೊಡೆದು ಕೊಂದನು. ೮೨. ಮೂಗಿನಿಂದಲೂ ಬಾಯಿಂದಲೂ ರಕ್ತವು ಭುಗಿಲೆಂದು ಚಿಮ್ಮಿ ಸುರಿಯುತ್ತಿರಲು ರಣರಂಗದಲ್ಲಿ ಬಿದ್ದ ಆ ದಂತವಕ್ತ್ರ ರಾಕ್ಷಸನು, ವಜ್ರಾಯುಧದಿಂದ ಹತವಾಗಿ ಮೇಲಿಂದ ಧಾತುಮಿಶ್ರವಾದ ಝರಿಯನ್ನು ಸುರಿಸುತ್ತಿದ್ದ ಬೆಟ್ಟವನ್ನು ಜ್ಞಾಪಕಕ್ಕೆ ತರುತ್ತಿದ್ದನು. ೮೩. ಸಹಜವಾಗಿ ಕಮಲನೇತ್ರನಾದ ಆ ಕೃಷ್ಣನು-ರಾಕ್ಷಸಸೇನೆಗೆ ಅತಿ ಭಯಂಕರಾಕಾರವಾದ ಕೋಪಾಗ್ನಿ ಜ್ವಾಲೆಗಳ ಸಮೂಹದಿಂದ ಉಲ್ಬಣವಾದ ರಣರಸದಿಂದ ಕೆಂಪಾದ ಕಣ್ಣುಳ್ಳವನಾಗಿ, ಪ್ರಖ್ಯಾತನಾಗಿದ್ದ ಆ ದಂತವಕ್ತ್ರಾಸುರನನ್ನು ಮುಖದಿಂದಲೂ ಕಣ್ಣಿನಿಂದಲೂ ಮೂಗಿನಿಂದಲೂ ರಕ್ತವು ಹೆಚ್ಚಾಗಿ ಸುರಿಯುವಂತೆಯೂ ನೆತ್ತಿಯಿಂದ ಭಯಂಕರವಾದ

---

೧. ಅನಿಲಾನಲಾರ್ಕ (ಕಖಗ)

ವ|| ಅಂತು ದಂತವಕ್ರನಂ ಕೃತಾಂತವಕ್ತ್ರಮಂ ಪುಗಿಸಿ ತದ್ಬಲೋದ್ಭೂತಕ್ಷೋಭಮಂ ಕಂಡು ವಿಶ್ವರೂಪನಾರೋಪಿತಚಾಪನಾಗಿ ಸವ್ಯಾಪಸವ್ಯಕ್ರಮದಿನತಿವೇಗದಿಂದೆಚ್ಚು

ಕಾದಲುಮೋಡಲುಮರಿದೆನ
ಲಾ ದನುಜನ ಬಲಮನಸ್ತ್ರಪಂಜರದಿಂ ಸಂ
ಛಾದಿಸಿ ಬಟಿಕಭಯಮನಿ
ತ್ತಾದರಿಸಲ್ ತನಗದಾಯ್ತು ಪರಿವಾರಬಲಂ ೮೪

ವ|| ಆ ಸಮಯದೊಳಪೂರ್ವ ಚತುರ್ವಲಲಕ್ಷ್ಮಿಯಿಂದೆಸೆವ ಕೌಮೋದಕೀ ಲಕ್ಷ್ಮನಲ್ಲಿಗೆ ವಿಹಂಗರಾಜಂ ಬಂದು ತದ್ವಿಭೂತಿವೃತ್ತಾಂತಮಂ ಆತ್ಮಗತದೊಳ್ ತಿಳಿದು ವಿಕಸಿತಾನನಂ ಮುಕುಳಿತಾಂಜಲಿಯಾಗಿ ಕಂಜನಾಭಂಗೆ ತಾಂ ಪೋಗಿ ಬಂದ ವೃತ್ತಾಂತಮಂ ಪೇಟಲೆಂದಿಂತೆಂದಂ ಆನುಂ ಪ್ರಲಂಬಪ್ರಸೂದನನುಂ ಯಾದವಪರಿಸ್ಪಂದಮುಮಂ ಮುಂದಿಟ್ಟೊಡಗೊಂಡು ಪೋದೆವು, ಅನ್ನೆಗಂ ಮುನ್ನಮೆ ನಿಮ್ಮಾಜ್ಞೆಯಿಂದಾ ವಿಶ್ವಕರ್ಮಂ ನಿಜಕರ್ಮತತ್ತ್ವದೀ ನಗರ[1]ನಿರ್ಮಾಣದಿಂ ಸಫಲಮಾದುದೆನೆ ಪೊಲಲನಳವಡೆ ಮಾಡಿ ಕೋಟಾಚಕ್ರಚತುರ್ದ್ವಾರಶೋಭೆಯಂ ಮಾಡಿ ಪ್ರತಿಗೃಹ[2]ಸಾದೃಶ್ಯಂದ್ವಾರಪಙ್ಕ್ತಿಯಿಂ ತನ್ನ ಬಗೆಗೆ ಸೊಗಯಿಸಿದ ಕಾರಣದಿಂ ದ್ವಾರವತಿಯುಮೆಂಬ ಪೆಸರನಿಟ್ಟುಪೋದಂ ಅಲ್ಲಿ ನಮ್ಮ ಬೀಡಿನ ಸಮಸ್ತಜನಂಗಳ್ ತಮತಮಗೆ ಯೋಗ್ಯವೆನಿಸಿದ ಮನೆಗಳಂ ಪೊಕ್ಕು ನಿಜನಿಜವ್ಯಾಪಾರದಿಂ ಸುಖದಿನಿರ್ದರ್ ಆ ಪೊಲಲ ಚೆಲ್ವದೆಂತೆನೆ

ತಣ್ಣನೆಯ ಮೆದುಳು ಹೊರಡುವಂತೆಯೂ ಪ್ರಬಲವಾದ ಬಾಹು ಬಲಾಡಂಬರವುಳ್ಳವನಾಗಿ ಗದಾದಂಡದಿಂದ ಹೊಡೆದು ಕೊಂದನು. ವ|| ಹಾಗೆ ದಂತ ವಕ್ರನನ್ನು ಯಮನ ಬಾಯಲ್ಲಿ ಹೊಗಿಸಿ, ಅವನ ಸೈನ್ಯದಿಂದ ಆದ ಗಲಭೆಯನ್ನು ಕಂಡು, ವಿಶ್ವರೂಪನಾದ ಅವನು ಬಿಲ್ಲಿಗೆ ಹೆದೆಯನ್ನೇರಿಸಿ, ಎಡಗೈ ಬಲಗೈಗಳೆರಡರಿಂದಲೂ ಅತಿವೇಗದಿಂದ ಬಾಣಗಳನ್ನು ಹೊಡೆದನು. ೮೪. ಶತ್ರುಸೈನ್ಯವು ಕಾದುವುದಕ್ಕೂ ಓಡಿಹೋಗುವುದಕ್ಕೂ ಆಗದಂತೆ ಅಸ್ತ್ರಪಂಜರದಿಂದ ಮುಚ್ಚಿ, ಬಳಿಕ ಅದಕ್ಕೆ ಅಭಯವನ್ನು ಕೊಟ್ಟು ಆದರಿಸಿದನು. ಅದು ಕೃಷ್ಣನಿಗೆ ಪರಿವಾರ ಸೇನೆಯಾಯ್ತು. ವ|| ಆ ಸಮಯದಲ್ಲಿ ಅಪೂರ್ವವಾಗಿ ನಾಲ್ಕು ಭುಜಗಳ ಶೋಭೆಯಿಂದ ಹೊಳೆಯುವ, ಕೌಮೋದಕೀಧರನಾದ ಕೃಷ್ಣನಲ್ಲಿಗೆ ಗರುಡನು ಬಂದು ಆ ಮಹಿಮೆಯ ವೃತ್ತಾಂತವನ್ನು ತನ್ನ ಮನಸ್ಸಿನಲ್ಲೇ ತಿಳಿದು ಅರಳಿದ ಮುಖವುಳ್ಳವನಾಗಿ ಕೈಮುಗಿದುಕೊಂಡು ಕೃಷ್ಣನಿಗೆ ತಾನು ಹೋಗಿ ಬಂದ ಸಮಾಚಾರವನ್ನು ತಿಳಿಸಬೇಕೆಂದು ಹೀಗೆಂದನು : "ನಾನೂ ಬಲರಾಮನೂ ಯಾದವರ ಸಮೂಹವನ್ನು ಮುಂದಿಟ್ಟೊಡಗೊಂಡು ಹೋದೆವು. ಅದಕ್ಕಿಂತ ಮುಂಚೆಯೇ ನಿಮ್ಮ ಆಜ್ಞೆಯಿಂದ ವಿಶ್ವಕರ್ಮನು ತನ್ನ ಕಲಾಕೌಶಲವು ಈ ನಗರವನ್ನು ನಿರ್ಮಾಣ ಮಾಡುವುದರಿಂದ ಸಫಲವಾಯಿತೆನ್ನುವಂತೆ ಪಟ್ಟಣವನ್ನು ಒಪ್ಪುವಂತೆ ಮಾಡಿ, ಸುತ್ತುಕೋಟೆ, ನಾಲ್ಕು ಹೆಬ್ಬಾಗಿಲುಗಳನ್ನೂ ಸೊಗಸುಗೊಳಿಸಿ, ಪ್ರತಿಯೊಂದು ಮನೆಯ ಬಾಗಿಲ ಸಾಲಿನ ಸಾದೃಶ್ಯವು ತನ್ನ ಮನಸ್ಸಿಗೆ ಸೊಗಸಿದುದರಿಂದ ದ್ವಾರವತಿಯೆಂಬ ಹೆಸರನ್ನಿಟ್ಟುಹೋದನು. ನಮ್ಮ ಬೀಡಿನ ಸಮಸ್ತ ಜನಗಳೂ ತಮತಮಗೆ ಯೋಗ್ಯವೆನಿಸಿದ ಮನೆಗಳನ್ನು ಹೊಕ್ಕು ತಮ್ಮ ತಮ್ಮ ಉದ್ಯೋಗದಿಂದ ಸುಖದಿಂದಿರುವರು. ಆ ಪಟ್ಟಣದ ಚೆಲುವು

---

೧. ನಿರ್ಮಾಪಣದಿಂ (ಕಖಗ) ೨. ಸಾದೃಶ್ಯದ್ವಾರಪಙ್ಕ್ತಿಯುಂ (ಕಗ)

ವಾರಿಧಿ ತನ್ನಗಳ್ ತನಗೆ ರೈವತಶೈಲಮುಪಾಂತಶೈಲವಂ
ಭೋರುಹಲೋಚನಂ ತ್ರಿಭುವನಪ್ರಭು ತನ್ನಧಿನಾಥನೆಂದೊಡಿ
ನ್ನಾರಭಿವರ್ಣಿಸಲ್ ನೆಱೆವರೆಂಬಿನಮಿದುರ್ದುದಗ್ರಗೋಪುರಂ
ದ್ವಾರವತೀಪುರಂ ಜಿತಸುರೇಂದ್ರಪುರಂ ವಸುಧಾಂಘ್ರಿನೂಪುರಂ ೮೫

ವ॥ ಆ ಪುರದ ಪೊಱವೊೞಲೊಳ್

ಬಳಸಿರ್ದದ್ರಿಯ ಕಲ್ಗಳೆಲ್ಲಮವು ಪೊನ್ನುಂ ರನ್ನಮುಂ ಪೂಗೊಳಂ
ಗಳ ನೀರೆಲ್ಲಮನೇಕಸಿದ್ಧರಸಮುಂ ಪೀಯೂಷಮುಂ ಕೆಯ್ವೊಲಂ
ಗಳ ಸಸ್ಯಾವಳಿಯೆಲ್ಲಮೊಳ್ಗೞಿವೆಯುಂ ಪುಂಡ್ರೇಕ್ಷುವುಂ ನಂದನಂ
ಗಳ ಧಾತ್ರೀರುಹಜಾತಮೆಲ್ಲಮಮರೋರ್ವಿಜಾತಮುಂ ಚೂತಮುಂ ೮೬

ನೆಗೞೆ ಕಳಸ್ವನಂ ಕಳಮದಿಂ ಕಳಮಕ್ಕೆ ವನಾಳಿಯಿಂ ವನಾ
ಳಿಗೆ ಕೊಳದಿಂ ಕೊಳಕ್ಕೆ ಕೃತಕಾಚಲದಿಂ ಕೃತಕಾಚಲಕ್ಕೆ ಪಿಂ
ಡಗಲದೆ ಪಾಱುತಿರ್ಪುವಿದಿರುಂ ಬೞಿಯುಂ ಶುಕಭೃಂಗಹಂಸಕೇ
ಕಿಗಳನುರಕ್ತಪಾಂಥಜನದಳ್ಳೆರ್ದೆ ಪವ್ವನೆ ಪಾಱುತಿರ್ಪಿನಂ ೮೭

ನಳಿನೀತೀರಲತಾಗೃಹಂಗಳ ನೆೞಲ್ ನೇರ್ಪಟ್ಟಿರಲ್ ಪಟ್ಟು ಕಾ
ಲ್ಗಳನಿಂಬಿಂ ಪರಿಕಾಲೊಳಿಟ್ಟತಿಮುದಂ ಕೈಸಾರೆ ಕೈಸಾರೆಯೊಳ್
ಬಳೆದಿಮ್ಮಾವಿನ ಬಾಳೆಯೀಳೆಗಳ ಪಣ್ಣಂ ಪಣ್ಣನೋರೊರ್ಮೆ ಮೆ
ಲ್ದೆಳನೀರೀಂಟಿ ಪಥಾರ್ತರಿರ್ಪರಳಿಕೀರಧ್ವಾನದುದ್ಯಾನದೊಳ್ ೮೮

ಹೇಗಿದೆಯೆಂದರೆ ೮೫. ಉನ್ನತವಾದ ಗೋಪುರವುಳ್ಳುದಾಗಿ ಭೂದೇವಿಗೆ ಕಾಲು ಬಳೆಯಂತಿರುವುದೂ, ದೇವೇಂದ್ರನ ಅಮರಾವತಿಯನ್ನೂ ಜಯಿಸಿದುದೂ ಆದ ಆ ದ್ವಾರವತೀಪುರವು ಸಮುದ್ರವೇ ತನ್ನ ಕಂದಕ, ರೈವತಾದ್ರಿಯು ತನಗೆ ಪಕ್ಕದಲ್ಲಿರುವ ಪರ್ವತ. ತ್ರಿಭುವನಪ್ರಭು ಕಮಲನೇತ್ರನು ತನ್ನ ಒಡೆಯನು, ಎಂದ ಮೇಲೆ ಇನ್ನಾರು ತಾನೆ ತನ್ನನ್ನು ವರ್ಣಿಸಲು ಶಕ್ತರು? ಎಂದು ಕೇಳುವಂತೆ ಇದೆ! ವ॥ ಆ ಪುರದ ಹೊರಗೆ ೮೬. ಬೆಟ್ಟದ ಸುತ್ತಲಿರುವ ಕಲ್ಲುಗಳೆಲ್ಲವೂ ಚಿನ್ನ ರನ್ನಗಳದ್ದು. ಪೂಗೊಳಗಳ ನೀರೆಲ್ಲ ಅನೇಕ ಸಿದ್ಧರಸ, ಅಮೃತ. ಗದ್ದೆಗಳ ಸಸ್ಯಾವಳಿಯೆಲ್ಲ ಒಳ್ಳೆಯ ಬತ್ತ, ರಸದಾಳಿ ಕಬ್ಬು ಪಟ್ಟಾವಳಿ ಕಬ್ಬು, ನಂದನವನಗಳ ವೃಕ್ಷಗಳೆಲ್ಲವೂ ಕಲ್ಪವೃಕ್ಷಗಳು ಮತ್ತು ಮಾವಿನಮರ. ೮೭. ಗಿಳಿ, ತುಂಬಿ, ಹಂಸೆ, ನವಿಲುಗಳು-ಅನುರಕ್ತರಾದ ಪ್ರಯಾಣಿಕರ ಸಡಿಲವಾದ ಎದೆಯು ನಡುಗುವಂತೆ ಕಲನಾದವು ಹೆಚ್ಚುತ್ತಿರಲು ಬತ್ತದಿಂದ ಬತ್ತಕ್ಕೂ ವನಪಙ್ತಿಯಿಂದ ವನಪಙ್ತಿಗೂ ಕೊಳದಿಂದ ಕೊಳಕ್ಕೂ ಕೃತಕಗಿರಿಯಿಂದ ಕೃತಕಗಿರಿಗೂ ತಮ್ಮ ಹಿಂಡನ್ನಗಲದೆ ಇದಿರಿಗೂ ಪಕ್ಕದಲ್ಲೂ ಹಾರುತ್ತಿರುವುವು. ೮೮. ದಾರಿಯಲ್ಲಿ ನಡೆದು ಬಳಲಿದ ಜನರು, ತಾವರೆ ಕೊಳಗಳ ದಡದಲ್ಲಿ ಚೆನ್ನಾಗಿ ನೆಳಲಿರುವ ಬಳ್ಳಿಯ ಮನೆಗಳಲ್ಲಿ ಮಲಗಿ ಪಕ್ಕದಲ್ಲಿ ಹರಿಯುವ ಕಾಲುವೆಗಳಲ್ಲಿ ಹಿತವಾಗುವಂತೆ ಕಾಲುಗಳನ್ನಿಟ್ಟು ಬಹಳ ಸಂತೋಷವಾದ ಬಳಿಕ ಹತ್ತಿರದಲ್ಲೇ ಬೆಳೆದಿರುವ ಸೀಮಾವಿನ ಬಾಳೆಯ ಕಿತ್ತಳೆಯ ಹಣ್ಣುಗಳನ್ನು ತಟ್ಟನೆ

ಮಿಸುಪಂಗಂ ಬೆಮರೇಱಿ ನೀಳ್ದ ನಗೆಗಣ್ ಕೆಂಪೇಱಿ ಬಿಂಬಾಧರಂ
ನಸುಬೆಳ್ಪೇಱಿ ಪೊದೞ್ದ ಕಾಮರಸದಿಂ ರಾಗಾಬ್ಧಿ ನೀರೇಱಿ ವ
ಕ್ತ್ರಸರೋಜಂ ಪೊಳಪೇಱಿ ಸುಯ್ ನಿಮಿಱಿ ಚಿತ್ತಂ ಕೂಡೆ ತಣ್ಪೇಱಿ ಸಂ
ತಸದಿಂ ನಂದನದಲ್ಲಿ ದಂಪತಿ ಮನೋಜಕ್ರೀಡೆಯಂ ಮಾಡುಗುಂ ೮೯

ಮದನಸುಖಶ್ರಮಂ ತೊಲಗೆ ತಣ್ಣೆಲರಿಂದೆ ಬೞಿಕ್ಕೆ ಪೂಗಸ
ಸ್ಯದೊಳೊಲೆದುಯ್ಯಲಾಡುವಲರ್ಗೊಂಬಿನೊಳಾಯ್ದಲರ್ಗೊಯ್ವ ಚೂತಗೇ
ಹದೊಳಲರ್ವಚ್ಚಮಂ ತುಡುವ ಪೂಗೊಳದೊಳ್ ಜಲಕೇಳಿಯಿಂದಮಿ
ರ್ಪುದಱೊಳೆ ನಾಡೆ ಪೊೞ್ತುಗಳೆಗುಂ ಬನದೊಳ್ ಪುರವಾರಕಾಂತೆಯರ್ ೯೦

ಅಳಿಮಾಲಾಕೇಶಮಂ ಮೆಲ್ಲನೆ ಬರೆತೆಗದಬ್ಜಾನನಾಮೋದಮಂ ಪೀ
ರ್ದು ಲತಾಂಗಾಲಿಂಗಮಂ ಸಂಗಳಿಸಿ ಕೃತಕಶೈಲೇಂದ್ರಶುಂಭನ್ನಿತಂಬ
ಸ್ಥಳದೊಳ್ ತನ್ನಿರ್ಝರಾಂಬುಸ್ಮರರಸಮೊಸರ್ವಂತೇಱಿ ನಿಚ್ಚಂ ವನಶ್ರೀ
ಗೊಲವಂ ಮಾಡುತ್ತುಮಿರ್ಕುಂ ಚತುರವಿಟನವೋಲ್ ದಕ್ಷಿಣಾಶಾಸಮೀರಂ ೯೧

ತೊಳಗುವ ರತ್ನಕೂಟತಟದೊಳ್ ಸುೞಿದಾಡುವ ಸೋಗೆ ಸೋಗೆಯಂ
ಕಳರವದಿಂದವಾಡಿಸುವ ದಂಪತಿ [1]ದಂಪತಿಯುಪ್ಪ ಜೊಂಪಮಂ
ಜಳಲವದಿಂದೆ ಸಿಂಪಿಸುತುಮಿರ್ಪ ಸುಧಾಕರಕಾಂತ ನಿರ್ಝರಾವಳಿ
ಬಗೆಗೊಪ್ಪೆ ಮಾೞ್ಪುದು ಚಮತ್ಕೃತಿಯಂ ಕೃತಕಾದ್ರಿಸಂಕುಳಂ ೯೨

ತಿಂದು ಎಳೆನೀರನ್ನು ಕುಡಿಯುತ್ತಿರುವರು. ೮೯. ನಂದನವನದಲ್ಲಿ ದಂಪತಿಗಳು ಹೊಳೆಯುವ ತಮ್ಮ ಅವಯವಗಳು ಬೆವರೇರಿ, ವಿಶಾಲವಾದ ನಗೆಗಣ್ಣು ಕೆಂಪಗಾಗಿ, ತೊಂಡೆಯ ಹಣ್ಣಿನಂತಹ ತುಟಿಯು ಸ್ವಲ್ಪ ಬೆಳ್ಳಗಾಗಿ, ಹೆಚ್ಚಿದ ಕಾಮರಸದಿಂದ ಅನುರಾಗಸಾಗರವು ಉಕ್ಕುತ್ತ ಮುಖಕಮಲವು ಅರಳಿ ಹೊಳೆಯುತ್ತ ನಿಟ್ಟುಸಿರು ಹೆಚ್ಚುತ್ತ, ಮನಸ್ಸು ಪರಸ್ಪರ ಕೂಡಲು, ಕಾಮತಾಪವು ತಣ್ಣಗಾಗುವಂತೆ ಕಾಮಕ್ರೀಡೆಯನ್ನು ಮಾಡುವರು. ೯೦. ಆ ಪುರದ ವಾರನಾರಿಯರು ವನದಲ್ಲಿ ತಂಗಾಳಿಯಿಂದ ಕಾಮಸುಖದಿಂದಾದ ಶ್ರಮವು ಕಳೆದ ಬಳಿಕ ಅಡಕೆಯ ಮರಗಳಲ್ಲಿ ತೂಗಾಡುವ, ಉಯ್ಯಾಲೆಯಾಡುತ್ತ ಹೂವಿರುವ ಕೊಂಬೆಗಳಿಂದ ಹೂವನ್ನು ಆರಿಸಿ ಕುಯ್ಯುತ್ತ, ಮಾವಿನ ಮರದ ಮನೆಯಲ್ಲಿ ಹೂವಿನ ಆಭರಣವನ್ನು ತೊಟ್ಟುಕೊಳ್ಳುತ್ತ ಹೂವಿನ ಕೊಳಗಳಲ್ಲಿ ನೀರಾಟವಾಡುತ್ತ ಇರುವುದರಲ್ಲೇ ಸಂತೋಷದಿಂದ ಕಾಲವನ್ನು ಕಳೆಯುವರು. ೯೧. ದಕ್ಷಿಣ ದಿಕ್ಕಿನ ವಾಯುವು ಚತುರನಾದ ವಿಟನಂತೆ ಆ ವನಶ್ರೀಯ, ಕಮಲಮುಖದ ಮೇಲಿನ ತುಂಬಿಗಳ ಸಾಲೆಂಬ ಮುಂಗುರುಳನ್ನು ಮೆಲ್ಲಗೆ ಪಕ್ಕಕ್ಕೆ ಸರಿಸಿ, ಮುಖಕಮಲದ ಸುವಾಸನೆಯನ್ನು ಹೀರಿ, ಲತಾಂಗವನ್ನು ಆಲಿಂಗಿಸಿ, ಕೃತಕಶೈಲವೆಂಬ ಹೊಳೆಯುವ ನಿತಂಬಸ್ಥಳದ ಮೇಲೆ ಗಿರಿಝರಿಯ ನೀರೆಂಬ ಕಾಮರಸವು ಸುರಿಯುವಂತೆ ಏರಿ, ನಿತ್ಯವೂ ಅವಳಿಗೆ ಸಂತೋಷವನ್ನುಂಟುಮಾಡುವನು. ೯೨. (ಅಲ್ಲಿಯ) ಕೃತಕಗಿರಿ ಸಮೂಹವು, ಹೊಳೆಯುವ ತನ್ನ ರತ್ನ ಶಿಖರಗಳಲ್ಲಿ ಸುಳಿದಾಡುವ ನವಿಲುಗಳನ್ನು

೧. ದಮ್ಪತಿಯಪ್ಪೆ (ಮೊಅ)

ಆಗಳುಮುಳ್ಳಲರ್ದಲರ್ವ ಪೂಗಳ ಕಂಪಿನ ಸೊಂಪಿನೆಚ್ಚರ
ಕ್ಕಾಗರವಾದ ಪುಷ್ಪಲತೆ ಪೂಗಿಡು ಪೂಮರನೆಂಬಿವಂ ಮನೋ
ರಾಗದಿನಾಗಳುಂ ಮುಸುಬಿ ನಿಂದಳಿಮಾಲೆಯ ಗೀತನಿಸ್ವನಾ
ಭೋಗದೆ ಪುಷ್ಪವಾಟಿ ಬಗೆಗೊಳ್ಳುದನಂಗನ ಗೀತಶಾಲೆವೋಲ್ ೯೩

ವ|| ಅಂತು ಸೊಗಯಿಸುವ ಪೊಱವೊಟಲಿಂದೊಳಗೆ

ನುಸುಳಲ್ಬಾರದು ಸಪ್ತಸಪ್ತಿಯ ವರೂಥಕ್ಕೆಂದುಮೆಂಬಂತೆ ಕಾ
ಳಸಗೊಂಡಾಗಸದೊಳ್ ನಿಜಸ್ಥಗಿತರತ್ನದ್ಯೋತವಿಸ್ತಾರದಿಂ
ದೆಸೆಯುಂ ಚಿತ್ರಿಸುತುಂ ವಿಶಾಲತರಶಾಳಂ ವಿಸ್ತೃತಾಟ್ಟಾಳಮು
ದ್ಧಸಮೀಚೀನಪಟಧ್ವಜಂ ಕನಕಕೋಟಾಮಂಡಲಂ ರಂಜಿಕುಂ ೯೪

ಅದಱೊಳ್ ಚಂಡಾಂಶುಬಿಂಬಂ ತೊಡರ್ದು ಮಿಡುಕದಿರ್ದಪ್ಪುದೆಂಬಂತಿರಾತ್ಮಾ
ಗ್ರದೊಳೊಪ್ಪಂಬೆತ್ತ ಚೆಂಬೊಂಗಳಸದೆಳವಿಸಿಲ್ ಸಂತತಂ ವ್ಯೋಮಗಂಗಾ
ಬ್ಜದ ಪೆರ್ಚಂ ಮಾಡೆ ಕೂಟಧ್ವಜದ ದುಗುಲದಿಂ ಸಂಚರತ್ಖೇಚರೀಲೋ
ಲದುಕೂಲಭ್ರಾಂತಿಯಂ ಪುಟ್ಟಿಸುತುಮೆಸೆವುದಭ್ರಂಕಷದ್ವಾರಹರ್ಮ್ಯಂ ೯೫

ತಮ್ಮ ಮಧುರ ಧ್ವನಿಯಿಂದ ಆಡಿಸುವ ದಂಪತಿಗಳು ಪರಸ್ಪರ ಆಲಂಗಿಸಿಕೊಳ್ಳುವಾಗ ತನ್ನಲ್ಲಿರುವ ಚಂದ್ರಕಾಂತಶಿಲೆಯ ಝರಿ ನೀರನ್ನು ಹನಿಸುತ್ತ ಮನಸ್ಸಿಗೊಪ್ಪುವಂತೆ ಚಮತ್ಕಾರವನ್ನು ಮಾಡುವುದು. ೯೩. ಯಾವಾಗಲೂ ಕೊಂಚ ಅರಳುವ ಹೂಗಳ ಸುವಾಸನೆಯ ಸೊಂಪಿನ ಹೆಚ್ಚಿಕೆಗೆ ನೆಲೆಯಾದ ಹೂವಿನ ಬಳ್ಳಿ, ಹೂವಿನ ಗಿಡ, ಹೂವಿನ ಮರ ಎಂಬುವನ್ನು ಮನಃಪ್ರೀತಿಯಿಂದ ಯಾವಾಗಲೂ ಸುತ್ತಿಮುತ್ತಿರುವ ತುಂಬಿಗಳ ಸಾಲಿನ ಗೀತಧ್ವನಿಯ ಹೆಚ್ಚಿಕೆಯಿಂದ ಹೂದೋಟವು ಮನ್ಮಥನ ಸಂಗೀತಶಾಲೆಯಂತೆ ಮನೋಹರವಾಗಿರುವುದು. ವ|| ಹಾಗೆ ಸೊಗಸಾಗಿರುವ ಪಟ್ಟಣದ ಹೊರಭಾಗದಿಂದ ಒಳಗೆ. ೯೪. ಬಹು ವಿಸ್ತಾರವಾದ ಪ್ರಕಾರವೂ ಉನ್ನತವಾದ ಅಟ್ಟಳೆಯೂ ಉನ್ನತವಾದ ಪಟಧ್ವಜವುಳ್ಳುದೂ ಆದ ಕೋಟೆಯು, ತನ್ನಲ್ಲಿ ಹುದುಗಿರುವ ರತ್ನಗಳ ಹೆಚ್ಚು ಹೊಳಪಿನಿಂದ ದಿಕ್ಕುಗಳನ್ನು ಚಿತ್ರಿಸುತ್ತ, ಸೂರ್ಯನ ರಥಕ್ಕೆ ನುಸುಳುವುದಕ್ಕೆ ಎಂದೂ ಸಾಧ್ಯವಿಲ್ಲ ಎನ್ನುವಂತೆ ಆಕಾಶದಲ್ಲಿ ಉಚಿತವಾಗಿ ನೆಲೆಸಿ ಹೊಳೆಯುತ್ತಿರುವುದು. ೯೫. ದ್ವಾರಕಿಯ ಆಕಾಶವನ್ನು ಮುಟ್ಟುವ ಹೆಬ್ಬಾಗಿಲ ಗೋಪುರವು-ಅದರಲ್ಲಿ ಸೂರ್ಯಬಿಂಬವೆ ಸಿಕ್ಕಿಕೊಂಡು ಚಲಿಸದೆ ನಿಂತಿದೆ ಎನ್ನುವಂತೆ ತನ್ನ ಅಗ್ರದಲ್ಲಿ ಒಪ್ಪುತ್ತಿರುವ ಅಪರಂಜಿ ಚಿನ್ನದ ಕಳಸದ ಎಳೆಬಿಸಿಲು ಯಾವಾಗಲೂ ಆಕಾಶಗಂಗೆಯ ಕಮಲವನ್ನರಳಿಸುತ್ತಿರಲು, ಶಿಖರದ ಧ್ವಜದ, ದುಕೂಲ ದಿಂದ, ಸಂಚರಿಸುತ್ತಿರುವ ಖೇಚರಿಯರ ಪಟ್ಟೆಯ ವಸ್ತ್ರವೆಂಬ ಭ್ರಾಂತಿಯನ್ನು ಹುಟ್ಟಿಸುತ್ತಾ

ನಿಳಯಕ್ಕೊರೊಂದು ಕೇಳೀವನಮುಮಮೃತಕಾಸಾರಮುಂ ವಾಟಮುಂ ತ
ನ್ನಿಳಯಂಗಳ್ ಮಾಡಮುಂ ಮಂಟಪಮುಮುಪರಿಯುಂ ತನ್ನಿವಾಸಂಗಳೊಳ್ ಗೋ
ಕುಳಮುಂ ಧಾನ್ಯಂಗಳುಂ ತೀವಿದ ನವನಿಧಿಯುಂ ತದ್ಗೃಹಸ್ಥರ್ ಕಳಾಪೇ
ಶಳರುಂ ಗಂಭೀರರುಂ ಭೋಗಿಗಳುಮೆನೆ ಪುರಶ್ರೀಕರಂ ರಂಜಿಸಿರ್ಕುಂ ೯೬

ಘನತರಮಾದ ಕತ್ತುರಿಯ ನೀರ್ದಳಿಪಂ ಪುದಿದಿರ್ದ ತೋರಮು
ತ್ತಿನ ಕಡೆ ತಳ್ತ ಹೇಮಮಯ ಪುಷ್ಪದ ಪೂವಲಿ ನೀಲಚೀನಕೇ
ತನತತಿ ಮಾಲೆಗೊಂಡ ಮಣಿದೋರಣಮೆಂಬಿವು ಬೀದಿಬೀದಿಯೊಳ್
ಮನೆಮನೆಯೊಳ್ ವಿರಾಜಿಸೆ ವಿರಾಜಿಸುತಿರ್ದುದು ತತ್ಪುರಾಂತರಂ ೯೭

ಘನಕಾಳಾಗರುಧೂಪಧೂಮಮಳಿನವ್ಯೋಮಂ ತ್ರಿಸಂಧ್ಯಾನಕ
ಧ್ವನಿಶಬ್ದಾತ್ಮಕದಿಕ್ತಟಂ ಶಿಖರಮಾಣಿಕ್ಯಾತಪೋಜ್ಜೃಂಭಿತ
ದ್ಯುನದೀವಾರಿಜಮೊಪ್ಪುತಿರ್ಪುದು ಸುರಾಗಾರೋತ್ಕರಂ ನರ್ತಕೀ
ಜನತೋಲ್ಲಾಸಿತಕೇಕರಂ ವಿವಿಧಲೀಲೋದ್ಯಾನಶೋಭಾಕರಂ ೯೮

ಅವಿರಳಮಾದ ಕೇಳಿವನಕೇಳಿ ಸರೋವರಶೋಭೆಯಿಂ ಸುಧಾ
ಧವಳಿತರಮ್ಯಹರ್ಮ್ಯನಿಕುರುಂಬಕದಿಂ ವರವಾರಕಾಮಿನೀ
ವಿವಿಧವಿಡಂಬದಿಂ ಸೊಗಯಿಕುಂ ವಿಟವೃಂದವಿಹಾರಿಗಳ್ ಮನೋ
ಭವಜಯಕಾರಿಗಳ್ ಹೃದಯಹಾರಿಗಳಲ್ಲಿಯ ಸೂಳೆಗೇರಿಗಳ್ ೯೯

ಹೊಳೆಯುತ್ತಿರುವುದು. ೯೬. ಮನೆಮನೆಗೂ ಒಂದೊಂದು ಕ್ರೀಡಾವನವೂ ಅಮೃತಸರೋವರವೂ ಹೂತೋಟವೂ ಇರುವುದು. ಆ ಮನೆಗಳು ಉಪ್ಪರಿಗೆಯೂ ಮಂಟಪವೂ ಚಂದ್ರಶಾಲೆಯೂ ಉಳ್ಳುದಾಗಿರುವುವು. ಒಂದೊಂದು ಮನೆಯಲ್ಲೂ ಗೋಕುಲವೂ ಧಾನ್ಯಗಳೂ ನವನಿಧಿಯೂ ತುಂಬಿರುವುದು. ಆ ಮನೆಗಳಲ್ಲಿ ವಾಸಮಾಡುವ ಗೃಹಸ್ಥರು ಕಲೆಗಳಿಂದ ಮನೋಹರರೂ ಗಂಭೀರರೂ ಭೋಗಿಗಳೂ ಆಗಿರುವರು. ಹೀಗೆ ಆ ಪುರಶ್ರೀಯು ಅಧಿಕವಾಗಿ ರಂಜಿಸುತ್ತಿರುವುದು. ೯೭. ಆ ಪಟ್ಟಣದ ಒಳಭಾಗವೂ, ಒಂದೊಂದು ಮನೆಯನ್ನೂ ಘನವಾದ ಕಸ್ತೂರಿಯ ನೀರಿನಿಂದ ಸಾರಿಸಿ, ದಪ್ಪಮುತ್ತಿನ ರಂಗವಲ್ಲಿಯಿಂದಲೂ ಸುವರ್ಣದ ಹೂಬಲಿಯಿಂದಲೂ ನೀಲವರ್ಣಧ್ವಜದಿಂದಲೂ ಮಾಲೆಯಾಗಿ ಕಟ್ಟಿರುವ ರತ್ನತೋರಣಗಳಿಂದಲೂ ಬೀದಿಬೀದಿಗಳಲ್ಲೂ ಅಲಂಕರಿಸಿರುವುದರಿಂದ ವಿರಾಜಿಸುತ್ತಿರುವುದು. ೯೮. ದೇವಗೃಹಗಳ ಸಮೂಹವುಳ್ಳುದೂ ನರ್ತಕಿಯರ ಉಲ್ಲಾಸಕರವಾದ ಕುಡಿನೋಟವುಳ್ಳುದೂ ವಿಧವಿಧಲೀಲೆಗಳಿಗೆ ಆಶ್ರಯವಾದ ಉದ್ಯಾನವನಗಳಿಂದ ಸೊಗಸುತ್ತಿರುವುದೂ ಆದ ಆ ಪಟ್ಟಣದ ಕಾಳಾಗರು ಧೂಪದ ಹೊಗೆಯಿಂದ ಆಕಾಶವು ಮಂಕಾಗುವುದು. ತ್ರಿಸಂಧ್ಯಾಕಾಲದ ಶುಭವಾದ್ಯ ಧ್ವನಿಯಿಂದ ದಿಗಂತಗಳು ಶಬ್ದಪೂರ್ಣವಾಗುವುವು, ಶಿಖರದ ರತ್ನಕಾಂತಿಯೆಂಬ ಎಳೆಬಿಸಿಲಿನಿಂದ ದೇವಗಂಗೆಯ ಕಮಲಗಳು ಅರಳುವುವು. ೯೯. ಹತ್ತಿರ ಹತ್ತಿರದಲ್ಲೇ ಇರುವ ಕ್ರೀಡಾವನ, ಕ್ರೀಡಾ ಸರೋವರಗಳ ಸೊಗಸಿನಿಂದಲೂ, ಸುಣ್ಣವನ್ನು ಬಳಿದು ಬೆಳ್ಳಗೆ ಮಾಡಿರುವ ರಮ್ಯವಾದ ಉಪ್ಪರಿಗೆಯ ಮನೆಗಳ ಸಮೂಹದಿಂದಲೂ, ಉತ್ತಮ ವೇಶ್ಯಾಸ್ತ್ರೀಯರ, ಬಗೆಬಗೆಯ

ಕಳೆ ಕರ್ಪೂರದ ಕಸವಂ
ತಳಿ ಕತ್ತುರಿನೀರನಿಕ್ಕು ಮುತ್ತಿನ ಕಡೆಯಂ
ಬೆಳಗು ಮಣಿದೀಪಮಂ ಪೊಗೆ
ಗೊಳಿಸಗರುವನೆಂಬರಲ್ಲಿ ಸೂಳೆವಳರ್ಕಳ್ ೧೦೦

ಪೊಸತೆನಿಪೊಂದು ಪಕ್ವಫಲಮೆಂದರುಣಾಧರಮಂ ಕರ್ದುಂಕಲೋ
ದಿಸುತಿರಲೌಡುಗರ್ಚೆ ಭರದಿಂ ನಿಲೆ ತತ್ಫಲಮೆತ್ತವೋದುದೆಂ
ದಸಿಯಳ ಹಸ್ತದಿಂದಿಟಿದು ತನ್ಮಣಿಕುಟ್ಟಿಮದೊಳ್ ತೊಳಲ್ದು ವೀ
ಕ್ಷಿಸುವತಿಮುಗ್ಧರಾಜಶುಕಮೊಪ್ಪುಗುಮಾ ಗಣಿಕಾಗೃಹಂಗಳೊಳ್ ೧೦೧

ಮುನಿದುಟೆದಿರ್ದು ಪೋಪುಟೆದು ಪೋದೊಡೆ ಪಿಂದನೆ ಬರ್ಪ ಬಂದು ಕ
ಣ್ಬನಿ ಕರೆಗಣ್ಮೆ ಕಾಲ್ವಿಡಿವ ಕಾಲ್ವಿಡಿದೋಪನನೋಪಳುಯ್ದು ನಂ
ದನತರುಮಧ್ಯಕೇಳಿಗೃಹಮಂ ಪುಗುತಿರ್ಪ ವಿಚಿತ್ರಚಿತ್ರದಿಂ
ಜನಿಯಿಪುವಾ ಸುಧಾಗೃಹದ ಭಿತ್ತಿಗಳುರ್ವಿಗಪೂರ್ವಭಿತ್ತಿಯಂ ೧೦೨

ಟಂಕೃತಿ ಮಿಗೆ ಜೇವೊಡೆಯು
ತ್ತುಂ ಕರ್ಬಿನ ಬಿಲ್ಲನರಲ ಸರಲಂ ತೂಗು
ತ್ತುಂ ಕರಮೆಸೆದಲ್ಲಿ ತೊಳ
ಲ್ವಂ ಕಡುಬಿಲ್ಲಾಳನತನುವೆಂಬ ತಳಾಱಂ ೧೦೩

ಬೆಡಗು ನಟನೆಗಳಿಂದಲೂ, ವಿಟರ ವಿಹಾರಕ್ಕೆ ನೆಲೆಗಳೂ, ಮನ್ಮಥ (ಕಾಮ) ಜಯಕಾರಿಗಳೂ, ಮನೋಹಗಳೂ ಆದ ಅಲ್ಲಿಯ ಸೂಳೆಗೇರಿಗಳು ಚೆನ್ನಾಗಿರುವವು. ೧೦೦. ಸೂಳೆಯರ ಗೃಹಕಾರ್ಯನಿರ್ವಾಹಕರು, 'ಅಲ್ಲಿರುವ ಕರ್ಪೂರದ ಕಸವನ್ನು ತೆಗೆದುಹಾಕು. ಕಸ್ತೂರಿಯ ನೀರನ್ನು ಚಿಮುಕಿಸು. ಮುತ್ತಿನ ರಂಗವಲ್ಲಿಯನ್ನು ಇಕ್ಕು. ಮಣಿದೀಪವನ್ನು ಬೆಳಗು. ಅಗರು (ಧೂಪ)ವನ್ನು ಹೊಗೆಗೊಳಿಸು' ಎನ್ನುವರು. ೧೦೧. ಆ ವೇಶ್ಯಾಗೃಹಗಳಲ್ಲಿ ವೇಶ್ಯೆಯು ಅರಗಿಳಿಗೆ ಮಾತನ್ನು ಕಲಿಸುತ್ತಿರುವಾಗ ಆಕೆಯ ಕೆಂಪುತುಟಿಯನ್ನು ಅದು ಒಂದು ಹೊಸಹಣ್ಣು ಎಂದು ಕಚ್ಚಲು ಆಕೆ ತಟ್ಟನೆ ಅವಡುಗಚ್ಚಿಕೊಂಡು ನಿಂತಳು. ಹಣ್ಣು ಎಲ್ಲಿ ಹೋಯಿತೆಂದು, ಅವಳ ಕಯ್ಯಿಂದ ಇಳಿದು ಆ ರತ್ನದ ನೆಲಗಟ್ಟಿನಲ್ಲಿ ಸುತ್ತಿಸುತ್ತಿ ಹುಡುಕುತ್ತಿರುವ ಆ ಮೊದ್ದು ಮುದ್ದುಗಿಳಿಯು ಚೆನ್ನಾಗಿ ಕಾಣಿಸುತ್ತಿದ್ದಿತು. ೧೦೨. ಪ್ರಿಯನು ಕೋಪಿಸಿಕೊಂಡು ಸ್ವಲ್ಪಹೊತ್ತು ಹೋಗದೆ ಅಲ್ಲೇ ಇದ್ದು ಆಮೇಲೆ ಹೊರಟು ಹೋದರೆ ಹಿಂಬಾಲಿಸಿ ಬರುವ, ಬಂದು ಕಣ್ಣೀರ ಹನಿಯನ್ನು ಹೆಚ್ಚಾಗಿ ಸುರಿಸಿ, ಕಾಲನ್ನು ಹಿಡಿದುಕೊಳ್ಳುವ, ಕಾಲನ್ನು ಹಿಡಿದುಕೊಂಡು ಪ್ರಿಯೆಯು ಪ್ರಿಯನನ್ನು ಕರೆದುಕೊಂಡು ಹೋಗಿ ನಂದನವನದ ಮಧ್ಯದಲ್ಲಿರುವ ಕ್ರೀಡಾಗೃಹವನ್ನು ಪ್ರವೇಶಿಸುತ್ತಿರುವ ವಿಚಿತ್ರ ಚಿತ್ರಗಳುಳ್ಳ ಆ ಸುಧಾಗೃಹದ ಗೋಡೆಗಳು ಭೂಮಿಗೆ ಅಪೂರ್ವವಾಗಿ ಕಂಗೊಳಿಸುತ್ತಿವೆ. ೧೦೩. ಟಂಕಾರವು ಹೆಚ್ಚುವಂತೆ ಹೆದೆಯನ್ನು ಮಿಡಿಯುತ್ತ ಕಬ್ಬಿನ ಬಿಲ್ಲನ್ನೂ ಹೂಬಾಣವನ್ನೂ ತೂಗುತ್ತ ಉತ್ತಮನಾದ ಶಕ್ತನಾದ ಬಿಲ್ಗಾರನೆನಿಸಿಕೊಂಡಿರುವ ಮನ್ಮಥನೆಂಬ ತಳವಾರನು ಅಲ್ಲಿ ವಿರಾಜಿಸುತ್ತ ಸುತ್ತುತ್ತಿರುವನು.

ಸುದತಿಯರಲ್ಕೆಱೆಂದಿರುಳೊಳಿಕ್ಕಿದ ಚಂದನಪಂಕದಣ್ಪು ಸೂ
ಡಿದ ಪೊಸಜಾದಿ ತೊಟ್ಟ ನವಮೌಕ್ತಿಕಮಂಡನಮೊಪ್ಪೆ ನೇತ್ರಕೌ
ಮುದಿಯೊಳಮಾಸ್ಯಚಂದ್ರಮನೊಳಂ ಬೆಳಗುತ್ತಿರೆ ಶುಕ್ಲಪಕ್ಷಮ
ಲ್ಲದೆ ಸಲೆ ಕೃಷ್ಣಪಕ್ಷಪರಿವರ್ತನಮಿಲ್ಲೆನಿಕುಂ ಪುರಾಂತದೊಳ್ ೧೦೪

ಪುರದೊಳಗಲ್ಲಿಗಲ್ಲಿಗೆರಡುಂ ತೆಱದಿಂದೆಸೆವೊಳ್ಪಿನಿಂದವಂ
ಬರಚರಕಾಮಿನೀತತಿಗೆ ಚಂದನದಣ್ಪಿನ ಸೊಂಪನೀಯುತುಂ
ಸಿರಿಗೆ ನಿವಾಸಮಾದ ಪಿರಿಯಂಗಡಿಗಳ್ ಕರಮೊಪ್ಪಿ ತೋರ್ಪುವಾ
ಪುರವರಲಕ್ಷ್ಮಿ ತೊಟ್ಟ ಪೊಸಮುತ್ತಿನ ಹಾರದ [1]ಮೊತ್ತದಂದದಿಂ ೧೦೫

ಅಗಣಿತಧನಂಗಳಿಂದಂ
ನಗುತಿರ್ಕುಂ ಮೇರುನಗಮನೆನೆ ನೆಗಟ್ದಳಕಾ
ನಗರೀಶಂ ಬರ್ಕುಮೆ ತ
ನ್ನಗರದ ಕಡೆಪಟ್ಟ ಪರದರೊರೆಗಂ ದೊರೆಗಂ ೧೦೬

ದೆಸೆಗಳ್ ನಿಜಾಂಶುವಿಂ ರಂ
ಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ
ಕೊಸಗಿನ ಮರದುಱುಗಲರ
ಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರವಸರಂ ೧೦೭

೧೦೪. ಆ ಪಟ್ಟಣದೊಳಗೆ ಸುಂದರಿಯರು ರಾತ್ರೆ ಬಳಿದುಕೊಂಡ ಶ್ರೀಗಂಧದ ಸರಿಯೂ, ಮುಡಿದುಕೊಂಡ ಹೂವಿನ ಮಾಲೆಯೂ, ತೊಟ್ಟುಕೊಂಡ ಹೊಸ ಮುತ್ತಿನ ಆಭರಣವೂ, ಹೊಳೆಯುತ್ತಿರುವ ಅವರ ಮುಖಚಂದ್ರನೂ ಕಣ್ಣಿನ ಹೊಳಪೆಂಬ ಬೆಳುದಿಂಗಳೂ ಪ್ರಕಾಶಿಸುತ್ತಿರುವುದರಿಂದ ಯಾವಾಗಲೂ ಶುಕ್ಲಪಕ್ಷವೇ ಹೊರತು ಕೃಷ್ಣಪಕ್ಷವಾಗುವುದಿಲ್ಲ ಎನ್ನಿಸುವುದು. ೧೦೫. ಐಶ್ವರ್ಯಕ್ಕೆ ನೆಲೆಯಾದ ದೊಡ್ಡ ದೊಡ್ಡ ಅಂಗಡಿಗಳು, ಆ ಪಟ್ಟಣದಲ್ಲಿ ಅಲ್ಲಲ್ಲೇ ಎರಡು ಸಾಲಾಗಿದ್ದು ಹೊಳೆಯುವ ತಮ್ಮ ಮುತ್ತುಗಳಿಂದ ಖೇಚರ ಯುವತಿಯರಿಗೆ ಶ್ರೀಗಂಧ ಲೇಪನ ಸೊಗಸನ್ನುಂಟುಮಾಡುತ್ತ ಉತ್ತಮಳಾದ ಆ ಪುರಲಕ್ಷ್ಮಿಯು ಧರಿಸಿರುವ ಹೊಸ ಮುತ್ತಿನ ಸರಗಳ ರಾಶಿಯಂತೆ ಚೆನ್ನಾಗಿ ಕಾಣಿಸುವುವು. ೧೦೬. ಲೆಕ್ಕ ಮಾಡಲಾಗದಷ್ಟು ಧನವುಳ್ಳುದಾಗಿರುವುದರಿಂದ ಮೇರುಗಿರಿಯನ್ನೂ ನಗುತ್ತಿದೆಯೆನ್ನುವಾಗ ಕುಬೇರನು ಆ ಪಟ್ಟಣದಲ್ಲಿ ತುಂಬ ಚಿಕ್ಕದು ಎನಿಸಿಕೊಂಡಿರುವ ಅಂಗಡಿಯ ವರ್ತಕರಿಗೆ ಸಮನಾದಾನೆ! ೧೦೭. ಅಲ್ಲಿಯ ವಜ್ರದ ಅಂಗಡಿಗಳು ಸುವರ್ಣದ ಗೂಡುಗಳಲ್ಲಿ ಮೆಟ್ಟಿರುವ ವಜ್ರಗಳ ಹೊಳಪಿನಿಂದ ದಿಕ್ಕುಗಳಿಗೆ ಬೆಳಕನ್ನುಂಟುಮಾಡುತ್ತ ಅರಳಿದ ಹೂಗಳಿಂದ ಕೂಡಿದ ಬೆಟ್ಟದಾವರೆ ಮರಗಳ ಗುಂಪಿನಂತೆ

---

೧. ಮುತ್ತಿನಂದದಿಂ (ಗ)

ಅಜರಾಮರತ್ವಮಂ ಪೌ
ರಜನಂಗಳ್ಗೀವ ತನ್ನ ವಿವಿಧೌಷಧಿ ನಾ
ಕಜನಗದ ಮಹೌಷಧಿಗಳೆ
ನಿಜಸೃಷ್ಟಿಯೊ[1]ಳೆನಿಪುವಲ್ಲಿ ಗಂದಿಗವಸರಂ ೧೦೮

ಭೀಕರಬಾಡಬಾಗ್ನಿಯ ದವಾಗ್ನಿಯ ತೀವ್ರತೆಗಳ್ಕಿ ಬಂದು ನಿ
ರ್ವ್ಯಾಕುಳಮೀಗಳಿಲ್ಲಿ ನೆಲಸಿತ್ತಜಲಾತ್ಮಕರೂಪವಾಗಿ ರ
ತ್ನಾಕರಸಂಕುಳಂ ಶಿಖರಿನಾಮವಿವರ್ಜಿತವಾಗಿ ರೋಹಣಾ
ನೀಕ[2]ಮೆನಲ್ಕೆ ರತ್ನವಸರಂ ಬಗೆಗಚ್ಚರಿಯಂ ನಿಮಿರ್ಚುಗುಂ ೧೦೯

ಸಲೆ ದೋಷಾಕರನಂ ಕಳಂಕಯುತನಂ ತಾಳ್ದಿರ್ಪುದೀ ವ್ಯೋಮಮಂ
ಡಳಮೆಂದಂತದನೊಲ್ಲದಪ್ರತಿಮವಾರಸ್ತ್ರೀಜನಾಸ್ಯೇಂದುಸಂ
ಕುಳಮಂ ತಾಳ್ದಿದುದಿಂತಿದೆಂದು ಪುರದೊಳ್ ಬಂದಿರ್ದ ತಾರಾಗಣಂ
ಗಳಿವೆಂಬಂತಿರೆ ಕಂಚುಗಾಱವಸರಂ ಮಾಳ್ಕುಂ ಮನೋರಾಗಮಂ ೧೧೦

ಸುರತರು ಕುಡುವಂಬರದೊಳ್
ಪರಿಪಾಟಚ್ಛಾಯೆ ನೆಯ್ಗೆ ನೂಲಿಂ ರಂಗಿಂ
ದೊರೆಕೊಳ್ಳದೆನಿಪ ದಿವ್ಯಾಂ
ಬರಂಗಳಿಂದೆಸೆವುವಲ್ಲಿ ದೂಸಿಗವಸರಂ ೧೧೧

ಹೊಳೆಯುತ್ತಿರುವುವು. ೧೦೮. ಅಲ್ಲಿರುವ ಗಂದಿಗರ ಅಂಗಡಿಯಲ್ಲಿ ಮಹೌಷಧಿಗಳು ಪಟ್ಟಣದ ಜನರಿಗೆ ಮುಪ್ಪು ಮರಣವೂ ಇಲ್ಲದಂತೆ ಮಾಡುವುದರಿಂದ, ವಿಧವಿಧವಾದ ಔಷಧಿಗಳೆಲ್ಲವೂ ಆದಿಯಲ್ಲಿ ಮೇರುವಿನಲ್ಲಿ ಉದಿಸಿದವುಗಳೇ ಎಂಬಂತಿರುವುದು. ೧೦೯. ಅಲ್ಲಿಯ ರತ್ನದ ಅಂಗಡಿಗಳು-ಭಯಂಕರವಾದ ಬಡಬಾಗ್ನಿಯ ತೀವ್ರತೆಗೆ ಹೆದರಿ ರತ್ನಾಕರ (ಸಮುದ್ರ)ಗಳು ಜಲರೂಪವನ್ನು ಬಿಟ್ಟೂ, ರೋಹಣಾದ್ರಿಯು ಪರ್ವತ ಎಂಬ ಹೆಸರನ್ನು ಬಿಟ್ಟೂ ರತ್ನರಾಶಿರೂಪವಾಗಿ, ಇಲ್ಲಿ ಸ್ವಲ್ಪವೂ ವ್ಯಾಕುಲವಿಲ್ಲದೆ ನೆಲೆಸಿವೆಯೆನ್ನುವಂತೆ ಮನಸ್ಸಿಗೆ ಆಶ್ಚರ್ಯವನ್ನು ಹೆಚ್ಚಿಸುವುವು. ೧೧೦. ಆಕಾಶಮಂಡಲದಲ್ಲಿ ದೋಷಾಕರನೂ ಕಳಂಕಯುತನೂ ಆದ ಚಂದ್ರನಿದ್ದಾನೆ. ಈ ನಗರದಲ್ಲಾದರೋ ಆ ದೋಷವಿಲ್ಲದ ವೇಶ್ಯಾಸ್ತ್ರೀ ಮುಖಚಂದ್ರರು ನೆಲೆಸಿದ್ದಾರೆ" ಎಂಬ ಅಭಿಪ್ರಾಯದಿಂದ ನಕ್ಷತ್ರಗಳು ಆಕಾಶವನ್ನು ತೊರೆದು ಇಲ್ಲಿಗೆ ಬಂದು ನೆಲೆಸಿದವೋ ಎಂಬಂತೆ ಹೊಳೆಯುವ ಕಂಚುಗಳ ಅಂಗಡಿ ಬೀದಿಯು ಮನೋರಂಜನೆಯನ್ನುಂಟುಮಾಡುತ್ತದೆ. ೧೧೧. ಅಲ್ಲಿಯ ಜವಳಿಯ ಅಂಗಡಿಗಳು ಕಲ್ಪವೃಕ್ಷವು ಕೊಡುವ ವಸ್ತ್ರಗಳಲ್ಲೂ ಈ ವಸ್ತ್ರಗಳ ಛಾಯೆಯು ನೂಲಿನಿಂದಲೂ ಬಣ್ಣದಿಂದಲೂ ನೆಯ್ಗೆಯಿಂದಲೂ ಬರುವುದಿಲ್ಲ ಎನ್ನಿಸಿಕೊಂಡ ದಿವ್ಯಾಂಬರಗಳಿಂದ ತುಂಬಿ

---

೧. ಸೆಳೆದುವಲ್ಲಿ (ಕಖಗ) ೨. ಮಿರಲ್ಕೆ (ಕಖಗ)

ಒಳ್ನಡು ಬಳ್ಕೆ ಪೆರ್ಮೊಲೆ ವಿಜೃಂಭಿಸೆ ಕಂಕಣಕಿಂಕಿಣೀರವಂ
ಗಳ್ನಸುಪೊಣ್ಮೆ ಹಾರಲತೆ ನರ್ತಿಸೆ ಸುಯ್ ನೆಲೆವೆರ್ಚೆ ಕುಂತಳಂ
ಗಳ್ನಿಮಿರ್ದಾಡೆ ಘರ್ಮಜಲಮುಣ್ಮೆ ವಿರಾಜಿಸುತಿರ್ಪರಲ್ಲಿ ತೋ
ಳ್ಗಳ್ನಲಿದೊಪ್ಪೆ ನೀಳ್ದುಡುಗಿ ಘಟ್ಟಮನುಜ್ಜುವ ಘಟ್ಟವಳ್ತಿಯರ್ ೧೧೨

ಬಗೆಗೊಳ್ವಿಮ್ಮವಲೋಕಮಾತ್ರದೊಳೆ ಪೂಣ್ದೀ ಲೋಕಮಂ ಗೆಲ್ದ ಕಂ
ತುಗೆ ಪೂಜಾರ್ಥಮಿದೆಂದು ಸುಯ್ಯೆಱಗುವುನ್ಮತ್ತಾಳಿಯಿಂ ಬೀರದೇ
ಟ್ಟಿಗಳಂ ಪಾಡಿಸುತುಂ ಜಯಧ್ವಜಮನೆತ್ತಿರ್ಪಂತಿರ್ದ ಮಾ
ಲೆಗಳುಂ ತೋಳ್ಗಳುಮೊಪ್ಪೆ ಕಣ್ಗೊಳಿಸುತಿರ್ಕುಂ ಪುಷ್ಪಲಾವೀಜನಂ ೧೧೩

ಮಸೃಣಮದಾಳಿಸ್ವನಮು
ತ್ಕುಸುಮಿತವನರಾಜಿಯಂತೆ ವಿಪ್ರಜನಾಳೀ
ವಿಸರದ್ವೇದಸ್ವರದಿಂ
ದೆಸೆದಿರ್ಕುಂ ಬ್ರಹ್ಮಪುರಿಯ ಸೌಧಸಮೂಹಂ ೧೧೪

ಅವನೀದೇವಸಮಾಜವೋದುವುದನಾದಂ ಕೇಳ್ದು ಕೇಳ್ದೋದುತಿ
ರ್ಪುವು ವೇದಂಗಳನೋದೆ ತಪ್ಪುವಿಡಿದಂತೇವಾಸಿಗಳ್ಗೋದುವೇ
ಳ್ಪುವು ತಮ್ಮೋದಿನ ಬಲ್ಮೆಯಿಂ ದ್ವಿಜವರರ್ಗಾನಂದಮಂ ಮಾಡುತಿ
ರ್ಪುವು ಕೇಳೀಶುಕಸಾರಿಕಾತತಿಗಳುರ್ವೀದೇವಸದ್ಮಂಗಳೊಳ್ ೧೧೫

ಹೊಳೆಯುವುವು. ೧೧೨. ನೆಟ್ಟಗಾಗಿಯೂ ಬಾಗಿಯೂ ಗಂಧವನ್ನು ತೇಯುವ ಯುವತಿಯರು, ತೇಯುವಾಗ ಅವರ ನಡು ಬಳುಕುವುದು. ದಪ್ಪ ಮೊಲೆ ಉಬ್ಬೇರುವುದು. ಕೈ ಬಳೆಯ ಮತ್ತು ಕಿರುಗೆಜ್ಜೆಯ ಶಬ್ದವು ಸ್ವಲ್ಪವಾಗಿ ಕೇಳಿಸುವುದು. ಬಳ್ಳಿಯಂತಿರುವ ಹಾರವು ಕುಣಿಯುವುದು. ನಿಟ್ಟುಸಿರು ಬರುವುದು. ತಲೆಗೂದಲು ಅಲುಗಾಡುವುದು. ಬೆವರುನೀರು ಹೊರಡುವುದು. ತೋಳುಗಳು ನಲಿದು ನರ್ತಿಸುವಂತೆ ಕಾಣುವುವು. ಹೀಗೆ ಅವರು ವಿರಾಜಿಸುತ್ತಿರುವರು ೧೧೩. ಮನೋಹರರಾಗಿರುವ ನಮ್ಮನ್ನು ನೋಡಿದ ಮಾತ್ರದಲ್ಲೇ ಪ್ರತಿಜ್ಞೆ ಮಾಡಿ ಈ ಲೋಕವನ್ನು ಗೆದ್ದ ಮನ್ಮಥನಿಗೆ ಇದು ಪೂಜಾರ್ಥವಾದುದು ಎಂದು ತಮ್ಮ ಉಸಿರಿನ ಸುವಾಸನೆಗೆ ಎರಗುವ ಕೊಬ್ಬಿದ ತುಂಬಿಗಳ ಗುಂಪಿನಿಂದ ತಮ್ಮ ಪರಾಕ್ರಮಾತಿಶಯವನ್ನು ಹಾಡಿಸುತ್ತ ೧೧೪. ಇಂಪಾದ, ಮದಿಸಿದ ತುಂಬಿಯ ಧ್ವನಿಯಿಂದ ಒಪ್ಪುವ ಪುಷ್ಪಭರಿತವಾದ ವನಪಜ್ಕ್ತಿಯಂತೆ ಬ್ರಾಹ್ಮಣಸಮೂಹದಿಂದ ಪ್ರಸರಿಸುವ ವೇದಸ್ವರದಿಂದ ಆ ಬ್ರಹ್ಮಪುರಿಯ ಸೌಧಗಳ ಸಮೂಹವು ಪ್ರಕಾಶಿಸುವುದು. ೧೧೫. ಭೂದೇವ (ಬ್ರಾಹ್ಮಣ)ರ ಮನೆಗಳಲ್ಲಿ ವಿನೋದಾರ್ಥವಾಗಿ ಸಾಕಿದ ಗಂಡು ಹೆಣ್ಣು ಅರಗಿಳಿಗಳು ಬ್ರಾಹ್ಮಣ ಸಮೂಹವು ಹೇಳುವ ವೇದವೇ ಮೊದಲಾದ ಓದನ್ನು ಚೆನ್ನಾಗಿ ಕೇಳಿ ಕೇಳಿ, ತಾವೂ ಹಾಗೆಯೇ ಓದುವುವು. ಶಿಷ್ಯರು ವೇದವನ್ನು ಹೇಳುತ್ತಿರುವಾಗ ತಪ್ಪಿದರೆ, ತಮ್ಮ ಅಭ್ಯಾಸಬಲದಿಂದ ಅದನ್ನು ತಿದ್ದಿ ಹೇಳಿಕೊಡುವುವು. ಆ ದ್ವಿಜೋತ್ತಮರಿಗೆ ಆನಂದವನ್ನುಂಟು ಮಾಡುವುವು.

ಚದುರ ಪೊದಟ್ಕೆ ಸಂಪದದ ಬೊಂಬುಳಿ ಸತ್ಯದ ಬಿತ್ತರಂ ವಿವೇ
ಕದ ನೆರವೀವ ಮೈಮೆ ದಯೆಯುನ್ನತಿ ಧರ್ಮದ ಪೆರ್ಮೆ ಸಜ್ಜನ
ತ್ವದ ವಿಮಲತ್ವಮಾರ್ಪಿನ ಪೊಡರ್ಪು ವಿಳಾಸದ ದೇಸೆ ಕೂಡೆ ಭೋ
ಗದ ಕಣಿಯಾಯ್ತು [1]ತಾಂ ತನಗೆ ಪೌರಜನಂ ಸ್ಥಿರಸೌಖ್ಯಭಾಜನಂ ೧೧೬

ವ॥ ಆ ಪುರದ ರಮ್ಯಪ್ರದೇಶದೊಳ್

ಜಲಧರತತಿಯಂ ನಿಜಮೇ
ಖಲೆಯೊಳ್ ತಳೆದಿರ್ದ ಮೇರುವೆನೆ ಕನಕಮಯಂ
ವಿಲುಳಿತ ಪರಿಖಾಲಹರೀ
ವಲಯಿತಮರಮನೆಯ ಕೋಂಟೆ ಸೊಗಯಿಸುತಿರ್ಕುಂ ೧೧೭

ಸತತಂ ಪೊಂಗಳಸದ ದೀ
ಧಿತಿಯುನ್ನತಿಗಳ್ಕಿ ಬಳ್ಕಿ ಕೆಲಸಾರ್ದು ದಿವಾ
ಪತಿ ದಕ್ಷಿಣಗತ್ಯುತ್ತರ
ಗತಿಯಾದಂ ಪೊಗಟ್ಬರಳವೆ ಬಾಗಿಲ್ವಾಡಂ ೧೧೮

ವ॥ ಅಲ್ಲಿಂದೊಳಗೆ

ಮಂದರದಳನತ್ರಾಸದೆ
ಬಂದಿರ್ದುವು ಧವಳಮೇಘವೃತಕುಲಗಿರಿಗಳ್
ಮಂದರಧರನಿರ್ಪೆಡೆಗೆಂ
ಬಂದದೆ ಸೊಗಯಿಪುವು ಸೌಧಶಾಲೆಯ ಕರಿಗಳ್ ೧೧೯

೧೧೬. ಚಾತುರ್ಯದ ಖ್ಯಾತಿಯೂ, ಸಂಪತ್ತಿನ ಡೋಲೂ ಸತ್ಯದ ವಿಸ್ತಾರವೂ ತಮ್ಮ ವಿವೇಕದ ಸಹಾಯವನ್ನು ಇತರರಿಗೆ ಮಾಡುವ ಮಹಿಮೆಯೂ ದಯಾಧಿಕ್ಯವೂ ಧರ್ಮದ ಹಿರಿಮೆಯೂ ಸಜ್ಜನತ್ತ್ವದ ಪರಿಶುದ್ಧತೆಯೂ ಸಾಮರ್ಥ್ಯಾತಿಶಯವೂ ಸೊಬಗಿನ ಅಂದವೂ ತನ್ನಲ್ಲಿ ನೆಲೆಸಿದ್ದುದರಿಂದ ಸ್ಥಿರ ಸೌಖ್ಯಕ್ಕೆ ಪಾತ್ರವಾದ ಅಲ್ಲಿನ ಜನವು ತನ್ನ ತನ್ನಷ್ಟಕ್ಕೆ ಭೋಗದ ಗಣಿಯಾಯಿತು. ವ॥ ಆ ಪುರದ ಮನೋಹರವಾದ ಪ್ರದೇಶದಲ್ಲಿ ೧೧೭. ಮೇಘಸಮೂಹವನ್ನು ತನ್ನ ನಡುವಿನಲ್ಲಿ ಧರಿಸಿದ ಮೇರುವೆಂಬಂತೆ ಸ್ವರ್ಣಮಯವೂ, ಥಳಥಳಿಸುವ ಕಂದಕ ಪ್ರವಾಹದಿಂದ ಸುತ್ತುವರಿದಿರುವುದೂ ಆದ ಅರಮನೆಯ ಕೋಟೆಯು ಸೊಗಸಾಗಿರುವುದು. ೧೧೮. ಆ ಕೋಟೆಯ ಬಾಗಿಲು ವಾಡವನ್ನು ಹೊಗಳುವುದು ಸಾಧ್ಯವೆ?! ಅದರ ಸುವರ್ಣ ಕಲಶದ ಔನ್ನತ್ಯ ಮತ್ತು ಕಾಂತಿಗಳಿಗೆ ಹೆದರಿ ಸೂರ್ಯನು ಬಳುಕಿ ಪಕ್ಕಕ್ಕೆ ಸರಿದು (ದಕ್ಷಿಣಗಮನ ಉತ್ತರ ಗಮನ ವುಳ್ಳವನಾದನು =) ದಕ್ಷಿಣಾಯನ ಉತ್ತರಾಯಣಗಳುಳ್ಳವನಾದನು ವ॥ ಅಲ್ಲಿಂದೊಳಗೆ ೧೧೯. ಮಂದರ ದಳನ (ಇಂದ್ರ)ನ ಭೀತಿಯಿಂದ, ಬಿಳಿಯ ಮೋಡಗಳಿಂದ ಮುಚ್ಚಲ್ಪಟ್ಟ ಕುಲಗಿರಿಗಳು ಮಂದರಧರ (ಕೃಷ್ಣ) ನಿರುವ ಎಡೆಗೆ ಬಂದಿವೆಯೆನ್ನುವಂತೆ ಅಲ್ಲಿನ ಸುಣ್ಣವನ್ನು

೧. ತಂ (ಕಖಗ)

ರವಿರಥತುರಗಮುಮುಚ್ಚೈ
ಶ್ರವಮುಂ ಪರಿಪಾಟಿಯಲ್ಲಮಿವಱೊಳ್ ರೋಮ
ಚ್ಛವಿಗಮೆನಲ್ ಕಣ್ಗೆಸೆದಿ
ರ್ಪುವು ಪಳುಕಿನ [1]ಮಂದರಂಗಳೊಳ್ ತುರಗಂಗಳ್ ೧೨೦

ಸೊದೆವೆಳಗಿನ ಬೆಳ್ದಿಂಗಳ
[2]ನೊದವಿಸುಗುಂ ಸೆಜ್ಜೆಯೋಲಗದ ಶಸ್ತ್ರಾಗಾ
ರದ ಕೊಟ್ಟಾರದ ಭಂಡಾ
ರದ [3]ಬಾಸಣದನ್ನವಾಸದುಪ್ಪರಿಗೆಗಳುಂ ೧೨೧

ಸ್ಮರರಾಜಂ ವನಪಾಲನಾಗೆ ರತಿಲಾವಣ್ಯಪ್ರವಾಹೋತ್ಕರಂ
ಪರಿನೀರಾಗೆ ನಿರಂತರಂ ಋತುಗಳಾಱುಂ ಕಾಪಿನಾಳಾಗೆ ಚೈ
ತ್ರರಥೋದ್ಯಾನದ ಚೆಲ್ವನೊತ್ತರಿಸಿ ಕೇಳೀಶೈಲ ಕೇಳೀಸರೋ
ವರ ಕೇಳೀಗೃಹಮೆಂಬಿವಂ ತಳೆದು ಕೇಳೀನಂದನಂ ರಂಜಿಕುಂ ೧೨೨

ಪುದಿದುದ್ಯಾನದೊಳಂತವು
ರದ ಬೆಳ್ಳಿಯ ಬಳ್ಳಿಮಾಡಮೆಸೆದುವು ಪಲವೊ
ರ್ಮೊದಲಲೆವ ಪವನನಿಂದು
ಬ್ಬಿದ ವಾರ್ಧಿಯೊಳೊಗೆದ ಫೇನಪಿಂಡಂಗಳವೋಲ್ ೧೨೩

ಬಳಿದು ಬೆಳ್ಳಗಾಗಿರುವ ಗಜಶಾಲೆಗಳಲ್ಲಿರುವ ಆನೆಗಳು ಸೊಗಸಾಗಿದ್ದವು. ೧೨೦. ಸ್ಫಟಿಕದ ಅಶ್ವಶಾಲೆಗಳಲ್ಲಿರುವ ಕುದುರೆಗಳು ಸೂರ್ಯನ ರಥದ ಕುದುರೆಯಾಗಲಿ ಉಚ್ಚೈಶ್ರವವಾಗಲಿ ರೋಮದ ಕಾಂತಿಯ ವಿಷಯದಲ್ಲಿ ಕೂಡ ಇವುಗಳ ಸಮಾನತೆಯನ್ನು ಪಡೆಯಲಾರದು ಎನ್ನುವಷ್ಟು ಚೆನ್ನಾಗಿ ಹೊಳೆಯುತ್ತಿದ್ದವು. ೧೨೧. ಅರಮನೆಗೆ ಸೇರಿದ ಮಲಗುವ ಮನೆ, ಸಭಾಗೃಹ, ಶಸ್ತ್ರಶಾಲೆ, ಉಗ್ರಾಣ, ಭಂಡಾರ, ಮಂತ್ರಾಲೋಚನೆಯ ಗೃಹ, ಅಡುಗೆಯ ಮನೆ ಇವುಗಳ ಉಪ್ಪರಿಗೆಗಳೂ ಸುಣ್ಣದ ಹೊಳಪಿನ ಬೆಳುದಿಂಗಳನ್ನು ಒದಗಿಸುವುವು. ೧೨೨. ಮನ್ಮಥನು ವನಪಾಲಕನಾಗಿ ರತಿಯ ಲಾವಣ್ಯಪ್ರವಾಹಸಮೂಹವು ಹರಿಯುವ ನೀರಾಗಿ ಆರು ಋತುಗಳೂ ನಿರಂತರವೂ ಕಾವಲಾಳಾಗಿ ಇರುತ್ತಿದ್ದುದರಿಂದ ಅಲ್ಲಿಯ ಆಟದ ನಂದನವನವು, ಕ್ರೀಡಾಶೈಲ, ಕ್ರೀಡಾಸರೋವರ, ಕ್ರೀಡಾಗೃಹ ಎಂಬಿವುಗಳನ್ನು ಪಡೆದು ಕುಬೇರನ ಚೈತ್ರರಥೋದ್ಯಾನದ ಚೆಲುವನ್ನೂ ಮೀರಿಸಿ ರಂಜಿಸುವುದು. ೧೨೩. ವಿಸ್ತಾರವಾದ ಉದ್ಯಾನವನದಲ್ಲಿರುವ ಅಂತಃಪುರದ ಬೆಳ್ಳಿಯ ಬಳ್ಳಿಯ ಮನೆಗಳು ಆದಿಯಲ್ಲಿ ಬೀಸಿದ ಗಾಳಿಯಿಂದ ಉಬ್ಬಿದ ಸಮುದ್ರದಲ್ಲುದಿಸಿದ ನೊರೆಯ ಉಂಡೆಗಳಂತೆ ಹೊಳೆಯುವುವು.

---

೧. ಮಂಡಪಂಗಳೊಳ್ (ಕಗ) ೨. ಒದವಿಸುತಿರೆ (ಕಖಗ) ೩. ಬಾಣಸ (ಖಗ)

ಆ ಮಾಡಂಗಳ ನಡುವು
ದ್ದಾಮಂ ಕರುಮಾಡಮೊಪ್ಪುಗುಂ ಧವಳಾಭ್ರ
ಸ್ತೋಮಂ ಬಳಸಿರೆ ನಡುವಭಿ
ರಾಮತೆಯಿಂ ಹೇಮದಚಳಮೊಪ್ಪುವ ತೆಱದಿಂ ೧೨೪

ನೀಲದ ಕೇರ್ಗಳ್ ನವಮು
ಕ್ತಾಲಂಬೂಷದ ನೆೞಲ್ಗಳಂ ತಳೆದಿರ್ದೇಂ
ಲೀಲೆಯನಾಂತುವೊ ಪೂತ ತ
ಮಾಲಲತಾಜಾಲದಂತೆ ಹರ್ಮ್ಯಾಂತರದೊಳ್ ೧೨೫

*ಪಿಂಗಳ ಸುವರ್ಣಲಂಬೂ
ಷಂಗಳ ಮಾರ್ಪೊಳೆಪು ತಳ್ತ ಪಚ್ಚೆಯ ಕಂಭಂ
ಭಂಗಿವಡೆದಿರ್ದುವಲ್ಲಿ ಬೆ
ಡಂಗಿಂ ಕುಟ್ಮಳಿತಮಾದ ಚಂಪಕಲತೆವೋಲ್ ೧೨೬

*ಅದಱ ವಿಚಿತ್ರಮಣಿಸ್ತಂ
ಭದ ಹಿಮಕರಕಾಂತಪುತ್ರಿಕಾತತಿ ನಿಜಕಾಂ
ತಿದುಕೂಲದಿಂದಲಂಕರಿ
ಪುದುಪಾಂತದ ನೀಲಪುತ್ರಿಕಾಸಮುದಯಮಂ ೧೨೭

*ಪಳುಕಿನ ಕುಟ್ಟಿಮದೊಳ್ ಮಾ
ರ್ತೊಳಗುವ ಹರಿನೀಲಮಣಿಯ ಸೂಸಕದ ನೆೞ
ಲ್ಗಳನಸಿತಾಹಿಗಳೆಂದೊಸೆ
ದೆಳಸುವ ದೀಹದ ನವಿಲ್ಗಳೊಪ್ಪುಗುಮವಱೊಳ್ ೧೨೮

೧೨೪. ಆ ಬಳ್ಳಿಯ ಮನೆಗಳ ನಡುವೆ ಉನ್ನತವೂ ಉತ್ತಮವೂ ಆದ ಉಪ್ಪರಿಗೆಯ ಮನೆಯು ಬಿಳಿಯ ಮೋಡಗಳ ಸುತ್ತಿನ ನಡುವೆ ಮನೋಹರವಾಗಿರುವ ಮೇರುಗಿರಿಯಂತೆ ಒಪ್ಪುತ್ತಿರುವುದು. ೧೨೫. ಆ ಉಪ್ಪರಿಗೆಯ ಮನೆಗಳೊಳಗೆ ಇರುವ ನೀಲರತ್ನದ ಗೋಡೆಗಳು, ಹೊಸ ಮುತ್ತಿನ ಹಾರ ಕುಚ್ಚುಗಳ ಪ್ರತಿಬಿಂಬವನ್ನೊಳಗೊಂಡು, ಹೂವಿಂದ ತುಂಬಿದ ಹೊಂಗೆಯ ಬಳ್ಳಿಯ ಗುಂಪಿನಂತೆ ಅದೆಷ್ಟು ಚೆನ್ನಾಗಿದ್ದುವೊ! ೧೨೬. ನಸು ಕೆಂಪಿನ ಚಿನ್ನದ ಕುಚ್ಚುಗಳ ಪ್ರತಿಬಿಂಬವನ್ನು ಪಡೆದಿರುವ ಪಚ್ಚೆಯ ಮಣಿಕಂಭಗಳು ಮೊಗ್ಗುಗಳಿಂದ ತುಂಬಿದ ಸಂಪಗೆಯ ಬಳ್ಳಿಯಂತೆ ಬೆಡಗನ್ನೂ ವಿಲಾಸವನ್ನೂ ಪಡೆದಿದ್ದವು. ೧೨೭. ಅದರ ವಿಚಿತ್ರವಾದ ರತ್ನದ ಕಂಭಗಳ ಚಂದ್ರಕಾಂತಮಣಿಯ ಬೊಂಬೆಗಳು ತಮ್ಮ ಕಾಂತಿದುಕೂಲದಿಂದ ಸಮೀಪದಲ್ಲಿರುವ ನೀಲರತ್ನದ ಬೊಂಬೆಗಳನ್ನೂ ಸಿಂಗರಿಸುವುವು. ೧೨೮. ಸ್ಫಟಿಕದ ನೆಲೆಗಟ್ಟಿನಲ್ಲಿ ಪ್ರತಿಬಿಂಬಿಸುವ ಇಂದ್ರನೀಲಮಣಿಯ ಕುಚ್ಚುಗಳ ನೆಳಲುಗಳನ್ನು ಕರಿಯ ನಾಗರಹಾವುಗಳೆಂದು ಭಾವಿಸಿ, ಸಾಕಿದ ನವಿಲುಗಳು

* ಈ ಪದ್ಯಗಳು (ಖ) ಪುಸ್ತಕದಲ್ಲಿಲ್ಲ.

ವರವನಿತಾಜನದಲತೆಗೆ
ವೊರೆದಡಿವಜ್ಜೆಗಳನಾಂತು ಪಜ್ಜಳಿಸುವುದುಂ
ಮರಕತರಂಗಮುಮಂ ತಾ
ವರೆಗೊಳನೆಂದಲ್ಲಿ ಸುಟಿವ ಹಂಸೆಗಳೆಸೆಗುಂ ೧೨೯

ಸೊಗಯಿಪ ಚೌಕದ ಬಿಡುಮು
ತ್ತುಗಳೊಳ್ ಪೂವಲಿಯ ಮಲ್ಲಿಕಾಮುಕುಳಶ್ರೇ
ಣಿಗಳಂ ಭಾವಿಸಲಱಿಯದೆ
ಮೊಗಸುತ್ತಿಹುವಗರುಧೂಪಧೂಮಕ್ಕಳಿಗಳ್ ೧೩೦

ಶರ್ವಾಣೀಶಗೃಹಕ್ಕೆ ಸು
ಪರ್ವೇಂದ್ರಗೃಹಕ್ಕೆ ಮೆಱೆಯದಾತ್ಮೀಯಕಳಾ
ಸರ್ವಜ್ಞತೆಯಂ ಮೆಱೆದಂ
ಗೀರ್ವಾಣಸ್ಥಪತಿ ನಿಮ್ಮ ಗೃಹವಿರಚನೆಯಿಂ ೧೩೧

*ಅಹಿರಾಜಂ ದ್ವಿಸಹಸ್ರಜಿಹ್ವನಱಿಯಂ ವ್ಯಾವರ್ಣಿಸಲ್ ಬಲ್ಲನೇ
ಮಹಿಯೊಳ್ ಮಾನವನೊಂದೆ ನಾಲಗೆಯೊಳಂ ತದ್ಭೂಭುಜಾಗಾರಮಂ
ಬಹುವಿಸ್ತಾರಮನಿಂದ್ರಪುಷ್ಪಕವಿಮಾನಾಕಾರಮಂ ತನ್ಮಹಾ
ಮಹಿಮಾಧಾರಮನತ್ಯುದಾರಮನಿಳಾಚೇತಶ್ಚಮತ್ಕಾರಮಂ ೧೩೨

ವ|| ಎಂದು ಪುರಮನಭಿವರ್ಣಿಸಿ ಸುಪರ್ಣಂ ಬೀೞ್ಕೊಂಡು ಪೋಪುದುಂ

ತಿನ್ನಲು ಉತ್ಸಾಹಗೊಳ್ಳುತ್ತವೆ! ಅದು ನೋಡಲು ಚೆನ್ನಾಗಿರುತ್ತದೆ! ೧೨೯. ಪಚ್ಚೆಯ ರಂಗದಲ್ಲಿ ಉತ್ತಮವನಿತೆಯರು ಸಂಚರಿಸುವಾಗ ಅವರ ಕಾಲಿನ ಅರಗಿನ ರಸವು ಹತ್ತಿಕೊಂಡು ತಾವರೆಯ ಹೂಗಳಂತೆ ಕಾಣಿಸುತ್ತಿದ್ದುದರಿಂದ ಆ ಪಚ್ಚೆಯ ರಂಗವನ್ನು ತಾವರೆಯ ಕೊಳವೆಂದು ತಿಳಿದು, ಹಂಸೆಗಳು ಅಲ್ಲಿ ಸಂಚರಿಸುವುದು ಚೆನ್ನಾಗಿರುತ್ತದೆ. ೧೩೦. ಚೆನ್ನಾಗಿರುವ ಚೌಕ (ಹಜಾರ)ದ ಬಿಡಿಮುತ್ತುಗಳ ನಡುವೆ ಸೇರಿರುವ ಹೂಬಲಿಯ ಮಲ್ಲಿಗೆಯ ಅರಳು ಮೊಗ್ಗುಗಳ ಸಾಲುಗಳನ್ನು ತಿಳಿಯಲಾರದ ತುಂಬಿಗಳು ಅಗರು ಧೂಪದ ಹೊಗೆಗೆ ಮುತ್ತಲು ಆರಂಭಿಸುವುವು. ೧೩೧. ದೇವಶಿಲ್ಪಿಯು ಪಾರ್ವತೀಶನ ಗೃಹಕ್ಕಾಗಲಿ, ಇಂದ್ರನ ಗೃಹಕ್ಕಾಗಲಿ ಪ್ರಕಟವಾಗಿ ಉಪಯೋಗಿಸಿದ ತನ್ನ ಕಲಾ ಸರ್ವಜ್ಞತೆಯನ್ನು ನಿಮ್ಮ ಗೃಹರಚನೆಯಲ್ಲಿ ಉಪಯೋಗಿಸಿ, ಪ್ರಕಾಶಪಡಿಸಿರುವನು. ೧೩೨. ಬಹು ವಿಸ್ತಾರವೂ ಇಂದ್ರನ ಪುಷ್ಪಕ ವಿಮಾನಾಕಾರವೂ ಮಹಾಮಹಿಮೆಗೆ ಆಧಾರವೂ ಅತ್ಯುತ್ತಮವೂ ಭೂಜನರ ಚೇತನಕ್ಕೆ ಚಮತ್ಕಾರಕವೂ ಆದ ಆ ಅರಮನೆಯನ್ನು ಎರಡುಸಾವಿರ ನಾಲಗೆಯುಳ್ಳ ಆದಿಶೇಷನೂ ವರ್ಣಿಸಲಾರನು. ಇನ್ನು ಭೂಮಿಯ ಮೇಲಿರುವ ಮನುಷ್ಯನು ಒಂದೇ ನಾಲಗೆಯಿಂದ ಸರಿಯಾಗಿ ವರ್ಣಿಸಬಲ್ಲನೇ?!"
ವ|| ಎಂದು ದ್ವಾರಕಾಪುರವನ್ನು ಅಭಿವರ್ಣಿಸಿ, ಗರುಡನು ಬಿಡುವನ್ನು ಪಡೆದು ನಡೆದನು

* ಈ ಪದ್ಯವು (ಖ,ಗ) ಪುಸ್ತಕಗಳಲ್ಲಿಲ್ಲ

ಉರುಚಾತುರ್ವಲಚಕ್ರದಿಂ ವಿವಿಧಶಸ್ತ್ರಾಸ್ತ್ರಪ್ರಭಾಚಕ್ರದಿಂ
ದ್ವಿರದಸ್ಯಂದನಕೇತುಚಕ್ರದಿನಿಳಾಚಕ್ರಂ ದಿಶಾಸಚಕ್ರಮಂ
ಬರಚಕ್ರಂ ನೆಱೆ ತೀವೆ ಮೇರುವ ಗುಹಾಚಕ್ರಕ್ಕೆ ವಾದಿತ್ರಚ
ಕ್ರರವಂ ಮಾರ್ದನಿವೀಱೆ ಚಕ್ರಧರನೆಟ್ಟಿಂದಂ ಮಹೋತ್ಸಾಹದಿಂ ೧೩೩

ವ॥ ಅಂತು ಬಂದು ಸಕಲಶುಭಮುಹೂರ್ತದೊಳ್ ಪುರಪ್ರವೇಶಮಂ ಮಾಡಿ

ಗರುಡಂ ಪೇೞ್ದಂದದಿಂದೊಪ್ಪುವ ನಿಜಪುರಮಂ ಕೂಡೆ ನೋಡುತ್ತುಮೆತ್ತಂ
ತರಳಾಪಾಂಗಾಂಶುಜಾಳಂ ದ್ವಿಗುಣಿಸೆ ನಗರಸ್ತ್ರೀಜನಂ ಸೂಸುವಾಪಾಂ
ಡುರಶೇಷಾನೀಕಮಂ ಕೈಕೊಳುತುಮತುಳಗೀತಾನಕಧ್ವಾನಮುಣ್ಮು
ತ್ತಿರೆ ಪೊಕ್ಕಂ ವಾಸವಾವಾಸವನಿಱಿಪ ನಿಜಾವಾಸವಂ ವಾಸುದೇವಂ ೧೩೪

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥ ವಿಜಯ ಮಹಾಪ್ರಬಂಧದೊಳ್ ಕಾಲಯವನ ದಹನ
ದಂತವಕ್ರವಿಕ್ರಮಾಡಂಬರ ತತ್ಸಂಹರಣ ದ್ವಾರಕಾನಗರ
ನಿರ್ಮಾಪಣ ತತ್ಪುರಪ್ರವೇಶವರ್ಣನಂ
ನವಮಾಶ್ವಾಸಂ ಸಂಪೂರ್ಣಂ

೧೩೩. ಹೆಚ್ಚಾದ ನಾಲ್ಕು ಬಗೆಯ ಸೇನೆಯ ಗುಂಪಿನಿಂದ ಭೂಮಂಡಲವೂ ವಿಧ ವಿಧವಾದ ಶಸ್ತ್ರಾಸ್ತ್ರ ಸಮೂಹದ ಕಾಂತಿಮಂಡಲದಿಂದ ದಿಙ್ಮಂಡಲವೂ ಆನೆ ತೇರು ಬಾವುಟಗಳ ಸಮೂಹದಿಂದ ಆಕಾಶಮಂಡಲವೂ ಪೂರ್ಣವಾಗಿ ತುಂಬಿ, (ತತ, ಮುರಜ, ಸುಷಿರ, ಘನಗಳೆಂಬ) ನಾಲ್ಕು ಬಗೆಯ ವಾದ್ಯ ಧ್ವನಿ ಸಮೂಹವು ಮೇರುಗಿರಿಯ ಗುಹೆಗಳೊಳಗೆ ಪ್ರತಿಧ್ವನಿಯನ್ನುಂಟುಮಾಡುತ್ತಿರುವಲ್ಲಿ ಚಕ್ರಧರ ಕೃಷ್ಣನು ಮಹೋತ್ಸಾಹದಿಂದ ಬಂದನು. ವ॥ ಹಾಗೆ ಬಂದು ಸರ್ವ ಶುಭಮುಹೂರ್ತದಲ್ಲಿ ಪುರವನ್ನು ಪ್ರವೇಶಿಸಿದನು. ೧೩೪. ವಾಸುದೇವನು ಗರುಡನು ಹೇಳಿದಂತೆ ಒಪ್ಪುವ ತನ್ನ ಪಟ್ಟಣವನ್ನು ಒಡನೆ ನೋಡುತ್ತ ನಗರಸ್ತ್ರೀಯರು ಎಲ್ಲ ಕಡೆಯಿಂದಲೂ ತಮ್ಮ ಕಡೆಗಣ್ಣಿನ ಚಂಚಲವಾದ ಕಾಂತಿಸಮೂಹವು ಎರಡರಷ್ಟಾಗುತ್ತಿರಲು ತನ್ನ ಮೇಲೆರಚುವ ಬಹಳ ಬೆಳ್ಳಗಿರುವ ಅಕ್ಷತೆಗಳ ಸಮೂಹವನ್ನು ಸ್ವೀಕರಿಸುತ್ತ ಅನುಪಮವಾದ ಶುಭಗೀತವಾದ್ಯಧ್ವನಿಗಳು ಉಕ್ಕುತ್ತಿರುವಲ್ಲಿ ಇಂದ್ರನ ಅರಮನೆಯನ್ನೂ ಮೀರಿಸಿರುವ ತನ್ನ ಅರಮನೆಯನ್ನು ಪ್ರವೇಶಿಸಿದನು. ಇದು ಸಮಸ್ತಕಮಲ ಭವಾಂಡಮಾಲಾ.... ಲಕ್ಷ್ಮೀಕಾಂತ ಶ್ರೀಪಾದಭಕ್ತಿಯುಕ್ತನಾದ ಸುಕವೀಂದ್ರರುದ್ರನಿಂದ ಪ್ರಣೀತವಾದ ಶ್ರೀಜಗನ್ನಾಥವಿಜಯ ಮಹಾಪ್ರಬಂಧದಲ್ಲಿ ಕಾಲಯವನದಹನ, ದಂತವಕ್ರ ವಿಕ್ರಮಾಡಂಬರ, ಅವನ ಸಂಹಾರ, ದ್ವಾರಕಾನಗರ ನಿರ್ಮಾಣ, ನಗರ ಪ್ರವೇಶ ಇವುಗಳ ವರ್ಣನೆಯ ಒಂಭತ್ತನೆಯ ಆಶ್ವಾಸವು ಪೂರ್ಣವಾಯಿತು.

# ದಶಮಾಶ್ವಾಸಂ

ಶ್ರೀಪಾದಕಲ್ಪಪಾದಪ
ಮಾಪನ್ನಾಶ್ರಿತಸುಖಪ್ರದಂ ಭುಜಭುಜಗಂ
ವೈಪಕ್ಷಜೀವಪವಮಾ
ನಾಪಹಮೆನೆ ಕೃಷ್ಣನಿರ್ದನಾ ದ್ವಾರಕೆಯೊಳ್ ೧

ವ|| ತದನಂತರಂ

ದೇವಜ್ಯೇಷ್ಠನ ಬೆಸದಿಂ
ರೈವತಕಂ ತಂದು ತನ್ನ ಮಗಳಂ ಕುಡಲಾ
ರೇವತಿಯೊಳ್ ಬಲರಾಮಂ
ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ ೨

ವ|| ಅನಂತರಮೊಂದುಸಮಯದೊಳ್

ಮದಿರಾಪಾಂಗವಧೂವಿಳಾಸರಸತೋಯಂ ಸಂಚಲಚ್ಚಾಮರೋ
ನ್ಮದಹಂಸಂ ಪ್ರತಿಹಾರಸಾರಸರವಂ ನಾನಾಮಹೀಪಾಲಮೌ
ಳಿದಳತ್ಕೋಕನದಂ ಸಭಾಂಬುರುಹಷಂಡಂ ರುಕ್ಮಿಣೀಲಕ್ಷ್ಮಿಗಾ
ಸ್ಪದಮಪ್ಪಂತೆವೊಲೊಪ್ಪುವೋಲಗದೊಳಿರ್ದಂ ಯಾದವಾಧೀಶ್ವರಂ ೩

ವ|| ಆಗಳ್

೧. ಶ್ರೀಕೃಷ್ಣನು, ತನ್ನ ಪಾದವೆಂಬ ಕಲ್ಪವೃಕ್ಷವು ಆಪತ್ತಿಗೊಳಗಾದವರಿಗೂ ಆಶ್ರಿತರಿಗೂ ಸುಖವನ್ನುಂಟುಮಾಡುವುದು, ತೋಳೆಂಬ ಸರ್ಪವು ವೈರಿಗಳ ಪ್ರಾಣವಾಯುವನ್ನು ಹೀರುವುದು ಎನ್ನುವಂತೆ ದ್ವಾರಕೆಯಲ್ಲಿ ವಾಸಮಾಡುತ್ತಿದ್ದನು. ವ|| ಆಮೇಲೆ ೨. ಇಂದ್ರನ ಆಜ್ಞೆಯಿಂದ ರೈವತಕನೆಂಬ ರಾಜನು, ತನ್ನ ಮಗಳಾದ ರೇವತಿಯನ್ನು ಬಲರಾಮನಿಗೆ ಕೊಟ್ಟು, ವಿವಾಹಮಹೋತ್ಸವನ್ನು ನೆರವೇರಿಸಿದನು. ಬಲರಾಮನು ಆಕೆಯೊಡಗೂಡಿ ಸುಖದಿಂದ ಇದ್ದನು. ವ|| ಅನಂತರ ಒಂದು ಸಮಯದಲ್ಲಿ ೩. ನೋಡುವವರಿಗೆ ಮದ್ಯದಂತೆ ಮತ್ತನ್ನುಂಟುಮಾಡುವ ಯುವತಿಯರ ಕಡೆಗಣ್ಣಿನ ಬೆಡಗೆಂಬ ನೀರೂ, ಬೀಸುವ ಚಾಮರಗಳೆಂಬ ಕೊಬ್ಬಿದ ಹಂಸಗಳೂ, ದ್ವಾರಪಾಲಕ ಸ್ತುತಿಪಾಠಕರ ಧ್ವನಿಯೆಂಬ ಸಾರಸಪಕ್ಷಿಗಳ ಧ್ವನಿಯೂ, ನಾನಾ ದೇಶದ ರಾಜರ ಕಿರೀಟಗಳೆಂಬ ಅರಳಿದ ಕನ್ನೈದಿಲೆಯೂ, ಇರುವ ಸಭೆಯೆಂಬ ಕಮಲ ಸರೋವರವು ರುಕ್ಮಿಣೀರೂಪಳಾದ ಲಕ್ಷ್ಮಿಗೆ ನೆಲೆಯಾಗಲು ತಕ್ಕುದಾಗಿ ಒಪ್ಪುತ್ತಿರುವಲ್ಲಿ ಆ ಸಭೆಯನ್ನು ಕೃಷ್ಣನು

ಬಿಸಿಲಂ ಬೆಳ್ದಿಂಗಳೊಟ್ಟೈಸಿದುದೊ ಪಗಲೊಳಂ ಚೋದ್ಯಮೆಂಬಂತು ಚೆಲ್ವಾ
ಗಸದಿಂ ತಳ್ಪೊಯ್ವುದುಂ ಕಂಡಿದು ಖಚರದುಕೂಲಾಂಬರದ್ಯೋತಮೋ ವ್ಯೋ
ಮಸರಿಡ್ಡಿಂಡೀರಪಿಂಡಪ್ರಭೆಯೊ ದಿಗಿಭದಂತಾವಳೀಚ್ಛಾಯೆಯೋ ಭಾ
ವಿಸಲೆಂದಾವೇಗದೊಳ್ ವಿಸ್ಮಯರಸವಿಸರಸ್ಯಂದಿಯಾದಂ ಮುಕುಂದಂ ೪

ಕಣ್ಣುಳ್ಳೆಯುಮಾಶ್ಚರ್ಯವಿ
ಷಣ್ಣರದೆಂತಾನುಮರೆಬರೀಕ್ಷಿಸೆ ನಭದೊಳ್
ತಿಣ್ಣಮೆನಲ್ ಪಸರಿಸಿದ
ಕ್ಷ್ಣಣ್ಣ ಪ್ರಭೆಯೊಳಗೆ ಪೊಳೆದುದೊಂದಾಕಾರಂ ೫

ವ|| ಅನ್ನೆಗಂ

ಶಾರದಪಾಂಡುಮೇಘಮೆ ತಟಲ್ಲತೆಯಂ ಭಗಣಂಗಳಂ ಸ್ಫುರ
ತ್ತಾರಕರಾಜಮಂಡಲಮನಾಂತಿಟೆವಂತಿರೆ ಪೊನ್ನ ಮುಂಜಿ ಮು
ಕ್ತಾರುಚಿರಾಕ್ಷಮಾಲೆ ಶಶಿಕಾಂತಕಮಂಡಲು ತನ್ನ ಪಾಂಡುರಾ
ಕಾರದೊಳೊಪ್ಪೆ ನಾರದನದೇನಿಟೆತಂದನೊ ನೀರದಾಧ್ವದಿಂ ೬

ಪೂಮರದೊಳ್ ನವಕುಸುಮರ
ಜೋಮಯವಿಚರನ್ಮದಾಳಿಮಾಲೆಗಳೆಸೆವಂ
ತಾ ಮುನಿಬೃಂದಾರಕನೊಳ್
ಹೇಮಪಿಶಂಗಸ್ಫುರಜ್ಜಟಾಳಿಗಳೆಸೆಗುಂ ೭

ಅಲಂಕರಿಸಿದ್ದನು. ವ|| ಆಗ, ೪. ಇದೇನು! ಹಗಲಿನಲ್ಲೇ ಬೆಳುದಿಂಗಳು ಬಿಸಿಲನ್ನು ಜಯಿಸಿತೇ? ಆಶ್ಚರ್ಯ" ಎನ್ನುವಂತೆ ಒಂದು ಬಗೆಯ ಚೆಲುವು ಆಕಾಶದಿಂದ ಹರಡುತ್ತಿದ್ದಿತು. ಇದು ಖೇಚರರ ದುಕೂಲದ ಹೊಳಪೋ? ಆಕಾಶಗಂಗೆಯ ನೊರೆಯ ಉಂಡೆಯ ಕಾಂತಿಯೋ, ದಿಗ್ಗಜಗಳ ದಂತಗಳ ಹೊಳಪೋ? ಎಂದು ನಾನಾ ವಿಧವಾಗಿ ಭಾವಿಸಿ ಶಂಕಿಸಿದ ಕೃಷ್ಣನು ಸಡಗರದಿಂದ ಆಶ್ಚರ್ಯವನ್ನು ಸೂಚಿಸಿದನು. ೫. ಬೆಳಕು ಕಣ್ಣನ್ನು ಚುಚ್ಚುತ್ತಿದ್ದರೂ ಆಶ್ಚರ್ಯ ಶಂಕಾಯುತರಾದ ಕೆಲವರು ಹೇಗೋ ಆಕಾಶದ ಕಡೆ ನೋಡುತ್ತಿರಲು ತೀಕ್ಷ್ಣವಾಗಿ ಹರಡುತ್ತಿದ್ದ ಆ ಕಾಂತಿಯ ಮಧ್ಯದಲ್ಲಿ ಒಂದು ಆಕಾರವು ಕಾಣಿಸಿತು. ವ|| ಅಷ್ಟರಲ್ಲಿ ೬. ಶರತ್ಕಾಲದ ಬಿಳಿಯ ಮೋಡವೇ, ಮಿಂಚುಬಳ್ಳಿಯನ್ನು, ನಕ್ಷತ್ರಗಳ ಗುಂಪನ್ನೂ ಹೊಳೆಯುವ ಚಂದ್ರಮಂಡಲವನ್ನೂ ಧರಿಸಿ, ಇಳಿದು ಬರುತ್ತಿದೆಯೆನ್ನುವಂತೆ ಹೊಳೆಯುವ ಮುತ್ತಿನ ಜಪಮಾಲೆಯೂ ಚಿನ್ನದ ಮೌಂಜಿಯೂ ಚಂದ್ರಕಾಂತ ಶಿಲೆಯ ಕಮಂಡಲವೂ, ತನ್ನ ತುಂಬಾ ಬೆಳ್ಳಗಿರುವ ಆಕಾರದಲ್ಲಿ ಒಪ್ಪುತ್ತಿರುವಾಗ ನಾರದನು ಆಕಾಶದಿಂದ ಅದೆಷ್ಟು ಸೊಗಸಾಗಿ ಇಳಿದು ಬಂದನೋ! ೭. ಹೂವಿನ ಮರದಲ್ಲಿ ಹೊಸ ಹೂವಿನ ಧೂಳು ಮೈತುಂಬ ಅಂಟಿಕೊಂಡ ತುಂಬಿಗಳ ಸಾಲಿನಂತೆ ಆ ಮುನಿವರ್ಯನ ಸುವರ್ಣಕಾಂತಿಯಿಂದ ಕೂಡಿದ ಜಡೆಯ ರಾಶಿಯು ಹೊಳೆಯುತ್ತಿದ್ದಿತು.

ಪರಿವೃದ್ಧಿವೆತ್ತು ಬೀಬಿ
ಲ್ವರಿದುದುರಸ್ಸ್ಥಳದೊಳೀ ಮುನೀಂದ್ರನ ಹೃದಯ
ಸ್ಫುರದಮಳಸತ್ವಮೆನೆ ಮುನಿ
ವರನೊಳ್ ಯಜ್ಞೋಪವೀತತತಿ ಸೊಗಯಿಸುಗುಂ ೮

ಬಂದಪುದು ಮುನಿಪನೊಡನೆಯ
ದೊಂದು ವಿಯನ್ನದಿಯ ಕಿಱುಗಡಲ್ ಕೌತುಕಮೆಂ
ಬಂದದೆ ದುಗುಲದ ಕೌಪೀ
ನಂ ದಂಡಾಗ್ರದೊಳದೊಂದು ಯತಿಪತಿಗೆಸೆಗುಂ ೯

ಕುಂದಧವಳಾಂಗರುಚಿ ನೆಗೆ
ತಂದು ಶುಚಿರ್ಭೂತವಾಗಿ ವೃತ್ತಾಕೃತಿಯಿಂ
ಬಂದುದು ಮುನಿಪನ ಮೇಲೆನ
ಲಂದೆಸೆದುದು ಬಳಿಯ ಬಟ್ಟಗೊಡೆ ನಾರದನಾ ೧೦

ವ॥ ಅಂತು ಸೊಗಯಿಸಿ ನಭೋಂತರದಿಂ ಸಭಾಂತರಕ್ಕವತರಿಸಿದಾಗಳ್

ನೀಲೀಪಟಮಂ ದೆಸೆವೆ
ಣ್ಗೋಲೈಸೆ ನಿಜಾಂಗಕಾಂತಿ ಕೌಸ್ತುಭರುಚಿ ತ
ಳ್ತಾಲಿಂಗಿಸೆ ಮುನಿಯಂ ವನ
ಮಾಲಿ ಕನತ್ಪೀತವಸನನೊಸೆದಿದಿರೆಟ್ಟಿಂ ೧೧

ವ॥ ಅಂತು ಮೃಗೇಂದ್ರಪೀಠದಿಂದಿದಿರೇಳ್ಬುದುಂ

ಯದುವಂಶೋತ್ಪನ್ನನಾದಂ ಜಲಧಿಶಯನನೆಂಬೊಂದಭಿಜ್ಞಾನದಿಂ ನಾ
ರದನಾ ಕೃಷ್ಣಂಗೆ ಮುನ್ನಂ ಮನದೊಳೆಱಗಿದಂ ಕೃಷ್ಣನುಂ ರುದ್ರಾಮುದ್ರಾ
ಸ್ಪದನೆಂದಾನಮ್ರನಾದಂ ಮುನಿಗೆ ನೆಗೞ್ದುದಂತಾ ಮುನೀದ್ರಂಗಮಾ ಶ್ರೀ
ಸದನಂಗಂ ಮಾನಸಂ ಕಾಯಿಕಮೆನಿಪಸಕೃತ್ತಥ್ಯಮಿಥ್ಯೋಪಚಾರಂ ೧೨

೮. ಈ ಮುನೀಂದ್ರನ ಹೃದಯದಲ್ಲಿರುವ ಪರಿಶುದ್ಧವಾದ ಸತ್ತ್ವಗುಣವೇ ಚೆನ್ನಾಗಿ ಬೆಳೆದು, ಬಿಳಿಲು ಬಿಟ್ಟಿದೆಯೆನ್ನುವಂತೆ ಅವನ ಯಜ್ಞೋಪವೀತಗಳು ಸೊಗಸುತ್ತಿದ್ದವು. ೯. ಆಶ್ಚರ್ಯ! ಮುನೀಂದ್ರನ ಸಂಗಡವೇ ಆಕಾಶಗಂಗೆಯ ಉಪನದಿಯೊಂದು ಬರುತ್ತಿದೆಯೆನ್ನುವಂತೆ ಆತನ ದಂಡದ ಕೊನೆಯಲ್ಲಿ ದುಕೂಲದ ವಸ್ತ್ರಖಂಡವು ಹೊಳೆಯಿತು. ೧೦. ಮೊಲ್ಲೆಯ ಹೂವಿನಂತೆ ಬೆಳ್ಳಗೆ ಹೊಳೆಯುವ ಆತನ ದೇಹದ ಕಾಂತಿ ಮೇಲಕ್ಕೇರಿ, ಶುಚಿಯಾಗಿ ವೃತ್ತಾಕಾರವನ್ನು ಪಡೆದು ಮುನಿಯ ಮೇಲೆ ಹೊಳೆಯುತ್ತಿದೆಯೆನ್ನುವಂತೆ ದುಂಡಗಿರುವ ಬಿಳಿಯ ಕೊಡೆ ಹೊಳೆಯುತ್ತಿದ್ದಿತು. ವ॥ ಹಾಗೆ ಸೊಗಸುತ್ತ ಆಕಾಶಮಂಡಲದಿಂದ ಸಭೆಯ ಮಧ್ಯಕ್ಕೆ ಇಳಿದಾಗ ೧೧. ತನ್ನ ಅಂಗಕಾಂತಿಯು ದಿಗಂಗನೆಯರಿಗೆ ನೀಲಿಯ ವಸ್ತ್ರವನ್ನು ಒದಗಿಸುತ್ತಲೂ ಕೌಸ್ತುಭಕಾಂತಿಯು ನಾರದನನ್ನು ದೃಢವಾಗಿ ಆಚ್ಛಾದಿಸುತ್ತಲೂ ಇರುವಾಗ ಪೀತಾಂಬರಧಾರಿಯಾದ ಕೃಷ್ಣನು ಪ್ರೀತಿಪೂರ್ವಕವಾಗಿ ನಾರದನಿಗೆ ಎದಿರುಗೊಂಡೆದ್ದನು. ವ॥ ಹಾಗೆ ಸಿಂಹಾಸನದಿಂದ ಏಳಲು ೧೨. ನಾರಾಯಣನೇ ಯದುವಂಶದಲ್ಲಿ ಕೃಷ್ಣನಾಗಿ ಉದಿಸಿರುವನು ಎಂಬ ಅರಿವಿನಿಂದ ನಾರದನು

ಪೂಜಾಸತ್ಕೃತನಾಗಿ ಸ
ರೋಜಾಸನತನಯನಿರೆ ವಿಶಿಷ್ಟಾಸನದೊಳ್
ರಾಜೀವನಯನನಿರ್ದಂ
ರಾಜಿಸೆ ನಿಜಮೂರ್ತಿ ತನ್ಮಹಾಸ್ಥಾಯಿಕೆಯೊಳ್ ೧೩

ವ|| ಅನಂತರಂ

ಪೂರಿಸುವ ನೆವದೆ ಮುಂ ಪೀ
ರ್ದಾ ರುಚಿ ಮತ್ಪಾಂಚಜನ್ಯರಶ್ಮಿಯನಿತ್ತು
ದ್ದಾರಿಪವೊಲ್ ದಂತದ್ಯುತಿ
ರಾರಾಜಿಸಿ ಮುಖದಿನುಣ್ಮೆ ನುಡಿದಂ ಕೃಷ್ಣಂ ೧೪

ಭವದೀಯಾಗಮವಿಂದು ಯಾಗಮಹದಂತೀಂದತ್ತು ಸ್ವೈಸಂ ತ್ವದಂ
ಘ್ರಿವನೇಜಾತಪರಾಗಮಾಗಿಸಿದುದುರ್ವೀರಾಗಮಂ ಯುಷ್ಮದೀ
ಯವಿಲೋಕಂ ಯದುಲೋಕಮಂ ವೃಜಿನದಿಂ ಮೆಯ್ಪಿಂಗಿಸಿತ್ತೀ ಸಭಾ
ಭವನಕ್ಕಿತ್ತುದು ನಿಮ್ಮ ವಾಕ್ಸುಧೆ ಸುಧಾಶ್ರೀಯಂ ರದಜ್ಯೋತ್ಸ್ನೆಯಿಂ ೧೫

ವ|| ಎಂದುಪೇಂದ್ರಂ ಮುನೀಂದ್ರಂಗೆ ನುಡಿಯೆ

[೧]ಆ ಮುನಿಪವದನಚಂದ್ರಸು
ಧಾಮಳರುಚಿ ಮುಖದಿನುಣ್ಮಿದಪುದೆನೆ ದಶನೋ
ದ್ದಾಮಧವಳಾಂಶು ಪಸರಿಸೆ
ತಾಮರಸಾಕ್ಷಂಗೆ ಮುನಿಪನಂದಿತೆಂದಂ ೧೬

ಮನಸ್ಸಿನಿಂದಲೇ ಕೃಷ್ಣನಿಗೆ ಮೊದಲು ವಂದಿಸಿದನು. ಕೃಷ್ಣನೂ ರುದ್ರಚಿಹ್ನೆಯುಳ್ಳವನೆಂದು ಮನಸ್ಸಿನಿಂದಲೇ ಮುನಿಗೆ ವಂದಿಸಿ, ಬಳಿಕ ಋಷಿಯೆಂಬ ಭಾವನೆಯಿಂದ ದೇಹದಿಂದಲೂ ಎರಗಿದನು, ಹೀಗೆ ನಾರದ ಕೃಷ್ಣರಿಗೆ ಅನೇಕಾವೃತ್ತಿ ಸತ್ಯಮಿಥ್ಯೋಪಚಾರದ ಕಾಯಕ ಮಾನಸಿಕ ವಂದನೆ ಪ್ರತಿವಂದನೆಗಳು ನಡೆದವು. ೧೩. ಬ್ರಹ್ಮಪುತ್ರನಾದ ನಾರದನು ಪೂಜೆಯಿಂದ ಸತ್ಕೃತನಾಗಿ ಋಷಿಗುಚಿತವಾದ ವಿಶೇಷಾಸನದಲ್ಲಿ ಕುಳಿತುಕೊಂಡ ಬಳಿಕ ಕೃಷ್ಣನೂ ಆ ಮಹಾಸಭೆಯಲ್ಲಿ ತನ್ನ ಪೀಠದಲ್ಲಿ ಪ್ರಕಾಶಿಸಿದನು. ವ|| ಆಮೇಲೆ ೧೪. ಶ್ರೀಕೃಷ್ಣನು ಮಾತಾಡಿದನು. ಪಾಂಚಜನ್ಯವನ್ನೂದುವಾಗ ಆ ನೆವದಿಂದ ಅದರ ಶುಭ್ರಕಾಂತಿ ಯನ್ನು ಹೀರಿ, ಈಗ ಹೊರ ಚೆಲ್ಲುತ್ತಿರುವನೋ ಎಂಬಂತೆ ಆತನ ದಂತಕಾಂತಿಯು ಪಸರಿಸಿತು. ೧೫. "ನಿಮ್ಮ ಆಗಮನವು ಇಂದು ಯಾಗೋತ್ಸವದಂತೆ ಪುಣ್ಯವನ್ನೊದಗಿಸಿತು. ತಮ್ಮ ಪಾದಕಮಲದ ಪರಾಗವು ಭೂಮಿಗೇ ಸಂತೋಷವನ್ನುಂಟು ಮಾಡಿತು. ನಿಮ್ಮ ದರ್ಶನವು ಯದುಸಮೂಹದ ಪಾಪವನ್ನು ಪರಿಹರಿಸಿತು. ನಿಮ್ಮ ವಾಗಮೃತವು ದಂತಕಾಂತಿಯೆಂಬ ಬೆಳುದಿಂಗಳಿಂದ ಸುಧೆಯಶ್ರೀಯನ್ನು ಈ ಸಭಾಮಂದಿರಕ್ಕೆ ಕೊಟ್ಟಿತು". ವ|| ಎಂದು ಕೃಷ್ಣನು ಮುನೀಂದ್ರನಿಗೆ ಹೇಳಿದನು. ೧೬. ಆ ನಾರದಮುನಿಯ ವದನಚಂದ್ರನ ಚಂದ್ರಿಕಾಕಾಂತಿಯು ಬಾಯಿಂದ ಹೊರಡುತ್ತಿದೆಯೆನ್ನುವಂತೆ ಹಲ್ಲಿನ ಅತಿ

---

೧. ಆ ಮುನಿಪನ ಮಾನಸಹಂಸಾಮಳರುಚಿ (ಕ)

ದರಹಾಸಜ್ಯೋತ್ಸ್ನೆಯಿಂ ದರ್ಪಕವಿಶದಯಶಂ ಕೊರ್ವೆ ಲಾವಣ್ಯದಿಂದಂ
ಸ್ಮರತೇಜಂ ಪೆರ್ಚೆ ಕಣ್ಗೊಂಡವಳ ಧವಳನೇತ್ರಾಂಚಲಾಲೋಕಮಾತ್ರಂ
ನೆರವಾದತ್ತಂಗಜಂಗೀ ತ್ರಿಜಗಮುಮಿದಿರಿಲ್ಲೆಂಬಿನಂ ಪೂವಿನಂಬಂ
ತಿರುವಾಯೊಳ್ ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ
ಬಾಲೆಯಿರ್ಪಳ್ ೧೭

ವಶವರ್ತಿಮಾಳ್ಕುಮಂಗಜ
ವಿಶಿಖದಿನೀಕ್ಷಿಸಿದ ವಿಟರನವಯವದೊಳಮಂ
ಗಶಲಾಕೆಯೊಳಂ ಪ್ರತ್ಯೇ
ಕಶೋಭೆ ಸಮುದಾಯಶೋಭೆಗಳ್ ರುಕ್ಮಿಣಿಯಾ ೧೮

ವ|| ಅಂತು ಸಕಲಲಕ್ಷಣೋಪಲಕ್ಷಿತಾವಯವಸಂಪನ್ನೆಯಪ್ಪ ಕನ್ನೆಯ ರೂಪಮನಾಪಾದ ಮಸ್ತಕಾಗ್ರಂಬರಂ ಪೇಳ್ವೆನದೆಂತೆನೆ

ಸಲ್ಲದು ಸೆಣಸಲ್ [1]ತನಗಿನಿ
ಸಲ್ಲದು ಚೆಲ್ವೆನಿಸಿ ಗೆಲ್ದು ಸತಿಯಡಿದಳಿರ್ಗಳ್
ಪಲ್ಲವಕಮನೀಯತೆಯಂ
ಪಲ್ಲವಕಮನಃಪ್ರಮೋದಮಂ ಪೆರ್ಚಿಸುಗುಂ ೧೯

ಸ್ತನಸಂಗಮಿರಲ್ ಸದ್ಯ
ಸ್ತನಸಂಗಂ ನೆಗಳ್ಗುಮೆಮ್ಮೊಳಧಿಪತಿಗೆ ಕುಚ
ಕ್ಕೆನಿಸುನ್ನತಿಯೇಕೆನುತುಂ
ಕಿನಿಸುವವೊಲ್ [2]ನಿಮಿರ್ದು ಕನ್ನೆಯಂಗುಳಿಯೆಸೆಗುಂ ೨೦

ಶುಭ್ರವಾದ ಹೊಳಪು ಹರಡುತ್ತಿರಲು, ನಾರದನು ಕೃಷ್ಣನಿಗೆ ಹೇಳಿದನು. ೧೭. "ಶ್ರೀಕೃಷ್ಣ, ಒಬ್ಬ ಬಾಲೆ ಇದ್ದಾಳೆ. ಇವಳ ಕಿರುನಗೆಯ ಬೆಳುದಿಂಗಳಿಂದ ಮನ್ಮಥನ ಯಶಸ್ಸೂ ಲಾವಣ್ಯದಿಂದ ಅವನ ತೇಜಸ್ಸೂ ಹೆಚ್ಚುತ್ತಿದೆ. ಮನೋಹರವಾದ ಅವಳ ಕಡೆಗಣ್ಣಿನ ನೋಟವೊಂದೇ ತನ್ನ ಜಯಕ್ಕೆ ನೆರವಾಯಿತು. ಇನ್ನು ಮೂರು ಲೋಕವೂ ತನಗಿದಿರಲ್ಲ, ಎನ್ನುವಂತೆ ಆ ಕಾಮನು ಹೂ ಬಾಣವನ್ನು ತನ್ನ ಬಿಲ್ಲಿನ ಹೆದೆಯಲ್ಲಿ ಹೂಡಿ ಪಕ್ಕದಲ್ಲಿ ಇರಲು ಆ ಬಾಲೆ ಲೀಲೆಯಿಂದ ಇರುವಳು. ೧೮. ಆ ರುಕ್ಮಿಣಿಯ ಒಂದೊಂದು ಅಂಗದ ಪ್ರತ್ಯೇಕಶೋಭೆಯೂ ಪೂರ್ಣದೇಹದ ಸಮುದಾಯ ಶೋಭೆಯೂ ನೋಡುವ ಕಾಮಿಗಳನ್ನು ಕಾಮಬಾಣದಿಂದ ವಶಪಡಿಸಿಕೊಳ್ಳುವುದು. ವ|| ಹಾಗೆ ಸಕಲ ಸುಲಕ್ಷಣಗಳಿಂದ ಕೂಡಿದ ಅವಯವಸಂಪನ್ನೆಯಾದ ಆ ಕನ್ನೆಯ ರೂಪವನ್ನು ಅವಳ ಅಡಿಯಿಂದ ಮುಡಿಯವರೆಗೂ ಹೇಳುತ್ತೇನೆ ಹೇಗೆಂದರೆ ೧೯. ಆ ಸತಿಯ ಕಾಲ್ ಚಿಗುರುಗಳ ಮನೋಹರತೆಯನ್ನು ಅವು, ಇನ್ನು ನಾವು ಅವಳ ಅಂಗಾಲಿನೊಡನೆ ಸ್ಪರ್ಧಿಸುವುದು ಸರಿಯಲ್ಲ, ನಮ್ಮ ಚೆಲುವು ಅಷ್ಟಾಗಿಲ್ಲ ಎಂದು ಹೇಳಿಕೊಳ್ಳುವಂತೆ ಮಾಡಿ ಜಯಿಸಿ ಕಾಮಿಗಳ ಮನಸ್ಸಿಗೆ ಸಂತೋಷವನ್ನು ಹೆಚ್ಚಿಸುವುವು. ೨೦. ಪ್ರಿಯನು ಸ್ತನಸಂಗ ಮಾಡಲು ಬಂದರೆ ಒಡನೆಯೇ ಮುಂಚೆ ನಮ್ಮ ಸಂಪರ್ಕವಾಗುವುದು. ಆದರೂ

---

೧. ತಮಗಿದು ಸಲ್ಲದು (ಕ) ೨. ಮಲರ್ದು ಕನ್ನೆಯುಂಗುಟಮೆಸೆಗುಂ (ಕಖಗ)

ಕಾಮನ ತಿಳಿಗೊಳವೆನಿಪ ನಿ
ಕಾಮನಖದ್ಯುತಿಜಲಪ್ರವಾಹದೊಳೆಸೆವಾ
ವಾಮೆಯ ಮೇಂಗಾಲ್ ಸೊಗಯಿಸು
ವಾಮೆಯನನುಕರಿಸಿ ಮನಮನಿಟ್ಟುಳಿಗೊಳ್ಗುಂ ೨೧

ಕುಂದದರಸ್ಮಿತೆಯ ಮಡಂ
ಕುಂದದ ಚೆಲ್ವಿಂ ಮನೋಜರಾಜಕ್ರೀಡಾ
ಕಂದುಕಮೆನೆ ಜನದ ಮನ
ಕ್ಕಂದು ಕರಂ ಮುದಮನೊದವಿಕುಂ ಮೃದುಗತಿಯಿಂ ೨೨

ಪೊಣರದೆ ಮದನನ ದೊಣೆಗಳ
ಪೊಣರದೆನಲ್ ನಂಬ ಕೇಳ್ವುದಾ ಯುವತಿಶಿಖಾ
ಮಣಿಯ ಕಿಱುದೊಡೆಯನೀಕ್ಷಿಸೆ
ಮಣಿಯದರಾರ್ ಮದನನಿಸುವ ಮೋಹನಶರದಿಂ ೨೩

ರಂಭಾವಿಭವದಿನಧಿಕತ
ರಂ ಭಾವಿಸೆ ಪತಿಮನೋಮದೇಭಾಲಾನ
ಸ್ತಂಭವೆನೆ ನೋಡೆ ಸುಗತಿ
ಸ್ತಂಭವನೊಡರಿಪುವು ಬಟ್ಟದೊಡೆ ರುಕ್ಮಿಣಿಯಾ ೨೪

ಕಾಂತನ ಹೃತ್ಕೇಕಿ ದಿಟ
ಕ್ಕಾಂತನವಧಿಮುದಮನಲ್ಲಿ ನಲಿವುದಱಿಂದಂ
ಕಂತುವ ಕೃತಕಾದ್ರಿಯೆನ
ಲ್ಕಂತು ವನೇಜಾಸ್ಯೆಗೆಸೆಗುಮುನ್ನತಜಘನಂ ೨೫

ಈ ಸ್ತನಗಳಿಗೆ ಇಷ್ಟು ಉನ್ನತಿಯೇಕೆ ಎಂದು ಕೋಪಗೊಂಡಿರುವಂತೆ ಅವಳ ಕೈಬೆರಳುಗಳು ಉದ್ದವಾಗಿ ಹೊಳೆಯುವುವು. ೨೧. ಕಾಮನ ತಿಳಿಗೊಳವೆನ್ನುವಂತೆ ಇರುವ ಉಗುರುಗಳ ಅಧಿಕವಾದ ಕಾಂತಿ ಪ್ರವಾಹದಲ್ಲಿ ಹೊಳೆಯುತ್ತಿರುವ ಆ ಸುಂದರಿಯ ಮುಂಗಾಲುಗಳು ಆಮೆಯನ್ನು ಹೋಲುತ್ತ ಚೆನ್ನಾಗಿರುವವು. ೨೨. ಮೊಲ್ಲೆಯ ಹೂವಿನಂತೆ ಮುಗುಳು ನಗುವ ಆಕೆಯ ಹಿಮ್ಮಡಿಯು ಕುಂದದ ಚೆಲುವಿನಿಂದ ಮನ್ಮಥರಾಜನ ಆಟದ ಚೆಂಡಿನಂತೆ ಅವಳು ಮೆತ್ತಗೆ ನಡೆಯುವಾಗ ಜನರ ಮನಸ್ಸಿಗೆ ಸಂತೋಷವನ್ನು ಒದಗಿಸುವುದು. ೨೩. ಆ ಯುವತೀ ಶಿರೋಮಣಿಯ ಕಿರುದೊಡೆಗಳನ್ನು ನೋಡಿದ ಮೇಲೆ ಯಾರು ತಾನೆ ಮನ್ಮಥನು ಹೊಡೆಯುವ ಮೋಹನಾಸ್ತ್ರಕ್ಕೆ ಬಾಗದಿರುವರು? ಆ ಜೋಡಿ ತೊಡೆಗಳೇ ಮನ್ಮಥನ ಜೋಡಿ ಬತ್ತಳಿಕೆಗಳು ಎಂದರೂ ನಂಬಿ ಕೇಳಬೇಕು. ೨೪. ರುಕ್ಮಿಣಿಯ ದುಂಡುದೊಡೆಯು ಬಾಳೆಯ ಕಂಭಕ್ಕಿಂತಲೂ ಅಧಿಕ ಸೌಂದರ್ಯವುಳ್ಳುದಾಗಿ ಪತಿಯ ಮನಸ್ಸೆಂಬ ಆನೆಯ ಬಂಧನಸ್ತಂಭದಂತಿರುವುದು. ನೋಡುವವರು ಮುಂದೆ ನಡೆಯದೆ ನಿಲ್ಲುವಂತೆ ಮಾಡುವುದು. ೨೫. ಆ ಕಮಲನೇತ್ರೆಯ ಉನ್ನತವಾದ ಜಘನವು ಆಕೆಯ ಕಾಂತನ ಹೃದಯವೆಂಬ ನವಿಲು ಅಲ್ಲಿ ಮಿತಿಯಿಲ್ಲದ ಸಂತೋಷದಿಂದ ನಲಿಯುವುದರಿಂದ ಅದು ನಿಜವಾಗಿಯೂ ಮನ್ಮಥನ ಕ್ರೀಡಾಶೈಲದಂತೆ ಹೊಳೆಯುವುದು.

ಬಾಸೆಯೆ ತನಗದು ನೆರವೆಂ
ಬಾಸೆಯೆ ಪಿರಿದದಱಿನುಡಿಯದೊಳ್ನಡುವೆಂಬೀ
ದೇಸೆಗೆ ಸಂದಂಗಜನೊಂ
ದೇಸೆ ಗೆಲಲ್ ಜಗಮನವಳ ತೆಳ್ವಸಿಱಿಸೆಗುಂ ೨೬

ನಳನಳಿಸಿ ಬಳೆದು ವಿರಹಾ
ನಳನಳುರ್ಗುಗುಮಾ ವಿಳಾಸರಸದ ತರಂಗಾ
ವಳಿಗಳನ್ನಿಱಿಸುವ ಮಧ್ಯದ
ವಳಿಗಳನೀಕ್ಷಿಸಿದ ನೀಱರಂ ರುಕ್ಮಿಣಿಯಾ ೨೭

ವನಿತೆಯ [೧]ತೆಳ್ವಸಿಱಳತೆಯು
ವನಿತೆಯ ತನುರಸತಟಾಕಕುಟಿಯೆನೆ ಚಂದ್ರಾ
ನನೆಯ ಕುಟಿಪೊರ್ಕುೞಿಸದುದು
ನನೆಯ ಸರಲ್ ನಾಂಟೆ ತನ್ನನೀಕ್ಷಿಸಿದವರಂ ೨೮

ಬಾಳಕಿಗಳಿನಿಚಯಾಳಂ
ಬಾಳಕಿಗಾ ರೋಮರಾಜಿ ರಂಜಿಸುತಿರ್ಕುಂ
ನೀಳದ ಕಾಂಚೀಮಧ್ಯದ
ನೀಳದ ನೆಗೆದುನ್ಮುಖಪ್ರಭಾರೇಖೆಯವೋಲ್ ೨೯

೨೬. ಆಕೆಯ ತೆಳುವಾದ ಉದರವು ರೋಮರಾಜಿಯೇ ತನಗೆ ಸಹಾಯ ಎಂಬ ಆಸೆ ಹೆಚ್ಚಾಗಿರುವುದರಿಂದ ಅವಳ ಸೊಂಟವು ಏನನ್ನೂ ಹೇಳದೆ (ಕಾಣಿಸದೆ) ಇದೆ ಎಂಬ ಸೊಗಸನ್ನು ಪಡೆದು ಮನ್ಮಥನು ಅವನ ಬಾಣದ ಒಂದೇ ಏಟಿಗೆ ಜಗತ್ತನ್ನು ಗೆಲ್ಲಲು ಸಹಾಯವಾಗಿ ಹೊಳೆಯುವುದು. ೨೭. ಪ್ರಸಿದ್ಧವಾದ ವಿಲಾಸರಸದ ಅಲೆಗಳ ಸಾಲನ್ನು ತಿರಸ್ಕರಿಸುವ ಆ ರುಕ್ಮಿಣಿಯ ನಡುವಿನ ತ್ರಿವಳಿಗಳು ಅವನ್ನು ನೋಡುವ ಲಾವಣ್ಯ ಯುತರಾದ ಯುವಕರನ್ನು ಆಕ್ರಮಿಸಿ ಕೋಮಲವಾಗಿ ಬೆಳೆಯುವ ವಿರಹಾಗ್ನಿಗೆ ಗುರಿಮಾಡುವುವು. ೨೮. ಆ ಚಂದ್ರಮುಖಿಯ ತೆಳುವಾದ ಉದರದಳತೆಗೆ ತಕ್ಕುದಾಗಿ ತಾಮರಸ ತಟಾಕದ ಕುಳಿಯೆನ್ನುವಂತೆ ಆಳವಾಗಿರುವ ಹೊಕ್ಕುಳು, ಅದನ್ನು ನೋಡಿದವರಿಗೆ ಪುಷ್ಪಬಾಣವು ನಾಟುವಂತೆ ಹೊಳೆಯುವುದು. ೨೯. ತುಂಬಿಗಳ ಸಾಲಿನಂತೆ ಹೊಳೆಯುವ ಮುಂಗುರುಳಿನ ಆ ರುಕ್ಮಿಣಿಯ ರೋಮರಾಜಿಯು ಆಕೆಯ ವಿಶಾಲವಾದ ವಡ್ಯಾಣದ ಮಧ್ಯದ ನೀಲರತ್ನದಿಂದ ಮೇಲ್ಮುಖವಾಗಿ ಹೊರಡುತ್ತಿರುವ ಕಾಂತಿಯಂತೆ

---

೧. ತೆಳ್ವಸಿರಳತೆಯು (ಕಗ)

ಸಮನೆನೆ ಪೊಣರ್ವಕ್ಕಿ ವಿಳಾ
ಸಮನೆನಿಸಂ ತಳದ ಘನಕುಚಂ ನಿಬಿಡತೆಯಿಂ
ರಮಣಿಗೆ ಸೊಗಯಿಸುಗುಂ ಹಾ
ರಮಣಿಗೆ ನುಸುಳಲ್ಕೆ ತೆಱಪುಗುಡದನವರತಂ ೩೦

ರತಿಕಾಂತನಸಿಯ ನುಣ್ಪೊಗ
ರತಿಕಾಂತದ್ಯುತಿಯನಾಂತು ಚೆಲ್ವಿನೊಳಧಿಕಂ
ಲತೆಯ ಮೊದಲ್ಗೆನೆ ರತಲೋ
ಲತೆಯನಿನಂಗೀವುವವಳ ತೋಳಮೊದಲ್ಗಳ್ ೩೧

ತಾಮರಸಮುಖಿಯ ನಳಿತೋಳ್
ತಾಮರಸ ಬೆಡಂಗುವೆತ್ತು ಸಿರಿಸದ ಸುಮನೋ
ದಾಮಕಮಂ ಗೆಲೆವಂದೆಸೆ
ದಾ ಮಕರಧ್ವಜನ ಪಾಶಮೆನೆ ಸೊಗಯಿಸುಗುಂ ೩೨

ತರುಣಮೃಗಾಕ್ಷಿಯ ದೊರೆವೆ
ತ್ತರುಣತಳಂ ಬಾಹುಲತೆಯ ಪಲ್ಲವಮೆನೆ ಭಾ
ಸುರತಮನಾಗಿರ್ದಿನನೊಳ್
ಸುರತಮನಿರ್ಮಡಿಸುಗುಂ ನಿಜಸ್ಪರ್ಶನದಿಂ ೩೩

ಕದನಮನೊಡರ್ಚೆ ಮೂಲೋ
ಕದ ನವಯೌವನರನಲೆವ ನನೆಗಣೆಗಳೆನಲ್
ಮದನಭುಜವಿಜಯಮಂ ತಾ
ಮದನಭಿವರ್ಣಿಸುವುವವಳ ಹಸ್ತಾಂಗುಳಿಗಳ್ ೩೪

ಹೊಳೆಯುವುದು. ೩೦. ಚಕ್ರವಾಕ ಪಕ್ಷಿಜೋಡಿಯ ವಿಳಾಸಕ್ಕೆ ಸಮಾನವಾದ ವಿಲಾಸವನ್ನು ಪಡೆದಿರುವ ಆಕೆಯ ಸ್ಥೂಲಸ್ತನಗಳು ಒಂದಕ್ಕೊಂದು ಸೇರಿಕೊಂಡು ಆಕೆಯ ಹಾರದ ಒಂದು ರತ್ನವು ನುಸುಳುವುದಕ್ಕೂ ಎಂದಿಗೂ ಅವಕಾಶಕೊಡದೆ ಸೊಗಸುತ್ತಿರುವುವು. ೩೧. ರತಿಕಾಂತ (ಮನ್ಮಥ)ನ ಕತ್ತಿಯ ನುಣುಪಾದ ಕಾಂತಿಯಂತೆ ಅತಿಯಾದ ಕಾಂತಿಯನ್ನು ಪಡೆದು ಚೆಲುವಿನಲ್ಲಿ ಬಳ್ಳಿಯ ಮೊದಲಭಾಗಕ್ಕೂ ಹೆಚ್ಚು ಎನ್ನುವಂತೆ ಇರುವ ಆಕೆಯ ಭುಜಗಳು ಆಕೆಯ ಪ್ರಿಯನಿಗೆ ರತಿಯಲ್ಲಿ ಆಸಕ್ತಿಯನ್ನು ಉಂಟುಮಾಡುವುವು. ೩೨. ಆ ಕಮಲಮುಖಿಯ ಕೋಮಲವಾದ ತೋಳು ತಾವರೆಯ ಬೆಡಗನ್ನು ಪಡೆದು, ಶಿರೀಷ ಕುಸುಮದ ಉತ್ತಮವಾದ ಮಾಲೆಯನ್ನೂ ಜಯಿಸಿ, ಮಕರಧ್ವಜನ ಪಾಶವೆನ್ನುವಂತೆ ಸೊಗಸುತ್ತಿರುವುದು. ೩೩. ಎಳೆ ಜಿಂಕೆಯಂತೆ ಕಣ್ಣುಳ್ಳ ಆಕೆಯ ಕೆಂಪಾದ ಅಂಗೈ ತೋಳುಬಳ್ಳಿಯ ಚಿಗುರೆನ್ನುವಂತೆ ಹೊಳೆಯುತ್ತ ಅವಳ ಪ್ರಿಯನಿಗೆ ತನ್ನ ಸ್ಪರ್ಶದಿಂದ ಸುರತಸುಖವನ್ನು ಎರಡರಷ್ಟಾಗಿಸುವುದು. ೩೪. ಕದನವನ್ನು ಮಾಡಿದರೆ ಮೂರುಲೋಕದ ನವಯುವಕರನ್ನೂ ಪೀಡಿಸುವ ಹೂಬಾಣಗಳೆನ್ನುವಂತೆ ಇರುವ ಆಕೆಯ ಕೈಬೆರಳುಗಳು

ಮನಮಂ ಸಲೆ ಸೋಲಿಪ ಕಾ
ಮನ ಮಂಗಳಶಂಖದಂತಿರೆಸೆವವಳ ಕೊರಲ್
ಜನವಾದಮೆಸೆವಿನಂ ಭಾ
ಜನವಾದತ್ತುಪಮೆಗಾಸ್ಯಮುಕುರದ ಪಿಡಿಯೊಳ್ ೩೫

ತವದಿಂಪಿಂ ನಲ್ಲಂಗಮೃ
ತವದಿಂ ಪೆಱತಲ್ಲದೆನಿಸಿ ಬಂದುಗೆಯಲರಂ
ಪವಳದ ಬಟ್ಟಂ ಗೆಲೆವ
ರ್ಪವಳಧರಂ ಮಾಣದಧರಿಕುಂ ಪಲ್ಲವಮಂ ೩೬

ರದನಾಳಿಯನಾರ್ ಬಣ್ಣಿಪ
ರದನಾಳಿಗೊಳುತ್ತುಮಿರ್ದು ಮುತ್ತಿನ ಚೆಲ್ವಂ
ಪುದು ತನ್ನ ಕಾಂತಿ ಪತಿಗೆನಿ
*ಪುದು ತನ್ನವಪಲ್ಲವೋಪಮಾನಾಧರೆಯಾ ೩೭

ಪಿಂಗದೆ ಲಾವಣ್ಯದ ಸೊಂ
ಪಿಂಗದೆ ತಾಂ ನಿಳಯಮೆನಿಸಿ ಯೌವನಲಕ್ಷ್ಮೀ
ಮಂಗಳಮಣಿದರ್ಪಣಯು
ಗ್ಮಂಗಳವೆಂದೆನೆ ಕಪೋಲವಂಗನೆಗೆಸೆಗುಂ ೩೮

ಮನ್ಮಥನ ಭುಜವಿಜಯವನ್ನು ಅಭಿವರ್ಣಿಸುತ್ತಿರುವುವು. ೩೫. ಮನಸ್ಸನ್ನು ಪೂರ್ಣವಾಗಿ ಸೋಲಿಸುವ ಕಾಮನ ಮಂಗಳಶಂಖದಂತೆ ಹೊಳೆಯುವ ಅವಳ ಕೊರಳು, ಮುಖವೆಂಬ ಕನ್ನಡಿಯ ಹಿಡಿಯ ಹೋಲಿಕೆಗೆ ಪಾತ್ರವಾಗಿದೆಯೆಂದು ಜನರು ಹೇಳುತ್ತಾರೆ. ೩೬. ಕಡಮೆಯಾಗದ ಇಂಪಿನಿಂದ ಪ್ರಿಯನಿಗೆ ಅವಳ ತುಟಿ ಅಮೃತವಲ್ಲದೆ ಬೇರೇನೂ ಅಲ್ಲ ಎನ್ನಿಸಿ, ಬಿಂದಿಗೆ ಹೂವನ್ನೂ ಹವಳದ ಬಳ್ಳಿಯನ್ನೂ ಜಯಿಸಿರುವುದು ಸಾಲದೆ ಚಿಗುರನ್ನೂ ಜಯಿಸಿದೆ. ೩೭. ಹೊಸ ಚಿಗುರಿನಂತಿರುವ ತುಟಿಯುಳ್ಳ ಆಕೆಯ ಹಲ್ಲಿನ ಸಾಲನ್ನು ವರ್ಣಿಸುವವರಾರು? ಅದು ಮುತ್ತಿನ ಚೆಲುವನ್ನೂ ತಿರಸ್ಕರಿಸುತ್ತ ಇದ್ದು, ತನ್ನ ಕಾಂತಿಯು, ಪತಿಗೆ ಸೇರಿದುದು ಎನ್ನಿಸುವುದು. ೩೮. ಕುಂದದ ಲಾವಣ್ಯದ ಸೊಂಪಿಗೆ ನೆಲೆಯೆನ್ನಿಸಿಕೊಂಡಿರುವ ಅವಳ ಕೆನ್ನೆಗಳು ಯೌವನಲಕ್ಷ್ಮಿಯ ಮಂಗಳಕರವಾದ ಎರಡು ಕನ್ನಡಿಗಳೆಂಬಂತೆ ಹೊಳೆಯುವುವು.

---

* ಇಲ್ಲಿ ಈ ಪದ್ಯವು (ಕ) ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ

ರದನಂ ಗಡಣಂಬಡೆದಾ
ರದನಂಗನ ಕೀರ್ತಿಲತೆಯ ಬಿತ್ತೆನಿಸಿರ್ದುಂ
ಪುದು ತನ್ನ ಕಾಂತಿ ಪತಿಗೆನಿ
ಪುದು ತನ್ನವಪಲ್ಲವೋಪಮಾನಾಧರೆಯಾ

ರಾಜಿಪ ಮುಖಲಕ್ಷ್ಮಿಗೆ ನೀ
ರಾಜಿಪ ಮಣಿಪಾತ್ರಯುಗಳಮೆನೆ ಸೊಗಯಿಸುಗುಂ
ರಾಜೀವಮುಖಿಯ ಮಣಿರುಚಿ
ರಾಜೀವಳಿತಾವತಂಸಕರ್ಣಯುಗಂಗಳ್ ೩೯

ಸಂಪಗೆಯೊಳ್ ತನಗನುದಿವ
ಸಂ ಪಗೆ ಚೆಲ್ವಿಂದಮೆನಿಪ ನಾಸಾಮುಕುಳಂ
ಕಂಪನವಟ್ಟೈಸಿ ತುಂಬಿಗೆ
ಕಂಪನಮಂ ವಿಟಶಿರಕ್ಕೆ ಪಡೆವುದು ಸತಿಯಾ ೪೦

ಕೈದುವನಿಟಿಕೆಯ್ದು ದಿಟ
ಕೈದುವ[೧]ನಲರಂಬನತನು ಜಗಮಂ ಗೆಲ್ವಂ
ನೈದಲ[೨] ನೀರೇಜದ [೩]ಚಿ
ನ್ನೈದಲಣಂ ಸಾಲದೆನಿಸುವವಳಕ್ಕಿಗಳಿಂ ೪೧

ಕಮನೀಯಂ ಸ್ಮರಧನು ಕೊಂ
ಕಮನೀಯಂದದೊಳೆ ಪಡೆಯದೆನೆ ನಿಡುಪುರ್ವಾ
ರಮಣೀಮುಖೇಂದುಬಿಂಬದ
ರಮಣೀಯಕಲಂಕಲೇಖೆವೋಲ್ ಸೊಗಯಿಸುಗುಂ ೪೨

ಸಕಳಂಕಮಾದ ಪೆಱೆಯೆನೆ
ಸಕಳಂ ಜಗಮೆಯ್ದೆ ಪೊಗಟಲಳಕದ್ಯುತಿಮೇ
ಚಕಿತಮತಿಕಾಂತಿಕಾಂತಂ
ಚಕಿತಮೃಗೇಕ್ಷಣೆಯ ಪೆಱೆನೊಸಲ್ ಸೊಗಯಿಸುಗುಂ ೪೩

೩೯. ಹೊಳೆಯುವ ಮುಖಲಕ್ಷ್ಮಿಗೆ ಮಂಗಳಾರತಿಯನ್ನೆತ್ತುವ ಎರಡು ರತ್ನದ ಪಾತ್ರೆಗಳಂತೆ ಇದ್ದು, ರತ್ನಗಳ ಕಾಂತಿಗೆ ಅಧೀನವಾಗಿರುವ ಆಭರಣಗಳನ್ನು ಧರಿಸಿದ ಆ ಕಮಲಮುಖಿಯ ಎರಡು ಕಿವಿಗಳು ಸೊಗಸುವುವು. ೪೦. ಸೌಂದರ್ಯದ ವಿಷಯದಲ್ಲಿ ಸಂಪಗೆಯ ಮೇಲೆ ಯಾವಾಗಲೂ ದ್ವೇಷ ಎನ್ನಿಸಿಕೊಂಡಿರುವ ಸಂಪಗೆಯ ಮೊಗ್ಗಿನಂತಿರುವ ಆಕೆಯ ಮೂಗು ತುಂಬಿಗಳಿಗೆ ಸುವಾಸನೆಯನ್ನು ಬೀರುತ್ತ ಕಿವಿಯು ತಲೆದೂಗುವಂತೆ ಮಾಡುವುದು. ೪೧. ಕಾಮನು ನಿಜವಾಗಿಯೂ ತನ್ನ ಐದು ಬಾಣಗಳನ್ನೂ ತಿರಸ್ಕರಿಸಿ ಕನ್ನೈದಿಲೆಯೂ, ಕಮಲವೂ ತನ್ನ ಸಮಕ್ಕೆ ಬರಲು ಸುತರಾಂ ಸಾಲದು ಎಂದೆನ್ನಿಸುವ ಆಕೆಯ ಕಣ್ಣುಗಳಿಂದಲೇ ಜಗತ್ತನ್ನು ಗೆಲ್ಲುವನು. ೪೨. ಮನೋಹರವಾದ ಕಾಮನ ಬಿಲ್ಲು ಕೂಡ ಈ ರೀತಿಯಲ್ಲಿ ಸೊಗಸಾಗಿ ಬಾಗಿರಲಾರದು ಎನ್ನಿಸಿರುವ ಆಕೆಯ ಉದ್ದವಾದ ಹುಬ್ಬು ಆ ರಮಣಿಯ ಮುಖವೆಂಬ ಚಂದ್ರಮಂಡಲದ ರಮಣೀಯವಾದ ಕಲಂಕರೇಖೆಯಂತೆ ಚೆನ್ನಾಗಿರುವುದು. ೪೩. ಬೆದರಿದ ಜಿಂಕೆಯಂತೆ ಕಣ್ಣುಳ್ಳ ಆಕೆಯ ಚಂದ್ರನಂತಿರುವ ಹಣೆಯು, ಮುಂಗುರುಳಿನ ಕಪ್ಪಾದ ಕಾಂತಿಯಿಂದ ಅತಿಮನೋಹರವಾಗಿ ಕಳಂಕ

೧. ನಲರಂಬಿ (ಕಖಗ) ೨. ನೈದಿಲ (ಕಖಗ) ೩. ಚಿನ್ನೈದಿಲೆ (ಖಗ)

ಕಮಳಕ್ಕೆಱಪಳಿಗಳೆನಲ್
ಕಮಳಕ್ಕೆ ಮುಖಾಂಬುಜಕ್ಕೆ ನಿಟಲಾಗ್ರಚಲ
ದ್ಭ್ರಮರಕಮತಿಶಯಮೆಸೆಗುಂ
ಭ್ರಮರಕದಂಬಾಂಶುರುಚಿರಗುರುಕಚಭರೆಯಾ ೪೪

ವೀರವನತನುಗೆ ನಿಜಮೌ
ರ್ವೀರವಮಿದಱಂತು ಕುಡದು ಕೋಕಿಲನಿನದಂ
ಸಾರಮಿನಿತಿಲ್ಲದಮೃತಾ
ಸಾರಮಿದೆನೆ ಕಿವಿಗೆ ಸೊಗಯಿಕುಂ ದನಿ ಸತಿಯಾ ೪೫

ದೊರೆ ಗಡ ಚೆಂಬೊನ್ನಿದಱಕೊಂ
ದೊರೆಗವಣಂ ಬಾರದೆನಿಸುವಾ ಪೀನಪಯೋ
ಧರೆಯ ತನುಕಾಂತಿ ಸತತಂ
ಧರೆಯನನನ್ಯಜನ ತೇಜದಂತಂಡಲೆಗುಂ ೪೬

ನಿರವಧಿಸೌಷ್ಠವದಿಂ ತ
ನ್ನಿರವಧಿಕಂ ಚೆಲ್ವುವೀಱೆ ಕಬರೀಭರದಿಂ
ಪರಿಭಾಗಂಬೆತ್ತಾಕೆಯ
ಪರಭಾಗಂ ಪತಿಯ ಮನಮನುಱೆ ಸೆಱೆವಿಡಿಗುಂ ೪೭

ವಳಯದ ನೂಪುರದುಲಿ ಭೂ
ವಳಯದ ಕಿವಿಗಮರ್ದುಗಱೆಯಲತನುಗೆ ವಿಟರೊಳ್
ಕಳಹಂಸಮನಿಸೆ ಚೆಲ್ವಿಂ
ಕಳಹಂಸಮನಿಟೆಪುದಲಸಗತಿ ರುಕ್ಮಿಣಿಯಾ ೪೮

ಸಹಿತನಾದ ಚಂದ್ರನಂತೆ ಸಕಲ ಜಗತ್ತೂ ಹೊಗಳುವ ರೀತಿಯಲ್ಲಿ ಸೊಗಸುವುದು. ೪೪. ತುಂಬಿಗಳ ಗುಂಪಿನಂತೆ ಹೊಳೆಯುತ್ತ ಮನೋಹರವಾಗಿರುವ ತಲೆಗೂದಲ ರಾಶಿಯ ಆಕೆಯ ಹಣೆಯ ಮೇಲೆ ಚಲಿಸುವ ಮುಂಗುರುಳು ಕಮಲಕ್ಕೆರಗಿದ ತುಂಬಿಗಳೆನ್ನುವಂತೆ ಅತಿಶಯವಾಗಿ ಹೊಳೆಯುವುದು. ೪೫. ಮನ್ಮಥನಿಗೆ ಇದರಂತೆ ಶೌರ್ಯಪರಾಕ್ರಮವನ್ನು ಅವನ ಬಿಲ್ಲಿನ ಮೌರ್ವಿಯ ಧ್ವನಿಯೂ ಕೊಡಲಾರದು. ಕೋಗಿಲೆಯ ಧ್ವನಿಯೂ ಸಾರವಿಲ್ಲದುದು. ಇದೀಗ ಕಿವಿಗೆ ಅಮೃತವೃಷ್ಟಿಯಾಗಿದೆ ಎನ್ನುವಂತೆ ಆ ರುಕ್ಮಿಣಿಯ ಧ್ವನಿಯು ಇಂಪಾಗಿದೆ. ೪೬. ಅಪರಂಜಿ ಚಿನ್ನವು ಇದಕ್ಕೆ ಸಮವೆ?! ಅದು ಇದರ ಒಂದು ಬರೆಗೂ ಸರಿಬಾರದು ಎನ್ನಿಸಿರುವ ಆ ಸ್ಥೂಲಸ್ತನಿಯ ದೇಹಕಾಂತಿಯು ಮನ್ಮಥನ ತೇಜಸ್ಸಿನಂತೆ ಭೂಮಿಯನ್ನೇ ಪೀಡಿಸುವುದು. ೪೭. ಮಿತಿಯಿಲ್ಲದ ಮನೋಹರತೆಯ ಆಕೆಯ ತಲೆಗೂದಲ ರಾಶಿಯು ಯಾವಾಗಲೂ ತನ್ನ ಮೇಲೆಯೇ ಇದ್ದು ಚೆಲುವನ್ನು ಬೀರುತ್ತಿರುವುದರಿಂದ ಮೇಲ್ಮೆಯನ್ನು ಪಡೆದ ಆಕೆಯ ಬೆನ್ನಿನ ಮೇಲುಭಾಗವು ಪತಿಯ ಮನಸ್ಸನ್ನು ಪೂರ್ಣವಾಗಿ ಸೆರೆಹಿಡಿಯುವುದು. ೪೮. ಆ ರುಕ್ಮಿಣಿಯ ಕೈಬಳೆ ಕಾಲ್ಬಳೆಗಳ ಧ್ವನಿಯು ಭೂಮಂಡಲದ ಕಿವಿಗೆ ಅಮೃತವನ್ನು ಕರೆಯುತ್ತಿರುವುದು. ಅಲ್ಲದೆ ಕಾಮಿಗಳೊಡನೆ

ಈಕೆಯ ರೂಪಿನ ಪರಿಯಂ
ಕೋಕನದಜನಂದು ಕಂಡೊಡಂತಾ ಗೌರೀ
ಶ್ರೀಕಾಂತೆಯರಾಕೃತಿಯಂ
ಪ್ರಾಕೃತಮೆನೆ ಮಾಡನೆನಿಸಿ ರುಕ್ಮಿಣಿಯೆಸೆಗುಂ ೪೯

ಆ ರಮಣೀಶಿಖಾಮಣಿಗೆ ನೀಂ ಬಗೆ ಸೋಲ್ತೊಡವಳ್ಗೆ [1]ಸೋಲ್ವನ
ನ್ಯಾರಿಗೆ ಸೋಲಮಂ ಪಡೆಯವೇಳ್ಪುದದೆಂತೆನೆ ರುಕ್ಮಿ ಮಾಳ್ಪ ಕೈ
ವಾರದೆ ಚೈದ್ಯನಾ ರಮಣಿಗುಂಗುರವಿಟ್ಟು ವಿವಾಹಲಗ್ನಮಂ
ಪಾರುತುಮಿರ್ದನಿಂ ಸೆರಗುವಾರದೆ ಚಿಂತಿಸಿದರ್ಕುಪಾಯಮಂ ೫೦

ಅನುರಾಗಮುರ್ವಿಗುರ್ವುಗೆ
ಜನಿಯಿಸುಗಾನಂದವಮರಸಮಿತಿಗೆ ಶಿಶುಪಾ
ಲನಭೀಷ್ಟಸಿದ್ಧಿ ತೊಲಗುಗೆ
ನಿನಗಕ್ಕೆ ವಿವಾಹಮಂಗಳಂ ರುಕ್ಮಿಣಿಯೊಳ್ ೫೧

ವ|| ಎಂದು ಪರಸಿ ಸರಸಿಜಾಕ್ಷನನುಜ್ಞೆಯಿಂ ನಾರದಂ ನೀರದಪಥಕ್ಕೆ ನೆಗೆವುದುಂ

ತಾಂ ಗಡ ಕುಡುವಂ ಶಿಶುಪಾ
ಲಂಗೆ ಗಡಂ ಪೂಣ್ದು ರುಕ್ಮಿ ರುಕ್ಮಿಣಿಯಂ ಲ
ಗ್ನಂ ಗಡ ಸಮೀಪಮಾಂ ವಿಜ
ಯಾಂಗನೆವೆರಸಿಂದೆ ತಂದಪೆಂ ರುಕ್ಮಿಣಿಯಂ ೫೨

ಮನ್ಮಥನಿಗೆ ಜಗಳವುಂಟಾದರೆ, ಅವಳ ಮಂದಗಮನವು ಚೆಲುವಿನಿಂದ ಹಂಸದ ಗಮನವನ್ನೂ ಕೀಳಾಗಿಸುವುದು. ೪೯. ಬ್ರಹ್ಮನು ರುಕ್ಮಿಣಿಯ ರೂಪದ ರೀತಿಯನ್ನು ಹಿಂದೆಯೇ ಕಂಡಿದ್ದರೆ, ಆ ಗೌರಿ ಶ್ರೀದೇವಿಯರ ಆಕೃತಿಯನ್ನು ಸಾಮಾನ್ಯವಾದುದು ಎನ್ನುವಂತೆ ಮಾಡುತ್ತಿರಲಿಲ್ಲ. ರುಕ್ಮಿಣಿ ಅನುಪಮಳು. ೫೦. ಆ ರಮಣೀಮಣಿಯನ್ನು ನಿನ್ನ ಮನಸ್ಸು ಮೋಹಿಸುವುದಾದರೆ ಅವಳಿಗೆ ಆಗಲೇ ಮನಸೋತಿರುವ ಬೇರೆಯ ವೈರಿಗೆ ನೀನು ಸೋಲನ್ನುಂಟುಮಾಡಬೇಕು. ಹೇಗೆಂದರೆ - ರುಕ್ಮಿಯು ಮಾಡುವ ಸ್ತುತಿಯಿಂದ ಶಿಶುಪಾಲನು ಆಗಲೇ ರುಕ್ಮಿಣಿಗೆ ಉಂಗುರವನ್ನಿತ್ತು ವಿವಾಹಕ್ಕೆ ಲಗ್ನವನ್ನು ನಿರೀಕ್ಷಿಸುತ್ತಿರುವನು. ಆದುದರಿಂದ ನೀನು ಇನ್ನು ಯಾರ ಸಹಾಯವನ್ನೂ ನಿರೀಕ್ಷಿಸದೆ ಇದಕ್ಕೆ ತಕ್ಕ ಉಪಾಯವನ್ನು ಯೋಚಿಸು, ಕೃಷ್ಣಾ! ೫೧. ಶಿಶುಪಾಲನ ಅಭೀಷ್ಟಸಿದ್ಧಿಯಾಗದಿರಲಿ, ನಿನಗೆ ರುಕ್ಮಿಣಿಯೊಡನೆ ವಿವಾಹಮಂಗಳವು ಬೆಳೆಯಲಿ. ಇದರಿಂದ ಪ್ರಪಂಚಕ್ಕೇ ಸಂತೋಷವಾಗಲಿ, ದೇವತೆಗಳ ಸಮೂಹಕ್ಕೆ ಆನಂದವುಂಟಾಗಲಿ" ವ|| ಎಂದು ಹರಸಿ ಕೃಷ್ಣನ ಅನುಜ್ಞೆಯಿಂದ ನಾರದಮುನಿಯು ಆಕಾಶವನ್ನಡರಿದನು. ೫೨. ಶ್ರೀಕೃಷ್ಣನು "ಆಹಾ! ರುಕ್ಮಿಯು ಪ್ರತಿಜ್ಞೆಮಾಡಿ, ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡುವನಂತೆ! ಲಗ್ನವು ಸಮೀಪದಲ್ಲಿ ಇರಲಿ. ನಾನು ವಿಜಯಲಕ್ಷ್ಮಿಯೊಡನೆ ರುಕ್ಮಿಣಿಯನ್ನೂ

---

೧. ಸೋಲವಿನ್ನಾರಿಗೆ (ಕಖಗ) ಸೋಲದೀ ನಾರಿಗೆ (ಮೂಲ)

ವ॥ ಎಂದು ಮನದೊಳೆ ಮಂತಣಮಿರ್ದು

ಗೃಹರಕ್ಷೆಗೆ ಸಾತ್ಯಕಿಯಂ
ಮಹೀಧರಂ ನಿಲಿಸಿ ತಳರ್ದನಗ್ರಜಸಹಿತಂ
ಬಹಿರುದ್ಯಾನಾಲೋಕ
ಸ್ಪೃಹೆಯಿಂ ತಳರ್ವಂತು ರುಕ್ಮಿಣೀಹರಣಾರ್ಥಂ ೫೩

ವ॥ ಅಂತು ತಳರ್ದು ಪರಿಣಯೋತ್ಸವೋತ್ಸುಕನಾಗಿ ಶಿಶುಪಾಲದಾನವಂ ಬಂದಿರ್ದ ಭೀಷ್ಮಕಪುರಕ್ಕಭಿಮುಖನಾಗಿ

ಅನಿಲಜವಂ ಗರುಡಜವಂ
ಮನೋಜವಂ ಕಿಱಿದು ತನ್ನ ಜವದಿಂದೆನೆ ಕುಂ
ಡಿನಪುರದ ಬಹಿರ್ವನಮಂ
ದನುಜಾರಿ ವರೂಥಮೆಯ್ದೆವರ್ಪವಸರದೊಳ್ ೫೪

ಪೊದೆಯಿಸಿದತ್ತೊ ಚಿತ್ರಪಟದಿಂ ಪರಿನಿರ್ಮಿಸಿದತ್ತೊ ಪಂಚರ
ತ್ನದಿನಮರೇಂದ್ರಚಾಪನಿಕುರುಂಬಕದಿಂ ಪೆಣೆದತ್ತೊ ಚಿತ್ರಮಿಂ
ತಿದು ಬಗೆಗೆಂಬಿನಂ ತಳಿರ ಪೂವಿನ ತುಂಬಿಯ ಕಾಯ ಪಣ್ಣ ಬ
ಣ್ಣದಿನೆಸೆದತ್ತು ಕೀರಪಿಕಹಂಸನಿನಾದವಿಡಂಬನಂ ಬನಂ ೫೫

ವ॥ ಆ ಮನೋಹರೋದ್ಯಾನಮಂ ಪೊಕ್ಕು ಪಂಕಜಾಕ್ಷಂ ನಿರೀಕ್ಷಿಸುತುಂ ಬರ್ಪಲ್ಲಿ

ಇಂದೇ ತರುವೆನು." ವ॥ ಎಂದು ಮನಸ್ಸಿನಲ್ಲೇ ಮಂತ್ರಾಲೋಚನೆಯನ್ನು ಮಾಡಿದನು. ೫೩. ಕೃಷ್ಣನು ಗೃಹರಕ್ಷಣೆಗೆ ಸಾತ್ಯಕಿಯನ್ನು ನಿಲ್ಲಿಸಿ ಅಣ್ಣ ಬಲರಾಮನೊಡನೆ ರುಕ್ಮಿಣಿಯನ್ನು ಅಪಹರಿಸಿಕೊಂಡು ಬರುವುದಕ್ಕಾಗಿ ಕುಂಡಿನಪುರದ ಹೊರಗಿನ ಉದ್ಯಾನವನ್ನು ನೋಡುವ ಇಚ್ಛೆಯಿಂದ ಹೋಗುವವನಂತೆ, ಕುಂಡಿನಪುರಕ್ಕೆ ನಡೆದನು. ವ॥ ಹಾಗೆ ಹೊರಟು ವಿವಾಹೋತ್ಸುಕನಾಗಿ ಶಿಶುಪಾಲರಾಕ್ಷಸನು ಬಂದಿದ್ದ ಭೀಷ್ಮಕನ ಪುರಕ್ಕೆ ಅಭಿಮುಖನಾಗಿ ೫೪. ವಾಯುವೇಗವೂ ಗರುಡನ ವೇಗವೂ ಮನೋವೇಗವೂ ತನ್ನ ವೇಗದಿಂದ ಕಡಿಮೆ ಎನ್ನುವಂತೆ ಕೃಷ್ಣನ ರಥವು ವೇಗದಿಂದ ನಡೆದು ಕುಂಡಿನಪುರದ ಹೊರಗಿನ ಉಪವನವನ್ನು ಸಮೀಪಿಸಿತು. ೫೫. ಚಿತ್ರಪಟವನ್ನು ಹೊದಿಸಿದೆಯೋ? ಪಂಚರತ್ನಗಳಿಂದ ನಿರ್ಮಿತವಾಗಿದೆಯೋ ಕಾಮನಬಿಲ್ಲುಗಳಿಂದ ಹೆಣೆಯಲ್ಪಟ್ಟಿದೆಯೋ! ಇದು ಮನಸ್ಸಿಗೆ ವಿಚಿತ್ರವಾಗಿ ಕಾಣಿಸುತ್ತಿದೆ ಎನ್ನುವಂತೆ ಚಿಗುರು ಹೂ ತುಂಬಿ ಕಾಯಿ ಹಣ್ಣುಗಳ ಬಣ್ಣಗಳಿಂದಲೂ, ಗಿಳಿ ಕೋಗಿಲೆ ಹಂಸೆಗಳ ಧ್ವನಿಯಿಂದಲೂ ಕೂಡಿದ ಬೆಡಗಿನ ಆ ವನವು ಮನೋಹರವಾಗಿದ್ದಿತು. ವ॥ ಕೃಷ್ಣನು ಆ ಉದ್ಯಾನವನವನ್ನು ಪ್ರವೇಶಿಸಿ ನೋಡುತ್ತ

ಪಾವನವನದೊಳ್ ನಿರ್ಮಲ
ಜೀವನವನಜಾತಷಂಡಮಾರುತಲೀಲಾ
ಧಾವನವನಮಧ್ಯಮದೇಂ
ದೇವನ ವನಮಾಲೆಯಂ ತೆಱಂಬೊಳಯಿಸಿತೋ ೫೬

ಲಳಿತಗತಿಕ್ರಿಯೋತ್ಸವದಿನೊಪ್ಪುವ ಪಾಂಡುರಪಕ್ಷಪಕ್ಷದಿಂ
ಕಳರುತಿವೀಱುತಿರ್ಪ ಕಳಹಂಸಕದಂಬಕಚಕ್ರಚಕ್ರದಿಂ
ಬಳದಳಿವಿಂದು ಬಂದೆಳಸುತಿರ್ಪ ಚಳಜ್ಜಳಜಾತಜಾತದಿಂ
ವಿಳಸಿತವಾದುದಂ ನಲಿದು ನೋಡಿದನಂಬುಜಷಂಡಷಂಡಮಂ ೫೭

ವ|| ಆ ಸರೋವರದೊಳ್

ವರವರಧವಳಾಂಗದ್ಯುತಿ
ಚರಚರದೂರ್ಮಿಸ್ಫುಟತಟೋಜ್ಜ್ವಲಫೇನೋ
ತ್ಕರಕರದೊಳ್ [೧]ತಡೆವಾಯಿರೆ
ಪರಿ ಪರಿರಂಜಿಸುವುದೊಂದು ಕೊಳನಂ ಕಂಡಂ ೫೮

ಕೇಸರಸರ ಸರಜಃಪರಿ
ಧೂಸರಸರಮಂ ನಿರೀಕ್ಷಿಸಲ್ ಯದುವಂಶಾ
ಗ್ರೇಸರ ಸರಭಸನಯನಂ
ವಾಸರ ಸರಸಿರುಹದಂತಿರೊಪ್ಪಿದುದಾಗಳ್ ೫೯

ಬರುವಲ್ಲಿ ೫೬. ಪರಿಶುದ್ಧವಾದ ವನದಲ್ಲಿ ನಿರ್ಮಲವಾದ ನೀರಿನಿಂದ ತುಂಬಿದ ತಾವರೆಕೊಳವುಳ್ಳುದೂ ವಾಯುವು ಲೀಲೆಯಿಂದ ಚಲಿಸುವುದೂ ಆದ ಮಧ್ಯಭಾಗವು ಕೃಷ್ಣನ ವನಮಾಲೆಯನ್ನು ಹೆಚ್ಚಾಗಿ ಹೊಳೆಯುವಂತೆ ಮಾಡಿತು. ೫೭. ಲಲಿತವಾಗಿ ಸಂಚರಿಸುತ್ತ ಸಂತೋಷದಿಂದ ಚೆನ್ನಾಗಿರುವ ಬಿಳಿಯ ರೆಕ್ಕೆಗಳ ಹಕ್ಕಿಗಳ ಗುಂಪಿನಿಂದಲೂ ಅವ್ಯಕ್ತ ಮಧುರವಾದ ಧ್ವನಿಯನ್ನು ಮಾಡುತ್ತಿರುವ ಹಂಸಗಳಿಂದಲೂ ಬೆಳೆದಿರುವ ತುಂಬಿಗಳ ಗುಂಪು ಬಂದು ಅಪೇಕ್ಷಿಸುತ್ತಿರುವ ಚಲಿಸುವ ಕಮಲಪುಷ್ಪಗಳಿಂದಲೂ ಒಪ್ಪುವ ಅನೇಕ ಸರೋವರಗಳನ್ನು ಕೃಷ್ಣನು ನೋಡಿದನು. ವ|| ಆ ಸರೋವರದಲ್ಲಿ ೫೮. ಉತ್ತಮೋತ್ತಮವಾಗಿ ಬೆಳ್ಳಗಿರುವ (ಹಂಸಗಳ ಮತ್ತು ಬಿಳಿಯ ಕಮಲಗಳ) ದೇಹಕಾಂತಿಯು ಹೆಚ್ಚಾಗಿ ಚಲಿಸುವ ಅಲೆಗಳು ಎತ್ತಿ ದಡಕ್ಕೆ ತಳ್ಳಿರುವ ಬೆಳ್ಳಗೆ ಹೊಳೆಯುವ ನೊರೆಯ ಅನೇಕ ರಾಶಿಗಳಿಗೆ ಸಮವಾಗಿರುವ ಒಂದು ಕೊಳವನ್ನು ಕಂಡನು. ೫೯. ರಸಭರಿತವಾದ ಕೇಸರಗಳ ಧೂಳಿನಿಂದ ಎಲ್ಲ ಕಡೆಯೂ ಅದೇ ಬಣ್ಣವುಳ್ಳುದಾದ ಆ ಸರೋವರನ್ನು ನೋಡುವುದರಲ್ಲಿ ತ್ವರೆಯುಳ್ಳ ಆ ಯದುವಂಶಾಗ್ರೇಸರನ ಕಣ್ಣು ಹಗಲಿನ ಕಮಲದಂತೆ ವಿಕಾಸಗೊಂಡು ಒಪ್ಪುತ್ತಿದ್ದಿತು.

---

೧. ತಡವಾಯಿಂ (ಖ)

ಸಾರಸರಸವದ್ಧ್ವನಿಯಿಂ
ನೀರಜರಜದಿಂ ಮದಾಳಿಗಳ ಗಳರುತಿಯಿಂ
ಸೌರಭರಭಸದಿನದು ಸಂ
ಚಾರಣರಣದೂರ್ಮಿ ಪದ್ಮವನವನಮಧ್ಯಂ ೬೦

ಒಸೆದೇಂ ನೋಡಿದನೋ ಮುರಾರಿ ಲಹರೀಸಂಘಾತಸಂಘಾತದಿಂ
ದೆಸೆಯೊಳ್ ಸೀರ್ಪನಿ ಸೂಸುತಿರ್ಪ ವಿಚಳತ್ಪತ್ರಾಳಿಪತ್ರಾಳಿಯಿಂ
ಬಿಸಜಂಗಳ್ ಮಲರ್ದೊಪ್ಪುತಿರ್ಪ ಜಗತೀಪಾನೀಯಪಾನೀಯದಿಂ
ಜಸಮಂ ತಾಳ್ದಿದ ಮಾನಸಾಬ್ಜವನಶಂಕಾಸಾರಕಾಸಾರಮಂ ೬೧

ದೇಸೆವಡೆದತ್ತು ರತ್ನಶಿ
ಳಾಸೋಪಾನದಿನಪಾರಸಾರಸರವದಿಂ
ಕಾಸಾರಮೂರ್ಮಿಜಳಕಳಿ
ಕಾ[1]ಸಾರೋಪಾಂತ ಪುಷ್ಪಕಳಿಕಾಸಾರಂ ೬೨

ಕೌತುಕಮೆನೆ ಪಾಱುವುದಳಿ
ನೀತತಿ ಹಂಸಂ ರಥಾಂಗಮೀ ತಾವರೆಯಿಂ
ದಾ ತಾವರೆಗೀ ತಡಿಯಿಂ
ದಾ ತಡಿಗೀ ಪುಳಿನದಿಂದವಾ ಪುಳಿನಕ್ಕಂ ೬೩

೬೦. ಕಮಲಗಳ ಸಮೂಹದಿಂದ ಅಮೃತವಾದ ಆ ಕೊಳದ ನೀರಿನ ಮಧ್ಯಪ್ರದೇಶವು ಸಾರಸಪಕ್ಷಿಗಳ ಮಧುರಧ್ವನಿಯಿಂದಲೂ ತಾವರೆಯ ಹೂವಿನ ಧೂಳಿನಿಂದಲೂ ಮದಿಸಿದ ತುಂಬಿಗಳ ಝೇಂಕಾರದಿಂದಲೂ ಸುವಾಸನೆಯ ಹೆಚ್ಚಿಕೆಯಿಂದಲೂ ಸಂಚರಿಸುತ್ತ ಶಬ್ದಮಾಡುವ ಅಲೆಗಳಿಂದಲೂ ಚೆನ್ನಾಗಿರುವುದು. ೬೧. ಅಲೆಗಳ ಸಮೂಹದ ಪರಸ್ಪರ ಹೊಡೆತದಿಂದ ಏಳುವ ತುಂತುರು ಹನಿಗಳನ್ನು ದಿಕ್ಕು ದಿಕ್ಕಿಗೆ ಎರಚುತ್ತ; ಹೆಚ್ಚಾಗಿ ಚಲಿಸುವ ಕಮಲದೆಲೆ ಮತ್ತು ತುಂಬಿಗಳಿಂದಲೂ, ಅರಳಿ ಚೆನ್ನಾಗಿರುವ ತಾವರೆಯ ಹೂಗಳಿಂದಲೂ, ಲೋಕಕ್ಕೆ ಬೇಕಾದಷ್ಟು ಕುಡಿಯುವುದಕ್ಕೆ ಯೋಗ್ಯವಾದ ನೀರಿನಿಂದಲೂ ಕೂಡಿ, ಕೀರ್ತಿಯನ್ನು ಪಡೆದ ಮಾನಸ ಸರೋವರವೆಂಬ ಶಂಕೆಯನ್ನುಂಟುಮಾಡುತ್ತಿರುವ ಆ ಸರೋವರವನ್ನು ಕೃಷ್ಣನು ಅದೆಷ್ಟು ಆಸಕ್ತಿಯಿಂದ ನೋಡಿದನೊ! ೬೨. ಆ ಸರೋವರವು, ರತ್ನಶಿಲೆಗಳ ಸೋಪಾನದಿಂದಲೂ, ಅಪಾರವಾದ ಸಾರಸಪಕ್ಷಿಗಳ ಧ್ವನಿಯಿಂದಲೂ, ಅಲೆಗಳಿಂದ ಮೇಲಕ್ಕೆ ಹಾರಿದ ಮೊಗ್ಗುಗಳಂತಿರುವ ನೀರಿನ ಹನಿಗಳಿಂದ ಸಮೀಪದ ಮರಗಳ ಹೂ ಮೊಗ್ಗುಗಳ ಸಾರವನ್ನು ಹೆಚ್ಚಿಸುತ್ತಿರುವುದರಿಂದಲೂ ಸೊಗಸಾಗಿದ್ದಿತು. ೬೩. ಅಲ್ಲಿ ಹೆಣ್ಣು ತುಂಬಿಗಳ ಹಂಸೆಗಳ ಮತ್ತು ಚಕ್ರವಾಕಗಳ ಗುಂಪುಗಳು ಈ ತಾವರೆಯಿಂದ ಆ ತಾವರೆಗೂ ಈ ದಡದಿಂದ ಆ ದಡಕ್ಕೂ ಒಂದು ಮಳಲದಿಣ್ಣೆಯಿಂದ

೧. ಸಾರೋಂತರದ (ಖ) ಸಾರೋನ್ನತದ (ಗ)

ವ|| ಆ ಪುಂಡರೀಕಷಂಡಮಂ ಪುಂಡರೀಕಲೋಚನಂ ಕಂಡು ಮನಂಗೊಂಡು

ಸರಸಿಯೊಳಪೊಕ್ಕು ಪದನಖ
ಕಿರಣದಿನಿರ್ಮಡಿಸಿ ಜಲಮನಾಸ್ಯಾಂಬುಜದಿಂ
ಪರಿಮಳವನಿತ್ತು ವಾರಿಗೆ
ಕರದೊಳ್ ಲೀಲಾಬ್ಜಮೆಸೆಯೆ ಪೊಱಮಟ್ಟಾಗಳ್ ೬೪

ಕಲಕೀರಾಲಾಪಮಂ ಕೋಕಿಲಕಲರವಮಂ ಭೃಂಗಝುಂಕಾರಮಂ ಚಂ
ಚಲಕಾಂಚೀಕೂಜಿತಂ ಕಂಕಣಝುಣಝುಣಿತಂ ಸಿಂಜಿನೀಸಿಂಜಿತಂ ಮಾ
ರ್ಮಲೆಯುತ್ತುಂ ಕಂತುಸೇನಾಕಳಕಳರುತಿಯಿಂದೆತ್ತಲುದ್ಯಾನಮುಂ ತೀ
ವಲದಂ ಕೇಳ್ದಂಗನಾಭೂಷಣರಣಿತಮಿದೇನೆಂದು ವಿಭ್ರಾಂತನಾದಂ ೬೫

ವ|| ಅಂತು ವಿಸ್ಮಿತಸ್ವಾಂತನಾಗಿ ವನಮಾಲಿ ತನ್ನ ಸಮೀಪದೊಳಿರ್ದ ವನಪಾಲನಂ ಸ್ನಿಗ್ಧಮಧುರಾಲೋಕನವಾಕ್ಯಂಗಳಿಂ ಸಂಭಾಷಿಸಿ ಬೞಿಯಂ ಮತ್ತಿಂತೆಂದಂ

ವಿವಿಧಾಲಂಕೃತನಿಸ್ವನಂ ನೆಗೞ್ವಿನಂ ಭೃಂಗೋತ್ಕರಂ ಬೆರ್ಚಿ ಪಾ
ಱುವಿನಂ ಪುಷ್ಪಪರಾಗಮಲ್ಲುಗುವಿನಂ ಪೂದೊಂಗಲಲ್ಲಾಡಿ ತೋ
ಱುವಿನಂ ಕಣ್ಮಲರ್ವೆಳ್ಪು ಕೆಂದಳದ ಕೆಂಪೋರೊಂದನೊಟ್ಟೈಸಿ ಪೊ
ಣ್ಮುವಿನಂ ಲೀಲೆಯಿನಾ ಪ್ರದೇಶದೊಳದಾರ್ ತನ್ವಂಗಿಯರ್ ಕ್ರೀಡಿಪರ್ ೬೬

ಮತ್ತೊಂದು ಮಳಲದಿಣ್ಣೆಗೂ ಆಶ್ಚರ್ಯವೆನ್ನುವಂತೆ ತ್ವರೆಯಿಂದ ಹಾರುವುವು. ವ|| ಪುಂಡರೀಕಾಕ್ಷನು ಆ ಬೆಳ್ದಾವರೆಯ ಕೊಳವನ್ನು ಮನಸ್ಸಿಟ್ಟು ನೋಡಿದನು. ೬೪. ಕೊಳದ ಒಳಕ್ಕಿಳಿದು ತನ್ನ ಕಾಲುಗುರುಗಳ ಹೊಳಪಿನಿಂದ ನೀರಿನ ಹೊಳಪನ್ನು ಇಮ್ಮಡಿಸಿದನು. ಮುಖಕಮಲದಿಂದ ನೀರಿಗೆ ಪರಿಮಳವನ್ನುಂಟುಮಾಡಿದನು. ಲೀಲಾ ಕಮಲವೊಂದನ್ನು ಕೈಯಲ್ಲಿ ಹಿಡಿದುಕೊಂಡು ಹೊಳೆಯಿಸುತ್ತ ಕೊಳದಿಂದ ಹೊರಟನು. ೬೫. ಅಷ್ಟರಲ್ಲಿ, ಚಲಿಸುವ ವಡ್ಯಾಣದ ಧ್ವನಿಯು ಗಿಳಿಗಳ ಮಾತನ್ನೂ ಕೈ ಬಳೆಗಳ ಝುಣ ಝುಣಶಬ್ದವು ಕೋಗಿಲೆಯ ಧ್ವನಿಯನ್ನೂ ಕಾಲಂದುಗೆಯ ಶಬ್ದವು ತುಂಬಿಗಳ ಝೇಂಕಾರವನ್ನೂ ಪ್ರತಿಭಟಿಸುತ್ತ ಮನ್ಮಥನ ಸೇನೆಯ ಕಲಕಲ ಶಬ್ದವು ಉದ್ಯಾನವನ್ನೆತ್ತಲೂ ತುಂಬಿತು. ಅದನ್ನು ಕೇಳಿ, ಕೃಷ್ಣನು 'ಅಂಗನೆಯರ ಆಭರಣಗಳ ಧ್ವನಿಯು ಇದೇನು! ಇಲ್ಲಿ! ಎಂದು ವಿಭ್ರಾಂತನಾದನು. ವ|| ಹಾಗೆ ವಿಸ್ಮಯಗೊಂಡ ಕೃಷ್ಣನು ತನ್ನ ಸಮೀಪದಲ್ಲಿದ್ದ ವನಪಾಲಕನನ್ನು ಮೃದು ಮಧುರದೃಷ್ಟಿವಾಕ್ಯಗಳಿಂದ ಸಂಭಾಷಿಸಿ, ಕೇಳಿದನು. ೬೬. "ವಿಧವಿಧವಾದ ಆಭರಣಗಳ ಶಬ್ದವು ಹೆಚ್ಚುತ್ತಿದೆ, ತುಂಬಿಗಳು ಹೆದರಿ ಹಾರುತ್ತಿವೆ. ಧೂಳು ಉದರುವಂತೆ ಹೂ ಗೊಂಚಲು ಅಲುಗಾಡುತ್ತಿದೆ. ನೇತ್ರಕಮಲದ ಬಿಳುಪೂ ಅಂಗೈಗಳ ಕೆಂಪೂ ಒಂದರೊಡನೊಂದು ಸೇರಿ ಹೆಚ್ಚುತ್ತಿದೆ. ಹೀಗಾಗುವಂತೆ ವಿನೋದದಿಂದ ಅಲ್ಲಿ ಆಟವಾಡುವ ಆ ಕೃಶಾಂಗಿಯರು ಯಾರು?"

ವ|| ಎಂದು ಬೆಸಗೊಳ್ವುದುಂ [೧]ಚಕ್ರಿಗವಕ್ರಶೀಲಂ ವನಪಾಲನಿಂತೆಂದಂ, ಆ ಕುಸುಮಿತವನಾಂತರದೊಳ್ ಕತಿಪಯಪರಿಚಾರಿಕಾಸಖೀಜನಂಬೆರಸು ಭೀಷ್ಮಕರಾಜಪುತ್ರಿ ರುಕ್ಮಿಣೀದೇವಿ ಪುಷ್ಪಾಪಚಯವಿನೋದಮಂ ನೆಗೞುತಿರ್ದಪಳ್, ಆ ಮಂದಗಮನೆ ಲೀಲೆಯಿಂದೀಗಳೀ ಪೂಗೊಳಕ್ಕೆ ಬರ್ಪಳೆಂದು ಬಿನ್ನವಿಸುತಿರ್ಪನ್ನೆಗಂ

ಚಾರುಲತಾವನಾಂತರದೊಳೋರಗೆಪೂಗಳನಾಯ್ದು ಕೊಯ್ದಳಂ
ಕಾರಮನಾ ಲತಾಂತತತಿಯಿಂ ಸಮೆದಾಂತ ಬೆಡಂಗು ಕಣ್ಗೊಳಲ್
ವಾರವಿಳಾಸಿನೀತತಿ ಲತಾವನದಿಂ [೨]ಪೊಱಮಟ್ಟುದಂದು ಸಂ
ಚಾರಿಲತಾವನಂ ವನಲತಾವನದಿಂ ಪೊಱಮಟ್ಟುದೆಂಬಿನಂ ೬೭

ಅಮಿತವಿಳಾಸದಿಂ ಮದನಭೂಭುಜನೋಲಗದಂಗನಾಸಮೂ
ಹಮನಿೞಿಪಂಗನಾಸಮಿತಿ ಸುತ್ತಲುಮೆಯ್ತರೆ ಬರ್ಪ ರುಕ್ಮಿಣೀ
ರಮಣಿ ವಿಲೋಚನೋತ್ಸವಮನಿತ್ತಳುಪೇಂದ್ರನೊಳಂಗಜನ್ಮಜಂ
ಗಮಲತಿಕಾವನಂಬೆರಸು ಬಂದಪಳೋ ವನದೇವಿಯೆಂಬಿನಂ ೬೮

ವನಿತಾರತ್ನದ [೩]ರೂಪಮೀಕ್ಷಿಸಲೊಡಂ ಲಾವಣ್ಯಮುಂ ಮುಂಚಲಿ
ಲ್ಲೆನೆ ಕೃಷ್ಣೇಕ್ಷಣದೊಳ್ ತುಳುಂಕಿ ಬೞಿಯಂ ಭೃಂಗಾಕಾನೀಕದಿಂ
ವನಜಾತಾನನದಿಂ ರಥಾಂಗಕುಚದಿಂ [೪]ಮೀನಾಕ್ಷಿಯಿಂದಿತ್ತುದಾ
ವನಜಾಕ್ಷಂಗೆ ಮನೋಜಜಂಗಮಸರಶ್ರೀಯೆಂಬ ವಿಭ್ರಾಂತಿಯಂ ೬೯

ವ|| ಎಂದು ಕೇಳಿದನು. ಸರಳ ಸ್ವಭಾವದ ಆ ವನಪಾಲಕನು ಕೃಷ್ಣನಿಗೆ ಹೀಗೆಂದನು: "ಹೂಬಿಟ್ಟ ಮರ ಗಿಡ ಬಳ್ಳಿಗಳ ನಡುವೆ ಕೆಲವರು ಪರಿಚಾರಿಕೆಯರ ಮತ್ತು ಸಖಿಗಳ ಒಡಗೂಡಿ, ಭೀಷ್ಮಕ ರಾಜಪುತ್ರಿ ರುಕ್ಮಿಣೀದೇವಿಯು ಹೂ ಕೊಯ್ಯುವ ಆಟವನ್ನಾಡುತ್ತಿರುವಳು. ಆ ಮಂದಗಮನೆ ಲೀಲೆಯಿಂದ ಈಗ ಈ ಹೂವಿನ ಕೊಳಕ್ಕೆ ಬರುವಳು" ಎಂದು ಬಿನ್ನೈಸಿದನು. ಅಷ್ಟರಲ್ಲಿ ೬೭. ಮನೋಹರವಾದ ಲತೆಗಳ ಉದ್ಯಾನವನದಿಂದ ಸರಿಯಾದ ಹೂಗಳನ್ನು ಆರಿಸಿ ಕೊಯ್ದು ಅವನ್ನು ಆಭರಣಗಳಾಗುವಂತೆ ಕಟ್ಟಿ ಧರಿಸಿ, ಬೆಡಗು ಚೆನ್ನಾಗಿರುತ್ತಿರಲು ವಾರವಿಲಾಸಿನಿಯರ ಗುಂಪು, ಸಂಚರಿಸುವ ಬಳ್ಳಿಗಳ ಗುಂಪೇ ಆ ಲತಾವನದಿಂದ ಹೊರಟು ಈ ಮರಗಿಡಬಳ್ಳಿಗಳ ವನಕ್ಕೆ ಬರುತ್ತಿದೆಯೆನ್ನುವಂತೆ ಬಂದಿತು. ೬೮. ಮಿತಿಯಿಲ್ಲದ ಬೆಡಗಿನಿಂದ ಕೂಡಿದ ಮನ್ಮಥನ ಓಲಗದ ಅಂಗನೆಯರನ್ನು ತಿರಸ್ಕರಿಸುವ ಯುವತಿಯರು ಸುತ್ತಲೂ ಬರುತ್ತಿದ್ದರು. ಉಪೇಂದ್ರನ ಸಭೆಗೆ ಕಾಮನ ಚರಿಸುವ ಲತೆಗಳೊಡನೆ ವನದೇವಿಯೇ ಬಂದಳೋ ಎಂಬಂತೆ ಬಂದ ರುಕ್ಮಿಣೀದೇವಿ ಕೃಷ್ಣನ ಕಣ್ಣುಗಳಿಗೆ ಆನಂದವನ್ನುಂಟುಮಾಡಿದಳು. ೬೯. ರುಕ್ಮಿಣಿಯ ರೂಪವೂ ಲಾವಣ್ಯವೂ ಮಿಗಿಲಿಲ್ಲವೆಂಬಂತೆ ಕೃಷ್ಣನ ಕಣ್ಣಲ್ಲಿ ತುಂಬಿ ತುಳುಕಿತು. ಅಲ್ಲದೆ ತುಂಬಿಯಂತಹ ಮುಂಗುರುಳಿನಿಂದಲೂ ಕಮಲದಂತಹ ಮುಖದಿಂದಲೂ

೧. ಚಕ್ರಿಗೆ ವಕ್ರಶೀಲಂ (ಕಖಗ) ೨. ಪೊಱಮಟ್ಟು ಬಂದು (ಕಖಗ) ೩. ರೂಪನೀಕ್ಷಿಸಲೊಡಂ (ಕಖಗ) ೪. ಮೀನಾಕ್ಷಿಯಿಂದಿತ್ತಳಾ (ಕಖಗ)

ಅಲಕಂ ತುಂಬಿ ತಳಂ ತಳಿರ್ ತೊಡೆ ಮಡಲ್ ತೋಳ್ ಶಾಖೆ ಸುಯ್ಗಂಪು ಕಂ
ಪಲರ್ಗಣ್ಗೊಪ್ಪುವಲರ್ ಮುಗುಳ್ನಗೆ ಮುಗುಳ್ ಬಿಂಬಾಧರಂ ಪಣ್ಣೆನಿ
ಪ್ಪ ಲತಾಂಗೀತನುಚೂತವಲ್ಲರಿಯೊಳಂದೆಕ್ಕೆಕ್ಕೆಯಿಂ ನಾಟಕಂ
ನಲಿಯುತ್ತಿರ್ದುವು ನೇತ್ರಷಟ್ಪದಮನಃಕೀರಂಗಳಾ ಕೃಷ್ಣನಾ ೭೦

ವII ಅಂತು ವನರುಹಾಕ್ಷನಾ ಮನೋಹರಿಯಂ ನಿರೀಕ್ಷಿಸುತಿರ್ದು ನಿಜಾಂತರಂಗದೊಳ್

ಪಡೆದಂ ಪದ್ಮಜನೆಂತೊ ಭೂಷಣಕೆ ಭೂಷಾಲಕ್ಷ್ಮಿಯಂ ಜವ್ವನ
ಕ್ಕಡಕಿಲ್ವವ್ವನಮಂ ವಿರಾಜಿಸುವ ಲಾವಣ್ಯಕ್ಕೆ ಲಾವಣ್ಯಮಂ
ಪಡೆದಿರೂಪಿನ ಕೋಮಲಾಂಗಿಯನೆನಲ್ ಮಚ್ಚಿತ್ತದೊಳ್ ಸೋಲಮಂ
ಪಡೆದುಂ ಮಾಣ್ದಳೆ ದರ್ಪಕಂಗೆ ಪಡೆದಳ್ ದುರ್ವಾರದೋರ್ಗರ್ವಮಂ ೭೧

ಸುದತೀರತ್ನದ ರೂಪಮೆನ್ನ ಬಗೆಗಾದಂ ಸೋಲಮಂ [1]ತಂದು ತಂ
ದುದು ಕೂರ್ಪಂ ಭುಜದರ್ಪಮಂ ಕುಸುಮಬಾಣಕ್ಕಂ ಮನೋಜಂಗಮಿಂ
ತಿದವಶ್ಯಂ ಸ್ಮರವಶ್ಯವಿದ್ಯೆಯೆ ವರ[2]ಸ್ತ್ರೀರೂಪಮಂ ನಾಡೆ ಪೆ
ತ್ತುದಗುರ್ವಂ [3]ಪೆಱತಾವುದಾದೊಡೆನಗಿಂತೀ ಸೋಲವೀ ಕಾಂತೆಯಿಂ ೭೨

ಚಕ್ರವಾಕದಂತಿರುವ ಸ್ತನದಿಂದಲೂ ಮೀನಿನಂತಿರುವ ಕಣ್ಣಿನಿಂದಲೂ, ಆಕೆಯ ರೂಪವು ಕೃಷ್ಣನಿಗೆ ಮನ್ಮಥನ ಚರಿಸುವ ಸರೋವರದ ಶ್ರೀಯೆನ್ನುವ ವಿಭ್ರಾಂತಿಯನ್ನುಂಟುಮಾಡಿತು. ೭೦. ರುಕ್ಮಿಣಿಯ ಮುಂಗುರುಳೇ ತುಂಬಿ, ಅಂಗಯ್ಯೇ ಚಿಗುರು, ತೊಡೆ ಕಾಂಡ, ತೋಳುಗಳೇ ಕೊಂಬೆಗಳು, ಕಣ್ಣೇ ಹೂವು, ಉಸಿರೇ ಹೂವಿನ ಸುವಾಸನೆ, ಮುಗುಳು ನಗುವೇ ಮೊಗ್ಗು ಹೂ, ತೊಂಡೆಯ ಹಣ್ಣಿನಂತಿರುವ ತುಟಿಗಳೇ ಹಣ್ಣುಗಳು ಎನಿಸಿಕೊಂಡ ಆ ಲತಾಂಗಿಯ ದೇಹವೆಂಬ ಮಾವಿನ ಬಳ್ಳಿಯಲ್ಲಿ ಆಗ ಕೃಷ್ಣನ ಕಣ್ಣುಗಳೆಂಬ ತುಂಬಿಗಳೂ ಮನಸ್ಸೆಂಬ ಗಿಳಿಗಳೂ ಒಟ್ಟೊಟ್ಟಿಗೆ ನಾಟಕವಾಡಿ ನಲಿದವು. ವII ಆ ಕಮಲಾಕ್ಷನು ಆ ಮನೋಹರೆಯನ್ನು ಚೆನ್ನಾಗಿ ನೋಡುತ್ತಿದ್ದು, ತನ್ನ ಅಂತರಂಗದಲ್ಲಿ ೭೧. "ಬ್ರಹ್ಮನು ಭೂಷಣಕ್ಕೆ ಭೂಷಾಲಕ್ಷ್ಮಿಯೂ, ಯೌವನಕ್ಕೆ ಅಡಕುಯೌವನವೂ ಹೊಳೆಯುವ ಲಾವಣ್ಯಕ್ಕೆ ಲಾವಣ್ಯವೂ ಆಗಿರುವ ಈ ರೂಪದ ಈ ಕೋಮಲಾಂಗಿಯನ್ನು ಹೇಗೆ ಸೃಷ್ಟಿಸಿದನೋ! ನನ್ನ ಮನಸ್ಸಿಗೆ ಸೋಲವನ್ನುಂಟುಮಾಡಿ ಅಷ್ಟಕ್ಕೇ ಬಿಡದೆ ಇವಳು ಕಾಮನಿಗೆ ದುರ್ಜಯ ವಾದ ತೋಳಿನ ಬಲಗರ್ವವನ್ನೂ ಉಂಟುಮಾಡಿದಳು. ೭೨. ಈ ಸುಂದರೀಮಣಿಯ ರೂಪವು, ನನ್ನ ಮನಸ್ಸನ್ನು ಪೂರ್ಣವಾಗಿ ಸೋಲಿಸಿ, ಮನ್ಮಥನಿಗೆ ಭುಜದರ್ಪವನ್ನೂ ಅವನ ಬಾಣಕ್ಕೆ ಹರಿತವನ್ನೂ ಉಂಟುಮಾಡಿದೆ. ನಿಜವಾಗಿಯೂ ಮನ್ಮಥನ ವಶ್ಯವಿದ್ಯೆಯೇ ಉತ್ತಮವಾದ ಈ ಸ್ತ್ರೀರೂಪವನ್ನು ಸರಿಯಾಗಿ ಧರಿಸಿ ಅತಿಶಯವನ್ನು ಪಡೆದಿದೆ,

---

೧. ತಂದುದಿಂತೆದೆಯಾರ್ಪಂ ಭುಜದರ್ಪಮಂ ಸಹಸಮಂ ಮಿಕ್ಕುಂ (ಖ) ತಂದುದಿಂತಿದೆಯರ್ಪಂ ಭುಜದರ್ಪಮಂ ಕುಸುಮಬಾಣಕ್ಕಂ (ಗ) ೨. ಸ್ತ್ರೀರೂಪದಿಂ (ಮೊಲ) ೩. ಪೆಱತಾವುದಾದೊಡೆನಗೆಂತೀ (ಮೊಲ)

ಮದಭಾರಾಲಸಲೋಲನೇತ್ರೆ ಮದನೋದ್ಧತ್ತೇಜಮಂ ಕೊರ್ವಿ ಪ
ರ್ವಿದ ಲಾವಣ್ಯದ ತೇಜದಿಂಚತನುಸಾಮ್ರಾಜ್ಯಾಂಗಮಂ ಕೋಮಲಾಂ
ಗದಿನಂಗೋದ್ಭವಕೀರ್ತಿಕೌಮುದಿಯ ಬೆಳ್ಪಂ ಮೌಕ್ತಿಕಾಕಲ್ಪಕೌ
ಮುದಿಯಿಂ ತಾಂ ಗೆಲೆವಂದು ಗೆಲ್ದಪಳಪಾಂಗಾಲೋಕದಿಂ ಲೋಕಮಂ ೭೩

ವ|| ಎಂದಾ ಸೊಬಗರೂಪೆಯ ರೂಪಯೌವನವಿಳಾಸವಿಭ್ರಮಂಗಳಂ ಮನದೆ ಕೊಂಡು

ನೀಲಸರೋರುಹಾರುಣಸರೋರುಹಪಾಂಡುಸರೋರುಹಪ್ರಭಾ
ಮಾಲೆಯನೀಟ್ಟು[1]ಕೊಂಡದನೆ ಬೀಱಿದುದೀತನಪಾಂಗವೆಂಬಿನಂ
ಶ್ರೀಲಲನಾಧಿನಾಥನಧಿಕೋತ್ಸವದಿಂ ವಿಲಸತ್ತ್ರಿವರ್ಣಮಂ
ಲೋಲದಪಾಂಗ [2]ಮಾಲೆಯಿನನಂಗಲತಾಂಗಿಯ ಮೇಲೆ ಸೂಸಿದಂ ೭೪

ಶಂಬರವೈರಿ ತನ್ನೆಸೆವ ದೃಷ್ಟಿಸುಧಾರಸವೃಷ್ಟಿಯೊಳ್ ತಗು
ಳ್ದಂಬಿನ ವೃಷ್ಟಿಯಂ ಕಱಿವಿನಂ [3]ವನಮಾಲಿ ಕಟಾಕ್ಷಮಾಲೆಯಿಂ
ದಂಬುಜನೇತ್ರೆಯಂ ಬಳಸುಪಾಗಳನಂಗತರಂಗಿಣೀತರಂ
ಗಂ ಬಳಸಿರ್ದ ಪದ್ಮಿನಿಯ ಭಂಗಿಯನಾ ಲಲಿತಾಂಗಿ ತಾಳ್ದಿದಳ್ ೭೫

ಹಾಗಲ್ಲದೇ ಬೇರಾವುದಾದರೂ ಆಗಿದ್ದರೆ ನನಗೆ ಈ ಕಾಂತೆಯಿಂದ ಹೀಗೆ ಸೋಲು ಏಕಾಗುತ್ತಿದ್ದಿತು? ೭೩. ಮದಭಾರದಿಂದ ಚಂಚಲವಾದ ದೃಷ್ಟಿಯುಳ್ಳ ಇವಳು, ಮನ್ಮಥನ ಉತ್ತಮ ತೇಜಸ್ಸನ್ನು ಕೊಬ್ಬಿ ಹಬ್ಬಿದ ಲಾವಣ್ಯದ ತೇಜದಿಂದಲೂ, ಕಾಮಸಾಮ್ರಾಜ್ಯಾಂಗವನ್ನು, ಕೋಮಲಾಂಗದಿಂದಲೂ, ಕಾಮನ ಕೀರ್ತಿಯೆಂಬ ಬೆಳುದಿಂಗಳಿನ ಬಿಳುಪನ್ನು ಮುತ್ತಿನ ಆಭರಣಗಳ ಬೆಳುದಿಂಗಳಿಂದಲೂ ಗೆದ್ದು, ಕಡೆಗಣ್ಣಿನ ನೋಟದಿಂದ ಲೋಕವನ್ನೇ ಗೆಲ್ಲುವಳು". ವ|| ಎಂದು ಆ ಸುಂದರಿಯ ರೂಪಯೌವನ ವಿಳಾಸ ವಿಭ್ರಮಗಳನ್ನು ಮನಸ್ಸಿಗೆ ತಂದುಕೊಂಡು, ೭೪. ಕನ್ನೈದಿಲೆ ಕೆನ್ನೈದಿಲೆ ಬೆಳ್ದಾವರೆಗಳ ಕಾಂತಿಮಾಲೆಯನ್ನು ಈತನ ಕಡೆಗಣ್ಣು ವಶಪಡಿಸಿಕೊಂಡಿದೆ, ಅದನ್ನೇ ಬೀರುತ್ತಿದೆಯೆನ್ನುವಂತೆ ಶ್ರೀಕಾಂತ ಕೃಷ್ಣನು, ಅಧಿಕ ಸಂತೋಷದಿಂದ ಹೊಳೆಯುವ ತ್ರಿವರ್ಣದ ಕಡೆಗಣ್ಣಿನ ನೋಟದ ಪರಂಪರೆಯನ್ನು ಮನ್ಮಥನ ಲತಾಂಗಿಯಂತಿರುವ ಆ ರುಕ್ಮಿಣಿಯ ಮೇಲೆ ಬೀರಿದನು. ೭೫. ಮನ್ಮಥನು ತನ್ನ ಹೊಳೆಯುವ ದೃಷ್ಟಿಯ ಅಮೃತರಸ ವೃಷ್ಟಿಯೊಡಗೂಡಿದ ಬಾಣಗಳ ಮಳೆಯನ್ನು ಸುರಿಸುತ್ತಿರುವಲ್ಲಿ, ಕೃಷ್ಣನು ತನ್ನ ಕಡೆಗಣ್ಣಿನ ದರ್ಶನಮಾಲೆಯಿಂದ ಕಮಲನೇತ್ರೆಯಾದ ರುಕ್ಮಿಣಿಯನ್ನು ಸುತ್ತುಗಟ್ಟಿದಾಗ ಕಾಮನದಿಯ ಅಲೆಗಳು ಸುತ್ತುವರಿದ ಕಮಲಲತೆಯಂತೆ ಅವಳು ಕಾಣಿಸುತ್ತಿದ್ದಳು.

---

೧. ಕೊಂಡುವೆನೆ (ಕಖಗ) ೨. ಮಾಲೆಯ (ಕಖಗ) ೩. ವನಮಾಲೆ (ಕಗ)

ಮನಸಿಜನಂಬು ನಾಂಟೆ ತನುವಂ ಮನವೆಚ್ಚಱದಂತೆ ಪಾರಿಜಾ
ಕ್ಷನೊಳಿರೆ ರುಕ್ಮಿಣೀರಮಣಿ ಚಿತ್ರದ ಲೆಪ್ಪದ ಕಲ್ಲ ಪೆಣ್ಣ ರೂ
ಪೆನೆ ಮರವಟ್ಟಳಾವಳನನಂಗಶರಕ್ಕೆಡೆಮಾಡದಾವಳಂ
ನೆನೆಯಿಸಿ ಕಾಡದಾವಳನದಿರ್ಪದು ಕೃಷ್ಣನ ರೂಪವಿಭ್ರಮಂ ೭೬

ಅಸಿಯಳ ಲಜ್ಜಾಸಾಧ್ವಸ
ರಸಮಂ ಕಳೆದೊಲ್ದು ತನ್ನನೀಕ್ಷಿಸುವಂತೇಂ
ಬಸಮಾಗೆ ಮಾಡಿದುದೊ ಕ
ಣ್ಗೆಸೆವಾಕಾರಂ ಭುಜಂಗವೈರಿಧ್ವಜನಾ ೭೭

ಸ್ಮರನಂ ಕೂರ್ಪೇಱಿಸಲ್ ಸಾರ್ದಲರ್ಗಣೆ ಕಡುಕೂರ್ಪೇಱಿರಲ್ ತನ್ನ ಕೂರ್ಪಿಂ
ತರದಿಂದಂ ಮಿಂಚು ಮಿಂಚಂ ತುಡುಕಿ ಪಿಡಿದುದೋ ಕಾಮನಂಬಂಬನಟ್ಟುಂ
ಬರಿಗೊಂಡೆಟ್ಟಿಟ್ಟತೋ ಕೇದಗೆಯೆಸಳೆಸಳಂ ಕರ್ಚೆ ಪಾಱಿತ್ತೊ ಕೇಳ
ಚ್ಚರಿಯೆಂಬಂತಾಗೆ ನೀಳ್ದತ್ತವಳ ಧವಳನೇತ್ರತ್ರಿಭಾಗಾವಲೋಕಂ ೭೮

ಬಾಲೆಯ ನೇತ್ರದಿಂದಮರ್ದಿನೊಳ್ದೆರೆಮಾಲೆ ಪೊದಟ್ಟು ನೀಳ್ದು ಬಂ
ದೀ ಲಲಿತಾಂಗನಂ ಬಳಸಿದತ್ತೆನೆ ಕೃಷ್ಣನ ಮೇಲೆ ಬಾಲೆ ಕ
ಣ್ಗೋಲದಿನಂದು ಬಿತ್ತರಿಸಿದಳ್ ನಗೆವೀಱುವ ಮುದ್ದುವೀಱುವಾ
ಲೋಲಲತೆವೀಱು [೧]ವುಜ್ವಲತೆವೀಱುವ ಮುಗ್ಧಕಟಾಕ್ಷಮಾಲೆಯಂ ೭೯

೭೬. ಮನ್ಮಥಬಾಣವು ರುಕ್ಮಿಣಿಯ ದೇಹದಲ್ಲಿ ನಾಟಿದಾಗ ಅವಳ ಮನಸ್ಸು ಎಚ್ಚರಗೊಳ್ಳದಂತೆ ಕಮಲಾಕ್ಷನಲ್ಲಿ ನೆಲೆಸಿತು. ಆಗ ಅವಳು ಚಿತ್ರದ, ಲೆಪ್ಪದ, ಅಥವಾ ಕಲ್ಲಿನ ಸ್ತ್ರೀಯೆಂಬಂತೆ ಸ್ತಬ್ಧಳಾದಳು, ಕೃಷ್ಣನ ರೂಪವೂ, ಪ್ರೇಮಚೇಷ್ಟೆಯೂ, ಯಾವ ಯುವತಿಯನ್ನು ತಾನೆ ಕಾಮಬಾಣಕ್ಕೆ ಗುರಿಮಾಡದು?! ಜ್ಞಾಪಿಸಿಕೊಂಡು ನೋಯುವಂತೆ ಮಾಡದು? ನಡುಗಿಸದು?! ೭೭. ಗರುಡಧ್ವಜನ ನೇತ್ರಾನಂದಕರವಾದ ರೂಪವು ಆ ಕೃಶಾಂಗಿಯ ಲಜ್ಜಾಭಯರಸಗಳನ್ನು ಹೋಗಲಾಡಿಸಿ, ಅವಳು ಪ್ರೀತಿಪೂರ್ವಕವಾಗಿ ತನ್ನನ್ನು ನೋಡುವಂತೆ ಹೇಗೆ ವಶಪಡಿಸಿಕೊಂಡಿತೋ! ೭೮. ಮನ್ಮಥನ ಕಠಿನತೆಯನ್ನು ಹೆಚ್ಚಿಸುವುದಕ್ಕೆ ಸಾರಿದ ಹೂಬಾಣವು ಹರಿತವಾಗಿರಲು, ಅದು ತನ್ನ ತೀಕ್ಷ್ಣತೆಯಿಂದ ಮಿಂಚು ಮಿಂಚನ್ನು ತಟ್ಟನೆ ಹಿಡಿದುಕೊಂಡಿತೊ; ಕಾಮಬಾಣವು ಮತ್ತೊಂದು ಬಾಣವನ್ನು ಆಟವಾಡುತ್ತ ಅಟ್ಟಿಸಿಕೊಂಡು ಹಿಂಬಾಲಿಸಿ ಓಡುತ್ತಿದೆಯೋ, ಕೇದಗೆಯ ಗರಿ ಮತ್ತೊಂದು ಗರಿಯನ್ನು ಕಚ್ಚಿಕೊಂಡು ಹಾರುತ್ತಿದೆಯೋ ಎನ್ನುವಂತೆ ಆ ರುಕ್ಮಿಣಿಯ ಬಿಳಿಯ ಕಡೆಗಣ್ಣಿನ ನೋಟವು ಬಹಳ ನೀಳವಾಗಿ ಹಬ್ಬಿತು. ೭೯. ಆ ಬಾಲೆಯ ಕಣ್ಣಿನಿಂದ ಅಮೃತದ ಒಳ್ಳೆಯ ತೆರೆಯ ಸಾಲು ಹೆಚ್ಚಾಗಿ ಹರಿದು ಬಂದು, ಕೃಷ್ಣನನ್ನು ಬಳಸಿರುವುದೋ ಎನ್ನುವಂತೆ ಅವಳ ದೃಷ್ಟಿಯು ಸೋತು ನಿಲ್ಲುವಂತಾದುದರಿಂದ ನಗುವನ್ನೂ ಮುದ್ದನ್ನೂ

೧. ಉಜ್ವಲಿಕೆವೀಱುವ (ಕ) ಉಜ್ಜಳಿಕೆವೀಱುವ (ಗ)

ವ|| ಆ ಸಮಯದೊಳ್

ಅಂಗಜಮಾರ್ಗಣೌಘಮೆಱಗಿತ್ತೊ ಮನೋಜನುದಾತ್ತಕೀರ್ತಿ ಬೆ
ಳ್ಪಂಗೆಡೆದತ್ತೊ ದರ್ಪಕಸುಧಾರಸವೃಷ್ಟಿ ವಿಜೃಂಭಿಸಿತ್ತೊ ಚೆ
ಲ್ವಿಂಗೆಡೆಯಾ[1]ಗೆ ಬಿತ್ತರಿಸಿದಳ್ ಮುದಮಂ ಮದಮುಗ್ಧಸಸ್ಮಿತೋ
ದ್ಧಂಗುರಪಕ್ಷ್ಮಸಂಚಳಸುತೀಕ್ಷ್ಣ ವಳಕ್ಷಕಟಾಕ್ಷ[2]ಮಾಲೆಯಿಂ ೮೦

ವ|| ಆ ಸಮಯದೊಳ್

ಪದಪಿಂದೀಕೆಯ ರೂಪನೀಕ್ಷಿಸಲೊಡಂ ಕಣ್ಸೋಲವೆನ್ನೊಳ್ ಪೊದ
ಱ್ದುದವಿತ್ತೆಂಬಿನಿತಲ್ಲದೆನ್ನನಮರ್ದಿಂದೋಲಾಡಿಪಂತೀಕ್ಷಿಪೀ
ಪದದೊಳ್ ತನ್ನೊಡವಂದ ಪೂಗಣೆ ನಡಲ್ ಮಚ್ಚಿತ್ತಮಂ ನಟ್ಟಪಾಂ
ಗದ ಪಾಂಗಿಂದಮೆ ಕನ್ನೆ ಕನ್ನಡಿಸಿದಳ್ ತನ್ನೊಂದಭಿಪ್ರಾಯಮಂ ೮೧

ವ|| ಎಂದರವಿಂದಲೋಚನಂ ಮನದೊಳ್ ವಿಭಾವಿಸುತ್ತಿರ್ಪನ್ನೆಗಂ

ಮನಮೊಲ್ದುದ್ದಂಡದಂಡಾಬ್ಜದ ಕೊಡೆವಿಡಿದುತ್ತುಂಗವಕ್ಷೋಜೆಯರ್ ಬ
ರ್ಪನೆಗಂ ಪೊಂಬಾಳೆಯಿಂ ಬಾಳೆಯರನವರತಂ ಚಾಮರಂಬೀಸುತುಂ ಬ
ರ್ಪನೆಗಂ [3]ಲೀಲಾಬ್ಜದಿಂ ಸುಯ್ಗೆಱಪಳಿಗಳನಬ್ಜಾಕ್ಷಿಯರ್ ಸೋವುತುಂ ಬ
ರ್ಪನೆಗಂ ಬಂದಳ್ ಲತಾಕೋಮಲೆ ಮದನಜಯಶ್ರೀಯೆ ಬರ್ಪಂದದಿಂದಂ ೮೨

ಚಂಚಲತೆಯನ್ನೂ ಪ್ರಕಾಶವನ್ನೂ ಬೀರುವ ಸುಂದರವಾದ ಕಡೆಗಣ್ಣಿನ ನೋಟದ ಮಾಲೆಯನ್ನು ನೀಡಿದಳು. ವ|| ಆ ಸಮಯದಲ್ಲಿ ೮೦. ಮನ್ಮಥನ ಬಾಣಸಮೂಹವು ಎರಗಿತೋ! ಕಾಮನ ಕೀರ್ತಿ, ಪ್ರವಾಹವಾಗಿ ಮೇಲೆ ಹರಿಯಿತೋ! ಕಾಮನ ಅಮೃತರಸದ ಮಳೆಯು ಹೆಚ್ಚಿತೋ ಎನ್ನುವಂತೆ, ಅತ್ಯತಿಶಯವಾದ ಚೆಲುವನ್ನು ಪಡೆದು, ಮದದಿಂದ ಮೂಢವೂ ಸುಂದರವೂ ಕಿರುನಗುವಿನಿಂದಲೂ, ಬಹು ಚಂಚಲವಾದ ರೆಪ್ಪೆಗಳ ಚಲನೆಯಿಂದಲೂ ಕೂಡಿದ ಶುಭ್ರವೂ ತೀಕ್ಷ್ಣವೂ ಆದ ಕಡೆಗಣ್ಣಿನ ದರ್ಶನಮಾಲೆಯಿಂದ ಸಂತೋಷವನ್ನು ತೋರಿಸಿದಳು. ೮೧. "ಶ್ರೀ ಕೃಷ್ಣನು ಆಸೆಯಿಂದಲೂ ಪ್ರೀತಿಯಿಂದಲೂ ಈಕೆಯ ರೂಪವನ್ನು ನೋಡಿದುದರಿಂದ ನನ್ನ ದೃಷ್ಟಿಯು ಪೂರ್ಣವಾಗಿ ವ್ಯಾಪಿಸಿ, ಸೋತು, ಅವಳ ವಶವಾಯಿತೆಂಬುದು ಪ್ರಕಟವಾಯಿತಲ್ಲದೆ, ನನ್ನನ್ನು ಅಮೃತರಸದಿಂದ ತೇಲಿಸುವಂತೆ ಅವಳು ನೋಡುವ ಈ ಸಮಯದಲ್ಲಿ ಆ ನೋಟದ ಜತೆಯಲ್ಲೇ ಬಂದ ಪುಷ್ಪಬಾಣವು, ನನ್ನ ಚಿತ್ತವನ್ನು ನಾಟಲು ಹಾಗೆಯೇ ನನ್ನ ಮೇಲೆ ನಾಟಿದ ಅವಳ ಕಡೆಗಣ್ಣಿನ ನೋಟದ ರೀತಿಯಿಂದಲೇ ತನ್ನ ಮನೋಭಿಪ್ರಾಯವನ್ನು ಸ್ಪಷ್ಟಪಡಿಸಿದಳು." ವ|| ಎಂದು ಮನಸ್ಸಿನಲ್ಲಿ ಆಲೋಚಿಸುತ್ತಿರುವಲ್ಲಿ ೮೨. ಲತೆಯಂತೆ ಕೋಮಲೆಯಾದ ರುಕ್ಮಿಣಿಯು ಮನ್ಮಥನ ಜಯಲಕ್ಷ್ಮಿಯೇ ಬಂದಂತೆ ಬಂದಳು. ಬರುವಾಗ ಉನ್ನತಸ್ತನದ ಯುವತಿಯರು ಮನಃಪ್ರೀತಿಯಿಂದ ಉದ್ದವಾದ ತೊಟ್ಟು ಇರುವ ತಾವರೆಯ ಹೂವಿನ

---

೧. ಗಿ (ಕಗ) ೨. ಮಾಲೆಯಂ (ಕಖ) ೩. ನೀಲಾಬ್ಜದಿಂ (ಕ)

[1]ಸಲ್ಲಲಿತಾಂಗಿ ಭೂಷಣಮಣಿದ್ಯುತಿಯಿಂ ಧವಳೇಕ್ಷಣಾಂಶುವಿಂ
ಪಲ್ಲವಪುಷ್ಪ ಶೋಭೆಗಳನೆಯ್ದೆ ವನಾವನಿಜಕ್ಕೆ ಮಾಡ್ವಿನಿ
ತ್ತಲ್ಲದೆ ಕೋಮಲಾಂಘ್ರಿರುಚಿಯಿಂ ನಖರೋಚಿಯಿನಧ್ವವಲ್ಲಿಗಂ
ಪಲ್ಲವಪುಷ್ಪ ಶೋಭೆಗಳನಾಗಿಸುತುಂ ನಡೆತಂದಳಲ್ಕಿಟಿಂ ೮೩

ವ|| ಅಂತು ನಡೆತಂದು

ಲೋಲಕಟಾಕ್ಷಮಾಲೆಗೆ ವನಮಾಲೆ ಚಂದ್ರಿಕೆವೀಱಿ ಕೈಯ ಪೂ
ಮಾಲೆಗೆ ಭೃಂಗಮಾಲೆ ಮೊರೆದೆಯ್ದೆ ಶಿರೀಷದ ಮಾಲೆಯುಂ ಪ್ರಭಾ
ಮಾಲೆಯಿನೇಟಿಸುತ್ತಿರೆ ಭುಜಂ ನಖಮಾಲೆ ಮಯೂಖಮಾಲೆಯಂ
ಸಾಲಿಡೆ ಬಾಲೆ ಬಂದು ವನಮಾಲಿಗೆ ಮಾಲೆಯನೊಲ್ದು ಸೂಡಿದಳ್ ೮೪

ವ|| ಅಂತು ನಡೆತಂದು ತನಗೆ ರುಕ್ಮಿಣೀದೇವಿ ಮಾಲೆಯುಂ ಸೂಡೆ ಪರಿಪೂರ್ಣ ಮನೋರಥನಾಗಿ ರಥಾಂಗಪಾಣಿ ನಿಜರಥಮನಾ ರಥಾಂಗೋತ್ತುಂಗಸ್ತನೆಯನೇಱಿಸಿ

ಉಱಿದಾನುಯ್ದಪೆನೀ ಸಮಸ್ತಗುಣಮಾಲಾರಾಮೆಯುಂ ರಾಮೆಯಂ
[1]ಮಱುವಕ್ಕಂ ಪೆಱಗೆಯ್ದೆ ನಿಂದು ಕುಡುವೆಂ ಸಂಗ್ರಾಮಮುಂ ಗ್ರಾಮಮುಂ
ಪೊಱಮಟ್ಟೆನ್ನೊಳಿದಿರ್ಚಿ ತೋಱುಗೆ ನಿಜಾಸ್ತ್ರಾದಾನವಂ ದಾನವಂ
ಬಱಿಕೆಯ್ಗುಂ ರಿಪುವೀರರಂ ವಿಬುಧವೃಂದಾನಂದಕಂ ನಂದಕಂ ೮೫

ಕೊಡೆಯನ್ನು ಅವಳಿಗೆ ಹಿಡಿದು ಬರುತ್ತಿದ್ದರು. ಹೊಂಬಾಳೆಯಿಂದ ಎಡೆಬಿಡದೆ ಚಾಮರವನ್ನು ಬೀಸುತ್ತಿದ್ದರು. ವಿನೋದಕ್ಕಾಗಿ ಹಿಡಿದುಕೊಂಡ ಕಮಲದಿಂದ ಅವಳ ಉಸಿರಿಗೆ ಎರಗುವ ತುಂಬಿಗಳನ್ನು ಅಟ್ಟುತ್ತಿದ್ದರು. ೮೩. ಅತಿ ಮನೋಹರಳಾದ ಆ ರುಕ್ಮಿಣಿಯು ನಡೆದು ಬರುವಾಗ ಅವಳ ಒಡವೆಗಳ ರತ್ನಗಳ ಕಾಂತಿಯಿಂದ ದಾರಿಯ ಮರಗಳಿಗೆ ಚಿಗುರಿನ ಹೊಳಪನ್ನೂ, ಬಿಳಿಯ ನೋಟದ ಕಾಂತಿಯಿಂದ ಹೂಗಳ ಸೊಗಸನ್ನೂ ಉಂಟುಮಾಡಿದಳಲ್ಲದೆ, ಕೋಮಲವಾದ ಕಾಲಿನ ಹೊಳಪಿನಿಂದ ದಾರಿಯ ಬಳ್ಳಿಗಳಿಗೂ ಚಿಗುರಿನ ಕಾಂತಿಯನ್ನು ಉಗುರಿನ ಹೊಳಪಿನಿಂದ ಹೂಗಳ ಸೊಗಸನ್ನೂ ಉಂಟುಮಾಡಿದಳು. ವ|| ಹಾಗೆ ಬಂದು, ೮೪. ಆ ರುಕ್ಮಿಣಿಯು ತನ್ನ ಕಡೆಗಣ್ಣ ದರ್ಶನಮಾಲೆಯು ವನಮಾಲೆಗೆ ಬೆಳುದಿಂಗಳನ್ನು ಬೀರುತ್ತ ಕಾಂತಿಮಾಲೆಯಂತೆ ಇರುವ ತೋಳು ಶಿರೀಷ ಪುಷ್ಪಮಾಲೆಯನ್ನು ಕೀಳುಮಾಡುತ್ತ ಉಗುರುಗಳ ಸಾಲು ಕಾಂತಿಮಾಲೆಯನ್ನು ಬೀರುತ್ತ ಕಯ್ಯಲ್ಲಿ ಹಿಡಿದಿರುವ ಹೂವಿನ ಮಾಲೆಗೆ ತುಂಬಿಗಳು ಮೊರೆಯುತ್ತ ಮುತ್ತುತ್ತ ಇರಲು ವನಮಾಲಿ ಕೃಷ್ಣನಿಗೆ ಹತ್ತಿರ ಬಂದು ಆ ಹೂವಿನ ಮಾಲೆಯನ್ನು ಹಾಕಿದಳು. ವ|| ಹಾಗೆ ಬಂದು ರುಕ್ಮಿಣೀದೇವಿ ತನಗೆ ಮಾಲೆಯನ್ನು ಹಾಕಿದುದರಿಂದ ಪರಿಪೂರ್ಣ ಮನೋರಥನಾದ ಕೃಷ್ಣನು, ಚಕ್ರವಾಕೋನ್ನತಸ್ತನಿಯಾದ ಆಕೆಯನ್ನು ತನ್ನ ರಥದ ಮೇಲೇರಿಸಿಕೊಂಡು, ೮೫. ನಾನು ಸಕಲಗುಣಮಾಲೆಗೆ ಆರಾಮವಾಗಿರುವ ಈ ಮನೋಹರೆಯನ್ನು ಧೈರ್ಯದಿಂದ ತ್ವರೆಯಲ್ಲಿ ಕರೆದುಕೊಂಡು

---

೧. ಮಱುವಕ್ಕಂ ಪೆಱರ್ಗೆಯ್ದೆ (ಕಗ) ಮಱುವರ್ಕಂ ಪೆಱರ್ಗೆಯ್ದೆ (ಖ)

ವ॥ ಎಂದು ವಿಧೂತನಂದಕ ದ್ವಾರಕಾಭಿಮುಖನಾಗಿ ಸಮರಮಂ ಪಾರ್ದು ಮೆಲ್ಲ ಮೆಲ್ಲನೆ ನಡೆಯುತಿರ್ಪುದುಮಿತ್ತಂ

ತ್ವರಿತಂ ಸೋಲಿಸಿ ಕನ್ನೆಯಂ ಮುರಹರಂ ಕೊಂಡುಯ್ದ ವಾರ್ತಾಪರಂ
ಪರೆಯುಂ ಕೇಳ್ದು ವನೇಭಬೃಂಹಿತನಿನಾದಂಗೇಳ್ದ ಸಿಂಗಂ ನಗಾಂ
ತರದಿಂ ಲಂಘಿಸುವಂತೆ ವಿಷ್ಟರದಿನೆೞ್ದಂ ಮೂರ್ಧಾರತ್ನಾಂಶುಕೇ
ಸರನುತ್ಖಾತನಿಶಾತಖಡ್ಗ ನಖರಂ ರಕ್ತೇಕ್ಷಣಂ ರಾಕ್ಷಸಂ ೮೬

ವ॥ ಅಂತು ಶಿಶುಪಾಲಂ ಸಿಡಿಲ್ದೆೞೆ ತದೀಯಮಿತ್ರಂ ಭೀಷ್ಮಕರಾಜಪುತ್ರನಿಂತೆಂದಂ

ನೀಂ ನಡೆವನ್ನಮುಂಟೆ ಸಮರಂ ಶಿಶುಪಾಲ ಚತುರ್ಬಲಪ್ರಯು
ಕ್ತಂ ನಡೆದಾನೆ ಕನ್ನೆಯುಮನಾತನುಮಂ ಪಿಡಿದಪ್ಪೆನೆಂದು ದ
ರ್ಪೋನ್ನತಿಯಿಂದೆ ರುಕ್ಮಿ ಬರೆ ನೋಡಿ ದರಸ್ಮಿತನಾಗಿ ರಾಮನಂ
ಕನ್ನೆಗೆ ಕಾಪುವೇೞ್ದು ರಥದಿಂದಿೞಿದೊರ್ವನೆ ಶೌರಿ ತಾಗಿದಂ ೮೭

ವ॥ ಆಗಳ್

ಮೊದಲೊಳೆ ಕಾಣಲಾಯ್ತರಿಬಲಂ ಪಡಲಿಟ್ಟುದನಂತೆ ಕೇಳಲಾ
ದುದು ಸುರದುಂದುಭಿಧ್ವನಿಯನಲ್ಲದೆ ನಿಟ್ಟಿಸಲಾದುದಿಲ್ಲ ತಾ
ಗಿದ ಪೊಣರ್ದಿಕ್ಕಿ ಗೆಲ್ದ ಪರಿಯಂ ಮನಮೊಲ್ದೊಡೆ ಕೊಂಡು ಪೋರ್ವನ
ಲ್ಲದೊಡರಿಸೇನೆಯಂ ಕ್ಷಣದಿನಿಕ್ಕುವನಿಂತುಟೆ ಲೀಲೆ ಕೃಷ್ಣನಾ ೮೮

ಹೋಗುತ್ತಿರುವೆನು, ಎದಿರು ಪಕ್ಷದವರು ಹಿಂಬಾಲಿಸಿ ಬಂದರೆ, ಅವರೊಡನೆ ಯುದ್ಧವನ್ನು ಮಾಡುವೆನು. ಊರಿನಿಂದ ಹೊರಟು ನನ್ನನ್ನೆದಿರಿಸಿ, ರಾಕ್ಷಸನು ತನ್ನ ಅಸ್ತ್ರಸಾಮರ್ಥ್ಯವನ್ನು ತೋರಿಸಲಿ. ದೇವತೆಗಳ ಸಮೂಹಕ್ಕೆ ಆನಂದಕವಾದ ನನ್ನ ನಂದಕ(ಖಡ್ಗ)ವು ಶತ್ರುವೀರರನ್ನು ಬರಿದಾಗಿಸುವುದು. ವ॥ ಎಂದು ಖಡ್ಗವನ್ನು ಝಳಪಿಸಿ, ಯುದ್ಧವನ್ನು ಎದಿರುನೋಡುತ್ತ ದ್ವಾರಕಿಗೆ ಅಭಿಮುಖನಾಗಿ ಮೆಲ್ಲಮೆಲ್ಲಗೆ ನಡೆಯುತ್ತಿದ್ದನು. ಇತ್ತ ಕಡೆ ೮೬. ಕನ್ಯೆಯಾದ ರುಕ್ಮಿಣಿಯನ್ನು ಒಲಿಸಿಕೊಂಡು ಕೃಷ್ಣನು ಕರೆದುಕೊಂಡು ಹೋದ ಸಮಾಚಾರಪರಂಪರೆಯನ್ನು ಕೇಳಿದ ಶಿಶುಪಾಲ ರಾಕ್ಷಸನು ಕಾಡಾನೆಯ ಘೀಂಕಾರವನ್ನು ಕೇಳಿದ ಸಿಂಹವು ಪರ್ವತಾಗ್ರದಿಂದ ನೆಗೆಯುವಂತೆ ತಲೆಯ ಮೇಲಿನ ರತ್ನಗಳ ಕಾಂತಿಯೆಂಬ ಕೇಸರವೂ ಒರೆಯಿಂದ ಹಿರಿದ ಹರಿತವಾದ ಕತ್ತಿಯೆಂಬ ಉಗುರೂ ಕೆಂಪಾದ ಕಣ್ಣೂ ಉಳ್ಳವನಾಗಿ ತನ್ನ ಪೀಠದಿಂದ ತಟ್ಟನೆ ಎದ್ದನು. ವ॥ ಹಾಗೆ ಶಿಶುಪಾಲನು ಸಿಡಿದು ಏಳಲು ಅವನ ಮಿತ್ರನಾದ ಭೀಷ್ಮಕರಾಜನ ಮಗನು ಹೀಗೆಂದನು. ೮೭. "ಶಿಶುಪಾಲಾ! ನೀನು ಹೋಗಬೇಕಾದಷ್ಟು ಯುದ್ಧವು ಕಠಿಣವೆ? ನಾಲ್ಕು ಬಗೆಯ ಸೇನೆಯೊಡನೆ ನಾನೇ ಹೋಗಿ, ಕನ್ಯೆಯನ್ನೂ ಆ ಕೃಷ್ಣನನ್ನೂ ಹಿಡಿದು ತರುವೆನು" ಎಂದು ದರ್ಪೋನ್ನತಿಯಿಂದ ರುಕ್ಮಿ ಬಂದನು. ಕೃಷ್ಣನು ಅವನು ಬರುತ್ತಿರುವುದನ್ನು ನೋಡಿ, ಕಿರುನಗುವುಳ್ಳವನಾಗಿ ಬಲರಾಮನನ್ನು ಕನ್ಯೆಗೆ ರಕ್ಷಕನಾಗಿರುವಂತೆ ಹೇಳಿ, ರಥದಿಂದ ಕೆಳಕ್ಕಿಳಿದು, ತಾನೊಬ್ಬನೇ ರುಕ್ಮಿಯನ್ನು ತಾಕಿದನು. ವ॥ ಆಗ, ೮೮. ಮೊದಲು ಶತ್ರುಸೇನೆಯು ಕಾಣಿಸಿತು. ಒಡನೆಯೇ ಅದು ದಿಕ್ಕಾಪಾಲಾಗಿ ಬಿದ್ದುದೂ ಕಾಣಿಸಿತು. ದೇವತೆಗಳ ನಗಾರಿಯ ಶಬ್ದವನ್ನು

ವ|| ಅಂತು ಚತುರಂಗಬಲಮಟೆಯೆ ರುಕ್ಮಂ ತನ್ನ ಭುಜಬಲಮನೆ ನಚ್ಚಿ ಬಿಚ್ಚಳಿಸಿ

ಲೋಳಮಣಿಕುಂಡಲಂ ರಣ
ಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ
ಬಾಳಂ ಕಿಟ್ಟಿಯ್ದುವಿನಂ
ಬಾಳಂ ಪಿಡಿವಡೆವ ಮಾಟ್ಕೆಯಿಂ ಪಿಡಿವೆತ್ತಂ ೮೯

ತೇರೊಳ್ ರುಕ್ಮಿಣಿ ಭುಜದೊಳ್
ವೀರಾಂಗನೆ ಪಾದಪೀಠದೊಳ್ ರುಕ್ಮಿಯಿರಲ್
ಶೌರಿಯೊಳೊಲವುಂ ನಲವುಂ
ಕಾರುಣ್ಯಮುಮೊಡನೆ ಪೆರ್ಚುತಿರ್ದುದಳುಂಬಂ ೯೦

ವ|| ಅಂತು ಚಾಣೂರವೈರಿ ಕಾರುಣ್ಯದಿಂ ಪ್ರಸನ್ನಚಿತ್ತನಾಗಿರಲ್ ಕನ್ಯಾಗ್ರಜನನಂತಾ ಕನ್ಯಾರತ್ನಮನೊಡಂಬಟ್ಟು ಕೊಟ್ಟು ಬೀಟಿಕ್ಕೊಂಡು ಕುಂಡಿನೀಪುರಕ್ಕೆ ಪೋದಂ ಇತ್ತ ಪುರುಷೋತ್ತಮಂ ಪ್ರಳಂಬಪ್ರಸೂದನ ಚೋದಿತಸ್ಯಂದನಂ ಭೀಷ್ಮಕನಂದನೆವೆರಸು ಬಂದು ದ್ವಾರಾವತಿಯ ಪೊಱವೊಱಲನೆಟ್ಟರ್ಪ ಸಮಯದೊಳ್ ತನ್ನ ಬರವಿಂಗಷ್ಟಶೋಭಾವಿಶಿಷ್ಟತರಮಾಗಿ ರಾಜಿಸುವ ನಿಜರಾಜಮಂದಿರಮಂ ಪುಗುವಲ್ಲಿ

ಕೇಳಬಹುದಾಯಿತೇ ಹೊರತು, ರುಕ್ಮಿ ಬಂದು ತಾಕಿದ್ದನ್ನೂ ಕೃಷ್ಣನು ಯುದ್ಧಮಾಡಿ ಗೆದ್ದುದನ್ನೂ ಯಾರೂ ನೋಡಲಾಗಲೇ ಇಲ್ಲ. ಕೃಷ್ಣನು ಮನಸ್ಸಾದರೆ ಸ್ವಲ್ಪಕಾಲವನ್ನು ತೆಗೆದುಕೊಂಡು ಯುದ್ಧವನ್ನು ಮಾಡುವನು. ಮನಸ್ಸಿಲ್ಲವಾದರೆ ಶತ್ರುಸೇನೆಯನ್ನು ಒಂದು ಕ್ಷಣದಲ್ಲೇ ಕೊಲ್ಲುವನು. ಅವನ ಲೀಲೆಯೇ ಹೀಗೆ. ವ|| ಹಾಗೆ ಚತುರಂಗಸೇನೆಯು ನಾಶವಾದುದರಿಂದ, ರುಕ್ಮಿಯು ತನ್ನ ತೋಳಿನ ಬಲವನ್ನೇ ನೆಚ್ಚಿ ಹೆಚ್ಚಿಂದುಕೊಂಡು, ೮೯. ಚಂಚಲವಾಗಿ ತೂಗಾಡುವ ರತ್ನದ ಕಡುಕುಳ್ಳ ರುಕ್ಮಿಯು ಯುದ್ಧಾಸಕ್ತನಾಗಿ ರಥದಿಂದ ಭೂಮಿಗೆ ಧುಮುಕಿ ಒರೆಯಿಂದ ಕತ್ತಿಯನ್ನು ಹಿರಿದು ಹತ್ತಿರ ಬಂದನು. ಕತ್ತಿಯನ್ನು ಹಿಡಿದಿದ್ದಂತೆಯೇ ಬಾಲಕನಂತೆ ಕೃಷ್ಣನ ಕಯ್ಯ ಹಿಡಿತಕ್ಕೂ ಸಿಕ್ಕಿದನು. ೯೦. ತೇರಿನ ಮೇಲೆ ರುಕ್ಮಿಣಿಯೂ, ತೋಳಿನ ಮೇಲೆ ವೀರಜಯಾಂಗನೆಯೂ ಪಾದಪೀಠದಲ್ಲಿ ರುಕ್ಮಿಯೂ ಇರುತ್ತಿರುವಾಗ ಕೃಷ್ಣನಿಗೆ ಪ್ರೀತಿಯೂ ಸಂತೋಷವೂ ಕರುಣೆಯೂ ಒಟ್ಟಿಗೆ ಅಧಿಕವಾಗಿ ಹೆಚ್ಚುತ್ತಿದ್ದಿತು. ವ|| ಹಾಗೆ ಚಾಣೂರವೈರಿ ಕೃಷ್ಣನು ಕಾರುಣ್ಯದಿಂದ ಪ್ರಸನ್ನ ಚಿತ್ತನಾಗಿರಲು ರುಕ್ಮಿಣಿಯ ಅಣ್ಣ ರುಕ್ಮಿಯು ಆ ಕನ್ಯಾರತ್ನವನ್ನು ತಾನೂ ಒಪ್ಪಿ ಕೃಷ್ಣನಿಗೆ ಕೊಟ್ಟು, ಅವರಿಂದ ಕಳುಹಿಸಿಕೊಂಡವನಾಗಿ ಕುಂಡಿನೀಪುರಕ್ಕೆ ಹೋದನು. ಇತ್ತ ಪುರುಷೋತ್ತಮ ಕೃಷ್ಣನು, ಬಲರಾಮನು ರಥವನ್ನು ನಡೆಯಿಸುತ್ತಿರುವಾಗ ರುಕ್ಮಿಣಿಯೊಡನೆ ಬಂದು ದ್ವಾರಾವತಿಯ ಹೊರವಳಯದಲ್ಲಿ ಇಳಿದನು. ಆಮೇಲೆ ತನ್ನ ಆಗಮನಕ್ಕಾಗಿ ಎಂಟುಬಗೆಯ ಅಲಂಕಾರಗಳಿಂದ ಕೂಡಿ ರಾಜಿಸುವ ತನ್ನ ಅರಮನೆಯನ್ನು ಪ್ರವೇಶಿಸಿದನು.

ಮಂಗಳಭೂಷಣಾವಳಿಯ ಬೆಳ್ಪು ಮುಗುಳ್ನಗೆವೆಳ್ಪು ಸಸ್ಮಿತಾ
ಪಾಂಗದ ಬೆಳ್ಪು ಪೊಂದಳಿಗೆ ಸೂಸಿದ ಸೇಸೆಯ ಬೆಳ್ಪು ತಳ್ತಿರಲ್
ಜಂಗಮಪುಷ್ಪವಲ್ಲರಿಗಳೆಂಬಿನೆಗಂ ನಡೆತಂದು ಯಾದವೋ
ತ್ತುಂಗನ ಮೇಲೆ ಬಿತ್ತರಿಸಿದರ್ ಧವಳಾಕ್ಷತಮಂ ಲತಾಂಗಿಯರ್ ೯೧

ವಿಗಳದ್ಧಮ್ಮಿಲ್ಲದಿಂ ಮಲ್ಲಿಗೆಯುಗೆ ತೊಡವಿಂ ಮಂಜಗುಂಜಾರವಂ ಕೈ
ಮಿಗೆ ಬಂದಾನಂದದಿಂ ನೋೞ್ಪಬಲೆಯರ ವಿಲೋಲತ್ಕಟಾಕ್ಷಚ್ಛಟಾಶ್ರೇ
ಣಿಗಳಂ ಕೈಕೊಂಡಳುಂಬಂ [1]ತೆಱೆಮಸಗಿದನಂಗಾಮೃತಾಂಭೋಧಿವೊಲ್ ತ
ನ್ನಗರಂ ಬೇಱೊಂದು ಚೆಲ್ವಂ ಕುಡೆ ನೃಪಗೃಹಮಂ ಬಂದು ಪೊಕ್ಕಂ ಮುಕುಂದಂ ೯೨

ವ|| ಅಂತು ಪೊಕ್ಕು ಗೃಹಮಹತ್ತರನಂ ಕರೆದು ವಿವಾಹಮಂಟಪಮಂ ಮಾಡಿಸೆಂದು ಬೆಸಸುವುದುಮಾತನತಿಪ್ರಭೂತಚೇತೋರಾಗನಾಗಿ ಸಮಸ್ತವಾಸ್ತುಲಕ್ಷಣೋಪಲಕ್ಷಿತಮುಂ ಶುಭಮುಹೂರ್ತೋದಯೋತ್ತಂಭಿತಸ್ತಂಭಸ್ಥಾಪನಮುಂ ನಿಖಿಲಮಾಂಗಲ್ಯ ಲಕ್ಷ್ಮೀಶೃಂಗಾರಾಲಂಕರಣ ಪ್ರದೇಶಮುಮೆನಿಸಿ ತಳದಿನಗ್ರಂಬರಂ ತೀವಿದೆನಿತಾನುಂ ತೆಱದ ಪೊನ್ನ ರನ್ನದ [2]ರೂವಾರಂಗಳ್ ಮನಂಗೊಳೆ ವಿವಾಹಗೇಹಮಂ ಮಾಡಿಸಿದಾಗಳ್

ಒಂದಿದನೇಕರತ್ನರಚನಾರುಚಿರದ್ಯುತಿ ತಳ್ತು ತಮ್ಮೊಳೊಂ
ದೊಂದನವುಂಕಿರಲ್ ಬರೆದು ಬರ್ಣಿಸಿದಂತೆವೊಲಾಗೆ ಬಂದ ಮಾ
ಕಂದಮಹೀಜದಂತೆಸೆದುದುನ್ನಮಿತೋತ್ಸವಕೇತನಂ ಶುಭಾ
ನಂದಿತಲೋಕಚೇತನಮತೀವವಿನೂತನವಾ ನಿಕೇತನಂ ೯೩

ಆಗ ೯೧. ಮಂಗಳಾಲಂಕಾರಗಳ ಬಿಳುಪೂ ಮುಗುಳುನಗೆಯ ಬಿಳುಪೂ ನಗುವಿನಿಂದ ಒಪ್ಪುವ ಕಡೆಗಣ್ಣಿನ ನೋಟದ ಬಿಳುಪೂ ಚಿನ್ನದ ತಟ್ಟೆಗಳಲ್ಲಿರುವ ಅಕ್ಷತೆಗಳ ಬಿಳುಪೂ ಹರಡುತ್ತಿರುವಲ್ಲಿ ಚಲಿಸುವ ಹೂಬಳ್ಳಿಗಳೆನ್ನುವಂತೆ ಇರುವ ಲತಾಂಗಿಯರು ಯದೂತ್ತಮ ಕೃಷ್ಣನ ಮೇಲೆ ಬಿಳಿಯ ಅಕ್ಷತೆಯನ್ನು ತಳಿದರು. ೯೨. ಸಡಿಲವಾದ ಮುಡಿಯಿಂದ ಮಲ್ಲಿಗೆಯ ಹೂ ಸುರಿಯುತ್ತ ಆಭರಣಗಳಿಂದ ಮನೋಹರವಾದ ಝೇಂಕಾರವು ಹೆಚ್ಚುತ್ತ ಇರಲು, ಬಂದು ಆನಂದದಿಂದ ನೋಡುವ ಅಬಲೆಯರ ಅತಿಚಂಚಲವಾದ ಕಡೆಗಣ್ಣಿನ ನೋಟದ ಹೊಳಪಿನ ಕಿರಣಗಳನ್ನು ಪಡೆದು, ಅಧಿಕವಾಗಿ ತೆರೆಯು ಹೆಚ್ಚಿದ ಕಾಮಾಮೃತ ಸಾಗರದಂತೆ ಆ ನಗರವು ಬೇರೊಂದು ಬಗೆಯ ಚಲುವನ್ನೊಳಗೊಂಡಿರುವಲ್ಲಿ ಕೃಷ್ಣನು ಅರಮನೆಯನ್ನು ಹೊಕ್ಕನು. ವ|| ಹಾಗೆ ಹೊಕ್ಕು, ಪ್ರಮುಖ ಗೃಹಕಾರ್ಯ ದರ್ಶಿಯನ್ನು ಕರೆದು, 'ವಿವಾಹಮಂಟಪವನ್ನು ಮಾಡಿಸು' ಎಂದು ಆಜ್ಞಾಪಿಸಿದನು. ಆತನು ಅತ್ಯಧಿಕ ಸಂತೋಷದಿಂದ ಸಮಸ್ತ ವಾಸ್ತುಲಕ್ಷಣದಿಂದ ಕೂಡಿದುದೂ, ಶುಭ ಮುಹೂರ್ತೋದಯದಲ್ಲಿ ಮೇಲೆತ್ತಿ ನಿಲ್ಲಿಸಿದ ಕಂಭಗಳುಳ್ಳುದೂ ಸಕಲಮಂಗಳ ಲಕ್ಷ್ಮೀಶೃಂಗಾರಾಲಂಕೃತಪ್ರದೇಶವುಳ್ಳುದೂ ಆಗಿ ತಳದಿಂದ ತುದಿಯವರೆಗೂ ತುಂಬಿದ ಎಷ್ಟೋ ಬಗೆಯ ಚಿನ್ನದ ರನ್ನದ ಶಿಲ್ಪಗಳು ಮನೋಹರವಾಗಿರುವಂತೆ ವಿವಾಹಗೃಹವನ್ನು ಮಾಡಿಸಿದನು. ೯೩. ಅಲ್ಲಿ ಸಮ್ಮೇಳಿಸಿದ ಅನೇಕ ರತ್ನಗಳ ರಚನೆಯ ಕಾಂತಿಗಳು ಒಂದರೊಡನೊಂದು ಸೇರಿರಲು ಬರೆದು ಬಣ್ಣ ಹತ್ತಿಸಿದಂತೆ ಆಗಿದ್ದು, ಉತ್ಸವಾರ್ಥವಾಗಿ

---

೧. ತೆಱೆಮಸಗಿದನಂಗಾಮೃತಾಂಭೋಧಿಯೊಲ್ (ಕವಿಗ) ೨. ಸಿರಿವಾರಂಗಳ್ (ಮೊಅ)

ಒದವಿದ ಚೆಲ್ವು ನೂರ್ಮಡಿಸೆ ನೂರ್ಮಡಿಕುಂ ಹರಿದಶ್ಮಭಿತ್ತಿಜಾ
ಳದ ಪಸುರಿಂದೆ [1]ಜಾಗದ ಪಸುರ್ಪುಪಹಾರಮನೋಹರಪ್ರಸೂ
ನದ ಕಡುವೆಳ್ಪಿನಿಂದೆ ಕಡೆಯಿಕ್ಕಿದ ಮುತ್ತಿನ ಬೆಳ್ಪು ರತ್ನದೀ
ಪದ ಬೆಳಗಿಂದೆ ಮಾಣಿಕದ ಕಂಬದ ಕೆಂಬೆಳಗಾ ನಿವಾಸದೊಳ್ ೯೪

ಮಿಸುಗುವ ಚೌಕದ ಮುತ್ತಿನ
ಪಸೆವಾಸಿನ ಪಟ್ಟವಳಿಯ ದುಗುಲದ ರುಚಿಗಳ್
ಪಸರಿಸೆ ಪೊಂಜಗಲಿ ವಿರಾ
ಜಿಸುತಿರ್ದುದು ಗಾಂಗತುಂಗಪುಳಿನ[2]ಶ್ರೀವೊಲ್ ೯೫

[3]ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಶೇಷಾಕ್ಷತಂ
ಬಿಸಸೂತ್ರಂ ಸಿತದೂರ್ವೆ ನೂತನಯವಗ್ರೈವೇಯಕಂ ತನ್ನೊಳೊ
ಪ್ಪೆ ಸಮಸ್ತೌಷಧಿ ಪಂಚರತ್ನಸಹಿತಂ ಪೂತಾಂಬುಪೂರ್ಣಂ ವಿರಾ
ಜಿಸಿದತ್ತಂಚಿತಶಾತಕುಂಭಮಯಕುಂಭಂ ವೇದಿಕಾಮಧ್ಯದೊಳ್ ೯೬

[4]ಸಾರಸುವರ್ಣವೇದಿಕೆ ದುಕೂಲವಿತಾನಮಪೂರ್ವಭಂಗಿ ಭೃಂ
ಗಾರಘಟಾಳಿ ಪೂರ್ವಕಲಶಂ ಮಣಿದೀಪಿಕೆ ಪಲ್ಲವೋಲ್ಲಸ
ತ್ತೋರಣಮುನ್ನತಧ್ವಜಮೆನಿಪ್ಪುವು ಮಂಗಳಲಕ್ಷ್ಮಿ ತೊಟ್ಟಲಂ
ಕಾರನಿಕಾಯದಂತಿರೆ ಮನೋಹರಮಾಯ್ತು ವಿವಾಹಮಂಟಪಂ* ೯೭

ಎತ್ತಿ ಕಟ್ಟಿದ ಧ್ವಜವುಳ್ಳುದೂ ಶುಭಸೂಚನೆಯಿಂದ ಜನಚೇತನವನ್ನು ಆನಂದಗೊಳಿಸಿದುದೂ ಅತಿ ನೂತನವೂ ಆದ ಆ ಕಲ್ಯಾಣಮಂದಿರವು ಫಲಿಸಿದ ಮಾವಿನಮರದಂತೆ ಹೊಳೆಯುತ್ತಿದ್ದಿತು. ೯೪. ಅಲ್ಲಿಯ ಪಚ್ಚೆಗೋಡೆಗಳ ಹಸುರು ಬಣ್ಣದಿಂದ ಪಚ್ಚೆಮಣಿಗಳೂ, ಪೂಜಾರ್ಥವಾಗಿ ಅಲಂಕರಿಸಿದ ಹೂಗಳ ಬಿಳುಪಿನಿಂದ ರಂಗವಲ್ಲಿಯ ಮುತ್ತುಗಳೂ, ರತ್ನದೀಪಗಳ ಕೆಂಬೆಳಕಿನಿಂದ ಮಾಣಿಕ್ಯಮಯವಾದ ಕಂಭಗಳೂ ತಮ್ಮ ಕಾಂತಿಗಳನ್ನು ನೂರರಷ್ಟಾಗಿ ಬೀರುತ್ತ ಆ ಸ್ಥಳದ ಶೋಭೆಯನ್ನು ನೂರರಷ್ಟು ಹೆಚ್ಚಿಸಿದವು. ೯೫. ಹೊಳೆಯುವ ಚೌಕವಾದ ಹಸೆಮಣೆಯ ಮೇಲೆ ಹಾಸಿರುವ ಮುತ್ತಿನ ಪಟ್ಟಾವಳಿಯ ದುಕೂಲದ ಕಾಂತಿಗಳು ಹರಡಿರಲು, ಚಿನ್ನದ ಹಸೆಜಗುಲಿಯು ಗಂಗಾನದಿಯ ಉನ್ನತವಾದ ಮಳಲುದಿಣ್ಣೆಯಂತೆ ವಿರಾಜಿಸುತ್ತಿದ್ದಿತು. ೯೬. ಬೆಳಗಿಸಿ ಹೊಳೆಯುವ ಕನ್ನಡಿಯೂ ಹೊಸಚಿಗುರೂ ಹೂಮಾಲೆಯೂ ಶೇಷಾಕ್ಷತೆಯೂ ಕಮಲನಾಳದ ನೂಲೂ ಬಿಳಿಯ ಗರುಕೆಯೂ ಹೊಸ ಜವೆಗೋದುವೆಯ ಕಂಠಮಾಲೆಯೂ ತನ್ನಲ್ಲಿ ಒಪ್ಪುತ್ತಿರಲು ಸಮಸ್ತೌಷಧಿಗಳಿಂದಲೂ ಪಂಚರತ್ನಗಳಿಂದಲೂ ಸಹಿತವಾದ ಪವಿತ್ರ ತೀರ್ಥಪೂರ್ಣವಾಗಿ ಮನೋಹರವಾಗಿರುವ ಸುವರ್ಣಮಯಕಲಶವು ವಿವಾಹ ವೇದಿಕೆಯ ಮಧ್ಯದಲ್ಲಿ ಹೊಳೆಯುತ್ತಿದ್ದಿತು. ೯೭. ಸಾರವಾದ ಚಿನ್ನದ ಹಸೆ ಜಗುಲಿ ದುಕೂಲ (ಪಟ್ಟೆಯ)ದ ಮೇಲುಕಟ್ಟು, ಅಪೂರ್ವರೀತಿಯ ಸುವರ್ಣದ ಕೊಡಗಳ ಪೂರ್ಣ

೧. ಜಾಗರ (ಕಖಗ) ೨. ಶ್ರೀಯೊಲ್ (ಕಖಗ) ೩. ಮೊಸರ್ವಟ್ಟು (ಖಗ) ೪. ಸುಪರ್ಣ ವೇದಿಕೆ (ಖಗ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ.

ಜವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥಮಾರ್ದ್ರಾಕ್ಷತಂ
ಧವಳಾಬ್ಜಂ ಸಿತದೂರ್ವೆ ನೂತನಫಲಂ ಗೋರೋಚನಂ ಲಾಜೆ ಬ
ಣ್ಣವುರಂ ರನ್ನದ ತಳ್ತೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂ
ಬಿವಱಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವಾ ಸದ್ಮದೊಳ್ ೯೮

ವ॥ ಆ ಮಹೋತ್ಸವದೊಳ್ ವನಮಾಲಿ ಮಜ್ಜನಶಾಲೆಗೆ ಬಿಜಯಂಗೆಯ್ದು ಮಜ್ಜನ ಪೀಠಮನಲಂಕರಿಸಿದಾಗಳ್

ಉಗುರ್ಗೊನೆಯಿಂದಮೊಗುರಿಸುವೋಜೆ ತಱಿಂತಱಿದಿಂ ಶಿರೋಜಮಂ
ನೆಗಪುವ ಭಂಗಿ ಬಿತ್ತರದಿನೆತ್ತುವ ಕೆಂದಳದೊಂದು ಲಾಘವಂ
ಸೊಗಯಿಸುತಿರ್ಪಿನಂ ಸಹಜದಿವ್ಯಸುಗಂಧದ ಕೇಶಪಾಶಮಂ
ಮೃಗಮದಗಂಧಿ ಪೂಸಿದಳುಪಾಸಿತಚಂಪಕಗಂಧತೈಲಮಂ ೯೯

ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ ಕಣ್ಚೆಲ್ಲಮು
ಲ್ಲುಗೆ ಪೊನ್ನೋಲೆ ಕದಂಪನಪ್ಪಳಿಸೆ ಮಧ್ಯಂ ಬಳ್ಕೆ ಘರ್ಮಾಂಬು ಕೈ
ಮಿಗೆ ಕಣ್ಗೊಂಡು ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂ
ಬುಗಿಸಿತ್ತಂದು ಸುಹೃಜ್ಜನಂ ವಿರಚಿಪನ್ನಂ ಮಂಗಳಾಚಾರಮಂ ೧೦೦

ವ॥ ಅನಂತರಂ ನೈಪಥ್ಯನಿಳಯಕ್ಕೆ ವಂದಲ್ಲಿ

ಕಲಶಗಳು, ರತ್ನದೀಪ, ಹೊಳೆಯುವ ಚಿಗುರುತೋರಣ, ಎತ್ತಿಕಟ್ಟಿದ ಬಾವುಟ ಎಂಬಿವು ಮಂಗಳಲಕ್ಷ್ಮಿಯು ಧರಿಸಿದ ಆಭರಣಗಳ ಸಮೂಹದಂತಿದ್ದುದರಿಂದ ವಿವಾಹಮಂಟಪವು ಮನೋಹರವಾಗಿದ್ದಿತು. ೯೮. ಜವೆ (ಗೋದುವೆ), ದಿವ್ಯೌಷಧಿ, ಪಾರಿಜಾತಪುಷ್ಪ, ಬಿಳಿಯ ಸಾಸಿವೆ, ಹಸಿಯ ಅಕ್ಷತೆ, ಬಿಳಿಯ ತಾವರೆ ಹೂ, ಬಿಳಿಯ ಗರುಕೆ, ಹೊಸದಾದ ಹಣ್ಣುಕಾಯಿಗಳು, ಗೋರೊಚನ, ಅರಳು, ಬಣ್ಣಗಳಿಂದ ತುಂಬಿದ ಬಟ್ಟಲು, ರತ್ನದ ದೀಪ, ಶ್ರೀಗಂಧ, ಕಸ್ತೂರಿ, ಕುಂಕುಮ ಕೇಸರಿ, ಎಂಬಿವುಗಳನ್ನು ತುಂಬಿದ ಚಿನ್ನದ ಹರಿವಾಣವು ಆ ವಿವಾಹಗೃಹದಲ್ಲಿ ಚೆಲುವಾಗಿದ್ದಿತು. ವ॥ ಆ ಮಹೋತ್ಸವದಲ್ಲಿ ಕೃಷ್ಣನು ಮಜ್ಜನಶಾಲೆಗೆ ಬಿಜಯಮಾಡಿ, ಮಂಗಳಸ್ನಾನ ಪೀಠವನ್ನು ಅಲಂಕರಿಸಿದನು. ೯೯. ಕಸ್ತೂರಿಯ ಸುವಾಸನೆಯುಳ್ಳ ಸುಮಂಗಲಿಯೊಬ್ಬಳು ತನ್ನ ಉಗುರಿನ ತುದಿಯಿಂದ ಮುಂಗುರುಳನ್ನು ಮೇಲೆತ್ತುವ ರೀತಿಯೂ ಕ್ರಮ ಕ್ರಮವಾಗಿ ತಲೆಗೂದಲನ್ನು ಮೇಲೆತ್ತುವ ಭಂಗಿಯೂ ವಿಸ್ತಾರವಾಗಿ ಕೂದಲನ್ನೆತ್ತುವ ಕೆಂಪಾದ ಅಂಗಯ್ಯಿನ ಲಾಘವವೂ ಸೊಗಸಾಗಿರುತ್ತಿರಲು, ಸಹಜವಾಗಿಯೇ ದಿವ್ಯಸುಗಂಧವುಳ್ಳ ಕೃಷ್ಣನ ಕೇಶಪಾಶಕ್ಕೆ ಸಂಪಗೆಯ ಹೂವಿನ ಸುಗಂಧಮಿಶ್ರವಾದ ಎಣ್ಣೆಯನ್ನು ಒತ್ತಿದಳು. ೧೦೦. ಸುವಾಸಿನಿಯರು ತಮ್ಮ ಸಖಿಗಳು ಮಂಗಳಾಚಾರವನ್ನು ನಡೆಸುತ್ತಿರುವಲ್ಲಿ, ಬಿಗಿದ ತಮ್ಮ ಉನ್ನತ ಸ್ತನಗಳು ಅದಿರುತ್ತಲೂ, ಹಾರವು ತೂಗಾಡುತ್ತಲೂ ಕಣ್ಣಿನ ಸೊಗಸು ಹರಡುತ್ತಲೂ, ಚಿನ್ನದೋಲೆಯು ಕೆನ್ನೆಯನ್ನು ತಾಗುತ್ತಲೂ, ನಡು ಬಳುಕುತ್ತಲೂ, ಬೆವರು ನೀರು ಹೆಚ್ಚುತ್ತಲೂ ಇರುವಲ್ಲಿ, ಗಮನದಿಂದ ನೋಡಿ, ಜಗನ್ನಾಥನಾದ ಆ ವಿಭುವಿಗೆ ಮಂಗಳಸ್ನಾನ ಮಾಡಿಸಿದರು. ವ॥ ಬಳಿಕ ಅಲಂಕಾರಗೃಹಕ್ಕೆ ಬಂದಾಗ

ಮನಮನಲರ್ಚುತಿರ್ಪ ನವಪುಷ್ಪಸಮೃದ್ಧಿ ವಸಂತಚೂತನಂ
ದನಮಲರ್ವಂತು ಮಾಂಗಳಿಕಸಾರಧನಂ ಧವಳಪ್ರಸಾಧನಂ
ತನಗಮರ್ದೊಪ್ಪೆ ತದ್ವಿಮಲಮೌಕ್ತಿಕಮಂಡನಕಾಂತಿಪೂರದಿಂ
ನೆನೆಯಿಸಿದಂ ಮುಕುಂದನಮೃತಾಬ್ಧಿಯೊಳಿರ್ಪ ನಿಜಾದಿಮೂರ್ತಿಯಂ ೧೦೧

ವ|| ಆಗಳೊಂದು ಶೃಂಗಾರವೇಶ್ಮದೊಳ್ ಭೀಷ್ಮಕಸುತೆಯನಲಂಕರಿಸಲೆಂದು ನೆರೆದನೇಕ ವಿಧದ ವನಿತೆಯರಾಕೆಯ ಸೌಕುಮಾರ್ಯಮಂ ನಿರೀಕ್ಷಿಸಿ

ವಿಳಸಿತಮಪ್ಪದೊಂದು ಪೊಳೆಪಂ ತಳೆದಿರ್ದುದನಿಂದುಲೇಖೆಯಂ
ಪೊಳೆಪಿಡವೇಟ್ಟುದೇ ಸಹಜಸೌಂದರರೂಪೆಯನೀ ಮೃಣಾಳಕೋ
ಮಳೆಯನದೇನಲಂಕರಿಸವೇಟ್ಟುದೆ ಮಂಗಳವರ್ಧನಾರ್ಥಮೀ
ಲಳನೆಯನಿಂದಲಂಕರಿಸುವಂ ವಿವಿಧಾಭರಣಪ್ರತಾನದಿಂ ೧೦೨

ವ|| ಎಂದು ನುಡಿದು ಮತ್ತಮವರೊಳೊರ್ವಳತಿಚಾತುರ್ಯವತಿಯಿಂತೆಂದಳ್

ಲಳನಾಭೂಷಣವೀಕೆ ಭೂಷಣಕೆ ಭೂಷಾಲಕ್ಷ್ಮಿಯಂ ಮಾಟ್ಪುದೀ
ಲಳಿತಾಕಾರೆಯ ರೂಢಿವೆತ್ತವಯವಂ ತತ್ಕಾರಣಂ ಭೂಷಣಂ
ಗಳಿನೀ ಕಾಂತೆಗೆ ಶೋಭೆಯಂ ಪಡೆವ ಮಾತಂತಿರ್ಕೆ [1]ದಲ್ ಭೂಷಣಾ
ವಳಿಗೀ ಕೋಮಲೆಯಂಗಸಂಗದೆ ನವಶ್ರೀಶೋಭೆಯಂ ಮಾಡುಗುಂ ೧೦೩

೧೦೧. ಮನವನ್ನರಳಿಸುವ ಪುಷ್ಪಸಮೃದ್ಧಿಯುಳ್ಳ ವಸಂತಕಾಲದ ಮಾವಿನ ಗಿಡವು ಅರಳುವಂತೆ, ಮಂಗಳಾರ್ಥ ಸಾರಧನವಾದ ಶುಭ್ರಾಲಂಕಾರವು ತನಗೆ ಚೆನ್ನಾಗಿ ಒಪ್ಪುತ್ತಿರುವಲ್ಲಿ ಕೃಷ್ಣನು ಪರಿಶುದ್ಧವಾದ ಬಿಳಿಯ ಮುತ್ತುಗಳ ಆಭರಣಗಳ ಕಾಂತಿಪ್ರವಾಹದಿಂದ, ಕ್ಷೀರಸಾಗರದಲ್ಲಿರುವ ತನ್ನ ಆದಿಮೂರ್ತಿಯನ್ನು ಜನರ ಜ್ಞಾಪಕಕ್ಕೆ ತಂದನು. ವ|| ಆಗ ಮತ್ತೊಂದು ಅಲಂಕಾರಗೃಹದಲ್ಲಿ ಭೀಷ್ಮಕಸುತೆ ರುಕ್ಮಿಣಿಯನ್ನಲಂಕರಿಸುವುದಕ್ಕಾಗಿ ನೆರೆದ ಅನೇಕ ವನಿತೆಯರು ಆಕೆಯ ಸೌಕುಮಾರ್ಯವನ್ನು ಚೆನ್ನಾಗಿ ನೋಡಿ ತಿಳಿದು, ೧೦೨. "ಮನೋಹರವಾದ ಅದೊಂದು ಹೊಳಪನ್ನು ಪಡೆದಿರುವ ಚಂದ್ರಲೇಖೆಯನ್ನು ಹೊಳಪಿಡಬೇಕೆ?! ಸಹಜ ಸೌಂದರ್ಯದ ಈ ಮೃಣಾಳ ಕೋಮಲೆಯನ್ನು ಅಲಂಕರಿಸಬೇಕೆ?! ಆದರೂ ಮಂಗಳವರ್ಧನೆಗಾಗಿ ಈ ಲಲನೆಯನ್ನು ನಾವು ಈಗ ವಿವಿಧಾಭರಣಗಳಿಂದ ಅಲಂಕರಿಸೋಣ" ಎಂದಳು ಒಬ್ಬಳು. ವ|| ಅವಳು ಹಾಗೆ ಹೇಳಿದ ಬಳಿಕ ಮತ್ತೊಬ್ಬಳು ಅತಿಚತುರೆ ಹೀಗೆಂದಳು. ೧೦೩. "ಈಕೆ ಸುಂದರಿಯರಿಗೆ ಅಲಂಕಾರಪ್ರಾಯಳು. ಈಕೆಯ ಮಾಟವಾದ ಅವಯವವು ಭೂಷಣಕ್ಕೇ ಭೂಷಣದ ಶ್ರೀಯನ್ನುಂಟುಮಾಡುವುದು. ಆದುದರಿಂದ, ಒಡವೆಗಳಿಂದ ಈ ಮನೋಹರೆಗೆ ಸೊಗಸನ್ನುಂಟುಮಾಡುವ ಮಾತು ಹಾಗಿರಲಿ. ನಿಜವಾಗಿಯೂ ಆಭರಣಗಳ ಸಮೂಹಕ್ಕೆ ಈ ಕೋಮಲೆಯ ಅಂಗಸಂಗದಿಂದ ಹೊಸದಾದ

---

೧. ತದ್ಭೂಷಣಾ (ಕ)

ವ|| ಎಂದು ಪೊಗೞ್ದು ತದನಂತರಂ

ಉದಯಿಸುವೆಳವೆಱೆಯಂ ವರು
ಣದಿಶಾವಧು ಸಂಜೆಗೆಂಪಿನಿಂ ರಂಜಿಪವೋಲ್
ಸುದತಿಯನದೊರ್ಬಳನುರಾ
ಗದೆ ಕುಂಕುಮದಂಗರಾಗದಿಂ ರಂಜಿಸಿದಳ್ ೧೦೪

ಘುಸೃಣರಸದಿಂದಮೆಸೆದಳ್
ಕಿಸಲಯದಿನಶೋಕಲತಿಕೆ ಕೇಸರರಜದಿಂ
ಬಿಸಜಿನಿ ಕೆಂಗವಸಣಿಗೆಯಿ
ನಸಮಾಯುಧಚಾಪಲೇಖೆಯೆಸೆವಂತಿರವಳ್ ೧೦೫

ವ|| ಮತ್ತೊರ್ವಳಲಘುಜಘನೆ ದುಗುಲಮಂ ನಿಱೆವಿಡಿದು ತಂದುಕುಡೆ

ಬಂಬಲ್ನಿಱೆ ಮದನನ ನನೆ
ಯಂಬಿನ ಪೊದೆಯೆನಿಸೆ ಕಣೆಯಮಳವಟ್ಟಿರೆ ಮು
ಯ್ಯಂ ಬಳಸಿದ ಮೇಲುದು ಕುಚ
ಮಂ ಬಿಗಿದಿರೆ ಗುರುನಿತಂಬೆ ದುಗುಲಮನುಟ್ಟಳ್ ೧೦೬

ಗೆಲೆವಂದಮೃತಾರ್ಣವ ಫೇ
ನಲಕ್ಷ್ಮಿಯಂ ಮಿಸುಪ ದುಗುಲದುಳ್ಳುಡೆ ಪಿರಿದುಂ
ಲಲಿತಾಂಗಿಗೆ ಸೊಗಯಿಸಿದ
ತ್ತಲರ್ದೊಂಗಲ್ ಕಲ್ಪಲತೆಗೆ ಸೊಗಯಿಪ ತೆಱದಿಂ ೧೦೭

ವ|| ಮತ್ತರ್ವಳುಪಹಾಸಕಲಿತ ಕಲಭಾಷಿಣಿ

ಕಾಂತಿಯನ್ನುಂಟುಮಾಡುತ್ತಿರುವೆವು!" ವ|| ಎಂದು ಹೊಗಳಿದಳು. ಆಮೇಲೆ ೧೦೪. ಉದಯಿಸುವ ಬಾಲಚಂದ್ರನನ್ನು ಪಶ್ಚಿಮ ದಿಗಂಗನೆಯು ಸಂಜೆಗೆಂಪಿನಿಂದ ಹೊಳೆಯಿಸುವಂತೆ ರುಕ್ಮಿಣಿಯನ್ನು ಅದೊಬ್ಬಳು ಅನುರಾಗದಿಂದ ಕುಂಕುಮಕೇಸರಿಯ ಅಂಗರಾಗದಿಂದ ಹೊಳೆಯಿಸಿದಳು. ೧೦೫. ಚಿಗುರಿನಿಂದ ಅಶೋಕಲತೆಯೂ ಕೇಸರದ ಧೂಳಿನಿಂದ ಕಮಲಿನಿಯೂ ಕೆಂಪು ಗವಸಣಿಗೆಯಿಂದ ಕಾಮನಬಿಲ್ಲೂ ಹೊಳೆಯುವಂತೆ ರುಕ್ಮಿಣಿ ಕುಂಕುಮಕೇಸರಿಯ ರಸದಿಂದ ಹೊಳೆದಳು. ವ|| ಮತ್ತೊಬ್ಬ ಸುಂದರಿ ದುಕೂಲವನ್ನು ನಿರಿಹಿಡಿದು ತಂದುಕೊಟ್ಟಳು. ರಾಶಿಯಾದ ನಿರಿಯು ಮನ್ಮಥನ ಹೂಬಾಣದ ಪೊದೆಯೆನ್ನುವಂತಿರಲು ೧೦೬. ಕ್ರಮವು ಸರಿಯಾಗಿರುತ್ತಿರಲು ಹೆಗಲನ್ನು ಬಳಸಿದ ಮೇಲುಹೊದಿಕೆಯು ಸ್ತನವನ್ನು ಬಿಗಿಯುವಂತೆ ಗುರುನಿತಂಬೆಯಾದ ರುಕ್ಮಿಣಿ ಪಟ್ಟೆಯಮಡಿಯನ್ನು ಉಟ್ಟುಕೊಂಡಳು. ೧೦೭. ಹೊಳೆಯುವ ದುಕೂಲದ ಒಳಉಡಿಗೆಯು ಅಮೃತಸಾಗರದ ನೊರೆಯ ಕಾಂತಿಯನ್ನು ಗೆಲ್ಲುತ್ತ ಹೂ ಗೊಂಚಲು ಕಲ್ಪಲತೆಗೆ ಸೊಗಸುವಂತೆ ಆ ಲಲಿತಾಂಗಿಗೆ ಬಹಳ ಚೆನ್ನಾಗಿ ಸೊಗಸಿತು. ವ|| ಉಪಹಾಸದಿಂದ ಕೂಡಿದ ಮಧುರಭಾಷಿಣಿಯಾದ ಒಬ್ಬಳು

ಒದೆಯೆ ಪುರುಡಿಂದಮೀಕೆಯ
ಪದದಲತಗೆ ಕೃಷ್ಣನಂಗದೊಳ್ ಪೊರೆಗುಂ ಬೇ
ಟದ ಮುದ್ರೆಗಳಂತೆನುತುಂ
ಸುದತಿಯ ಕೇಸಡಿಯನೂಡಿದಳ್ ಜತುರಸದಿಂ ೧೦೮

ತರುಣಿಯ [1]ಪದತಳವಲತಗೆ
ಪೊರೆದೆಸೆದುವು ತಮ್ಮನಚ್ಯುತಂ ಮೂರ್ಧದೊಳಾಂ
ತಿರೆ ತನ್ಮಣಿಮಕುಟದ್ಯುತಿ
ಪೊರೆದಪುದೀ ಕ್ರಮದೊಳೆಂದು ಸೂಚಿಪ ತೆಱದಿಂ ೧೦೯

ವ|| ಮತ್ತೊರ್ವಳ್ ಕುಂದಮಂದಸ್ಮಿತಾಂಶುವಿಶದಾಕ್ಷರಾಳಾಪೆ

ಹರಿ ಪಾದಾನತನಾಗೆ ತನ್ಮಕುಟಸಂಘಟ್ಟಂಗಳಿಂದಾದ ನೂ
ಪುರದೊಂದಿಂಚರವೀ ಲತಾಂಗಿಯ ಮಹಾಸೌಭಾಗ್ಯಮಂ ಸಾಱುವಂ
ತಿರವೇಟ್ಕುಂ ದಿಟಮೆಂದು ರುಕ್ಮಿಣಿಗದೊರ್ವಳ್ ಕಟ್ಟಿದಳ್ ರತ್ನನೂ
ಪುರಮಂ ತತ್ಪದಕಾಂತಿ ನೂರ್ಮಡಿಪಿನಂ ಮಂಜೀರಿಕಾ [2]ಕಾಂತಿಯಿಂ ೧೧೦

ಮಿರುವನ್ಮಣಿನೂಪುರಯುತ
ಚರಣಾಬ್ಜದಿನೆಸೆದಳಸಿಯಳಬ್ಜಪರಾಗಂ
ಬೊರೆದು ಮೊಱೆವಳಿಗಂ ತಳೆ
ದರುಣಾಬ್ಜದಿನೆಸೆದು [3]ತೋಱುತಿರ್ಪಬ್ಜಿನಿವೋಲ್ ೧೧೧

೧೦೮. 'ಈಕೆ ಸ್ಪರ್ಧೆಯಿಂದ ಕೃಷ್ಣನನ್ನು ಒದೆದರೆ ಇವಳ ಕಾಲಿನ ಅರಗಿನ ರಸವು ಕೃಷ್ಣನ ಅಂಗದಲ್ಲಿ ಪ್ರೇಮದ ಮುದ್ರೆಗಳಂತೆ ಬೀಳುವುದು!' ಎನ್ನುತ್ತ ಆ ಸುದತಿಯ ಕೆಂಪಾದ ಅಂಗಾಲಿಗೆ ಅರಗಿನ ರಸವನ್ನು ಲೇಪಿಸಿದಳು. ೧೦೯. ಅರಗಿನ ರಸವನ್ನು ಬಳಿದ ಆ ತರುಣಿಯ ಅಂಗಾಲುಗಳು ತಮ್ಮನ್ನು ಕೃಷ್ಣನು ತಲೆಯಲ್ಲಿ ಧರಿಸಿದಾಗ ಅವನ ರತ್ನಕಿರೀಟದ ಕಾಂತಿಯು ನಮ್ಮ ಮೇಲೆ ಈ ಕ್ರಮದಲ್ಲಿ ಹರಡುವುದು ಎಂದು ಸೂಚಿಸುವಂತೆ ಹೊಳೆಯುತ್ತಿದ್ದವು. ವ|| ಮತ್ತೊಬ್ಬಳು ಮೊಲ್ಲೆಯ ಮೊಗ್ಗಿನಂತೆ ಬಿಳುಪಾದ ಮುಗುಳ್ನಗೆಯನ್ನು ಬೀರುತ್ತ ಸ್ಫುಟವಾಗಿ, ೧೧೦. 'ಕೃಷ್ಣನು ಇವಳ ಕಾಲಿಗೆ ಬಿದ್ದಾಗ ಅವನ ಕಿರೀಟದ ಸಂಘಟ್ಟನೆಯಿಂದ ಆಗುವ ಇವಳ ಕಾಲುಬಳೆಯ ಇಂಪಾದ ಧ್ವನಿಯು ಈ ಲತಾಂಗಿಯ ಮಹಾಸೌಭಾಗ್ಯವನ್ನು ನಿಜವಾಗಿ ಸಾರುವಂತಿರಬೇಕು.' ಎಂದು ರತ್ನದ ಕಾಲುಬಳೆಯನ್ನು ಅದರ ಕಾಂತಿಯಿಂದ ಅವಳ ಕಾಲಿನ ಹೊಳಪು ನೂರರಷ್ಟಾಗುವಂತೆ ತೊಡಿಸಿದಳು. ೧೧೧. ಹೆಚ್ಚಾಗಿ ಶಬ್ದಮಾಡುತ್ತಿರುವ ರತ್ನದ ಕಾಲುಬಳೆಯುಳ್ಳ ಕೆಂದಾವರೆಯಂತಿರುವ ಕಾಲಿಂದ ಆ ರುಕ್ಮಿಣಿಯು ಕಮಲದ ಧೂಳು ಅಂಟಿಕೊಂಡು ಝೇಂಕರಿಸುತ್ತಿರುವ ತುಂಬಿಗಳು ಸುತ್ತಿಕೊಂಡಿರುವ ಕೆಂದಾವರೆಯ ಹೂವುಳ್ಳ

---

೧. ಪದತಳದಲತೆಗೆ (ಕಖಗ) ೨. ಕಾಂತಿಯಂ (ಖ) ೩. ತೋಱುತಿರ್ಪಬ್ಜಿನಿಯೊಲ್ (ಕಗ)

ವ|| ಮತ್ತೊರ್ವಳತಿಚತುರವಚನೆ

ಕಲಕಾಂಚಿಯ ಗಂಟೆಗಳೀ
ಲಲನೆಯ ಲಾವಣ್ಯನದಿಯ ಪೊಣರ್ವಕ್ಕಿಗಳೊಂ
ದುಲಿಪುವೆನಲುಲಿಗುಮೆನುತುಂ
ಲಲನೆಗೆ ಕಟ್ಟಿದಳೆ ರಮಣಿ ಮಣಿಮೇಖಲೆಯಂ ೧೧೨

ಧರಿಯಿಸಿ ಮಣಿಮೇಖಲೆಯಂ
ಕರಮೆಸೆದತ್ತಲಘುಜಘನೆಯತಿಘನಜಘನಂ
ಸ್ಮರಕುಂಭಿಕುಂಭವಾಂತುದು
ಸುರತ್ನನಕ್ಷತ್ರಮಾಲಿಕೆಯನೆಂಬಿನೆಗಂ ೧೧೩

[1]ಅಸುರಾರಿಗೆ ಸೋಲ್ತಿಂದ
ಯ್ದು ಸರಕ್ಕೆಡೆಗೊಟ್ಟ ಸತಿಯ ಕುಚುಯುಗಮಧ್ಯಂ
ತಿಸರಕ್ಕೆಡೆಗುಡದೆಂದಾ
ಅಸಿಯಳ್ಗೆಸೆವೆಕ್ಕಸರಮನಿಕ್ಕಿದಳೊರ್ವಳ್ ೧೧೪

ಸ್ತನಪುಳಿನದಲ್ಲಿ ಸೂಸಿದ
ತನುಲಾವಣ್ಯಾಪಗಾಪಯಃಕಣಗಣಮೆಂ
ಬಿನೆಗಂ ಕುಚದೊಳ್ ನೀಹಾ
ರನಿಜೋಜ್ವಳಹಾರಮೆಸೆಯೆ ರುಕ್ಮಿಣಿಯೆಸೆದಳ್ ೧೧೫

ಕಮಲಿನಿಯಂತೆ ಕಾಣಿಸಿದಳು. ವ|| ಮತ್ತೊಬ್ಬಳು ಅತಿಚತುರವಚನೆ- ೧೧೨. 'ಧ್ವನಿಮಾಡುವ ವಡ್ಯಾಣದ ಗೆಜ್ಜೆಗಳು ಈ ಲಲನೆಯ ಲಾವಣ್ಯನದಿಯ ಚಕ್ರವಾಕ ಪಕ್ಷಿಗಳಂತೆ ಶಬ್ದಮಾಡುವುವು' ಎಂದು ಹೇಳುತ್ತ ಆಕೆಗೆ ಕಿರುಗೆಜ್ಜೆಗಳಿಂದ ಕೂಡಿದ ರತ್ನದ ಒಡ್ಯಾಣವನ್ನು ತೊಡಿಸಿದಳು. ೧೧೩. ರತ್ನಖಚಿತವಾದ ಒಡ್ಯಾಣವನ್ನು ಧರಿಸಿದ ಘನಜಘನೆಯಾದ ರುಕ್ಮಿಣಿಯ ಸ್ಥೂಲಜಘನವು ರತ್ನಖಚಿತವಾದ ನಕ್ಷತ್ರಮಾಲಿಕೆಯನ್ನು ಧರಿಸಿದ ಮನ್ಮಥನ ಆನೆಯ ಕುಂಭಸ್ಥಲದಂತೆ ಚೆನ್ನಾಗಿ ಕಾಣಿಸಿತು. ೧೧೪. ಕೃಷ್ಣನಿಗೆ ಸೋತು ಮನ್ಮಥನ ಐದು ಬಾಣಕ್ಕೆಡೆಗೊಟ್ಟು ಆ ರುಕ್ಮಿಣಿಯ ಸ್ತನಯುಗಮಧ್ಯವು ಮೂರೆಳೆಯ ಹಾರಕ್ಕೆ ಸ್ಥಳಾವಕಾಶವನ್ನು ಕೊಡುವುದಿಲ್ಲವೆಂದು ಒಬ್ಬಳು ಅವಳಿಗೆ ಒಂದೆಳೆಯ ಸರವನ್ನು ಹಾಕಿದಳು! ೧೧೫. ಸ್ತನವೆಂಬ ಮರಳದಿಣ್ಣೆಯ ಮೇಲೆ ಚೆಲ್ಲಿರುವ ದೇಹಲಾವಣ್ಯನದಿಯ ನೀರಿನ ಹನಿಗಳೋ ಎನ್ನುವಂತೆ ರುಕ್ಮಿಣಿಯ ಸ್ತನಗಳ ಮೇಲೆ ಹಿಮದಂತೆ ಸಹಜವಾಗಿ ಹೊಳೆಯುವ ಹಾರವು ಹೊಳೆಯುತ್ತಿರಲು ರುಕ್ಮಿಣಿ ಪ್ರಕಾಶಿಸಿದಳು.

---

೧. ಅಸುರಾರಿಗೆ ಸೋಲ್ತಿಂದ್ಯೆದುಸರಕ್ಕೆಡೆಗೊಟ್ಟ ಸತಿಯ ಕುಚಮಧ್ಯದೊಳೆಕ್ಕಸರಂ ನುಸುಳಲ್ಬಾರದ ಬಿಸವಂದವಿದೆನಿಸಿ ಯುವತಿಗೆಸೆದುದು ಹಾರಂ (ಕ)

ಇವಳ ಭುಜಲತಿಕೆಗಳ್ಗಿವು
[1]ನವಮುಕುಳಾವಳಿವೊಲೆಸೆಗುಮೆನುತುಂ ದ್ಯುತಿವೀ
ಱುವ ಮುತ್ತಿನ ಚಳಕಿಗೆಯಂ
ಯುವತಿಯ ನಳಿತೋಳ್ಗೆ ಕಟ್ಟಿದಳ್ ಮತ್ತೊರ್ವಳ್ ೧೧೬

ಸ್ಮರಕರಿಣೀಹಸ್ತಾಗ್ರಂ
ಸುರುಚಿರಬಿಸಕಾಂಡವಲಯವೇಲ್ಲಿತವಾದಂ
ತಿರೆ [2]ನಳಿತೋಳ್ಗಳ್ ಮುತ್ತಿನ
ಸರಿಗೆಯನಾಂತೆಸೆಯೆ ಕಾಂತೆ ಬಿಂಕಮನಾಂತಳ್ ೧೧೭

ಪೂಗಣೆ ಗಣನೆಯೊಳಿರ್ಮಡಿ
ಯಾಗಿರ್ದಪುವಭಿನವಂಗಳಿವಱೊಳ್ ಮುದ್ರಾ
ಯೋಗವಿಧಿಯೆಂದು ಬೆರಲಿಂ
ಗಾಗಳ್ ಮುದ್ರಿಕೆಯನೊರ್ವಳಿಟ್ಟಳ್ ಸತಿಯಾ ೧೧೮

ಉಡಿಸಿದ ನನಗಣೆಯಂತಿರೆ
ತುಡಿಸಿದ ಮುದ್ರಿಕೆಯಿನೆಸೆವ ಬೆರಲಿಂ ಬೆರಲಂ
ಮಿಡಿಯಿಸಿ ರುಕ್ಮಿಣಿ ಜಗಮಂ
ಮೃಡರಿಪು ಬೆರಲೆತ್ತಿ ನಿಲ್ವಿನಂ ಬಗೆಗೊಂಡಳ್ ೧೧೯

ಈ ಲಲನೆಯ ಮುಖಚಂದ್ರನ
ನೋಲೈಸಲ್ಕೆಂದು ಬಂದು ಮಂಡಳಿಸಿದ ತಾ
ರಾಳಿಯವೊಲೆಸೆವುದೆನುತುಂ
ಬಾಲೆಗೆ ಕಿವಿಗಿಕ್ಕೆ ಮುತ್ತಿನೋಲೆಯನೊರ್ವಳ್ ೧೨೦

೧೧೬. ಮತ್ತೊಬ್ಬ ಯುವತಿ ಇವಳ "ತೋಳುಬಳ್ಳಿಗಳಿಗೆ ಇವು ಮೊಗ್ಗುಗಳ ಗೊಂಚಲಿನಂತೆ ಹೊಳೆಯುವುವು' ಎಂದು ಕಾಂತಿಯನ್ನು ಬೀರುವ ಮುತ್ತಿನ ಕುಚ್ಚುಗಳನ್ನು ರುಕ್ಮಿಣಿಯ ಕೋಮಲವಾದ ತೋಳಿಗೆ ಕಟ್ಟಿದಳು. ೧೧೭. ಮನ್ಮಥನ ಹೆಣ್ಣಾನೆಯ ಸೊಂಡಿಲಿನ ತುದಿಯು ಬಹುಮನೋಹರವಾದ ತಾವರೆಯ ದಂಟಿನ ಬಳೆಯಿಂದ ಕೂಡಿರುವಂತೆ ಆ ಕಾಂತೆಯ ಕೋಮಲವಾದ ತೋಳುಗಳು ಮುತ್ತಿನ ಸರಿಗೆಯನ್ನು ಧರಿಸಿ ಹೊಳೆಯುತ್ತಿರಲು ಅವಳು ಬಿಂಕವನ್ನು ಪಡೆದಳು. ೧೧೮. 'ಹೂವಿನ ಕಾಮಬಾಣಗಳು ಎಣಿಸಿನೋಡುವಾಗ ಎರಡರಷ್ಟಾಗಿವೆ, ಇವು ಹೊಸವು; ಇವುಗಳಿಗೆ ತಡೆಮುದ್ರೆಯನ್ನು ಹಾಕಬೇಕು!' ಎಂದು ಒಬ್ಬಳು ರುಕ್ಮಿಣಿಯ ಬೆರಳಿಗೆ ಮುದ್ರೆಯುಂಗುರವನ್ನಿಟ್ಟಳು. (ಕಾಮನ ಬಾಣಗಳು ಐದು. ರುಕ್ಮಿಣಿಯ ಕೈಬೆರಳು ಹತ್ತು) ೧೧೯. ತೊಡಿಸಿದ ಮುದ್ರಿಕೆಯಿಂದ ಕೂಡಿದ ಬೆರಳು ತೊಡಿಸಿದ ಪುಷ್ಪಬಾಣದಂತೆ ಕಾಣುತ್ತಿರಲು ರುಕ್ಮಿಣಿಯು ಲೋಕವೇ ಬೆರಳು ಮಿಡಿಯುವಂತೆ ಆಗಿ, ಮನ್ಮಥನೂ (ಧೈರ್ಯದಿಂದ) ಬೆರಳನ್ನೆತ್ತಿ ನಿಲ್ಲುವಂತೆ

---

೧. ನವಮುಕ್ತಾವಳಿ (ಕಖಗ) ೨. ತೋಳ್ಗಳ ಕಂಕಣ ಹರಿಣೀನೇತ್ರೆಯ ಕರಂಗಳಂ ಸೊಗಯಿಸುಗುಂ (ಕ)

ಮಂಡಳಿಸಿ ನಿಂದುವೀಕೆಯ
ಪಾಂಡುರಲೋಲತ್ಕಟಾಕ್ಷಮಾಲಾಚ್ಛಟೆಗಳ್
ಗಂಡಸ್ಥಳದೊಳೆನಲ್ ಬಗೆ
ಗೊಂಡುವು ಪೊಸಮುತ್ತಿನೋಲೆಗಳ್ ಶಶಿಮುಖಿಯಾ ೧೨೧

ಮದನಜಯವಶ್ಯಯಂತ್ರಮ
ನಿದೆ ಚಿತ್ರಿಸಿದಪ್ಪಳೆಂಬಿನಂ ಚಿತ್ರಿಸಿದಳ್
ಸುದತಿಯ ಕಪೋಲದೊಳ್ ಸ
ಮ್ಮದದಿಂ ಮೃಗಮದದ ಪತ್ರಭಂಗಮನೊರ್ವಳ್ ೧೨೨

ವದನಾಮೋದಕ್ಕೆಱಗುವ
ಮದಭೃಂಗದ ಕರ್ಣಪೂರಕೈರವದ ನೆೞಲ್
ಪುದಿದತ್ತು ಕಪೋಲದೊಳೆನೆ
ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ ೧೨೩

ಕೆಂದಾವರೆವಂಡುಂಡಾ
ನಂದದಿನೋಕರಿಸುವಳಿಗಳೆನಿಸುಗುಮಿವಱಿಂ
ದೊಂದಿದ ಕುರುಳೆಂದೊರ್ವಳ್
ಸಂದಿಸಿದಳ್ [1]ಚೆನ್ನ ಪೂವನಬಲೆಯ ಕುರುಳೊಳ್ ೧೨೪

ಎಳವಿಸಿಲ ತಮದ ಮಱಿಗಳ್
ಕೆಳೆಗೊಂಡಿರ್ದಪುವು ಮುಗ್ಧಶಶಿಯ ಸಮೀಪ
ಸ್ಥಳದೊಳೆನೆ [2]ಚೆನ್ನ ಪೂಗಳು
ಮಳಕಂಗಳ್ ನಿಟಿಲತಟದೊಳೆಸೆದುವು ಸತಿಯಾ ೧೨೫

ಮನೋಹರಳಾಗಿದ್ದಳು. ೧೨೧. 'ಈ ಲಲನೆಯ ಮುಖಚಂದ್ರನ ಸೇವೆಮಾಡಲು ಬಂದು, ಸುತ್ತುವರಿದಿರುವ ನಕ್ಷತ್ರಸಮೂಹದಂತೆ ಇದು ಹೊಳೆಯುವುದು' ಎನ್ನುತ್ತ ಒಬ್ಬಳು, ರುಕ್ಮಿಣಿಯ ಕಿವಿಗೆ ಮುತ್ತಿನ ಓಲೆಯನ್ನು ಇಟ್ಟಳು. ೧೨೧. ಈಕೆಯ ಬಹಳ ಬಿಳಿದಾದ ಕಡೆಗಣ್ಣಿನ ನೋಟದ ಕಾಂತಿಮಾಲೆಯು ಕಪೋಲಪ್ರದೇಶದಲ್ಲಿ ಬಂದು ಹೆಪ್ಪುಗಟ್ಟಿ ನಿಂತಿವೆಯೊ ಎನ್ನುವಂತೆ ಆ ಚಂದ್ರಮುಖಿಯ ಹೊಸಮುತ್ತಿನೋಲೆಗಳು ಮನೋಹರ ವಾಗಿದ್ದವು. ೧೨೨. ಮನ್ಮಥನ ಜಯವಶ್ಯಯಂತ್ರವನ್ನು ಈಗ ಚಿತ್ರಿಸುವಳು ಎನ್ನುವಂತೆ ರುಕ್ಮಿಣಿಯ ಕೆನ್ನೆಯ ಮೇಲೆ ಪತ್ರಚಿತ್ರವನ್ನು ರಚಿಸಿದಳು. ೧೨೩. ಆ ಸುಂದರಿಯ ಕೆನ್ನೆಯ ಮೇಲಿನ ಪತ್ರಚಿತ್ರವು ಅವಳ ಮುಖಸುವಾಸನೆಗೆ ಎರಗುವ ತುಂಬಿಯೂ ಮತ್ತು ಕಿವಿಯಲಂಕಾರದ ಕನ್ನೈದಿಲೆಯ ನೆಳಲೂ ಹರಡಿರುವಂತಿದ್ದಿತು. ೧೨೪. 'ಈ ಹೂಗಳಿಂದ ಕೂಡಿದ ರುಕ್ಮಿಣಿಯ ಕುರುಳು ಕೆಂದಾವರೆಯ ಮಕರಂದವನ್ನು ಹೀರಿ, ಆನಂದದಿಂದ ಓಕರಿಸುವ ತುಂಬಿಯ ಹಿಂಡೆನಿಸುವುದು' ಎಂದು ಒಬ್ಬಳು ಅವಳ ಮುಡಿಯಲ್ಲಿ ಚೆನ್ನಾಗಿರುವ ಹೂಗಳನ್ನು ಮುಡಿಸಿದಳು. ೧೨೫. ಎಳೆಬಿಸಿಲಿನ ಮತ್ತು ಕತ್ತಲೆಯ ಮರಿಗಳು ಸುಂದರ ಚಂದ್ರನ ಸಮೀಪದಲ್ಲಿ ಸ್ನೇಹಗೊಂಡಿವೆಯೆನ್ನುವಂತೆ ಅವಳ ಹಣೆಯ ಮೇಲೆ

---

೧. ಚಿನ್ನ (ಮೂಲ) ೨. ಚಿನ್ನ (ಮೂಲ)

ತಿಲಕಿಸೆ ಮದನದ್ವಿರದಂ
ತಿಲಕಮನೀ ಕನ್ನೆಗಿಡುವೆನೆನುತುಮದೊರ್ವಳ್
ತಿಲಕಮನಿಡೆ ಸತಿ ಶೃಂಗಾ
ರಲಕ್ಷ್ಮಿ ಕಣ್ದೆಱೆದ ತೆಱದೆ ತಿಲಕದಿನೆಸೆದಳ್ ೧೨೬

ನೆಲೆಯುಂ ಗಾಡಿಯುಮಳವಡೆ
ಲಲನೆ ಪೆಱಳ್ ದಿವ್ಯಮಾಲೆಯಂ [1]ಮುಡಿಯಿಸಿದಳ್
ಮಲೆವ ಜಗವೆಲ್ಲಮಂ ಸಲೆ
ಗೆಲೆವಂದಸಮೇಷು ಪೂಣ್ದು ಮುಡಿಗಿಕ್ಕುವಿನಂ ೧೨೭

ವ|| ಮತ್ತೊರ್ವಳ್

ನಿನ್ನ ಮುಖಪ್ರತಿಪಕ್ಷನ
ನಾನ್ನೋಡಿದೆ ಸೆಱೆಗೆ ತಂದೆನಿಂದುವನೆಂಬಂ
ತುನ್ನತಕುಚೆ ತೋಱಿದಳಾ
ಚೆನ್ನೆಗೆ ಕನ್ನಡಿಯನಮಲಮಣಿಶೃಂಖಲಮಂ ೧೨೮

ಜಿತಚಂದ್ರಮಂಡಲಕ್ಕ
ಪ್ರತಿಮಕ್ಕೀಕೆಯ ಮೊಗಕ್ಕೆ ಕಂಡೆವಿದೊಂದಂ
ಪ್ರತಿಮಾನಮನೆನೆ ವದನ
ಪ್ರತಿಕೃತಿ ಚೆಲ್ವಾಯ್ತು ಮುಕುರದೊಳ್ ರುಕ್ಮಿಣಿಯಾ ೧೨೯

ವ|| ಅಂತು ಕೈಗೆಯ್ದು ರುಕ್ಮಿಣಿಯಂ ಪರಿಣಯನಭವನದೊಳ್ ಯಥೋಚಿತಾಚಾರದಿಂದಿರಿಸಿ

ಚೆನ್ನಾಗಿರುವ ಹೂಗಳೂ ಮುಂಗುರುಳುಗಳೂ ಕೂಡಿ ಹೊಳೆದವು. ೧೨೬. ಮನ್ಮಥ ಗಜವು ಇವಳನ್ನು ತಿಲಕವಾಗಿಸುವಂತೆ ಈ ಕನ್ಯೆಗೆ ತಿಲಕವನ್ನಿಡುವೆನೆಂದು ಅದೊಬ್ಬಳು ರುಕ್ಮಿಣಿಗೆ ತಿಲಕವನ್ನಿಟ್ಟಳು. ಆ ತಿಲಕದಿಂದ ರುಕ್ಮಿಣಿಯು ಶೃಂಗಾರಲಕ್ಷ್ಮಿಯೇ ಕಣ್ಣುತೆರೆದಿರುವಂತೆ ಕಾಣಿಸುತ್ತಿದ್ದಳು. ೧೨೭. ನೆಲೆಯೂ ಬೆಡಗೂ, ಸೊಬಗೂ ಒಪ್ಪ (ಹೊಂದು)ವಂತೆ ಬೇರೊಬ್ಬಳು ಲಲನೆ ಗರ್ವ ಪಡುವ ಜಗತ್ತೆಲ್ಲವನ್ನೂ ಪೂರ್ಣವಾಗಿ ಜಯಿಸಿ ಮನ್ಮಥನು, ಪ್ರತಿಜ್ಞೆ ಮಾಡಿ ಅವಳಿಗೆ ಕಿರೀಟವನ್ನು ಧರಿಸುವಂತೆ ದಿವ್ಯಮಾಲೆಯನ್ನು ಮುಡಿಸಿದಳು. ವ|| ಮತ್ತೊಬ್ಬಳು ೧೨೮. ನಿನ್ನ ಮುಖಕ್ಕೆ ಪ್ರತಿಪಕ್ಷನಾದ ಚಂದ್ರನನ್ನು ನಾನು ಸೆರೆಹಿಡಿದು ತಂದಿರುವೆನು ಎಂದು, ಉನ್ನತ ಕುಚೆಯೊಬ್ಬಳು ಸರಪಣಿಯಿಂದ ಕೂಡಿದ ನಿರ್ಮಲವಾದ ರತ್ನದ ಕನ್ನಡಿಯನ್ನು ರುಕ್ಮಿಣಿಗೆ ತೋರಿಸಿದಳು. ೧೨೯. ಚಂದ್ರಮಂಡಲವನ್ನೂ ಜಯಿಸಿ ಅನುಪಮವಾಗಿರುವ ಈಕೆಯು ಮುಖಕ್ಕೆ ಸಮವಾದುದನ್ನಿದೊಂದನ್ನು ಕಂಡೆ ಎನ್ನುವಂತೆ ಕನ್ನಡಿಯಲ್ಲಿ ರುಕ್ಮಿಣಿಯ ಮುಖದ ಪ್ರತಿಬಿಂಬವು ಚೆಲುವಾಗಿದ್ದಿತು. ವ|| ಹಾಗೆ ಅಲಂಕಾರ ಮಾಡಿಸಿ ರುಕ್ಮಿಣಿಯನ್ನು ವಿವಾಹಗೃಹದಲ್ಲಿ ಯಥೋಚಿತವಾದ ಆಚಾರದಿಂದ ಇರಿಸಿ

---

೧. ಮುಡಿಯಿಸೆ ಕೋಮಲೆಗೆ (ಕಖಗ)

ಕೋಮಳ ಮಾತುಳುಂಗಫಳದಿಂ ಬಲಗೈ [1]ಕಳಮಾಕ್ಷತಪೂ
ರ್ಣಾಮಳಶಂಖದಿಂದಮೆಡಗೈಯೆಸೆಯುತ್ತಿರೆ ಬಂದನುತ್ಕಟ
ಪ್ರೇಮನುದಾತ್ತವೇದಮತಿ ಕೃಷ್ಣಸಭಾವಳಯಕ್ಕೆ ವಿಶ್ವ ವಿ
ದ್ಯಾಮಹಿತಂ ದ್ವಿಜೌಘಸಹಿತಂ ಯದುವಂಶಹಿತಂ ಪುರೋಹಿತಂ ೧೩೦

ವ|| ಅಂತು ಬಂದು ಪುರೋಹಿತನುಚ್ಚಾರಿತಸ್ವಸ್ತಿಶಬ್ದನಾಗಿ ಮಾತುಳುಂಗಫಲಮಂ ನೀಡಿ ವಿವಾಹಲಗ್ನಮಾಸನ್ನಮೆಂದು ಬಿನ್ನಪಂಗೆಯ್ವುದುಮಂಬುರುಹನಾಭಂ ಸಂಭ್ರಮದಿಂ ಪರಿಣಯನಭವನಾಭಿಮುಖನಾಗಿ

ಬಳವದಪಾರವೇದರುತಿ ಗೇಯರವಂ ಪಟಹಸ್ವನಂ ಪುರೀ
ಕಳಕಳದಿಂ ದಳಂಬಡೆದು ವಿಶ್ವಜಗಜ್ಜನಕೀರ್ತನಾರವಂ
ಗಳಿನಿನಿಸೇಟಿಗೆವೆತ್ತು ದಿಗಿಭವೃಜಬೃಂಹಿತಭೂರಿನಾದದಿಂ
ಜಳಧಿಯನಾಂತು ಘೂರ್ಣಿಪಿನಮಾ ಗೃಹಮಂ ಪುಗುತಂದನಚ್ಯುತಂ ೧೩೧

ವ|| ಅಂತು ವಿವಾಹಮಂಟಪಮಂ ಪುಂಡರೀಕಾಕ್ಷಂ ಪುಗುವುದುಂ ಮಹೋತ್ಸಾಹ ಪರಂಪರೆ ನೆಗಟೆ ತದನಂತರಂ

ತೊಲಗೆ ದುಕೂಲಕಾಂಡಪಟಮುತ್ತಮಲಗ್ನದೊಳೊರ್ವರೊರ್ವರಂ
ನಲಿದೊಲವಿಂದೆ ದಂಪತಿಗಳೀಕ್ಷಿಸೆ ನೋಟದ ಬಳ್ಳಿವಳ್ಳಿ ನೆ
ಯ್ದಲ [2]ಮಟೆವೊಲ್ ಸುಧಾರಸದ ಸೋನೆವೊಲಂಗಜಬಾಣವೃಷ್ಟಿವೊಲ್
ಸಲೆ ನಿಲೆ ಪರ್ವಿ ಕೊರ್ವಿದುದು ಕೂಡೆ ವಿವಾಹಗೃಹಾಂತರಾಳದೊಳ್ ೧೩೨

೧೩೦. ವಿಶ್ವವಿದ್ಯಾಮಹಿಮನೂ ವೇದವಿದನೂ ಉತ್ಕಟ ಪ್ರೇಮವುಳ್ಳವನೂ ಯದುವಂಶ ಹಿತನೂ ಆದ ಪುರೋಹಿತನು ತನ್ನ ಬಲಗಯ್ಯಲ್ಲಿ ಮಾದಲದ ಹಣ್ಣು ಎಡಗಯ್ಯಲ್ಲಿ ಅಕ್ಕಿಯ ಅಕ್ಷತೆಯಿಂದ ತುಂಬಿದ ನಿರ್ಮಲಶಂಖವೂ ಒಪ್ಪುತ್ತಿರುವಲ್ಲಿ ಬ್ರಾಹ್ಮಣ ಸಮೂಹದೊಡನೆ ಕೃಷ್ಣನ ಸಭಾಮಂಟಪಕ್ಕೆ ಬಂದನು. ವ|| ಪುರೋಹಿತನು ಹಾಗೆ ಬಂದು "ಸ್ವಸ್ತಿ" ಎಂದು ಹೇಳಿ ಮಾದಲದ ಹಣ್ಣನ್ನು ನೀಡಿ, ವಿವಾಹಲಗ್ನ ಸಮೀಪಿಸಿತೆಂದು ವಿಜ್ಞಾಪಿಸಿದನು. ಪದ್ಮನಾಭನು ಸಂಭ್ರಮದಿಂದ ವಿವಾಹಗೃಹಾಭಿಮುಖನಾದನು. ೧೩೧. ಉಚ್ಚಸ್ವರದ ವೇದಘೋಷ, ಗಾನಧ್ವನಿ, ಪಟಹವಾದ್ಯ ಧ್ವನಿಗಳು ಪಟ್ಟಣದವರ ಕಲಕಲ ಧ್ವನಿಯಿಂದ ದೊಡ್ಡದಾಗಿ ಸಮಸ್ತ ಜಗಜ್ಜನರ ಸ್ತುತಿ ಧ್ವನಿಗಳಿಂದ ಇನ್ನಷ್ಟು ಬೆಳೆದು ದಿಗ್ಗಜಗಳ ಘೀಂಕಾರದಿಂದ ಸಮುದ್ರವನ್ನು ಸೇರಿ ಮೊರೆಯುತ್ತಿರುವಲ್ಲಿ ಕೃಷ್ಣನು ವಿವಾಹಗೃಹ ವನ್ನು ಪ್ರವೇಶಿಸಿದನು. ವ|| ಹಾಗೆ ಪುಂಡರೀಕಾಕ್ಷ ಕೃಷ್ಣನು ವಿವಾಹಮಂಟಪವನ್ನು ಪ್ರವೇಶಿಸಲು ಮಹೋತ್ಸಾಹಪರಂಪರೆ ಬೆಳೆಯಿತು. ಬಳಿಕ, ೧೩೨. ಉತ್ತಮವಾದ ಲಗ್ನದಲ್ಲಿ ವಧೂವರ ನಡುವಿನ ದುಕೂಲದ ಕಾಂಡಪಟವು ತೆರೆಯಿತು. ದಂಪತಿಗಳು ನಲಿದು ಪ್ರೀತಿಸಿ ಒಬ್ಬರನ್ನೊಬ್ಬರು ನೋಡಿದರು. ಅವರ ಮತ್ತು ಅವರನ್ನು ನೋಡುವವರ

---

೧. ಕಲಮಾಕ್ಷತಾರ್ದ್ರ (ಗ)

೨. ಮಟೆಯೊಳ್ ಸುಧಾರಸದ ಸೋನೆಯೊಳಂಗಜಬಾಣವೃಷ್ಟಿಯೊಳ್ (ಕಖ)

ವ|| ಅಲ್ಲಿಂ ಬಟೆಯಂ

ಮೃದುಗತಿವಿಲೋಲಹಾರರ್
ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾ
ಸ್ಪದನಂ ಹೋಮಾನಳನಂ
ಮದುವಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್ ೧೩೩

ಪರಿಕಲಿಸಿ ಕಲಸೆ ಪಟವಾ
ಸರಜಂ ಸುರಿವಮಲಮೌಕ್ತಿಕಾಕ್ಷತನಿಕರಂ
ಕರಮೆಸೆದತ್ತು ಬಿಸಿಲ್ಮಟೆ
ಸುರಿವಂತೆವೊಲಾ ವಿವಾಹ ಸಮಯೋತ್ಸವದೊಳ್ ೧೩೪

ಲಳಿತಾವಯವದ ಚೆಲ್ವಿಂ
ತೊಳಗುವ ಲಾವಣ್ಯರಸದಿನಬಳಾವಳಿ ತ
ನ್ನಿಳಯಮಣಿಪುತ್ರಿಕಾಸಂ
ಕುಳದೊಳ್ ಯಾನಾನುಮೇಯವಾಯ್ತಾ ಪದದೊಳ್ ೧೩೫

ಶೀತಕರೋದಯೋತ್ಸವದೊಳಂಬುಧಿ ಘೂರ್ಣಿಸುವಂದದಿಂ ಮುರಾ
ರಾತಿ ವಿವಾಹದುತ್ಸವದೆ ಘೂರ್ಣಿಸುತಿರ್ಪ ರಸಪ್ರಸಂಗ ಸಂ
ಗೀತನಿನಾದದಿಂ ದೆಸೆಯೊಳುಣ್ಮುವ ಮಾರ್ದನಿಗಳ್ ದಿಶಾಧಿಪ
ವ್ರಾತಮೆ ರಾಗದಿಂ ಪರಸುವಂತೆವೊಲಾದುದು ತನ್ಮುಕುಂದನಂ ೧೩೬

ವ|| ಅಂತು ವಿವಾಹಮಂಗಳಂ ಪರಿಪೂರ್ಣಮಾಗೆ ಚತುರ್ಥಮಹೋತ್ಸವಾನಂತರ ಮಂದಿನಿರುಳೊಳ್

ನೋಟದ ಬಳ್ಳಿ ಅಮೃತರಸದ ಸೋನೆಯಂತೆ ನೆಯ್ದಿಲೆಯ ಮಳೆಯಂತೆ ಮನ್ಮಥನ ಬಾಣವೃಷ್ಟಿಯಂತೆ ಆ ವಿವಾಹಗೃಹದೊಳಗೆ ಹಬ್ಬಿತು. ವ|| ಆಮೇಲೆ ೧೩೩. ಮೃದು ಗಮನದಿಂದ, ಅಲುಗುವ ಹಾರವುಳ್ಳ ಆ ಮದುಮಕ್ಕಳು ಪ್ರದಕ್ಷಿಣವಾಗಿ ಚಲಿಸುವ ಉರಿಯುಳ್ಳ ಹೋಮಾಗ್ನಿಯನ್ನು ಪ್ರದಕ್ಷಿಣಮಾಡಿ, ಹೊಳೆಯುವ ಅರಳಿನಿಂದ ಪೂಜಿಸಿದರು. ೧೩೪. ಆ ವಿವಾಹ ಮಹೋತ್ಸವದಲ್ಲಿ ಪಟವಾಸದ ಧೂಳೂ ಸುರಿಯುವ ನಿರ್ಮಲವಾದ ಮುತ್ತಿನಕ್ಷತೆಯೂ ಒಂದರೊಡನೊಂದು ಸೇರಿ ಬಿಸಿಲು ಮಳೆ ಸುರಿಯುತ್ತಿರುವಂತೆ ಬಹಳ ಚೆನ್ನಾಗಿ ಕಾಣಿಸುತ್ತಿದ್ದಿತು. ೧೩೫. ಲಲಿತವಾದ ಅವಯವದ ಚೆಲುವಿನಿಂದ ಹೊಳೆಯುವ ಲಾವಣ್ಯರಸದಿಂದ ಅಬಲೆಯರ ಸಮೂಹವು ಆ ಗೃಹದಲ್ಲಿ ಅವರಂತೆಯೇ ಇರುವ ರತ್ನದ ಪುತ್ರಿಕೆಗಳ ಸಮೂಹದಲ್ಲಿ ಬೆರೆತುಹೋಗಿ, ಅವರಿಗೂ ಬೊಂಬೆಗಳಿಗೂ ವ್ಯತ್ಯಾಸವೇ ಇಲ್ಲದಂತಾಗಿದ್ದಾಗ ಚಲನೆಯಿಂದ ಇವರು ವನಿತೆಯರೆಂದು ತಿಳಿಯಬೇಕಾಯಿತು. ೧೩೬. ಚಂದ್ರೋದಯೋತ್ಸವದಲ್ಲಿ ಸಮುದ್ರವು ಮೊರೆಯುವಂತೆ ಮುರವೈರಿ ಕೃಷ್ಣನ ವಿವಾಹೋತ್ಸವದಲ್ಲಿ ಮೊರೆಯುತ್ತಿರುವ ರಸಭರಿತ ಸಂಗೀತಧ್ವನಿಯಿಂದ ದಿಕ್ಕುಗಳಲ್ಲುಂಟಾಗುವ ಪ್ರತಿಧ್ವನಿಗಳು ದಿಶಾಧಿಪತಿಗಳ ಸಮೂಹವೇ ಸಂತೋಷಾನು ರಾಗದಿಂದ ಆ ಕೃಷ್ಣನನ್ನು ಹರಸುವಂತೆ ಇದ್ದವು. ವ|| ಹಾಗೆ ವಿವಾಹಮಂಗಳವು

ದ್ಯಾವಾಪೃಥಿವೀವಲ್ಲರಿ
ತೀವಿದುವಲರಂಬಿನಿಂದಮೆನೆ ಬೆಳ್ದಿಂಗಳ್
ತೀವಿರೆ ಜಗಮಂ ಕೃಷ್ಣಂ
ದೇವೀಯುತನಮಳಧವಳಶಯನದೊಳೆಸೆದಂ ೧೩೭

ನುಡಿಸಲ್ ಕೇಳಿಶುಕಾಳಿಯೊಳ್ ನುಡಿವ ಸೋಂಕಲ್ ಪಿಂಗೆ ಸಾರ್ದಿರ್ದ ಕೌ
ಳುಡೆಯಂ ಸೋಂಕುವ ವಕ್ತ್ರಮಂ ಪಿಡಿದು ನೋಡಲ್ ಪಾರ್ಶ್ವವಿದ್ಧಂಗಳಂ
ನಡೆನೋಟಿಪ್ಪೋಪಳದೊಂದುಭಾವರಸಗರ್ಭಕ್ರೀಡೆಯುಂ [1]ವ್ರೀಡೆಯುಂ
ಪಡೆವನ್ನಂ ಮುದಮಂ ಮುಕುಂದನತಿರಾಗೋದ್ರೇಕಮಂ ತಾಳ್ದಿದಂ ೧೩೮

ಬೆರಲೊಳ್ ಮುದ್ರಿಕೆಯಂ ತೊಡರ್ಚುವ ಕಪೋಲಸ್ಥಾನದೊಳ್ ಪತ್ರವ
ಲ್ಲರಿಯಂ ಚಿತ್ರಿಪ ಹಾರಮಂ ಪಿಡಿದು ನೋಟಿಪ್ಪಾಸ್ಯಾಂಬುಜಸ್ವೇದಮಂ
ಕರದಿಂದಂ ತೊಡೆವೊಯ್ಯನುಳ್ಳುಡೆಗೆ ಕಾಂಚೀದಾಮಮಂ ಸಾರ್ಚುವೊ
ಳ್ಗುರುಳಂ ನೇರ್ಪಡೆ ತಿರ್ದುವೀ ನೆವದೆ ಕೃಷ್ಣಂ ನಲ್ಲಳಂ ಪೊರ್ದಿದಂ ೧೩೯

ಒಲವಿಂ ನೋಡುವ ನೋಟದಿಂ ಪದೆದು ಸೋಂಕುತ್ತಿರ್ಪ ಸೋಂಕಿಂ ಮನಂ
ಗೆಲೆ ಮಾತಾಡುವ ಮಾತಿನಿಂ ಕಳೆದು ಲಜ್ಜಾಸಾಧ್ವಸೋದ್ರೇಕಮಂ
ಜಲಜಾತಾಕ್ಷನೊಳಾಕೆ ಬೆಚ್ಚತಿಕೆಯಂ ಮಾಡಲ್ ಬಟೆಕ್ಕಂ ಕಳಾ
ನಿಲಯಂ ಮಾಡಿದನೊಲ್ದು ಚುಂಬನ ಪರಿಷ್ವಂಗ ಪ್ರಪಂಚಂಗಳಂ ೧೪೦

ಪರಿಪೂರ್ಣವಾಗಿ ಬೆಳೆಯಿತು. ನಾಲ್ಕನೆಯ ಮಹೋತ್ಸವದ ಅನಂತರ ಅಂದಿನ ರಾತ್ರಿಯಲ್ಲಿ ೧೩೭. ಭೂಮ್ಯಾಕಾಶಗಳೆಂಬ ಬಳ್ಳಿಗಳು ಪುಷ್ಪಬಾಣದಿಂದ ತುಂಬಿದುವೆಂಬಂತೆ ಬೆಳುದಿಂಗಳು ಜಗತ್ತನ್ನು ತುಂಬಿರುವಲ್ಲಿ ಕೃಷ್ಣನು ರುಕ್ಮಿಣೀದೇವಿಯೊಡನೆ ಬಿಳಿದಾದ ಹಾಸಿಗೆಯಲ್ಲಿ ಪ್ರಕಾಶಿಸಿದನು. ೧೩೮. ಪ್ರಿಯನು ಮಾತನಾಡಿಸಿದರೆ ತಾನು ಆಟದ ಗಿಳಿಗಳೊಡನೆ ಮಾತನಾಡುವಳು. ಸ್ಪರ್ಶಿಸಿದರೆ ಹಿಂದೆ ಹೋಗಿ ಅಲ್ಲಿರುವ ದಿಂಬನ್ನು ಒರಗಿಕೊಳ್ಳುವಳು. ಮುಖವನ್ನು ಹಿಡಿದುಕೊಂಡು ನೋಡಿದರೆ ಪಕ್ಕದಲ್ಲಿರುವ ಬೊಂಬೆಗಳನ್ನು ನೋಡುವಳು. ಪ್ರಿಯೆಯ ಈ ಬಗೆಯದೊಂದು ಭಾವರಸ ಗರ್ಭಕ್ರೀಡೆಯೂ ಲಜ್ಜೆಯೂ ಸಂತೋಷವನ್ನುಂಟು ಮಾಡುತ್ತಿರಲು ಕೃಷ್ಣನು ಅತ್ಯಂತಾನುರಾಗೋದ್ರೇಕವನ್ನು ಪಡೆದನು. ೧೩೯. ಬೆರಳಿಗೆ ಉಂಗುರವನ್ನಿಡುವ, ಕೆನ್ನೆಯ ಮೇಲೆ ಎಲೆಬಳ್ಳಿಯನ್ನು ಚಿತ್ರಿಸುವ, ಹಾರವನ್ನು ಹಿಡಿದು ನೋಡುವ ಕೈಯಿಂದ ಮುಖಕಮಲದ ಬೆವರನ್ನೊರಸುವ ಮೆತ್ತಗೆ ಒಳಉಡೆಗೆ ವಡ್ಯಾಣವನ್ನು ಸೇರಿಸುವ ಮತ್ತೂ ಒಳ್ಳೆಯ ಮುಂಗುರುಳನ್ನು ಸರಿಯಾಗುವಂತೆ ತಿದ್ದುವ ನೆವದಿಂದ ಕೃಷ್ಣನು ಪ್ರಿಯೆಯನ್ನು ಸಮೀಪಿಸುತ್ತಿದ್ದನು. ೧೪೦. ಪ್ರೀತಿಯಿಂದ ನೋಡುವ ನೋಟದಿಂದಲೂ, ಇಷ್ಟದಿಂದ ಸ್ಪರ್ಶಿಸುವ ಸ್ಪರ್ಶನದಿಂದಲೂ, ಮನಸ್ಸನ್ನು ಗೆಲ್ಲಲು ಆಡುವ ಮಾತಿನಿಂದಲೂ ರುಕ್ಮಿಣಿ ಲಜ್ಜಾಭಯೋದ್ರೇಕವನ್ನು ಕಳೆದುಕೊಂಡು, ಕೃಷ್ಣನೊಡನೆ ಸಲಿಗೆ ಸರಸಗಳುಳ್ಳವಳಾದಳು.

---

೧. ಪ್ರೌಢಿಯುಂ (ಖ)

ನವಲಜ್ಜೆಯೆಂಬ ಕಾಂಡಪ
ಟವೊಯ್ಯನೋಸರಿಸೆ ಸೂತ್ರಧಾರಕನಪ್ಪಾ
ತ್ಮವರಂಗೆ ಪಡೆದುದತ್ಯು
ತ್ಸವಮಂ ರತನಾಟಕಪ್ರಗಲ್ಭತೆ ಸತಿಯಾ ೧೪೧

ಮಾನಿನಿಯ ಸುರತರತ್ನನಿ
ಧಾನಂ ಚಾತುಯ[1]ದೀಪವರ್ತನೆಯಿನದೆಂ
ತಾನುಂ ಕೋಳ್ವೋಯ್ತೆನಲಾ
ಮಾನಿನಿಯೊಳ್ ಚಕ್ರಿ ಸುರತಸುಖದಿಂದಿರ್ದಂ ೧೪೨

ಅನುದಿನಮಿಂತು ಕಾಮಸುಖದಿಂದನುರಾಗಮನಿತ್ತು ರುಕ್ಮಿಣೀ
ವನಿತೆಗೆ ರಕ್ಷಣಕ್ಷಮತೆಯಿಂ ಪತಿ ಹರ್ಷಮನುಂಟುಮಾಡಿ ಮೇ
ದಿನಿಗೆ ಮಹತ್ವದಿಂ ಜಸಮನಾಗಿಸಿ ಯಾದವಸಂಕುಳಕ್ಕೆ ಪೆಂ
ಪನುಗುಣಮಾಗಿರಲ್ ಸುಖದಿನಿರ್ದನಚಿಂತ್ಯಬಲಂ [2]ಬಲಾನುಜಂ ೧೪೩

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಳಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯ ಮಹಾಪ್ರಬಂಧದೊಳ್ ನಾರದಾಗಮನ
ರುಕ್ಮಿಣೀರೂಪಪ್ರಶಂಸನ ತದೀಯದರ್ಶನ
ತದಗ್ರಜಯುದ್ಧ ತದ್ವಿವಾಹವರ್ಣನಂ
ದಶಮಾಶ್ವಾಸಂ

ಬಳಿಕ ಕಳಾನಿಲಯನಾದ ಅವನು ಒಲಿದು, ಅವಳೊಡನೆ ಚುಂಬನಾಲಿಂಗನಾದಿ ಕಾಮಕೇಳೀ ಪ್ರಪಂಚಗಳನ್ನು ಮಾಡಿದನು. ೧೪೧. ಹೊಸ ನಾಚಿಕೆಯೆಂಬ ತೆರೆ ಮೆಲ್ಲಗೆ ಪಕ್ಕಕ್ಕೆ ಸರಿಯಿತು. ರುಕ್ಮಿಣೀಸತಿಯ ರತನಾಟಕಪ್ರೌಢಿಮೆಯು ಸೂತ್ರಧಾರನಾದ ಆತ್ಮವರ ಕೃಷ್ಣನಿಗೆ ಅತಿ ಸಂತೋಷವನ್ನುಂಟು ಮಾಡಿತು. ೧೪೨. ಪ್ರಣಯ ಕೋಪಗೊಂಡಿದ್ದ ರುಕ್ಮಿಣಿಯ ಸುರತರತ್ನನಿಧಿಯು ಶ್ರೀಕೃಷ್ಣನ ಚಾತುರ್ಯದೀಪದಿಂದ ಕೊಳ್ಳೆಯಾಯಿತು. ಆತನು ರುಕ್ಮಿಣಿಯೊಡನೆ ಸುರತ ಸುಖದಿಂದಿದ್ದನು. ೧೪೩. ಅಚಿಂತ್ಯಬಲನಾದ ಕೃಷ್ಣನು ರುಕ್ಮಿಣೀದೇವಿಗೆ ಅನುದಿನವೂ ಹೀಗೆ ಕಾಮಸುಖದಿಂದ ಅನುರಾಗವನ್ನುಂಟುಮಾಡಿ, ರಕ್ಷಣಾಸಾಮರ್ಥ್ಯದಿಂದ ಪತಿಯಿಂದಾಗಬೇಕಾದ ಹರ್ಷವನ್ನು ಭೂಮಿಗೆ ಆಗಿಸಿ, ಮಹತ್ವದಿಂದ ಯಾದವ ಸಮೂಹಕ್ಕೆ ಕೀರ್ತಿಯನ್ನುಂಟುಮಾಡಿ, ಮಹಿಮಾನ್ವಿತನಾಗಿ ಸುಖದಿಂದ ಇದ್ದನು.

ಇದು ಸಮಸ್ತ ಕಮಲಭವಾಂಡಮಾಲಾ ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರರುದ್ರಪ್ರಣೀತವಾದ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ನಾರದಾಗಮನ, ರುಕ್ಮಿಣೀರೂಪ ಪ್ರಶಂಸನ, ಅವಳ ದರ್ಶನ, ಅವಳ ಅಣ್ಣನೊಡನೆ ಯುದ್ಧ, ಅವಳ ವಿವಾಹವರ್ಣನೆಗಳ ಹತ್ತನೆಯ ಆಶ್ವಾಸ.

---

೧. ದೀಪವರ್ತಿನಿಯಿನದೆಂ (ಕಖಗ) ೨. ಬಲಾನ್ವಿತಂ (ಕ)

# ಏಕಾದಶಾಶ್ವಾಸಂ

ಶ್ರೀಕಂಠರಿಪುವಿನಸ್ತ್ರಾ
ನೀಕಂ ಬಗೆವುಗಲದೊರ್ಮೆ ಸತ್ರಾಜಿತ್ಕ
ನ್ಯಾಕಾರಂ ಬಗೆವೊಕ್ಕುದು
ಲೋಕಜನಸ್ತುತಿಗಳಿಂ ಗರುತ್ಮದ್ಧ್ವಜನಾ ೧

ಅನಿಶಂ ಪಾಠಕಪಾಠದಿಂ ಕಥಕರತ್ಯಾಳಾಪದಿಂ ವಂದಿವಂ
ದನದಿಂ ಗಾಯಕಗೇಯದಿಂ ನೆಗಟ್ದ ಸತ್ರಾಜಿತ್ಸುತಾರೂಪಯೌ
ವನಲಾವಣ್ಯವಿಲಾಸಲಕ್ಷಣಗುಣಂಗಳ್ ಮಾಡಿ ಸಮ್ಮೋಹಮಂ
ಮನಮಂ ಧೈರ್ಯಮನೀಟಿಕ್ಕೊಳಲ್ ಮುರಹರಂ ವಿಭ್ರಾಂತಿಯುಂ ತಾಳ್ದಿದಂ ೨

ಸತ್ರಾಜಿನ್ನೃಪನಲ್ಲಿಗೆ
ಮೈತ್ರೀಮಿಷದಿಂದೆ ಪೋಗಿ ತನ್ನಯ ರೂಪಂ
ಗೋತ್ರಧರಂ ತೋಱಲ್ ತ
ತ್ಪುತ್ರಿಗೆ ತೋಱಿದನನಂಗನಿಷುಕೌಶಲಮಂ ೩

ಮನಸಿಜನಂಬು ನಾಂಟೆ [1]ತನುವಂ ಮನವುಂ ಮನದಾಣ್ಮನಾದ ಕೃ
ಷ್ಣನ ಬಟಿಸಂದೊಡಾ ತರುಣಿ ಚಿತ್ರದ ಲೆಪ್ಪದ ಕಲ್ಲ ಪೆಣ್ಣ ರೂ
ಪೆನೆ ಮರವಟ್ಟಳಾವಳನಂಗಶರಕ್ಕೆಡೆಮಾಡದಾವಳಂ
ನೆನೆಯಿಸಿ ಕಾಡದಾವಳನದಿರ್ಪದು ಕೃಷ್ಣನ ರೂಪವಿಭ್ರಮಂ ೪

೧. ಶ್ರೀಕೃಷ್ಣನ ಮನಸ್ಸು ಅದೊಂದು ಸಮಯದಲ್ಲಿ ಮನ್ಮಥಾಸ್ತ್ರಗಳಿಂದ ಪೀಡಿತವಾಯಿತು. ಆಗ ಲೋಕದ ಜನರ ಸ್ತುತಿಗೆ ಪಾತ್ರವಾಗಿದ್ದ ಸತ್ರಾಜಿತ್ಕುಮಾರಿಯ ರೂಪವು ಅವನ ಮನಸ್ಸಿಗೆ ಬಂದಿತು. ೨. ಯಾವಾಗಲೂ ಪಾಠಕರ ಪಾಠದಿಂದಲೂ, ಕಥೆಗಾರರ ಬಹು ಭಾಷಣದಿಂದಲೂ, ವಂದಿಗಳ ಸ್ತುತಿಯಿಂದಲೂ, ಗಾಯಕರ ಗಾನದಿಂದಲೂ ಕೇಳಿ ತಿಳಿದ ಸತ್ಯಭಾಮೆಯ ಪ್ರಸಿದ್ಧವಾದ ರೂಪ ಯೌವನ ಲಾವಣ್ಯವಿಲಾಸ ಲಕ್ಷಣ ಗುಣಗಳು ಕೃಷ್ಣನಿಗೆ ಮೋಹವನ್ನುಂಟುಮಾಡಿ, ಅವನ ಮನಸ್ಸನ್ನೂ ಧೈರ್ಯವನ್ನೂ ಸೆಳೆದು ವಶಪಡಿಸಿಕೊಂಡುದರಿಂದ ಅವನು ವಿಶೇಷವಾಗಿ ಭ್ರಾಂತಿಗೊಂಡನು. ೩. ಕೃಷ್ಣನು ಸ್ನೇಹದ ನೆಪದಿಂದ ಸತ್ರಾಜಿದ್ರಾಜನಲ್ಲಿಗೆ ಹೋಗಿ, ತನ್ನ ರೂಪವನ್ನು ಆತನ ಮಗಳಿಗೆ ತೋರಿಸಿದಾಗ ಮನ್ಮಥನು ತನ್ನ ಬಾಣದ ಕೌಶಲ್ಯವನ್ನೂ ಆಕೆಗೆ ತೋರಿಸಿದನು. ೪. ಮನ್ಮಥನ ಬಾಣವು ದೇಹವನ್ನು ನಾಟಲಾಗಿ ಮನಸ್ಸೂ ಮನಸ್ಸಿನ ಸ್ವಾಮಿಯಾದ ಕೃಷ್ಣನ ಹತ್ತಿರ ಸೇರಿತು. ಆಗ ಆ ಸತ್ಯಭಾಮೆಯು ಚಿತ್ರದಲ್ಲಿ ಬರೆದ, ಲೇಪಿಸಿದ ಕಲ್ಲಿನ ರೂಪವೆನ್ನುವಂತೆ ಸ್ತಬ್ಧಳಾದಳು. ಕೃಷ್ಣನ ರೂಪವೂ ಪ್ರೇಮ ಚೇಷ್ಟೆಯೂ ಯಾವ ಯುವತಿಯನ್ನು ತಾನೆ ಕಾಮಬಾಣಕ್ಕೆ ಗುರಿಮಾಡದು,

---

೧. ತನುವುಂ (ಕಗ)

ಆ ನೆಗಟ್ದೆಂದ್ರನಾ ಮದನನಾ ನಳಕೂಬರನಾ ಜಯಂತನು
ದ್ದಾನಿಯ ಚೆಲ್ವುವೀ ಕಮಳನೇತ್ರನಪಾಂಗಮರೀಚಿಗಪ್ಪೊಡಂ
ತಾನೆಣೆವಾರದೆಂದೆನಿಪ ಕಂಸವಿರೋಧಿಯನೊರ್ಮೆ ಕಂಡೊಡಂ
ಮಾನಿನಿಯರ್ ಮನೋಜನಲರಂಬಿನ ಕೋಳ್ಗೆಡೆಯಾಗದಿರ್ಕುಮೇ ೫

ನವಕಾಮೋದ್ರೇಕದಿಂ ಚಿಂತಿಸುವ ಮತಿ ಮತಿಗ್ಲಾನಿಯಿಂದಶ್ರುವಂ ಸೂ
ಸುವ ಕಣ್ ಕಣ್ಣೀರೆ ಬಾನಲ್ವರಿದು ಬೆಳಪ ಮೆಯ್ ಮೆಯ್ಯ ಸಂತಾಪದಿಂ ಬಾ
ಡುವ ವಕ್ತ್ರಂ ವಕ್ತ್ರಮಂ ತಳ್ತಳಕವಳಕಸಂದೋಹಮಂ ಮಾಣದಳ್ಳಾ
ಡುವ ಸುಯ್ ಸುಯ್ವೆಂಕೆಯಿಂದಿರ್ಪಳಿದಧರಮವಳ್ಗಿತ್ತುದಂದೊಂದು ಚೆಲ್ವಂ ೬

ಎಡೆಗೊಟ್ಟು ಮನಮನೋಪಂ
ಗೆಡೆಗುಡದಿನಿಸುಂ ಸುಖಕ್ಕೆ ಬೇಟದ ಬಿಣ್ಪಿಂ
ಬಿಡೆ ಜೋಲ್ವ ತೆಱದಿನಿಕ್ಕದ
ಳೊಡಲಂ ಬಾಲಕಿ ವಿಶಾಲತಲ್ಪಸ್ಥಲದೊಳ್ ೭

ವ|| ಅಂತು ಶಯ್ಯೆಯೊಳ್ ಮೆಯ್ಯನೀಡಾಡಿ ಗಣನೆಗಳುಂಬಮಾದ ವೇದನೆಯನೊಳಕೊಂಡು ತನ್ನ ಮೆಲ್ಲಡಿಗಳಂ ಮೆಲ್ಲನೊತ್ತಲೆಂದಾಟಸುವ ಚೇಟಿಯರ ಕರಾಗ್ರಮಂ ಚರಣಾಂಗುಷ್ಠದಿಂ ಪೋಗೆ ನೂಂಕಿಯುಂ, ಪಱೆದ [೧]ಕುರುಳ್ಗಳಂ ಸಡಿಲ್ವ ಮುಡಿಯುಮಂ ಸಾವಗಿಸಲೆಂದೆಳಸುವ ವಿಳಾಸಿನಿಯರಂ ಹೂಂಕಾರದಿಂ ನಿರಾಕರಿಸಿಯುಂ, ವಿಳಯಂಗುಡಲೆಂದು ಮೇಳೈಸುವ ತಾಂಬೂರಕರಂಡಕವಾಹಿನಿಯರಂ ಪುರ್ವಿನಿಂ ಜರ್ವಿನಿಂ ಹಾಸ್ಯರಸಮನೊಡರಿಸಲೆಂದನುಗೈವನೇಕ ವಾಮನ ಮೂಕ ಕುಬ್ಜಖಂಜಪ್ರಭೃತಿ

ಜ್ಞಾಪಿಸಿಕೊಂಡು ಹಿಂಸೆಪಡುವಂತೆ ಮಾಡದು! ನಡುಗಿಸದು! ೫. ಪ್ರಸಿದ್ಧವಾದ ಇಂದ್ರನ, ಮನ್ಮಥನ, ನಳಕೂಬರನ, ಜಯಂತನ ಉತ್ತಮವಾದ ಚೆಲುವು ಈ ಕಮಲನೇತ್ರಕೃಷ್ಣನ ಕಡೆಗಣ್ಣಿನ ಕಾಂತಿಗಾದರೂ ಸಮವಾಗಲಾರದು ಎಂದೆನಿಸಿಕೊಂಡಿರುವ ಕಂಸ ವಿರೋಧಿಯನ್ನು ಒಂದು ಸಾರಿ ಕಂಡರೂ ಮಾನಿನಿಯರು ಮನ್ಮಥಬಾಣದ ಕೊಳ್ಳಿಗೆ ಎಡೆಯಾಗದಿರುವರೆ? ೬. ಹೊಸದಾದ ಕಾಮೋದ್ರೇಕದಿಂದ ಮನಸ್ಸಿಗೆ ಚಿಂತೆಯಾಯಿತು. ಚಿಂತೆಯಿಂದ ಕಣ್ಣೀರು ಬಂದಿತು. ಕಣ್ಣೀರೆ ಮಲಿನವಾಗಿ ಹರಿದು ಮೈಬೆಳ್ಳಗಾಯಿತು. ಮೈಯ ತಾಪದಿಂದ ಮುಖವು ಬಾಡಿತು. ಮುಖವನ್ನು ಮುಂಗುರುಳಾವರಿಸಿತು. ಮುಂಗುರುಳ ಸಮೂಹವನ್ನು ನಿಟ್ಟುಸಿರು ಬಿಡದೆ ಅಳ್ಳಾಡಿಸಿತು. ನಿಟ್ಟುಸಿರಿನ ತಾಪದಿಂದ ಸಹಜರೂಪವನ್ನು ಕಳೆದುಕೊಂಡ ತುಟಿ ಅವಳಿಗೆ ಅದೊಂದು ಚೆಲುವನ್ನೆ ಕೊಟ್ಟಿತು. ೭. ತನ್ನ ಮನಸ್ಸನ್ನು ಪ್ರಿಯನಿಗೆ ಕೊಟ್ಟು, ಸುಖಕ್ಕೆ ಸ್ವಲ್ಪವೂ ಅವಕಾಶವಿಲ್ಲದೆ ವಿರಹದ ಭಾರದಿಂದ ಪೂರ್ತಿಯಾಗಿ ಜೋಲುವಂತೆ ಆ ಬಾಲೆ ವಿಶಾಲವಾದ ಹಾಸಿಗೆಯಲ್ಲಿ ಬಿದ್ದಳು. ವ|| ಹಾಗೆ ದೇಹವನ್ನು ಹಾಸಿಗೆಯ ಮೇಲೆ ಬೀಳಿಸಿ ಮಿತಿಯಿಲ್ಲದ ವೇದನೆಗೊಳಗಾದಳು. ತನ್ನ ಮೃದುವಾದ ಕಾಲುಗಳನ್ನು ಒತ್ತುವುದಕ್ಕೆ ಇಷ್ಟಪಟ್ಟು ಬರುವ ದಾಸಿಯರ ತುದಿಗೈಯ್ಯನ್ನು ಕಾಲಿನ ಹೆಬ್ಬೆರಳಿಂದ ಹೋಗಲು ನೂಕಿದಳು. ಹರಡಿದ

---

೧. ಕುರುಳ್ಗಳುಮಂ (ಖ)

ಪರಿಹಾಸಕರನಕ್ಷಿವಿಕ್ಷೇಪದಿಂ ಮಾಣಿಸಿಯುಂ, [1]ಇಂತಿರಲ್ವೇಡ ಮಜ್ಜನಂಬುಗಲುಂ ಆರೋಗಿಸಲುಂ ವೇೞ್ಕುಮೇೞಿಂದು ನುಡಿವ ಧಾತ್ರಿಯರಂ ಗಜನಿಮೀಲನದಿನಜ್ಞೆಗೆಯ್ದುಂ, ಅಸ್ಫುಟಿತಮೌನ ಮುದ್ರಾಪರಿಮ್ಲಾನದೀನವದನೆಯುಮವಿರಳ ಸರಳ ಸೋಷ್ಣಶ್ವಾಸ ಶೋಷಿತಾಧರೆಯುಮನವರತ ವಿಗಳದಶ್ರುಧಾರಾಪರಿಕಲಿತ ಕಪೋಲೆಯುಮಶ್ರಾಂತನಿತಾಂತಸಂತಾಪಸಂತಪ್ತ ತನುಲತಿಕೆಯುಮಾಗಿರ್ದ ಸತ್ಯಭಾಮೆಯಂ ಕಂಡು ಕಾಮಲೇಖೆಯೆಂಬ ಮನದನ್ನಳಪ್ಪ ಕೆಳದಿ ಮೆಲ್ಲನಾಕೆಯ ಕೆಲಕ್ಕೆವಂದೆಲ್ಲರುಮಂ ಕಣ್ಣೆತ್ತಿ ಕಳಿಪಿ

ಅಂಬುಜನೇತ್ರೆ ನಿನ್ನ ಮೊಗಮಂ ಕವಿದೀ ಕುರುಳೋಳಿ ಧೂಸರ
ತ್ವಂಬಡೆದೀ [2]ಕುಚಂ ಕೊರಗಿದೀ ಕಮಳಾನನವಿರ್ಪುಗುಂದಿದೀ
ಬಿಂಬಫಲಾಧರಂ ಸ್ಖಲನಮಂ ತಳೆದೀ ನುಡಿ ಬಾಡಿದೀ ಲತಾಂ
ಗಂ ಬಿಸುಪೇಱಿದೀ ಶ್ವಸಿತಮಿಂತಿವು ಪೇೞವೆ ನಿನ್ನ ಚಿಂತೆಯಂ ೮

ಸ್ತನಮಂ ಚಿತ್ರಿತಪತ್ರಲೇಖೆ ನೊಸಲಂ ಬಾಲೇಯಕಂ ಲೋಲಲೋ
ಚನಮಂ ಕಾಡಿಗೆ ಕಂಠಮಂ ತರಳಹಾರಂ ಕೇಶಮಂ ಪುಷ್ಪಮಾ
ಲೆ ನಿತಂಬಸ್ಥಲಮಂ ಸುರತ್ನಕಟಸೂತ್ರಂ ಸಾರ್ದುವಿಲ್ಲೋಃಹೊ ಕಾ
ಮನ ಕಾಟಕ್ಕೊಳಗಾದೆ ನೀಂ ಪೆಱತಿದಲ್ತಂಭೋಜಪತ್ರೇಕ್ಷಣೇ ೯

ಕುರುಳನ್ನೂ ಸಡಿಲವಾದ ಮುಡಿಯನ್ನೂ ಸರಿಪಡಿಸಲು ಬಯಸುವ ಸಖಿಯರನ್ನು ಹೂಂಕಾರದಿಂದ ನಿರಾಕರಿಸಿದಳು. ವೀಳೆಯವನ್ನು ಕೊಡುವುದಕ್ಕಾಗಿ ಗುಂಪಾಗಿ ಬರುವ ತಾಂಬೂಲಕರಂಡಕಧಾರಿಣಿಯರನ್ನು ಹುಬ್ಬಿನಿಂದಲೇ ಗದರಿಸಿದಳು. ಹಾಸ್ಯರಸವನ್ನುಂಟು ಮಾಡುವುದಕ್ಕೆ ಅಣಿಮಾಡುವ ಅನೇಕ ಕುಳ್ಳ, ಮೂಗ, ಗುಜ್ಜಾರಿ, ನಪುಂಸಕರೇ ಮೊದಲಾದ ಪರಿಹಾಸಕರನ್ನು ಕಣ್ಣುಬೀಸಿ, ನಿವಾರಿಸಿದಳು. "ಹೀಗಿರಬೇಡ; ಸ್ನಾನಮಾಡಬೇಕು. ಊಟಮಾಡಬೇಕು; ಏಳು" ಎಂದು ಹೇಳುವ ದಾದಿಯರನ್ನು ಆನೆಯಂತೆ ಕಣ್ಣುಮುಚ್ಚಿಕೊಂಡು, ಅಲಕ್ಷ್ಯಮಾಡಿದಳು. ಮೌನಮುದ್ರೆಯನ್ನೊಡೆಯದೆ ಬಹಳ ಬಾಡಿದ ದೀನವದನೆಯೂ, ಅವಿರಳವೂ, ಸರಳವೂ ಬಿಸಿಯೂ ಆದ ಉಸಿರಿನಿಂದ ಒಣಗಿದ ತುಟಿಯುಳ್ಳವಳೂ ಸದಾ ಸುರಿಯುವ ಕಣ್ಣೀರಿನ ಕೆನ್ನೆಯುಳ್ಳವಳೂ ಆದಳು. ಹೀಗೆ ಶಾಂತವಾಗದ ಅಧಿಕ ಸಂತಾಪದಿಂದ ಹೆಚ್ಚಾಗಿ ಕಾಯ್ದ ಅಂಗಲೇಖೆಯುಳ್ಳವಳೂ ಆಗಿದ್ದ ಸತ್ಯಭಾಮೆಯನ್ನು ಕಂಡು, ಕಾಮಲೇಖೆಯೆಂಬ ಸತ್ಯಭಾಮೆಯ ಮನಸ್ಸಿನಂತಿರುವ ಸಖಿಯು ಮೆತ್ತಗೆ ಆಕೆಯ ಪಕ್ಕಕ್ಕೆ ಬಂದು, ಅಲ್ಲಿದ್ದವರೆಲ್ಲರನ್ನೂ ಕಣ್ಣುಮಿಟಕಿಸಿ ಕಳುಹಿಸಿ ಸತ್ಯಭಾಮೆಗೆ ಹೇಳಿದಳು. ೮. "ಕಮಲಾಕ್ಷೀ, ನಿನ್ನ ಮುಖವನ್ನು ಮುಂಗುರುಳು ಕವಿದುಕೊಂಡಿದೆ. ಕುಂಚವು ಮಲಿನವಾಗಿದೆ. ಮುಖಕಮಲವು ಬಾಡಿದೆ. ತೊಂಡೆಯ ಹಣ್ಣಿನಂತಿರುವ ಈ ತುಟಿ ರೀತಿಗೆಟ್ಟಿದೆ, ಮಾತು ತೊದಲುತ್ತಿದೆ, ಬಳ್ಳಿಯಂತಿರುವ ಈ ಮೈ ಬಾಡಿದೆ. ಉಸಿರು ಬಿಸಿಯಾಗಿದೆ. ಇವೆಲ್ಲವೂ ನಿನಗೆ ಚಿಂತೆಯುಂಟಾಗಿದೆಯೆಂಬುದನ್ನು ಹೇಳುವುದಿಲ್ಲವೇ? ಸ್ತನಗಳ ಮೇಲೆ ಪತ್ರಚಿತ್ರವನ್ನು ಬರೆದಿಲ್ಲ. ಮುಖದಲ್ಲಿ ಕೋಮಲತೆಯಿಲ್ಲ. ಚಂಚಲನೇತ್ರಕ್ಕೆ ಕಪ್ಪನ್ನು ಹಚ್ಚಿಲ್ಲ. ಕೊರಳಿಗೆ ಹಾರವನ್ನು ಹಾಕಿಕೊಂಡಿಲ್ಲ. ಮುಡಿಗೆ

೧. ನೀವಿಂತಿರಲ್ವೇಡ (ಖ) ೨. ಕಚಂ (ಕ)

ವ॥ ಎಂದು ಕಾಮಲೇಖೆ ಮನಮಱಿದು ಮಾತಾಡೆ

ಬಗೆಯೊಳ್ ಬೆಚ್ಚವೊಲಾದ ಮಾತು ಕಿವಿಗೆಯ್ದಲ್ ಮೀಂಬೊಣರ್ ತೋರಮು
ತ್ತುಗಳಂ ಕಾಱುವ ಮಾಟ್ಕೆಯಿಂ ತರಳನೇತ್ರದ್ವಂದ್ವದಿಂ ಬಾಷ್ಪಬಿಂ
ದುಗಳಂ ಸೂಸಿ ಲತಾಂಗಿ ಭಂಗಿವಡೆದಿರ್ದಳ್ ಬೇಂಟವೆಂಬೊಂದು ಬ
ಳ್ಳಿಗೆ ಪೊಯ್ನೀರೆಱೆವಂದದಿಂ [1]ನುಡಿದಳಿಲ್ಲೇನೊಂದುಮಂ ಕಾಂತೆಯೊಳ್ ೧೦

ಸಮಧಿಕಚಿಂತೆಯಿಂ ನುಡಿಯಲುಂ ಬಗೆವೇೞಲುಮೊಲ್ಲದಾ ಶರ
ತ್ಸಮಯದ ಸೋಗೆಯಿರ್ಪ ತೆಱದಿಂ ಕಡುವಿಸ್ನನೆ ಮೂಗುವಟ್ಟು ಖೇ
ದಮನೊಳಕೊಂಡು ನಿಂದಬಲೆಯಿರ್ದಿರವಂ ಸಖಿ ನೋಡಿ ಮತ್ತಮಾ
ಕಮಲದಳಾಯತೇಕ್ಷಣೆಗಿದಂ ನುಡಿದಳ್ ಬಗೆಗೆಲ್ವ ಬಲ್ಮೆಯಿಂ ೧೧

ಸುದತಿ ಮನೋರಥಂ ಸಖಿಗೆ ಪೇೞದೆ ಸಿದ್ಧಿಸದೆನ್ನ ನಿನ್ನ ಕೂ
ಟದ ತೆಱನಂತುಟಲ್ಲು ನಿನಗಾಂ ಪೆಱತೊಂದು ನಿತಂಬನೀಸ್ವರೂ
ಪದ ಹೃದಯಂಬೊಲಿರ್ದೆನೆನಗುಂ ಬಗೆವೇೞದೆ ನಾಣ್ಚಿ ಬಾಷ್ಪಮಂ
ಕೆದಱಲಿದೇಕೆ ಪೇೞ ನಿನಗಾದುದಿದೇಕಿನಿತೊಂದುಮುಬ್ಬೆಗಂ ೧೨

ವ॥ ಎಂಬುದುಂ ಬಾಷ್ಪಜಲನಿಮಜ್ಜ್ಜಲಚರಾಲೋಲನಯನೆ ಬಗೆವೇೞಲುಜ್ಜುಗಂಗೆಯ್ದು ಲಜ್ಜಾರಸಮನೆಂತಾನುಮಂತರಂಗದಿಂ ತೊಲಗಿಸಿ

ಹೂಮಾಲೆಯನ್ನು ಮುಡಿಸಿಲ್ಲ. ನಡುವಿಗೆ ರತ್ನಕಟಿಸೂತ್ರವನ್ನು ಧರಿಸಿಲ್ಲ. ಓಹೋ ಇದು ಬೇರೆಯಾವುದೂ ಅಲ್ಲ; ನೀನು ಕಾಮನ ಪೀಡೆಗೆ ಒಳಗಾಗಿರುವೆ!" ವ॥ ಎಂದು ಕಾಮಲೇಖೆ ಅವಳ ಮನಸ್ಸನ್ನರಿತು ಮಾತನಾಡಿದಳು. ೧೦. ಮನಸ್ಸಿನಲ್ಲಿ ಬೆಸೆದ ಹಾಗಿದ್ದ ವಿಷಯವು ಕಿವಿಗೂ ಕೇಳಿಸಿದುದರಿಂದ ಮೀನುಗಳ ಜೋಡಿಯು ದಪ್ಪಮುತ್ತುಗಳನ್ನು ಕಾರುತ್ತಿರುವಂತೆ ಚಂಚಲವಾದ ಎರಡು ಕಣ್ಣುಗಳಿಂದಲೂ ಕಣ್ಣೀರಿನ ಹನಿಗಳನ್ನು ಸುರಿಸಿದ, ಆ ಲತಾಂಗಿಯು ವಿರಹವೆಂಬ ಬಳ್ಳಿಗೆ ನೀರೆರೆವಂತೆ ಒಂದು ಬಗೆಯಾಗಿದ್ದಳು. ಆ ಸಖಿಯೊಡನೆ ಏನೊಂದನ್ನೂ ಹೇಳಲಿಲ್ಲ. ೧೧. ಅತ್ಯಧಿಕವಾದ ಚಿಂತೆಯಿಂದ ಮಾತನಾಡಲೂ ಮನಸ್ಸಿನಲ್ಲಿರುವುದನ್ನು ತಿಳಿಸಲೂ ಒಲ್ಲದೆ ಶರತ್ಕಾಲದ ನವಿಲಿನಂತೆ ಬಹುಮೌನದಿಂದ ಮೂಗಳಂತೆ ಇದ್ದು ಖೇದಗೊಂಡಿರುವ ಆ ಸತ್ಯಭಾಮೆಯ ಸ್ಥಿತಿಯನ್ನು ನೋಡಿದ ಆ ಸಖಿಯು ಆ ಕಮಲನೇತ್ರೆಯ ಮನಸ್ಸನ್ನು ಗೆಲ್ಲುವ ಬಲ್ಮೆಯಿಂದ ಮತ್ತೆ ಹೇಳಿದಳು. ೧೨. "ಸುಂದರೀ, ಸಖಿಗೆ ಹೇಳದೆ ಇಷ್ಟಾರ್ಥಸಿದ್ಧಿಯಾಗುವುದಿಲ್ಲ. ನಿನ್ನ ನನ್ನ ಗೆಳೆತನವು ಸಾಮಾನ್ಯವಾದುದಲ್ಲ. ನಿನಗೆ ನಾನು ಸ್ತ್ರೀರೂಪವನ್ನು ಧರಿಸಿರುವ ಎರಡನೆಯ ಹೃದಯದಂತೆ ಇರುವೆನು. ನನಗೂ ನೀನು ನಿನ್ನ ಮನಸ್ಸಿನಲ್ಲಿರುವುದನ್ನು ಹೇಳದೆ ನಾಚಿ ಕಣ್ಣೀರು ಕರೆಯುವುದೇಕೆ! ನಿನಗೇಕೆ ಇಷ್ಟೊಂದು ಉದ್ವೇಗವು ಆಗಿದೆ ಹೇಳು." ವ॥ ಎನ್ನಲು ಕಣ್ಣೀರಿನಲ್ಲಿ ಮುಳುಗಿದ ಜಲಚರದಂತೆ ಚಂಚಲನೇತ್ರೆಯಾಗಿ ತನ್ನ ಮನಸ್ಸಿನಲ್ಲಿರುವುದನ್ನು ಹೇಳಲು ಪ್ರಯತ್ನಿಸಿದಳು. ಲಜ್ಜಾರಸವನ್ನು ಹೇಗೋ ತನ್ನ

---

೧. ನುಡಿದಳಿಲ್ಲೇನೆಂದುಮಾ (ಕಖಗ)

ನೀನೆ ವಿದಗ್ಧೆ ನೀನೆ ಹಿತಕಾರಿಣಿ ನೀನೆ ಮನಕ್ಕೆ ವಿಶ್ರಮ
ಸ್ಥಾನಮದಿರ್ಕೆ ಕೇಳಬಲೆ ಪೇೞ್ದಪೆನಾಂ ನಿಜರೂಪು ಯೌವನಾ
ನೂನ ವಿಲಾಸಮುತ್ತಮಗುಣಂ ಬಗೆಗೊಳ್ವಿನಮಿಲ್ಲಿಗಂದು ಬಂ
ದಾ ನಳಿನಾಕ್ಷನೊಂದು ತೆಱನೀ ತೆಱದಿಂ ಪಡೆದತ್ತು ಚಿಂತೆಯಂ ೧೩

ಕೆಳದಿ ತರವೇೞ್ಪುದೆನಗಾ
ನಳಿನಾಕ್ಷನನಲ್ಲದಂದು ಪೋದಪುದಸುವೀ
ಗಳೆ ಮದನನಿಸು ಪೊಸಕೆಂ
ದಳಿರ್ಗಳ ಕೆಂಗರಿಯ ನನೆಯ ಮೊನೆಯಂಬುಗಳಿಂ ೧೪

ನೆನೆಯಿಸಿ ಕಾಡುಗುಂ ಸತತವಾತನುದಗ್ರಲಲಾಟಪಟ್ಟವಾ
ತನ ಪೃಥುವಕ್ಷವಾತನ ತನೂದರವಾತನ ಚೆಲ್ಲೆಗಣ್ಗಳಾ
ತನ ಬಗೆಗೊಳ್ವ ಪೆರ್ದೊಡೆಗಳಾತನ ಸಿಂಹಕಟೀತಟಂಗಳಾ
ತನ ನಿಡುದೋಳ್ಗಳಾತನಳಕಾಳಿಗಳಾತನ ನೀಳ್ದ ಪುರ್ವುಗಳ್ ೧೫

ವ|| ಎಂದು ಬಗೆವೇೞ್ದು ನೊಂದು ನುಡಿದ ಸತ್ಯಭಾಮೆಗಾ ಕಾಮಲೇಖೆಯಿಂತೆಂದಳ್

ಬಯಸಿದೆ ನೀಂ ದುರ್ಲಭನಂ
ಪ್ರಿಯೆ ಬಯಕೆಗೆ ಬಡವರಿಲ್ಲೆನಿಪ್ಪವೊಲಸುರಾ
ರಿಯನಂತಾದೊಡವೇಂ ನಿ
ನ್ನಯ ರೂಪುಂ ಕುಲಮುಮೊಲಿಸುಗುಂ ಕೃಷ್ಣನುಮಂ ೧೬

ಅಂತರಂಗದಿಂದ ತೊಲಗಿಸಿದಳು. ೧೩. ಸತ್ಯಭಾಮೆಯು "ಸಖೀ! ನೀನೆ ವಿದ್ಯಾವತಿ, ನೀನೇ ಹಿತಕಾರಿಣಿ ನೀನೇ ನನ್ನ ಮನಸ್ಸಿನ ವಿಶ್ರಾಂತಿಗೆ ಎಡೆ. ಅದಿರಲಿ ಹೇಳುತ್ತೇನೆ, ಕೇಳು. ತನ್ನ ರೂಪವೂ ಯೌವನವೂ ಅಧಿಕ ವಿಲಾಸವೂ ಉತ್ತಮಗುಣವೂ ಮನೋಹರವಾಗುವಂತೆ, ಅಂದು ಇಲ್ಲಿಗೆ ಬಂದಿದ್ದ ಆ ಕಮಲಾಕ್ಷನ ಅದೊಂದು ರೀತಿಯು ನನಗೆ ಈ ಬಗೆಯಲ್ಲಿ ಚಿಂತೆಯನ್ನುಂಟುಮಾಡಿತು. ೧೪. ಕೆಳದೀ, ನನಗೆ ಆ ನಳಿನಾಕ್ಷನನ್ನು ತಂದುಕೊಡಬೇಕು. ಇಲ್ಲವಾದರೆ ಮನ್ಮಥನು ಪ್ರಯೋಗಿಸುವ ಹೊಸ ಕೆಂಪು ಚಿಗುರುಗಳ ಕೆಂಪುಗರಿಯ ಹೂವಿನ ಮೊಗ್ಗಿನ ಮೊನೆಯಾದ ಬಾಣಗಳಿಂದ ಈಗಲೇ ನನ್ನ ಪ್ರಾಣವು ಹೋಗುವುದು. ೧೫. ಆತನ ಉನ್ನತವಾದ ಪಟ್ಟಿಯಂತಿರುವ ಹಣೆಯೂ, ಆತನ ವಿಶಾಲವಾದ ಹೃದಯವೂ, ಆತನ ತೆಳ್ಳಗಿರುವ ಉದರವೂ, ಆತನ ಚೆಲ್ಲ ಕಣ್ಣುಗಳೂ, ಆತನ ಮನೋಹರವಾದ ದಪ್ಪವಾದ ತೊಡೆಗಳೂ, ಸಿಂಹದ ನಡುವಿನಂತಿರುವ ನಡುವೂ, ಆತನ ನಿಡುತೋಳುಗಳೂ, ಆತನ ಮುಂಗುರುಳುಗಳೂ ಆತನ ನೀಳವಾದ ಹುಬ್ಬುಗಳೂ ಯಾವಾಗಲೂ ನನ್ನ ಜ್ಞಾಪಕಕ್ಕೆ ಬಂದು ಕಾಡುವುವು" ವ|| ಎಂದು ತನ್ನ ಮನಸ್ಸಿನಲ್ಲಿರುವುದನ್ನು ತಿಳಿಸಿ, ನೊಂದು ಮಾತನಾಡಿದಳು. ಆ ಸತ್ಯಭಾಮೆಗೆ ಕಾಮಲೇಖೆ ಹೀಗೆ ಹೇಳಿದಳು. ೧೬. "ಗೆಳತಿ ಬಯಕೆಗೆ ಬಡವರಿಲ್ಲ. (ಬಯಕೆಯು ಬಡವರಿಗೂ ಆಗುವುದು.) ಎನ್ನುವಂತೆ ನೀನು ದುರ್ಲಭನಾದ ಕೃಷ್ಣನನ್ನು ಬಯಸಿದ್ದೀಯೆ. ಆದರೇನಾಯಿತು? ನಿನ್ನ ರೂಪವೂ ಕುಲವೂ ಕೃಷ್ಣನನ್ನೂ ಒಲಿಸುವುದು.

ನೆರೆದಪೆ ಲತಾಂಗಿ ನೀಂ ಮುರ
ವಿರೋಧಿಯೊಳ್ ಕಲ್ಪಲತಿಕೆ ಕಲ್ಪದ್ರುಮದೊಳ್
ನೆರೆವಂತೆಂದೊಡದೆಂದಾಂ
ನೆರೆದಪೆನೆಂದಾಂತಳವಳವಸ್ಥಾಂತರಮಂ ೧೭

ಅಳುರ್ವ ತುಷಾರವರ್ಷದೊದವಿಂದರವಿಂದಿನಿ ಕಂದಿ ಕುಂದಿ ಪಾಡ
ಟಿವಪ್ಪೊಲಾವಗಂ ಕಱಿವ ಕಾಮಶರಾವಳಿಗಳ್ಕಿ ಬಳ್ಕಿ ಕೋ
ಮಳೆ ನಡೆತಂದು ಪೊಕ್ಕು ಬನಮಂ ಸಖಿಯರ್ ತಳಿವಾಲಿನೀರ್ಗಳಿಂ
ಕುಳಿರ್ವಲರ್ವಾಸಿನೊಳ್ ಪೊರಳುತಿರ್ದಳಗುರ್ವಿನ ಬೇಟದೇಟಿಗ್ಗಿಯಿಂ ೧೮

ಲಲನೆ ಹಿಮೋಲ್ಲಸದ್ಭವನದೊಳ್ ವನದೊಳ್ ವನದೊಳ್ ಪೊರಳ್ದು ನಿ
ಚ್ಚಲುಮಿಸೆ ಕಂತು ನಿಷ್ಪಸರದಿಂ ಸರದಿಂ ಸರದಿಂಪುದೋಱಿ ಕೋ
ಗಿಲೆ ವಿಧು ಬೀಱಿ ಭೀತಕರಮಂ ಕರಮಂ ಕರಮಂ ಕಪೋಲದೊಳ್
ನಿಲಿಸುವಳೆಯ್ದೆ ನೋವಳಧಿಪಾಂಗದಪಾಂಗದ ಪಾಂಗದಗ್ಗಳಂ ೧೯

ಪಾಸುವ ಪಲ್ಲವಾಸ್ತರಣಪೊಟ್ಟುವ ಬಾಳಮೃಣಾಳಸಂಕುಳಂ
ಸೂಸುವ ಚಂದ್ರಕಾಂತಜಲಮೊತ್ತುವ ಶೀತಳಿಕಾಕದಂಬಕಂ
ಬೀಸುವ ಪುಷ್ಪವೀಜನವಮರ್ಚುವ ಕಪ್ಪುರವಚ್ಚವಾಗಳುಂ
ಪೂಸುವ ಚಂದನಂ ಬಿಸುಪನಾಱಿಸಲಾರ್ತವೆ ಸತ್ಯಭಾಮೆಯಾ ೨೦

೧೭. ಲತಾಂಗೀ, ಕಲ್ಪಲತೆಯು ಕಲ್ಪವೃಕ್ಷದಲ್ಲಿ ಸೇರಿರುವಂತೆ ನೀನು ಮುರಹರ ಕೃಷ್ಣನಲ್ಲಿ ಸೇರುತ್ತೀಯೆ." ಎಂದು ಸಖಿ ಹೇಳಿದಳು. ಒಡನೆ ಸತ್ಯಭಾಮೆ- "ನಾನು ಎಂದು ಆತನೊಡನೆ ಸೇರುವೆನೊ" ಎಂದು ಬೇರೊಂದು ಸ್ಥಿತಿಯನ್ನು ಪಡೆದಳು. ೧೮. ಆವರಿಸುವ ಹಿಮವೃಷ್ಟಿಯ ಹೆಚ್ಚಿಕೆಯಿಂದ ಕಮಲಿನಿಯು ಕಾಂತಿಹೀನವಾಗಿ ಕೃಶವಾಗಿ ರೂಪಗೆಡುವಂತೆ ಯಾವಾಗಲೂ ಕರೆಯುವ ಕಾಮ ಬಾಣಸಮೂಹಕ್ಕೆ ಅಳುಕಿ ಬಳುಕಿದ ಆ ಕೋಮಲೆಯು ಉದ್ಯಾನವನ್ನು ಹೊಕ್ಕು ಗೆಳತಿಯರು ತಳಿಯುವ ಆಲಿಕಲ್ಲಿನ ನೀರಿನಿಂದ ತಣ್ಣಗಿರುವ ಹೂವಿನ ಹಾಸಿಗೆಯಲ್ಲಿ ಅತಿಶಯವಾದ ವಿರಹತಾಪದಿಂದ ಹೊರಳಾಡುತ್ತಿದ್ದಳು. ೧೯. ಕೋಗಿಲೆಯು ತನ್ನ ಸ್ವರದ ಇಂಪನ್ನು ತೋರಿಸುತ್ತಿದ್ದಿತು. ಚಂದ್ರನು ಭಯಂಕರವಾದ ತನ್ನ ಕಿರಣಗಳನ್ನು ಬೀರುತ್ತಿದ್ದನು. ಮನ್ಮಥನು ಸಂತತವಾಗಿ ತನ್ನ ಬಾಣದಿಂದ ಕಠಿನವಾಗಿ ತಡೆಯಿಲ್ಲದೆ ಹೊಡೆಯುತ್ತಿದ್ದನು. ಅವಳ ಮನೋವಲ್ಲಭ ಕೃಷ್ಣನ ಅಂಗ ಮತ್ತು ಕಡೆಗಣ್ಣಿನ ನೋಟದ ರೀತಿಯು ಅತಿಶಯವಾದುದು. ಆದುದರಿಂದ ಆ ಸತ್ಯಭಾಮೆ ಹಿಮದಿಂದ ಹೊಳೆಯುವ ಬಳ್ಳಿಯ ಮನೆಯಲ್ಲೂ ವನದಲ್ಲಿಯೂ ನೀರಿನಲ್ಲಿಯೂ ಹೊರಳಾಡುತ್ತ, ಕೈಯನ್ನು ಕೆನ್ನೆಯ ಮೇಲಿಟ್ಟುಕೊಂಡು ಬಹು ಬಾಧೆ ಪಡುವಳು. ೨೦. (ಅವಳಿಗೆ) ಹಾಸುವ ಚಿಗುರು ಹಾಸಿಗೆಯೂ ಮೇಲೆ ಪೇರಿಸುವ ಎಳೆಯ ತಾವರೆಯ ದಂಟುಗಳೂ ಚಿಮುಕಿಸುವ ಚಂದ್ರಕಾಂತದ ನೀರೂ ಬತ್ತುವ ಶೀತಳಿಕಸಮೂಹವೂ ಬೀಸುವ ಹೂವಿನ ಬೀಸಣಿಗೆಯೂ ತೊಡಿಸುವ ಪಚ್ಚಕರ್ಪೂರದ ಆಭರಣವೂ ಬಳಿಯುವ ಗಂಧವೂ ಸತ್ಯಭಾಮೆಯ ತಾಪವನ್ನು

ಮೇಳಿಸಿ ಪೊರ್ದಿದಾಳಿಯರ ಮೈ [1]ಬಿಸುಪೇಱೆ ಬೆಮರ್ತುವಂಗದೊಳ್
ಬಾಳಮೃಣಾಳಿಕಾಸಮಿತಿ ಚುಯ್ಯೆನುತುಂ ನೊರೆವಿಟ್ಟುದಶ್ರುಧಾ
ರಾಳಿ ಕಪೋಲದೊಳ್ ಕುದಿದು ಬತ್ತಿದುದೊಯ್ಯನೆ ಬೀಸುತಿರ್ಪ ಪೊಂ
ಬಾಳೆಯ [2]ಚಾಮರಂಗಳುರೆ ಸೀದುವು ತನ್ವಿಯ ದೇಹದಾಹದಿಂ ೨೧

ವ॥ ಅಂತು ಸತ್ಯಭಾಮೆಗಗ್ಗಳಮಾದ ವಿರಹಪರಿತಾಪಮಂ ಕಂಡು ಬೆಗಱ್ಗೊಂಡೀಕೆಯ ಬೇಟಮಂ ಕೈಟಭಾರಾತಿಗೆಯ್ದಿಸದೊಡೆನ್ನಂ ದೋಷಮೆಯ್ದುಗುಮಿದಂ ಮೊದಲೊಳೀಕೆಯ ತಾತಂಗೆ ಪೇೞ್ದಾತನನುಮತಿಯಿನಭಿಮತಮಂ ಮಾೞ್ಪೆನೆಂದು ನಡೆತಂದು ಸತ್ರಾಜಿದ್ಭೂಪನಲ್ಲಿಗೆ ಬಂದೇಕಾಂತದೊಳಿಂತೆಂದಳ್

ಅಂದೊರ್ಮೆ ನಿಮ್ಮ ಮನೆಗೆ
ಬ್ಬಂದಾ ವಸುದೇವಸುತನ ರೂಪಂ ರೂಪಿ
ಟ್ಟಂದು ಮೊದಲಾಗಿ ನೃಪ ನಿಜ
ನಂದನೆಯಂ ಮಾಣದಿಸುವನುದ್ಗಮಬಾಣಂ ೨೨

ತೊಲಗಿಸಿ ಭೂಷಣಪ್ರತತಿಯಂ ಮತಿಯಂ ಪತಿಯಂಗಶೋಭೆಯೊಳ್
ನಿಲಿಸೆ ಮನೋಭವಾಗ್ನಿ ವಿಧುವಿಂ ಮಧುವಿಂ ವಧುವಿಂಗೆ ಪೆರ್ಚೆ ಚ
ಣ್ಣಲಿವ ಕೊಳಕ್ಕೆ ವಂದಮಳಿನಂ ಪುಳಿನಂ ನಳಿನಂ ನಿಜಾರ್ತಿಯಂ
ಗೆಲೆ ಪಡೆಯಲ್ ಬಟಿಕ್ಕವಳಟಲ್ಕು ಬಳಲ್ದು ತೊಟಲ್ದು ಜಾನಿಪಳ್ ೨೩

ಆರಿಸಲಾರದೆ ಹೋದವು. ೨೧. ಕೃಶಾಂಗಿಯಾದ ಆ ಸತ್ಯಭಾಮೆಯ ದೇಹತಾಪದಿಂದ ಗುಂಪಾಗಿ ಅವಳ ಸಮೀಪಕ್ಕೆ ಬಂದ ಸಖಿಯರ ದೇಹಗಳು ಬಿಸಿಯೇರಿ ಬೆವರಿದವು. ಅಂಗದ ಮೇಲಿರಿಸಿದ ಎಳದಾವರೆದಂಟುಗಳು ಚುಯ್ಯೆಂದು ನೊರೆಯನ್ನು ಬಿಟ್ಟವು. ಅವಳ ಕಣ್ಣೀರಿನ ಧಾರೆಗಳು ಕೆನ್ನೆಯ ಮೇಲೆ ಕುದಿದು ಬತ್ತಿಹೋದವು. ಮೆತ್ತಗೆ ಬೀಸುವ ಹೊಂಬಾಳೆಯ ಚಾಮರಗಳು ತುಂಬಾ ಸೀದುವು. ವ॥ ಹಾಗೆ ಸತ್ಯಭಾಮೆಯ ಬಹಳವಾದ ಕಾಮತಾಪವನ್ನು ಕಂಡು, ಭೀತಿಗೊಂಡ ಕಾಮಲೇಖೆಯು ಈಕೆಯ ವಿರಹತಾಪವನ್ನು ಕೃಷ್ಣನಿಗೆ ತಿಳಿಸದಿದ್ದರೆ ನನಗೆ ದೋಷವು ತಟ್ಟುತ್ತದೆ. ಇದನ್ನು ಮೊದಲು ಈಕೆಯ ತಂದೆಗೆ ಹೇಳಿ, ಆತನ ಅನುಮತಿಯಿಂದ ನನ್ನ ಅಭಿಮತವನ್ನು ಮಾಡುವೆನು ಎಂದು ನಡೆದು ಸತ್ರಾಜಿತನಲ್ಲಿಗೆ ಬಂದು, ಏಕಾಂತದಲ್ಲಿ ಹೀಗೆಂದಳು. ೨೨. "ದೊರೆಯೇ, ಅದೊಂದು ಸಾರಿ ನಿಮ್ಮ ಮನೆಗೆ ಬಂದಿದ್ದ ಆ ವಸುದೇವಸುತನ ರೂಪವು ಮನಸ್ಸನ್ನು ಹೊಕ್ಕುದು. ಅಂದಿನಿಂದ ಪುಷ್ಪಬಾಣನು ನಿಮ್ಮ ಕುಮಾರಿಯನ್ನು ಬಿಡದೆ ಹೊಡೆಯುತ್ತಿರುವನು. ೨೩. "ಆಕೆ ಆಭರಣಗಳನ್ನೂ ತೆಗೆದು ಹಾಕಿ, ಬುದ್ಧಿಯನ್ನು ಪತಿಯ ಅಂಗಸೌಂದರ್ಯದಲ್ಲೇ ನಿಲ್ಲಿಸಿರುವಳು. ಕಾಮಾಗ್ನಿಯು ಚಂದ್ರನಿಂದಲೂ ವಸಂತ ಕಾಲದಿಂದಲೂ ಅವಳಿಗೆ ಅಧಿಕವಾಗಲು ತಂಪು ಮಾಡುವ ಕೊಳಕ್ಕೆ ಹೋಗುವಳು. ನಿರ್ಮಲವಾದ ಮಳಲೂ ಕಮಲವೂ ಅವಳ ತಾಪವನ್ನು ತಾವೇ ಪಡೆಯುತ್ತವೆ. ಬಳಿಕ

---

೧. ಬಿಸುಪೇಜೆ(ಕಗ) ೨. ಚಾಮರಂಗಳರೆ (ಕಗ)

ವ|| ಅಂತುಮಲ್ಲದೆ

ಸೋಂಕಿದ ಗಾಳಿ ದಳ್ಳುರಿವೊಲಾದುದು ಪೊಕ್ಕ ಸರೋವರಾಂಬು ಕಾ
ಯ್ದಿಂ ಕುದಿದತ್ತು ನಂದನವನಂ ಕರಿಕೆಟ್ಟುದು ನೋಡೆ ಸುಯ್ದು ಸು
ಯ್ದೆಂಕಿಯಿನೆಯ್ದೆ ಚಂದ್ರಿಕೆ ಬಿಸಿಲ್ಗೆಣೆಯಾದುದನಂಗತಾಪದಿಂ
ಪಂಕರುಹಾಕ್ಷಿ ಕಾಮಶಿಖಿ ಪೆಣ್ಬರಿಜಂ ತಳೆದಂತೆ ತೋಱಿದಳ್ ೨೪

ವ|| ಅಂತುಮಲ್ಲದೆ

ಅವಯುವದ ಸಾರಸರ್ವ
ಸ್ವವನಾಹುತಿಗೆಯ್ದಳಂಗಜಾಗ್ನಿಯೊಳುಱಿದ
ತ್ತವಳೊಳಸುವೊಂದೆ ಸತಿ ಮಾ
ಱ್ಪವನಾಕುಳ ಕಾಮಶಿಖಿಗೆ ಪೂರ್ಣಾಹುತಿಯಂ ೨೫

ವ|| ಎನೆ ತತ್ಪ್ರಂಚಮಂ ಕೇಳ್ದು

ರೂಪಯಶೋದುಂದುಭಿನಿನ
ದಾಪೂರಿತಮಹಿಗೆ ಸತ್ಯಭಾಮೆಗೆ ಹರಿ ತಾ
ನೋಪನೆನೆ ನೆಗೞ್ಗುಮೀಕೆಗೆ
ರೂಪಯಶೋ[1]ಯೋಗ್ಯಮೆನಿಪ ಸೌಭಾಗ್ಯಯಶಂ ೨೬

ಪರಮಪದನಾತನಾ ಮುರ
ಹರನನೊಡಂಬಡಿಪೊಡೆನ್ನ ನಣ್ಪಿನ ನುಡಿಯೊಳ್
ಪುರುಳಿಲ್ಲೀಕೆಯ ರೂಪೀ
ಕರುಣಮೊಡಂಬಡಿಕುಮೆಲಗೆ ನಿನ್ನಯ [2]ನುಡಿಯುಂ ೨೭

ಅವಳು ಅಳಲಿ ಬಳಲಿ, ಅಲೆದು ಕೃಷ್ಣನನ್ನೇ ಧ್ಯಾನಿಸುವಳು. ವ|| ಅದೂ ಅಲ್ಲದೆ ೨೪. "ಅವಳನ್ನು ಸೋಕಿದ ಗಾಳಿಯು ದಳ್ಳುರಿಯಂತಾಯಿತು. ಅವಳು ಹೊಕ್ಕ ಸರೋವರವು ನೀರು ಕಾಯ್ದು ಕುದಿಯಿತು. ನಂದನವನವು ಸುಟ್ಟು ಕರಿಯಾಯಿತು. ಅವಳು ನೋಡುವಾಗ ನಿಟ್ಟುಸಿರಿನ ಬೆಂಕಿಯಿಂದ ಬೆಳುದಿಂಗಳು ಬಿಸಿಲಿನಂತಾಯಿತು. ಮನ್ಮಥತಾಪದಿಂದ ಆ ಕಮಲಾಕ್ಷಿ ಕಾಮಾಗ್ನಿಯೇ ಸ್ತ್ರೀರೂಪವನ್ನು ಧರಿಸಿದಂತೆ ಕಾಣಿಸುವಳು. ೨೫. "ಆಕೆ ತನ್ನ ಅವಯವದ ಸಾರಸರ್ವಸ್ವವನ್ನೂ ಕಾಮಾಗ್ನಿಗೆ ಆಹುತಿಮಾಡಿರುವಳು ಅವಳ ಪ್ರಾಣವೊಂದೇ ಉಳಿದಿದೆ. ಆ ಸತಿಯು ಅದನ್ನೂ ಕಾಮಾಗ್ನಿಗೆ ಅನಾಯಾಸದಿಂದ ಪೂರ್ಣಾಹುತಿಯಾಗಿಸುವಳು" ವ|| ಎನ್ನಲು ಆ ವಿಚಾರವನ್ನು ವಿವರವಾಗಿ ಕೇಳಿ, ೨೬. ಸತ್ರಾಜಿತನು ರೂಪಕೀರ್ತಿಗಳ ನಗಾರಿ ಧ್ವನಿಯಿಂದ ಭೂಮಿಯನ್ನು ತುಂಬಿಸಿರುವ ಸತ್ಯಭಾಮೆಗೆ ಹರಿಯು ಪತಿ ಆದರೆ ಈಕೆಯ ರೂಪಕ್ಕೂ ಯಶಸ್ಸಿಗೂ ತಕ್ಕ ಸೌಭಾಗ್ಯವು ಒದಗಿತೆಂಬ ಕೀರ್ತಿಯೂ ಹೆಚ್ಚುವುದು. ೨೭. ಪರಮಪದವಿಯ ಆ ಕೃಷ್ಣನನ್ನು ಒಡಂಬಡಿಸುವುದಕ್ಕೆ ನನ್ನ ನುಣುಪುಮಾತಿನಲ್ಲಿ ಸಾರವಿಲ್ಲ. ಎಲೇ! ನಿನ್ನ ಮಾತೂ ಈಕೆಯ ರೂಪವೂ ಈ ಕರುಣವೂ ಅವನನ್ನು ಒಡಂಬಡಿಸುವುವು. ವ|| ಆದುದರಿಂದ ನೀನೇ ಹೋಗಿ,

೧. ಯೋಗ್ಯನೆನಿಪ (ಕಗ) ೨. ನುಡಿಯಿಂ (ಕಖಗ)

ವ॥ ಅದುಕಾರಣಂ ನೀನೆ ಪೋಗಿ ನಿನ್ನ ಬಲ್ಲಂದದಿಂ ಫುಲ್ಲನಾಭನನೊಡಂಬಡಿಸು ಪೋಗು; ಈಗಳ್ ನಿಮಿತ್ತಂಗಳುಂ ಶುಭಸೂಚಕಂಗಳಾಗಿರ್ದಪುವು ಎಂದು ಕಳುಪುವುದುಂ [೧]ಕಾಮಲೇಖೆ

ಪೌರವಿನಿರ್ಗತೆಯಾಗಿ ಮ
ನೋರಥಮನೆ ಕಾಣ್ಬ ತೆಱದಿನಿದಿರೊಳ್ ಕಂಡಳ್
ನಾರದನನಖಿಲತತ್ತ್ವ ವಿ
ಶಾರದನಂ ಕಾಂತಿಜಿತಶರನ್ನೀರದನಂ ೨೮

ವ॥ ಆಗಳಾಕೆಗೆ ಮುನೀಂದ್ರನಿಂತೆಂದಂ

ದ್ವಾರಕೆಯ ಬಹಿರ್ವನದೊಳ್
ನಾರಾಯಣನಿರ್ಕುಮಿದಿರೊಳಭಿಮತಮಕ್ಕುಂ
ನಾರೀಜನದೊಳ್ ಬೇಟದ
ನಾರಿ ಮುಕುಂದಂಗೆ ಸತ್ಯಬಾಮೆಯೆನಿಕ್ಕುಂ ೨೯

ವ॥ ಎಂದು ಮುನೀಶನಾದೇಶಂಗೆಯ್ದು ಪೋಗೆಂದು ಕಳುಪಿದೊಸಗೆಗೆ ಮನದೊಳೆ ಗುಡಿಗಟ್ಟಿ ಬಗೆಯೊಳ್ ಬದ್ದವಣಂಬೊಯ್ದು ರಾಗರಸದೊಳ್ ಸಿಂಪಿಣಿಯಾಡಿ ನಡೆದೆಯ್ದೆವಂದಾ ದ್ವಾರಾವತಿಯ ಪೊಱವೊಟಲ ಬನಮಂ ಪೊಕ್ಕು

ನೀಲಮಣಿರುಚಿರನಂ ವನ
ಮಾಲಿಯನಾಲೋಲಮಕರಕುಂಡಲನಂ ದ್ಯೋ
ತಾಲಂಕೃತಕೌಸ್ತುಭನಂ
[೨]ಹೇಲಾಗತಿ ರುಚಿರಪೀತಪಟನಂ ಕಂಡಳ್ ೩೦

ನಿನಗೆ ತಿಳಿದಂತೆ ಆ ಪದ್ಮನಾಭನನ್ನು ಒಡಂಬಡಿಸು ಹೋಗು. ಈಗ ಶಕುನಗಳೂ ಶುಭ ಸೂಚಕಗಳಾಗಿರುವುವು" ಎಂದು ಹೇಳಿ, ಕಳುಹಿಸಿದನು. ಕಾಮಲೇಖೆಯು ೨೮. ಪಟ್ಟಣದಿಂದ ಹೊರಟು ಇದಿರಿನಲ್ಲಿ ತನ್ನ ಮನೋರಥವನ್ನೇ ಕಂಡಂತೆ ಸಕಲ ತತ್ತ್ವವಿಶಾರದನೂ, ತನ್ನ ಕಾಂತಿಯಿಂದ ಶರತ್ಕಾಲದ ಮೋಡವನ್ನು ಜಯಿಸಿದವನೂ ಆದ ನಾರದಮುನಿಯನ್ನು ಕಂಡಳು. ವ॥ ಆಗ ಆಕೆಗೆ ಮುನೀಂದ್ರನು ಹೀಗೆ ಹೇಳಿದನು. ೨೯. "ದ್ವಾರಕಿಯ ಹೊರಗಿನ ಉಪವನದಲ್ಲಿ ಆ ನಾರಾಯಣನಿರುವನು. ನಿನಗೆ ಎದುರಿಗೇ ಸಿಕ್ಕುವನು ನಿನ್ನ ಅಭಿಮತವು ನೆರವೇರುವುದು. ಸತ್ಯಭಾಮೆ ಕೃಷ್ಣನ ಪ್ರಿಯೆಯರಲ್ಲೆಲ್ಲರಿಗಿಂತಲೂ ಅಧಿಕ ಪ್ರೇಮವುಳ್ಳವಳಾಗುವಳು" ವ॥ ಎಂದು ಮುನೀಶನು ಅಪ್ಪಣೆಮಾಡಿ, 'ಹೋಗು' ಎಂದು ಕಳುಹಿಸಿದ ಶುಭವಿಚಾರಕ್ಕೆ ಮನಸ್ಸಿನಲ್ಲೇ ಬಾವುಟವನ್ನೇರಿಸಿ, ರೋಮಾಂಚನವನ್ನು ಪಡೆದು, ಮಂಗಳವಾದ್ಯವನ್ನು ಬಾರಿಸಿ, ರಾಗರಸದಲ್ಲಿ ನೆನೆದು ನುಡಿದಳು. ಆ ದ್ವಾರಾವತಿಯ ಸಮೀಪಕ್ಕೆ ಬಂದು, ಪುರದ ಹೊರಗಿನ ಉದ್ಯಾನವನವನ್ನು ಹೊಕ್ಕಳು. ೩೦. ನೀಲರತ್ನದ ಕಾಂತಿಯುಳ್ಳವನೂ ವನಮಾಲಾಧರನೂ ತೂಗಾಡುವ ಕರ್ಣಾಭರಣವುಳ್ಳವನೂ ಹೊಳೆಯುವ ಕೌಸ್ತುಭದಿಂದಲಂಕೃತನಾಗಿ ಲೀಲೆಯಿಂದ

೧. ಕಾಮಲೇಖೆ ಪುರದಿಂ ಪೊಱಮಟ್ಟು ಬರುತ್ತುಂ (ಕಗ) ೨. ಲೀಲಾಗತಿ (ಖ)

ವ|| ಅಂತಿದಿರೊಳ್ ಯದೃಚ್ಛೆಯಿಂದುತ್ಸಾರಿತಪರಿವಾರನಾಗಿರ್ದ ವಾರಿಜಾಕ್ಷನ ಸಮಕ್ಷಕ್ಕೆ ವಂದು

ಏನರಸ ಸುಖಮೆ ಚೆಲ್ವಿಂ
ನೀನೊಲಿಸಿದ ಸತ್ಯಭಾಮೆಯಂ ನೆನೆವೈ ತ
ನ್ಮಾನಿನಿಯಟ್ಟಿದ ದೂತಿಯೆ
[೧]ನಾನಾಭಿಧಾನದೊಳೆ ಕಾಮಲೇಖಿಯೆನೆಂಬೆಂ ೩೧

ಎಂದು ನುಡಿದವಳ ನುಡಿಗಳ್
ಕಂದರ್ಪನ ಕರ್ಬುವಿಲ್ಲ ಜೇವೊಡೆಯೊಡನೆ
ಯ್ತಂದು ಕಿವಿವುಗುವುದುಂ ಪುಗು
ತಂದುವು ನನೆಯಂಬುಗಳ್ ಮುಕುಂದನ ತನುವಂ ೩೨

ವ|| ಅಂತು ಕಂತುಶರಭರಿತಹೃದಯತೂಣೀರನಾಗಿ ಚಾಣೂರವೈರಿ

ಎಂತೆಂತು ನಿನ್ನನಟ್ಟಿದ
ಳೆಂತಂತೆನ್ನಂ ಪಲುಂಬಿ ಪಂಬಲಿಸುವಳೆಂ
ತೆಂತಿರ್ದಳವಳ್ ಬೇಟದಿ
ನಂತದನೆಲೆ ಕಾಮಲೇಖೆ ನುಡಿ ವಿಸ್ತರದಿಂ* ೩೩

ನಡೆಯುತ್ತಿರುವವನೂ ಪೀತಾಂಬರಧಾರಿಯೂ ಆದ ಆ ಕೃಷ್ಣನನ್ನು ಕಂಡಳು. ವ|| ಅಕಸ್ಮಾತ್ತಾಗಿ ಪರಿವಾರವನ್ನೆಲ್ಲಾ ಕಳುಹಿಸಿ, ಎದುರಿಗೆ ಒಬ್ಬನೇ ಕಾಣಿಸಿದ ಕೃಷ್ಣನ ಹತ್ತಿರಕ್ಕೆ ಬಂದಳು. ೩೧. "ಏನರಸಾ ಸುಖವೇ? ನೀನು ನಿನ್ನ ಚೆಲುವಿನಿಂದ ಒಲಿಸಿಕೊಂಡ ಆ ಸತ್ಯಭಾಮೆಯ ಜ್ಞಾಪಕವಿದೆಯೆ? ಆ ಮಾನವತಿಯು ಕಳುಹಿಸಿರುವ ದೂತಿ ನಾನು, ನನ್ನ ಹೆಸರು ಕಾಮಲೇಖೆ". ೩೨. ಎಂದು ಹೇಳಿದ ಅವಳ ಮಾತುಗಳು ಮನ್ಮಥನ ಕಬ್ಬುಬಿಲ್ಲಿನ ಹೆದೆಯ ಟಂಕಾರದೊಡನೆ ಬಂದು, ಕಿವಿಯನ್ನು ಹೊಕ್ಕೊಡನೆ ಅವನ ಹೂ ಬಾಣಗಳೂ ಕೃಷ್ಣನ ದೇಹವನ್ನು ಹೊಕ್ಕವು. ವ|| ಹಾಗೆ ಕಾಮಬಾಣಗಳಿಂದ ತುಂಬಿದ ಹೃದಯವೆಂಬ ಬತ್ತಳಿಕೆಯುಳ್ಳ ಕೃಷ್ಣನು ೩೩. "ಎಲೆ ಕಾಮಲೇಖೆ! ಆ ಸತ್ಯಭಾಮೆ-ಹೇಗೆ ನಿನ್ನನ್ನು ಕಳುಹಿಸಿದಳು? ಹೇಗೆ ಹೇಗೆ ನನ್ನನ್ನು ಜ್ಞಾಪಿಸಿಕೊಂಡು ಹಲುಬಿ

---

೧. ನಾನಭಿಧಾನಕದೆ (ಕಗ)

* ಈ ಪದ್ಯ ದನಂತರ (ಕಗ) ಪುಸ್ತಕಗಳಲ್ಲಿ ಈ ಎರಡು ಪದ್ಯಗಳು ಹೆಚ್ಚಾಗಿವೆ.

ಚಳದಳಕಾಳಿಗಳ್ ಪದಪಯೋರುಹದೊಳ್ ನಸುನೀಳ್ದು ಜೋಲ್ದು ಕು
ಪ್ಪಳಿಸೆ ವಿನಮ್ರೆಯಾಗಿ ದರಹಾಸವಿಲೋಕನದಿಂ ಪ್ರಸಾದಮಂ
ತಳೆದು ನೃಪೇಂದ್ರ ಮಂಗಳಮೆ ದೇವರ ದಕ್ಷಿಣಬಾಹುಶಾಖೆಗಂ
ದೆಲೆಗೆಲೆ ಕಾಮಲೇಖೆ ನಿನಗಾದನುರಾಗದಿನಲ್ತೆ ಮಂಗಳಂ

ಧರಣೀನಾಥಂಗೆ ಸತ್ರಾಜಿಗೆ ಕುಶಲಮೆ ತನ್ವಂಗಿ ಪೇಟ್ ವಾರ್ತೆಯಂ ತ
ತ್ಪುರದೊಳ್ ತಚ್ಚಕ್ರವಾಕಸ್ತನಿಗೆ ಬಿನದಮೇಂ ತತ್ಸತೀಸಂಕುಲಕ್ಕೇಂ
ಕರಣೀಯಂ ನೇನಗಲ್ದಿಂತೆನಿತು ದಿವಸಮಾ ಕನ್ನೆಯಂ ನಿನ್ನ ಬಂದೀ
ಬರವಾದಂ ಚಿತ್ರಮೆಂದಿಂಬಳವಡೆ ಬೆಸಗೊಂಡಂ ಸರೋಜಾತನೇತ್ರಂ

ವ॥ ಎಂಬುದು ಮಾತಿನ ನಲವಿಂದೀತನ ಮನದೊಲವಱಿಯಲಾದುದೆಂದು ಸಂತಸದಿಂದಿಂತೆದಳ್

ವನಿತೆಯರನಾವನುಂ ನೋ
ಡಿ [೧]ನೋಡಿಸಲ್ ಸೋಲ್ತು ಸೋಲಿಸಲ್ ನೆಱಿಯಂ ನೀಂ
ವನಜಾಕ್ಷ ಸೊಬಗನ್ನೈ ರೂ
ಪಿನ ಪೊಳಪನೆ ತೋಱಿ ನೀಱಿಯಂ ಕೂರಿಸಿದೈ ೩೪

ತನು ತನಗಿಲ್ಲದಂಡಲೆವ ಗಾಳಿಯನೋವದೆ ಪಾವು ಕೊಂಡ ಚಂ
ದ್ರನನುರಿದಿರ್ದ ಮನ್ಮಥನನಾಱಡಿದುಂಬಿಯನೋವದೇಕೆ ಪೆ
ತ್ತನೊ ಬಿದಿಯೆಂದು ತೀಡುವೆಲರ್ಗುಜ್ವಳಿಪಿಂದುಗೆ ಕಾಡುವಂಗಜಂ
ಗನುನಯದಿಂದೆ ಪಾಡುವಳಿಗಂತವಳೇಂ ಬೆದಱುತ್ತುಮಿರ್ಪಳೋ ೩೫

ಯುವತಿಯ ಬಾಡಿದಂಗಲತೆ ಬತ್ತಿಯ ಬಾಯ್ ಕೊರಗಿರ್ದ ವಕ್ತ್ರಮೆಂ
ಬಿವನೆಸೆವಾತ್ಮಕೋಮಲತೆಯಿಂದರುಣಚ್ಛವಿಯಿಂ ಸುಕಾಂತಿಯಿಂ
ನವಲತೆಗಂ ಪ್ರವಾಳಲತೆಗಂ ಹಿಮರೋಚಿಗಮಾಯ್ತು ಪೋಲಲೊಂ
ದವಸರಮಿಂತವರ್ಕಿವಳ ಬೇಟಮೆ ಬೆಂಬಲವಾದುದೆಂಬಿನಂ ೩೬

ಹಂಬಲಿಸುವಳು? ಈಗ ಅವಳು ವಿರಹವೇದನೆಯಿಂದ ಯಾವ ಸ್ಥಿತಿಯಲ್ಲಿರುವಳು? ಅದೆಲ್ಲವನ್ನೂ ವಿಸ್ತಾರವಾಗಿ ಹೇಳು" ವ॥ ಎಂದು ಕೇಳಿದನು. ಅವನ ಆದರದ ಒಳ್ಳೆಯ ಮಾತಿನಿಂದಲೇ ಈತನ ಮನಸ್ಸು ತಿಳಿಯಿತು ಎಂದುಕೊಂಡು, ಸಂತೋಷದಿಂದ ಕಾಮಲೇಖೆ ಹೀಗೆಂದಳು. ೩೪. "ಕಮಲಾಕ್ಷಾ, ಯಾವ ಪುರುಷನೂ ವನಿತೆಯರನ್ನು ನೋಡಿ, ಅವರೂ ತನ್ನನ್ನು ನೋಡುವಂತೆಯೂ ತಾನು ಅವರಿಗೆ ಸೋತು ಅವರೂ ತನಗೆ ಸೋಲುವಂತೆಯೂ ಮಾಡಲಾರನು. ಸೊಬಗನಾದ ನೀನು ನಿನ್ನ ರೂಪದ ಹೊಳಪನ್ನು ತೋರಿಸಿಯೇ ಆ ಲಾವಣ್ಯವತಿಯು ನಿನ್ನನ್ನು ಪ್ರೀತಿಸುವಂತೆ ಮಾಡಿದೆ, ಒಲಿಸಿಕೊಂಡೆ. ೩೫. "ಆ ಸತ್ಯಭಾಮೆ, ತನಗೆ ದೇಹವಿಲ್ಲದೆಯೇ ಅಲೆಯುವ ಗಾಳಿಯನ್ನೂ ಹಾವು ನುಂಗಿ ಉಗಿದಿರುವ ಚಂದ್ರನನ್ನೂ ಉರಿದುಹೋದ ಮನ್ಮಥನನ್ನೂ ಶತ್ರುವಾದ ತುಂಬಿಯನ್ನೂ (ಆರಡಿ= ೧ ಆರು ಕಾಲುಳ್ಳ ತುಂಬಿ, ೨ ಶತ್ರು) ಪ್ರೀತಿಸುವುದಿಲ್ಲ. ವಿಧಿ ತಾನು ಪ್ರೀತಿಸದ ಇವೆಲ್ಲವನ್ನೂ ಏಕೆ ಸೃಷ್ಟಿಸಿದನೋ ಎಂದು, ಬೀಸುವ ಗಾಳಿಗೂ ಹೊಳೆಯುವ ಚಂದ್ರನಿಗೂ ಹಿಂಸಿಸುವ ಮನ್ಮಥನಿಗೂ ಅವನನ್ನು ಅನುಸರಿಸಿ ಹಾಡುವ ತುಂಬಿಗೂ ಅದೆಷ್ಟು ಹೆದರುವಳೋ! ೩೬. "ಆ ಸತ್ಯಭಾಮೆಯ ಬಾಡಿದ ಅಂಗಲತೆಯನ್ನೂ ಬತ್ತಿದ ಬಾಯನ್ನೂ ಕೊರಗಿದ ಮುಖವನ್ನೂ ಲತೆಯು ಕೋಮಲತೆಯಿಂದಲೂ ಹವಳದ ಬಳ್ಳಿಯು ತನ್ನ ಅರುಣಕಾಂತಿಯಿಂದಲೂ ಚಂದ್ರನು ತನ್ನ ಸುಕಾಂತಿಯಿಂದಲೂ ಹೋಲುವುದಕ್ಕೆ ಅವಳ ವಿರಹವೇ ಬೆಂಬಲವಾಯಿತೆನ್ನುವಂತೆ ಒಂದು ಸಮಯವು

೧. ನಾಡೆಯುಂ (ಖ)

ತನುತಾಪಂ ಚೈತ್ರನಿಂ ಚಂದ್ರನಿನತಿಶಯವಾಗಿರ್ದುದಾ ಚೈತ್ರನಿಂ ಚಂ
ದ್ರನಿನಾಗಿರ್ದುತ್ಕಟಂ ನಂದನದಿನೊಗೆದುದಾ ಚೈತ್ರನಿಂ ಚಂದ್ರನಿಂ ನಂ
ದನದಿಂ ತಳ್ವೊಯ್ವ ತೆಂಗಾಳಿಯಿನೊದವಿದುದಾ ಚೈತ್ರನಿಂ ಚಂದ್ರನಿಂ ನಂ
ದನದಿಂ ತೆಂಗಾಳಿಯಿಂದ್ಯೈವಡಿವಳೆದವಳಾ ತಾಪಮಂ ಪೇೞ್ವೆನೇನಂ ೩೭

ಚಿತ್ತಂಬೊಕ್ಕಿರ್ದೆಯೆಂತೈ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂ
ಬೆತ್ತಂ ಮೈಸೋಂಕಿ ಮಂದಾನಿಳನುರಿದನದರ್ಕಾಳಿಯರ್ ದೂರದಿಂ ಸೂ
ಸುತ್ತಿರ್ಪರ್ ತೋಯಮಂ ಜೀರ್ಕೊೞವಿಯೊಳೆ ಮನೋ[1]ಜಾತನೆೞ್ದೆಸಲ್ಕಾ
ರ್ದೆತ್ತುಂಗೋಲಿಕ್ಕುವಂ ಭಾವಿಸುವರಳವೆ ಸತ್ರಾಜಿತೀದೇಹದಾಹಂ ೩೮

ಎಸಸುಂ ಮೈಬಿಸುಪೇಱಿ [2]ವಾಸಗೃಹಮಂ ತೀವಿತ್ತು ಸುಯ್ಗಾಳಿ ನಂ
ದನಪತ್ರಂಗಳ[3]ನಾಱಿಸಿತ್ತು ವಿಗಳದ್ಬಾಷ್ಪಾಂಬುಧಾರಾಳಿ ತ
ದ್ವನಭೂಜಾವಳಿಗಾಲವಾಲಜಲವಾಯ್ತಬ್ಜಾಕ್ಷ ನಿನ್ನಂದಮಂ
[4]ನೆನೆಯುತ್ತುಂ ಮನಮಂ ತಱುಂಬುತಿರೆ ಜೀವಂ ನಿಂದುದಾ ತನ್ವಿಯಾ ೩೯

ವ|| ಅಂತಾ ವಿರಹವಿಹ್ವಲೆಯ ಜೀವಿತಾಶ್ರಯದೊಳ್ ಸಂದೇಹಮುಂಟಲ್ಲದೆನ್ನ ನುಡಿಯೊಳ್ ಸಂದೇಹಮಿಲ್ಲವಂತು ಬಂದು ನೋೞ್ಪುದೆಂದು ತನ್ನ ಮನದೊಳೊಡಂಬಡಿಸಿದಂತೆ ನುಡಿದ ದೂತಿಯ

ದೊರಕಿತು. ೩೭. "ನಿನ್ನ ವಿರಹದಿಂದಾದ ಅವಳ ದೇಹತಾಪವು ವಸಂತನಿಂದ ಹೆಚ್ಚಿತು. ಅದು ಚಂದ್ರನಿಂದ ಮತ್ತಷ್ಟು ಹೆಚ್ಚಿತು. ಆ ಚೈತ್ರ ಚಂದ್ರರಿಂದ ಹೆಚ್ಚಿದ ತಾಪವು ನಂದನ ವನದಿಂದ ಉಲ್ಬಣವಾಯಿತು. ಆ ಚೈತ್ರ ಚಂದ್ರ ನಂದನವನಗಳಿಂದ ಬೆಳೆದ ಅದು ಬೀಸುವ ತೆಂಗಾಳಿಯಿಂದ ಸಮೃದ್ಧಿಯಾಯಿತು. ಹೀಗೆ ಚೈತ್ರ ಚಂದ್ರ, ನಂದನವನ, ತೆಂಗಾಳಿಗಳಿಂದ ಐದುಮಡಿ ಬೆಳೆದ ಅವಳ ಆ ತಾಪವನ್ನೇನು ಹೇಳಲಿ! ೩೮. "ಕೃಷ್ಣಾ! ನೀನು ಹೇಗೆ ಆಕೆಯ ಮನಸ್ಸನ್ನು ಹೊಕ್ಕಿದ್ದೆಯೋ ಕಾಣೆನು! ಶೀತಲಕರಗಳಿಂದ ಸ್ಪರ್ಶಿಸಿದ ಚಂದ್ರನು ತಾಪಗೊಂಡನು. ಮೆಯ್ಯನ್ನು ಸೋಕಿದ ಮಂದಮಾರುತನು ಉರಿದನು. ಆದುದರಿಂದ ಆಕೆಯ ಗೆಳತಿಯರು ದೂರದಿಂದಲೇ ಜೀರ್ಕೊಳವೆಯಿಂದ ನೀರನ್ನು ಅವಳ ಹೃದಯದಲ್ಲಿ ಮನ್ಮಥನಿರುವೆಡೆಗೆ ಎರಚುವರು. ಆದರೂ ಮನ್ಮಥನು ಎದ್ದು ಅವರನ್ನು ತಿರಸ್ಕರಿಸುವುದಕ್ಕಾಗಿ ಅಬ್ಬರಿಸಿ ಮೇಲೆಳೆದ ಬಾಣಗಳಿಂದ ಆಕೆಯನ್ನು ಹೊಡೆಯುವನು. ಈ ಸ್ಥಿತಿಯಲ್ಲಿ ಆ ಸತ್ಯಭಾಮೆಯ ದೇಹತಾಪವು ಎಷ್ಟೆಂಬುದನ್ನು ಜನರು ಯೋಚಿಸಿ ತಿಳಿಯಲು ಸಾಧ್ಯವೇ?!" ೩೯. "ಆಕೆಯ ದೇಹದ ಶಾಖವು ಬಹಳವಾಗಿ ಹೆಚ್ಚಿ ವಾಸದ ಮನೆಯನ್ನು ತುಂಬಿತು. ಉಸಿರಿನ ಗಾಳಿಯು ನಂದನವನದ ಎಲೆಗಳನ್ನು ಒಣಗಿಸಿತು. ಸುರಿಯುವ ಕಣ್ಣೀರಿನ ಧಾರೆಗಳು ಆ ವನದ ಮರಗಳಿಗೆ ಪಾತಿಯ ನೀರಾದುವು. ಕಮಲಾಕ್ಷ! ನಿನ್ನ ಅಂದವನ್ನು ನೆನೆಯುತ್ತ ಮನಸ್ಸನ್ನು ತಡೆ ಹಿಡಿದಿರುವುದರಿಂದ ಇನ್ನೂ ಅವಳ ಜೀವವು ನಿಂತಿದೆ. ವ|| ಹಾಗೆ ವಿರಹ ಚಿಂತೆಗೊಳಗಾಗಿರುವ ಆ ಸತ್ಯಭಾಮೆಯ ದೇಹವು ಇನ್ನೂ ಇರುವುದರಲ್ಲಿ ಸಂಶಯ

---

೧. ಜಾತನಿರ್ದುರ್ದ್ದೆಸರ್ಕಾ (ಕ) ಜಾತನಿರ್ದುರ್ದ್ದೆಶಕ್ಕಾ (ಖ) ಜಾತನಿರ್ದ್ದುರ್ದ್ದ್ಯಸಲ್ಕಾ (ಗ)
೨. ಹೈಮಗೃಹಮಂ (ಕಗ) ೩. ನಾಡಿಸಿತ್ತು (ಕಗ) ೪. ನೆನೆಯುತ್ತಿರ್ಪ ಮನಂ (ಕಗ)

ಮಾತಿಂಗೊಡಂಬಟ್ಟು ವಿಟವೇಷದಿಂ ಪ್ರಚ್ಛನ್ನತನುವಾಗಿ ಕಾಮಲೇಖೆಯೊಡನೆ ನಡೆಗೊಂಡು ನಿಜಕಾಮಪ್ರೇಮರಥಮನಾಹತಮತಿಜವದಿನೆಯ್ದಿಸಲೆಯ್ದಿ ಸತ್ಯಭಾಮೆಯಿರ್ದ ಬನಮಂ ಪೊಕ್ಕು ತದ್ವನವಿಭೂತಿಯಂ ನೋಡಿ ಪೊಟ್ತುಗಳೆಯಲೊಲ್ಲದೆ ಚಿತ್ತವಲ್ಲಭೆಯಂ ನೋಡುವುತ್ಕಲಿಕೆಯಿಂದಾ ಕಾಂತೆಯಿರ್ದೇಕಾಂತಪ್ರದೇಶಕ್ಕೆ ಬಂದು ತತ್ಸಮೀಪದ ಜವನಿಕೆಯ ಮಱೆಯೊಳ್ ತನ್ನನಾರುಂ ಕಾಣದಂತು ತನಗಾ ಕನ್ನೆಯ ರೂಪುಗಾಣಲುಂ ಮಾತುಗೇಳಲುಂ ಬರ್ಪಂತು ಕಾಮಲೇಖೆವೆರಸು ನಿಂದು

ಕೆಂದಳಿರ್ವಾಸಿನೊಳ್ ಕಡುಬೆಳರ್ತು ಕರಂ ಬಡವಾದ ತನ್ವಿ ತ
ನ್ನೊಂದಿರವಿಂದೆ ಸಂಜೆಮುಗಿಲೊಳ್ ನಸುದೋರ್ಪ ಕಲಾವಶೇಷಮ
ಪ್ಪಿಂದುವ ಲೇಖೆಯಂತೆಸೆದು ಮೆಲ್ಲೆರ್ದೆಯಂ ನಡುವಂಗಜಾಸ್ತ್ರದಿಂ
ನೊಂದು [1]ಕಟಿಲ್ದಟಿಲ್ವ ಪರಿಯಂ ಹರಿ ಕಂಡೆರ್ದೆಯಾಱೆ ನೋಡಿದಂ ೪೦

[2]ಮಾಡಿ ಬೆಡಂಗಿ ಕಣ್ಗೆ ಕಡುಸೋಲಮನೆನ್ನ ಮನಕ್ಕೆ ಸೋಲಮಂ
ಮಾಡುವಲಂಪಿನಿಂ ಪುಗುವವೊಲೆದೆವೊಕ್ಕೆನಗಿಂದು ಶೈತ್ಯಮಂ
ಮಾಡಿದಳೀಕೆ ಕಾಮಪರಿತಪ್ತೆ ಗಡೆಂತಿವಳಿಂದೆ ತಣ್ಪು ಕೈ
ಗೂಡಿದುದೆನ್ನ ಮೂಢತೆಯೊ ಮೇಣಿವಳಂಗಜತಪ್ತೆಯಲ್ಲಳೋ ೪೧

ಪಡಬೇಕಾಗಿದೆಯೇ ಹೊರತು ನನ್ನ ಮಾತಿನಲ್ಲಿ ಸಂಶಯ ಪಡಬೇಕಾಗಿಲ್ಲ. ಬಂದು ನೋಡಬೇಕು" ಎಂದು ತನ್ನ ಮನಸ್ಸು ಒಡಂಬಡುವಂತೆ ಹೇಳಲು ಕೃಷ್ಣನು ದೂತಿಯ ಮಾತಿಗೆ ಒಪ್ಪಿ ಕಾಮಿಯ ವೇಷದಿಂದ ತನ್ನ ವೇಷವನ್ನು ಮರೆಸಿಕೊಂಡು, ಕಾಮಲೇಖೆಯೊಡನೆ ನಡೆದು ತನ್ನ ಕಾಮಪ್ರೇಮರಥವು ತಡೆಯಿಲ್ಲದೆ ಅತಿವೇಗದಿಂದ ನಡೆಯಿಸಿದುದರಿಂದ ಬೇಗನೆ ಬಂದು ಆ ಸತ್ಯಭಾಮೆಯಿದ್ದ ವನವನ್ನು ಪ್ರವೇಶಿಸಿದನು. ಆ ವನದ ಐಶ್ವರ್ಯವನ್ನು ನೋಡಿ, ಹೊತ್ತು ಕಳೆಯುವುದಕ್ಕೆ ಮನಸ್ಸಿಲ್ಲದೆ ತನ್ನ ಮನೋವಲ್ಲಭೆಯನ್ನು ನೋಡುವ ಆಸಕ್ತಿಯಿಂದ ಸತ್ಯಭಾಮೆಯಿದ್ದ ಏಕಾಂತಪ್ರದೇಶಕ್ಕೆ ಬಂದನು. ಅವಳ ಸಮೀಪದ ತೆರೆಯ ಮರೆಯಲ್ಲಿ ತನ್ನನ್ನು ಯಾರೂ ಕಾಣದಂತೆಯೂ ತನಗೆ ಆ ಸತ್ಯಭಾಮೆಯ ರೂಪವು ಕಾಣಿಸುವಂತೆಯೂ ಮಾತು ಕೇಳಿಸುವಂತೆಯೂ ಕಾಮಲೇಖೆಯೊಡನೆ ನಿಂತನು. ೪೦. ಕೆಂಪುಚಿಗುರಿನ ಹಾಸಿಗೆಯಲ್ಲಿ ತುಂಬಾ ಬೆಳ್ಳಗಾಗಿ ಬಹಳ ಬಡವಾದ ಆ ಸುಂದರಿ ತನ್ನ ರೀತಿಯಿಂದ ಸಂಜೆಯ ಮೋಡದಲ್ಲಿ ಸ್ವಲ್ಪ ಕಾಣಿಸುವ ಕಲೆಯು ಮಾತ್ರ ಉಳಿದಿರುವ ಚಂದ್ರನ ಕಲೆಯಂತೆ ಕಾಣಿಸಿದಳು. ಮೃದುಹೃದಯದಲ್ಲಿ ನೆಡುತ್ತಿರುವ ಕಾಮಾಸ್ತ್ರದಿಂದ ನೊಂದು ಕೋಪಿಸಿ, ರೇಗುವ ಅವಳನ್ನು ಕೃಷ್ಣನು ಮನಸಾರೆ ನೋಡಿದನು. ೪೧. "ಈ ಬೆಡಗಿ ನನ್ನ ಕಣ್ಣಿಗೆ ಹೆಚ್ಚು ಸೋಲನ್ನುಂಟುಮಾಡಿ, ಮನಕ್ಕೂ ಉಂಟು ಮಾಡುವ ಆಸೆಯಿಂದ ನನ್ನ ಹೃದಯವನ್ನು ಹೊಕ್ಕು ಈಗ ನನಗೆ ಶೈತ್ಯವನ್ನೇ ಉಂಟು ಮಾಡಿದಳು. ಈಕೆ ಕಾಮತಪ್ತಳಷ್ಟೆ. ಹೀಗೆ ಇವಳಿಂದ ತಂಪುಂಟಾಯಿತು! ನನ್ನ

೧. ಕನಲ್ದೊನಲ್ವ (ಕಗ) ೨. ಮಾಡೆ (ಕಖಗ)

ವ।। ಎಂದರವಿಂದಲೋಚನನಾ ಕನ್ನೆಯಂ ಕಂಡು ತನ್ನೆರ್ದೆಯಾಱದಂದಮುಮನಾ ಕನ್ನೆಯ ರೂಪುಮಂ ಬೇಟದ ಕಾಯ್ಪುಮನನುಕ್ರಮದೊಳೆ ಬಗೆಯುತ್ತಿರ್ಪಿನಮಾ ದರ್ಪಕ[1]ಪ್ರದಾರಿತ ವಿಧುರಿತಸ್ವಾಂತೆ ನಿಜಾಂತರವೇದಿಸಖೀಜನಸಂಗಳೊಳೊರ್ವ ಚಾತುರ್ಯವತಿಯ ಮೊಗಮಂ ನೋಡಿ

ಅನಲಸಹಾಯನಪ್ಪ ಯಮದಿಙ್ಮುಖದಿಂ ನಡೆತರ್ಪ ತೆಂಬೆರಲ್
ಮನಸಿಜವಹ್ನಿಯಂ ಬಿಡದೆ ಪೆರ್ಚಿಪುದುಂ ಕಡುನೋವನೀವುದುಂ
ವನರುಹವಕ್ತ್ರೆ ವಿಸ್ಮಯಮೆ ತಾಪಹರಂ ಜನಸೌಖ್ಯಕಾರಿ ನಂ
ದನಮೆನಗಂಗತಾಪಮುಮನೋವದೆ ನೋವುಮನೀವುದದ್ಭುತಂ ೪೨

ಕೆಳದಿಯರಱ್ಕೆಱಿಂ ತಳಿವ ಚಂದನಮಿಶ್ರಿತಚಂದ್ರಕಾಂತಶೀ
ತಳಜಳವಾಱಿಸಲ್ ನೆಱಿಯವೆಂದು ಹಿಮೋದಕಪೂರ್ಣಮಪ್ಪ ಪೂ
ಗೊಳದೊಳೆ ಪೊಕ್ಕುಮೆನ್ನ ವಿರಹಾಗ್ನಿಯನಾಱಿಸಲಾರ್ತೆನಿಲ್ಲ ನೀ
ರೊಳಮುರಿವೊಂದು ದಳ್ಳುರಿಯನಂಗನೆ ನಂದಿಸುವಂದಮಾವುದೋ ೪೩

ಖಳಮದನಾಸ್ತ್ರಪುಂಜದವೊಲಪ್ಪಲರ್ವಚ್ಚಮುಮಂಗಸಂಭವಾ
ನಳನವೊಲಪ್ಪ ಕೆಂದಳಿರ ಪಾಸಿಕೆಯುಂ ವಿಷನಾಮವುಳ್ಳ ಶೀ
ತಳಜಳಮುಂ ವಿಷಾಹಿಕುಲಮೊಂದಿದ ಚಂದನದಣ್ಪುಮಕ್ಕ ಕೇ
ವಳಮೆನಗಾಭಿಚಾರವಪಚಾರಮಿದೇಂ ಶಿಶಿರೋಪಚಾರಮೇ ೪೪

ಮೂಢತೆಯೋ ಅಥವಾ ಈಕೆ ಕಾಮತಪ್ತೆಯೇ ಅಲ್ಲವೊ!" ವ।। ಎಂದು ಕಮಲನೇತ್ರನು ಆ ಕನ್ಯೆಯನ್ನು ನೋಡಿ, ತನ್ನ ಮನಸ್ಸಿಗೆ ಸಂತೋಷವಾದುದನ್ನೂ ಆಕೆಯ ರೂಪವನ್ನೂ ವಿರಹತಾಪವನ್ನೂ ಪ್ರೇಮವನ್ನೂ ಕ್ರಮವಾಗಿ ಯೋಚಿಸುತ್ತಿದ್ದನು. ಕಾಮಬಾಣ ಪೀಡಿತೆಯಾದ ಆ ಸತ್ಯಭಾಮೆ ತನ್ನ ಅಂತರಂಗವನ್ನು ತಿಳಿದ ಸಖಿಯರಲ್ಲಿ ಒಬ್ಬಳು ಚತುರೆಯ ಮುಖವನ್ನು ನೋಡಿ ಹೀಗೆಂದಳು. ೪೨. "ಕಮಲಮುಖಿ, ಅಗ್ನಿಸಹಾಯಕ ನಾಗಿ ದಕ್ಷಿಣದಿಕ್ಕಿನಿಂದ ಬೀಸುವ ತಂಗಾಳಿಯು ಕಾಮಾಗ್ನಿಯನ್ನು ಹೆಚ್ಚಿಸುವುದೂ ಹೆಚ್ಚು ನೋವನ್ನುಂಟು ಮಾಡುವುದೂ ಆಶ್ಚರ್ಯವೇನೂ ಅಲ್ಲ. ತಾಪಹರವೂ, ಜನಸೌಖ್ಯಕಾರಿಯೂ ಆದ ನಂದನವನವೂ ನನ್ನನ್ನು ಪ್ರೀತಿಸದೆ ಪಾಲಿಸದೆ ಕಾಮತಾಪವನ್ನೂ ನೋವನ್ನೂ ಉಂಟುಮಾಡುವುದು ಬಹು ಆಶ್ಚರ್ಯವಾಗಿದೆ. ೪೩. ಗೆಳತಿಯರು ಅಕ್ಕರೆಯಿಂದ ಚಿಮುಕಿಸುವ ಸುಗಂಧಮಿಶ್ರಿತವಾದ ಚಂದ್ರಕಾಂತಶಿಲೆಯ ಶೀತಲವಾದ ನೀರೂ ನನ್ನ ವಿರಹಾಗ್ನಿಯನ್ನು ಆರಿಸಲಾರದೆಂದು, ಹಿಮಜಲಪೂರ್ಣವಾದ ಹೂವಿನ ಕೊಳವನ್ನು ಹೊಕ್ಕೂ ನನ್ನ ತಾಪವನ್ನು ಕಳೆದುಕೊಳ್ಳಲಾರೆನು. ನೀರಿನಲ್ಲೇ ಉರಿಯುವ ಈ ದಳ್ಳುರಿಯನ್ನು ಆರಿಸುವ ರೀತಿ ಯಾವುದೋ! ೪೪. ಎಲೇ! ಅತಿದುಷ್ಟನಾದ ಕಾಮನ ಅಸ್ತ್ರಸಮೂಹದಂತಿರುವ ಪುಷ್ಪಾಭರಣವೂ ಮನ್ಮಥಾಗ್ನಿಯಂತಿರುವ ಕೆಂಪುಚಿಗುರಿನ ಹಾಸಿಗೆಯೂ ವಿಷವೆಂಬ ಹೆಸರಿನ ತಣ್ಣೀರೂ ವಿಷಸರ್ಪಗಳು ಸೇರಿಕೊಂಡಿರುವ ಮರದಿಂದಾದ ಚಂದನದ ಲೇಪನವೂ ನನಗೆ ಆಭಿಚಾರ, ಅಪಕಾರ, ಶೈತ್ಯೋಪಚಾರವೆ?!

---

೧. ಪ್ರದವಿಧುರಿತ ಸ್ವಾಂತೆ (ಕಗ) ಪ್ರದಾರಿತ ವಿದಾರಿತಸ್ವಾಂತೆ (ಖ)

ಸಮನಿಸಿದುಷ್ಣರೋಚಿಯ ಮರೀಚಿಯ ನಿರ್ಭರತಾಪವಾಱುಗುಂ
ಕುಮುದಿನಿಗಿಂದುದರ್ಶನದಿನಾಱುಗುಮೇ ಪೆಱತೊಂದು ವಸ್ತುವಿಂ
ಹಿಮಕರವಕ್ತ್ರೆ ಕೇಳೆನಗೆ ಪೆರ್ಚಿದ ಮನ್ಮಥತಾಪವಾಱುಗುಂ
ಕಮಳದಳಾಕ್ಷದರ್ಶನದಿನಾಱುಗುಮೇ ಶಿಶಿರೋಪಚಾರದಿಂ ೪೫

ಅಸ್ತವನೀಯನೀಲತನುಸೌಷ್ಠವವಾ ನವಪೀತವಸ್ತ್ರವಾ
ಕೌಸ್ತುಭರತ್ನವಾ ಮಕರಕುಂಡಲವಾ ವನಮಾಲೆ ರಂಜಿಪಾ
ವಿಸ್ತೃತವಕ್ಷವಾ ಸುಭುಜವಾ ಕಮಲೇಕ್ಷಣವೀ ಸ್ಮರಾನಲಾ
ರ್ಚಿಸ್ತತಿದಗ್ಧಹೃನ್ಮುಕುರದೊಳ್ ಪೊಳೆದೊಪ್ಪುವ ಭಂಗಿ ವಿಸ್ಮಯಂ ೪೬

ಹೃದಯದ ತಾಪವನೆನ್ನೀ
ಹೃದಯಸ್ಥಂ ಗೋಪಚಂದ್ರನಾಱಿಸನೆನೆ ಕೇಳ್
ಸುದತಿ ಕಡುದೂರದಾಕಾ
ಶದ ಚಂದ್ರಮನೆಂತುಮಾಱಿಸಲ್ ನೆಱೆದಪನೇ ೪೭

ಹೃದಯಾಗ್ನಿ ಪೆರ್ಚೆ ವಸತತಿ
ಗೆ ದವಾಗ್ನಿವೊಲಾಯ್ತದೆಂತು ಹರಿಯಿರ್ದಪನೀ
ಹೃದಯಾಗ್ನಿಯೊಳಗ್ನಿಸ್ತಂ
ಭದ [೧]ವಿದ್ಯೆಯನೀಗಳಿಂತು ಕಲ್ತನೊ ಸಖಿಯೇ ೪೮

೪೫. "ಚಂದ್ರಮುಖೀ; ನೈದಿಲೆಗೆ ಸೂರ್ಯಕಿರಣವು ತಾಕುವುದರಿಂದಾದ ಸಹಿಸಲಾಗದ ಅತಿತಾಪವು ಚಂದ್ರದರ್ಶನದಿಂದ ಆರುವುದೇ ಹೊರತು ಬೇರಾವ ವಸ್ತುವಿನಿಂದಲೂ ಆರಲಾರದು. ಹಾಗೆಯೇ ನನಗೆ ಅತಿಯಾಗಿರುವ ಮನ್ಮಥತಾಪವು ಆ ಕಮಲನೇತ್ರ ಕೃಷ್ಣನ ದರ್ಶನದಿಂದ ಮಾತ್ರ ಆರುವುದೇ ಹೊರತು ಶೈತ್ಯೋಪಚಾರದಿಂದ ಆರುವುದಿಲ್ಲ. ೪೬. "ಸ್ತೋತ್ರಾರ್ಹವಾದ ಆ ನೀಲಾಂಗ ಸೌಷ್ಠವವೂ ಆ ಹೊಸ ಪೀತಾಂಬರವೂ ಆ ಕೌಸ್ತುಭರತ್ನವೂ ಆ ಕರ್ಣಕುಂಡಲವೂ ಆ ವನಮಾಲೆಯೂ ಹೊಳೆಯುವ ಆ ವಿಶಾಲ ಹೃದಯವೂ ಆ ಸುಭುಜವೂ ಆ ಕಮಲನೇತ್ರವೂ ಕಾಮಾಗ್ನಿಯಿಂದ ಸುಟ್ಟ ಹೃದಯವೆಂಬ ಈ ಕನ್ನಡಿಯಲ್ಲಿ ಹೊಳೆದು ಒಪ್ಪುತ್ತಿರುವ ರೀತಿಯು ಅದ್ಭುತವಾಗಿದೆ. ೪೭. "ಸುಂದರೀ, ಕೇಳು, ನನ್ನ ಹೃದಯತಾಪವನ್ನು ನನ್ನ ಹೃದಯದಲ್ಲೇ ಇರುವ ಕೃಷ್ಣಚಂದ್ರನು ಆರಿಸದಿರುವನೆಂದ ಮೇಲೆ ಬಹುದೂರದಲ್ಲಿರುವ ಆಕಾಶದ ಚಂದ್ರನು ಆರಿಸಬಲ್ಲನೇ! ೪೮. ಸಖೀ, ಹೃದಯಾಗ್ನಿ ಹೆಚ್ಚಿ ವನಕ್ಕೆ ಕಾಡುಕಿಚ್ಚಿನಂತಾಗಿದೆ. ಈ ಹೃದಯಾಗ್ನಿಯಲ್ಲಿ ನಮ್ಮ ಹರಿಯಿರುವನು. ಆ ಸ್ವಾಮಿ ಹೇಗೆ ಅಗ್ನಿ ಬಹುಸ್ತಂಭವಿದ್ಯೆಯನ್ನು ಕಲಿತನೋ!

೧. ವಿದ್ಯೆಯನೀಗಳಿಂತೆ ಕಲಿವೇಟ್ಟಿತಿಯಂ (ಕಗ)

ತಾನಿರ್ದ ನಿಳಯಮಿದು ಮದ
ನಾನಳನಿಂದುರಿದುದಕ್ಕೆ ತನ್ನಿರ್ದೆಡೆಯಂ
ತಾನಾರಯ್ಯದನೆನ್ನನ
ದೇನಾರಯ್ವಪನೆ ಬಂದು ಕಮಲದಳಾಕ್ಷಂ ೪೯

ಧರೆಯಂ ಮೂಱಡಿ ಮಾಡಿದ
ಹರಿ ಬರ್ಪೊಡೆ ತಡವೆ ಮನದೊಳೊಲ್ಲದ ಬರವಿಂ
ಬರೆ ಕಿಱಿದೆಡೆ ಪಲವಡಿಯಾ
ಗಿರೆ ತಡೆದನೊ ಬಾರದಿರ್ದು ತಡೆದನೊ ಕೆಳದೀ ೫೦

ಪ್ರಾಣೇಶನ ಬರವಿಂಗಿವು
ಮಾಣದೆ ಕೆತ್ತಿದಪುವೆಡದ ಕಣ್ಣುಂ ತೋಳುಂ
ಪ್ರಾಣೇಶನ ಬರವಿಲ್ಲಂ
ಪ್ರಾಣೇಶಂ ಬರ್ಕುಮೆನ್ನನುಯ್ಯಲಮೋಘಂ ೫೧

ವ।। ಎಂದು [1]ದರ್ಪಕದಶಾಮಾವಸ್ಥಾತುರತೆಯಿಂ ಪರ್ಯಾಕುಲಜೀವಿತೆಯಾಗಿ ಕನ್ನೆ ಮೂರ್ಛಾಪ್ರಪನ್ನೆಯುಪ್ಪುದುಂ ಅದಂ ಸಖೀಜನಂಗಳ ಸಂಭ್ರಮಧ್ವನಿಯಿನಱಿದು ಗರುಡಧ್ವಜಂ ಜವನಿಕೆಯಿನೊಳಪೊಕ್ಕು ಆ ದರ್ಪಕಸರ್ಪದಷ್ಟೆಗೆ ಅವಸರೋಚಿತ ಸ್ವಕೀಯ ಸ್ನಿಗ್ಧವಚನಮೆ ಮಂತ್ರವಾಗೆ ನಿಜಕರಸ್ಪರ್ಶನಮೆ ಸಂಜೀವನಾಮೃತಸ್ಪರ್ಶನಮಾಗೆ ಮೂರ್ಛೆಯಿಂದೆೞ್ಚಱಿಸಿ

೪೯. ಅಕ್ಕ ಆ ಕಮಲದಳನೇತ್ರನು ತಾನೇ ವಾಸವಾಗಿರುವ ಈ ಹೃದಯಗೃಹವು ಮದನಾಗ್ನಿಯಿಂದ ಸುಟ್ಟರೂ ವಿಚಾರಿಸದೆ ಇರುವಾಗ ಈಗ ಬಂದು ನನ್ನನ್ನು ವಿಚಾರಿಸುವನೇ ೫೦. ಭೂಮಿಯನ್ನು ಮೂರುಹೆಜ್ಜೆಯಾಗಿ ಅಳೆದ ಆ ಹರಿ ಬರುವುದಕ್ಕೆ ದೂರ ತಡವೆ? ಮನಸ್ಸಿಲ್ಲದೆ ಇದ್ದರೆ ಅಲ್ಪದೂರವೂ ದೂರದಂತೆ ಆಗುವುದರಿಂದ ಸಾವಕಾಶ ಮಾಡುತ್ತಿರುವನೋ! ಬರಲಿಷ್ಟವಿಲ್ಲದೆ ನಿಂತೇಬಿಟ್ಟನೋ! ೫೧. ಪ್ರಾಣೇಶನ ಆಗಮನಕ್ಕೆಂದು ನನ್ನ ಈ ಎಡದ ಭುಜವೂ ಕಣ್ಣೂ ಬಿಡದೆ ಅದಿರುತ್ತಿರುವುವು. ಪ್ರಾಣೇಶ ಕೃಷ್ಣನು ಬರುವುದಿಲ್ಲವಾದರೆ ಪ್ರಾಣೇಶ(ಯಮ)ನು ನಿಜವಾಗಿಯೂ ನನ್ನನ್ನು ಒಯ್ಯಲು ಬರುವನು." ವ।। ಎಂದು ಮನ್ಮಥಾವಸ್ಥೆಗಳಲ್ಲಿ ಹತ್ತನೆಯದಾದ ಅಂತದೆಶೆಯಿಂದ ಪೀಡಿತಳಾಗಿ ಮೂರ್ಛೆಯನ್ನು ಪಡೆದಳು. ಅದನ್ನು ಸಖೀಜನರ ಗಾಬರಿಯ ಧ್ವನಿಯಿಂದ ತಿಳಿದ ಕೃಷ್ಣನು ತೆರೆಯ ಒಳಗಡೆಗೆ ನುಗ್ಗಿ ಕಾಮಸರ್ಪವು ಕಚ್ಚಿದ್ದ ಆಕೆಗೆ ಸಮಯೋಚಿತವಾದ ತನ್ನ ನಯವಾದ ಸಮಾಧಾನೋಕ್ತಿಯೆಂಬ ಮಂತ್ರವನ್ನೂ ಹಸ್ತಸ್ಪರ್ಶವೆಂಬ ಸಂಜೀವನಾಮೃತ ಸ್ಪರ್ಶನವನ್ನೂ ಪ್ರಯೋಗಿಸಿ ಮೂರ್ಛೆಯಿಂದ ಪಾರುಮಾಡಿ ಎಚ್ಚರಿಸಿದನು.

೧. ಕಂದರ್ಪಾವಸ್ಥೆಯ ತುರೀಯಾವಸ್ಥೆಯಿಂ (ಕಗ)

ಪರಮಸ್ನೇಹಾಮೃತಾರ್ದ್ರೇಕ್ಷಣರುಚನಿಚಯಂ ಸೇಸೆ ಸಂಭಾಷಣಂ ತೂ
ರ್ಯರವಂ ಕಂದರ್ಪರಾಗೋದಯವೆಳದಳಿರ್ವಂದಲ್ ಪೊದಲ್ದಿಂಗಶೃಂಗಾ
ರರಸಂ ಕೈನೀರ್ ಮುದಂ ಪೊಂಗಳಸಮೊಲವು ಮೌಹೂರ್ತಮಾಗಲ್ತದಲ್ಲೋ
ದರಿಯೊಳ್ ವೈವಾಹವಪ್ಪನ್ನೆಗವಭಿನವವೈವಾಹದಿಂ ಕೃಷ್ಣನಿರ್ದಂ ೫೨

ವ॥ ಅಂತಾ ಮಹೋತ್ಸವಪ್ರಪಂಚಮಂ ಕಾಮಲೇಖೆಯಿಂ ಸತ್ರಾಜಿನ್ನೃಪಂ ಕೇಳ್ದುಮತಿ ಹರ್ಷದಿಂ ಪುರುಷೋತ್ತಮನುಮಂ ಸತ್ಯಭಾಮೆಯುಮಂ ನಿಜನೃಪೇಂದ್ರಮಂದಿರಕ್ಕೊಡಗೊಂಡು ಬರಿಸಿ ನಿಖಿಳ ಮಂಗಳಾಚಾರಮಂ ನೆಗಲ್ದು

ಕುಳವೃದ್ಧರ್ ನಲಿದಾಡೆ ಬಂಧುನಿವಹಂ ಕೊಂಡಾಡೆ ಸಾಮಂತಮಂ
ಡಳಿ ಹಾರೈಸೆ ಬಿಯಂ ಪೊದಲ್ದು ಜಸಮಂ ತಳ್ಳೈಸೆ ವಾದಿತ್ರಕಾ
ಹಳಗೇಯಸ್ವನಮುಣ್ಮೆ ವೇದನಿನದಂ ಕೈಗಣ್ಮೆ ವೈವಾಹಮಂ
ಗಳಮಂ ಮಾಡಿದನಲ್ಲಿಗೆಂದವರ್ಗೆ ಸತ್ರಾಜಿನ್ಮಹೀಪಾಲಕಂ ೫೩

ವ॥ ಅಂದಿನಿರುಳೊಳ್

ತಳೆದುಜ್ವಳತ್ವಮಂ ಪಾ
ಲೊಳೆ ತೊಳೆದಂತೊಪ್ಪಿ ಪೊಚ್ಚಪೊಸವೆಳ್ದಿಂಗಳ್
ಬೆಳಗುತ್ತಿರ್ದುದು ಬೆಳ್ದಿಂ
ಗಳ ರೂಪಿಂ ಬಿಸಿಲೆ ಬೆಳಗಿದಪುದೆಂಬಿನೆಗಂ ೫೪

ವ॥ ಆಗಳತನುರಾಗೋದ್ದೀಪನಕಾರಣವಸ್ತುವಿಸ್ತಾರಸಂಸ್ತುತ ವಿಸ್ತಾರಚಾದ ಶಯನಸ್ಥಾನದೊಳ್ ದುಕೂಲಪ್ರಚ್ಛದಾಚ್ಛಾದಿತ ಮರಾಳತೂಳ ಶಯ್ಯಾತಳಮನಲಂಕರಿಸಿದಲ್ಲಿ

೫೨. ಪರಮಪ್ರೇಮಾಮೃತದಿಂದ ಒದ್ದೆಯಾದ ಕಣ್ಣಿನ ನೋಟದ ಕಾಂತಿಸಮೂಹವೇ ಮಂಗಳಾಕ್ಷತೆ ಸಂಭಾಷಣೆಯೇ ವಾದ್ಯಧ್ವನಿ, ಮನ್ಮಥರಾಗೋದಯವೇ ಎಳೆಚಿಗುರಿನ ಚಪ್ಪರ, ಪ್ರಕಟವಾದ ಶೃಂಗಾರರಸವೇ ಧಾರೆಯ ನೀರು, ಸಂತೋಷವೇ ಸುವರ್ಣಕಲಶ, ಒಲವೇ ಮುಹೂರ್ತ ಆಗಿದ್ದಿತು. ಕ್ರಮವಾಗಿ ವಿಧ್ಯುಕ್ತವಾಗಿ ವಿವಾಹವಾಗುವುದಕ್ಕೆ ಮುಂಚೆಯೇ ನೂತನ ರೀತಿಯಲ್ಲಿ ಕೃಷ್ಣನು ಸತ್ಯಭಾಮೆಯನ್ನು ಮದುವೆಮಾಡಿಕೊಂಡನು. ವ॥ ಹಾಗೆ ಆದ ಆ ಮಹೋತ್ಸವದ ವಿವರವನ್ನು ಕಾಮಲೇಖೆ ಸತ್ರಾಜಿದ್ರಾಜನಿಗೆ ಹೇಳಿದಳು. ಅತಿಹರ್ಷಗೊಂಡ ಆ ಸತ್ರಾಜಿತನು ಕೃಷ್ಣಸತ್ಯಭಾಮೆಯರನ್ನು ತನ್ನರಮನೆಗೆ ಸಂಗಡ ಕರೆದುಕೊಂಡು ಬಂದನು. ಸಕಲಮಂಗಳಾಚಾರವನ್ನೂ ನಡೆಯಿಸಿ, ೫೩. ವಂಶದ ವೃದ್ಧರು ನಲಿದಾಡುತ್ತಲೂ ಬಂಧುಗಳು ವಧೂವರರನ್ನು ಹೊಗಳುತ್ತಲೂ ಸಾಮಂತರಾಜರು ಶುಭವನ್ನು ಹಾರೈಸುತ್ತಲೂ ದಾನದಕ್ಷಿಣೆಗಳ ವ್ಯಯವು ಕೀರ್ತಿಯನ್ನು ತರುತ್ತಲೂ ಮಂಗಳವಾದ್ಯ ಸಂಗೀತಗಳ ಧ್ವನಿ ಉಕ್ಕುತ್ತಲೂ ವೇದಘೋಷವು ಭೋರ್ಗರೆಯುತ್ತಲೂ ಇರುವಲ್ಲಿ, ಸತ್ರಾಜಿತನು ಸತ್ಯಭಾಮಾಕೃಷ್ಣರ ವಿವಾಹಮಂಗಳವನ್ನು ಬೆಳೆಸಿದನು. ವ॥ ಆ ದಿನ ರಾತ್ರಿ ೫೪. ಹಾಲಿನಿಂದ ತೊಳೆದಂತೆ ಹೊಳೆಯುವ ಹೊಸ ಬೆಳದಿಂಗಳು ಬಿಸಿಲೇ ಬೆಳುದಿಂಗಳ ರೂಪದಿಂದ ಪ್ರಕಾಶಿಸುತ್ತಿದೆಯೆಂಬಂತೆ ಕಾಣಿಸುತ್ತಿತ್ತು. ವ॥ ಆಗ ಕಾಮರಾಗೋದ್ದೀಪನಕ್ಕೆ ಕಾರಣವಾದ ಉತ್ತಮವಸ್ತುಗಳಿಂದ ಅಲಂಕೃತವಾಗಿ

ಪುಳಕನವಾಂಕುರಂ ನೆಗೞ್ದೆ ಘರ್ಮಪಯೋಲವಕುಟ್ಮಲಂ ಪುದುಂ
ಗೊಳೆ ರತಿರಾಗಪಲ್ಲವಮೊಡರ್ಚೆ ಕಟೀಕೃತಕಾದ್ರಿನಿರ್ಝರಂ
ತುಳುಕೆ ಮುಖಾಂಬುಜಂ ಮಿಱುಗೆ ಮಾಧವಸಂಗತಿ ಮಾಧವೋತ್ಸವಾ
ನಿಳ ನವಸಂಗಮಾದುದು ಮಹಾವನಲಕ್ಷ್ಮಿಗೆ ಸತ್ಯಭಾಮೆಗಂ ೫೫

ಮದನಸುಖಕ್ಕೆ ತಾನೆ ನೆಲೆ ಪೆಂಡಿರೊಳೆಂಬಿನಮಂತುಟೊಂದು ನೋ
ಟದ ತೆಱನಂತುಟೊಂದು ತನಿಸೋಂಕಿನ ಸಮ್ಮದವಂತುಟೊಂದು ಮೇ
ಳದ ಚದುರಂತುಟೊಂದು ಪರಿರಂಭದ ಸಂಭ್ರಮಮಂತುಟೊಂದು ಕೂ
ಟದ ಪರಿ [1]ಸತ್ಯಭಾಮೆಗೊಡಗೂಡೆ ಮುರಾರಿಗೆ ಕೂಡಿತುತ್ಸವಂ ೫೬

ಕರಕೃಷ್ಟಾಳಕಮುತ್ಪದಾರ್ಪಿತನಖಂ ನಿಷ್ಪೀಡಿತೋಷ್ಠಂ ಸಮು
ತ್ಸರಹಸ್ತಾಹತಿ ಹೂಂಕೃತಾನ್ವಿತಪದಾಘಾತಂ ಯದೃಚ್ಛಾವಚ
ಸ್ಫುರಣಂ ಸಭ್ರುಕುಟೀಕ್ಷಣಂ ದೃಢಪರಿಷ್ವಂಗಂ [2]ವಿಮುಕ್ತಾಂಗ ಸಂ
ವರಣಂ ಕೈತವವೃತ್ತವೇಂ ನೆಗೞ್ದುದೋ ಸಂಭೋಗಕೋಲಾಹಲಂ ೫೭

ವಿಸ್ತಾರವೂ ಸ್ತುತ್ಯವೂ ಆದ ಮಂಚದ ಮೇಲೆ ದೂಕೂಲದ ಹಚ್ಚಡವನ್ನು ಮೇಲೆ ಹಾಸಿದ ಹಂಸತೂಲಿಕೆಯ ಹಾಸಿಗೆಯನ್ನ ಆ ಸತ್ಯಭಾಮಾಕೃಷ್ಣರು ಅಲಂಕರಿಸಿದರು. ೫೫. (ಆಗ ವಸಂತಕಾಲವಾದುದರಿಂದ) ಮಾಧವನ (ಕೃಷ್ಣ ಮತ್ತು ವಸಂತಕಾಲ) ಅತ್ಯಾನಂದಕರವಾದ ನೂತನ ಸಮಾಗಮವು ವನಲಕ್ಷ್ಮಿಗೂ ಸತ್ಯಭಾಮೆಗೂ, ಆಯಿತು. ವಸಂತಮಾರುತ ಸ್ಪರ್ಶದಿಂದ ಆದಂತೆ ಸತ್ಯಭಾಮೆಗೆ ಆದ ರೋಮಾಂಚನವೇ ವನಲಕ್ಷ್ಮಿಗಾದ ಹೊಸಚಿಗುರು ಮೊಳಕೆಯಂತಾಯಿತು. ಸತ್ಯಭಾಮೆಯ ರತಿರಾಗವೇ ವನಲಕ್ಷ್ಮಿಗಾದ ಚಿಗುರಿನಂತಿದ್ದಿತು. ಬೆವರುನೀರಿನ ಹನಿಗಳೇ ವನಲಕ್ಷ್ಮಿಯ ಮೊಗ್ಗುಗಳಂತಿದ್ದವು. ಸತ್ಯಭಾಮೆಯ ನಡುವೆಂಬ ಕೃತಕಾದ್ರಿಯಿಂದ ಹರಿಯುವ ಬೆವರು ಗಿರಿಯಿಂದ ಹರಿಯುವ ಝರಿಯ ನೀರಾಗಿದ್ದಿತು. ಸತ್ಯಭಾಮೆಯ ಮುಖಕಮಲವೇ ವನಲಕ್ಷ್ಮಿಯ ಸಹಜ ಕಮಲದಂತೆ ಹೊಳೆಯುತ್ತಿದ್ದಿತು. ೩೬. ಕೃಷ್ಣನ ಪತ್ನಿಯರಲ್ಲಿ ಅವನ ಕಾಮಸುಖಕ್ಕೆ ಸತ್ಯಭಾಮೆಯೇ ನೆಲೆಯೆನ್ನುವಂತೆ ಪ್ರೇಮಪೂರ್ಣವಾದ ಆ ನೋಟದ ರೀತಿಯೂ ಸ್ಪರ್ಶದ ಸಂತೋಷವೂ ಅದೊಂದು ರೀತಿಯ ಸೇರುವೆಯ ಚಾತುರ್ಯವೂ ಅಷ್ಟು ಬಗೆಯ ಆಲಿಂಗನದ ಸಂಭ್ರಮವೂ ಅಷ್ಟೊಂದು ರತಿಕ್ರೀಡೆಯ ರೀತಿಯೂ ಅವಳಿಗೆ ಕೃಷ್ಣನೊಡನೆ ಲಭಿಸಿತು. ಕೃಷ್ಣನಿಗೂ ಸಂತೋಷವಾಯಿತು. ೫೭. ಕಯ್ಯಿಂದ ಮುಂಗುರುಳಿನ ಎಳೆತ, ಉಬ್ಬಾದೆಡೆಗಳಲ್ಲಿನ ನಖಕ್ಷತ, ಅಧರ ಚುಂಬನ, ಕೃತಕಮಾತ್ಸರ್ಯದ ಹೊಡೆತ, ಹೂಂಕರಿಸುತ್ತಾ ಒದೆಯುವಿಕೆ, ತೋರಿದಂತೆ ಮಾತು. ಹುಬ್ಬುಗಂಟಿಕ್ಕಿದ ನೋಟ, ದೃಢಾಲಿಂಗನ, ತೆರೆದ ಮೈಸವರುವಿಕೆ, ನಟನೆ ಮೊದಲಾದವುಗಳುಳ್ಳ ಆ ಸಂಭೋಗ ಕೋಲಾಹಲವು ಹೇಗೆ ನಡೆಯಿತೊ!

---

೧. ಸತ್ಯಭಾಮೆಯೊಡಗೂಡೆ ೨. ವಿಮುಕ್ತಾಂಕ (ಕಗ)

ಅವಲುಪ್ತಾಂಗವಿಲೇಪನಂ ಚ್ಯುತಲಲಾಮಂ ಪ್ರಸ್ತಮಾಲಾಳಿ ವ
ಕ್ರವತಂಸಂ ಶ್ಲಥಮೇಖಲಂ ತ್ರುಟಿತಹಾಸಂ ಮುಕ್ತಮಂಜೀರಕಂ
ಪ್ರವಿಕೀರ್ಣಾಳಕವಸ್ತಬಂಧ [1]ಕಬರಿಚ್ಛಿನ್ನಾಂಗಮಾರಕ್ತನೇ
ತ್ರವರಾಗಾಧರವಾಯ್ತು ಕಾಮಕಳಹಂ ಸತ್ರಾಜಿತೀದೇವಿಯಾ ೫೮

ಸರಸೀಜಾಕ್ಷನೊಳಿತ್ತುದಾ ಸತಿಯ ಸಂಭೋಗಂ ಸನೃತ್ಯತ್ಕುಚಂ
ಸರುವತ್ಕಾಂಚಿ ಸಚುಂಬನಂ ಸಪರಿರಂಭಂ ಸಪ್ರಹಾರಂ ಸನಿ
ರ್ಭರವಕ್ತ್ರಶ್ವಸಿತಂ ಸಲೀಲಮತಿ ಸಸ್ನೇಹಂ ಸರೋಮೋದ್ಗಮಂ
ಸರಸಾಂಗಂ ಸನಿಮೀಲಿತಂ ಸಸಮುಪಾತಂ ಸೌಖ್ಯಸಂಪತ್ತಿಯಂ ೫೯

ಉರದಿಂ ಪೆರ್ಮೊಲೆ ಬೆಂಗೆ ಮೂಡೆ ಬೆಮರಂಬುಂ ವಜ್ರಲೇಪಂಬೊಲಾ
ಗಿರೆ ಕೀಲ್ಗೊಟ್ಟ ಬೆಡಂಗನೀಯೆ ಪುಳಕಂ ತೋಳ್ ತಳ್ತು ಗಂಟಿಕ್ಕಿದಂ
ತಿರೆ ಮೆಯ್ ಮೆಯ್ಯೊಳಡಂಗುವಂತಮರೆ ಗಾಢಾಲಿಂಗನಂಗೆಯ್ದು ನ
ಲ್ಲರದೇನಿರ್ದರೊ ಕಾಸಿ ಬೆಚ್ಚ ತೆಱದಿಂ ಶ್ರೀಸತ್ಯಭಾಮಾಚ್ಯುತರ್ ೬೦

ವ|| ಅಂತು ಸಂತತಂ ನಿಕಾಮಪ್ರೇಮಕಾಮೋತ್ಸವಂ ನೆಗಳೆ

೫೮. ಸತ್ಯಭಾಮೆಗೆ ಕೃಷ್ಣನೊಡನೆ ಆದ ಕಾಮಕಲಹದಲ್ಲಿ, ಅಂಗಕ್ಕೆ ಲೇಪಿಸಿಕೊಂಡಿದ್ದ ಗಂಧ ಮೊದಲಾದುದು ಅಳಿಸಿಹೋಯಿತು. ಹಣೆಯ ಲಾಂಛನವೂ ಇಲ್ಲವಾಯಿತು, ಮಾಲೆಗಳೆಲ್ಲವೂ ಜಾರಿ ಬಿದ್ದುಹೋದವು. ಶಿರೋಭೂಷಣವು ವಕ್ರವಾಯಿತು, ವಡ್ಯಾಣವೂ ಕಳಚಿ ಹೋಯಿತು. ಹಾರವು ಕಿತ್ತುಹೋಯಿತು: ಕಾಲುಬಳೆಯೂ ಬಿಟ್ಟುಹೋಯಿತು ಮುಂಗುರುಳು ಕೆದರಿಹೋಯಿತು. ಗಂಟುಬಿಚ್ಚಿಹೋಗಿ ಜೋಲುಮುಡಿಯು ಮೈಯನ್ನು ಮುಸುಕಿತು. ಕಣ್ಣು ಕೆಂಪಾಯಿತು. ತುಟಿಯು ಕೆಂಪಿಲ್ಲದುದಾಯಿತು. ೫೯. ಆ ಸತ್ಯಭಾಮೆಯ ಒಡ್ಯಾಣವು ಧ್ವನಿಮಾಡುತ್ತ ಕುಚವು ನರ್ತಿಸುತ್ತ ಇರುವಲ್ಲಿ ಚುಂಬನಾಲಿಂಗನ ತಾಡನ ಸಹಿತವೂ ಹೆಚ್ಚಾದ ಬಾಯುಸಿರೂ ರೋಮಾಂಚನವೂ, ನಿಮೀಲಿತ ನೇತ್ರವೂ ಉಳ್ಳುದೂ, ಸಾರಸಾಂಗತ್ಯನುರಾಗ ಪೂರ್ಣವೂ ಆದ ಸಮಸ್ಥಿತಿ ಸಂಭೋಗವು ಕೃಷ್ಣನಿಗೆ ಸೌಖ್ಯಸಂಪತ್ತನ್ನು ಉಂಟುಮಾಡಿತು. ೬೦. ಶ್ರೀಸತ್ಯಭಾಮಾ ಕೃಷ್ಣರು ಒಬ್ಬರ ದೇಹವು ಮತ್ತೊಬ್ಬರ ದೇಹದಲ್ಲಿ ಅಡಗುವಂತೆ ದೃಢಾಲಿಂಗನ ಮಾಡಿಕೊಂಡು, ಪರಸ್ಪರ ಬೆಸೆದಂತೆ ಇದ್ದರು. ಆಗ ಸತ್ಯಭಾಮೆಯ ಸ್ತನಗಳು ಕೃಷ್ಣನ ಎದೆಯಲ್ಲಿ ನಾಟಿ, ಬೆನ್ನಿನಲ್ಲಿ ಕಾಣಿಸುವವೋ ಎಂಬಂತೆ ತೋರಿತು ಬೆವರು ಅವರಿಬ್ಬರನ್ನು ವಜ್ರಲೇಪದಿಂದ ಅಂಟಿಸಿದಂತೆ ಇದ್ದಿತು. ರೋಮಾಂಚನವು ಇಬ್ಬರನ್ನೂ ಸೇರಿಸುವ ಕೀಲಿನಂತಾಗಿದ್ದಿತು. ತೋಳು ಇಬ್ಬರನ್ನೂ ಸೇರಿಸಿ ಕಟ್ಟಿ ಗಂಟುಹಾಕಿದಂತೆ ಇದ್ದಿತು. ವ|| ಹಾಗೆ ಸಂತತವಾಗಿ ಪರಿಪೂರ್ಣ ಪ್ರೇಮಕಾಮೋತ್ಸವವು ನಡೆಯುತ್ತಿರುವಲ್ಲಿ

---

೧. ಕಚವಸ್ತ್ರಿಗ್ಧಾಂಗ (ಖ)

ವಿಭುಗಿನಿಯಳ್ ರುಕ್ಮಿಣಿ ಸ
ತ್ಯಭಾಮೆ ಜಾಂಬವತಿ ನಾಗ್ನಜಿತಿ ಲಕ್ಷ್ಮಣೆ ಮ
ದ್ರಭವೆ ಕಳಿಂದಜೆಯೆಂಟನೆ
ಯಭಿನುತಗುಣೆ ಮಿತ್ರವಿಂದೆ ಮತ್ತಂ ನೂರ್ವರ್ ೬೧

ಅಷ್ಟೋತ್ತರಶತಸತಿಯರೊ
ಳಿಷ್ಟಸುಖಂ ನೆಗಟಲಿರ್ದನಸುರಾರಿ ಭುಜಾ
ಕೃಷ್ಟಧನು ದುಷ್ಟನಿಗ್ರಹ
ಶಿಷ್ಟಾನುಗ್ರಹಸಮಗ್ರನೆನೆ ನಿಜಪುರದೊಳ್ ೬೨

ವ|| ಅಂತಿರ್ದೊಂದು ದಿವಸಮೋಲಗಸಾಲೆಯೊಳೊಡ್ಡೋಲಗಂಗೊಟ್ಟಿರ್ದಲ್ಲಿ

ಸ್ಮರಕರಿ ಡಿಂಡಿಮಸ್ವನಮನೇಟಿಸೆ ಕಂಕಣಕಿಂಕಿಣೀಸ್ವನಂ
ಸರಸಲತಾತ್ರಿಭಂಗಿಯನದಿರ್ಪೆ ನಿಜಾಂಗಲತಾತ್ರಿಭಂಗಿ ಚಾ
ಮರರುಚಿಯಂ ಕಟಾಕ್ಷರುಚಿಯೇಟಿಸೆ ಚಾಮರವಿಕ್ಕಿದರ್ ಪಯೋ
ಧರವತಿಯರ್ ಸರೋಜವನದೊಳ್ [1]ಸುಟಿದಾಡುವುದಂಚೆವಿಂಡೆನಲ್ ೬೩

ಪರಿಕಲಿಸಿ ಕಲಸಿ ಕಪ್ಪುರ
ದ ರಜಂ ಕುಂಕುಮರಜಂ ಮೃಗೋದ್ಭವರಜಮೇಂ
ತೆರೆಗೊಂಡುವೊ ಸಿತಚಾಮರ
ಮರುದಭಿಹತಿಯಿಂದಮಾ ಸಭಾಕುಟ್ಟಿಮದೊಳ್ ೬೪

೬೧. ವಿಭುವಾದ ಕೃಷ್ಣನಿಗೆ ಸ್ತುತ್ಯ ಗುಣೆಯರಾದ ಪ್ರಿಯೆಯರು ರುಕ್ಮಿಣಿ, ಸತ್ಯಭಾಮೆ, ಜಾಂಬವತಿ, ನಾಗ್ನಜಿತಿ, ಲಕ್ಷ್ಮಣೆ, ಮದ್ರಭವೆ, ಕಾಳಿಂದಿ ಎಂಟನೆಯವಳಾದ ಮಿತ್ರವಿಂದೆ, ಎಂಬುವವರಲ್ಲದೆ ಇನ್ನೂ ನೂರು ಜನರು ಪತ್ನಿಯರಾದರು. ೬೨. ಈ ನೂರೆಂಟು ಜನ ಸತಿಯರಲ್ಲಿ ಇಷ್ಟಸುಖವನ್ನನುಭವಿಸುತ್ತ ಅಸುರಾರಿ ಕೃಷ್ಣನು, ದುಷ್ಟನಿಗ್ರಹ ಶಿಷ್ಟಪರಿಪಾಲನಾನುಗ್ರಹಪರಿಪೂರ್ಣನಾಗಿ ಹೆದೆಯೇರಿಸಿದ ಬಿಲ್ಲನ್ನು ಧರಿಸಿ, ತನ್ನ ರಾಜಧಾನಿಯಲ್ಲಿ ಇರುತ್ತಿದ್ದನು. ವ|| ಹಾಗೆ ಇರುತ್ತ ಒಂದು ದಿನ ಸಭಾಮಂದಿರದಲ್ಲಿ ಒಡ್ಡೋಲಗದಲ್ಲಿರುವಾಗ ೬೩. ಸುಸ್ತನಿಯರಾದ ಯುವತಿಯರು ಕಮಲವನದಲ್ಲಿ ಸುಳಿದಾಡುವ ಹಂಸಗಳ ಹಿಂಡಿನಂತೆ ಕಾಣಿಸುವ ಬಿಳಿಯ ಚಾಮರಗಳನ್ನು ಕೃಷ್ಣನಿಗೆ ಬೀಸುತ್ತಿದ್ದರು. ಆಗ ಆ ವನಿತೆಯರ ಕೈಬಳೆ ಕಿರುಗೆಜ್ಜೆಗಳ ಶಬ್ದವು ಮನ್ಮಥನ ಆನೆಗಾಗಿ ಬಾರಿಸುವ ವಾದ್ಯ ಧ್ವನಿಯನ್ನು ತಿರಸ್ಕರಿಸುತ್ತಿದ್ದಿತು. ಮೂರೆಡೆ ಬಾಗಿಸಿ ನಿಂತ ಅವರ ಲತಾಂಗದ ನಿಲವು, ರಸಭರಿತವಾದ ಲತೆಯ ತ್ರಿಭಂಗವನ್ನೂ ಎದುರಿಸುತ್ತಿದ್ದಿತು. ಅವರ ಕಡೆಗಣ್ಣಿನ ಹೊಳಪು ಚಾಮರದ ಹೊಳಪನ್ನೂ ಮೀರಿಸಿದ್ದಿತು. ೬೪. ಕರ್ಪೂರದ, ಕುಂಕುಮ ಕೇಸರಿಯ ಮತ್ತು ಕಸ್ತೂರಿಯ ಧೂಳು, ಆ ಸಭಾಮಂದಿರದಲ್ಲಿ ಹರಡಿ ಒಂದರೊಡನೊಂದು ಬೆರೆತು, ಬಿಳಿಯ ಚಾಮರದ ಗಾಳಿಯಿಂದ ಅಲೆಯೇಳುತ್ತಿದ್ದವು.

೧. ಸುಟಿದಾಡುವುವಂಚೆಯೆಂಬವೊಲ್ (ಖ)

ನಿರುಪಮರೂಪಪ್ರತಿಮಯೌವನಮೂರ್ಜಿತವಿಭ್ರಮಂ ಮನೋ
ಹರದರಹಾಸಮುತ್ಕಟಕಟಾಕ್ಷನಿರೀಕ್ಷಣಕಾಂತಿ ಮಂಗಳಾ
ಭರಣಮೊಡರ್ಚೆ ಕಂತುಭುಜಶಕ್ತಿಯೆ ಕಾಂತೆಯರಾಗಿ ನಿಂದವೋಲ್
ಸರಸಿಜನಾಭನೋಲಗದೊಳಿರ್ದುದು ವಾರವಿಳಾಸಿನೀಜನಂ ೬೫

ನೆಗಟ್ದಿಂದ್ರಾದ್ಯಮರೌಘಮೋಲಗಕೆ ವಂದೆಮ್ಮಂದದಿಂ ಭಕ್ತಿವೀ
ಱುಗುಮಿಂದೀ ವಿಭುಗೆಂದು ಸೂಚಿಪವೊಲಿರ್ದರ್ ಭಕ್ತಿಸದ್ಭಾವದಿಂ
ಮೊಗಮಂ ನೋಡಿದೊಡಂತೆ ಕೈಮುಗಿಪ ಮಾತಿಂಗೊರ್ಮೆ ಜೀಯೆಂಬ ಮೆ
ಚ್ಚುಗುಡಲ್ಕೊಂಡು ಮಹಾಪ್ರಸಾದಮೆನುತಿರ್ಪುರ್ವೀಶರಾಸ್ಥಾನದೊಳ್ ೬೬

ವ॥ ಆ ಪ್ರಸ್ತಾವದೊಳ್

ದಿನಮಣಿದೀಧಿತಿಯಂ ಮಂ
ಡನಮಣಿದೀಧಿತಿಗಳಿಟಿಸೆ ಗಗನದಿನಿಟಿತಂ
ದು ನಿಜೈರಾವತದಿಂದಿಟಿ
ದು ನಿಂದನರಮನೆಯ ಬಾಗಿಲೊಳ್ ದೇವೇಂದ್ರಂ ೬೭

ವ॥ ಆಗಳ್

ಸರಸೋಕ್ತಿಪ್ರೌಢಿಯಿಂದಂ ನಿಲಿಸಿ ಪಡಿಯಱಂ ಬಂದು ಪ್ರೋಕ್ತಾ ಸಭಾಭ್ಯಂ
ತರಮಂ ಭಾಳಸ್ಥಳೀಕುಟ್ಮಳಿತಕರನುಘೇ ಬಿನ್ನಪಂ ದೇವ ದೇವೇ
ಶ್ವರನೆಟ್ಟಿಂದಿರ್ದಪಂ ಬಾಗಿಲೊಳೆನೆ ಬರವೇಟಿಂದತರ್ಕ್ಯಪ್ರಭಾವ
ಸ್ಫುರಿತಭ್ರೂಪಲ್ಲವಸ್ಪಂದನದೆ ಬೆಸಸಿದಂ ಶ್ರೀಜಗನ್ನಾಥದೇವಂ ೬೮

೬೫. ತಮ್ಮ ಅನುಪಮವಾದ ರೂಪವೂ ಯೌವನವೂ ಊರ್ಜಿತವಾದ ಬೆಡಗೂ ಮನೋಹರವಾದ ಮುಗುಳುನಗುವೂ ಉತ್ತಮವಾದ ಕಡೆಗಣ್ಣಿನ ನೋಟದ ಕಾಂತಿಯೂ ಮಂಗಳಾಭರಣಗಳೂ ಒಟ್ಟುಗೂಡಿರಲು ಮನ್ಮಥನ ಭುಜಶಕ್ತಿಯೇ ಯುವತಿಯರಾಗಿ ನಿಂತಂತೆ ಇರುವ ವೇಶ್ಯೆಯರು ಕೃಷ್ಣನ ಸಭೆಯಲ್ಲಿ ಒಪ್ಪುತ್ತಿದ್ದರು. ೬೬. ಪ್ರಸಿದ್ಧರಾದ ಇಂದ್ರಾದಿದೇವತೆಗಳ ಸಮೂಹವೂ ಇಂದು ನಮ್ಮಂತೆಯೇ ಈ ಸಭೆಗೆ ಬಂದು, ಈ ವಿಭುವಿಗೆ ಭಕ್ತಿಯನ್ನು ಬೀರುವುದು-ಎಂದು ಸೂಚಿಸುವರೋ ಎಂಬಂತೆ ಅನೇಕ ರಾಜರು ಆ ಕೃಷ್ಣನ ಸಭೆಯಲ್ಲಿ ಭಕ್ತಿ ಸದ್ಭಾವನೆಯಿಂದ ತಮ್ಮ ಮುಖವನ್ನು ಪ್ರಭುವು ನೋಡಿದೊಡನೆ ಕೈಮುಗಿಯುತ್ತ ಮಾತಿಗೊಂದು ಸಾರಿ 'ಜೀಯ' ಎನ್ನುತ್ತ ಮೆಚ್ಚು ಕೊಟ್ಟರೆ ತೆಗೆದುಕೊಂಡು ಮಹಾಪ್ರಸಾದವೆನ್ನುತ್ತ ಇದ್ದರು. ವ॥ ಆ ಸಂದರ್ಭದಲ್ಲಿ ೬೭. ದೇವೇಂದ್ರನು, ತನ್ನ ಆಭರಣಗಳ ಕಾಂತಿಯು ಸೂರ್ಯಕಾಂತಿಯನ್ನು ಕೀಳಾಗಿಸುತ್ತಿರುವಲ್ಲಿ ಆಕಾಶದಿಂದ ಇಳಿದು ಬಂದು ಐರಾವತದ ಬೆನ್ನಿನಿಂದಿಳಿದು ಅರಮನೆಯ ಬಾಗಿಲಿನಲ್ಲಿ ನಿಂತನು. ವ॥ ಆಗ ೬೮. ದ್ವಾರಪಾಲಕನು, ಸರಸವಾದ ಜಾಣ್ಮೆಯ ಮಾತಿನಿಂದ ದೇವೇಂದ್ರನನ್ನು ಬಾಗಿಲಲ್ಲೇ ತಡೆದು ನಿಲ್ಲಿಸಿ, ಸಭೆಯೊಳಕ್ಕೆ ಬಂದು, ನೆತ್ತಿಯ ಮೇಲೆ ಮುಗಿದ

ವ|| ಅನ್ನೆಗಂ ದೌವಾರಿಕನಿವೇದಿತ ಸ್ವಕೀಯಾಗಮನವೃತ್ತಾಂತನವಸರಂಬಡೆದುಪೇಂದ್ರಾಸ್ಥಾನದ ಭದ್ರಮಂದಿರಮನಿಂದ್ರಂ ಬಂದು ಪೊಕ್ಕು ತದೀಯಶ್ರೀಪಾದಪದ್ಮ ಪೀಠೋಪಕಂಠಭೂಮಿಯೊಳ್ ನಿರ್ಭರ ಭಕ್ತಿರಚಿತಪುಷ್ಪಾಂಜಲಿಯಾಗಿ

ಪಸರಿಸಿದುದು ನಡುವಗಲೊಳ್
ಕಿಸುಸಂಜೆ ವಿಚಿತ್ರಮೆನೆ ಸುರರ್ವೆರಸಿಂದ್ರಂ
ವಸುಮತಿಯೊಳ್ ಮೆಯ್ಯಿಕ್ಕಿರೆ
ಪಸರಿಸಿದುದು ತತ್ಕಿರೀಟಮಣಿಘೃಣಿಪಟಲಂ ೬೯

ವ|| ಅಂತು ಗೀರ್ವಾಣರುರ್ವೀತಳಾಲಿಂಗಿತಸರ್ವಾಂಗರಾಗಿ ಸಮನಂತರಮೆಬ್ಬು ನಿಂದಿರ್ಪುದುಂ

ಅಮಿತದಯಾಲೋಕನಸಂ
ಭ್ರಮಪಚನದರಸ್ಮಿತಂಗಳೆಂಬಿವಱಿನನು
ಕ್ರಮದಿಂ ಸಂಭಾವಿಸಿದಂ
ಕಮಲಾಕ್ಷಂ ಶಕ್ರಮುಖ್ಯದಿಕ್ಪಾಲಕರಂ ೭೦

ಪ್ರಬದ್ಧ ಮಣಿವಿಷ್ಟರಂಗಳೊಳನುಕ್ರಮಂ [1]ತಪ್ಪದಂ
ತೆ ಬಂದು ಮಘವಾಗ್ನಿಧರ್ಮದಿತಿಜಪ್ರಚೇತೋಮರು
ತ್ಕುಬೇರಹರರಿರ್ಪುದುಂ ಸಭೆಯೊಳುಣ್ಮಿ ಪೊಣ್ಮಿತ್ತು ಜಾಂ
ಗುಭೊಲ್ಲಶುಭಬೊಲ್ಲಮಾಂಗಳಿಕಬೊಲ್ಲಮೆಂಬೀ ರವಂ ೭೧

ಕೈಯುಳ್ಳವನಾಗಿ "ಉಘೇ! ದೇವ! ಬಿನ್ನಹ, ದೇವೇಂದ್ರನು ಬಂದು, ಬಾಗಿಲಲ್ಲಿ ನಿಂತಿದ್ದಾನೆ" ಎಂದನು. ಶ್ರೀಕೃಷ್ಣನು ಊಹೆಗಸದಳವಾದ ಪ್ರಭಾವದಿಂದ ಹೊಳೆಯುವ ತನ್ನ ಚಿಗುರು ಹುಬ್ಬಿನ ಚಲನ ಸಂಜ್ಞೆಯಿಂದಲೇ "ಬರಹೇಳು" ಎಂದು ಆಜ್ಞಾಪಿಸಿದನು. ವ|| ತಾನು ಬಂದಿರುವ ಸಮಾಚಾರವನ್ನು ದ್ವಾರಪಾಲಕನ ಮೂಲಕ ವಿಜ್ಞಾಪಿಸಿದ ದೇವೇಂದ್ರನು, ಸಮಯಾನುಮತಿಯನ್ನು ಪಡೆದು, ಕೃಷ್ಣನ ಆಸ್ಥಾನಮಂಗಳಭವನವನ್ನು ಹೊಕ್ಕು ಆತನ ಶ್ರೀಪಾದ ಪದ್ಮಪೀಠದ ಸಮೀಪದಲ್ಲಿ ನೆಲದ ಮೇಲೆ ನಿಂತು ನಿರ್ಭರ ಭಕ್ತಿಯಿಂದ ಪುಷ್ಪಾಂಜಲಿಯನ್ನು ರಚಿಸಿದನು. ೬೯. 'ನಡುಹಗಲಿನಲ್ಲೇ ಕೆಂಪು ಸಂಜೆಯು ಹರಡಿತು, ವಿಚಿತ್ರ!' ಎನ್ನುವಂತೆ, ದೇವೇಂದ್ರನು ತನ್ನ ಅನುಯಾಯಿ ದೇವತೆಗಳೊಡನೆ ಭೂಮಿಯ ಮೇಲೆ ಅಡ್ಡಬಿದ್ದಿರಲು ಅವನ ಕಿರೀಟದ ರತ್ನಕಾಂತಿ ಸಮೂಹವು ಹರಡಿತು. ವ|| ಹಾಗೆ ದೇವತೆಗಳು ನೆಲದ ಮೇಲೆ ದೀರ್ಘದಂಡದಂತೆ ಪ್ರಣಾಮಮಾಡಿ ಎದ್ದು ನಿಂತಿರಲು ೭೦. ಕಮಲಾಕ್ಷನು ಇಂದ್ರಾದಿ ದೇವತೆಗಳನ್ನು ಅಮಿತವಾದ ದಯಾವಲೋಕನ, ಸಂಭ್ರಮದ ಮಾತು, ಮುಗುಳುನಗೆ ಎಂಬಿವುಗಳಿಂದ ಅನುಕ್ರಮವಾಗಿ ಸಂಭಾವಿಸಿದನು. ೭೧. ಇಂದ್ರಾಗ್ನಿ ಯಮ ನಿಋತಿ ವರುಣ ವಾಯು ಕುಬೇರ ಈಶಾನರು ಅನುಕ್ರಮ ತಪ್ಪದಂತೆ ಬಂದು ಸಭೆಯ ರತ್ನಖಚಿತವಾದ ಪೀಠಗಳಲ್ಲಿ ಕುಳಿತುಕೊಂಡರು. ಸಭೆಯಲ್ಲಿ 'ಜಾಂಗುಬೊಲ್ಲ, ಶುಭಬೊಲ್ಲ, ಮಾಂಗಳಿಕ ಬೊಲ್ಲ' ಎಂಬ ಸಂತೋಷಕರವಾದ ಬಿರುದು

---

೧. ದಪ್ಪದಂತೆ (ಕ) ದಪ್ಪದಂದು (ಖ)

ಅಱುಚದೆ ಪೋ ಮಾಣೆಂಬೆಡೆ
ಯಱೆದಿರಿಮೆಂಬಿಕ್ಕು ಗದ್ದುಗೆಯನೆಂಬಿನ್ನುಂ
ಪೆಱಸಾರೆಂಬಗ್ಗದ ಪಡಿ
ಯಱರ ರವಂ ನೆಗೞ್ದುದಾ ಮಹಾಸ್ಥಾಯಿಕೆಯೊಳ್ ೭೨

ಇರದೊಗೆದುದಲ್ಲಿ ಸೂಟಾ
ಯ್ತರ ಕಳಕಳವಚ್ಚುಳಾಯ್ತರುಲಿಪ್ಪುಂ ನಾಗಾ
ಯ್ತರ ಗಳಗರ್ಜನೆ ಗೋಟಾ
ಯ್ತರ ಬಹುಳಾಧ್ವಾನಮಾ ಸಭಾಭ್ಯಂತರದೊಳ್ ೭೩

ವ|| ಆಗಳವಸರೋಚಿತಜ್ಞಂ ಮಹಾಪ್ರತಿಹಾರಸುತ್ತಂಭಿತಕರಾಂದೋಲನದಿಂ ಕಳಕಳಮಂ ನಿವಾರಿಸೆ ನಿಷ್ಪವನಸಮಯಜಲಧಿಯಂತೆ ಸಭಾಜಲಧಿ ನಿಶ್ಶಬ್ದಮಾಗಿರ್ಪುದುಂ ವಾಸವ ಭ್ರೂಸಂಜ್ಞೆಯಿಂ ವಾಚಸ್ಪತಿ ವಿಜ್ಞಾಪನೋದ್ಯುಕ್ತನಾಗಿ

ಹರಿಯೊಳ್ ವಿಜಯಶ್ರೀಯಂ
ನೆರಪಲ್ಕೆ ದುಕೂಲಕಾಂಡಪಟಮಂ ಪಿಡಿವಂ
ತಿರಲಭಿಮುಖದೊಳ್ ಪರಿಕಲಿ
ಸಿರೆ ರದನದ್ಯುತಿಗಳೆಸೆಯೆ ಸುರಗುರು ನುಡಿದಂ ೭೪

ಅಮರಾರಾತಿಬಳಂಗಳೆಂಬ ತೃಣಮಂ ಸಾಲ್ವನ್ನೆಗಂ ಮೇದು ದು
ರ್ದಮದೈತ್ಯೇಂದ್ರರ ಜೀವಮೆಂಬ ತಿಳಿನೀರಂ ತೃಪ್ತಿಪರ್ಯಂತವೀಂ
ಟಿ ಮಹಾಂಬೋಜಭವಾಂಡಮೆಂಬ ಘಟಮಾದಂ ತೀವೆ ಸತ್ಕೀರ್ತಿದು
ಗ್ಧಮನೀ ನಂದಕಖಡ್ಗಧೇನು ಕಱೆಯಲ್ವೇಡಿರ್ದುದಿನ್ನಚ್ಯುತಾ ೭೫

ಧ್ವನಿಗಳು ಹುಟ್ಟಿ ಹೊಮ್ಮಿದ್ದವು. ೭೨. "ಗಟ್ಟಿಯಾಗಿ ಕೂಗಬೇಡ, ನಿಲ್ಲು" ಎಂಬ, "ಸ್ಥಳ ವನ್ನರಿತಿರಿ" ಎಂಬ, "ಪೀಠವನ್ನು ಇರಿಸು" ಎಂಬ, "ಇನ್ನೂ ಹಿಂದೆ ಹೋಗು" ಎಂಬ ಪ್ರತೀಹಾರರ ಬಿರುದನಿಯು ಸಭೆಯಲ್ಲಿ ಹೆಚ್ಚಿತು. ೭೩. ಅಲ್ಲದೆ ಸೂಳಾಯ್ತ (ಸಾರುವವ)ರ, ಅಚ್ಚುಳಾಯ್ತ (ಊಳಿಗದವ)ರ, ಮಾವಟಿಗರ (ಆನೆಯ ಸೈನಿಕರ), ರಾವುತ (ಕುದುರೆಯ ಸವಾರ)ರ ಬಹುವಿಧ ಕಂಠಧ್ವನಿಗಳು ಆ ಸಭೆಯೊಳಗಡೆ ಹೆಚ್ಚಿದವು. ವ|| ಆಗ ಸಮಯೋಚಿತಜ್ಞನಾದ ದ್ವಾರಪಾಲಾಧ್ಯಕ್ಷನು ಮೇಲೆತ್ತಿ ಬೀಸಿದ ಕೈಯಿಂದ ಸೂಚಿಸಿ ಗದ್ದಲ ವನ್ನು ನಿಲ್ಲಿಸಿದನು. ಗಾಳಿ ಬೀಸದಿರುವಾಗ ಇರುವ ಸಮುದ್ರದಂತೆ ಆ ಸಭಾಸಮುದ್ರವು ನಿಶ್ಶಬ್ದವಾಯಿತು. ಬಳಿಕ ಇಂದ್ರನ ಹುಬ್ಬಿನ ಸಂಜ್ಞೆಯಿಂದ ಬೃಹಸ್ಪತಿಯು ವಿಜ್ಞಾಪಿಸುವುದಕ್ಕೆ ಉತ್ಸುಕನಾದನು. ೭೪. ಕೃಷ್ಣನೊಡನೆ ವಿಜಯಲಕ್ಷ್ಮಿಯನ್ನು ಸೇರಿಸುವಾಗ ನಡುವೆ ಹಿಡಿದ ದುಕೂಲದ ತೆರೆಯಂತೆ ತನ್ನ ಹಲ್ಲಿನ ಬಿಳಿಯ ಕಾಂತಿ ಎದುರಿಗೆ ಹರಡಿರುತ್ತಿರಲು ಸುರಗುರುವು ಹೇಳಿದನು. ೭೫. "ಅಚ್ಯುತಾ! ನಿನ್ನ ಈ ನಂದಕಖಡ್ಗ (ವೆಂಬ) ಧೇನು(ಹಸು)ವು, ಇನ್ನು ದೇವವೈರಿಗಳ ಸೈನ್ಯವೆಂಬ ಹುಲ್ಲನ್ನು ಸಾಕಾಗುವವರೆಗೂ ಮೇದು, ಅಡಗಿಸಲು ಕಠಿನರಾದ ರಾಕ್ಷಸೇಂದ್ರರ ಜೀವವೆಂಬ ತಿಳಿನೀರನ್ನು ತೃಪ್ತಿಯಾಗುವವರೆಗೂ ಕುಡಿದು, ಸತ್ಕೀರ್ತಿಯೆಂಬ ಹಾಲನ್ನು ಮಹಾಬ್ರಹ್ಮಾಂಡವೆಂಬ ಕೊಡವು ತುಂಬುವಂತೆ

ಜ್ಞಾನವಮೇಘಧೀರರುತಿ ನಾರದಚಂದ್ರಕಿಲಾಸ್ಯವಸ್ತ್ರಸಂ
ತಾನಕವೃಷ್ಟಿದುಷ್ಟದಿವಿಜಾರಿಶರೀರವಿಮುಕ್ತ ಜೀವಜಂ
ಝಾನಿಳಮುದ್ಧತಾರಿ[೧]ವನಿತಾಕ್ಷಿಜಲಪ್ಲವಮುರ್ವಿಸಲ್ ಸಮಂ
ತೀ ನಿಜಶಾರ್ಙ್ಗ[೨]ಕಾರ್ಮುಕದ ಕಾರ್ಮುಕವಾದಪುದಿಂ ಜನಾರ್ದನಾ ೭೬

ಗಗನಂ ನಾಟ್ಯನಿಕೇತನಂ ದಿವಿಜರೆಲ್ಲರ್ ನೋಟಕರ್ ದೇವ ನೀ
ನೆ ಗಡಂ ನಟ್ಟುವನಾಗೆ ಶಾತ್ರವಶಿರೋರತ್ನಪ್ರತಾನಂಗಳ
ಲ್ಲಿಗೆ ಪುಷ್ಪಾಂಜಲಿಯಂತೆ ನಾರದಕಟೀತಾಳಂಗಳಿಂ ಪೆರ್ಚಿ ನಿ
ನ್ನ ಗದಾನರ್ತಕಿ ನರ್ತಿಸಲ್ ಪದೆದಪಳ್ ರಕ್ಷಶ್ಶಿರೋರಂಗದೊಳ್ ೭೭

ಸುರಿತರೆ ಲೋಹಿತಂ ಧರೆಗುರುಳ್ವ ನಿಶಾಟಶಿರಂಗಳಿಂದೆ ಕೇ
ಸುರಿ ಪೊಱಪೊಣ್ಮಾವಗೆವೊಲೊಪ್ಪಿರಲತ್ತಲದೊಂದು ಮಸ್ತಕಂ
ಬೆರಸು ಘನಾಧ್ವದೊಳ್ ತಿರುಗುತುಂ ಭುಜದಂಡಹತಂ ಘಟಾನ್ವಿತಂ
ತಿರಿವ ಕುಲಾಲಚಕ್ರಮೆನಿಕುಂ ನಿಜಚಕ್ರವದಿಂ ಮುರಾಂತಕಾ ೭೮

ವ|| ಅದೆಂತೆನೆ

ಅದು ಕಾಲಾನಲ[೩]ನೊಂದೆರಟಿ ವಿಷವೆರಟ್ಮೂಱೀಶ್ವರಾಭೀಳಭಾ
ಳದ ಚಕ್ಷುಶ್ಶಿಖಿ ಮೂಱುನಾಲ್ಕು ಬಲವದ್ದಾವಾಗ್ನಿ ನಾಲ್ಕೈದಿರ
ಮ್ಮದವಯ್ದಾಱು ಲಯಾರ್ಕಮಂಡಲವದಾಱೇೞೌರ್ವವೇೞೆಂಟು ಪು
ಟ್ಟದುವೆಂಬಂತೆ ನೆಗೞ್ಗುಂ ನರಕಾಟೋಪಂ ಜಗದ್ವೇಷಮಂ ೭೯

ಕರೆಯಬೇಕಾಗಿದೆ! ೭೬. "ಜನಾರ್ದನಾ, ಇನ್ನು ನಿನ್ನ ಈ ಶಾರ್ಙ್ಗವೆಂಬ ಬಿಲ್ಲು-ತನ್ನ ಹೆದೆಯ ಟಂಕಾರವೆಂಬ ಗಂಭೀರವಾದ ಗುಡುಗೂ ನಾರದನೆಂಬ ನವಿಲಿನ ನರ್ತನವೂ, ಅಸ್ತ್ರಸಮೂಹವೆಂಬ ವೃಷ್ಟಿಯೂ ದುಷ್ಟರಾದ ರಾಕ್ಷಸರ ಶರೀರದಿಂದ ಹೊರಡುವ ಜೀವವೆಂಬ ಜಂಝಾವಾತವೂ ಉಳ್ಳ (ಕಾರ್ಮುಕವಾಗಿ) ಮುಂಗಾರು ಮಳೆಗಾಲವಾಗಿ ಕೊಬ್ಬಿದ ಶತ್ರುಗಳ ವನಿತೆಯರ ಕಣ್ಣೀರಿನ ಪ್ರವಾಹವನ್ನು ಹೆಚ್ಚಿಸುವುದು. ೭೭. "ಆಕಾಶವೇ ನಾಟ್ಯಮಂದಿರ, ದೇವತೆಗಳೇ ಪ್ರೇಕ್ಷಕರು, ಕೃಷ್ಣ, ನೀನೇ ನಾಟ್ಯಾಚಾರ್ಯನಾಗಿರುವೆ, ನಾರದನ ನಡುಕಟ್ಟಿನ ತಾಳದಿಂದ ಉತ್ಸಾಹಗೊಂಡ ನಿನ್ನ ಗದೆಯೆಂಬ ನಟಿಯು ರಾಕ್ಷಸರ ಶಿರೋರಂಗಸ್ಥಲದಲ್ಲಿ ಶತ್ರುಗಳ ಶಿರೋರತ್ನಸಮೂಹದ ಪುಷ್ಪಾಂಜಲಿಯನ್ನೆರಚಿ ನರ್ತಿಸುವಳು. ೭೮. "ಭೂಮಿಗೆ ಉರುಳಿದ ಶತ್ರುರಾಕ್ಷಸರ ತಲೆಗಳ ರಾಶಿಯೆಂಬ ಆವಿಗೆಯಿಂದ ಅವರ ಕಡಿದ ಕತ್ತಿನಿಂದ ಸುರಿಯುವ ರಕ್ತಧಾರೆಗಳು ಆವಿಗೆಯ ಕೆಂಪಾದ ಉರಿಯಂತೆ ಆಗಿರುವುದು. ಮುರಾಂತಕನೇ, ನಿನ್ನ ಬಾಹುದಂಡದಿಂದ ಹತವಾದ ಅದೊಂದು ತಲೆಯೊಡನೆ ಕೂಡಿ ಆಕಾಶದಲ್ಲಿ ತಿರುಗುವ ನಿನ್ನ ಶ್ರೇಷ್ಠಚಕ್ರವು, ಒಂದು ಗಡಿಗೆಯಿಂದ ಕೂಡಿ, ಕುಂಬಾರನ ಕೋಲಿನಿಂದ ತಿರುಗುವ ಕುಂಬಾರ ಚಕ್ರವೆನಿಸುವುದು. ವ|| ಅದು ಹೇಗೆಂದರೆ, ೭೯. ನರಕಾಸುರನ ಆಟೋಪವು ಅತ್ಯಧಿಕ. ಕಾಲಾನಲನ ಎರಡಷ್ಟು, ವಿಷದ ಎರಡು ಮೂರರಷ್ಟು, ಈಶ್ವರನ ತೃತೀಯ ನೇತ್ರದ ಮೂರು

೧. ವನಿತಾಶ್ರುಜಲಂ ನೆಱೆ ಪರ್ವಿಸಲ್ (ಕಗ) ೨. ಕಾರ್ಮುಕದೆ (ಕಗ) ೩. ಒಂದೆ ದಲ್ (ಕಗ)

ಮುನಿದಾ ಚಾಣೂರನಣ್ಮಾ ಮುರನ ಮುಸಕಮಾ ಕಂಸನುರ್ಬಾ ಹಿರಣ್ಯಾ
ಕ್ಷನ ಬಾಹಾಗರ್ವಮಾ ಕೈಟಭನ ರಭಸಮಾ ವೃತ್ರನಾಟೋಪಮಾ ಜಂ
ಭನ ಸೊರ್ಕಾ ಶುಂಭನುರ್ಕಾ ದಶಶಿರನಳವಾ ಘಾಕನುದ್ರೇಕಮೆಂಬಿಂ
ತಿನಿತೇಕಾಯತ್ತಮಾದಂತಿರಲದಟಲೆವಂ ಲೋಕಮಂ ಭೌಮದೈತ್ಯಂ ೮೦

ವ॥ ಮತ್ತಮಾ ದೈತ್ಯೋತ್ತಮನಾತ್ಮೀಯ ಕಾರ್ಮುಕನಿರ್ಮುಕ್ತ ಸಾಯಕನಿಕಾಯ ನಿರ್ದಾರಿತೈರಾವತಹಸ್ತಿಮಸ್ತಕೋಚ್ಚಲಿತನಿಸ್ತುಲಸ್ಥೂಲಮುಕ್ತಾಫಲಪ್ರಕರವಿಕೀರ್ಯಮಾಣ ಶೇಷಾಕ್ಷತಂಗಳಿನೀ ಮಹೇಂದ್ರನ ಮಕುಟಪೀಠದೊಳ್ ನಿಜಾಜ್ಞಾದೇವತೆಯಂ ಪ್ರತಿಷ್ಠಿಸಿಯುಂ, ಆ ನಿಶಾಚರಚಕ್ರವರ್ತಿ ಶಾತ್ರವಕಲತ್ರನೇತ್ರನಿರ್ಗಲದನರ್ಗಲ ದುಸ್ತರ ಬಾಷ್ಪ ಸಲಿಲಧಾರಾಸಾರ ವಿಸ್ತಾರದುಸ್ತರದೋಸ್ತರವಾರಿ ವಾರಿಧಾರಾಪೂರದಿಂದೀ ಪಾವಕನ ತೇಜಃಪ್ರಭಾವಮನಡಂಗಿಸಿಯುಂ, ಆ ನಿಶಾಚರಾಧಿನಾಥಂ ಸ್ವಕೀಯಸಾಂಪರಾಯ ಕೇಳಿಪಟಿಷ್ಠನಿಷ್ಠುರಭುಜಾವಷ್ಟಂಭಸಂಭ್ರಮ ಸಂಹೃತಾಹಿತಸುಭಟಸಂಖ್ಯಾ ವಿಜ್ಞಾಪನಚತುರಚಿತ್ರಗುಪ್ತವಚನಾಕರ್ಣನವ್ಯಾಪಾರದೊಳೀ ಯಮುನನನುಶಾಸಿಸಿಯುಂ, ಆ ದನುತನೂಜರಾಜರಾಜನ ಕಾಳಕಾಳರಾತ್ರಿವಚನಧುರಂಧರಾಂಧಕಾರ ಶಿತಿವರ್ಣಾಯಿತಾಸ್ಥಾನ ನಾಕಲೋಕಭೀಕರಭ್ರುಕುಟೀಧೂಮಸಮುದಯಶ್ಯಾಮದಿಂದೀ ಮನುಜವಾಹನನ ದೇಹಕಾಳಿಮಮು ನಿರ್ಮಿಡಿಸಿಯುಂ, ಆ ಸುಪರ್ವಾರಿಸಾರ್ವಭೌಮಂ ಭೂರ್ಭುವ[೧]ಸ್ಸುವರ್ಲೋಕದಿಕ್ಪಾಲ ಕ್ಷಯಾಶುಶುಕ್ಷಣೀತೀಕ್ಷ್ಣಾಯಮಾನ ದುರ್ಧರಧಗಧಗತ್ಕಾರಾಟೋಪ ಶಿಖಾಕಳಾಪ ಕೋಪಹುತವಹ

ನಾಲ್ಕರಷ್ಟು, ಕಾಲಾಗ್ನಿಯ ನಾಲ್ಕೈದರಷ್ಟು, ಪ್ರಳಯಕಾಲದ ಸೂರ್ಯಮಂಡಲದ ಆರೇಳರಷ್ಟು, ಔರ್ವಾಗ್ನಿಯ ಏಳೆಂಟರಷ್ಟು ಎನ್ನುವಂತೆ ಅದು ಜಗತ್ತನ್ನು ದ್ವೇಷಿಸುತ್ತಿದೆ. ೮೦. ಕೋಪಗೊಂಡ ಆ ಚಾಣೂರನ ಪೌರುಷವೂ, ಆ ಮುರಾಸುರನ ಮುಸಕವೂ, ಕಂಸನ ಉಬ್ಬೂ, ಹಿರಣ್ಯಾಕ್ಷನ ಬಾಹುಗರ್ವವೂ, ಆ ಕೈಟಭನ ರಭಸವೂ, ವೃತ್ರಾಸುರನ ಆಟೋಪವೂ, ಜಂಭಾಸುರನ ಸೊಕ್ಕೂ, ಶುಂಭನ ಔದ್ಧತ್ಯವೂ ರಾವಣನ ಸಾಮರ್ಥ್ಯವೂ ಘಾಕಾಸುರನ ಉದ್ರೇಕವೂ, ತನ್ನೊಬ್ಬನ್ನಲ್ಲಿ ಸೇರಿ ಇರುವಂತೆ ನರಕಾಸುರನು ಧೈರ್ಯ ಪರಾಕ್ರಮಾದಿಗಳಿಂದ ಲೋಕವನ್ನು ಪೀಡಿಸುವನು. ವ॥ "ಮತ್ತೂ ಆ ರಾಕ್ಷಸನು ತನ್ನ ಬಿಲ್ಲಿನಿಂದ ಹೊಡೆದ ಬಾಣಗಳಿಂದ ಸೀಳಿದ ಐರಾವತದ ತಲೆಯಿಂದ ಮೇಲಕ್ಕೆ ಹಾರಿದ ಅನುಪಮವಾದ ದಪ್ಪ ಮುತ್ತುಗಳ ಅಕ್ಷತೆಯನ್ನು ತಳಿದು ಈ ಮಹೇಂದ್ರನ ಕಿರೀಟ ಪೀಠದಲ್ಲಿ ತನ್ನ ಆಜ್ಞಾದೇವತೆಯನ್ನು ಪ್ರತಿಷ್ಠಿಸಿರುವನು. ಆ ರಾಕ್ಷಸಚಕ್ರವರ್ತಿಯು ಶತ್ರುವನಿತೆಯರ ಕಣ್ಣೀರಿನ ಧಾರೆಯನ್ನು ತಡೆಯಿಲ್ಲದೆ ಸುರಿಸುವ ತನ್ನ ದುಸ್ತರವಾದ ಖಡ್ಗಧಾರೆಯಿಂದ ಈ ಅಗ್ನಿಯ ತೇಜಃಪ್ರಭಾವವನ್ನು ಅಡಗಿಸಿರುವನು. ತನ್ನೊಡನೆ ಕದನಕ್ರೀಡೆಗೆ ಬಂದ ಅಸಂಖ್ಯಾತರಾದ ಶತ್ರು ಸುಭಟರನ್ನು ಭುಜಗರ್ವಾಡಂಬರದಿಂದ ಸಂಹರಿಸಿ, ಅವರ ವಿಚಾರವನ್ನು ವಿಜ್ಞಾಪಿಸುವ ಚಿತ್ರಗುಪ್ತರ ಮಾತನ್ನು ಕೇಳುವ ಕಾರ್ಯದಲ್ಲೇ ಯಮನನ್ನು ನೇಮಿಸಿರುವನು. ಆ ರಾಕ್ಷಸರಾಜ ರಾಜನು ಪ್ರಳಯಕಾಲ ಕಾಳ ರಾತ್ರಿಯ ವಚನ ಭಾರವನ್ನು ವಹಿಸುವುದರಲ್ಲಿ ಸಮರ್ಥವಾದ ಕತ್ತಲೆಯಿಂದ ಸ್ವರ್ಗ ಸಭೆಯನ್ನೂ ಕಪ್ಪು ಬಣ್ಣವುಳ್ಳುದನ್ನಾಗಿಸಿ ಭಯಂಕರವಾದ ಹುಬ್ಬಿನ ಗಂಟಿನ ಹೊಗೆಯ

೧. ಸ್ಸ್ವರ್ಭಯ್ಯೆಕದಿಕ್ಪಾಲ (ಕಗ) ಸ್ವಾಹ್ಯೆಕದೀಕ್ಷಾದಕ್ಷ (ಖ)

ಮಹೌರ್ವದಿಂದೀ ವರುಣನ[1]ಸಮುದ್ರಮನೀಂಟಿ ಸಮಸ್ತವಸ್ತುಸಹಿತ ಮಮೃತಸ್ರಾವಿಯೆನಿಸಿದ ಮಹಾರುಣಚ್ಛತ್ರಮನೆಟಿದುಕೊಂಡುಂ ಆ ನಕ್ತಂ ಚರಮೂರ್ಧಾಭಿಷಿಕ್ತನ ಶೇಷಬಲವದನಿಮಿಷಾಮಿಷ ಕಬಳನೋತ್ಥಮಹೋತ್ಖಾತ ಖಡ್ಗಜಿಹ್ವೋಪಬೃಂಹಿತ[2]ಬಂಹಿಮವದ್ಬಾಹು ಪವನಾಶನಾಧೀಶನಿಂದೀ ಪವನನಂ ನಿಶ್ಶೇಷಮೆನೆ ಪೀರ್ದು ತವಿಸಲುದ್ಯೋಗಿಸಿಯುಂ, ಆ ಯಾಮಿನೀಚರಗ್ರಾಮಣಿ ಸಂವರ್ತ ಸಮಯಮಹಾಭೈರವಸ್ಫಾರ ಹೂಂಕಾರಶಂಕಾವತ್ರಿವಿಷ್ಟಪಾತಕಂ ಧನುಷ್ಟಂಕಾರನಾದಾಕರ್ಷಣಮಂತ್ರ ಪ್ರಥಮೋಂಕಾರನಾದದಿಂದೀ ಕುಬೇರನೈಶ್ವರ್ಯಲಕ್ಷ್ಮಿಯನಾಕರ್ಷಣಂಗೆಯ್ದು, ಆ ರಾಕ್ಷಸೇಶ್ವರಂ ಜಗದೇಕವೀರಪರಾಹಂಕಾರಜನಿತಶಶ್ವದೀಶ್ವರಾಭಿದಾನ ಮಾತ್ಸರ್ಯ ನಿರ್ಭರಕುಲಿಶನಿಶ್ಶೇಷಭೀಷಣ ಘೋಷಭಾಷಾಪರಂಪರೆಯಿನೀ ಮಹೇಶನಂ ಭಿಕ್ಷಾವೃತ್ತಿಯೊಳ್ ನಿಲಿಸಲೊಡರಿಸಿಯುಂ, ಇಂತ ವಿಶ್ರಾಂತವಿಕ್ರಾಂತನುಮನಾಹತಬಾಹುಸಾಹಸನುಮಪ್ರತಿಮಪ್ರಭಾವನುಮೆನಿಸಿ

ಸ್ತಂಬೇರಮನೆಂಟುಮನೊ
ತ್ತಂಬದೆ ದಿಗಧಿಪರೊಳೀಟ್ಟು ಕೊಂಡವನದಟಿಂ
ಕಂಬಕ್ಕಂ ತಳಿಗಂ ತೊಡೆ
ಗಂ ಬೀದಿಗಮಳವಡರ್ ಖಳಂ ಶಿಕ್ಷಿಸಿದಂ ೮೧

ರಾಶಿಯ ಕಪ್ಪಿನಿಂದ ನಿರುತಿಯ ಮೈಯ್ಯ ಕಪ್ಪನ್ನು ಎಡರಷ್ಟಾಗಿಸಿರುವನು. ಆ ದೇವಾರಿ ಸಾರ್ವಭೌಮನು ಭೂರ್ಭುವಸ್ಸುವರ್ಲೋಕದಿಕ್ಪಾಲ ಕ್ಷಯಾಗ್ನಿಯಂತೆ ತೀಕ್ಷ್ಣವಾದ ಸಹಿಸಲು ಕಷ್ಟವಾದ ಧಗಧಗತ್ಕಾರಾಟೋಪದ ಜ್ವಾಲೆಗಳ ಸಮೂಹವುಳ್ಳ ಕೋಪಾಗ್ನಿಯೆಂಬ ಔರ್ವಾಗ್ನಿಯಿಂದ ಈ ಸಮುದ್ರವನ್ನು ಕುಡಿದಿರುವನು. ಅಲ್ಲದೆ ವರುಣನ ಸಮಸ್ತ ವಸ್ತುಸಹಿತವಾಗಿ ಅಮೃತವನ್ನು ಸುರಿಸುವುದೆನಿಸಿಕೊಂಡಿರುವ ಮಹಾರುಣವರ್ಣದ ಛತ್ರಿಯನ್ನು ಕಿತ್ತುಕೊಂಡಿರುವನು. ಬಲಿಷ್ಠರಾದ ಸಕಲದೇವತೆಗಳ ಮಾಂಸದ ಕಬಳಕ್ಕೆ ಮೇಲೆತ್ತಿದ್ದ ಕತ್ತಿಯನಾಲಗೆಯಿಂದ ಹೆಚ್ಚಿದ, ದಪ್ಪವೂ ಉದ್ದವೂ ಆದ ಅವನ ತೋಳೆಂಬ ವಾಯುಭಕ್ಷಕಸರ್ಪನಿಂದ ಈ ವಾಯುವನ್ನು ನಿಶ್ಶೇಷವಾಗಿ ಹೀರಿಸಿ, ಮುಗಿಪಲು ಉದ್ಯೋಗಿಸಿರುವನು. "ಆ ನಿಶಾಚರಾಗ್ರಣಿಯು ಪ್ರಳಯಕಾಲದ ಮಹಾ ಭೈರವನ ಭಯಂಕರವೂ ದೀರ್ಘವೂ ಆದ ಹೂಂಕಾರವೆಂಬ ಶಂಕೆಯನ್ನುಂಟು ಮಾಡುತ್ತ ದೇವತೆಗಳಿಗೂ ಆತಂಕಕಾರಿಯಾದ ಧನುಷ್ಟಂಕಾರನಾದವೆಂಬ ಆಕರ್ಷಣ ಮಂತ್ರಕ್ಕೆ ಆದಿಯಾದ ಓಂಕಾರನಾದದಿಂದ ಈ ಕುಬೇರನ ಐಶ್ವರ್ಯಲಕ್ಷ್ಮಿಯನ್ನು ಆಕರ್ಷಣೆ ಮಾಡಿರುವನು. ಆ ರಾಕ್ಷಸೇಶ್ವರನು ತಾನು ಜಗದೇಕವೀರನೆಂಬ ಪರಮಾಹಂಕಾರದಿಂದ ಶಿವನಿಗೆ ಇರುವ ಈಶ್ವರನೆಂಬ ಹೆಸರಿನ ಮಾತ್ಸರ್ಯದಿಂದ ಪೂರ್ಣನಾಗಿ ಸಿಡಿಲಿನಂತೆ ಭಯಂಕರವಾದ ಘೋಷಣೆಯಿಂದ ಮಹೇಶನನ್ನು ಭಿಕ್ಷಾವೃತ್ತಿಯಲ್ಲಿ ನಿಲ್ಲಿಸಲು ಪ್ರಯತ್ನಿಸಿರುವನು. ಹೀಗೆ ಅವನು ಅವಿಶ್ರಾಂತಪರಾಕ್ರಮನು, ಏಟುತಿನ್ನದ ಬಾಹುಸಾಹಸ ವುಳ್ಳವನು, ಅನುಪಮ ಪ್ರಭಾವಶಾಲಿ ಎನಿಸಿಕೊಂಡಿರುವನು. ೮೧. "ಆ ನೀಚನು ಅಷ್ಟದಿಕ್ಪಾಲಕರಿಂದ ದಿಗ್ಗಜಗಳೆಂಟನ್ನೂ ಬಲಾತ್ಕಾರದಿಂದ ಕಿತ್ತುಕೊಂಡು, ಅವನು ಕಂಭದಲ್ಲಿ ಕಟ್ಟಿಸಿಯೂ ಬೇಲಿಯಂತೆ ನಿಲ್ಲಿಸಿಯೂ ತೊಡೆಗೆ ಸರಪಳಿಯನ್ನು ಬಿಗಿದೂ ಬೀದಿಯ

---

೧. ಸಮಂತಮೀಂಟಿ (ಖ) ೨. ಮಹಿಮವದ್ಬಾಹು (ಖ)

ಸ್ತ್ರೀರತ್ನಶೂನ್ಯಮಮರಾ
ಗಾರಮೆನಲ್ ಸಿದ್ಧಸಾಧ್ಯವಿದ್ಯಾಧರಯ
ಕ್ಷೋರಗಸುರಕನ್ಯೆಯರುಮ
ನೀರೆಣ್ಣಾಸಿರ್ವರಂ ನಿಶಾಟಂ ತಂದಂ ೮೨

ಇದು ರುದ್ರಾದ್ರಿಗೆ ಮಿಗಿಲೆನಿ
ಸಿದ ರತ್ನಾದ್ರಿಯೆನೆ ಕಿಟ್ಟು ತಂದದಱ ಗುಹಾ
ಸದನಸಹಸ್ರಂಗಳೊಳಿರಿ
ಸಿದನಾ ಷೋಡಶಸಹಸ್ರ ಸುರಕನ್ಯೆಯರಂ ೮೩

ವ|| ಅಂತುಮಲ್ಲದೆ

ಬಳವದ್ಭುಜಬಲದಿಂದಿ
ರ್ಕುಳಿಗೊಂಡಂ ನರಕನದಿತಿದೇವಿಯ ಮಣಿಕುಂ
ಡಳಮಂ ದ್ಯುತಿಜಿತರವಿಮಂ
ಡಳಮಂ ನಿಜಕೀರ್ತಿಮಂಡಿತಾಖಂಡಳಮಂ ೮೪

ವ|| ಆ ನರಕಪುರಂ ಪ್ರಾಗ್ಜ್ಯೋತಿಷಪುರಮೆಂಬುದಂಬುದಮಾರ್ಗಚುಂಬಿತ ಪ್ರಾಕಾರ ಧ್ವಜತೋರಣಸಮಾಜವಿರಾಜಿತಂ, ಅಂತಾ ಪುರಂ ಮೇರುನಗಕ್ಕನತಿದೂರದೊಳಿರ್ಪುದು. ಅದಱ ಪೊಱವೊಟಲಂ ಬಳಸಿ [೧]ಯೋಜನಪ್ರಮಾಣದಗಲದಿಂ ಸಪ್ತಮವಾತಸ್ಕಂಧಪರ್ಯಂತಂ ಮೇಲೆ ಚರಿಯಿಸುವ ಖಚರಕಿನ್ನರವಿದ್ಯಾಧರರಂ ಕಡಿಖಂಡಮಾಗೆ ಕತ್ತರಿಸಿ ಕೊಲ್ವ ಮೌರವಪಾಶಮಿರ್ಪುದು. ಅಲ್ಲಿಂದೊಳಗೆ ಚತುರ್ಗೋಪುರಪ್ರದೇಶದೊಳ್ ಬೇಱವೇಱ ಚತುರಕ್ಷೌಹಿಣೀಬಲಂಬೆರಸು ಮುರ ಹಯಗ್ರೀವ ಪಂಚಜನ ನಿಶುಂಭರೆಂಬ ನಾಲ್ವರ್ ದನುಜನಾಯಕರಿರ್ಪರ್, ಅದರ್ಕೆ ತಕ್ಕುದಂ ನೆಗಟ್ದು

ಮೆರವಣಿಗೆಗೆ ಉಪಯೋಗಿಸಿಯೂ ದಂಡಿಸಿದನು. ೮೨. ದೇವಲೋಕವು ಸ್ತ್ರೀರತ್ನವಿಲ್ಲದುದು ಎನ್ನುವಂತೆ ಹದಿನಾರುಸಾವಿರ ಸಿದ್ಧಸಾಧ್ಯ ವಿದ್ಯಾಧರ ಯಕ್ಷೋರಗ ಸುರಕನ್ಯೆಯರನ್ನು ಆ ರಾಕ್ಷಸನು ತಂದಿರುವನು. ೮೩. "ಇದು ಕೈಲಾಸಪರ್ವತಕ್ಕೂ ಮೇಲಾದುದು ಎನಿಸಿಕೊಂಡಿರುವ ರತ್ನಾದ್ರಿಯನ್ನೇ ಕಿತ್ತುತಂದು ಅದರ ಸಾವಿರಾರು ಗುಹಾಗೃಹಗಳಲ್ಲಿ ಆ ಹದಿನಾರುಸಾವಿರ ಸುರಕನ್ಯೆಯರನ್ನು ಇರಿಸಿರುವನು. ವ|| ಅದೂ ಅಲ್ಲದೆ ೮೪. ತನ್ನ ಕಾಂತಿಯಿಂದ ಸೂರ್ಯಮಂಡಲವನ್ನೂ ಜಯಿಸಿ, ತನ್ನ ಕೀರ್ತಿಯಿಂದ ದಿಙ್ಮಂಡಲವನ್ನು ಅಲಂಕರಿಸಿದ ಅದಿತಿದೇವಿಯ ಮಣಿಕುಂಡಲವನ್ನು ನರಕಾಸುರನು ವಶಪಡಿಸಿಕೊಂಡಿರುವನು. ವ|| ಆ ನರಕನ ರಾಜಧಾನಿಯಾದ ಪ್ರಾಗ್ಜ್ಯೋತಿಷ ಪುರವೆಂಬುದು ಮೇಘಮಾರ್ಗವನ್ನು ಚುಂಬಿಸುವ ಪ್ರಾಕಾರಧ್ವಜತೋರಣಸಮೂಹದಿಂದ ವಿರಾಜಿಸುವುದು. ಮತ್ತೂ ಆ ಪುರವು ಮೇರುಗಿರಿಗೆ ಸಮೀಪದಲ್ಲಿರುವುದು. ಆ ಪುರದ ಹೊರಭಾಗದ ಸುತ್ತಲೂ ಯೋಜನದಳತೆಯಗಲದಿಂದ ಸಪ್ತಮವಾತಸ್ಕಂಧಪರ್ಯಂತ

೧. ಯೋಜನಪರಿಪ್ರಮಾಣದಗಲದಿಂ (ಕಗ)

ಜಯವಧು ಕೂಡೆ ಕೈನಿಜೆದು ನಾರದನಾಡೆ ಸುರಾಳಿ ನೋಡೆ ನಿ
ನ್ನಯ ಕರಚಾಪದಿಂ ಕಱೆವ ಬಾಣಕಳಾಪದಿನಾಂತ ಕೋಪದಿಂ
ಭಯದಮೆನಲ್ಕೆ ಧಾತ್ರಿ ಪೊಗಟಲ್ಕೆ ಜಸಂ ನಿಮಿರಲ್ಕೆ ಕೊಲ್ ವಿರೋ
ಧಿಯನಪರಾಧಿಯಂ ಕುಟಿಲಯೋಧಿಯನಾಹವದೊಳ್ ಜನಾರ್ದನಾ ೮೫

ಸುರಪನ ಲೀಲೆಯಂ ಶಿಖಿಯ ತೇಜಮನಂತಕನಾಜ್ಞೆಯಂ ಕ್ಷಪಾ
ಚರನ ಪಟುತ್ವಮಂ ವರುಣನುತ್ಸವಮಂ ಪವಮಾನನೇಱ್ಗೆಯಂ
ಹರಸಖನುನ್ನತಿಕ್ಕೆಯನುಮೇಶನ ಮೈಮೆಯನೊಲ್ದು ನೀಂ ಸಮು
ದ್ಧರಿಪುದು ದೇವ ತಂದದಿತಿದೇವಿಯ ಕುಂಡಲಮಂ [1]ಜನಾರ್ದನಾ ೮೬

ವ॥ ಎಂದು [2]ವಾಚಸ್ಪತಿ ವಾಕ್ಪರಿಣತಿಯಿಂದುದಧಿ ಗಂಭೀರನಾದದಿಂ ಬಿನ್ನವಿಸೆ ನರಕಾಟೋಪಮಂ ಕೇಳ್ದು ಸಕ್ರೋಧಹೃದಯನಾಗಿ

ಹೃದಯದೊಳಂಕುರಿಸಿ ಮುಖಾ
ಗ್ರದಿಂದೆ ಕುಡಿವರಿವ ಕೋಪವಿಷಲತೆಯೆ ತಳಿ
ರ್ತುದು ಪೂತುದೆನಲ್ ತನ್ನಧ
ರದಂತದೀಧಿತಿಗಳೆಸೆಯೆ ಕೃಷ್ಣಂ ನುಡಿದಂ ೮೭

ಮೇಲೆ ಚರಿಸುವ ಖೇಚರ ಕಿನ್ನರ ವಿದ್ಯಾಧರರನ್ನು ಕಡಿಖಂಡವಾಗುವಂತೆ ಕತ್ತರಿಸಿ ಕೊಲ್ಲುವ ಮೌರವಪಾಶವಿರುವುದು. ಅಲ್ಲಿಂದ ಒಳಗೆ ನಾಲ್ಕು ಹೆಬ್ಬಾಗಿಲುಗಳಲ್ಲಿ ಬೇರೆಬೇರೆ ನಾಲ್ಕು ಅಕ್ಷೌಹಿಣೀ ಸೇನೆಯೊಡನೆ ಮುರ, ಹಯಗ್ರೀವ, ಪಂಚಜನ, ನಿಶುಂಭರೆಂಬ ನಾಲ್ಕುಜನ ರಾಕ್ಷಸನಾಯಕರು ಇರುವರು. ಅದಕ್ಕೆ ತಕ್ಕುದನ್ನು ಮಾಡು. ೮೫. "ಜನಾರ್ದನಾ! ಜಯಲಕ್ಷ್ಮಿ ನಿನ್ನಲ್ಲಿ ಕೂಡುವಂತೆ ನಾರದನು ಕೈಚಪ್ಪಾಳೆ ತಟ್ಟಿ, ಆಡುತ್ತ ದೇವತೆಗಳು ನೋಡುತ್ತ ಇರಲು ನಿನ್ನ ಕೈಯ ಬಿಲ್ಲಿನಿಂದ ಸುರಿಯುವ ಬಾಣ ಸಮೂಹದಿಂದಲೂ ನಿನ್ನ ಕೋಪದಿಂದಲೂ ಭೂಮಿಯೇ ಭಯಂಕರವೆನ್ನುವಂತೆಯೂ ನಿನ್ನ ಕೀರ್ತಿಯು ಹರಡುವಂತೆಯೂ, ವಿರೋಧಿಯೂ ಅಪರಾಧಿಯೂ ಕುಟಿಲಯುದ್ಧ ಮಾಡುವವನೂ ಆದ ಆ ನರಕನನ್ನು ಯುದ್ಧದಲ್ಲಿ ಕೊಲ್ಲು. ೮೬. "ದೇವ, ಜನಾರ್ದನಾ! ನೀನು ಅದಿತಿದೇವಿಯ ಕರ್ಣಕುಂಡಲವನ್ನು ತಂದುಕೊಟ್ಟು, ಇಂದ್ರನ ಲೀಲೆಯನ್ನೂ ಅಗ್ನಿಯ ತೇಜಸ್ಸನ್ನೂ ಯಮನ ಆಜ್ಞೆಯನ್ನೂ ನಿಋತಿಯ ಪಟುತ್ವವನ್ನೂ ವರುಣನ ಸಂತೋಷವನ್ನೂ ವಾಯುವಿನ ಏಳಿಗೆಯನ್ನೂ ಕುಬೇರನ ಉನ್ನತಿಯನ್ನೂ ಉಮೇಶನ ಮಹಿಮೆಯನ್ನೂ ಒಲಿದು ಸಮುದ್ಧರಿಸಬೇಕು" ವ॥ ಎಂದು ವಾಚಸ್ಪತಿಯು ವಾಕ್ಪಾಂಡಿತ್ಯದಿಂದ ಸಮುದ್ರದ ಗಂಭೀರಧ್ವನಿಯಿಂದ ವಿಜ್ಞಾಪಿಸಿದನು. ನರಕನ ಆಟೋಪವನ್ನು ಕೇಳಿ ಸಕ್ರೋಧಹೃದಯನಾದ ೮೭. ಕೃಷ್ಣನು, ಹೃದಯದಲ್ಲಿ ಮೊಳೆತು, ಬಾಯ ತುದಿಯಿಂದ ಕುಡಿವರಿದು, ಕೋಪ ವಿಷಲತೆಯೇ ಚಿಗುರಿತು, ಹೂಬಿಟ್ಟಿತು ಎನ್ನುವಂತೆ ಕೆಂಪುತುಟಿಯ ಮತ್ತು ಹಲ್ಲುಗಳ ಕಾಂತಿಯು ಹೊಳೆಯುತ್ತಿರಲು ಹೇಳಿದನು.

---

೧. ಗದಾಧರಾ (ಕಗ) ೨. ವಾಚಸ್ಪತಿತಟತ್ಪತಿಯಂತೆ (ಕಗ)

ಸಮರಪ್ರಕ್ಷೋಭದಿಂ ಭೂವನಿತೆಗವನ ರಕ್ತಾಂಬುವಿಂ ಕುಂಕುಮಾಲೇ
ಪಮನಿತ್ತಾಶಾಲತಾಸಂತತಿಗವನ ಮಹಾಮಾಂಸದಿಂ ಪಲ್ಲವವ್ರಾ
ತಮನಿತ್ತಾದಿತ್ಯಬಿಂಬಕ್ಕವನ ತಲೆಯಿನುತ್ಫುಲ್ಲಶೋಣಾಂಬುಜಾತಾ
ರ್ಘ್ಯಮನಿತ್ತಾನಿತ್ತಪೆಂ ಕುಂಡಲಮನದಿತಿಗಿನ್ನಿಂತಿದರ್ಕೇನೊ ಗಾನಂ ೮೮

ವ॥ ಎಂದಭಯಮಂ ಕೊಟ್ಟು ದಿವಿಜರಾಜನಂ ಯಥಾಯೋಗ್ಯದಾನಸನ್ಮಾನದಿಂ ಬೀಳ್ಕೊಳಿಸಿ ಕಳಿಪಿ

ಅನಿಮಿಷರಭಿಮತಮಂ ಮಾ
ಡ್ಪ ನೆವದೆ ಷೋಡಶಸಹಸ್ರ ಸುರಕನ್ಯೆಯರಂ
ದನುಜಪುರಸ್ಥೆಯರಂ ಮದು
ವೆ ನೆರೆದಪೆಂ ನರಕವಧಮಿದಭಿಮತಮೆನಗಂ ೮೯

ವ॥ ಇಂತು ಪರಹಿತದೊಳಾತ್ಮಹಿತಮುಂ ದೊರೆಕೊಳ್ವ ಕಾರ್ಯದೊಳ್ ತಡಮೇವುದೀಗಳ್ ನಡೆವೆನೆಂದರವಿಂದಲೋಚನನಾಲೋಚನಂಗೆಯ್ದು ವಿಜಯಗಮನೋದ್ಯುಕ್ತನಾಗಿ ನಾಗಾರಿಯಂ ಸ್ಮರಿಯಿಸೆ

ಪೃಥಿವೀಚಕ್ರಂ ಪ್ರಕಂಪಾಕುಳಿತಮುದಧಿ ಸೀಮಾತಿಮಾತ್ರಂ ಘನಾಢ್ವಂ
ಮಥಿತಾಂಭೋವಾಹಮಪ್ಪಂತೊದವೆ ಬಹುಳಪಕ್ಷಾನಿಳಂ ಕೂಡೆ ಬಂದಂ
ಪ್ರಥಿತಾವಷ್ಟಂಭದಿಂ ರೋಹಣಶಿಖರಿಸಮಚ್ಛಾಯನಸ್ತಾವಿಧೇಯಂ
ಪೃಥುಕಾಯಂ ದುಷ್ಪ್ರಮೇಯಂ ಸಕಲಖಗಕುಲಜ್ಯಾಯನಾ ವೈನತೇಯಂ ೯೦

ವ॥ ಅಂತು ಬಂದು ದೇವಕೀನಂದನಂಗೆ ವಿನತಾನಂದನಂ ಸಾಷ್ಟಾಂಗಪ್ರಣತನಾಗಿ ಕೈಗಳಂ ಮುಗಿದು

೮೮. "ಯುದ್ಧದ ಉಬ್ಬರದಿಂದ ಭೂವನಿತೆಗೆ ಅವನ ರಕ್ತಜಲದಿಂದ ಕುಂಕುಮಾಲೇಪವನ್ನು ಮಾಡಿ ದಿಕ್ಕುಗಳೆಂಬ ಬಳ್ಳಿಗಳಿಗೆ ಅವನ ಮಾಂಸದಿಂದ ಚಿಗುರುಗಳನ್ನುಂಟುಮಾಡಿ, ಅವನ ತಲೆಯೆಂಬ ಕೆಂದಾವರೆಹೂವಿಂದ ಸೂರ್ಯಮಂಡಲಕ್ಕೆ ಪೂಜೆಮಾಡಿ ಅದಿತಿದೇವಿಗೆ ಆಕೆಯ ಕುಂಡಲವನ್ನು ತಂದುಕೊಡುವೆನು. ಇದಕ್ಕೆ ಏನೂ ಕಷ್ಟವಿಲ್ಲ". ವ॥ ಎಂದು ಅಭಯವನ್ನು ಕೊಟ್ಟು ಇಂದ್ರನನ್ನು ಯಥಾಯೋಗ್ಯವಾದ ದಾನ ಸನ್ಮಾನಗಳಿಂದ ಸತ್ಕರಿಸಿ ಕಳುಹಿಸಿದನು. ೮೯. ದೇವತೆಗಳ ಅಭಿಮತವನ್ನು ಮಾಡುವ ನೆವದಲ್ಲಿ ನರಕನ ಪುರದಲ್ಲಿರುವ ಹದಿನಾರು ಸಾವಿರ ಕನ್ಯೆಯರನ್ನು ಮದುವೆ ಮಾಡಿಕೊಳ್ಳುವೆನು. ಈ ನರಕವಧೆಯು ನನಗೂ ಅಭಿಮತವಾದುದು. ವ॥ ಹೀಗೆ ಪರಹಿತದಲ್ಲಿ ಆತ್ಮಹಿತವೂ ದೊರೆಯುವ ಕಾರ್ಯದಲ್ಲಿ ತಡವೇಕೆ! ಈಗಲೇ ನಡೆಯುವೆನೆಂದು ಆ ಕಮಲನೇತ್ರನು ಆಲೋಚನೆ ಮಾಡಿ, ವಿಜಯಗಮನೋದ್ಯುಕ್ತನಾಗಿ ಗರುಡನನ್ನು ಸ್ಮರಿಸಿದನು. ೯೦. ರೋಹಣಾದ್ರಿವರ್ಣನೂ, ಅವಿಧೇಯನಾಶಕನೂ, ಸ್ಥೂಲದೇಹನೂ, ದುಷ್ಪ್ರಮೇಯನೂ, ಸಕಲ ಪಕ್ಷಿಕುಲಾಧಿಪನೂ ಆದ ಆ ಗರುಡನು, ಭೂಮಂಡಲವು ಹೆಚ್ಚು ನಡುಕದಿಂದ ಪೀಡಿತವೂ ಸಮುದ್ರವು ತನ್ನ ದಡವನ್ನು ಮೀರಿದುದೂ, ಆಕಾಶವು ತಡೆದ ಮೋಡಗಳುಳ್ಳುದೂ ಆಗುವಂತೆ ವಿಸ್ತಾರವಾದ ರೆಕ್ಕೆಗಳ ಗಾಳಿಯು ಬೀಸುತ್ತಿರುವಲ್ಲಿ, ಪ್ರಸಿದ್ಧವಾದ ಗರ್ವಾಡಂಬರಗಳಿಂದ ಬಂದನು. ವ॥ ಹಾಗೆ ಬಂದ ಗರುಡನು ಕೃಷ್ಣನಿಗೆ

ಆರ ಶರೀರಸರ್ಪಗೃಹಮಂ ಪುಗಲಿರ್ದುದು ಶಾರ್ಙ್ಗಮುಕ್ತಬಾ
ಣೋರಗವಾರಸೃಗ್ಜಲಧಿಯೊಳ್ ನಲಿದಪ್ಪುದು ಚಕ್ರನಕ್ರಮಿಂ
ದಾರಡಗಿಂ ತಳಿರ್ತಪುದು ನಂದಕವಲ್ಲರಿ ಫುಲ್ಲನಾಭ ಪೇ
ಳಾರೊಡನಾಯ್ತು ವೀರಭಟವಿಗ್ರಹಕಂಪನಕಾರಿ ವಿಗ್ರಹಂ ೯೧

ವ॥ [1]ಎನೆ ವನಜನಾಭಂ ಗಮನಾಭಿಪ್ರಾಯಮಂ ವೈನತೇಯಂಗೆ ಬೆಸಸಿ

ತಳರ್ವನ್ನಂ [2]ರಿಪುಪಕ್ಷದಿಂ ಸಿರಿ ವಿಪಕ್ಷೋಚ್ಚಂಡದೋರ್ದಂಡದಿಂ
ತಳರ್ವನ್ನಂ ಜಯಲಕ್ಷ್ಮಿ ಶಾತ್ರವಕಳತ್ರಶ್ರೋತ್ರಯುಗ್ಮಂಗಳಿಂ
ತಳರ್ವನ್ನಂ ಶ್ರುತಿಮಂಡನಂ ರಿಪುಚಮೂಸಂಹಾರದಿಂ ಭೂಭರಂ
ತಳರ್ವನ್ನಂ ತಳರ್ದಂ ವಿಳಾಸದೆ ಸುಪರ್ಣೀನಂದನಸ್ಯಂದನಂ ೯೨

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯ ಮಹಾಪ್ರಬಂಧದೊಳ್ ಸತ್ಯಭಾಮಾವಿಪ್ರಲಂಭ
ತದೀಯ ವಿವಾಹಾಷ್ಟೋತ್ತರಶತಸತೀಸ್ವೀಕರಣ
ನಾಕಜೇಂದ್ರಾಗಮನ ನರಕಾಡಂಬರವರ್ಣನಂ
ಏಕಾದಶಾಶ್ವಾಸಂ

ಸಾಷ್ಟಾಂಗಪ್ರಣಾಮ ಮಾಡಿ, ಕೈಮುಗಿದನು. ೯೧. "ಪದ್ಮನಾಭಾ! ನಿನ್ನ ಬಿಲ್ಲಿನಿಂದ ಹೊರಟ ಬಾಣವೆಂಬ ಸರ್ಪವು ಯಾರ ಶರೀರವೆಂಬ (೧ ಪಾತಾಳವನ್ನು ೨ ಹುತ್ತವನ್ನು) ಹೊಗಬೇಕಾಗಿದೆ? ನಿನ್ನ ಚಕ್ರವೆಂಬ ಮೊಸಳೆಯು ಯಾರ ರಕ್ತಸಮುದ್ರದಲ್ಲಿ ನಲಿಯಬೇಕಾಗಿದೆ? ಇಂದು, ಯಾರ ಮಾಂಸದಿಂದ ನಂದಕ(ಕತ್ತಿ)ವೆಂಬ ಬಳ್ಳಿಯು ಚಿಗುರುವುದು? ಯಾರೊಡನೆ ವೀರಭಟರ ದೇಹವನ್ನು ನಡುಗಿಸುವ ಯುದ್ಧವು ಒದಗಿತು!" ವ॥ ಎನ್ನಲು ಪದ್ಮನಾಭನು, ತನ್ನ ಗಮನಾಭಿಪ್ರಾಯವನ್ನು ಗರುಡನಿಗೆ ಹೇಳಿದನು. ೯೨. ಗರುಡರಥನಾದ ಕೃಷ್ಣನು ಶತ್ರುಪಕ್ಷದಿಂದ ಸಿರಿಯು ಚಲಿಸುವಂತೆಯೂ, ಶತ್ರುಪಕ್ಷದ ಬಹು ಕ್ರೂರವಾದ ಬಾಹುದಂಡದಿಂದ ಜಯಲಕ್ಷ್ಮಿಯು ಬಿಟ್ಟು ಹೊರಡುವಂತೆಯೂ, ಶತ್ರುವನಿತೆಯರ ಕಿವಿಗಳೆರಡರಿಂದಲೂ ಓಲೆಯು ಕಳೆದು ಹೋಗುವಂತೆಯೂ, ಶತ್ರುಸೇನೆಯ ಸಂಹಾರದಿಂದ ಭೂಮಿಯ ಭಾರವು ತಪ್ಪುವಂತೆಯೂ (ಆಗಲು ಯುದ್ಧಕ್ಕೆ) ಹೊರಟನು. ಇದು ಸಮಸ್ತ ಕಮಲಭವಾಂಡ... ಸುಕವೀಂದ್ರ ರುದ್ರಪ್ರಣೀತವಾದ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಸತ್ಯಭಾಮೆಯ ವಿಪ್ರಲಂಭ ಅವಳ ವಿವಾಹ ನೂರೆಂಟು ಜನ ಸತಿಯರ ಸ್ವೀಕರಣ ಸ್ವರ್ಗೇಂದ್ರಾಗಮನ, ನರಕಾಡಂಬರ ವರ್ಣನೆಗಳ ಹನ್ನೊಂದನೆಯ ಆಶ್ವಾಸ.

---

೧. ಎಂದ ವೈನತೇಯಂಗನೇಕ ಸಕಲಾಭಿಪ್ರಾಯಮಂ ಬೆಸಸಿ (ಕಗ)

೨. ರಿಪುವಕ್ಷದಿಂದಸು (ಖ) ರಿಪುವಕ್ಷದಿಂ ಸಿರಿ (ಗ)

# ದ್ವಾದಶಾಶ್ವಾಸಂ

ಶ್ರೀಕರಮೆನಿಸುವ ಚೀನಪ
ತಾಕಾವಳಿತೋರಣಾವಳೀವೃತಪುರಮಂ
ವೈಕುಂಠನೊಸೆದು ನೋಡು
ತ್ತಾಕ್ಕಾಶಕ್ಕೊಗೆದನುರಗಮಥನಾರೂಢಂ ೧

ಪೀತಾಂಬರಕೌಸ್ತುಭರುಚಿ
ಪೀತಾಂಬರವಳಯನಾಗಳೆಸೆದಂ ಫಣಿಜಿ
ತ್ಕೇತನನುತ್ಪಲಕಾಂತಿನಿ
ಕೇತನನಾಲೋಲಮಕರಕುಂಡಲಯುಗಳಂ ೨

ಅತ್ತ ನಿಶಾಚರೇಶ್ವರನ ವಾಮವಿಲೋಚನ ವಾಮಬಾಹುಗಳ್
ಕೆತ್ತಿದವೆತ್ತಿ ಕಟ್ಟ ಮದದಂತಿಯ ಸೋರ್ವ ಮದಂ ಕರೇಣುಗಾ
ದತ್ತು ಹಯಾಳಿ ಕಣ್ಬನಿಯನಿಕ್ಕಿದುವಂದೊರೆಯಿಂದಮುರ್ಚಿ ಬಿ
ದ್ದತ್ತಸಿಧೇನು ಸೂಸಿದುವು ಕೇಸುರಿ ಬೀಸುವ ಚಾಮರಂಗಳಿಂ ೩

ಪುಟ್ಟದುವಲ್ಲಿಗಲ್ಲಿಗೆ [೧]ಶಿಲೀಂಧ್ರಚಯಂ ಕರುಮಾಡದಲ್ಲಿ ಜೇ
ನಿಟ್ಟುದು ಬಳ್ಳು [೨]ಮೂಡಮೊಗದೊಳ್ದುದು ಮಂದಿರದೇವತಾಳಿ ಗೋ
ಳಿಟ್ಟುದು [೩]ನಟ್ಟಿರುಳ್ ನೆಗೆದುದಿಂದ್ರನ ಬಿಲ್ ದಿವಸೋಳ್ಕಸಂಕುಳಂ
ತೊಟ್ಟನೆ ಬಿಟ್ಟುವುಣ್ಮಿದುದು ಕಾವಳ ಕೊಂಡುವು ರಕ್ತವೃಷ್ಟಿಗಳ್ ೪

೧. ಶ್ರೀಕರವಾದ ಚೀನಾಂಬರದ ಧ್ವಜಗಳಿಂದಲೂ ತೋರಣಗಳಿಂದಲೂ ಆವರಿಸಲ್ಪಟ್ಟ ದ್ವಾರಕಾಪುರವನ್ನು ಸಂತೋಷದಿಂದ ನೋಡುತ್ತ ಕೃಷ್ಣನು ಗರುಡಾರೂಢನಾಗಿ ಆಕಾಶಕ್ಕೆ ಏರಿದನು. ೨. ಕನ್ನೈದಿಲೆಯ ಕಾಂತಿಗೆ ನೆಲೆಯೂ, ತೂಗಾಡುತ್ತಿರುವ ಮಕರಕುಂಡಲದ್ವಯಾಲಂಕೃತನೂ ಗರುಡಧ್ವಜನೂ ಆದ ಕೃಷ್ಣನು, ತನ್ನ ಪೀತಾಂಬರ ಕೌಸ್ತುಭರತ್ನಗಳ ಕಾಂತಿಯಿಂದ ಆಕಾಶಮಂಡಲವನ್ನೇ ಹೊಂಬಣ್ಣವುಳ್ಳದಾಗಿಸುತ್ತ ಹೊಳೆಯುತ್ತಿದ್ದನು. ೩. ಅತ್ತ ಕಡೆ ರಾಕ್ಷಸೇಶ್ವರನ ಎಡಗಣ್ಣೂ ಎಡತೋಳೂ ಅದುರಿದುವು. ಗಂಡುಮದ್ದಾನೆಯ ಕೆನ್ನೆಯಲ್ಲಿ ಸೋರಬೇಕಾದ ಮದೋದಕವು ಹೆಣ್ಣಾನೆಗೆ ಸುರಿಯಿತು. ಕುದುರೆಗಳು ಕಣ್ಣೀರನ್ನು ಹರಿಸಿದುವು. ಕತ್ತಿಯು ಒರೆಯಿಂದ ಕಳಚಿ ಬಿದ್ದಿತು. ಬೀಸುವ ಚಾಮರಗಳಿಂದ ಕೆಂಪಾದ ಉರಿ ಚೆಲ್ಲಿತು. ೪. ಉಪ್ಪರಿಗೆಗಳಲ್ಲಿ ಅಲ್ಲಲ್ಲಿ ನಾಯಿಕೊಡೆಗಳು ಹುಟ್ಟಿದುವು. ಜೇನು ಕಟ್ಟಿತು, ಪೂರ್ವ ದಿಕ್ಕಿನಲ್ಲಿ ನರಿ ಊಳಿಟ್ಟಿತು. ಮನೆದೇವರುಗಳು ಗೋಳಿಟ್ಟವು. ನಡುರಾತ್ರಿಯಲ್ಲಿ ಕಾಮನ ಬಿಲ್ಲುದಿಸಿತು. ಹಗಲೇ ತಟ್ಟನೆ ಉಲ್ಕಾಪಾತವಾಯಿತು. ಕತ್ತಲೆಯು ಹೆಚ್ಚಾಗಿ ಉಂಟಾಯಿತು. ರಕ್ತದ ಮಳೆ ಸುರಿಯಿತು.

---

೧. ಶಿಕಿಪ್ರಚಯಂ (ಖ) ೨. ಮಾಡಮೊಗದೊಳ್ದುದು (ಕ) ೩. ಪೋದಿರುಳ್ (ಖ)

ವ|| ಅಂತನೇಕ ದುರ್ಣಯಮನಿಮಿಷದ್ವೇಷಿಪುರದೊಳಾಗೆ ಸುಪರ್ಣಕೇತು ಜೀಮೂತ ಪಥದಿಂದತಿವೇಗದಿಂ ಪೋಗೆವೋಗೆ

ನರಸೇನೆಗರಿದು ಲಂಕಾ
ಪುರದ ಬಹಿರ್ಜಲಧಿ ದಾಂಟಲಿಂತಿದು ದೇವಾ
[೧]ಸುರರ್ಗಮರಿದೆನಿಸಿ ನರಕನ
ಪುರಮಂ ಬಳಸಿರ್ದುದೊಂದು ಮೌರವಪಾಶಂ ೫

ವ|| ಆ ಮೌರವಯಂತ್ರಪಾಶಮಂ ಕೇಶಿಸೂದನಂ ಸುದರ್ಶನಚಕ್ರದಿಂ ಛೇದಿಸಿ ನಡೆಯೆ ನಡೆಯೆ

ಇದಸಂಖ್ಯಾತಮಿದಪ್ರತರ್ಕ್ಯಮಿದಗುರ್ವಿ ಸೈನ್ಯಮಂ ವ್ಯೋಮಮೀಂ
ದುದೊ ದಿಕ್ಚಕ್ರವನಾರತಂ ಬೆಸಲೆಯಾಯ್ತೋ ಭೂತಳಂ ಕೂಡೆ ಪೆ
ತ್ತುದೊ ಮುನ್ನಂ ಲಯವೆಯ್ದಿ ಪೋದ ಪಲವುಂ [೨]ಲೋಕಂಗಳಿಂತೀಗ ಪು
ಟ್ಟದುವೋ ಪೇಟೆನಿಸಿರ್ದುದಲ್ಲಿ ಮುರಸೈನ್ಯಂ ಪಶ್ಚಿಮದ್ವಾರದೊಳ್ ೬

ವ|| ಅದಂ ಕಂಡು

ಅಮರಾರಾತಿಬಲಕ್ಕೆ ನೈಶಸುರಚಾಪಂ ತಾನಿದೆಂಬಂತು ವಿ
ಕ್ರಮದಿಂದೇಜಿಸಿದಂ ಮುರಾರಿ ಜನಿತಾರಿ ಸ್ತ್ರೀಮನಸ್ತಾಪಮಂ
ದಮಿತ[೩]ದ್ರೋಹಿ ಬಲಾವಲೇಪಮನುದಗ್ರಾಟೋಪಮಂ ಚಂಡರೂ
ಪಮನಸ್ತಾಮರವೇಷಮಂ [೪]ವಿಜಯವೃಕ್ಷಾವಾಪಮಂ ಚಾಪಮಂ ೭

ವ|| ಹಾಗೆ ನರಕಾಸುರನ ಪುರದಲ್ಲಿ ಅನೇಕ ಅಪಶಕುನಗಳು ಆಗಲು ಗರುಡಧ್ವಜನು ಮೇಘಮಾರ್ಗದಿಂದ ಅತಿವೇಗವಾಗಿ ಹೋಗುತ್ತಿದ್ದನು. ೫. ಲಂಕಾಪುರದ ಹೊರಸಮುದ್ರವು ನರಸೇನೆಗೆ ದಾಟಲಶಕ್ಯವಾದುದು. ಇದು ದೇವತೆಗಳಿಗೂ ರಾಕ್ಷಸರಿಗೂ ಅಸಾಧ್ಯವಾದುದು ಎನ್ನಿಸಿಕೊಂಡ ಮೌರವಪಾಶ (ಹಗ್ಗ)ವೊಂದು ನರಕಾಸುರನ ಪುರವನ್ನು ಸುತ್ತುವರಿದಿದ್ದಿತು. ವ|| ಆ ಮೌರವ ಪಾಶವನ್ನು ಕೃಷ್ಣನು ಸುದರ್ಶನಚಕ್ರದಿಂದ ಕತ್ತರಿಸಿ ನಡೆದನು. ೬. 'ಇದು ಅಸಂಖ್ಯಾತ; ಊಹಿಸಲಾಗದುದು, ಭಯಂಕರ, ಈ ಸೈನ್ಯವನ್ನು ಆಕಾಶವು ಹೆತ್ತಿತೋ, ದಿಙ್ಮಂಡಲವು ಸಂತತವಾಗಿ ಹಡೆಯಿತೋ, ಭೂತಳವು ಕೂಡಲೆ ಹೆತ್ತಿತೋ, ಅಥವಾ ಹಿಂದೆ ನಾಶವಾಗಿ ಹೋದ ಹಲವು ಲೋಕಗಳು ಈಗ ಹೀಗೆ ಹುಟ್ಟಿದವೋ ಹೇಳು.' ಎನ್ನುವಂತೆ ಪುರದ ಪಶ್ಚಿಮದ ಹೆಬ್ಬಾಗಿಲಲ್ಲಿ ಮುರಸೇನೆಯು ಇದ್ದಿತು. ವ|| ಅದನ್ನು ನೋಡಿ, ೭. ಮುರಾರಿ ಕೃಷ್ಣನು ಇದು, ದೇವವೈರಿಸೈನ್ಯಕ್ಕೆ ರಾತ್ರಿಯ ಕಾಮನ ಬಿಲ್ಲು, ಎನ್ನುವಂತೆ ವೈರಿವನಿತೆಯರಿಗೆ ಮನಸ್ತಾಪವನ್ನುಂಟುಮಾಡಿದುದೂ ದ್ರೋಹಿಗಳ ಬಲಗರ್ವವನ್ನು ಹೋಗಲಾಡಿಸಿದುದೂ ಅತ್ಯಾಡಂಬರವುಳ್ಳುದೂ ಕ್ರೂರವೂ

---

೧. ಸುರರ್ಗಮರಿದೆನಿಪ (ಕಖಗ) ೨. ಲೋಕಂಗಳಿಂದಿಂತು (ಮೊಅ) ೩. ದ್ರೋಹ (ಕಖಗ) ೪. ಸಜಯವೃಕ್ಷಾವಾಪಮಂ (ಕ) ಸಜಯಪಕ್ಷಾಟೋಪಮಂ (ಖ) ಸಜವೀರಾಳಾಪಮಂ (ಗ)

ವ|| ಅಂತಧಿಜ್ಯಮಾದ ಕೋದಂಡಮಂ ಸಮಾಸ್ಫುರಿತಂ ಮಾಡೆ

ಕಿವಿಯೊಳ್ ತೀವಿ ದಿಗೀಶರಾಶಯದೊಳತ್ಯಾನಂದಮಂ ತೀವಿತೀ
ರವಮಿಂ ತೀವುಗುಮಂತಕಾವಸಥಮಂ ದೈತ್ಯಾಳಿ ದೈತ್ಯಾಂಗನಾ
ನಿವಹಂ ತೀವುಗುಮಶ್ರುವಾರಿಯಿನೆನಲ್ ಮೂಲೋಕಮಂ ತೀವಿ ಸಾ
ಱುವವೊಲಾದುದು ಶಾರ್ಙ್ಗಧನ್ವನ ಧನುರ್ಮೌರ್ವೀರವಂ ಬೀರವಂ ೮

ಆ ವಿಪುಲನಾದದೊಡನೆ ರ
ಣಾವೇಶದಿನೊಗೆದ ಮುರಚತುರ್ವಲ ತುಮುಲೋ
ಚ್ಚಾವಚನಾದದಿನಾದಂ
ತೀವಿದ ಕುಪ್ಪಿಗೆವೊಲಾದುದಬ್ಜಭವಾಂಡಂ ೯

ವ|| ಅನ್ನೆಗಂ

ಸ್ಫುರಿತಮಣಿಕುಂಡಲದ್ಯುತಿ
ಭರಿತಂ ಮಂಡಳಿತಕಾರ್ಮುಕಂ ಮಂಡಲದೊಳ್
ದೊರೆಯೆನೆ ಕಿರಣಾಳಿವೊಲಂ
ಬರಮಂ ತುಂಬಿದುವು ಗೋಪಮಾರ್ತಂಡಶರಂ ೧೦

ಕೈಟಭರಿಪು ರಿಪುಸೇನೆಯ
ನಾಟಂದಿಸುತಿರೆ ಶತಂ ಸಹಸ್ರಂ ಲಕ್ಷಂ
ಕೋಟಿ ಶತಕೋಟಿ ನಾನಾ
ಕೋಟಿಯೆನಲ್ ತುಱುಗಿ ಪಾಯ್ದುವಂದಂಬರದೊಳ್ ೧೧

ದೇವತೆಗಳ ನಡುಕವನ್ನು ಹೋಗಲಾಡಿಸಿದುದೂ ವಿಜಯವೃಕ್ಷದ ಪಾತಿಯೂ ಆದ ತನ್ನ ಬಿಲ್ಲನ್ನು ಪರಾಕ್ರಮದಿಂದ ಏರಿಸಿದನು. ವ|| ಹಾಗೆ ಹೆದೆಯೇರಿಸಿದ ಬಿಲ್ಲನ್ನು ಸರಿಯಾಗಿ ಮಿಡಿದು ಟಂಕಾರಮಾಡಿದನು. ೮. ಈ ಧ್ವನಿ ದಿಗಧಿಪತಿಗಳ ಕಿವಿಯಲ್ಲಿ ತುಂಬಿ ಅವರ ಹೃದಯದಲ್ಲಿ ಅತ್ಯಾನಂದವನ್ನು ತುಂಬಿತು. ಇನ್ನು ರಾಕ್ಷಸಸಮೂಹವು ಯಮಾಲಯವನ್ನು ತುಂಬುವುದು; ದೈತ್ಯಾಂಗನೆಯರ ಸಮೂಹವು ಕಣ್ಣೀರನ್ನು ತುಂಬುವುದು ಎನ್ನುವಂತೆ ಶಾರ್ಙ್ಗಪಾಣಿ ಕೃಷ್ಣನ ಬಿಲ್ಲಿನ ಟಂಕಾರವು ಮೂರುಲೋಕವನ್ನೂ ತುಂಬಿ, ಅವನ ಪರಾಕ್ರಮವನ್ನು ಸಾರುವಂತಾಯಿತು. ೯. ಆ ಬಹುಧ್ವನಿಯೊಡನೆ ರಣಾವೇಶದಿಂದ ಉಂಟಾದ ಮುರನ ಚತುರ್ಬಲದ, ವರ್ಣಿಸಲಸದಳವಾದ ಕಲಕಲಶಬ್ದವೂ ಸೇರಿದುದರಿಂದ ಬ್ರಹ್ಮಾಂಡವು ಧ್ವನಿಪೂರ್ಣವಾದ ಭರಣಿಯಂತಾಯಿತು. ವ|| ಅಷ್ಟರಲ್ಲಿ ೧೦. ಹೊಳೆಯುವ ರತ್ನಕುಂಡಲದ ಕಾಂತಿಯಿಂದ ತುಂಬಿದ ಮಂಡಲಾಕಾರವಾಗಿ ಬಾಗಿದ ಕೃಷ್ಣನ ಬಿಲ್ಲು ಸೂರ್ಯಮಂಡಲದಂತಿದ್ದಿತು. ಆ ಗೋಪಸೂರ್ಯನ ಬಾಣಗಳು ಸೂರ್ಯಕಿರಣಗಳಂತೆ ಅಂಬರವನ್ನು ತುಂಬಿದುವು. ೧೧. ಕೈಟಭಾರಿ ಕೃಷ್ಣನು ಶತ್ರು ಸೇನೆಯನ್ನು ಪ್ರತಿಭಟಿಸಿ ಬಾಣಗಳಿಂದ ಹೊಡೆಯುತ್ತಿರಲು ಬಾಣಗಳು ಆಕಾಶದಲ್ಲಿ ನೂರು ಸಾವಿರ ಲಕ್ಷ ಕೋಟಿ ನೂರುಕೋಟಿ, ನಾನಾಕೋಟಿಯೆನ್ನುವಂತೆ ಒತ್ತಾಗಿ ನುಗ್ಗಿದವು.

ಶ್ವಸನನುಮರ್ಕಪ್ರಭೆಯುಂ
ನುಸುಳದೆನಲ್ ಪಾಯ್ವ ಕಣೆಯ ಕಣೆಗತ್ತಲೆಯೊಳ್
ಮಿಸುಪ ಕಲಧೌತಪುಂಖ
ಪ್ರಸರಂ ಖದ್ಯೋತತತಿವೊಲಾದುದು ನಭದೊಳ್ ೧೨

ಕೆದಱಿದುದು ಶಿಲೀಮುಖಪಾ
ತದಿಂದೆ [1]ಶೋಣಿತಪರಾಗತತಿ ಪದ್ಮವ್ರಾ
ಹದೊಳೆನೆ ಕೃಷ್ಣಶರಾಘಾ
ತದಿನೊಗೆದುದು ದೈತ್ಯಬಲದೊಳರುಣಜಲೌಘಂ ೧೩

ಕದನಮುಗುರ್ವುವೆತ್ತುದಿಷುಘಾತದಿನಳ್ಕಿದ ಬಳ್ಕಿದುಳ್ಕಿದು
ನ್ಮದಗಜರಾಜಿಯಿಂ ತರದೊಳಟ್ಟಿದತಟ್ಟಿದನುಟ್ಟಿದೊಂದು ತೇ
ರ್ಪುದುವೊದವಿಂ ಕರುಳ್ಪಿಣಿಲೆಳಲ್ವ ಕಳಲ್ವ ಬಳಲ್ವ ವಾಜಿಬೃಂ
ದದಿನಳವುರ್ಕುಸೊರ್ಕಟೆದುರುಳ್ವ ಪೊರಳ್ವ ನರಳ್ವ ವೀರರಿಂ ೧೪

ವ॥ ಆಗಳದ್ಭುತ ಭುಜಾಟೋಪದಿಂ ವಿಶ್ವರೂಪನಿಸುತಿರೆ

ಘೋರಧನುರ್ಲತಾವಳಿ ವನಾವಳಿಯುಂ ಗೆಲೆ ಭೂರಿಗರ್ಜಿತಂ
ನೀರದಗರ್ಜಿತಂಬೊಲೊದವುತ್ತಿರೆ ವರ್ಮಮರೀಚಿ ತಿಗ್ಮರೋ
ಚೀರುಚಿಯಂ ಪರಾಭವಿಸೆ ಕಾರ್ಮುಕನಿರ್ಗತಮಾರ್ಗಣೋತ್ಕರಂ
ಮಾರುತಮಾರ್ಗಮಂ ಪುದಿಯೆ ತಾಗಿದುದಂದಸುಹೃದ್ಧನುರ್ವಲಂ ೧೫

೧೨. ಗಾಳಿಯೂ ಸೂರ್ಯಕಿರಣವೂ ನುಸುಳಲಾರದು ಎನ್ನುವಂತೆ ದಟ್ಟವಾಗಿ ಹಾರುವ ಬಾಣಗಳ ಕತ್ತಲೆಯಲ್ಲಿ, ಆಕಾಶದಲ್ಲಿ ಹೊಳೆಯುವ ಅವುಗಳ ಸುವರ್ಣದ ಗರಿಯ ಸಮೂಹವು ಮಿಂಚುಹುಳುಗಳ ಗುಂಪಿನಂತೆ ಕಾಣಿಸುತ್ತಿದ್ದವು. ೧೩. ಕಮಲಸಮೂಹದಲ್ಲಿ ಶಿಲೀಮುಖ (= ೧ ತುಂಬಿ, ೨ ಬಾಣ)ವು ಎರಗಿದುದರಿಂದ ರಕ್ತವರ್ಣದ ಪರಾಗ ಸಮೂಹವು ಉದುರಿ ಹರಡಿತೆನ್ನುವಂತೆ ಕೃಷ್ಣನ ಬಾಣದ ಹೊಡೆತದಿಂದ ರಾಕ್ಷಸಸೇನೆಯಲ್ಲಿ ರಕ್ತಪ್ರವಾಹವು ಹರಡಿತು. ೧೪. ಆ ಕದನವು, ಬಾಣಗಳ ಹೊಡೆತದಿಂದ ಹೆದರಿ, ಬಾಗಿ, ಉರಿದ, ಮದೋದ್ಧತ ಆನೆಗಳ ಗುಂಪಿನಿಂದಲೂ ಕ್ರಮವಾಗಿ ನಾಶವಾಗಿ ಕರಗಿ ತಗ್ಗಿ ಪುಡಿಯಾದ ತೇರಿನ ಗುಂಪಿನಿಂದಲೂ, ಕರುಳಿನ ಜಡೆಯು ಜೋಲುವ ಜಾರುವ ಬಳಲುವ ಕುದುರೆಗಳ ಸಮೂಹದಿಂದಲೂ, ಸಾಮರ್ಥ್ಯವೂ ಔದ್ಧತ್ಯವೂ ಸೊಕ್ಕೂ ನಾಶವಾಗಿ ಉರುಳಿ ಹೊರಳಿ ನರಳುವ ವೀರರಿಂದಲೂ, ಅದ್ಭುತವೂ ಭಯಂಕರವೂ ಆಗಿದ್ದಿತು. ವ॥ ಆಗ ಅದ್ಭುತ ಭುಜಾಟೋಪದಿಂದ ವಿಶ್ವರೂಪಿ ಕೃಷ್ಣನು ಬಾಣವನ್ನು ಪ್ರಯೋಗಿಸುತ್ತಿದ್ದನು. ೧೫. ಘೋರವಾದ ಬಿಲ್ಲುಗಳೆಂಬ ಬಳ್ಳಿಗಳ ಗುಂಪು ವನಪಙ್ತಿಯನ್ನು ಗೆಲ್ಲುತ್ತಲೂ, ಬಲವಾದ ಗರ್ಜನೆಯು ಗುಡುಗಿನಂತೆ ಹೆಚ್ಚುತ್ತಲೂ, ಕವಚಗಳ ಹೊಳಪು ಸೂರ್ಯಕಿರಣಗಳ ಹೊಳಪನ್ನು ಪರಾಭವಿಸುತ್ತಲೂ ಬಿಲ್ಲುಗಳಿಂದ ಹೊರಟ ಬಾಣ

---

೧. ಸೇನಾಪರಾಗರಜ (ಕಗ)

ವ|| ಆಗಳ್

ಅನಿತುಂ ಭಟೌಘಮೆಚ್ಚಂ
ಬನಂಬಿನಿಂ ತಱಿದು ತದ್ಘಟಾಂಗೋಪಾಂಗಂ
ಪುನರುಕ್ತಂ ಭಿದ್ರಿತಮ
ಪ್ಪಿನಮೆಚ್ಚು ಮುರಾರಿ ತವಿಸಿದಂ ಬಿಲ್ಪಡೆಯಂ ೧೬

ಪಲಗೆಗಳಂ ಪೊಳೆಯಿಸಿ ಕಡಿ
ತಲೆಯಂ ಜಡಿದೆಯ್ದುವಣಿಯ ವೀರರನೆಚ್ಚಂ
ಪಲಗೆಯುಮುರಮುಂ ತೆತ್ತಿಸೆ
ತಲೆಯುಂ ಕಡಿತಲೆಯುಮೊಡನೆ ಪಱಿಯೆ ಮುಕುಂದಂ ೧೭

ಪೊಳೆವುತ್ಖಾತಾಸಿಜಾಳಂಗಳ ಸಕಲುಷಸಾದೀಕ್ಷಣೋದಂಶುಜಾಳಂ
ಗಳ ತಳ್ಪಂ ತಾಳ್ದಿ ಚಂಚಚ್ಚಪಲಶಫರಸಂದೋಹದಿಂದಂ ಪ್ರವಾಳಾ
ವಳಿಯಿಂದಂ ತಳ್ತ ವೀಚೀಚಯಮಿದೆನಿಸಿ ಸೈನ್ಯಾಬ್ಧಿಯಿಂ ಬರ್ಪ ವಾಹಂ
ಗಳನೌರ್ವಜ್ವಾಲೆಯಂತಚ್ಯುತನ ಕಣೆಗಳಟ್ಟಾಡಿಸುತ್ತಿರ್ದುವೆತ್ತಂ ೧೮

ಅವಿಧೇಯಧ್ವಜಿನೀನಿಶಾಟನಿವಹಂ ನಾಗಾಳಿಯಂ ಗಾಳಿಯಂ
ಜವದಿಂ ಗೆಲ್ವಿನಮಾರ್ದು ನೂಂಕಿ ನೆಗೆಯಲ್ ಸೇನಾರಜಂ ನಾರಜಂ
ಕವಿಯಲ್ ಬರ್ಪರಿಸೈನ್ಯದಂತಿಘಟೆಯಂ ಕೋದಂಡದಿಂ ದಂಡದಿಂ
ಜವನಾಂಪಂತೆವೊಲಾಂತು ಸಂಹರಿಸಿದಂ ಕಂಜೋದರಂ ಜೋದರಂ ೧೯

ಸಮೂಹವು ಆಕಾಶವನ್ನು ತುಂಬುತ್ತಲೂ ಇರಲು ಶತ್ರುಗಳ ಬಿಲ್ಲಿನ ಸೇನೆಯು ಕೃಷ್ಣನನ್ನು ತಾಗಿತು. ವ|| ಆಗ ೧೬. ಕೃಷ್ಣನು ಅಷ್ಟು ಜನ ಭಟರ ಗುಂಪೂ ಹೊಡೆದ ಬಾಣವನ್ನು ಬಾಣದಿಂದಲೇ ತರಿದು ಆ ಭಟರ ಅಂಗೋಪಾಂಗಗಳು ಚೂರು ಚೂರಾಗುವಂತೆ ಬಾಣಗಳಿಂದ ಹೊಡೆದು ಬಿಲ್ಲಿನ ಸೈನ್ಯವನ್ನು ನಾಶಪಡಿಸಿದನು. ೧೭. ಕೃಷ್ಣನು, ಗುರಾಣಿಗಳನ್ನು ಹೊಳೆಸುತ್ತ ಕತ್ತಿಯನ್ನು ಝಳಪಿಸುತ್ತ ಮುಂಬೆ ನುಗ್ಗುವ ಸೇನೆಯ ವೀರರನ್ನು ಅವರ ಗುರಾಣಿಯೂ ಎದೆಯೂ ಒಂದಾಗಿ ಸೇರಿಕೊಳ್ಳುವಂತೆಯೂ ಅವರ ತಲೆಯೂ ಕತ್ತಿಯೂ ಒಂದೇ ಸಾರಿ ಕತ್ತರಿಸುವಂತೆಯೂ ಹೊಡೆದನು. ೧೮. ಹೊಳೆಯುವ (ಒರೆಯಿಂದ) ಹಿರಿದ ಕತ್ತಿಗಳ ಕಲ್ಮಷಮನಸ್ಕರಾದ ಕುದುರೆಯ ಸೈನ್ಯದವರ ಕ್ರೂರವಾದ ಕಣ್ಣಿನ ನೋಟದ ಹೊಳಪಿನ ಸಮೂಹದ ಸಂಬಂಧವನ್ನು ಪಡೆದು, ಇದು ಹೊಳೆಯುವ ಚಂಚಲವಾದ ಮೀನುಗಳ ಗುಂಪಿನಿಂದಲೂ ಹವಳಗಳ ಸಾಲಿನಿಂದಲೂ ಕೂಡಿದ ಅಲೆಗಳ ಸಮೂಹವೆನ್ನುವಂತೆ ಸೇನಾಸಮುದ್ರದಿಂದ ಬರುವ ಕುದುರೆಗಳನ್ನು ಕೃಷ್ಣನ ಬಾಣಗಳು ಔರ್ವಜ್ವಾಲೆಯಂತೆ ಎಲ್ಲಕಡೆಯಲ್ಲೂ ನಿಶ್ಶೇಷ ಮಾಡುತ್ತಿದ್ದವು. ೧೯. ಅವಿಧೇಯರಾದ ಶತ್ರುಸೇನೆಯ ರಾಕ್ಷಸರ ಗುಂಪು ಆನೆಗಳ ಸಮೂಹವನ್ನೂ ವೇಗದಿಂದ ಗಾಳಿಯನ್ನೂ ಜಯಿಸುವಂತೆ ಅಬ್ಬರಿಸಿ ಮುಂದೆ ಅಟ್ಟಿ ಸೇನೆಯ ಧೂಳು ಏಳಲು ನಾರಜವು ಮುತ್ತಲು ಬಂದ ಶತ್ರುಸೇನೆಯ ಆನೆಗಳ ಗುಂಪನ್ನೂ ಯೋಧರನ್ನೂ ಪದ್ಮನಾಭನು ಬಿಲ್ಲಿನಿಂದ,

[1]ನಡುತುಂ ಮೊಗಮಂ ಪೇಚಕ
ದೆಡೆಯಿಂದೊಂದೊಂದೆ ನಾರಜಂ ನುಸುಳ ಪಡ
ಲ್ಗೆಡೆದುದಿಭಮಾಲೆ ಜೀವಮು
ಮೊಡಲಿಂ ಬೇಱಿಲ್ಲದಂತದೊರ್ಮೆಯೆ ಧುರದೊಳ್ ೨೦

ಟಂಕೃತಿ ಧನುವಿಂ ಶರದಿಂ
ಭೀಂಕೃತಿ ಚೀತ್ಕೃತಿ ರಥಾಂಗದಿಂ ಸಾರಥಿಯಿಂ
ಹೂಂಕೃತಿ ಹೇಷಿತರುತಿ ಹಯ
ದಿಂ ಕಡುಪೊದಗುವಿನಮೆಯ್ದಿದುವು ರಥನಿವಹಂ ೨೧

ಅತಿರಥ [2]ಸಹಸ್ರಮಿರಲ
ಪ್ರತಿರಥನೊರ್ವನೆ ಮುಕುಂದನಿಸೆ ಪಾಯ್ದುವಿಷು
ಪ್ರತತಿಗಳಧಿಕಂ ತಚ್ಛರ
ತತಿಯಿಂ ಗಣನೆಗೆ ಸಹಸ್ರಗುಣಮೆಂಬಿನೆಗಂ ೨೨

ಭಲ್ಲದಿನೆಚ್ಚುರೆ ಖಂಡಿಸಿ
ಬಿಲ್ಲಂ ಪ್ರತ್ಯೇಕಮಂತೆ ಕುಂಡಲಕೋಟೀ
ರೋಲ್ಲಸಿತರಥಿಶಿರಂಗಳ
ನೆಲ್ಲವನೊರ್ಮೊದಲೆ ಶಾರ್ಙ್ಗಿ ಪಱಿವಿನಮೆಚ್ಚಂ ೨೩

ವ|| ಆಗಳಾ ಚತುರಂಗಬಲಮಱಿವುದುಮೇಕಾಂಗದಿಂ ಮುರನಿಶಾಚರಂ ಪೊಣರೆ

ಯಮನು ತನ್ನ ದಂಡದಿಂದ ಪ್ರತಿಭಟಿಸುವಂತೆ ಪ್ರತಿಭಟಿಸಿ ಹೊಡೆದು ಸಂಹರಿಸಿದನು. ೨೦. ಯುದ್ಧದಲ್ಲಿ ಕೃಷ್ಣನು ಹೊಡೆದ ಬಾಣವು ಒಂದೊಂದೂ ಆನೆಯ ಮುಖದಲ್ಲಿ ನಾಟಿ, ಅದರ ಪೃಷ್ಠದ್ವಾರದಿಂದ ಹೊರಕ್ಕೆ ನುಸುಳುತ್ತಿರಲು ಆ ಆನೆಗಳ ಗುಂಪೇ ಜೀವವು ದೇಹಕ್ಕಿಂತ ಬೇರೆಯಿಲ್ಲದಂತೆ ದಿಕ್ಕುಪಾಲಾಗಿ ಹರಡಿ ಬಿದ್ದಿತು. ೨೧. ಬಿಲ್ಲಿನಿಂದ ಟಂಕಾರವೂ, ಬಾಣದಿಂದ ಭೀಂಕಾರವೂ, ಚಕ್ರದಿಂದ ಚೀತ್ಕಾರವೂ, ಸಾರಥಿಯಿಂದ ಹೂಂಕಾರವೂ, ಕುದುರೆಯಿಂದ ಕೆನೆತವೂ ಹೆಚ್ಚಾಗುತ್ತಿರುವಲ್ಲಿ ತೇರುಗಳ ಗುಂಪುಗಳು ಬಂದವು. ೨೨. ಎದಿರುಕಡೆ ಸಹಸ್ರಸಂಖ್ಯೆಯಲ್ಲಿ ಅತಿರಥರಿದ್ದರೂ ತಡೆಯಿಲ್ಲದ ರಥವುಳ್ಳ ಕೃಷ್ಣನೊಬ್ಬನೇ ಬಾಣಗಳನ್ನು ಪ್ರಯೋಗಿಸಿದನು. ಅವು ಎದುರಿನ ಅತಿರಥ ಬಾಣ ಸಮೂಹಕ್ಕೆ ಲೆಕ್ಕ ಮಾಡಿದರೆ ಸಾವಿರಗುಣ ಅಧಿಕವೆನ್ನುವಂತೆ ಹಾರಿದುವು. ೨೩. ಕೃಷ್ಣನೊಬ್ಬನೇ ಕುಂಡಲ ಕಿರೀಟಗಳಿಂದ ಹೆಚ್ಚಾಗಿ ಹೊಳೆಯುವ ರಥಿಕರ ಬಿಲ್ಲುಗಳೊಂದೊಂದನ್ನೂ ಪ್ರತ್ಯೇಕವಾಗಿ ಭಲ್ಲದಿಂದ ಹೊಡೆದು ತುಂಡುಮಾಡಿ ಅವರ ತಲೆಗಳೆಲ್ಲವೂ ಒಟ್ಟಿಗೆ ಕತ್ತರಿಸಿ ಹೋಗುವಂತೆ ಹೊಡೆದನು. ವ|| ಆಗ ಆ ಚತುರಂಗ ಬಲವು ನಾಶವಾದುದರಿಂದ ಆ ಮುರಾಸುರನು ಏಕಾಂಗದಿಂದ ಯುದ್ಧವನ್ನು ಮಾಡಿದನು.

---

೧. ನಡುವಂ ಮೊಗಮಂ ಪೇಚಕದೆಡೆಯುಮನೊಂದೊಂದೆ (ಖ) ೨. ಸಹಸ್ರಮೆನಲ (ಕಗ)

ಹರಿಯೆಚ್ಚಂ [1]ಬ್ರಹ್ಮಾಸ್ತ್ರದಿ
ನುರುಳೆ ಶಿರಂ ಶರಶಿಲೀಮುಖಾಕೀರ್ಣ ವಿಯ
ತ್ತರುವಂ ಗರ್ಜಿತವಿಜಿತ
ಸ್ವರುವಂ ಸಂಗ್ರಾಮಕೇಳಿ ಗುರುವಂ ಮುರುವಂ ೨೪

ವ॥ ಅಂತು ಗರುಡವಾಹನಂ ವಿಜಯೋತ್ಸವಮನಪ್ಪುಕೆಯ್ದಾ ಪ್ರದೇಶದಿಂ ತಳರ್ದು ದಕ್ಷಿಣದ್ವಾರಕ್ಕೆ ಪರಿಯಿಟ್ಟು

ಅಪರಿಮಿತಸೈನ್ಯದಿಂದೊ
ಡ್ಡಿ ಪಳಂಚಿದ ದೈತ್ಯನಂ ವಿಮರ್ದಿಸಿದಂ ತ
ದ್ವಿಪುಳಬಲ[2]ರಕ್ತಸಂಘಟಿ
ತಪಂಚಜನನಾಗಿ ಪಂಚದಜನನಂ ಕೃಷ್ಣಂ ೨೫

ವ॥ ಅಲ್ಲಿಂ ತಳರ್ದು ಪೂರ್ವದ್ವಾರಭೂಗೋಳಮನೆಯ್ದಿ

ಸೇನಾದುರ್ಧರನಂ ತ
ತ್ಸೇನಾನ್ವಿತನಿಕ್ಕಿದಂ ಮುಕುಂದಂ ಶಾರ್ಙ್ಗ
ಧ್ವಾನಮುಹುರ್ಮುಹುರುದ್ಗತ
ಭಾನುಹಯಗ್ರೀವನಾ ಹಯಗ್ರೀವನುಮಂ ೨೬

ವ॥ ಆ ಮಹಾಹವರಂಗದಿನುತ್ತರದ್ವಾರದಸುರಾರಿಯನಟ್ಟಿ ಮುಟ್ಟಿ

೨೪. ತನ್ನ ಬಾಣಗಳೆಂಬ ತುಂಬಿಗಳಿಂದ, ಕಲ್ಪವೃಕ್ಷವನ್ನು ಮುತ್ತಿಸಿದ್ದವನೂ, ಗರ್ಜನೆಯಿಂದ ವಜ್ರಾಯುಧವನ್ನು ಜಯಿಸಿದವನೂ ಯುದ್ಧಕ್ರೀಡಾಗುರುವೂ ಆದ ಮುರನನ್ನು ಕೃಷ್ಣನು ಬ್ರಹ್ಮಾಸ್ತ್ರದಿಂದ ತಲೆಯುರುಳುವಂತೆ ಹೊಡೆದನು. ವ॥ ಗರುಡವಾಹನನು ಹಾಗೆ ವಿಜಯೋತ್ಸವವನ್ನು ಪಡೆದು, ಆ ಪ್ರದೇಶದಿಂದ ಹೊರಟು ಆ ಪುರದ ದಕ್ಷಿಣದ ಹೆಬ್ಬಾಗಿಲಿಗೆ ಧಾವಿಸಿದನು. ೨೫. ಅಲ್ಲಿ ಅಪರಿಮಿತ ಸೈನ್ಯದಿಂದ ಎದುರಿಸಿದ ಪಂಚಜನನೆಂಬ ದೈತ್ಯನನ್ನು ಅವನ ಹೆಚ್ಚು ಸೈನ್ಯದ ರಕ್ತದ ಬಳಿತದಿಂದ ದಪ್ಪವಾಗಿ ರಾಕ್ಷಸನಂತಾದ ಕೃಷ್ಣನು ಚೆನ್ನಾಗಿ ಮರ್ದಿಸಿದನು. ವ॥ ಅಲ್ಲಿಂದ ಹೊರಟು, ಪೂರ್ವದ ಬಾಗಿಲ ಭೂಗೋಳವನ್ನು ಸೇರಿ ೨೬. ಸೇನೆಯಿಂದ ಎದುರಿಸಲು ಕಷ್ಟವಾದ ಆ ಹಯಗ್ರೀವನೆಂಬ ರಾಕ್ಷಸನನ್ನೂ, ತನ್ನ ಶಾರ್ಙ್ಗಧ್ವನಿಯಿಂದ ಮತ್ತೆ ಮತ್ತೆ ಸೂರ್ಯನ ಹಯವು ಕತ್ತೆತ್ತುವಂತೆ ಮಾಡಿದ ಕೃಷ್ಣನು ಅವನ ಸೇನೆಯೊಡನೆ ಕೊಂದನು. ವ॥ ಆ ಮಹಾಯುದ್ಧರಂಗದಿಂದ ಹೊರಟು ಹೋಗಿ ಉತ್ತರದ್ವಾರದ ರಾಕ್ಷಸನನ್ನು ಅಟ್ಟಿ ಹಿಡಿದು

---

೧. ರೌದ್ರಾಸ್ತ್ರದಿ (ಖ) ೨. ರಕ್ತಸಂಘಟ್ಟಪಂಚನದನಾಗಿ ಪಂಚನದಂ (ಖ)

ಅನಿವಾರ್ಯ ಚತುಸ್ಸೈನ್ಯನ
ನನನ್ಯಸಾಮಾನ್ಯನಂ ವಿಚಿತ್ರವಿಧಾಯೋ
ಧನಕೃತತತ್ಸೈನ್ಯ ನಿಶುಂ
ಭನಾಗಿಯೆ ನಿಶುಂಭನಂ ಮುಕುಂದಂ ಕೊಂದಂ ೨೭

ವ|| ಅಂತು ಮುರಾಂತಕಂ ಪ್ರಾಗ್ಜ್ಯೋತಿಷಪುರ ಬಹಿರ್ಭಾಗರಕ್ಷನಿಯುಕ್ತ ಷೋಡಶಾಕ್ಷೌಹಿಣೀ ಬಲಮನಿಕ್ಕಿ ಕೋಟಾಟ್ಟಾಳಮಂ ಮುಟ್ಟೆವಂದು ಪಾಂಚಜನ್ಯಶಂಖಮಂ ಪೂರೈಸೆ

ಹರಿಶಂಖಧ್ವಾನಮುಣ್ಮೆತ್ತೆಲೆಲೆ ಕರಿಗಳಂ ಪಣ್ಣವೇಟ್ ತೇರ್ಗಳಂ ಪೂ
ಡಿರವೇಟಿಶ್ವಂಗಳಂ ಪಲ್ಲಣಿಸಿ ಬರಲೆವೇಟ್ ವೀರರಂ ಕೈದುಗೊಂಡೆ
ಬ್ಬಿರವೇಟೆಂಬೊಂದು ಘೋಷಂ ನರಕನ ಪುರದೊಳ್ ಕೊರ್ವಿ ಪರ್ವಿತ್ತು ದೇವಾ
ಸುರದೋರ್ದಂಡಾಭಿಘಾತೋನ್ಮಥಿತ ಜಲಧಿನಿರ್ಘೋಷವೆಂಬಂದದಿಂದಂ ೨೮

ವ|| ಆಗಳಾ ಸಮರಸನ್ನಾಹಭೇರಿಶಂಖಕಾಹಳಾನಿನಾದಮಂ ಗೃಹದೇವತಾಕ್ರಂದನ ನಿನಾದಮಾಕ್ರಮಿಸೆಯುಂ; [೧]ನಾನಾನಶಿತಸ್ಫುರಿತ ಹೇತಿಪ್ರಭೆಯನುಳ್ಕಾಪಾತಪ್ರಭೆಗಳಭಿಭವಿಸೆಯುಂ; [೨]ವರೂಥಯೂಥ ಕೇತುಗಳನುದ್ದಾಮಧೂಮಕೇತುಗಳ್ ಧಿಕ್ಕರಿಸೆಯುಂ; ಆ ಯೋಧನ [೩]ಕ್ರೋಧನಿಯುಕ್ತಯೋಧವೀರಸ್ಫುರನ್ನೇತ್ರ ರಶ್ಮಿರಾಗೋತ್ಕರ್ಷಮಂ ರುಧಿರವರ್ಷಮೊತ್ತರಿಸೆಯುಂ; ವಿಚಿತ್ರಾತಪತ್ರ [೪]ಪಿಂಛಪತ್ರಷಂಡಮನಕಾಂಡ ಸಂಭವಶಬಲವರ್ಷಾಂಬುಧಾರಾಡಂಬರಂ ವಿಡಂಬಿಸೆಯುಂ; ಕರಿಕರ್ಣತಾಲಪವನಪರಿಮೀಲಿತಲೋಲಚಾಮರಸ್ತೋಮಪವನನಂ ಪ್ರತಿಕೂಲಚಂಡ ಪವನ

೨೭. ನಿವಾರಿಸಲಾಗದ ಚತುರಂಗಸೈನ್ಯವುಳ್ಳವನೂ ಬೇರೆ ಸಮಾನರಿಲ್ಲದವನೂ ಆದ ನಿಶುಂಭನೆಂಬ ರಾಕ್ಷಸನನ್ನು ವಿಚಿತ್ರವಾಗಿ ಯುದ್ಧಮಾಡಿ ಅವನ ಸೈನ್ಯದಿಂದಲೇ ಸಂಶೋಭಿತನಾಗಿ ಕೃಷ್ಣನು ಕೊಂದನು. ವ|| ಕೃಷ್ಣನು ಹಾಗೆ ಪ್ರಾಗ್ಜ್ಯೋತಿಷಪುರದ ಹೊರಗಡೆ ರಕ್ಷಣೆಗಾಗಿ ನೇಮಿಸಲ್ಪಟ್ಟ ಹದಿನಾರು ಅಕ್ಷೌಹಿಣೀ ಸೈನ್ಯವನ್ನು ಕೊಂದು ಕೋಟೆಯ ಅಟ್ಟಳೆಯನ್ನು ಸಮೀಪಿಸಿ, ಪಾಂಚಜನ್ಯ ಶಂಖವನ್ನೂದಿದನು. ೨೮. ಎಲೆಲೆ! ಕೃಷ್ಣನ ಶಂಖಧ್ವನಿಯಾಯಿತು. ಆನೆಗಳನ್ನು ಸಿದ್ಧಪಡಿಸಲು ಹೇಳು. ತೇರುಗಳನ್ನು ಹೂಡಿರಲು ಹೇಳು. ಕುದುರೆಗಳನ್ನು ಜೀನುಹಾಕಿ ಬರಿಸಲು ಹೇಳು. ವೀರರನ್ನು ಆಯುಧಧಾರಿಗಳಾಗಿ ಬರಹೇಳು ಎಂಬ ಘೋಷಣೆಯು ನರಕನ ರಾಜಧಾನಿಯಲ್ಲಿ ದೇವಾಸುರರು ದೋರ್ದಂಡದ ಸೆಳೆತದಿಂದ ಹೆಚ್ಚಾಗಿ ಕಡೆದಾಗ ಉಂಟಾದ ಸಮುದ್ರದ ಧ್ವನಿಯಂತೆ ಕೊಬ್ಬಿ ಹಬ್ಬಿತು. ವ|| ಆಗ ಯುದ್ಧಸನ್ನಾಹದ ನಗಾರಿ ಶಂಖ ಕಹಳೆಗಳ ನಾದವನ್ನು ಗೃಹದೇವತೆಗಳು ಅಳುವ ಧ್ವನಿಯು ಆಕ್ರಮಿಸಿತು. ನಾನಾ ವಿಧದ ಹರಿತವಾಗಿ ಹೊಳೆಯುವ ಶಸ್ತ್ರಾಯುಧಗಳ ಪ್ರಭೆಯನ್ನು ಉಲ್ಕಾಪಾತದ ಪ್ರಭೆಗಳು ಕೀಳುಮಾಡಿದವು. ರಥಸಮೂಹದ ಧ್ವಜಗಳನ್ನು ದೊಡ್ಡ ದೊಡ್ಡ ಧೂಮಕೇತುಗಳು ಧಿಕ್ಕರಿಸಿದವು. ಯುದ್ಧದ ಕೋಪದಿಂದ ಕೂಡಿದ ಯೋಧವೀರರ ಹೊಳೆಯುವ ಕಣ್ಣಿನ ಕಾಂತಿಯ ಹೆಚ್ಚು ಕೆಂಪನ್ನು ರಕ್ತದ ಮಳೆಯು

೧. ಆ ನಿಶಾಟಸ್ಫುರಿತಕೇಕರಪ್ರಭೆಯ (ಖ) ೨. ವರೂಥಮಾತಂಗಸಮಗ್ರೋದಗ್ರ (ಖ) ೩. ಕ್ರೋಧಯುಕ್ತಯೋಧನವಿಸ್ಫಾರನೇತ್ರ (ಖ) ೪. ಪಿಂಛಚ್ಛತ್ರ (ಕಖಗ)

ನಂಡಲೆಯೆಯುಂ; [1]ದೈತ್ಯರಾಜರಾಜನ್ಮಕುಟಮಾಣಿಕ್ಯಶೋಣಮಣಿಕಿರಣ ಸಂದೋಹಮಂ ದಿಗ್ದಾಹಮಿಟಿಕೆಯ್ಯೆಯುಂ ; ಪೌರನಾರೀನಿಕರ ಕರವಿಕೀರ್ಯಮಾಣನಿಸ್ತುಲಸ್ಥೂಲ ಮುಕ್ತಾಕ್ಷತಮನಂತರಿಕ್ಷ ಪತಿತನಕ್ಷತ್ರಸಂಕುಲಂ ಮಾಂಕರಿಸೆಯುಂ ; ದುರ್ವಾರಚತುರ್ವಲಕ್ಷೋಭ ವಿಶೇಷಜನಿತಾಶೇಷ ಶಿರಃಕಂಪಮಂ ಭೂಕಂಪಮಿಟಿಸೆಯುಂ ಅಪಜಯಕ್ಕಾಗರಮಾಗಿ ದಾನವೇಶ್ವರಂ ಪೊಱಮಟ್ಟು ಪೊಱವೊಟಲೊಳೊಡ್ಡಿ ನಿಲ್ವುದುಂ

ತುಱುಗೆ ಸರಲ್ ಕಣೆ ಕಣೆಯಂ
ಗಱಿ ಗಱಿಯಂ ಪಿಳ್ಕು ಪಿಳ್ಕನಲಗಲಗಂ ತ
ಳ್ತೆಱಗುವಿನಮೆಚ್ಚು ಕೃಷ್ಣಂ
ಮೆಱೆದಂ ನಿಜಚಾಪವಿದ್ಯೆಯಂ ತತ್ಕ್ಷಣದೊಳ್ ೨೯

ಚತುರಂಗಾಕಾರವ್ಯ
ಕ್ತಿ ತಿರೋಹಿತಮಾಗೆ ತುಱುಗಿ ಕೃಷ್ಣನ ಶರಸಂ
ತತಿ ನಾಂಟೆ ಶರದ್ವೀಪಾ
ಕೃತಿಯುಂ ಪೋಲ್ವತ್ತು ದೈತ್ಯಸೇನಾಚಕ್ರಂ ೩೦

[2]ಎನಿತೆನಿತು ಬಾಣವರ್ಷದಿ
[3]ನೆನಿತೆನಿತಂ ಕೊಂದನಾಂತ ಚತುರಂಗಮನಂ
ತನಿತನಿತು ಸೈನ್ಯಮೊಡನೊಡ
ನೆ ನೆಱೆದು ನಿಲೆ ವೈಷ್ಣವಾಸ್ತ್ರಮಂ ನೆನೆದಾಗಳ್ ೩೧

ಒತ್ತರಿಸಿತು. ವಿಚಿತ್ರವಾದ ಛತ್ರಿಯಂತಿರುವ ನವಿಲುಗರಿಗಳನ್ನು ಅಕಾಲದಲ್ಲಿ ಸಂಭವಿಸಿದ ಮಿಶ್ರವರ್ಣದ ಮೋಡಗಳ ಆಡಂಬರವು ಅನುಕುಸುತ್ತಿದ್ದಿತು. ಆನೆಗಳ ಕಿವಿಗಳೆಂಬ ಬೀಸಣಿಗೆಗಳಿಂದ ಕಡಿಮೆಯಾದ ಚಾಮರಗಳ ಗಾಳಿಯನ್ನು ಪ್ರತಿಕೂಲವಾಗಿ ಬೀಸುವ ಬಿರುಗಾಳಿಯು ಪೀಡಿಸುತ್ತಿದ್ದಿತು. ರಾಕ್ಷಸರಾಜನ ಹೊಳೆಯುವ ಕಿರೀಟ ಮಾಣಿಕ್ಯದ ಕೆಂಪಾದ ಕಾಂತಿಸಮೂಹವನ್ನು ದಿಕ್ಕುಗಳಲ್ಲಾದ ಬೆಂಕಿಯುರಿಯು ಕಡಮೆಯೆನ್ನಿಸಿತು. ಪುರದ ನಾರಿಯರ ಕೈಗಳಿಂದ ಎರಚುವ ಅನುಪಮವಾದ ದಪ್ಪಮುತ್ತುಗಳ ಅಕ್ಷತೆಗಳನ್ನು ಅಂತರಿಕ್ಷದಿಂದ ಬಿದ್ದ ನಕ್ಷತ್ರಗಳು ಅಣಕಿಸುತ್ತಿದ್ದವು. ನಿವಾರಿಸಲು ಕಷ್ಟವಾದ ನಾಲ್ಕು ಬಗೆಯ ಸೈನ್ಯದ ಸಂಚಲನವಿಶೇಷದಿಂದ ಆದ ಸಮಸ್ತಜನರ ತಲೆದೂಗುವಿಕೆಯನ್ನು ಭೂಕಂಪವು ಕೀಳುಗೊಳಿಸಿತು. ಅಪಜಯಕ್ಕೆ ಆಶ್ರಯನಾಗಿ ರಾಕ್ಷಸೇಶ್ವರನು ಹೊರಟು ಪುರದ ಹೊರಭಾಗದಲ್ಲಿ ಪ್ರತಿಭಟಿಸಿ ನಿಂತನು. ೨೯. ಕೃಷ್ಣನು ಆ ಕ್ಷಣದಲ್ಲೇ ಬಾಣಗಳು ತುರುಗಲು ಬಾಣವು ಬಾಣವನ್ನೂ ಬಾಣದ ಗರಿ ಗರಿಯನ್ನೂ ಪುಂಖವು ಪುಂಖವನ್ನೂ ಅಲಗು ಅಲಗನ್ನೂ ಪ್ರತಿಭಟಿಸಿ ನಾಟುವಂತೆ ಹೊಡೆದು ತನ್ನ ಧನುರ್ವಿದ್ಯೆಯನ್ನು ಪ್ರಕಾಶಿಸಿದನು. ೩೦. ಕೃಷ್ಣನ ಬಾಣಸಮೂಹವು ಚತುರಂಗಸೇನಾಕಾರದ ಸ್ಪಷ್ಟತೆಯು ಇಲ್ಲದಂತೆ ಒತ್ತಾಗಿ ನಾಟಿದುದರಿಂದ ರಾಕ್ಷಸ ಸೇನಾಮಂಡಲವು, ಬಾಣ ದ್ವೀಪಾಕಾರವನ್ನು ಹೋಲುತ್ತಿದ್ದಿತು. ೩೧. ಪ್ರತಿಭಟಿಸಿದ ಚತುರಂಗಸೇನೆಯನ್ನು ಎಷ್ಟೆಷ್ಟು ಬಾಣವೃಷ್ಟಿಯಿಂದ ಎಷ್ಟೆಷ್ಟನ್ನು ಕೊಂದನೋ ಅಷ್ಟಷ್ಟು ಸೈನ್ಯವೂ ಒಡನೊಡನೆಯೇ ಸೇರಿ ತುಂಬಿ ನಿಂತಿತು.

---

೧. ದೈತ್ಯಫಾಲಪಟ್ಟ ಸ್ಥಲಸ್ಥೂಲಮುಕ್ತಾಫಲಾಕ್ಷತಂಗಳ (ಖ) ೨. ಆನಿತನಿತು (ಖ) ೩. ನನಿತನಿತಂ (ಕಖಗ)

ಪರಬಲಜೀವಮಂ ತೆಗೆವಿನಂ ತೆಗೆದಂ ದೊಣೆಯಿಂ ಮಹಾಸ್ತ್ರಮಂ
ತಿರಿವ ಕುಲಾಲಚಕ್ರಮೆನೆ ಭೂವಳಯಂ ತಿರಿವನ್ನಮಸ್ತ್ರಮಂ
ತಿರಿಪಿದನುಗ್ರವೈರಿಗೆ ಭಯಂ ತೊಡರ್ವನ್ನೆವರಂ ತೊಡರ್ಚಿದಂ
ತಿರುವಿನೊಳಸ್ತ್ರಮಂ ಜಯವಧೂಸದನಂ ರಣರಂಗಭೈರವಂ ೩೨

ವ॥ ಆ ಮಹಾಸ್ತ್ರಂ ಕಾರ್ಮುಕನಿರ್ಮುಕ್ತಮಾಗೆ

ಪಿಂಗದೆ ಸೋರ್ದುವಸ್ತ್ರಮುಖದಿಂ ಕಣೆಯಂಗಳ ವೃಷ್ಟಿ ಮಂಡಲಾ
ಗ್ರಂಗಳ ವೃಷ್ಟಿ ಶಕ್ತಿಗಳ ವೃಷ್ಟಿ ಶರಂಗಳ ವೃಷ್ಟಿ ಭಿಂಡಿವಾ
ಳಂಗಳ ವೃಷ್ಟಿ ಶಂಕುಗಳ ವೃಷ್ಟಿ [1]ಹಲಂಗಳ ವೃಷ್ಟಿ ವಜ್ರದಂ
ಡಂಗಳ ವೃಷ್ಟಿಯಿಟ್ಟಿಗಳ ವೃಷ್ಟಿ ವಿರೋಧಿಚತುರ್ಬಲಂಗಳೊಳ್ ೩೩

ಪರಿಘದ ಪಾಶದ ಚಕ್ರದ
ಪರಶುವ ಪಟ್ಟಸದ ಶೂಲದಸಿಧೇನುವ ಮು
ದ್ಗರದ ಮುಸುಂಡಿಯ ಮುಸಲದ
ಕರಪತ್ರದ ಮಟಿಯೆ ಸುರಿದುದಸ್ತ್ರದ ಮುಖದಿಂ ೩೪

ವ॥ ಅಂತು ವೈಷ್ಣವಾಸ್ತ್ರಮತಿನಿರ್ಭರದಿಂ ಚತುರ್ಬಲದೊಳೆ ಕಾದುತ್ತುಮಿರೆ ಮುಕುಂದಂ ದ್ವಂದ್ವಯುದ್ಧದಿಂ ಕಾದಲೆಂದಸುರನಾಯಕನಂ ಸಾಯಕಹಸ್ತದಿಂ ಸನ್ನೆಗೆಯ್ಯೆ

ಆರೋಪಿತಚಾಪಂ ವಿ
ಸ್ಫಾರಿತಮೌರ್ವೀಲತಂ ಪ್ರವರ್ಷಿತಬಾಣಾ
ಸಾರಂ ಚೋದಿತರಥನಸು
ರಾರಿಗೆ ಮಾರಾಂತನಾಜಿಭೀಮಂ ಭೌಮಂ ೩೫

ಆಗ ಕೃಷ್ಣನು ವೈಷ್ಣವಾಸ್ತ್ರವನ್ನು ನೆನೆದನು. ೩೨. ಜಯಲಕ್ಷ್ಮೀನಿಲಯ ಕೃಷ್ಣನು ಶತ್ರುಸೇನೆಯ ಜೀವವನ್ನು ತೆಗೆಯುವನೋ ಎಂಬಂತೆ ಬತ್ತಳಿಕೆಯಿಂದ ಮಹಾಸ್ತ್ರವನ್ನು ತೆಗೆದನು. ಭೂಮಂಡಲವು ಕುಂಬಾರನ ಚಕ್ರದಂತೆ ಸುತ್ತುವವರೆಗೂ ಅಸ್ತ್ರವನ್ನು ತಿರುಗಿಸಿದನು. ವೈರಿಗೆ ಭಯವು ತೊಡರಿಕೊಳ್ಳುವವರೆಗೂ ಹೆದೆಯಲ್ಲಿ ಅಸ್ತ್ರವನ್ನು ಹೂಡಿದನು. ವ॥ ಆ ಮಹಾಸ್ತ್ರವು ಬಿಲ್ಲಿನಿಂದ ಬಿಡಲ್ಪಟ್ಟಾಗ ೩೩. ಆ ಅಸ್ತ್ರಮುಖದಿಂದ ವಿರೋಧಿಗಳ ಚತುರಂಗ ಸೈನ್ಯದ ಮೇಲೆ ಬಾಣಗಳ ಮಳೆಯೂ ಕತ್ತಿಗಳ ಮಳೆಯೂ ಶಕ್ತ್ಯಾಯುಧಗಳ ಮಳೆಯೂ, ಶರಗಳ ಮಳೆಯೂ ಭಿಂಡಿವಾಲಗಳ ಮಳೆಯೂ ಮೊಳೆಗಳ ಮಳೆಯೂ ನೇಗಿಲುಗಳ ಮಳೆಯೂ ವಜ್ರದಂಡಗಳ ಮಳೆಯೂ ಈಟಿಗಳ ಮಳೆಯೂ ಸುರಿಯಿತು. ೩೪. ಅಸ್ತ್ರದ ಬಾಯಿಂದ ಪರಿಘದ, ಪಾಶದ, ಚಕ್ರದ, ಕೊಡಲಿಯ, ಪಟ್ಟಸದ, ಶೂಲದ, ಕತ್ತಿಯ, ಮುದ್ಗರದ, ಮುಸುಂಡಿಯ, ಒನಕೆಯ, ಮತ್ತು ಗರಗಸದ ಮಳೆಯೇ ಸುರಿಯಿತು. ವ॥ ಹಾಗೆ ಚತುರ್ಬಲದಲ್ಲಿ ವೈಷ್ಣವಾಸ್ತ್ರವು ಅತ್ಯತಿಶಯದಿಂದ ಕಾದುತ್ತಿರುವಲ್ಲಿ ಕೃಷ್ಣನು ದ್ವಂದ್ವಯುದ್ಧದಿಂದ ಕಾದಬೇಕೆಂದು, ರಾಕ್ಷಸನಾಯಕನನ್ನು ಬಾಣಹಸ್ತದಿಂದ ಸನ್ನೆಮಾಡಿದನು. ೩೫. ಯುದ್ಧಭಯಂಕರನಾದ ನರಕನು ಹೆದೆಯೇರಿಸಿದ ಬಿಲ್ಲನ್ನು ಹಿಡಿದು, ಹೆದೆಯನ್ನು ಟಂಕಾರಮಾಡಿ ಬಾಣಗಳ ಮಳೆಯನ್ನು ಸುರಿಸುತ್ತ ರಥವನ್ನು ನಡೆಸುತ್ತ

೧. ಹಯಂಗಳ (ಕಗ)

ಇಳೆಯಂ ಬಾಣಾಂಧಕಾರಂ ಪುದಿಯೆ ನಭಮನಸ್ತ್ರೋತ್ಕರಂ ತೀವೆ ದಿಙ್ಮಂ
ಡಳಮಂ ಮೌರ್ವೀಲತಾಟಂಕೃತಿ ಬಳಸೆ ಶರಾದಾನಸಂಧಾನಮೋಕ್ಷಂ
ಗಳ ವೇಗಂ ಲೋಚನಾಗೋಚರಮೆನಿಸೆ ಝುಣತ್ಕಂಕಣರ್ ಸಂಚಲತ್ಕುಂ
ಡಳರುದ್ಭಾಸಾಂಗದರ್ ಮಡಳಿತಧನುಗಳೆಚ್ಚಾಡಿದರ್ ಕೃಷ್ಣಭೌಮರ್ ೩೬

ಘನಘಟೆಯಂ ತನುಗಳ್ ಗ
ರ್ಜನೆಯಂ ಗಜಂ ನೆಗಳಿಂದ್ರಧನುವಂ ಧನುಗಳ್
ನೆನೆಯಿಸೆ ಕಾರ್ಗಾಲದ ಮಟಿ
ಯನೆ ಸುರಿದರ್ ಕೃಷ್ಣಭೌಮರಂಬಿನ ಮಟಿಯಂ ೩೭

ಅಡಿಗಡಿಗೆ ಶಾರ್ಙ್ಗಿ ಧನುವಂ
ಕಡಿದಿಕ್ಕಲ್ ಲಕ್ಷ್ಯವೇಧಿ ಪೆಱತಂ ಧನುವಂ
ಪಿಡಿಪಿಡಿದು ಭೌಮದಾನವ
ನೊಡನೊಡನೆಚ್ಚೆಚ್ಚು ಮೆಱೆದನದ್ಭುತರಸಮಂ ೩೮

ಮನದಣ್ಮಂ ಮನದಣ್ಮು ಮಾಂಕರಿಸಲೇಸಿಂಗೇಸು ಮೇಲಾಗಲಂ
ಬಿನಗುರ್ವಂಬಿನಗುರ್ವನಾಟಲೆದುದರ್ಕೆಂದ್ರಾದಿಗಳ್ ಭಾಪು ಭಾ
ಪೆನುತಮ್ಮಮ್ಮೆನುತಕ್ಕುಮಕ್ಕುಮೆನುತಾದಂ ಮೆಚ್ಚೆಯುಂ ಬ್ರಹ್ಮನಂ
ದನನಾನಂದದಿಂ ನಾಡೆಯುಂ ನೆಗಬ್ದುದಂದಾ [1]ಕೃಷ್ಣಭೌಮಾಹವಂ ೩೯

ಕೃಷ್ಣನನ್ನು ಎದುರಿಸಿದನು. ೩೬. ಬಾಣಗಳ ಕತ್ತಲೆಯು ಭೂಮಿಯನ್ನು ವ್ಯಾಪಿಸಿತು. ಆಕಾಶವನ್ನು ಅಸ್ತ್ರಗಳ ಸಮೂಹವು ತುಂಬಿತು. ಮೌರ್ವಿಯ ಟಂಕಾರವು ದಿಙ್ಮಂಡಲವನ್ನು ಬಳಸಿತು. ಬಾಣಗಳನ್ನು ಬತ್ತಳಿಕೆಯಿಂದ ತೆಗೆಯುವ ಬಿಲ್ಲಿನಲ್ಲಿ ಸೇರಿಸುವ ಪ್ರಯೋಗಿಸುವ ವೇಗವು ಕಣ್ಣಿಗೆ ಕಾಣಿಸದಾಯಿತು. ಝುಣತ್ಕಾರಮಾಡುವ ಕಂಕಣವನ್ನು ಧರಿಸಿದವರೂ ಚಲಿಸುವ ಕುಂಡಲವುಳ್ಳವರೂ ಹೆಚ್ಚಾಗಿ ಹೊಳೆಯುವ ಭುಜಾಭರಣವುಳ್ಳವರೂ ಮಂಡಲಾಕಾರವಾಗಿಸಿದ ಬಿಲ್ಲುಳ್ಳವರೂ ಆದ ಕೃಷ್ಣ ನರಕರು ಬಾಣಗಳಿಂದ ಯುದ್ಧ ಮಾಡಿದರು. ೩೭. ಕೃಷ್ಣ ನರಕರು ತಮ್ಮ ದೇಹವು ಮೋಡಗಳ ಗುಂಪನ್ನೂ, ಗರ್ಜನೆಯು ಗುಡುಗನ್ನೂ, ಬಿಲ್ಲುಗಳು ಮಳೆಬಿಲ್ಲನ್ನೂ ಜ್ಞಾಪಿಸುತ್ತಿರಲು ಮುಂಗಾರುಮಳೆಯಂತೆ ಬಾಣಗಳ ಮಳೆಯನ್ನು ಸುರಿದರು. ೩೮. ಕೃಷ್ಣನು ಅಡಿಗಡಿಗೆ ನರಕನ ಧನುಸ್ಸನ್ನು ಕಡಿದುಹಾಕಲು, ಗುರಿಯಿಟ್ಟು ಹೊಡೆಯಬಲ್ಲ ಆ ನರಕನು ಬೇರೆ ಬೇರೆ ಬಿಲ್ಲನ್ನು ಹಿಡಿದು ಒಡನೊಡನೆಯೇ ಬಾಣವನ್ನು ಹೊಡೆದು ಹೊಡೆದು ಅದ್ಭುತರಸವನ್ನು ಪ್ರಕಟಿಸಿದನು. ೩೯. ಮನದ ಪೌರುಷವು ಎದಿರಾಳಿಯ ಮನಸ್ಸಿನ ಪೌರುಷವನ್ನು ಮೀರುತ್ತಿದ್ದಿತು. ಹೊಡೆತಕ್ಕೆ ಹೊಡೆತವು ಮೇಲಾಗುತ್ತಿದ್ದಿತು. ಬಾಣದ ಭಯಂಕರಾತಿಶಯವು ಬಾಣದ ಭಯಂಕರಾತಿಶಯವನ್ನು ಪ್ರತಿಭಟಿಸಿತು. ಅದಕ್ಕೆ ಇಂದ್ರಾದಿಗಳು ಭಾಪುಭಾಪು! ಅಮ್ಮಮ್ಮ!

---

೧. ಭೌಮಕೃಷ್ಣಾಹವಂ (ಗ)

ಭೌಮನೆ ಹರಿಯೊಳ್ ಪೊಣರ್ಗುಂ
ಭೌಮನೊಳೀ ಹರಿಯೆ ಪೊಣರ್ಗುಮೆನಲಸ್ತ್ರಕಳಾ
[1]ಸಾಮರ್ಥ್ಯದೊಳಸ್ತ್ರಕಳಾ
ಸಾಮರ್ಥ್ಯಂ [2]ಸೆಣಸೆ ಭೌಮಹರಿಗಳ್ ಪೊಣರ್ದರ್ ೪೦

ತೋಯರುಹನಾಭನೈಂದ್ರಾ
ಗ್ನೇಯಾಂತಕಕೌಣಪಾಸ್ತ್ರತತಿಯಿಂದಿಸೆ ದೈ
ತೇಯನುಮೆಚ್ಚಂ ವಾರುಣ
ವಾಯವ್ಯ ಕುಬೇರ ರುದ್ರಮಾರ್ಗಣದಿಂದಂ ೪೧

ಜ್ವಲನಶಿಖಾಳಿಯನುಳ್ಕಾ
ವಲಿಯಂ ಕುಳಿಕಾಹಿಕುಳಮನಶನಿವ್ರಜಮಂ
ಗೆಲೆವಂದಿರದೊಂದೊಂದಂ
ಗೆಲೆವಂದುವು ಕೃಷ್ಣಭೌಮರಂಬಂಬರದೊಳ್ ೪೨

ಆವಾವಸ್ತ್ರದಿನೆಚ್ಚುಂ
ದೇವಾರಿ ಮುರಾರಿಯಂ ಗೆಲಲ್ ನೆಱೆಯದೆ ಘಂ
ಟಾವಳಿರವಾಟ್ಟಹಾಸ
ವ್ಯಾವೃತ[3]ಘನರುತಿಗಳಾಗೆ ಶಕ್ತಿಯೊಳಿಟ್ಟಂ ೪೩

ವ|| ಅಂತಾ ಶಕ್ತಿ ಭುವನತ್ರಯಸಂಹರಣಶಕ್ತಿಯಿಂ ವಿಸ್ಫುಲಿಂಗ ಜ್ವಾಲಾಸಹಸ್ರ ಮನುಗುಳುತ್ತುಂ ಗಗನದಿನೆಟ್ಟಿರೆ

ಆಗಲಿ! ಎನ್ನುತ್ತ ಬಹಳವಾಗಿ ಮೆಚ್ಚುವಂತೆಯೂ ಬ್ರಹ್ಮಪುತ್ರನಾದವನು ಆನಂದದಿಂದ ಆಡುವಂತೆಯೂ ಕೃಷ್ಣನರಕರ ಯುದ್ಧವು ನಡೆಯಿತು. ೪೦. ನರಕಾಸುರನೇ ಕೃಷ್ಣನೊಡನೆ ಯುದ್ಧವನ್ನು ಮಾಡುವನು, ನರಕಾಸುರನೊಡನೆ ಈ ಕೃಷ್ಣನೇ ಯುದ್ಧವನ್ನು ಮಾಡುವನು, ಎನ್ನುವಂತೆ ಒಬ್ಬರ ಅಸ್ತ್ರಕಲಾಸಾಮರ್ಥ್ಯವು ಮತ್ತೊಬ್ಬರ ಅಸ್ತ್ರಕಲಾಸಾಮರ್ಥ್ಯದೊಡನೆ ಸ್ಪರ್ಧಿಸುತ್ತಿರಲು ನರಕಹರಿಗಳು ಯುದ್ಧಮಾಡಿದರು. ೪೧. ಪದ್ಮನಾಭಕೃಷ್ಣನು, ಇಂದ್ರಾಗ್ನಿ ಯಮ ನಿಋತಿಗಳ-ಅಸ್ತ್ರಗಳ ಸಮೂಹದಿಂದ ಹೊಡೆಯಲು, ನರಕನು ವರುಣ ವಾಯು ಕುಬೇರ ಈಶಾನರ ಅಸ್ತ್ರಗಳಿಂದ ಹೊಡೆದನು. ೪೨. ಕೃಷ್ಣನರಕರ ಬಾಣಗಳು ಅಗ್ನಿಜ್ವಾಲೆ, ಉಲ್ಕಾಪಾತ, ರಾಹುಕೇತುಗಳನ್ನೂ ವಜ್ರಾಯುಧ ಅಥವಾ ಸಿಡಿಲನ್ನೂ ಜಯಿಸುವವುಗಳಾಗಿದ್ದು ಆಕಾಶದಲ್ಲಿ ಅವರಲ್ಲೊಬ್ಬರ ಬಾಣಗಳು ಮತ್ತೊಬ್ಬರ ಬಾಣಗಳನ್ನು ಬಿಡದೆ ಜಯಿಸಿದುವು. ೪೩. ನರಕನು ಯಾವಯಾವ ಅಸ್ತ್ರಗಳಿಂದ ಹೊಡೆದರೂ ಕೃಷ್ಣನನ್ನು ಜಯಿಸಲಾರದೆ, ಘಂಟೆಗಳ ಸಮೂಹದ ಧ್ವನಿಯ ಅತಿಆಡಂಬರವುಳ್ಳ ಶಕ್ತ್ಯಾಯುಧದಿಂದ ಹೊಡೆದನು. ವ|| ಹಾಗೆ ಆ ಶಕ್ತಿಯು ಮೂರುಲೋಕಗಳನ್ನು ಸಂಹರಿಸುವ ಶಕ್ತಿಯಿಂದ ಉರಿಕಿಡಿಗಳನ್ನು ಅಪರಿಮಿತವಾಗಿ ಉಗುಳುತ್ತ ಆಕಾಶದಿಂದ ಬಂದಿತು.

---

೧. ಸಾಮರ್ಥ್ಯಂ ಶಸ್ತ್ರಕಲಾ (ಖ) ೨. ನೆಗಟಿ (ಖ) ೩. ಘನವೀಥಿಯಾಗೆ (ಖ)

ಜ್ವಾಲಾ[1]ಸಟಾಳಿಗಳ್ಕಿ ನಿ
ಮೀಲಿಸಿದಿಂದ್ರನ ಸಹಸ್ರ[2]ಲೋಚನಮೆಸೆದು
ನ್ಮೀಲಿಸೆ ಮಹಾಸ್ತ್ರದಿಂ ವನ
ಮಾಲಾಧರನೆಚ್ಚು ಶಕ್ತಿಯಂ ಖಂಡಿಸಿದಂ ೪೪

ವ॥ ತದನಂತರಂ

ಪುಟ್ಟುವ ಗಾಳಿಯ ಬಟೆಯುನೆ
ಬಟ್ಟನೆ ಸುಟೆಗೊಳೆ ಮರುದ್ವಿಮಾನಪ್ರಕರಂ
ತಿಟ್ಟನೆ [3]ತಿರುಪಿ ನಿಶಾಚರ
ನಿಟ್ಟನದೊಂದುಗ್ರಗದೆಯಿನಸುರಾಂತಕನಂ ೪೫

ಕದಡುತ್ತುಂ ಘನಪಟಲಮ
ನುದಿರ್ಚುತುಂ ತಾರಕಂಗಳಂ ಬೆದಱಿಸುತುಂ
ತ್ರಿದಶೌಘಮನುಗ್ರಗ್ರಹ
ಮದೊಂದು ಬರ್ಪಂತೆ ಬಂದುದಾ ಗದೆ ನಭದಿಂ ೪೬

ಸುರಬೃಂದಕ್ಕಮರತ್ವಂ
ಸ್ಥಿರಾಶ್ವಯಂ ಧರೆಗೆ ಸಂದುದಿಂದೀ ಗದೆಯಂ
ಮುರಮಥನಂ ಭೇದಿಸಲೆನೆ
ಮುರರಿಪು ನಾನಾಸ್ತ್ರದಿಂದದಂ ಭೇದಿಸಿದಂ ೪೭

**ವ॥ ಅಂತು ಗದಾದಂಡಮುಂ ಪ್ರತಿಹತಮಾದುದಂ ಕಂಡು ಇನಿಸಾನುಮಂತರಂಗದೊಳ್ ಚಿಂತಿಸಿ ಮಹಾವರಾಹಸಂಸರ್ಗದಿಂ ಭೂಮಿದೇವತೆಗೆ ತಾನುದ್ಭವಿಸಿದಂದದ್ಭುತಭುಜಾವಷ್ಟಂಭನಾಗಿರ್ದ**

೪೪. ಆ ಜ್ವಾಲೆಯ ಜಡೆಗಳ ಸಮೂಹಕ್ಕೆ ಹೆದರಿ, ಇಂದ್ರನು ಮುಚ್ಚಿದ ಸಾವಿರ ಕಣ್ಣುಗಳನ್ನೂ ತೆರೆದು ಹೊಳೆಯಿಸುವಂತೆ ಕೃಷ್ಣನು ಮಹಾಸ್ತ್ರದಿಂದ ಶಕ್ತಿಯನ್ನು ಖಂಡಿಸಿದನು. ವ॥ ಅದಾದ ಮೇಲೆ ೪೫. ನರಕನು, ಅದೊಂದು ಉಗ್ರವಾದ ಗದೆಯನ್ನು ಅದರಿಂದ ಉಂಟಾಗುವ ಗಾಳಿಯ ದಾರಿಯಲ್ಲೇ ದೇವತೆಗಳ ವಿಮಾನಗಳು ಸುಂಟರಗಾಳಿಗೆ ಸಿಕ್ಕಿದಂತೆ ಸುತ್ತುವಂತಾಗಲು ತಿರುಗಿಸಿ, ಅದರಿಂದ ಕೃಷ್ಣನನ್ನು ಹೊಡೆದನು. ೪೬. ಆ ಗದೆಯು ಮೋಡಗಳ ಗುಂಪನ್ನು ಕದಡುತ್ತ, ನಕ್ಷತ್ರಗಳನ್ನು ಉದುರಿಸುತ್ತ, ದೇವತೆಗಳ ಸಮೂಹವನ್ನು ಬೆದರಿಸುತ್ತ, ಅದೊಂದು ಉಗ್ರಗ್ರಹವು ಬರುವಂತೆ ಆಕಾಶದಿಂದ ಬಂದಿತು. ೪೭. ಮುರಾಂತಕ ಕೃಷ್ಣನು ಈ ಗದೆಯನ್ನು ಭೇದಿಸಿದುದರಿಂದ ಸುರಸಮೂಹಕ್ಕೆ ಅಮರತ್ವವೂ (ಮರಣವಿಲ್ಲದಿರುವಿಕೆಯೂ) ಭೂಮಿಗೆ ಸ್ಥಿರಾ ಶಾಶ್ವತಳು ಎಂಬ ಹೆಸರೂ ಸಾರ್ಥಕವಾಗಿ ಸಂದಿತು ಎನ್ನುವಂತೆ ಅದನ್ನು ನಾನಾ ಅಸ್ತ್ರಗಳಿಂದ ಭೇದಿಸಿದನು. ವ॥ ಹಾಗೆ ತನ್ನ ಗದಾದಂಡವೂ ಪ್ರತಿಹತವಾದುದನ್ನು ಕಂಡು, ನರಕನು ಅಂತರಂಗದಲ್ಲಿ ಸ್ವಲ್ಪ ಚಿಂತಿಸಿದನು. ಮಹಾವರಾಹ ಸಂಸರ್ಗದಿಂದ ಭೂದೇವಿಗೆ ತಾನು ಜನಿಸಿದಾಗ

೧. ಸಟಾಳಿಗಳ್ನುನ್ಮೀಲಿತವಿಂದ್ರನ (ಖ) ೨. ಲೋಚನಮೆನಲುನ್ಮೀಲಿಸೆ (ಕಗ) ೩. ತಿರೆಯೆ (ಕಗ)

6

ತನ್ನಂ ನೋಡಿ ಪುತ್ರಮೋಹದಿಂ ಭೂದೇವಿ ನಿಜನಾಥನಂ ಪ್ರಾರ್ಥಿಸಿ ವರಂಬೇಡೆ ಸಮಸ್ತದಿವ್ಯಾಸ್ತ್ರ ಸಮುದಯಂ ಪ್ರತಿಹತಮಪ್ಪಂತುಟೊಂದು ಸಂಗ್ರಾಮಮಾದೊಡೆಲೆ ಭೌಮಾ ನೀನೀ ಮಂತ್ರದಿಂ ಶಸ್ತ್ರಾಸ್ತ್ರಮಂ ಪ್ರಯೋಗಿಸುವುದಂ ತಡಂ ಹರಿ ಹರ ಹಿರಣ್ಯಗರ್ಭಾದಿಗಳುಂ ಪ್ರತಿಹತಂ ಮಾಡಲಸಮರ್ಥ ರೆಂದು ತನಗಂದಾದಿವರಾಹನುಪದೇಶಂಗೆಯ್ದ ಮಂತ್ರಮಂ ನೆನೆವುದರ್ಕಿದುವೆ ಪದನೆಂದು ಮಂತ್ರದಿಂ ತ್ರಿಶೂಲಮನಭಿಮಂತ್ರಿತಂ ಮಾಡಿ ಭೌಮಂ ಭೀಮನಾದದಿಂದಾರ್ದಿಡೆ

ಮೃಢಭಾಳೇಕ್ಷಣವಹ್ನಿಯಂ ಕೆದಱುತುಂ ಸೂಸುತ್ತುಮೌರ್ವಾಗ್ನಿಯಂ
ಸಿಡಿಲಂ ಕಾಱುತುಮಂತು ಕೃಷ್ಣನಿಸುವಸ್ತ್ರಾಸಾರಮಂ ಪೀರುತುಂ
ಕಡುಪಿಂ ಬಂದುದು ತನ್ನ ಮೂಱುಮೊನೆಯಿಂ ಮೂಲೋಕಮಂ ಕಾಯಲುಂ
ಪಡೆಯಲ್ ನುಂಗಲುಮಲ್ತೆ ಸಾಲ್ದಪುದಿದೆಂಬಂತಾ ತ್ರಿಶೂಲಾಯುಧಂ ೩೮

ವ|| ಅಂತು ತ್ರಿಶೂಲಮಾಭೀಲತೆಯಿನಪ್ರತಿಹತಮಾಗಿ ಮುಟ್ಟವರೆ ವಿದಿತ ವೃತ್ತಾಂತ ಮನಸುರಾಂತಕಂ ತನ್ನುಪದೇಶಂಗೆಯ್ದ ಮಂತ್ರದ ಸಾಮರ್ಥ್ಯಮಂ ತಾಂ ನೋಡಲೆಂದು ಬರ್ಪಾ ತ್ರಿಶೂಲಮಂ ವಿಶೀರ್ಣಮುಖಮಾಗೆ ನುಂಗಿ ಕಾಲಕೂಟಮಂ ನುಂಗಿದ ನೀಲಲೋಹಿತನನನುಕರಿಸಿ ನಿಲ್ವುದುಂ

ಅಂಗುಳ್ ಮುಟ್ಟದೆ ಜಗಮಂ
ನುಂಗುವ ಲಯಕಾಲಕಾಲನಾರಭಟೆಯುಮೀ
ಭಂಗಿಯೆನೆ ರಥಮನಿೞಿದು ಭ
ರಂಗೆಯ್ದಿಳೆ ನಡುಗೆ ಭೌಮನೈದುವ ಪದದೊಳ್ ೩೯

ಅದ್ಭುತ ಭುಜಗರ್ವವುಳ್ಳವನಾಗಿದ್ದ ತನ್ನನ್ನು ನೋಡಿ, ಪುತ್ರಮೋಹದಿಂದ ಭೂದೇವಿ ತನ್ನ ನಾಥನನ್ನು ಪ್ರಾರ್ಥಿಸಿ, ವರವನ್ನು ಬೇಡಿದಳು. ಆಗ ಆದಿವರಾಹನು "ಎಲೇ ನರಕಾ, ಭೂಪುತ್ರ! ಸಮಸ್ತ ದಿವ್ಯಾಸ್ತ್ರ ಸಮೂಹವೂ ಪ್ರತಿಹತವಾಗುವಂತಹ ಯುದ್ಧವೊಂದು ಒದಗಿದರೆ, ಈ ಮಂತ್ರದಿಂದ ನೀನು ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಬೇಕು. ಅದನ್ನು ಹರಿಹರ ಬ್ರಹ್ಮಾದಿಗಳೂ ಪ್ರತಿಹತ ಮಾಡಲು ಅಸಮರ್ಥರು." ಎಂದು ತನಗೆ ಉಪದೇಶ ಮಾಡಿದ ಮಂತ್ರವನ್ನು ನೆನೆಯುವುದಕ್ಕೆ ಇದು ತಕ್ಕ ಸಮಯವೆಂದುಕೊಂಡನು. ನರಕಾಸುರನು ಆ ಮಂತ್ರದಿಂದ ತ್ರಿಶೂಲವನ್ನು ಅಭಿಮಂತ್ರಿಸಿ, ಭಯಂಕರ ಧ್ವನಿಯಿಂದ ಗರ್ಜಿಸಿ ಹೊಡೆದನು. ೩೮. ಆ ತ್ರಿಶೂಲಾಯುಧವು ರುದ್ರನ ಹಣೆಗಣ್ಣಿನ ಅಗ್ನಿಯನ್ನು ಹರಡುತ್ತಲೂ, ಔರ್ವಾಗ್ನಿಯನ್ನು ಚೆಲ್ಲುತ್ತಲೂ ಸಿಡಿಲನ್ನು ಕಾರುತ್ತಲೂ ತನ್ನ ಮೂರು ಮೊನೆಗಳಿಂದ ಮೂರು ಲೋಕಗಳನ್ನೂ ಸೃಷ್ಟಿಸುವುದಕ್ಕೂ ರಕ್ಷಿಸುವುದಕ್ಕೂ ನುಂಗುವುದಕ್ಕೂ ತಕ್ಕುದಾದ ಸಾಮರ್ಥ್ಯವನ್ನು ಪಡೆದಿರುವುದಲ್ಲವೆ? ಎಂಬಂತೆ ಕ್ರೌರ್ಯದಿಂದ ಕೃಷ್ಣನು ಸುರಿಸುವ ಅಸ್ತ್ರಧಾರಾವೃಷ್ಟಿಯನ್ನು ಹೀರುತ್ತ ಬಂದಿತು. ವ|| ಹಾಗೆ ತ್ರಿಶೂಲವು ಅತಿ ಭಯಂಕರವಾಗಿ ತಡೆಯಿಲ್ಲದೆ ಸಮೀಪಿಸಿ ಬಂದಿತು. ಹಿಂದಿನ ವೃತ್ತಾಂತವನ್ನು ಜ್ಞಾಪಿಸಿ ಕೊಂಡ ಕೃಷ್ಣನು ತಾನು ಉಪದೇಶಿಸಿದ ಮಂತ್ರದ ಸಾಮರ್ಥ್ಯವನ್ನು ತಾನು ನೋಡಬೇಕೆಂದು ತನ್ನೆಡೆಗೆ ಬರುತ್ತಿರುವ ಆ ತ್ರಿಶೂಲವನ್ನು ಅದರ ತುದಿಯು ಸೀಳಿಹೋಗುವಂತೆ ನುಂಗಿ ಕಾಲಕೂಟವನ್ನು ನುಂಗಿದ ಈಶ್ವರನನ್ನು ಹೋಲುತ್ತ ನಿಂತನು. ೩೯. ಕಿರುನಾಲಗೆಗೂ ಮುಟ್ಟದಂತೆ ಜಗತ್ತನ್ನು ನುಂಗುವ ಪ್ರಳಯಕಾಲದ ಯಮನ ಆರ್ಭಟವು ಈ ರೀತಿಯಾದುದು ಎನ್ನುವಂತೆ ನರಕನು ರಥದಿಂದ ಇಳಿದು ಭೂಮಿಯು ನಡುಗುವಂತೆ

ಮರುತಂ ಪಿಳ್ಕು ಖಗೇಶ್ವರಂ ಗಜೆ ಸುಪರ್ವರ್ [1]ಪರ್ವಸಂಘ ಫಣಾ
ಧರರಾಜಂ ಕಣೆ ಹವ್ಯವಾಹನಲಗಾದಿತ್ಯಂ ಪ್ರಕಾಶಂ ವಸುಂ
ಧರೆ ಬಿಣ್ಪಾದ ಸಮಸ್ತ [2]ಶಕ್ತಿಮಯದಿಂ ಬ್ರಹ್ಮಾಸ್ತ್ರದಿಂದಂಬುಜೋ
ದರನೆಚ್ಚಂ ಪಱಿವಂತು ಭೌಮಶಿರಮಂ ಮೌಳಿಪ್ರಭಾಸ್ಫಾರಮಂ ೫೦

ವ|| ಅಂತು ವಿಜಯೋತ್ಸವಮನಪ್ಪುಕೆಯ್ದು

ಕುಸುಮಾಸಾರಂ ಸುರೋದ್ಯಾನದಿನೆಱಗೆ ವಿಯದ್ವಾಹಿನೀಶೀಕರಸ್ಪಂ
ದಿ ಸಮೀರಂ ತೀಡೆ ದೇವಾನಕಘನರವದಿಂದಾಕುಭೃತ್ಕೂಟದೊಳ್ ನ
ರ್ತಿಸೆ ವೀರಶ್ರೀಮಯೂರಾಂಗನೆ ಜಿತರಣದೊಳ್ ಭೂತವೇತಾಳಕೇಳೀ
ರಸತುಷ್ಟಂ ಕೃಷ್ಣನಿರ್ದಂ ನೆಲಸೆ ನಿಜಧನುಃಕೋಟಿಯೊಳ್ ವಾಮಹಸ್ತಂ ೫೧

ವ|| ಅನ್ನೆಗಂ ಭೌಮಾನ್ವಯಾಗತಪ್ರಧಾನಪುರುಷಂ ಬಂದು ಪುರುಷೋತ್ತಮನಂ ಪ್ರಾಗ್ಜ್ಯೋತಿಷಪುರಕ್ಕೊಡಗೊಂಡು ಪೋಗಿ ದೇವಾಂಬಿಕೆಯ ದಿವ್ಯಕುಂಡಲಮಂ ಕೊಟ್ಟು ಮತ್ತಂ

ಬಳಿವಿಧ್ವಂಸಿಗೆ ಕೊಟ್ಟನಾಹವರಸಪ್ರಸ್ಯಂದನಸ್ಯಂದನಂ
ಗಳನಂಗಚ್ಛವಿಸತ್ವರೂಪಶುಭಚೇಷ್ಟಾವಾಹವಾಹಂಗಳಂ
ಜಳದಶ್ಯಾಮಸದಾನಗಂಡರದ ನಿರ್ಭಿನ್ನಾಗನಾಗಂಗಳಂ
ವಿಳಸದ್ರತ್ನಗಣಪ್ರಭಾಪರಿಕರವ್ಯಾಕೋಶಕೋಶಂಗಳಂ ೫೨

ತ್ವರೆಯಿಂದ ಕೃಷ್ಣನೆಡೆಗೆ ಬರುತ್ತಿದ್ದನು. ಆಗ ೫೦. ಕೃಷ್ಣನು, ಗಾಳಿಯೇ ಪುಂಖ, ಗರುಡನೇ ಗರಿ, ದೇವತೆಗಳು ಬಾಣಗಳ ಕೋಲಿನ ಗೆಣ್ಣುಗಳು, ಆದಿಶೇಷನೇ ಬಾಣ, ಅಗ್ನಿಯೇ ಅಲಗು, ಸೂರ್ಯನೇ ಹೊಳಪು, ಭೂಮಿಯೇ ಭಾರ ಆಗಿರುವ ಸಮಸ್ತ ಶಕ್ತಿಮಯವಾದ ಬ್ರಹ್ಮಾಸ್ತ್ರದಿಂದ ಕಿರೀಟದ ಕಾಂತಿಯಿಂದ ಶೋಭಿಸುತ್ತಿದ್ದ ನರಕನ ತಲೆಯು ಕತ್ತರಿಸಿ ಹೋಗುವಂತೆ ಹೊಡೆದನು. ವ|| ಹಾಗೆ ವಿಜಯೋತ್ಸವವನ್ನು ಪಡೆದು, ೫೧. ಜಯವನ್ನು ಪಡೆದ ರಣರಂಗದಲ್ಲಿ ಭೂತಭೇತಾಳ ಕ್ರೀಡಾರಸದಿಂದ ತೃಪ್ತನಾದ ಕೃಷ್ಣನು ತನ್ನ ಬಿಲ್ಲಿನ ತುದಿಯನ್ನು ಎಡಗಯ್ಯಿಂದ ಹಿಡಿದುಕೊಂಡು ನಿಂತಿದ್ದನು. ಆಗ ದೇವನಂದನ ವನದಿಂದ ಹೂಮಳೆ ಸುರಿಯಿತು. ದೇವಗಂಗಾನದಿಯ ನೀರಿನ ತುಂತುರುಹನಿಯನ್ನು ಚೆಲ್ಲುವ ಗಾಳಿ ಬೀಸಿತು. ದೇವತೆಗಳ ಪಟಹವಾದ್ಯಧ್ವನಿಯಿಂದ ಪರ್ವತಶಿಖರದಲ್ಲಿ ವೀರಶ್ರೀಯೆಂಬ ಮಯೂರಾಂಗನೆ ನರ್ತಿಸಿದಳು. ವ|| ಅಷ್ಟರಲ್ಲಿ ನರಕನ ವಂಶಾನುಗತವಾಗಿ ಬಂದ ಪ್ರಧಾನಪುರುಷನು ಆಗಮಿಸಿ, ಪುರುಷೋತ್ತಮ ಕೃಷ್ಣನನ್ನು ಪ್ರಾಗ್ಜ್ಯೋತಿಷಪುರಕ್ಕೆ ಸಂಗಡ ಕರೆದುಕೊಂಡು ಹೋಗಿ ದೇವಮಾತೆ ಅದಿತಿಯ ದಿವ್ಯಕುಂಡಲವನ್ನು ಅವನಿಗೆ ಕೊಟ್ಟನು ಮತ್ತು ೫೨. ಆ ಬಲಿವಿಧ್ವಂಸಿಗೆ ಯುದ್ಧರಸವನ್ನು ಸುರಿಸುವ ರಥಗಳನ್ನು ದೇಹಕಾಂತಿ, ಬಲ, ರೂಪ ಶುಭಕರವಾದ ಅಂಗಚಲನೆಗಳುಳ್ಳ ಅಶ್ವವಾಹನಗಳನ್ನೂ,

೧. ಪುಂಖವಂತಾ (ಕಗ) ೨. ಶಕ್ತಿಯಮರ್ದ (ಖ)

ವ|| ಆ ಮನೋಹರಪದಾರ್ಥಸಾರ್ಥಂಗಳಂ ದ್ವಾರಾವತಿಗೆ ಕಳಿಪಿ ರೋಹಣಗಿರಿ [೧]ಗುಹಾಪವರಕಂಗಳೊಳ್ ನರಕಂ ಸೆಱೆಗೆಯ್ದ ಷೋಡಶಸಹಸ್ರದಿವ್ಯಕನೆಯರಿರ್ದಲ್ಲಿಗಾಸನ್ನವರ್ತಿಯಾಗಿ

ಷೋಡಶಸಹಸ್ರಶಶಿಗಳ್
ಮೂಡಿದ ನಭಮೆನೆ ಗುಹಾಗ್ರಗತಮುಖತತಿಯಿಂ
ಕೂಡಿ ಮಣಿಶೈಲಮೆಸೆದಿರೆ
ನೋಡಿದರಚ್ಯುತನನಖಿಲಸುರಕನ್ಯಕೆಯರ್ ೫೩

ವ|| ಅಂತು ಗುಹಾಂತರ್ನಿಗೂಢಕೋಮಲಾಂಗಿಯರೇಕಾಂಗಸಾಹಸಖ್ಯಾತಿಗನುರೂಪಮಾದ ತನ್ನ ರೂಪಸೌಂದರ್ಯಮಂ ನೋಡಿ [೨]ಸ್ವಾದಸಾವೇಗವೇಪಥು ಸ್ವೇದಪುಳಕಿತೆಯರಾದುದಂ ತದೀಯವದನವಿಭ್ರಮದಿನಱಿದು ಮದನಮೌಹೂರ್ತಿಕನಿತ್ತ ಲಗ್ನದೊಳ್ ಸುರಸಮಾಜಂ ಬಾಜಿಸುವ ಬದ್ಧವಣಂಗಳೊಳಂ ಕಲ್ಪಪಾದಪದ ಪೂವಂಟೆಯು ಸೇಸೆಯೊಳಂ ಮದುವೆನೆಱೆದು ರೋಹಣನಿವಾಸಿನಿಯರನೊಡಗೊಂಡು ಪೋಗಲುಜ್ಜುಗಂಗೆಯ್ದು

ರೋಹಣಶೈಲಂಬೆರಸಾ
ರೋಹಣಮಂ ಮಾಡೆ ಗರುಡನಂ ಹರಿ ಗರುಡಂ
ವೈಹಾಯಸಗತಿಚತುರಂ
ವೈಹಾಯಸಪಥದಿನೈದಿದಂ ಸುರಪುರಮಂ ೫೪

ಮೋಡದಂತೆ ಕಪ್ಪಾದ ದೇಹವುಳ್ಳವೂ, ಮದೋದಕದಿಂದ ಕೂಡಿದ ಕಪೋಲವುಳ್ಳವೂ, ತಮ್ಮ ದಂತಗಳಿಂದ ಬೆಟ್ಟಗಳನ್ನು ಮರಗಳನ್ನು ಈಡಿರಿದುವೂ ಆದ ಆನೆಗಳನ್ನೂ ಹೊಳೆಯುವ ರತ್ನಸಮೂಹದ ಪ್ರಭೆಯಿಂದ ಸ್ಫುಟವಾಗಿರುವ ಭಂಡಾರಗಳನ್ನೂ ಕೊಟ್ಟನು. ವ|| ಕೃಷ್ಣನು ಆ ಮನೋಹರಪದಾರ್ಥಗಳ ಸಮೂಹವನ್ನು ದ್ವಾರಾವತಿಗೆ ಕಳುಹಿಸಿ, ರೋಹಣಗಿರಿಯ ಗುಹೆಯ ಕೋಣೆಗಳಲ್ಲಿ ನರಕನು ಸೆರೆಯಲ್ಲಿಟ್ಟಿದ್ದ ಹದಿನಾರುಸಾವಿರ ಜನರ ದಿವ್ಯಕನ್ಯೆಯರಿದ್ದಲ್ಲಿಗೆ ಹೋದನು. ೫೩. ಆ ಪುಣ್ಯಶೈಲವು ಅದರ ಗುಹೆಗಳ ಬಾಗಿಲ ಮೇಲುಗಡೆಯಲ್ಲಿ ಕಾಣಿಸುವ ಅವರ ಮುಖಗಳ ಸಮೂಹದಿಂದ ಕೂಡಿ, ಹದಿನಾರುಸಾವಿರ ಚಂದ್ರರು ಉದಿಸಿದ ಆಕಾಶದಂತೆ ಹೊಳೆಯುತ್ತಿರಲು ಆ ದೇವಕನ್ಯೆಯರೆಲ್ಲರೂ ಆ ಕೃಷ್ಣನನ್ನು ನೋಡಿದರು. ವ|| ಹಾಗೆ ಗುಹೆಯೊಳಗೆ ಗುಟ್ಟಾಗಿದ್ದ ಕೋಮಲಾಂಗಿಯರು ಏಕಾಕಿ ಸಾಹಸ ಖ್ಯಾತಿಗನುರೂಪವಾದ ತನ್ನ ಸೌಂದರ್ಯವನ್ನು ನೋಡಿ, ಭಯೋದ್ವೇಗಕಂಪನವುಳ್ಳವರೂ ಬೆವರಿ ನವಿರೆದ್ದವರೂ ಆದುದನ್ನು ಗಾಬರಿಗೊಂಡ ಅವರ ಮುಖಶೋಭೆಯಿಂದ ಕೃಷ್ಣನು ಅರಿತನು. ಆತನು ಮನ್ಮಥ ಮೌಹೂರ್ತಿಕನು ತಿಳಿಸಿದ ಲಗ್ನದಲ್ಲಿ, ದೇವಸಮೂಹವು ಬಾಜಿಸುವ ಮಂಗಳವಾದ್ಯಗಳಲ್ಲಿ ಕಲ್ಪವೃಕ್ಷದ ಪುಷ್ಪವೃಷ್ಟಿಯ ಶೇಷಾಕ್ಷತೆಯಲ್ಲಿ ಆ ಸ್ತ್ರೀಯರನ್ನು ಮದುವೆಯಾಗಿ, ರೋಹಣ ನಿವಾಸಿನಿಯರಾಗಿದ್ದ ಅವರನ್ನು ಒಡನೆ ಕರೆದುಕೊಂಡು ಹೋಗಲು ಉದ್ಯೋಗಿಸಿದನು. ೫೪. ಆ ಕೃಷ್ಣನು ರೋಹಣಶೈಲದೊಡನೆ ಗರುಡನನ್ನು ಏರಿದನು. ಆಕಾಶಗಮನದಲ್ಲಿ ಅತಿಚತುರನಾದ ಗರುಡನು ಗಗನಮಾರ್ಗದಿಂದ ಅಮರಾವತಿಗೆ ಹೋದನು.

---

೧. ಗುಹಾಭ್ಯಂತರದೊಳ್ (ಖ) ೨. ಸಾಧ್ವಸವೇಗಪೃಥು (ಕಗ)

ಶತಮುಖನಿನಚ್ಯುತಂ ಸ
ತ್ಕೃತಿಯಂ ತಳೆದದಿತಿಗಿತ್ತು ಕುಂಡಲಮಂ ಸ
ನ್ನತನಾಗುತ್ತಿರಲೆಂದಳ್
ನತನಾಗದಿರೆಮಗೆ ನೀಂ ಜಗದ್ಗುರುವಲ್ತೇ ೫೫

ಅಱಿಪಿ ನಿಜಾದಿಮಧ್ಯ ನಿಧನೇತರವೃತ್ತಿಯನೊರ್ಮೆ ಮತ್ತದಂ
ಮಱೆಯಿಸಿ ದೇವಕೀತನಯನೆಂದೆನಿಸಿರ್ದು ವಯೋಧಿಕರ್ಗೆ ನೀ
ನೆಱಗಿ ಸಮಾನರೆಂದು [1]ಕೆಲರೊಲ್ಲದರಂ ಶರವರ್ಷದಿಂದವಂ
ದೆಱಗಿಸಿ ಧರ್ಮಜಾದ್ಯರನೆ ಮೋಹಿಪುದೆಮ್ಮನದೇಕೆ ಮೋಹಿಪೈ ೫೬

ಪರಮಾಣುಸಮಂ ಸ್ಥೂಲಂ
ಪುರಾಣನಜರಂ ಸಮೀಪಗಂ ದೂರಸ್ಥಂ
ನಿರವಯುವಂ ಸಾಕಾರಂ
ಹರಿ ನೀನೇಂ ಪೊಗಟ್ವರಳವೆ ನಿನ್ನ ಮಹತ್ವಂ ೫೭

ಮುಕ್ತಿಪದಗ್ರಹಣ ಚಕ್ರವಾಳಗದ್ಯಂ ॥

ಜಯಸಕಳ ಕಳಂಕವಿಗತಪ್ರಭಾವ, ಭಾವೈಕಗಮ್ಯಮಾನ, ಮಾನಸಾದಿಪ್ರವರ್ತನಾಧಾರ, ಧಾರಣಾದಿಯೋಗಮಾರ್ಗಪ್ರತ್ಯಕ್ಷ, ಅಕ್ಷಯಾಕಾರ, ಕಾರಕಪದವೀಧುರಂಧರ, ಧರಾದಿ ಪ್ರಪಂಚನಿಲಯಲಯೋತ್ಪತ್ತಿರಹಿತ, ಹಿತೋಪದೇಶಾರ್ಥಕೃತಚತುರ್ವೇದ, ವೇದನಾಪ್ರಮೋದಯ ಮೀಂದ್ರಹೃದಯಾವಾಸ, ವಾಸರೇಶಪ್ರಮುಖನಿಖಿಲಕಾಲಚಕ್ರ, ಚಕ್ರಪ್ರವರ್ತನಾನುಶಾಸನ,

೫೫. ಕೃಷ್ಣನು ಇಂದ್ರನಿಂದ ಸತ್ಕಾರವನ್ನು ಪಡೆದು, ಅದಿತಿದೇವಿಗೆ ಕುಂಡಲವನ್ನು ಕೊಟ್ಟು, ಅವಳನ್ನು ವಂದಿಸುವುದಕ್ಕೆ ಹೋಗಲು, ಅದಿತಿಯು "ನನಗೆ ನೀನು ವಂದನೆ ಮಾಡಬೇಡ. ನೀನು ಜಗದ್ಗುರುವಲ್ಲವೆ!" ಎಂದಳು. ೫೬. "ನೀನು ನಿನ್ನ ಆದಿಮಧ್ಯಾಂತರಹಿತ ವೃತ್ತಿಯನ್ನು ಒಂದಾವರ್ತಿ ತಿಳಿಸಿ, ಮತ್ತೆ ಅದನ್ನು ಮರೆಯಿಸಿ, ದೇವಕೀತನಯನೆನಿಸಿ ಕೊಂಡು, ವಯಸ್ಸಿನಲ್ಲಿ ಹಿರಿಯರಾದವರಿಗೆ ವಂದಿಸುತ್ತಿರು. ಸಮಾನರೆಂದು ನಿನಗೆ ಎರಗಲೊಲ್ಲದ ಕೆಲವರನ್ನು ಬಾಣವೃಷ್ಟಿಯಿಂದ ಎರಗಿಸಿ, ಧರ್ಮರಾಯನೇ ಮೊದಲಾದವರನ್ನು ಮೋಹಗೊಳಿಸು. ನಮ್ಮನ್ನೇಕೆ ಮೋಹಗೊಳಿಸುವೆ! ೫೭. "ಹರೀ! ನೀನು ಪರಮಾಣು ಸಮನು- ಸ್ಥೂಲನು. ಪುರಾಣನು-ಮುಪ್ಪಿಲ್ಲದವನು ಸಮೀಪದಲ್ಲಿರುವವನು - ದೂರದಲ್ಲಿರುವವನು ನಿರವಯವನು ನಿರಾಕಾರನು-ಸಾಕಾರನು. ನಿನ್ನ ಮಹತ್ತ್ವವು ಹೊಗಳುವವರಿಗೆ ಸಾಧ್ಯವೇ! (ಚಕ್ರವಾಳ ಗದ್ಯ) ಸಕಲ ಕಳಂಕಗಳಿಂದಲೂ ರಹಿತವಾದ ಪ್ರಭಾವವುಳ್ಳವನೇ ಸುಸ್ವಭಾವವೊಂದಕ್ಕೆ ದೊರೆಯುವವನೆ, ಮನಸ್ಸೇ ಮೊದಲಾದ ಅಂತಃಕರಣಗಳ ಪ್ರವರ್ತನೆಗೆ ಆಧಾರ, ಧಾರಣವೇ ಮೊದಲಾದ ಅಷ್ಟಾಂಗ ಯೋಗಮಾರ್ಗ, ಪ್ರತ್ಯಕ್ಷ, ಅಕ್ಷಯಾಕಾರ, ಕಾರಕ ಪದವೀಧುರಂಧರ, ಧರಾದಿ ಪ್ರಪಂಚ ನಿಲಯ, ಲಯೋತ್ಪತ್ತಿರಹಿತ, ಹಿತೋಪದೇಶಾರ್ಥವಾಗಿ ಕೃತಚತುರ್ವೇದ, ವೇದನೆಯಿಂದ

---

೧. ಕೆಲರೊಳ್ ಸಮವರ್ಷಜನೆಂಬ ಭಾವದಿಂ (ಕಗ)

**ಸನಕಸನಂದಸನತ್ಕುಮಾರನಾರದಪ್ರಭೃತಿ ತತ್ತ್ವನಿಷ್ಠಾಪರ ವಿಬೋಧದೃಷ್ಟಿಗೋಚರ, ಚರಾಚರಪ್ರಕೃತಿಮಿಶ್ರಿತಗುಣತ್ರಯ, ತ್ರಯೀತರ್ಕಪ್ರವಚನಾತರ್ಕ್ಯಮಹಿಮ ; ಹಿಮಾಹಿಮ ವ್ಯತಿರಿಕ್ತಪರಂಜ್ಯೋತಿಸ್ಸ್ವರೂಪ, ರೂಪ ರಸ ಗಂಧ ಸ್ಪರ್ಶ ಶಬ್ದಸ್ವಭಾವ, ಭಾವ ಸುಖಾನುಭವ ವನಸಮರ್ಥ ಅರ್ಥಪ್ರಕಾಶತತ್ಪರ, ಪರಾಪರಬ್ರಹ್ಮ ನಿಶ್ಚಿತಚಿದಾಕಾರ, ಕಾರಣ ಸ್ವೀಕೃತಲೀಲಾಸಂಹನನ, ಹನನಜನನಾವನಕರಣ ತ್ರಿಮೂರ್ತಿಸಂಧಾರಣ, ರಣಪರಾಜಿತಸರ್ವಗೀರ್ವಾಣ ರಕ್ಷಾರ್ಥಸಂಧಾರಿತ ದಶಾವತಾರ, ತಾರಾಧೀಶ ಮಂಡಲಾಭಿಮಾನಾಪಹ ಸಿತಪಾಂಚಜನ್ಯಜನ್ಯವಿಜಯ ಭಾಮಿನೀಭ್ರೂಲತಾಯಿತಶಾರ್ಙ್ಗಚಾಪ, ಚಾಪಳನಿಶಾಟಚಪೇಟಕೋದ್ದಂಡ ಕಾಲದಂಡಾಯ ಮಾನಘನಗದಾದಂಡ, ದಂಡಧರದರ್ಪಿತದಿತಿ ನುಜಸಂವರ್ತ ಸಮಯಮಾರ್ತಂಡಬಿಂಬಾಡಂಬರ ವಿಭಾಸಮಾನ ಸುದರ್ಶನಚಕ್ರ, ಚಕ್ರವರ್ತಿಪದವೀಮದಾತಿವರ್ತಿ ಕಾರ್ತವೀರ್ಯಭುಜ ಸಹಸ್ರವಲ್ಲೀವನಲವಿತ್ರ, ವಿತ್ರಾಸಿತತ್ರಿದಶಬಲಬಲೀಂದ್ರ ಬಂಧನಕರ, ಕರನಖ ಮುಖವಿದಾರಿತಾ ಸುರವರೇಣ್ಯ ಹಿರಣ್ಯಕಶಿಪು ವಿಪುಲವಕ್ಷೋರಂಗ, ರಂಗತ್ತರಂಗಮಕರಾಕರಬೃಹಜ್ಜಲನಿಧಿನಿಮಜ್ಜದ್ವೇದ ಪುಸ್ತಕಸ್ತೇನ ದುರ್ದಮತಮೋದೈತ್ಯಮತಭಂಜನ, ಜನಕ್ಷೋಭದಕ್ಷ ಹಿರಣ್ಯಾಕ್ಷವಿನಾಶ, ನಾಶವಿದೂರಿತಾಮೃತಾಶ ನಾಶಕರ ಲಂಕೇಶ್ವರವಿನಾಶಪ್ರಧಾನ, ದಾನವ ವಿಪ್ರಾಕಾರಕೂಟಕೈಟಭ ಕಬಂಧ ನಟನಲೀಲಾವಲೋಕ, ಲೋಕಾಶ್ಚರ್ಯಶೌರ್ಯ ಬಾಲಕೇಳೀ ಚಾಳಿತಕಾಳೀಯಮಹಾ ಪನ್ನಗ, ನಗವೈರಿವರ್ಷಿತವಾರಿಧಾರಾನಿವಾರಣೋದ್ಧಾರಿತ ಗೋವರ್ಧನಾಭೀಲಕುತ್ಕೀಲ, ಕೀಲಾಲಸಲಿಲಪೂರೋದ್ಗಾರಿತಕುವಲಯಾಪೀಡ ಪೀಡನಾಪಾತಿತ ಪೂತನಾಪಘನ ಘನದೃಢೋರು**

ಪ್ರಮೋದಿಸುವ ಯೋಗೀಂದ್ರರ ಹೃದಯದಲ್ಲಿ ವಾಸಿಸುವವನೇ, ಸೂರ್ಯನೇ ಮೊದಲಾದ ಸಕಲಕಾಲ ಚಕ್ರರೂಪನೇ, ರಾಷ್ಟ್ರಗನ ಮತ್ತು ನಿನ್ನ ಚಕ್ರದ ಪ್ರವರ್ತನೆಗೆ ಬೇಕಾದ ನಿಯಮ ಮಾಡಿರುವವನೇ, ಸನಕಸನಂದನ ಸನತ್ಕುಮಾರ ನಾರದರೇ ಮೊದಲಾದ ತತ್ತ್ವನಿಷ್ಠಾಸಕ್ತರ ಜ್ಞಾನ ದೃಷ್ಟಿಗೋಚರ, ಚರಾಚರಾತ್ಮಕವಾದ ಪ್ರಕೃತಿಯಿಂದ ಮಿಶ್ರಿತ ಗುಣತ್ರಯ, ವೇದತ್ರಯ ತರ್ಕಪ್ರವಚನಗಳಿಂದ ಊಹಿಸಲಾಗದ ಮಹಿಮೆಯುಳ್ಳವನೇ ಶೀತೋಷ್ಣ ರಹಿತವಾದ ಪರಂಜ್ಯೋತಿಸ್ಸ್ವರೂಪ, ರೂಪರಸಗಂಧ ಸ್ಪರ್ಶಶಬ್ದ ಸ್ವಭಾವ, ಭಾವಸುಖಾನುಭವದಲ್ಲಿ ಸಮರ್ಥ, ಅರ್ಥಪ್ರಕಾಶತತ್ಪರ, ಪರಾಪರಬ್ರಹ್ಮವೆಂದು ನಿಶ್ಚಯಿಸಿದ ಜ್ಞಾನಾಕಾರ, ಕಾರಣಕ್ಕಾಗಿ ಸ್ವೀಕರಿಸಿದ, ಲೀಲಾಮೂರ್ತಿಯೇ ಹನನಜನನ ಸೃಷ್ಟಿಸ್ಥಿತಿಲಯ ಕಾರಣವಾಗಿ ತ್ರಿಮೂರ್ತಿಗಳನ್ನು ಧರಿಸಿದವನೇ, ರಣದಲ್ಲಿ ಸೋಲಿಸಲ್ಪಟ್ಟ ಸರ್ವದೇವತೆಗಳ ರಕ್ಷಣಾರ್ಥವಾಗಿ ದಶಾವತಾರಗಳನ್ನು ಧರಿಸಿದವನೇ, ಚಂದ್ರಮಂಡಲ ಗರ್ವವನ್ನು ಅಪಹರಿಸಿರುವ ಪಾಂಚಜನ್ಯವುಳ್ಳವನೇ, ಉದಯಿಸುವ ವಿಜಯಲಕ್ಷ್ಮಿಯ ಬಳ್ಳಿಹುಬ್ಬಿನಂತೆ ಇರುವ ಶಾರ್ಙ್ಗವೆಂಬ ಬಿಲ್ಲನ್ನುಳ್ಳವನೇ, ಚಪಲರಾದ ರಾಕ್ಷಸರ ಕೆನ್ನೆಗೆ ಹೊಡೆಯುವ ಉದ್ದಂಡ ಯಮದಂಡ ಗದಾದಂಡಧರ, ದಂಡಧರನಂತೆ ದರ್ಪವುಳ್ಳ ದೈತ್ಯರಿಗೆ ಪ್ರಳಯಕಾಲದ ಸೂರ್ಯಬಿಂಬದ ಆಡಂಬರವನ್ನು ತೋರಿಸುತ್ತಾ ಹೊಳೆಯುವ ಸುದರ್ಶನ ಚಕ್ರವನ್ನು ಧರಿಸಿರುವವನೇ, ಚಕ್ರವರ್ತಿಪದವಿಯ ಮದದಿಂದ (ನ್ಯಾಯ ಧರ್ಮಾದಿಗಳನ್ನು) ಅತಿಕ್ರಮಿಸಿ ನಡೆಯುತ್ತಿದ್ದ ಕಾರ್ತವೀರ್ಯಾರ್ಜುನನ ಸಹಸ್ರಭುಜಗಳೆಂಬ ಬಳ್ಳಿಗಳ ವನವನ್ನು ಕೊಯ್ದ ಕುಡುಗೋಲೇ, ದೇವಬಲವನ್ನು ಪೂರ್ಣವಾಗಿ ಹೆದರಿಸಿ, ನಡುಗಿಸಿದ ಬಲೀಂದ್ರನ ಬಂಧನಕರ, ರಾಕ್ಷಸವರೇಣ್ಯನಾದ ಹಿರಣ್ಯಕಶಿಪುವಿನ ವಿಸ್ತಾರವಾದ

ಘೋಕ್ಕರಣಪಾತನೋನ್ಮೂಲಿತನಿಯುದ್ಧಪ್ರಸಿದ್ಧ ಚಾಣೂರಮುಷ್ಟಿಕಾಸುರ, ಸುರಸೈನ್ಯವಳಯಗಳಪಾಶ ಕೇಶಿಧೇನುಕನಿಧನೋಚ್ಛೃಂಖಲ, ಖಲಕುಲೋತ್ತಂಸಕಂಸಾಸುರ ಪ್ರಧ್ವಂಸಪ್ರವೀಣ, ವೀಣಾವೇಣುವಾದನ ಚತುರ, ಚತುರತಾವಾಯು ಗೋಪೀಜನಮನೋರಮಣ, ರಮಣೀಯಪೀತವಾಸ, ವಾಸವಾರ್ಚಿತಚರಣಕಮಲ, ಕಮಲಾಂಗನಾವರ, ವರಕೌಸ್ತುಭಾಲಂಕೃತ ಕೃತಜಗತ್ತ್ರಯಾನಂದ, ನಂದಗೋಪಮನಃಕುಮುದಶರಚ್ಚಂದ್ರ, ಚಂದ್ರಕಾಪೀಡ ರೂಢಗೋಪಾಲ ಶ್ರೀಭಗವದ್ವಾಸುದೇವ ನಮಸ್ತೇ ನಮಸ್ತೇ

ವ|| ಎಂದದಿತಿದೇವಿ ಸ್ತುತಿಗೆಯ್ದು ಕಳಿಪೆ ವಿಹಂಗಪತಿಪತಾಕನಾಕಾಶದಿಂ ದ್ವಾರಾವತಿಗವತರಿಸಿದಾಗಳ್

ಹೃದಯರಂಗವನ್ನು ಕೈಯುಗುರ ತುದಿಯಿಂದಲೇ ಸೀಳಿದವನೇ, ಕುಣಿಯುವ ಅಲೆಗಳುಳ್ಳುದೂ ಮೊಸಳೆಗಳ ನೆಲೆಯೂ ಆದ ಅಗಾಧಸಮುದ್ರದಲ್ಲಿ ತಾನು ಕದ್ದ ವೇದಪುಸ್ತಕಗಳೊಡನೆ ಮುಳುಗಿದ್ದ, ಅಡಗಿಸಲು ಕಷ್ಟನಾದ ತಮೋದೈತ್ಯನ ಮದವನ್ನು ಭಂಜಿಸಿದವನೇ, ಜನರನ್ನು ಕ್ಷೋಭೆಗೊಳಿಸುವುದರಲ್ಲಿ ದಕ್ಷನಾದ ಹಿರಣ್ಯಾಕ್ಷನನ್ನು ವಿನಾಶಗೊಳಿಸಿದವನೇ, ನಾಶರಹಿತರಾದ ದೇವತೆಗಳನ್ನು ನಾಶಪಡಿಸುವುದರಲ್ಲಿದ್ದ ರಾವಣನನ್ನು ನಾಶಪಡಿಸುವುದಾಗಿ ವಾಗ್ದಾನ ಮಾಡಿದವನೇ, ರಾಕ್ಷಸ ಬ್ರಾಹ್ಮಣ ವೇಷಧಾರಿಯಾದ ಕಪಟ ಕೈಟಭಾಸುರನ ಮುಂಡದ ನಟನೆಯ ಲೀಲೆಯನ್ನು ನೋಡಿದವನೇ, ಲೋಕಾಶ್ಚರ್ಯಕರ ಶೌರ್ಯದಿಂದ ಬಾಲಕ್ರೀಡೆಯಿಂದಲೇ ಕಾಳೀಯ ಮಹಾಸರ್ಪವನ್ನು ಮಡುವಿನಿಂದ ಓಡಿಸಿದವನೇ, ಗಿರಿವೈರಿ ಇಂದ್ರನು ಸುರಿಸಿದ ಜಲಧಾರೆಗಳ ನಿವಾರಣೆಗಾಗಿ ದುರ್ಧರವಾದ ಗೋವರ್ಧನಗಿರಿಯನ್ನು ಎತ್ತಿ ಹಿಡಿದವನೇ, ಕುವಲಯಾಪೀಡವೆಂಬ ಆನೆಯಿಂದ ರಕ್ತಜಲಪ್ರವಾಹವನ್ನು ಉಕ್ಕಿಸಿದವನೇ, ಪೀಡಿಸಿ ಪೂತನಿಯ ಶರೀರವನ್ನು ಬೀಳಿಸಿದವನೇ, ಮಲ್ಲಯುದ್ಧದಲ್ಲಿ ಪ್ರಸಿದ್ಧರಾದ ಚಾಣೂರ ಮುಷ್ಟಿಕಾಸುರರ ದಪ್ಪವೂ ದೃಢವೂ ಆದ ತೊಡೆಗಳನ್ನು ಡೊಕ್ಕರಿಸಿ ಬೀಳಿಸಿಯೇ ಅವರನ್ನು ಬೇರುಸಹಿತ ಕಿತ್ತೆಸೆದವನೇ, ದೇವಸೇನಾಮಂಡಲದ ಕಂಠಕ್ಕೆ ಪಾಶವಾಗಿದ್ದ ಕೇಶಿ-ದೇನುಕರ ಮರಣವನ್ನು ತಡೆಯಿಲ್ಲದೆ ಮಾಡಿಸಿದವನೇ, ನೀಚರ ಕುಲಕ್ಕೆ ಶಿರೋಭೂಷಣದಂತಿದ್ದ ಕಂಸಾಸುರಧ್ವಂಸದಲ್ಲಿ ಪ್ರವೀಣನೇ, ವೀಣಾವೇಣುವಾದನ ಚತುರ, ಚಾತುರ್ಯಪೂರ್ಣರಾದ ಗೋಪೀಜನ ಮನಃಪ್ರಿಯ, ರಮಣೀಯ ಪೀತಾಂಬರ, ಇಂದ್ರನಿಂದ ಅರ್ಚಿತವಾದ ಪಾದಕಮಲವುಳ್ಳವನೇ, ಕಮಲಾಂಗನಾವರ, ವರಕೌಸ್ತು ಭರತ್ನಾಲಂಕೃತನೆ ಜಗತ್ರಯವನ್ನೂ ಆನಂದಗೊಳಿಸಿದವನೇ, ನಂದಗೋಪನ ಮನಸ್ಸೆಂಬ ನೈದಿಲೆಗೆ ಶರಚ್ಚಂದ್ರನಾದವನೇ, ನವಿಲುಗರಿಯ ಶಿರೋಭೂಷಣವನ್ನು ಧರಿಸಿರುವ ಗೋಪಾಲನೆ, ಶ್ರೀಭಗವದ್ವಾಸುದೇವ, ನಿನಗೆ ನಮಸ್ಕಾರ, ನಿನಗೆ ನಮಸ್ಕಾರ". ವ|| ಎಂದು ಆದಿತಿದೇವಿ ಸ್ತೋತ್ರಮಾಡಿ ಕಳುಹಿಸಿದಳು. ಗರುಡಧ್ವಜನಾದ ಆ ಕೃಷ್ಣನು, ಆಕಾಶದಿಂದ ದ್ವಾರಕಾವತಿಗೆ ಬಂದಿಳಿದನು. ಆ ದ್ವಾರಕಿಯ ಒಂದೊಂದು ಮನೆಯೂ ಕುಂಕುಮಲೇಪನದಿಂದಲೂ, ರಂಗವಲ್ಲಿಯಿಂದಲೂ ಎತ್ತಿ ಕಟ್ಟಿದ ಪ್ರಸಿದ್ಧ ತೋರಣದಿಂದಲೂ ಶುಭವಾದ್ಯದಿಂದಲೂ ಉತ್ಸವ ಧ್ವಜದಿಂದಲೂ ಕೂಡಿದ್ದು, ಪಟ್ಟಣವು ಚೆನ್ನಾಗಿ ಅಲಂಕೃತವಾಗಿದ್ದಿತು. ಕೃಷ್ಣನು, ಪುರಾಂಗನೆಯರು ತಳಿಯುವ ಅಕ್ಷತೆಯನ್ನು ವಹಿಸುತ್ತ ಬಂದು, ಅರಮನೆಯನ್ನು

ಪ್ರತಿಗೃಹಕುಂಕುಮಚ್ಛಟೆಗಳಿಂ ಪ್ರತಿಮಂದಿರರಂಗವಲ್ಲಿಯಿಂ
ಪ್ರತಿನಿಲಯಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ
ಪ್ರತಿಭವನೋತ್ಸವಧ್ವಜದಿನಾ ಪೊಬಲೊಪ್ಪಿರೆ ಸೂಸುವಂಗನಾ
ತತಿಗಳ ಸೇಸೆಯಂ ತಳೆದು ಪೊಕ್ಕನುಪೇಂದ್ರನಿಳೇಂದ್ರಗೇಹಮಂ ೩೮

ಸುರಗಿರಿಕೂಟದೊಳಾ ಮಣಿ
ಗಿರಿಯಂ ನಿಲಿಸೆಂದು ಕಳಿಪಿ ಖಗವರನಂ ಶ್ರೀ
ವರನಿರ್ದನೊಸೆದು ಸಾಷ್ಟೋ
ತ್ತರಶತಷೋಡಶಸಹಸ್ರ ಕಾಂತಾಸಹಿತಂ ೫೯

ವ|| ಅಂತು ಸುಖದಿನಿರ್ಪನ್ನೆಗಂ

ಹರಿಗಂ ರುಕ್ಮಿಣಿಗಂ ತನೂಜನೊಗೆದಂ ಪ್ರದ್ಯುಮ್ನದೇವಂ ರತೀ
ಶ್ವರನುನ್ಮೂಲಿತಶಂಬರಂ ಸಕಲಲೋಕೋತ್ಪತ್ತಿಬೀಜಂ ಸುಧಾ
ಕರಮಿತ್ರಂ ಮಕರಾಂಕನಿಕ್ಷುಧನು ಪುಷ್ಪಾಸ್ತ್ರಂ ವಸಂತಪ್ರಿಯಂ
ವಿರಹಿವ್ರಾತಭಯಂಕರಂ ವಿಟವಿಟೀಶೃಂಗಾರಸಾರೋದಯಂ ೬೦

ವ|| ಆ ಕುಮಾರನಗ್ರಜನ್ಮನಾಗೆ ಜನಿಸಿದನೇಕಕುಮಾರನಸಹಸ್ರದಿಂ ಯದುರಾಜ್ಯವತಿ ಪ್ರಾಜ್ಯವಪ್ಪಿನಮದೊಂದು ಸಮಯದೊಳ್

ಆವೃತಮಾಗೆ ತೂರ್ಯರವದಿಂ ನಭವಟ್ಟುವುಪಾಯನಕ್ಕೆ ದಿ
ಗ್ದೇವತೆ ಮೇರೆಯಾಗೆ ಕುಡುವಶ್ವಗಜಾಳಿಪದಾರ್ಥವರ್ಧಿ ಸಾ
ರ್ಥಾವಧಿಯಾಗೆ ವಿಶ್ವವಿಭು ಕೃಷ್ಣನಿನಾದುದು ರುಕ್ಮಿಣೀಮಹಾ
ದೇವಿಗೆ ಪುಣ್ಯಕವ್ರತದ ನೋಂಪಿ ಧರಿತ್ರಿಗೆ ರಾಗವಪ್ಪಿನಂ ೬೧

ಪ್ರವೇಶಿಸಿದನು. ೫೯. ಮೇರುಗಿರಿಯ ಶಿಖರದಲ್ಲಿ ಆ ಮಣಿಗಿರಿಯನ್ನು (ರೋಹಣ ಪರ್ವತವನ್ನು) ನಿಲ್ಲಿಸು ಎಂದು ಹೇಳಿ, ಗರುಡನನ್ನು ಕಳುಹಿಸಿ, ಆ ಕೃಷ್ಣನು ಹದಿನಾರು ಸಾವಿರದ ಒಂದುನೂರೆಂಟುಜನ ಕಾಂತೆಯರೊಡನೆ ಸಂತೋಷದಿಂದ ಇದ್ದನು. ವ|| ಹಾಗೆ ಸುಖದಿಂದಿರುತ್ತಿರುವಲ್ಲಿ ೬೦. ಆ ಕೃಷ್ಣ ರುಕ್ಮಿಣಿಯರಿಗೆ ರತೀಶನೂ, ಶಂಬರಾಸುರ ಧ್ವಂಸಿಯೂ, ಸಕಲಲೋಕೋತ್ಪತ್ತಿಗೂ ಬೀಜರೂಪನೂ ಚಂದ್ರಮಿತ್ರನೂ ಮಕರಧ್ವಜನೂ ಕಬ್ಬಿನ ಬಿಲ್ಲುಳ್ಳವನೂ ಪುಷ್ಪಬಾಣನೂ ವಸಂತಪ್ರಿಯನೂ ವಿರಹಿಗಳ ಸಮೂಹಕ್ಕೆ ಭಯಂಕರನೂ ವಿಟಜನರ ಶೃಂಗಾರವನ್ನು ಬೆಳೆಸುವವನೂ ಆದ ಪ್ರದ್ಯುಮ್ನದೇವನೆಂಬ ಪುತ್ರನು ಉದಯಿಸಿದನು. ವ|| ಆ ಕುಮಾರನೇ ಹಿರಿಯ ಮಗನಾಗಿರಲು ಆಮೇಲೆ ಹುಟ್ಟಿದ ಅನೇಕ ಸಹಸ್ರ ಕುಮಾರರಿಂದ ಯದುರಾಜ್ಯವು ಅತಿವಿಸ್ತಾರವಾಯಿತು. ಹೀಗಿರುತ್ತಿರಲು ಒಂದು ಸಮಯದಲ್ಲಿ ೬೧. ವಿಶ್ವವಿಭು ಕೃಷ್ಣನು ರುಕ್ಮಿಣೀದೇವಿಯಿಂದ ಭೂಲೋಕಕ್ಕೆ ಸಂತೋಷವಾಗುವಂತೆ ಪುಣ್ಯಕರವ್ರತವೊಂದನ್ನು ಮಾಡಿಸಿದನು. ಆಗ ಮಂಗಳವಾದ್ಯಧ್ವನಿಯಿಂದ ಆಕಾಶವು ತುಂಬಿತು. ಕಳುಹಿಸುವ ಬಾಗಿನಗಳು ದಿಗ್ದೇವಿಯರವರೆಗೂ ತಲಪಿತು. ಕೊಡುವ ಕುದುರೆ ಆನೆ ಮೊದಲಾದ ಪದಾರ್ಥವು

ವ|| ಆ ಮಹೋತ್ಸವದೊಳ್

ಕೆದಱೆರ್ದುತ್ತಮಪುಷ್ಪಮೊಕ್ಕಘುಸೃಣಂ ಚೆಲ್ಲಿರ್ದ ಕಸ್ತೂರಿ ಸೂ
ಸಿದ [೧]ಪೋತಾಶ್ರಿಯಕರ್ಪೂರಂ ನೆಗೆವ ಧೂಪೋದ್ದಾಮಧೂಮಂ ವಧೂ
ವದನಾಂಭೋರುಹಗಂಧಮಂ ಕದಡುವುದ್ಯಚ್ಚಾಮರೌಘಾನಿಲಂ
ಮುದಮಂ ಮಾಡೆ [೨]ಸರಾಜಲೋಕಸಭೆ ಚೆಲ್ವಾಗಿರ್ದುದಬ್ಜಾಕ್ಷನಾ ೬೨

ವ|| ಅಂತೊಡ್ಡೋಲಗಂಗೊಟ್ಟು ರುಕ್ಮಿಣೀಮಹಾದೇವಿ ತನ್ನರ್ಧಾಸನದೊಳಿರೆ ವಿಲಾಸದಿಂದಿರ್ದ ಸಮಯದೊಳ್

ಪಡಿನೋಡಲ್ ಹಂಸೆಗಂ ಬೆಳ್ಪಗಿಲತಿಧವಳಂ ಹಂಸೆಗಂ ಬೆಳ್ಪಗಿಲ್ಗಂ
ಮೃಡಹಾಸಂ ವಿಶ್ವಲೋಕಸ್ತುತಮತಿಧವಳಂ ಹಂಸೆಗಂ ಬೆಳ್ಪಗಿಲ್ಗಂ
ಮೃಡಹಾಸಕ್ಕಂ ಸುಧಾ[೩]ವಾರಿಧಿಯತಿಧವಳಂ ಹಂಸೆಗಂ ಬೆಳ್ಪಗಿಲ್ಗಂ
ಮೃಡಹಾಸಕ್ಕಂ ಸುಧಾವಾರ್ಧಿಗಮತಿಧವಳಂ ತಾನೆನಲ್ ಯೋಗಿ ಬಂದಂ ೬೩

ವ|| ಅಂತು ನಾರದಂ ಬರೆ ಸಂಭ್ರಮದಿನಿದಿರೆೞ್ದು

ಕಮಲಾಕ್ಷಂ ಮುನಿಪಂಗೆ ಮಾಡಿ ನಯದಿಂದಾತಿಥ್ಯಪೂಜಾವಿಧಾ
ನಮನುಚ್ಚಾಸನದಲ್ಲಿ ಕುಳ್ಳಿರಿಸಿ ತಾನುಂ ರುಕ್ಮಿಣೀಯುಕ್ತನಾ
ಗಿ ಮೃಗೇಂದ್ರಾಸನದಲ್ಲಿ ಕುಳ್ಳಿರಲದೊಂದಂ ಪಾರಿಜಾತಪ್ರಸೂ
ನಮನಿತ್ತಂ ಧೃತದಿವ್ಯಗಂಧಮನಪೂರ್ವಾಕಾರಮಂ ನಾರದಂ ೬೪

ಯಾಚಕರ ಗುಂಪಿಗೂ ಸೇರಿತು. ವ|| ಆ ಮಹೋತ್ಸವದಲ್ಲಿ ೬೨. ರಾಜಸಮೂಹ ಸಹಿತವಾದ ಕೃಷ್ಣನ ಸಭೆಯು ಚೆಲುವಾಗಿದ್ದಿತು. ಆ ಸಭೆಯಲ್ಲಿ ಹರಡಿದ ಉತ್ತಮವಾದ ಹೂವೂ, ಚೆಲ್ಲಿದ ಕುಂಕುಮಕೇಸರಿಯೂ, ಕಸ್ತೂರಿಯೂ ಪೋತಾಶ್ರಿ ಎಂಬ ಪಚ್ಚಕರ್ಪೂರವೂ, ಮೇಲೆದ್ದ ಧೂಪದ ಹೊಗೆಯೂ, ವನಿತೆಯರ ಮುಖಕಮಲದ ಗಂಧವನ್ನು ಕದಡುವ, ಹೊಳೆಯುವ ಚಾಮರಸಮೂಹದ ಗಾಳಿಯೂ ಸಂತೋಷವನ್ನುಂಟುಮಾಡುತ್ತಿತ್ತು. ವ|| ಹಾಗೆ ಒಡ್ಡೋಲಗವನ್ನು ಮಾಡಿ, ರುಕ್ಮಿಣೀ ಮಹಾದೇವಿಯನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡು ವಿಲಾಸದಿಂದಿದ್ದನು. ಆ ಸಮಯದಲ್ಲಿ ೬೩. ಹೋಲಿಸಿ ನೋಡಿದರೆ ಹಂಸೆಗಿಂತಲೂ ಬಿಳಿಯ ಮೋಡವು ಹೆಚ್ಚು ಬಿಳುಪುಳ್ಳುದು, ಬಿಳಿಯ ಮೋಡಕ್ಕಿಂತ ವಿಶ್ವಲೋಕಸ್ತುತವಾದ ಈಶ್ವರನ ಅಟ್ಟಹಾಸವು ಹೆಚ್ಚು ಬಿಳುಪುಳ್ಳುದು, ಅವುಗಳಿಗಿಂತಲೂ ಕ್ಷೀರಸಮುದ್ರವು ಹೆಚ್ಚು ಬಿಳುಪುಳ್ಳುದು. ಅವೆಲ್ಲವುಗಳಿಗಿಂತ ತಾನು ಹೆಚ್ಚು ಬಿಳುಪುಳ್ಳವನೆನ್ನುವಂತೆ ಯೋಗಿಯಾದ ನಾರದನು ಬಂದನು. ವ|| ಹಾಗೆ ಆ ನಾರದನು ಬರಲು ಸಂಭ್ರಮದಿಂದ ಇದಿರೆದ್ದು, ೬೪. ಕೃಷ್ಣನು ಆ ಮುನಿಪನಿಗೆ ನಮ್ರತೆಯಿಂದ ಕ್ರಮವಾಗಿ ಆತಿಥ್ಯಪೂಜಾವಿಧಿಯನ್ನು ಮಾಡಿ, ಉನ್ನತಾಸನದಲ್ಲಿ ಕುಳ್ಳಿರಿಸಿ ತಾನೂ ರುಕ್ಮಿಣಿಯೊಡನೆ ಸಿಂಹಾಸನದಲ್ಲಿ ಕುಳಿತುಕೊಂಡನು.

---

೧. ಪೋತಾಶ್ರಯಕರ್ಪೂರಂ (ಕಖಗ) ೨. ಸರೋಜನಾಸಭೆ ಚೆಲ್ವಾಗಿರ್ದುದೊಡ್ಡೋಲಗಂ (ಕಗ) ೩. ವಾರ್ಧಿಯುಮತಿಧವಳಂ (ಕಖಗ).

ವ।। ಅದಂ ಪಿಡಿದು

ಬನದೊಳಗುಳ್ಳ [1]ಪೂಗಳವೊಲಲ್ಲಮಿದಚ್ಚರಿ ಬೇಱಿದೊಂದು ಕಂ
ಪಿನ ಕಣಿ ಬೇಱಿದೊಂದು ಮಕರಂದದಗುಂದಲೆ ಬೇಱಿದೊಂದು ಚೆ
ಲ್ವಿನ ನಿಧಿಯೆಂದು ಕೃಷ್ಣನುಮಮಾನುಷಪುಷ್ಪಮನೊಲ್ದು ನೋಡಿ ತ
ನ್ನನಿಯಳೆನಿಪ್ಪ ರುಕ್ಮಿಣಿಯ ವಕ್ತ್ರಮುಮಂ ದಯೆಯಿಂದೆ ನೋಡಿದಂ ೬೫

ವ।। ಅಂತು ನೋಡಿ ನಿಜಾಗ್ರಮಹಿಷಿಗಾ ಪಾರಿಜಾತದ ಪುಷ್ಪಮಂ ದಯೆಗೆಯ್ಯೆ

ಅಳವಡೆ ಪಾರಿಜಾತದಲರಂ ಮುಡಿಯೊಳ್ ತಳೆದಿರ್ದ ನಲ್ಲಳಾ
ಗಳಿನ ವಿಳಾಸಮಾಗಳಿನ ವಿಭ್ರಮಮಾಗಳಿನಂಗಭಾವವಾ
ಗಳಿನ ವಿಡಂಬವಾಗಳಿನ ದೇಸೆ ಮುರಾರಿಗನಂಗರಾಗಮಂ
ಬಳೆಯಿಸೆ ಪೆಂಡಿರೊಳ್ ಬಳೆಯಿಸಿತ್ತೆನಸುಂ ಪ್ರಣಯಪ್ರಕೋಪಮಂ ೬೬

ವ।। ಆಗಳಾ ಪ್ರಪಂಚಮಂ ಸೌಭಾಗ್ಯನಿಧಿಯೆನಿಸಿದ ಸತ್ಯಭಾಮೆಯ ಕೆಳದಿಯೊರ್ವಳತಿ ವಿಸ್ಮಯಸ್ಮೇರಲೋಚನೆಯಾಗಿ ನೋಡುತ್ತಿರಲಾಕೆಯ ಮನದ ಮಾತ್ಸರ್ಯದ ಚೇಷ್ಟೆಯಂ ಕಲಹತೃಷ್ಣಂ ನಾರದನಱಿದು

ಇದನೆ ತಲೆದೊಡವು ಮಾಡಿಯೆ
ಪದಪದ್ಮಕ್ಕೆಱಗಿಪಳ್ ಶಚೀವಧುವಂತಾ
ತ್ರಿದಶೇಂದ್ರನನೆನೆ ಭುವನದೊ
ಳಿದೆ ದಲ್ ಸೌಭಾಗ್ಯಕಾರಣಂ ಪೆಱತುಂಟೇ ೬೭

ಆಗ ನಾರದನು ದಿವ್ಯಗಂಧವುಳ್ಳುದೂ ಅಪೂರ್ವಾಕಾರವುಳ್ಳುದೂ ಆದ ಪಾರಿಜಾತದ ಹೂವೊಂದನ್ನು ಕೃಷ್ಣನಿಗೆ ಕೊಟ್ಟನು. ವ।। ಅದನ್ನು ಹಿಡಿದುಕೊಂಡು ೬೫. ಆಶ್ಚರ್ಯ! ಇದು ಭೂವನದಲ್ಲಿನ ಹೂಗಳಂತಲ್ಲ. ಬೇರೆಯಾದ ಒಂದು ಹೂವಿನ ಗಣಿ, ಇದೊಂದು ಬೇರೆ ಮಕರಂದದ ಅತಿಶಯ, ಬೇರೆ ಇದೊಂದು ಚೆಲುವಿನ ನಿಧಿ ಎಂದು, ಕೃಷ್ಣನು ಅಮಾನುಷವಾದ ಆ ಪುಷ್ಪವನ್ನು ಒಲಿದು ನೋಡಿ ತನ್ನ ಪ್ರಿಯೆಯಾದ ರುಕ್ಮಿಣಿಯ ಮುಖವನ್ನು ದಯೆಯಿಂದ ನೋಡಿದನು. ವ।। ಹಾಗೆ ನೋಡಿ, ತನ್ನ ಹಿರಿಯ ಪತ್ನಿಗೆ ಆ ಪಾರಿಜಾತದ ಹೂವನ್ನು ದಯೆಪಾಲಿಸಿದನು. ೬೬. ಮುಡಿಯಲ್ಲಿ ಆ ಪಾರಿಜಾತದ ಹೂವನ್ನು ಧರಿಸಿದ ಆ ಪ್ರಿಯೆ ರುಕ್ಮಿಣಿಯ ಆಗಿನ ವಿಳಾಸವೂ ವಿಭ್ರಮವೂ ಆಗಿನ ಅಂಗಭಾವವೂ, ಆಗಿನ ವಿಡಂಬವೂ ಸೊಗಸೂ ಕೃಷ್ಣನಿಗೆ ಕಾಮರಾಗವನ್ನು ಹೆಚ್ಚಿಸಿತು. ಅದರಿಂದ ಕೃಷ್ಣನ ಪತ್ನಿಯರಿಗೆ ಪ್ರೇಮ ಕೋಪವೂ ಅಧಿಕವಾಗಿ ಬೆಳೆಯಿತು. ವ।। ಆಗ ಆ ವೃತ್ತಾಂತವನ್ನು ಸೌಭಾಗ್ಯನಿಧಿಯೆನಿಸಿದ ಸತ್ಯಭಾಮೆಯ ಕೆಳದಿಯೊಬ್ಬಳು ಅತ್ಯಾಶ್ಚರ್ಯಗೊಂಡು ನಗುಗಣ್ಣಿನಿಂದ ನೋಡುತ್ತಿದ್ದಳು. ಆಕೆಯ ಮನದ ಮಾತ್ಸರ್ಯದ ಚೇಷ್ಟೆಯನ್ನು ಕಲಹದಾಹವುಳ್ಳ ನಾರದನು ತಿಳಿದು ಹೀಗೆಂದನು: ೬೭. "ಶಚಿದೇವಿಯು ಇದನ್ನೇ ತಲೆಗೆ ಮುಡಿದುಕೊಂಡು ದೇವೇಂದ್ರನನ್ನು ತನ್ನ ಕಾಲಿಗೆ ಬೀಳಿಸುವಳು ಎಂದ

---

೧. ಪೂವುಗಳೊಳಲ್ಲ (ಕಗ) ಪೂಗಳೊಳಗೆಲ್ಲ (ಮೂಲ)

ಇದು ಕೃತಕಾದ್ರಿಯಪ್ಪುದು ವನಾಳಿಯಪ್ಪುದು ಪದ್ಮಷಂಡಮ
ಪ್ಪುದು ತಳಿರುಯ್ಯಲಪ್ಪುದು ಲತಾಗೃಹಮಪ್ಪುದು ರತ್ನದೀಪವ
ಪ್ಪುದು ಮಧುಮಾಸವಪ್ಪುದು ನವೋಜ್ಜ್ವಲಚಂದ್ರಿಕೆಯಪ್ಪುದಿಂತಿದಾ
ಗದ ತೆಱನಿಲ್ಲಿದೊಂದು ಕುಸುಮಂ ಕುಡುತಿರ್ಕುಮಭೀಷ್ಟಸಿದ್ಧಿಯಂ ೭೮

ಪುಟ್ಟೆ ವಿಳಾಸಂ ಮುಡಿಗಳ
ವಟ್ಟಿತ್ತೀ ಕುಸುಮಮೀಕೆಯೊಳ್ ಸವತಿಯರಾರ್
[1]ಪಟ್ಟಾಂತರವೆನಲಿಂ ಪೊಱ
ಮಟ್ಟುಬು ಸೌಭಾಗ್ಯಜಯಯಶಂ ರುಕ್ಮಿಣಿಯಾ ೭೯

ತಲೆದೊಡವಾಯ್ತಮರದ್ರುಮ
ದಲರೀ ರುಕ್ಮಿಣಿಗೆ ಸತ್ಯಭಾಮೆಯ ಸೊಬಗಿಂ
ಸಲಲರಿಯದೆಂದು ಸಂತತ
ಮುಲಿಗುಂ ಸೌಭಾಗ್ಯಡಿಂಡಿಮಂ ರುಕ್ಮಿಣಿಯಾ ೮೦

ಅಬಲೆಯರೊಳ್ ಮುಯ್ಯಾಂಪಳ್
ಸೊಬಗಿಂಗಾ ಸತ್ಯಭಾಮೆ ಬೇಡಿಂ ತನಗಾ
[2]ಸೊಬಗೀಯಲರಂ ಮುಡಿದಿರೆ
ಸೊಬಗೇಕಚ್ಛತ್ರಮಾಯ್ತು ಭೀಷ್ಮಕಸುತೆಯಾ ೮೧

ಮೇಲೆ ಲೋಕದಲ್ಲಿ ಇದೇ ಸೌಭಾಗ್ಯಕ್ಕೆ ಕಾರಣವಲ್ಲದೆ ಬೇರೇನಿದೆ? ೭೮. "ಇದು ಕೃತಕಗಿರಿಯಾಗುವುದು. ವನಪಙ್ತಿಯಾಗುವುದು. ಪದ್ಮಸರೋವರವಾಗುವುದು. ಚಿಗುರುಯ್ಯಾಲೆಯಾಗುವುದು. ಬಳ್ಳಿಯ ಮನೆಯಾಗುವುದು. ರತ್ನದೀಪವಾಗುವುದು; ಮಧು (ವಸಂತ) ಮಾಸವಾಗುವುದು. ಹೊಳೆಯುವ ಹೊಸ ಬೆಳುದಿಂಗಳಾಗುವುದು. ಇದು ಆಗದ ರೀತಿಯಿಲ್ಲ ಇಂದೊಂದು ಹೂ ಇಷ್ಟಾರ್ಥಸಿದ್ಧಿಯನ್ನು ಕೊಡುತ್ತಿರುವುದು. ೭೯. ಈ ಕುಸುಮವು, ಈಕೆಯ ಸವತಿಯಲ್ಲಿ ಪಟ್ಟಾಭಿಷಿಕ್ತೆಯರು ಬೇರೆ ಯಾರಿರುವರು! ಎನ್ನುವಂತೆ ಇವಳ ಮುಡಿಯಲ್ಲಿ ಸೇರಿತು. ಇನ್ನು ರುಕ್ಮಿಣಿಯ ಸೌಭಾಗ್ಯ ಜಯದ ಯಶಸ್ಸು ಹೊಮ್ಮಿತು. ೮೦. ಈ ರುಕ್ಮಿಣಿಗೆ ದೇವವೃಕ್ಷದ ಹೂವು ತಲೆದೊಡವಾಯಿತು. ಸತ್ಯಭಾಮೆಯ ಸೊಬಗು, ಇನ್ನು ನಡೆಯುವುದಿಲ್ಲ. ಎಂದೆಂದಿಗೂ ರುಕ್ಮಿಣಿಯ ಸೌಭಾಗ್ಯದ ಡೋಲು ಸಂತತವಾಗಿ ಶಬ್ದವನ್ನು ಮಾಡುವುದು. ೮೧. ಅಬಲೆಯರಲ್ಲಿ ಆ ಸತ್ಯಭಾಮೆ ತನ್ನ ಸೊಬಗಿನ ವಿಷಯದಲ್ಲಿ ಹೆಮ್ಮೆಪಡುವಳು. ಇನ್ನು ಆ ಸೊಬಗು ಅವಳಿಗೆ ಬೇಡ. ಈ ಹೂವನ್ನು ಮುಡಿದುಕೊಂಡ ಮೇಲೆ ರುಕ್ಮಿಣಿಗೆ ಸೊಬಗು ಏಕಚ್ಛತ್ರವಾಯಿತು.

---

೧. ಪಟ್ಟಾಂತರವೆನಲೇಂ (ಖ) ೨. ಸೊಬಗೆಯರಲರಂ (ಗ)

ಬಳಿರಿಪುವಿನ್ನೀಕೆಯ ಪದ
ತಳಸಂಗದ ಸುಖಮನವಳ [1]ಮುಖಸಂಗದೊಳಂ
ತಳೆಗುಮೆ ರುಕ್ಮಿಣಿಯುಂಗುಟ
ದೊಳುಳ್ಳ ಸೊಬಗುಂಟೆ ಸತ್ಯಭಾಮೆಯ ನೊಸಲೊಳ್ ೭೨

ಅಭಿಭವಮೆಯ್ದಿದ ತನಗಿಂ
ಸ್ವಭಾವಸೌಭಾಗ್ಯವತಿಯೆ ಬೇಡಿದೊಡಂ ದು
ರ್ಲಭಮಕ್ಕುಂ ಪಡೆಗುಮೆ ಸ
ತ್ಯಭಾಮೆ ಸೌಭಾಗ್ಯಭಿಕ್ಷೆಯಂ ರುಕ್ಮಿಣಿಯೊಳ್ ೭೩

ತಡವೇಂ ಪೂಣ್ಕೆಗೆ ದಿವ್ಯಂ
ಬಿಡಿವೆಂ [2]ರುಕ್ಮಿಣಿಯೊಳಲ್ಲದಿಂ ಹರಿ ಮಱೆದುಂ
ಗಡ ಸತ್ಯಭಾಮೆಗೆಱಗಂ
[3]ಮುಡಿಗಿಕ್ಕಿದನಾರ್ಪರೆತ್ತಿಕೊಳ್ಗಿಂ ಸಭೆಯೊಳ್ ೭೪

ವ|| ಎಂದು ನಾರದಂ ಪಾರಿಜಾತಪ್ರಸೂನಸಾಮರ್ಥ್ಯವರ್ಣನ ವ್ಯಾಜದಿಂ [4]ಸಪತ್ನೀವ್ಯಾಕೋಪಜನನಯತ್ನತತ್ಪರನಾಗಿ ನುಡಿಯೆ ತದ್ವೃತ್ತಾಂತಮಂ ವಾರ್ತಾಪರಂಪರೆಯಿನಱಿದು

ಬಗೆವಂದೀ ಸೊಬಗೀ ಮಹಾತ್ಮೆಗುಚಿತಂ ಪ್ರದ್ಯುಮ್ನನಂತಪ್ಪ ಜೆ
ರ್ಮಗನಂ ಪೆತ್ತ ಮಹತ್ವದಗ್ರಮಹಿಷೀಸಂಪತ್ತಿಯಂ ತಾಳ್ದಿದೀ
ಕೆಗೆ ಲಕ್ಷ್ಮೀವನಿತಾವತಾರೆಗೆನುತುಂ ಮಿಕ್ಕಂಗನಾವೃಂದವೀ
ರ್ಷ್ಯೆಗಳಂ ಮಾಣ್ದಿರೆ ಸತ್ಯಭಾಮೆ ತಳೆದಳ್ ಸೌಭಾಗ್ಯಮಾತ್ಸರ್ಯಮಂ ೭೫

೭೨. ಬಲಿರಿಪು ಕೃಷ್ಣನು ಇನ್ನು ಈ ರುಕ್ಮಿಣಿಯ ಪದತಳಸಂಗದ ಸುಖವನ್ನು ಸತ್ಯಭಾಮೆಯ ಮುಖಸಂಗದಲ್ಲಿ ತಾನೆ ಪಡೆಯುವನೇ! ರುಕ್ಮಿಣಿಯ ಕಾಲಿನ ಹೆಬ್ಬೆರಳಿನಲ್ಲಿರುವ ಸೊಬಗು ಸತ್ಯಭಾಮೆಯ ಹಣೆಯಲ್ಲಿ ತಾನೆ ಇರುವುದೆ? ೭೩. ಅವಮಾನವೂ ಸೋಲೂ ಉಂಟಾದ ಬಳಿಕ ತನ್ನ ಸಹಜ ಸೌಭಾಗ್ಯವೂ ಹೋಗುವುದು. ಸತ್ಯಭಾಮೆ ಬೇಡಿದರೂ ದುರ್ಲಭವಾಗುವುದು. ಅವಳು ರುಕ್ಮಿಣಿಯಲ್ಲಿ ಸೌಭಾಗ್ಯಭಿಕ್ಷೆಯನ್ನು ಪಡೆಯುವಳೆ! ೭೪. ತಡವೇತಕ್ಕೆ ಪ್ರತಿಜ್ಞೆಗೆ : ನಾನು ಪ್ರಮಾಣ ಮಾಡುತ್ತೇನೆ. ಕೃಷ್ಣನು ಇನ್ನು ರುಕ್ಮಿಣಿಯಲ್ಲಲ್ಲದೆ ಮರೆತೂ ಸತ್ಯಭಾಮೆಗೆ ಪ್ರೀತಿಸುವುದಿಲ್ಲ. ಇದಕ್ಕಾಗಿ ನಾನು ಸಭೆಯಲ್ಲಿ ಪಂದ್ಯವಿಡುತ್ತೇನೆ. ಸಾಮರ್ಥ್ಯವುಳ್ಳವರು ವಿರೋಧಿಸಲಿ! ವ|| ಎಂದು ನಾರದನು ಪಾರಿಜಾತಪುಷ್ಪದ ಸಾಮರ್ಥ್ಯವನ್ನು ವರ್ಣಿಸುವ ನೆವದಿಂದ ಸವತಿಯರಲ್ಲಿ ಹೆಚ್ಚಾದ ಕೋಪವನ್ನುಂಟುಮಾಡುವುದರಲ್ಲಿ ಆಸಕ್ತನಾಗಿ ಮಾತನಾಡಿದನು. ಆ ವೃತ್ತಾಂತವನ್ನು ವಾರ್ತಾಪರಂಪರೆಯಿಂದ ತಿಳಿದು, ೭೫. ಪ್ರದ್ಯುಮ್ನನಂತಹ ಹಿರಿಯ ಮಗನನ್ನು ಹೆತ್ತ, ಮಹತ್ತ್ವದ ಅಗ್ರಮಹಿಷೀಸಂಪತ್ತನ್ನು ಪಡೆದ, ಲಕ್ಷ್ಮೀದೇವಿಯ ಅವತಾರೆಯಾದ ಈ ಮಹಿಮಳಿಗೆ ಮನವೊಪ್ಪುವ ಈ ಸೊಬಗು ಉಚಿತವಾದುದೆಂದು ಮಿಕ್ಕ ಅಂಗನೆಯರೆಲ್ಲರೂ

---

೧. ಮುಖಸಂಗದೊಳೇಂ (ಕಗ) ೨. ರುಕ್ಮಿಣಿಯೊಳಲ್ಲದೇಂ (ಕಖಗ) ೩. ಮುಡಿಗಿಕ್ಕಿದೆ (ಕಖಗ) ೪. ಸಪತ್ನೀವ್ಯಾಜತತ್ಪರನಾಗಿ (ಕಗ) ಸಪತ್ನೀವ್ಯಾಜಯತ್ನ (ತತ್ಪರನಾಗಿ) (ಖ)

ವ|| ಅಂತತಿಪ್ರಣಯಕೋಪಮುಂ ತಳೆದು

ಸಾರಿಕೆಯ ಕೀರದಂಚೆಯ
ಪಾರಾವತದಿಂಚರಂಗಳಿಲ್ಲದ ಕೋಪಾ
ಗಾರಮನಾ ವಧು ಪೊಕ್ಕಳ್
ತೋರಣಮಲ್ಲಾಡೆ ನಿಮಿರ್ವ ಸುಯ್ಯೆಲರಿಂದಂ ೭೬

ಪ್ರೀತಿಯನೀವ ಸೆಂದುರದ ವಸ್ತ್ರಮನೊಲ್ಲದದೊಂದು ವಸ್ತ್ರಮಂ
ಶ್ವೇತಮನುಟ್ಟಳುಟ್ಟರೆ ತದಂಬರದಿಂ ಪ್ರಿಯಕೋಪಚಿಹ್ನದಿಂ
ದಾ ತರಳಾಕ್ಷಿಗಾಗಳೆನಸುಂ ನಲವೋಡಿದುದಂತುಟಲ್ತೆ ಬಾ
ಲಾತಪದಿಂದಮಪ್ಪ ನಲವಬ್ಜಿನಿಗಪ್ಪುದೆ ಚಂದ್ರಕಾಂತಿಯಿಂ ೭೭

ತನಗೀರ್ಷ್ಯೆಯಿಂ ಶಿರೋವೇ
ದನೆ ಜನಿಯಿಸೆ ನಿಟಿಲಪಟ್ಟದೊಳ್ ತಿರ್ಯಕ್ಚಂ
ದನತಿಲಕಾಯಿತಮಂ ಮಾ
ನಿನಿ ರುಚಿರದುಕೂಲಪಟ್ಟಮಂ ನಿಯಮಿಸಿದಳ್ ೭೮

ಕಲುಷಕಷಾಯೇಕ್ಷಣರುಚಿ
ಲಲಾಟಪಟದೊಳ್ ಪೊರಳ್ದು ಪುದಿದತ್ತೆನೆ ಕೋ
ಮಲೆ ತದ್ದುಕೂಲಪಟ್ಟದ
ಕೆಲಗೆಲದೊಳ್ ತೊಡೆದಳರುಣಚಂದನರಸಮಂ ೭೯

ಈರ್ಷ್ಯೆಪಡದೆ ಇದ್ದರೂ ಸತ್ಯಭಾಮೆಯು ಸೌಭಾಗ್ಯಮಾತ್ಸರ್ಯವನ್ನು ಪಡೆದಳು. ವ|| ಹಾಗೆ ಅತಿಯಾದ ಪ್ರೇಮಕೋಪವನ್ನು ತಾಳಿ, ೭೬. ಆ ಸತ್ಯಭಾಮೆಯು ಹೆಣ್ಣುಗಂಡು ಗಿಳಿಗಳ ಹಂಸೆಯ ಮತ್ತು ಪಾರಿವಾಳದ ಇಂಪಾದ ಧ್ವನಿಯಿಲ್ಲದ ಕೋಪಗೃಹವನ್ನು ಅವಳ ನಿಟ್ಟುಸಿರಿನ ಗಾಳಿಯಿಂದ ತೋರಣವು ಅಳ್ಳಾಡುವಂತೆ ಹೊಕ್ಕಳು. ೭೭. ಪ್ರೀತಿಯನ್ನುಂಟುಮಾಡುವ ಸಿಂಧೂರವರ್ಣದ ಸೀರೆಯನ್ನೊಲ್ಲದೆ ಅದೊಂದು ಬಿಳಿಯ ಸೀರೆಯನ್ನುಟ್ಟಳು. ಪ್ರಿಯನಿಗೆ ಕೋಪಚಿಹ್ನೆಯಾದ ಆ ಬಟ್ಟೆಯಿಂದ ಆ ಚಂಚಲಾಕ್ಷಿಯ ಸಂತೋಷ ಸೌಂದರ್ಯವು ಹೋಯಿತು. ಅದು ಹಾಗೆ ಆಗಬೇಕಾದುದೇ ಅಲ್ಲವೆ?! ಕಮಲಿನಿಗೆ ಎಳೆಬಿಸಿಲಿನಿಂದ ಆಗುವ ನಲಿವು ಚಂದ್ರಕಾಂತಿಯಿಂದ ಆದೀತೇ? ೭೮. ಹೊಟ್ಟೆಯ ಕಿಚ್ಚಿನಿಂದ ಆಕೆಗೆ ತಲೆನೋವುಂಟಾಯಿತು. ಆದರಿಂದ ಅವಳು ತನ್ನ ವಿಸ್ತಾರವಾದ ಹಣೆಗೆ ಅಡ್ಡಲಾಗಿ ಗಂಧದ ತಿಲಕವನ್ನು ಪಟ್ಟನ್ನು ಬಳಿದಂತೆ ಕಾಣುವ ಮನೋಹರವಾದ ಪಟ್ಟೆಯ ವಸ್ತ್ರದ ಪಟ್ಟಿಯನ್ನು ಕಟ್ಟಿಸಿಕೊಂಡಳು. ೭೯. ಕಲ್ಮಷ ಮನಸ್ಸಿನಿಂದ ಕೆಂಪಾದ ಕಣ್ಣಿನ ಕಾಂತಿಯು ಹಣೆಯ ಪಟ್ಟಿಯಲ್ಲಿ ವ್ಯಾಪಿಸಿತು ಎನ್ನುವಂತೆ ಆ ಕೋಮಲೆಯು ಆ ದುಕೂಲದ ಪಟ್ಟಿಯ ಪಕ್ಕಗಳಲ್ಲಿ ಕೆಂಪುಗಂಧರಸವನ್ನು

ವ॥ ಅಂತು ಕೋಪಚಿಹ್ನಪ್ರಸಾಧನಮೆ ತನಗೆ ಬೇಱೊಂದು ಚೆಲ್ವನವಟ್ಟೆಸೆಚಿಂತಾರಸತರಂಗಿತಾತರಂಗೆಯಾಗಿರ್ಪಿನಮಿತ್ತಂ ಪುರುಷೋತ್ತಮಂ ತನ್ನೊಳೆ ವಿಚಾರಿಸಿ

ಕೆಳದಿ ಪಱಿದೆಯ್ದೆ ಪೋದಳ್
ತಿಳಿದೀವಾರ್ತೆಯನೆ ಪೇೞ್ವಳಿದನಂತಾ ಕೋ
ಮಳೆ ಸತ್ಯಭಾಮೆ ಕೇಳ್ದಿಂ
ತಳೆಗುಂ ಪ್ರಣಯಕೋಪಮಂ ನಿಶ್ಚಯದಿಂ ೮೦

ವ॥ ಎಂದು ರುಕ್ಮಿಣಿಯ ಸಭಾಸ್ಥಾನದಿಂದೇನಾನುಮೊಂದು ನೆವದಿಂ ತಳರ್ದು ನಾರದನ ಸಮೀಪದೊಳ್ ಸಂಭಾಷಣಾರ್ಥಂ ಪ್ರದ್ಯುಮ್ನನಂ ನಿಲಿಸಿ ತಾಂಬೂಲಕರಂಡಕವಾಹಿನೀವಾಮಪ್ರಕೋಷ್ಠಾವಲಂಬಿತಹಸ್ತನಾಗಿ ಚರಣಕಮಲನ್ಯಸನಲೀಲೆಯಿಂ ಬಂದು ಸತ್ಯಭಾಮಾದೇವಿಯರಮನೆಯ ಬಾಗಿಲೊಳ್ ನಿಂದು ಆ ಸುಭಗರೂಪೆ ಕೋಪಾಗಾರಮಂ ಪೊಕ್ಕಿರ್ದುದಂ ಕಂಡು ತತ್ಸಮೀಪಕ್ಕೆ ಬರಲಂಜಿ ಕಂಜನಾಭಂ ರೂಪುಗರೆದು ಕೋಪಕುಟಿಲೆಯಾಗಿರ್ದಳಂ ನೋೞ್ಪಲ್ಲಿ

ಪರಮಕ್ರೋಧಾಧಿದೇವಾರ್ಚನಮೆನೆ ಪರಿದೊಟ್ಟುತ್ತೆ ಲೀಲಾಬ್ಜಪತ್ರೋ
ತ್ಕರಮಂ ಚಿಂತಾಲತಾವೃದ್ಧಿಯನೊಡರಿಸಲೋರಂತೆ ನೀರ್ವೊಯ್ವ ಪಾಂಗಿಂ
ಸುರಿಯುತ್ತುಂ ಬಾಷ್ಪಧಾರಾಜಲಪರಿಕರಮಂ ಸ್ನೇಹಶಾಸ್ತ್ರಕ್ಕೆ ಟೀಕಂ
ಬರೆಯುತ್ತಿರ್ಪಂದದಿಂದುಂಗುಟದೆ ಬರೆಯುತುಂ ಭೂಮಿಯಂ ಭಾಮೆಯಿರ್ದಳ್ ೮೧

ವ॥ ಅಂತಳವಿಗಟೆದ ವೇದನೆಯನೊಳಗೊಂಡು ಸಖೀಜನದೊಳಂ ನುಡಿಯದೆ ನಿದಾಘ

ಲೇಪಿಸಿಕೊಂಡಳು. ೮೦. ವ॥ ಹಾಗೆ ಕೋಪಚಿಹ್ನೆಯ ಅಲಂಕಾರವೇ ಅವಳಿಗೆ ಬೇರೊಂದು ತರದ ಚೆಲುವನ್ನುಂಟು ಮಾಡಿದುದರಿಂದ ಚಿಂತಾರಸದ ಅಲೆಗಳಂತಾದ ಅಂತರಂಗವುಳ್ಳವಳಾಗಿದ್ದಳು. ಇತ್ತ ಕೃಷ್ಣನು ತನ್ನಲ್ಲಿ ತಾನೇ ವಿಚಾರಮಾಡಿ, ೮೦. "ಸತ್ಯಭಾಮೆಯ ಗೆಳತಿ ಬೇಗ ಬೇಗನೆ ಹೋದಳು. ಈ ಸಮಾಚಾರವನ್ನು ಅವಳಿಗೆ ಹೇಳುವಳು. ಕೋಮಲೆಯಾದ ಸತ್ಯಭಾಮೆ ಕೇಳಿ, ಇನ್ನು ನಿಜವಾಗಿಯೂ ಪ್ರೇಮ ಪ್ರಕೋಪವನ್ನು ತಳೆಯುವಳು". ವ॥ ಎಂದು ರುಕ್ಮಿಣಿಯ ಸಭಾಸ್ಥಾನದಿಂದ ಯಾವುದೋ ಒಂದು ನೆವದಿಂದ ಎದ್ದು ನಾರದನ ಹತ್ತಿರ ಸಂಭಾಷಣ ಮಾಡಲು ಪ್ರದ್ಯುಮ್ನನನ್ನು ನಿಲ್ಲಿಸಿ, ತಾಂಬೂಲಕರಂಡಕಧಾರಿಣಿಯ ಎಡದ ಮುಂಗೈಯನ್ನು ಹಿಡಿದುಕೊಂಡು ಮೃದುವಾದ ಕಮಲವನ್ನಿಟ್ಟು ನಡೆಯುತ್ತ ಲೀಲೆಯಿಂದ ಬಂದು ಸತ್ಯಭಾಮದೇವಿಯ ಅರಮನೆಯ ಬಾಗಿಲಲ್ಲಿ ನಿಂತು, ಆ ಸುಂದರಿಯು ಕೋಪಗೃಹವನ್ನು ಹೊಕ್ಕಿರುವುದನ್ನು ಕಂಡು ಅವಳ ಹತ್ತಿರ ಹೋಗಲು ಅಂಜಿ, ಆ ಕೃಷ್ಣನು ಮರೆಯಾಗಿ ನಿಂತು ಕೋಪದಿಂದ ವಕ್ರಳಾಗಿದ್ದ ಅವಳನ್ನು ನೋಡುತ್ತಿದ್ದನು. ೮೧. ಆ ಕೋಪನೆಯು ಪರಮಕೋಪಾಧಿದೇವಾರ್ಚನೆಯೆನ್ನುವಂತೆ ಲೀಲಾರ್ಥವಾಗಿ ಹಿಡಿದಿದ್ದ ಕಮಲದ ದಳಗಳನ್ನು ಕಿತ್ತೆಸೆಯುತ್ತ, ಚಿಂತಾಲತೆಯನ್ನು ಬೆಳೆಸಲು ಕ್ರಮವಾಗಿ ನೀರು ಹಾಕುವಂತೆ ಕಣ್ಣೀರಿನ ಧಾರೆಯನ್ನು ಸುರಿಸುತ್ತ ಸ್ನೇಹಶಾಸ್ತ್ರಕ್ಕೆ ಟೀಕೆಯನ್ನು ಬರೆಯುವವಳಂತೆ ಕಾಲಿನ ಹೆಬ್ಬೆರಳಿನಿಂದ ಭೂಮಿಯನ್ನು ಕೆರೆಯುತ್ತ ಇದ್ದಳು. ವ॥ ಹಾಗೆ ಅಳೆಯಲಾಗದ ನೋವನ್ನೊಳಗೊಂಡು

ಸಮಯಾತಪತಪ್ತಲತೆಯಂತೆ ಬಂಬಲಂಬಾಡಿರ್ದವಸರದೊಳೊರ್ವ ಪರಿಚಾರಿಕೆ ಚಂದ್ರಕಾಂತ ಚಷಕದೊಳ್ ತೀವಿದ ಚಂದನರಸಮಂ ನೀಡೆ

ಸಿರಿಗಂಪನಬಲೆ ಹೃದಯದೊ
ಳೊರಸುತ್ತುಂ ನೋವನಿದುವೆ ಪಡೆದಪುದೆಂದಾ
ಸಿರಿಕಂಡದ ಶುಕ್ತಿಕೆಯಂ
ಧರಣಿಯೊಳಪ್ಪಳಿಸಿ ಕಣ್ಣ ನೀರಂ ಸುರಿದಳ್ ೮೨

ವ॥ ಅಂತು ಕನಲ್ದೊನಲ್ದು ಶಯ್ಯಾತಳದೊಳ್ ಮೆಯ್ಯನೀಡಾಡಿ ಮೇಲುದಿನ ಸೆಱಗಂ ಮುಖಕ್ಕೆ ತೆಗೆದು ಕಾಲ್ಗಳಂ ಸಂಕೋಚಿಸಿ ನಿಱಿಯೊಳಡಂಗಿಸಿ ಪವಡಿಸಿರ್ಪುದುಂ ಪೊರ್ದಲವಸರಂ ಬಡೆದು

ಬಂದು ಮೃದುಯಾನದಿಂದಾಂ
ಬಂದುದನೀದೇವಿಗಱುಪಬೇಡೆಂದು ಸಖೀ
ವೃಂದಕ್ಕೆ ಪೇೞ್ದು ಸಂಜ್ಞೆಯಿ
ನಂದು ಮನೋರಮೆಯ ಕೋಪಗೃಹಮಂ ಪೊಕ್ಕಂ ೮೩

ವ॥ ಅಲ್ಲಿ ಮೆಲ್ಲಡಿವಜ್ಜೆಯಿಂ ಸೊಪ್ಪುಳಾಗದಂತು ನಡೆತಂದು ತನ್ಮನೋಹರಿಯ ಪಿಂತೆ ಕುಳ್ಳಿರ್ದು ಬಿಜ್ಜಣಿಗೆಯಂ ಕಳೆದುಕೊಂಡು ಪಂಕರುಹನಾಭಂ ಕಿಂಕರಭಾವದಿನೊಯ್ಯನೊಯ್ಯನೆ ಬೀಸುತ್ತುಮಿರೆ ವಾಸವ ತರುಪ್ರಸೂನಾವಾಸಿತವಾದ ವಾಸವಾನುಜಕರಕಮಲ[1]ಗಂಧವಂಡಲೆದು ನಿದ್ರೆಯುಮನೆೞ್ಚಱಿಸೆ ನಲ್ಲಳೆೞ್ದು

ಸಖೀಜನರೊಂದಿಗೂ ಮಾತನಾಡದೆ ಬೇಸಗೆಯ ಬಿಸಿಲಿನಿಂದ ಕಾಯ್ದ ಬಳ್ಳಿಯು ಮೆತ್ತಗಾಗುವಂತೆ ಹೆಚ್ಚಾಗಿ ಬಾಡಿದ ಸಮಯದಲ್ಲಿ ಒಬ್ಬಳು ಸೇವಕಿ ಚಂದ್ರಕಾಂತದ ಪಾನಪಾತ್ರೆಯಲ್ಲಿ ತುಂಬಿದ ಚಂದನರಸವನ್ನು ಕೊಟ್ಟಳು. ೮೨. ಆ ಶ್ರೀಗಂಧವನ್ನು ಎದೆಗೆ ಬಳಿದುಕೊಳ್ಳುತ್ತ ಇದೇ ನೋವನ್ನುಂಟುಮಾಡುತ್ತದೆ ಎಂದು ಆ ಶ್ರೀಗಂಧದ ಮುತ್ತಿನ ಚಿಪ್ಪನ್ನು ನೆಲಕ್ಕಪ್ಪಳಿಸಿ, ಕಣ್ಣೀರನ್ನು ಸುರಿಸಿದಳು. ವ॥ ಹಾಗೆ ಅತ್ಯಧಿಕವಾಗಿ ಸಹಿಸಲಾಗದಷ್ಟು ಸಿಟ್ಟುಗೊಂಡು, ಹಾಸಿಗೆಯ ಮೇಲೆ ಮೈಯನ್ನು ಬೀಳಿಸಿ, ಮೇಲುಹೊದಿಕೆಯ ಸೆರಗನ್ನು ಮುಖಕ್ಕೆ ಎಳೆದುಕೊಂಡು ಕಾಲುಗಳನ್ನು ಮಡಿಸಿ, ನಿರಿಯಲ್ಲಿ ಅಡಗಿಸಿ ಮಲಗಿರಲು ಸಮೀಪಕ್ಕೆ ಹೋಗಲು ಇದೇ ಸಮಯವೆಂದು ೮೩. ಕೃಷ್ಣನು ಮೆಲ್ಲಗೆ ನಡೆದು ಬಂದು, "ನಾನು ಬಂದುದನ್ನು ಈ ದೇವಿಗೆ ತಿಳಿಸಬೇಡಿ" ಎಂದು ಅವಳ ಸಖಿಯರಿಗೆ ಸಂಜ್ಞೆಯಿಂದಲೆ ತಿಳಿಸಿ, ಕೋಪಗೃಹವನ್ನು ಹೊಕ್ಕನು. ವ॥ ಅಲ್ಲಿ ಕಾಲಿನ ಹೆಜ್ಜೆಯ ಶಬ್ದವಾಗುವಂತೆ ನಡೆದುಬಂದು ಆ ಮನೋಹರೆಯ ಹಿಂದೆ ಕುಳಿತುಕೊಂಡು ಬೀಸಣಿಗೆಯನ್ನು ತೆಗೆದುಕೊಂಡು ಆ ಕೃಷ್ಣನು ಸೇವಕಭಾವದಿಂದ ಮೆಲ್ಲಮೆಲ್ಲಗೆ ಬೀಸುತ್ತಿದ್ದನು. ಕಲ್ಪವೃಕ್ಷದ ಹೂವಿನಿಂದ ಅಲಂಕೃತವಾಗಿದ್ದ ಕೃಷ್ಣನ ಕರಕಮಲಗಂಧವು ಪೀಡಿಸಿ,

---

೧. ಗಂಧವಂಡಲೆಯ ನಿದ್ರೆಯಿಂದೆೞ್ಚಿತ್ತು (ಕಗ)

ವನಪುಷ್ಪ[1]ಗಂಧವಲ್ತ
ಲ್ತನುಪಮಮೀ ಗಂಧಮೆಂದು ಮುರಿದೀಕ್ಷಿಸಿ ಕೃ
ಷ್ಣನ ಮೇಲೆ ಕೋಪದಿಂ ಲೋ
ಚನಾಂಬುಗಳ್ ಸೂಸೆ ಸೂಸಿದಲ್ ಕೇಕರಮಂ ೮೪

ಪ್ರಿಯೆ [2]ಮುನಿದೀಕ್ಷಿಪುದುಂ ಭೀ
ತಿಯಿನಾಕೆಯ ಪಿಂತೆ ಪೊಕ್ಕಡಂಗುವ ನಿಜಚೇ
ಷ್ಟೆಯಿನಿರ್ಮಡಿಸಿದನಂತಾ
ಪ್ರಿಯೆಯ ಮಹಾಪ್ರಣಯಕೋಪಮಂ ಕಮಲಾಕ್ಷಂ ೮೫

ಕೋಪೋನ್ಮೀಲಿತದೃಷ್ಟಿಯಿ
ನಾ ಪಂಕಜಪತ್ರನೇತ್ರೆ ಮುರಿದೀಕ್ಷಿಸುತಿ
ರ್ದಾ ಪಾಂಗು ಪಡೆದುದೆನಸುಂ
ಶ್ರೀ ಪುರುಷೋತ್ತಮನೊಳತನುರಾಗೋದಯಮಂ ೮೬

ಸಮಸಂದೊಲ್ಮೆಗೆ ಮುಂ ಪ್ರಸನ್ನವರ್ತಿಯಾಗಿರ್ದಂದಿನಾ ರೂಪವಿ
ಭ್ರಮಮಾ ಸಾಧ್ವಸಭಾವವಾ ರತಿಕಳಾಚಾತುರ್ಯವಾ ವಾಕ್ಯವ
ಕ್ರಿಮಮಾ ಹಾಸ [3]ವಿಳಾಸವನ್ನೆಗಮದಿಂ ಮಾಣ್ದಿರ್ಕೆ [4]ಕೃಷ್ಣಂಗದೊಂ
ದು ಮುದಂಬೆತ್ತುದು ಸತ್ಯಭಾಮೆಯ ಮಹಾಕ್ಷೇಪಾಕ್ಷಿವಿಕ್ಷೇಪಣಂ ೮೭

ವ|| ಆಗಳ್ ನಿಜಾಪರಾಧ [5]ಭೀತಿಯಂ ರಾಗರಸಂ ಕರ್ಚಿ ಕಳೆಯೆ ಕಮಲಲೋಚನನಾ ಚಪಲಲೋಚನೆಯಂ ನೋಡಿ

ನಿದ್ರೆಯಿಂದಲೂ ಎಚ್ಚರಗೊಳಿಸಿತು. ಸತ್ಯಭಾಮೆ ಎದ್ದು ೮೪. 'ಇದು ಕಾಡುಹೂವಿನ ಗಂಧವಲ್ಲ. ಈ ಗಂಧವು ಅನುಪಮವಾದುದು' ಎಂದು ತಿರುಗಿ ನೋಡಿ ಕೃಷ್ಣನ ಮೇಲೆ ಕೋಪದಿಂದ ಕಣ್ಣೀರನ್ನು ಸುರಿಸಿ ಓರೆನೋಟವನ್ನು ಚಲ್ಲಿದಳು. ೮೫. ಪ್ರಿಯೆ ಕೋಪಗೊಂಡು ನೋಡಿದುದರಿಂದ ಭೀತನಾಗಿ ಆಕೆಯ ಹಿಂದೆ ಅಡಗಿಕೊಳ್ಳುವ ತನ್ನ ಚೇಷ್ಟೆಯಿಂದ ಆ ಕಮಲಾಕ್ಷನು ಪ್ರಿಯೆಯ ಮಹಾಪ್ರಣಯಕೋಪವನ್ನು ಎರಡರಷ್ಟಾಗಿಸಿದನು. ೮೬. ಸಿಟ್ಟಿನಿಂದ ದೊಡ್ಡದಾಗಿ ತೆರೆದ ಕಣ್ಣಿನಿಂದ ತಿರುಗಿ ನೋಡುತ್ತಿರುವ ಆ ಕಮಲನೇತ್ರೆಯ ರೀತಿಯು ಕೃಷ್ಣನಲ್ಲಿ ಅಧಿಕವಾದ ಮದನ ರಾಗೋದಯವನ್ನುಂಟುಮಾಡಿತು. ೮೭. ಮುಂಚೆ ಉತ್ತಮಪ್ರೀತಿಗೆ ಪ್ರಸನ್ನೆಯಾಗಿದ್ದ ಅಂದಿನ ಆ ರೂಪದ ಬೆಡಗೂ ಆ ಭಯಭಾವವೂ ಆ ರತಿಕಲಾಚಾತುರ್ಯವೂ ಆ ಮಾತಿನ ಕೊಂಕೂ ಆ ನಗುವಿನ ವಿಲಾಸವೂ ಅತ್ತ ಇರಲಿ. ಸತ್ಯಭಾಮೆಯ ಆಕ್ಷೇಪಸೂಚಕವಾದ ಕಡೆಗಣ್ಣಿನ ನೋಟವು ಅದೊಂದು ಸಂತೋಷವನ್ನುಂಟು ಮಾಡಿತು. ವ|| ಆಗ ತನ್ನ ಅಪರಾಧದ ಭೀತಿಯನ್ನೂ ಅನುರಾಗರಸವು ತೊಳೆಯಿತು. ಕಮಲಲೋಚನನು

---

೧. ಗಂಧವಲ್ತತ್ಯನುಪಮ (ಕಗ) ೨. ಮುರಿದೀಕ್ಷಿಪುದುಂ (ಕಗ) ೩. ವಿಳಾಸದಿಂ ನೆಗೆಟ್ಟುದಿಂ (ಖ) ೪. ಕೃಷ್ಣಂಗದೊರ್ಮೆ (ಖ) ೫. ಭೀತಿಯಂ ರಾಗರಸಂ ಪೆರ್ಚಿ ಕಳೆಯೆ (ಕ) ಭೀತಿಯಿಂ ರಾಗರಸಂ ಪೆರ್ಚಿ ಕಳೆಯೇಙಿ(ಗ)

ಪಾಗಾವತವುಲಿಯದ ಶುಕ
ಶಾರಿಕೆಗಳ್ ಮಧುರವಿರುತಿವೀಱದ ಕೋಪಾ
ಗಾರಮನೊರ್ಮೆಯೆ ಪೊಕ್ಕೀ
ಕಾರಣವೇನೆನಗೆ ತಿಳಿಯೆ ಪೇೞಿಂದುಮುಖೀ ೮೮

ಸಿಂದೂರವಸನಮಂ ಕಳೆ
ದೊಂದು ಸಿತಾಂಬರಮನುಟ್ಟು ನಿರ್ಮಳನಿರ್ಮೋ
ಕಂದಳೆದ ನಾಗಕನ್ನಕೆ
ಯಂದಮನಭಿನಯಿಸಿದಂದಮೇಂ ಲಲಿತಾಂಗೀ ೮೯

ತರುಣಿ ಕಳಂಕಮನಂತಃ
ಕರಣದೊಳಾಂತಮಳವೃತ್ತಿಯಂ ಕೂಡೆ ಬಹಿ
ಷ್ಕರಿಪಂತೆ ಮಹಾರಜನಾಂ
ಬರಮಂ ಕಳೆದೇಕೆ ಧವಳಪಟಮಂ ಪೊದೆದೌ ೯೦

ಹೃದಯದ ತಾಪದಿನುರ್ಕುವ
ವದನದ ಲಾವಣ್ಯರಸದ ನೊರೆಯೆನೆ ನೊಸಲ
ಲ್ಲಿ ದುಕೂಲಪಟ್ಟಮಂ ಕ
ಟ್ಟಿದಭಿಪ್ರಾಯಮನಮೋಘಮಱಿಪುವುದಬಲೇ ೯೧

ಅಲೆವ ನಿಡುಸುಯ್ಯಲಿಂ ಮುಖ
ನಲಿನರಜಸ್ಸಂಕುಳಂ ತೆರಳ್ದೊರ್ಬುಳಿಯಿಂ
ಕೆಲಸಾರ್ದಂತಿರಲೇಕೆಗೆ
ಲಲಾಟದೊಳ್ ತೊಡೆದೆ ರಕ್ತಚಂದನರಸಮಂ ೯೨

ವ॥ ಎಂದರವಿಂದಲೋಚನಂ ನುಡಿಯೆ

ಆ ಚಂಚಲನೇತ್ರೆಯನ್ನು ನೋಡಿ, ೮೮. ಚಂದ್ರಮುಖೀ, ಪಾರಿವಾಳವು ಗುಬ್ಬಳಿಸದ, ಶುಕಸಾರಿಕೆಗಳು ಮಧುರಧ್ವನಿಯನ್ನು ಬೀರದ ಈ ಕೋಪಗೃಹವನ್ನು ತಟ್ಟನೆ ನೀನು ಪ್ರವೇಶಿಸಿದ ಕಾರಣವನ್ನು ಎನಗೆ ತಿಳಿಸು. ೮೯. "ಲಲಿತಾಂಗೀ, ಸಿಂಧೂರವರ್ಣದ ವಸ್ತ್ರವನ್ನು ಕಳೆದು, ಒಂದು ಬಿಳಿಯ ಬಟ್ಟೆಯನ್ನು ಉಟ್ಟುಕೊಂಡು ಬಿಳಿಯ ಪೊರೆಯನ್ನು ತಳೆದ ನಾಗಕನ್ಯೆಯ ಅಂದವನ್ನು ಅಭಿನಯಿಸಿದ ಈ ಅಂದವೇನು! ೯೦. "ತರುಣೀ, ಮನಸ್ಸಿನಲ್ಲಿ ಏನೋ ಕಳಂಕವನ್ನಿಟ್ಟುಕೊಂಡು, ಸಿಂದೂರವಸ್ತ್ರವನ್ನೆಸೆದು, ಸತ್ತ್ವಗುಣವನ್ನು ಹೊರಗೆ ತಳ್ಳುವಂತೆ ಬಿಳಿಯ ಬಟ್ಟೆಯನ್ನು ಏಕೆ ಧರಿಸಿದೆ; ೯೧. "ಅಬಲೇ ಹೃದಯದ ಶಾಪದಿಂದ ಉಕ್ಕುವ ಮುಖದ ಲಾವಣ್ಯರಸದ ನೊರೆಯೆನ್ನುವಂತೆ ಹಣೆಯಲ್ಲಿ ದುಕೂಲದ ಪಟ್ಟಿಯನ್ನು ಕಟ್ಟಿದ ಅಭಿಪ್ರಾಯವನ್ನು ನನಗೆ ಸರಿಯಾಗಿ ತಿಳಿಸು. ೯೨. "ಅಲೆಯುವ ನಿಟ್ಟುಸಿರಿನಿಂದ ಮುಖಕಮಲದ ರಜಸ್ಸಮೂಹವು ಕೆರಳಿ ಒಟ್ಟಾಗಿ ಪಕ್ಕಕ್ಕೆ ಹೋಗಿರುವಂತೆ ಹಣೆಯಲ್ಲೇಕೆ ಕೆಂಪು ಗಂಧದ ರಸವನ್ನು ಲೇಪಿಸಿದೆ! ವ॥ ಎಂದು ಆ ಕಮಲನೇತ್ರನು

ನೀನಱಿದುಮಱಿಯದಂತಿರ
ದೇನೆಂದಪೆ ಕೃಷ್ಣ ನಿನ್ನ ಮಾಯೆಯನಂತಾ
ದಾನವರ್ಗೆ ಮೆಱೆವುದಲ್ಲದೆ
ಮಾನಿನಿಗೆನಗಿಂತು ಮೆಱೆದು ಕೊಱಚಾಡುವುದೇ ೯೩

ವ॥ ಎಂದು

ಕಾಂತೆ ಮನಃಖೇದದಿನೋ
ರಂತುಗೆ ಕಣ್ಬನಿಯನಂತವಂ ಕುಡಿತೆಗಳಿಂ
ದಾಂತು [1]ಸುಖಮೂರ್ತಿ ತನ್ನುರ
ಮಂ [2]ತೊಡೆದಂತೊಂದು ಸುಖಮನಾಂತಂ ಕೃಷ್ಣಂ ೯೪

ವ॥ ಅದಂ ಕಂಡು

ಉಪಚಾರದಿಂದಮೇವಂ
ದಪುದೆನಗೀ ಕೃತಕವೃತ್ತಿಯಂ ನಚ್ಚುವರಾ
ರಪಚಾರಕು[3]ಪಿತೆಗೆನಗಿ
ನ್ನುಪಚಾರಂ ವ್ಯಥೆಯನೀಗುಮೀಗುಮೆ ಸುಖಮಂ ೯೫

ಪೂತನೆಯಂ ಕೊಂದಾ ಸ್ತ್ರೀ
ಘಾತುಕವೃತ್ತಿಯುಮನೆನ್ನೊಳೇಂ ತೋಱಿದಪೈ
ಪೂತನೆಯ ತೆಱದೆ ನಿನಗಾ
ನೇತಱ ಪೊಲ್ಲಮೆಯನರಸ ಬಗೆದೆಂ ಬಗೆಯೊಳ್ ೯೬

ಕೇಳಿದನು. ೯೩. "ಕೃಷ್ಣಾ, ನೀನು ತಿಳಿದೂ ತಿಳಿಯದಂತೆ, ಅದೇನು ಹೇಳುತ್ತೀಯೆ! ನಿನ್ನ ಮಾಯೆಯನ್ನು ಹಾಗೆ! ಆ ರಾಕ್ಷಸರಿಗೆ ತೋರಿಸುವುದಲ್ಲದೆ ಮಾನಿನಿಯರಿಗೆ ತೋರಿಸಿ ಮರ್ಮೋದ್ಘಾಟನ ಮಾಡುವುದೆ?!" ವ॥ ಎಂದು ೯೪. ಆ ಕಾಂತೆ ಮನಸ್ಸಿನ ಖೇದದಿಂದ ಕಣ್ಣೀರನ್ನು ಸುರಿಸಿದಳು. ಕೃಷ್ಣನು ಆ ಕಣ್ಣೀರಿನ ಹನಿಯನ್ನು ಕೈಸೇರೆಯಿಂದ ಹಿಡಿದುಕೊಂಡು ತನ್ನ ಎದೆಗೆ ಬಳಿದುಕೊಂಡು ಅದೊಂದು ಬಗೆಯ ಸುಖವನ್ನು ಪಡೆದನು. ವ॥ ಅದನ್ನು ಕಂಡು ೯೫. "ಈ ಉಪಚಾರದಿಂದ ನನಗೆ ಬರುವುದೇನು? ಈ ಕೃತಕ ವರ್ತನೆಯನ್ನು ನೆಚ್ಚುವವರಾರು? ಅಪಚಾರದಿಂದ ಕೋಪಗೊಂಡಿರುವ ನನಗೆ ಇನ್ನು ಉಪಚಾರವು ವ್ಯಥೆಯನ್ನುಂಟುಮಾಡುವುದಲ್ಲದೆ ಸುಖವನ್ನುಂಟುಮಾಡುವುದೆ?! ೯೬. "ಅರಸಾ, ಪೂತನೆಯನ್ನು ಕೊಂದ ಆ ಸ್ತ್ರೀಘಾತುಕ ವರ್ತನೆಯನ್ನು ನನಗೇಕೆ ತೋರುವೆ?! ಪೂತನೆಯಂತೆ ನಾನು ಮನಸ್ಸಿನಲ್ಲಿ ನಿನಗೆ ಯಾವ ಕೇಡನ್ನು ಯೋಚಿಸಿದೆ?

---

೧. ಶುಭಮೂರ್ತಿ (ಖ) ೨. ತೊಡೆದಂದೊಂದು (ಗ) ೩. ಕುಪಿತೆಯಾಂ ನಿ (ಕ) ಕುಪಿತೆಯಾಗಿ (ಗ)

ಮಾನನಿಧಿಯೆಂದು ಮನ್ನಿಪೆ
ನೀನೆನ್ನಂ ಮುನ್ನಮಾದುದಿಂದಪಮಾನಂ
ಮಾನಿನಿಗೆ ಮಾನಭಂಗಂ
ತಾನಿದು ಮರಣಕ್ಕಮಧಿಕವೆಂಬುದನಱಿಯಾ ೯೭.

ವ|| ಎಂದು ನುಡಿದ ನಲ್ಲಳ ನುಡಿಗಳಂ ಕೇಳ್ದು

ಪಂಕರುಹವದನೆ ಮನದಾ
ಶಂಕೆಯಿಂದೇಂ ಸ್ನೇಹವೆಂಬುದೆರಡಿಲ್ಲೆನ್ನೊಳ್
ನೀಂ ಕೇಳ ಸತ್ಯಭಾಮೆಯ
ಕಿಂಕರನೀ ಕೃಷ್ಣನೆಂಬ ಲೋಕದ ನುಡಿಯಂ ೯೮

ನಿನ್ನೊಲವನರ್ಘ್ಯವದಱಿಂ
ದೆನ್ನ ಸುಖಂ ನೆಗಟ್ಟುದದಱಿನಾತ್ಮಸುಖಾರ್ಥಂ
[1]ನಿನ್ನನೆ ಮನ್ನಿಸುವೇ ನಾಂ
ನಿನ್ನಿಂ ಪ್ರಿಯವಸ್ತುವೆನಗೆ ಪೆಱತೊಂದುಂಟೇ ೯೯

ವ|| ಎಂದು ವನಜಲೋಚನಂ ತನ್ನ ಮನದೊಲವಂ ತೋಱೆ ನುಡಿಯೆಯುಮಾ ನುಡಿಗಳ್ಗೆ ಕಿಡಿಕಿಡಿಯಾಗಿ

ಪ್ರಿಯುಮಪ್ಪ ವಸ್ತುವಂ ನೀಂ
ದಯೆಯಿಂ ಕುಡೆ ಪಡೆದಳಾವಳಾಕೆಯೆ ದಿಟದಿಂ
ಪ್ರಿಯೆ ನಿನಗಾಂ ವಾಙ್ಮಾತ್ರ
ಪ್ರಿಯೆಯಿನ್ನೀನೆನಗಿದೇಕೆ ಚದುರಂ ಮೆಱೆವೈ ೧೦೦

೯೭. ಮುಂಚೆ ನೀನು ನನ್ನನ್ನು ಮಾನನಿಧಿಯೆಂದು ಮನ್ನಿಸುತ್ತಿದ್ದೆ. ಇಂದು ಅವಮಾನವಾಯಿತು. ಮಾನಿನಿಗೆ ಈ ಬಗೆಯ ಮಾನಭಂಗವು ಮರಣಕ್ಕಿಂತ ಹೆಚ್ಚು ಎಂಬುದನ್ನು ನೀನು ಅರಿಯೆಯಾ?" ವ|| ಎಂದು ಹೇಳಿದ ಪ್ರಿಯೆಯ ಮಾತುಗಳನ್ನು ಕೇಳಿ ೯೮. "ಕಮಲಮುಖೀ, ಮನಸ್ಸಿನ ಈ ಅಶಂಕೆಯೇಕೆ? ನನ್ನಲ್ಲಿ ಸ್ನೇಹವೆಂಬುದು ಎರಡಿಲ್ಲ. ಈ ಕೃಷ್ಣನು ಸತ್ಯಭಾಮೆಯ ಕಿಂಕರನು" ಎಂದು ಲೋಕೋಕ್ತಿಯನ್ನು ಕೇಳು. ೯೯. "ನಿನ್ನ ಒಲವು ಅಮೌಲ್ಯವಾದುದು, ಅದರಿಂದ ನನ್ನ ಸುಖವು ಹೆಚ್ಚಾಯಿತು. ಆದುದರಿಂದ ಆತ್ಮಸುಖಾರ್ಥವಾಗಿ ನಾನು ನಿನ್ನನ್ನೇ ಮನ್ನಿಸುವೆನು. ನಿನಗಿಂತಲೂ ಪ್ರಿಯವಾದ ವಸ್ತುವು ನನಗೆ ಬೇರೊಂದುಂಟೇ?" ವ|| ಎಂದು ಕಮಲನೇತ್ರನು, ತನ್ನ ಮನಸ್ಸಿನ ಪ್ರೀತಿಯನ್ನು ತೋರಿಸಿ ಮಾತನಾಡಿದರೂ ಆ ಮಾತುಗಳಿಗೆ ಕಿಡಿಕಿಡಿಯಾಗಿ ೧೦೦. "ಪ್ರಿಯವಾದ ವಸ್ತುವನ್ನು ನೀನು ದಯೆಯಿಂದ ಕೊಟ್ಟಾಗ ಯಾರು ಪಡೆದಳೋ ನಿನಗೆ ಅವಳೇ ನಿಜವಾದ ಪ್ರಿಯೆ. ನಾನು ನಿನಗೆ ವಾಙ್ಮಾತ್ರಪ್ರಿಯೆ. ಇನ್ನು ನನಗೆ ಇದೇಕೆ

---

೧. ನಿನ್ನಂ ಮನ್ನಿಸುವವನೆಂ (ಕಗ)

ನೆವದಿಂ ಸೋಂಕುವ ಮೆಲ್ಪು ದೋಱುವ ಭವಚ್ಚಾತುರ್ಯದಿಂದೆನ್ನೊಳಾ
ನವಲಜ್ಜಾನತಿ ಪಿಂಗೆ ಪಿಂಗಿದುದು ಕನ್ಯಾಭಾವವೆಂದಂದಿನಿಂ
ದುವರಂ ನೀಂ ದೆಯಗೆಯ್ಯೆ ದೇವ ಸಲೆ ಸಂದತ್ತೆನ್ನ ಸೌಭಾಗ್ಯಗ
ರ್ವವದಿಂದನ್ಯೆಯೊಳಾಗೆ ಸೈರಿಸುವೆನೆಂತಾಂ ಕಂಸವಿಧ್ವಂಸಕಾ ೧೦೧

ನೀನವಮಾನಿಸಿತಲ್ಲದೆ
ತಾನಾ ರುಕ್ಮಿಣಿಯ ಮುಂದೆ ನಾರದನೆನ್ನಂ
ನಾನಾವಿಧದಿಂ ಪಳಿದನ
ದೇನುಚಿತಮೆ ಮುನಿಗದೇಕೆ ರಾಗದ್ವೇಷಂ ೧೦೨

ನೆರೆದಾಸ್ಥಾನದೊಳಿರ್ದು ರುಕ್ಮಿಣಿಯ ಮುಂದೆನ್ನೊಂದು ಸೌಭಾಗ್ಯಮಂ
ಪರಿಹಾಸಂಗೆಯುತಿರ್ಪ ನಾರದನ ಮಾತಂ ಪ್ರೀತಿಯಿಂ ಕೇಳ್ದಿಳಾ
ವರ ನೀಂ ಸೋವಡಿಯಂತಿರೀಗ ನುಡಿವಯ್ ಮಿಥ್ಯೋಕ್ತಿಯಂ ಕೂರ್ಪನ
ಲ್ಲರದೇಂ ಪೆಂಡಿರನಲ್ಲಿ ಲೋಗರಪಹಾಸ್ಯಂಗೆಯ್ವುದಂ ಕೇಳ್ವರೇ ೧೦೩

ಪರಿಭವಮಂ [1]ಕಾಣದಳೆಂ
ಪರಿಭವಮಂ ಕಂಡೆನೀ ಶರೀರದೊಳಸು ತಾ
ನಿರೆಯುಂ ದ್ವಿತೀಯಜನ್ಮಂ
ದೊರೆಕೊಂಡುದು ಪುಣ್ಯಹೀನೆಗೆನಗಿದು ಪಿರಿದೇ ೧೦೪

ನಿನ್ನ ಚಾತುರ್ಯವನ್ನು ತೋರಿಸುವೆ?! ೧೦೧. "ನೆವದಿಂದ ಮುಟ್ಟುವ, ಮೃದುತ್ವವನ್ನು ತೋರಿಸುವ, ನಿನ್ನ ಚಾತುರ್ಯದಿಂದ ನನ್ನ ಆ ಹೊಸ ಲಜ್ಜೆಯು ಕಳೆಯಲು ಕನ್ಯಾಭಾವವು ತಪ್ಪಿಹೋಯಿತು, ಅಂದಿನಿಂದ ಇದುವರೆಗೂ, ದೇವ! ನೀನು ದಯೆತೋರಿಸಿದುದರಿಂದ ನನ್ನ ಸೌಭಾಗ್ಯ ಗರ್ವವು ಚೆನ್ನಾಗಿ ನಡೆಯಿತು. ಆ ದಯೆ ಇಂದು ಬೇರೆಯವಳಲ್ಲಾದರೆ, ನಾನು ಹೇಗೆ ಸೈರಿಸಲಿ? ೧೦೨. "ನೀನು ಅವಮಾನಿಸಿದುದಲ್ಲದೆ ಆ ರುಕ್ಮಿಣಿಯ ಮುಂದೆ ನಾರದನು ನನ್ನನ್ನು ನಾನಾ ವಿಧದಿಂದ ಹಳಿದನು. ಅದು ಉಚಿತವೆ? ಮುನಿಯಾದವನಿಗೆ ರಾಗದ್ವೇಷವು ಅದೇತಕ್ಕೆ? ೧೦೩. "ತುಂಬಿದ ಸಭೆಯಲ್ಲಿದ್ದು ರುಕ್ಮಿಣಿಯ ಮುಂದೆ ನನ್ನ ಸೌಭಾಗ್ಯವನ್ನು ಪರಿಹಾಸ ಮಾಡುತ್ತಿರುವ ನಾರದನ ಮಾತನ್ನು ಭೂಪತಿಯಾದ ನೀನು ಪ್ರೀತಿಯಿಂದ ಕೇಳಿ ಪಾಮರನಂತೆ ಈಗ ಸುಳ್ಳುಮಾತನ್ನಾಡುತ್ತಿರುವೆ. ಅನುರಾಗವುಳ್ಳ ಪ್ರಿಯರು ಸಭೆಯಲ್ಲಿ ತಮ್ಮ ಪತ್ನಿಯರನ್ನು ಜನರು ಅಪಹಾಸ್ಯಮಾಡುವುದನ್ನು ಕೇಳುವರೇನು? ೧೦೪. "ಪರಿಭವವನ್ನು ಕಾಣದವಳಾಗಿದ್ದ ನಾನು ಈಗ ಪರಿಭವವನ್ನು ಕಂಡೆನು. ಈ ಶರೀರದಲ್ಲಿ ಪ್ರಾಣವು ಇದ್ದರೂ ಎರಡನೆಯ ಜನ್ಮವು ಪ್ರಾಪ್ತವಾಯಿತು. ಪುಣ್ಯಹೀನೆಯಾದ

---

೧. ಕಾಣದಳಾಂ (ಖ)

ಅಱಿಯೆಂ ಮುಗ್ಧೆಯೆನಾನೆಱ
ವಱಿಯದು ನಿನ್ನೊಲ್ಮೆಯೆಂದು ನಚ್ಚುವೆನಿದನಿಂ
ದಱಿದೆಂ ಪ್ರಿಯ ನಿನ್ನಯ ಮನ
ದೆಱಕಂ ಸ್ಥಿರಮಲ್ಲಮೆಂಬುದಂ ಕಮಲಾಕ್ಷಾ ೧೦೫

ಪ್ರಿಯೆ ಸತ್ಯಂ ಸತ್ಯಭಾಮಾಸತಿ ಸತಿಯರೊಳೀಯಚ್ಯುತಂಗೆಂದು ನಿಚ್ಚಂ
ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆವಿರ್ ದೇವಕೀದೇ
ವಿಯರಿನ್ನುಂ [1]ನಾಡೆ ಕೊಂಡಾಡುವುದು ಪರಿಜನಂ ಧಾತ್ರಿ ಕೈಕೊಳ್ವುದಿಂದ
ಪ್ರಿಯೆಯಾಗಿರ್ದೆನ್ನಿನಿನ್ನಾರ್ ಬಗೆದಪರೆನಗಿನ್ನೇಕೆ ಸಂಸಾರಬಂಧಂ ೧೦೬

ವನಜಲಕೇಳಿ [2]ಮುಖ್ಯಜನಕೇಳಿಯೊಳಗ್ಗದ ನಿನ್ನ ರುಕ್ಮಿಣೀ
ವನಿತೆ ಸುವರ್ಣಪೀಠಗತೆಯಾಗಿರೆ ನಿನ್ನೆಸೆವಂಕಪೀಠದೊಳ್
ಮನವೊಸೆದಿರ್ದು ನೋಱ್ಪವಳೆ ನಿನ್ನಪಮಾನದೆ ಪಿಂಗಿ ನೋಡಲಾ
ರ್ಪೆನೆ ನಿಲಲಾರ್ಪೆನುಗ್ರತಪದೊಳ್ ಬಿಡಲಾರ್ಪೆನಧೀಶ ಜೀವಮಂ ೧೦೭

ಅಭಿನವವಸ್ತುವಂ ಪ್ರಿಯೆಗೆ ರುಕ್ಮಿಣಿಗಿತ್ತು ವೃಥೋಕ್ತಿಯಿಂದಲೇ
ವಿಭು ತಿಳಿಪಲ್ಕೆ ಬೇಡ ಪೆಱಸಾರೆನಗೀ [3]ಭವನಿಂತು ಪೋದುದೀ
ಯಭಿಭವದಿಂದಮಿನ್ನೆನಗೆ ಬಾಳ್ಕೆಯೆ ಪೇಟ ಭವಾಂತರಕ್ಕೆ ವ
ಲ್ಲಭೆ [4]ನಿನಗಪ್ಪೆನಕ್ಕೆನಗೆ ನೀಂ ದಯೆಗೆಯ್ಯೆ ತಪಕ್ಕನುಜ್ಞೆಯಂ ೧೦೮

ನನಗೆ ಇದು ದೊಡ್ಡದೆ? ೧೦೫. "ಕಮಲಾಕ್ಷಾ! ಮೂಢಳಾದ ನಾನು ತಿಳಿಯೆನು. ನಿನ್ನ ಒಲುಮೆಯು ನಡುವೆ ಹರಿದು ತಪ್ಪಿಹೋಗುವುದಿಲ್ಲವೆಂದು ನೆಚ್ಚಿದೆನು. ನಿನ್ನ ಪ್ರೇಮವು ಸ್ಥಿರವಲ್ಲವೆಂಬುದನ್ನು ಇಂದು ತಿಳಿದೆನು. ೧೦೬. "ಈ ಕೃಷ್ಣನಿಗೆ ಸತಿಯರಲ್ಲಿ ಸತ್ಯಭಾಮೆಯೇ ಸತ್ಯವಾಗಿಯೂ ಅತಿ ಪ್ರಿಯೆ ಎಂದು ನಮ್ಮ ಅತ್ತೆಯರಾದ ದೇವಕೀದೇವಿಯರು ನನ್ನನ್ನು ಪ್ರೀತಿಯಿಂದ ನೋಡುವರು, ಮನ್ನಿಸಿ ನಡೆಸುವರು. ಪರಿಜನವೂ ಇನ್ನೂ ಚೆನ್ನಾಗಿ ನನ್ನನ್ನು ಕೊಂಡಾಡುವುದು, ಭೂಮಿಯೇ ಅದನ್ನು ಒಪ್ಪುವುದು. ಇಂದು ನಿನಗೆ ಅಪ್ರಿಯೆಯಾಗಿರುವ ನನ್ನನ್ನು ಇನ್ನು ಯಾರು ಮನಸ್ಸಿಗೆ ತಂದುಕೊಳ್ಳುವರು? ನನಗೆ ಇನ್ನೇತಕ್ಕೆ ಸಂಸಾರ ಬಂಧ? ೧೦೭. "ವನಕ್ರೀಡೆ ಜಲಕ್ರೀಡೆ ಮೊದಲಾದ ನಿನ್ನ ಕೇಳಿಯಲ್ಲಿ ಶ್ರೇಷ್ಠಳಾದ ರುಕ್ಮಿಣೀವನಿತೆ ಸುವರ್ಣಪೀಠದಲ್ಲಿ ಕುಳಿತಿರುವಾಗ, ಹೊಳೆಯುವ ನಿನ್ನ ತೊಡೆಯಮೇಲೆ ಸಂತೋಷದಿಂದ ಕುಳಿತು ಅವಳನ್ನು ನೋಡುತ್ತಿದ್ದ ನಾನೇ ಇನ್ನು ಅವಮಾನದಿಂದ ಕುಗ್ಗಿ ಅವಳನ್ನು ಮತ್ತೆ ನೋಡಬಲ್ಲೆ? ಉಗ್ರವಾದ ತಪಸ್ಸಿನಲ್ಲಿ ನಿಲ್ಲಬಲ್ಲೆನು ಜೀವವನ್ನು ಬಿಡಬಲ್ಲೆನು. ೧೦೮. ಎಲೈ ವಿಭುವೇ, ಹೊಸದಾದ ವಸ್ತುವನ್ನು ಪ್ರಿಯೆ ರುಕ್ಮಿಣಿಗೆ ಕೊಟ್ಟು ವ್ಯರ್ಥವಾದ ಮಾತಿನಿಂದ ನನ್ನನ್ನು ಸಮಾಧಾನಪಡಿಸಬೇಡ. ಹೋಗು ನನಗೆ ಈ ಜನ್ಮವು ಹೀಗೆ ಕಳೆಯಿತು. ಈ ಅವಮಾನವಾದ ಮೇಲೆ ಇನ್ನು ನನಗೆ ಬದುಕು

೧. ಕೊಂಡು (ಮೊಅ) ೨. ಮುಖ್ಯ ನಿಜ (ಕಖಗ) ೩. ಭವವಿಂತೆ (ಕಗ) ೪. ನಿನಗಪ್ಪೆನಕ್ಕೆಮಗೆ (ಕಗ)

ವ|| ಎಂದು ನುಡಿದು ಬಾಷ್ಪಜಲವಿಲುಳಿತಲೋಚನೆಯುಮುಷ್ಣಶ್ವಾಸಪವನಶೋಷಿತ ಪಲ್ಲವಾಧರೆಯುಮತಿಶಯಸ್ವಾಂತಖೇದಸಂತಪ್ತ ಗಾತ್ರೆಯುಮಾಗಿರ್ದ ಸತ್ರಾಜಿತೀದೇವಿಯಂ ದೇವಕೀನಂದನಂ ಕಾರುಣ್ಯದೃಷ್ಟಿಯಿಂ ನಿರೀಕ್ಷಿಸಿ

ರಮಣೀ ನೀಂ ಮುನಿದಂದಮಂ ತಿಳಿದೆನೀಗಳ್ ಪಾರಿಜಾತ ಪ್ರಸೂ
ನಮನಾ ರುಕ್ಮಿಣಿಗಿತ್ತೆ[1]ನೆಂಬುದೊಲವಂತಾ ಪುಷ್ಪಮೊಂದೇನಪೂ
ರ್ವಮೆ ದೇವೇಂದ್ರನ ನಂದನಕ್ಕೆ ಪರಿಯಿಟ್ಟಾನಾವಗಂ ಪಾರಿಜಾ
ತಮಹಿಜಾತಮನೀಟ್ಟು ತಂದು ನಿನಗೀವೆಂ ಕೇಳ್ ಪ್ರತಿಜ್ಞೋಕ್ತಿಯಂ ೧೦೯

ಎನೆ ಕೇಳ್ದಾ ಸತ್ಯಭಾಮಾಸತಿ ತೊಲಗಿಸಿ ಹೃತ್ಕೋಪಮಂ ಸುಪ್ರಸನ್ನಾ
ನನೆಯಾಗಿರ್ದಲ್ಲಿ ತುಳ್ಕಾಡುವ ನಗೆ ನೆಗಟುತ್ತಿರ್ಪ ರಾಗಂ ಪುದುಂಗೊ
ಳ್ವ ನಯಂ ಕೈಕೊಳ್ವ ಬಿಂಕಂ ಪಸರಿಸುವ ಬೆಡಂಗಪ್ಪುಕೆಯ್ಯೊಂದು ಕೆಯ್ತಂ
ತನಗಂತೊಂದಟ್ಟಜಿಂ ಪುಟ್ಟಸುವಿನಮೆಸೆದಂ ಶ್ರೀಜಗನ್ನಾಥದೇವಂ ೧೧೦

ಉಂಟೆ ಹೇಳು. ೧೦೮. ಜನ್ಮಾಂತರಕ್ಕೆ ನಿನಗೆ ಪ್ರಿಯೆಯಾಗುವೆನು. ಆಗಲಿ ನನಗೆ ನೀನು ತಪಸ್ಸಿಗೆ ಅನುಜ್ಞೆಯನ್ನು ದಯೆಪಾಲಿಸು." ವ|| ಎಂದು ಹೇಳಿ ಕಣ್ಣೀರು ತುಂಬಿ ಚೆಲ್ಲುತ್ತಿರುವ ಕಣ್ಣುಳ್ಳವಳೂ ಬಿಸಿಯಾದ ಉಸುರಿನ ಗಾಳಿಯಿಂದ ಒಣಗಿದ ಚಿಗುರುತುಟಿಯುಳ್ಳವಳೂ ಅತಿಶಯವಾದ ಹೃದಯಖೇದದಿಂದ ಸಂತಪ್ತಗಾತ್ರೆಯೂ ಆಗಿದ್ದ ಸತ್ಯಭಾಮಾದೇವಿಯನ್ನು ದೇವಕೀನಂದನನು ಕರುಣಾದೃಷ್ಟಿಯಿಂದ ನೋಡಿ ಹೀಗೆಂದನು. ೧೦೯. ರಮಣೀ, ನೀನು ಕೋಪಿಸಿಕೊಂಡುದು ಏಕೆಂಬುದನ್ನು ಈಗ ತಿಳಿದೆನು. ಪಾರಿಜಾತಪುಷ್ಪವನ್ನು ನಾನು ರುಕ್ಮಿಣಿಗೆ ಕೊಟ್ಟೆನು. ಆಗ ಹಾಗೆ ತೋರಿತು. ಆ ಹೂವೊಂದ ಪೂರ್ವವೇನು? ನನ್ನ ಪ್ರತಿಜ್ಞೆಯನ್ನು ಕೇಳು. ದೇವೇಂದ್ರನ ನಂದನವನಕ್ಕೆ ಧಾವಿಸಿ, ದಾಳಿಯಿಟ್ಟು, ಯಾವಾಗಲೂ ಇರುವಂತಹ ಪಾರಿಜಾತವೃಕ್ಷವನ್ನೇ ನಿನಗೆ ತಂದುಕೊಡುವೆನು." ೧೧೦. ಹಾಗೆ ಹೇಳಲು ಆ ಮಾತನ್ನು ಕೇಳಿದ ಸತ್ಯಭಾಮೆ, ತನ್ನ ಹೃದಯದ ಕೋಪವನ್ನು ಕಳೆದುಕೊಂಡು ಸುಪ್ರಸನ್ನಮುಖಿಯಾದಳು. ಆಗ ಅವಳ ತುಳುಕಾಡುವ ನಗುವೂ, ಹೆಚ್ಚುತ್ತಿರುವ ಪ್ರೀತಿಯೂ, ತುಂಬಿದ ನಯವೂ, ಕೈಗೊಳ್ಳುವ ಬಿಂಕವೂ, ಹರಡುವ ಬೆಡಗೂ, ಆಲಿಂಗಿಸುವ ಕಾರ್ಯವೂ ತನಗೆ ಒಂದು ಬಗೆಯ ಅಕ್ಕರೆಯನ್ನು ಹುಟ್ಟಿಸುತ್ತಿರಲು ಆ ಶ್ರೀಜಗನ್ನಾಥದೇವ ಕೃಷ್ಣನು ಪ್ರಕಾಶಿಸಿದನು.

---

೧. ನಿಂದೆ ಒಲವಿಂದಾ (ಕಗ) ನೆಂದೆ ಒಲವಿಂದಾ (ಮೊಅ)

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಮಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀಪಾದ
ಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ ವಿಜಯ
ಮಹಾಪ್ರಬಂಧದೊಳ್ ನರಕಾಸುರವಧ ಷೋಡಶಸಹಸ್ರ ದಿವ್ಯ
ಕಾಂತಾಸ್ವೀಕರಣ ವಿಬುಧಜನನೀಕುಂಡಲ ಪ್ರದಾನ ರುಕ್ಮಿಣೀ
ಪುಣ್ಯಕವ್ರತ ಪ್ರದ್ಯುಮ್ನಾದಿ ಸಹಸ್ರ ಕುಮಾರೋತ್ಪತ್ತಿ
ನಾರದದತ್ತ ಪಾರಿಜಾತಪುಷ್ಪನಿಮಿತ್ತ ಸತ್ಯಭಾಮಾ
ಪ್ರಣಯಕಲಹವರ್ಣನಂ
ದ್ವಾದಶಾಶ್ವಾಸಂ

ಇದು ಸಮಸ್ತ ಕಮಲ ಭವಾಂಡಮಾಲಾ... ಸಕಲಕಲಾಮ್ನಾಯತಂತ್ರ ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥವಿಜಯಮಹಾಪ್ರಬಂಧದಲ್ಲಿ ನರಕಾಸುರವಧೆ ಹದಿನಾರುಸಾವಿರದಿವ್ಯಕಾಂತೆಯರ ಸ್ವೀಕರಣ ಅದಿತಿದೇವಿಯ ಕುಂಡಲ ಪ್ರದಾನ ರುಕ್ಮಿಣೀ ಪುಣ್ಯಕವ್ರತ ಪ್ರದ್ಯುಮ್ನಾದಿ ಸಹಸ್ರ ಕುಮಾರೋತ್ಪತ್ತಿ ನಾರದನು ಕೊಟ್ಟ ಪಾರಿಜಾತ ಕಾರಣವಾದ ಸತ್ಯಭಾಮೆಯ ಪ್ರೇಮ ಕಲಹ ವರ್ಣನೆಗಳ ಹನ್ನೆರಡನೆಯ ಆಶ್ವಾಸ.

# ತ್ರಯೋದಶಾಶ್ವಾಸಂ

ಶ್ರೀರಮಣನಿಂತು ತಿಳಿಪಿ ಮ
ನೋರಮೆಯಂ ಸತ್ಯಭಾಮೆಯಂ ತತ್ಕೋಪಾ
ಗಾರದೆ ತಳರ್ದು ವಿನೋದಾ
ಗಾರಮನಾ ರಮಣಿವೆರಸು ಮುದದಿಂ ಪೊಕ್ಕಂ ೧

ವ|| ಆಗಳಾ ವಿನೋದನಿಳಯದಿಂ ನೈಪಥ್ಯಸದನಕ್ಕೆ ಪಸದನಂಗೆಯ್ಯಲೆಂದು [1]ಸತ್ಯಭಾಮೆ ಪೋಗೆ ಪಂಕರುಹನಾಭಂ

ಮುನಿದಿರ್ದೋಪಳ ಕೆಯ್ತಮಂ ತಿಳಿಪಿದೀ ವೃತ್ತಾಂತಮಂ ಬ್ರಹ್ಮಪು
ತ್ರನನಾಮಂತ್ರಿಸಿ ಪೇೞ್ವೆನೆಂಬ ಪದದೊಳ್ ಚಿತ್ತಜ್ಞನಾ ನಾರದಂ
ಮುನಿಪಂ ಬಂದು ವಿಶಿಷ್ಟವಿಷ್ಟರದೊಳಿಂಬಿಂ ಕುಳ್ಳಿರಲ್ಕಂಚೆವಾ
ಸನವಷ್ಟಂಭಿಸಿ ತಾಂ ಪ್ರಿಯಾಗಮನಮಂ ಪಾರುತ್ತುಮಿರ್ಪನ್ನೆಗಂ ೨

ಕುಡುವುರ್ವಿಂ ಕರ್ಬುವಿಲ್ಲಂ ಪರಪುವ ಕಡೆಗಣ್ಣಿಂ ಮನೋಜಾಸ್ತ್ರಮಂ ಸಾ
ಲಿಡುವುದ್ಯನ್ಮೇಖಲಾಕೂಜಿತದಿನತನುಕೋದಂಡಟಂಕಾರಮಂ ಕ
ನ್ನಡಿಪಂಘ್ರಿನ್ಯಾಸದಿಂ ತಾವರೆಗೆದಱುವ ಮಂದಸ್ಮಿತೋದ್ಯೋತದಿಂದಿಂ
ಗಡಲಂ ಬೇಱೊಂದನುತ್ಪಾದಿಸುವ ತೆಱದಿನಾನಂದದಿಂ ದೇವಿ ಬಂದಳ್ ೩

ವ|| ಅಂತು ಕೈಗೆಯ್ದು ಬರುತ್ತುಂ ಪುರುಷೋತ್ತಮನ ಕೆಲದೊಳಿರ್ದ ನಾರದನಂ ಕಂಡು

೧. ಶ್ರೀರಮಣ ಕೃಷ್ಣನು ತನ್ನ ಮನೋರಮೆಯಾದ ಸತ್ಯಭಾಮೆಯನ್ನು ಸಮಾಧಾನಪಡಿಸಿ, ಅವಳ ಕೋಪಗೃಹದಿಂದ ಹೊರಟು ಆ ರಮಣಿಯೊಡನೆ ಸಂತೋಷದಿಂದ ವಿನೋದಗೃಹವನ್ನು ಹೊಕ್ಕನು. ವ|| ಆಗ ಆ ವಿನೋದಾಲಯದಿಂದ ಅಲಂಕಾರನಿಲಯಕ್ಕೆ ಶೃಂಗರಿಸಿಕೊಳ್ಳುವುದಕ್ಕಾಗಿ ಸತ್ಯಭಾಮೆ ಹೋದಳು. ಕಮಲನಾಭ ಕೃಷ್ಣನು. ೨. ಮುನಿಸಿಕೊಂಡಿದ್ದ ಪ್ರಿಯೆಯ ಕೋಪ ಕಾರ್ಯದ ಮತ್ತು ತಾನು ಸಮಾಧಾನಪಡಿಸಿದ ಈ ವೃತ್ತಾಂತವನ್ನು ಬ್ರಹ್ಮಪುತ್ರ ನಾರದನನ್ನು ಕರೆಸಿ ಹೇಳುವೆನು ಎಂದುಕೊಂಡಾಗ ಚಿತ್ತಜ್ಞನಾದ ಆ ನಾರದಮುನಿಯು ಬಂದು, ಉತ್ತಮಪೀಠದಲ್ಲಿ ಕುಳಿತುಕೊಂಡನು. ಕೃಷ್ಣನು, ಹಂಸತೂಲಿಕೆಯ ಇಂಬನ್ನು ಒರಗಿಕೊಂಡು ಕುಳಿತು ಪ್ರಿಯೆಯು ಬರುವುದನ್ನು ನಿರೀಕ್ಷಿಸುತ್ತಿದ್ದನು. ೩. ಸತ್ಯಭಾಮಾದೇವಿ ತನ್ನ ಡೊಂಕಾದ ಹುಬ್ಬಿನ ಬಿಲ್ಲನ್ನು ಹರಡುವ, ಕಡೆಗಣ್ಣಿನಿಂದ ಕಾಮಾಸ್ತ್ರವನ್ನು ಸಾಲಿಡುವ, ಹೊಳೆಯುವ ವಡ್ಯಾಣದ ಶಬ್ದದಿಂದ ಮನ್ಮಥನ ಬಿಲ್ಲಿನ ಟಂಕಾರವನ್ನು ಸ್ಪಷ್ಟಪಡಿಸುವ, ಹೆಜ್ಜೆಯಿಡುವುದರಿಂದ ತಾವರೆಯ ಹೂವನ್ನು ಹರಡುವ, ಕಿರುನಗೆಯ ಹೊಳಪಿನಿಂದ ಬೇರೊಂದು ಕ್ಷೀರಸಮುದ್ರವನ್ನು ಹುಟ್ಟಿಸುವ ರೀತಿಯಲ್ಲಿ ಆನಂದದಿಂದ ಬಂದಳು. ವ|| ಹಾಗೆ ಅಲಂಕಾರಮಾಡಿಕೊಂಡು ಬರುತ್ತ ಕೃಷ್ಣನ ಪಕ್ಕದಲ್ಲಿದ್ದ ನಾರದನನ್ನು ಕಂಡಳು.

---

೧. ಸತ್ಯಭಾಮೆಯಂ ಕಳಿಪಿ (ಖ)

ಮುನಿಯಿಸುವೆಂ ಸಪತ್ನಿಯರನೆಂದಮರದ್ರುಮದೊಂದುಪುಷ್ಪಮಂ
ಮುನಿ [1]ಹರಿಗಿತ್ತನಂತದುವೆ ರುಕ್ಮಿಣಿಗಾಗಿರೆ ಮನ್ಯುಯುಕ್ತೆಯಾ
ದೆನಗೆ ಮುರಾರಿ ತತ್ಕುಜಮನಾವಗಮಿತ್ತಪೆನೆಂದು ಪೂಣ್ದನಂ
ತೆನಗೆ ಮನೋರಥಂ ಸಮನಿಪಲ್ಲಿಗೆ ನಾರದನಲ್ತೆ ಕಾರಣಂ ೪

ವ॥ ಎಂಬ ಮನದುಕ್ತಿಯಿಂ ನಿರತಿಶಯಭಕ್ತಿ ನೆಗೞೆ ಪೊಡೆವಟ್ಟು ಮುನಿಯ ಪರಕೆಯಂ ಕೈಕೊಂಡು ಪಂಕರುಹಾಕ್ಷನಂಕಮಂ ಸೋಂಕಿ ತತ್ಪರ್ಯಂಕದೊಳ್ ಕುಳ್ಳಿರ್ದುದುಂ ಮುನೀಂದ್ರನುಪೇಂದ್ರನ ಮುಖಾರವಿಂದಮಂ ನೋಡಿ

ಪ್ರತಿಮಾಸಂ ಹರಪೂಜೆಯಂ ದಿವಿಜರಾಜಂ ಮಾೞ್ಪನಾ ಪೂಜೆಯಂ
ಶಿತಿಕಂಠಂ ಮನಮೊಲ್ದು ಕೈಕೊಳುತುಮಿರ್ಪಂ [2]ತನ್ಮಹೋತ್ಸಾಹಮಿಂ
ದೆ ತದುತ್ಸಾಹಮನೀಕ್ಷಿಸಲ್ಕೆ ಮಿಗೆ ನೀಮುಂ ಬರ್ಪುದೆಂದಾ ಶಚೀ
ಪತಿ ಕೊಟ್ಟೊಂದು ನಿಮಂತ್ರಣಪ್ರಸವಮಿಂದಾಂ ತಂದ ಪುಷ್ಪಂ ವಿಭೂ ೫

ವ॥ ಅದುಕಾರಣದಿನಿಂದಿನಿರುಳೊಳಾ ಮಹೇಶ್ವರಪೂಜಾಮಹೋತ್ಸವಮಂ ನೋಡಲ್ವೇೞ್ಕುಮೆಂದು ಪೋಗಿವಂದಪೆನೆನಗನುಜ್ಞೆಯಂ [3]ಕುಡಿಮೆಂಬ ನೆವದೆ ಮಾತುದೆಗೆಯೆ ಪೀತಾಂಬರಧರಂ ಕೇಳೆಲೆ ಮುನೀಂದ್ರ ನೀಮಿಂದೆಮಗೆ ತಂದುಕೊಟ್ಟಾಮಂತ್ರಣ ಪಾರಿಜಾತ ಕುಸುಮಮಂ ರುಕ್ಮಿಣೀದೇವಿಗಿತ್ತೊಡಾದೇವಿ ತತ್ಕುಸುಮಮಂ ಶಿರಶ್ಶೇಖರಮಂ ಮಾಡಿರ್ದ ಸಮಯದೊಳೆ ನೀವೇನೆಂದು ನುಡಿದಿರ್, ಆ ಮಾತುಗಳೊಳಗಾಗಿ ತತ್ಪ್ರಪಂಚಮಂ ನಿಜಪ್ರಿಯಸಖಿಯ ಪೇೞ್ಕೆಯಿಂ ಕೇಳ್ದೀ ಸತ್ಯಭಾಮೆ ನಿಕಾಮಪ್ರಣಯಕುಪಿತೆಯಾಗಿರ್ದುದನಱಿದು ಬಂದೀ ದೇವಿಯಂ ತಿಳಿಪಿದೆನೆಂದಾ ವೃತ್ತಾಂತಮಂ ಪೇೞ್ವ ಬಗೆಯಂ ತಂದು

೪. "ಈ ಮುನಿಯು ಸವತಿಯರನ್ನು ಕೋಪಗೊಳಿಸುತ್ತೇನೆಂದು ಕಲ್ಪವೃಕ್ಷದ ಅದೊಂದು ಹೂವನ್ನು ಕೃಷ್ಣನಿಗೆ ಕೊಟ್ಟನು. ಆ ಹೂ ರುಕ್ಮಿಣಿಗಾದುದರಿಂದ ಕೋಪಗೊಂಡ ನನಗೆ ಕೃಷ್ಣನು ಆ ವೃಕ್ಷವನ್ನೇ ಯಾವಾಗಲೂ ಇರುವಂತೆ ತಂದು ಕೊಡುವೆನೆಂದು, ಪ್ರತಿಜ್ಞೆ ಮಾಡಿದನು. ಹಾಗೆ ನನ್ನ ಇಷ್ಟಾರ್ಥವು ಒದಗುವುದಕ್ಕೆ ನಾರದನೇ ಕಾರಣನಲ್ಲವೆ!" ವ॥ ಎಂದು ಮನಸ್ಸಿನಲ್ಲಂದುಕೊಂಡು ನಿರತಿಶಯ ಭಕ್ತಿಹೆಚ್ಚಲು ಮುನಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದು, ಕೃಷ್ಣನ ತೊಡೆಯು ಸೋಕುವಂತೆ ಅವನ ಮೆತ್ತೆಯಲ್ಲಿ ಕುಳಿತುಕೊಂಡಳು. ಆಗ ಆ ಮುನೀಂದ್ರನು ಕೃಷ್ಣನ ಮುಖಕಮಲವನ್ನು ನೋಡಿ ೫. "ಪ್ರತಿಮಾಸವೂ ದೇವರಾಜನು ಹರನ ಪೂಜೆಯನ್ನು ಮಾಡುವನು. ಆ ಪೂಜೆಯನ್ನು ನೀಲಕಂಠನು ಮನಃಪ್ರೀತಿಯಿಂದ ಸ್ವೀಕರಿಸುತ್ತಿರುವನು. ಇಂದೇ ಆ ಮಹೋತ್ಸವ. ಅದನ್ನು ನೋಡಲು ನೀವೂ ಬರಬೇಕು ಎಂದು ಆ ಶಚೀಪತಿ ಕೊಟ್ಟ ಆಮಂತ್ರಣದ ಹೂವೇ ನಾನು ಇಂದು ತಂದ ಹೂವು, ವಿಭೂ! ವ॥ ಆದುದರಿಂದ ಈ ದಿನ ರಾತ್ರೆ ಮಹೇಶ್ವರನ ಪೂಜಾಮಹೋತ್ಸವವನ್ನು ನೋಡಬೇಕು ಹೋಗಿ ಬರುತ್ತೇನೆ ನನಗೆ ಅನುಜ್ಞೆಯನ್ನು ಕೊಡಿ" ಎಂಬ ನೆವದಲ್ಲಿ ಮಾತಿಗಾರಂಭಿಸಿದನು. ಕೃಷ್ಣನು "ಎಲೆ ಮುನೀಂದ್ರ ಕೇಳು

---

೧. ಹರಿಗಿತ್ತೊಡಂತದುವೆ (ಕಗ) ೨. ತನ್ಮಹೋತ್ಸಾಹದಿಂದೆ (ಖ) ೩. ಕುಡುವುದೆನಲದೇ ಮಾತಂತೆಗೆಯ್ವುದೆಂದು (ಖ)

ಪುರುಡಿಸಿ ನಲ್ಲಳಿರ್ದಿರವನಾ ಸತಿ ಕೋಪಗೃಹಕ್ಕೆವಂದು ಸಂ
ದುರದ ಸುವಸ್ತ್ರಮಂ ಕಳೆದು ಪಾಂಡುರವಸ್ತ್ರಮನುಟ್ಟುದಂ ತದಂ
ಬುರುಹದಳಾಯುತೇಕ್ಷಣೆ ದುಕೂಲದ ಪಟ್ಟಮನಾತ್ಮಭಾಳದೊಳ್
ಧರಿಯಿಸಿ ರಕ್ತಚಂದನಮನಿರ್ಕೆಲದೊಳ್ ತೊಡೆದಿರ್ದ ಕೆಯ್ತಮಂ ೬

ಕೆಳದಿಯರಟ್ಕೆಱಿಂ ನುಡಿಸೆ ಮೌನದೊಳಿರ್ದುದನಂಗತಾಪದಿಂ
ಮಳಯಜಪಂಕಮಂ ಹೃದಯದೊಳ್ [1]ತೊಡೆಯುತ್ತುರೆ ನೋಡಿ ನೋವದ
ಗ್ಗಳಿಸಿದುದೆಂದು ಚಂದನದ ಶಕ್ತಿಕೆಯಂ ನೆಲದಲ್ಲಿ ಧೊಪ್ಪನ
ಪ್ಪಳಿಸಿದುದಂ ವಿನೋದದ ಕರಾಂಬುಜಮಂ ಪಱಿದೊಟ್ಟುತಿರ್ದುದಂ ೭

ಆನಪರಾಧಿಯುಮಾಗಿ
ರ್ದೇನೆಂದೀ ಪ್ರಿಯೆಯ ಪೊರೆಗೆ ಪೋದಪೆನೆನುತುಂ
ನಾನಾವಿಧದುದ್ವೇಗದಿಂ
ತಾನಿನಿಸಂಜಿರ್ದು ದೂರದಿಂ ನೋಡಿದುದಂ ೮

ಯುವತಿ ದುಕೂಲದಂಚಲಮನಾನನದೊಳ್ ಮಱಿಮಾಡಿ ಪಾಸಿನೊಳ್
ಪವಡಿಸಿದಂದಮಂ ಮುದದೆ ತಾನದನೀಕ್ಷಿಸಿ ಪೊರ್ದಲಿಂತಿದೊಂ
ದವಸರಮೆಂದು ಮೆಲ್ಲನಿನಿಸಂ ನಡೆತಂದು ಸಖೀಜನಕ್ಕೆ ಬಿ
ನ್ನವಿಸದಿರಸ್ಮದಾಗಮಮನೀಕೆಗೆನುತ್ತುಮೆ ಸನ್ನೆಗೆಯ್ದುದಂ ೯

ನೀನು ಇಂದು ನಮಗೆ ತಂದುಕೊಟ್ಟ ಆಮಂತ್ರಣದ ಪಾರಿಜಾತ ಕುಸುಮವನ್ನು ನಾನು ರುಕ್ಮಿಣೀದೇವಿಗೆ ಕೊಟ್ಟೆನು. ಅವಳು ತಲೆಯಲ್ಲಿ ಮುಡಿದುಕೊಂಡ ಸಮಯದಲ್ಲಿ ನೀವೇನೆಂದು ಹೇಳಿದಿರೋ ಆ ಮಾತನ್ನು ತನ್ನ ಪ್ರಿಯಸಖಿಯ ಕೇಳಿಕೆಯಿಂದ ಈ ಸತ್ಯಭಾಮೆ ತಿಳಿದಳು. ಅನಂತರ ಇವಳು ಪ್ರೇಮಕುಪಿತೆಯಾಗಿದ್ದುದನ್ನು ತಿಳಿದು ಬಂದು ಈ ದೇವಿಯನ್ನು ಸಮಾಧಾನಪಡಿಸಿದೆನು" ಎಂದು, ಆ ವೃತ್ತಾಂತವನ್ನು ಪ್ರಸ್ತಾಪಿಸಿದನು. ೬. ಸತ್ಯಭಾಮೆ ಅಸೂಯೆಯಿಂದ ಇದ್ದ ಸ್ಥಿತಿಯನ್ನೂ ಅವಳು ಕೋಪಗೃಹಕ್ಕೆ ಬಂದು ಸಿಂಧೂರದ ಒಳ್ಳೆಯ ವಸ್ತ್ರವನ್ನು ತೆಗೆದು ಹಾಕಿ ಬಿಳಿಯ ಬಟ್ಟೆಯನ್ನುಟ್ಟುದನ್ನೂ ಆ ಕಮಲದಳಾಯತೇಕ್ಷಣೆ ದುಕೂಲದ ಪಟ್ಟಿಯನ್ನು ತನ್ನ ಹಣೆಯಲ್ಲಿ ಧರಿಸಿ ಕೆಂಪು ಗಂಧವನ್ನು ಆ ಪಟ್ಟಿಯ ಎರಡು ಪಕ್ಕಗಳಲ್ಲೂ ಬಳಿದುಕೊಂಡಿದ್ದುದನ್ನೂ ಕೆಳದಿಯರು ಅಕ್ಕರೆಯಿಂದ ಮಾತನಾಡಿಸಿದರೂ ಮೌನದಿಂದ ಇದ್ದುದನ್ನೂ ಕಾಮತಾಪದಿಂದ ಶ್ರೀಗಂಧರಸವನ್ನು ಎದೆಗೆ ಹತ್ತಿಸುತ್ತಿದ್ದರೆ ನೋವು ಹೆಚ್ಚಿತೆಂದು ಗಂಧದ ಭರಣಿಯನ್ನು ನೆಲದ ಮೇಲೆ ದೊಪ್ಪನೆ ಅಪ್ಪಳಿಸಿದುದನ್ನೂ ವಿನೋದದ ಕೈಯ ಕಮಲವನ್ನು ಹರಿದು ಹಾಕುತ್ತಿದ್ದುದನ್ನೂ ಹೇಳಿದನು. ೮. "ಅಲ್ಲದೆ ನಾನು ಅಪರಾಧಿಯಾಗಿದ್ದು ಏನೆಂದು ಈ ಪ್ರಿಯೆಯ ಹತ್ತಿರ ಹೋಗಲಿ ಎಂದು ನಾನಾ ವಿಧವಾದ ಉದ್ವೇಗದಿಂದ ಸ್ವಲ್ಪ ಅಂಜಿಕೊಂಡು ದೂರದಿಂದ ಇವಳನ್ನು ನೋಡಿದೆನು. ೯. ಈ ಯುವತಿ ದುಕೂಲದ ಸೆರಗನ್ನು ಮುಖಕ್ಕೆ ಮರೆಮಾಡಿಕೊಂಡು, ಹಾಸಿಗೆಯಲ್ಲಿ ಮಲಗಿದಳು. ಅದನ್ನು ನೋಡಿ, ನಾನು ಸಂತೋಷದಿಂದ ಹತ್ತಿರ

---

೧. ತೊಡೆಯುತ್ತಿರೆ ನೋವದಾಗಳ (ಕಗ)

ಬಟಿಕಮಡಿವಜ್ಜೆಯಿಂ ಸೊ
ಪ್ಪುಳಾಗದಂತೊಯ್ಯನೆತ್ತಿಂದಾ ಕೋ
ಮಳೆಯ ನಿಜಕೋಪಮಂದಿರ
ದೊಳವೊಕ್ಕಾ ಪ್ರಿಯೆಯ ಪಿಂದೆ ತನ್ನಿರ್ದಿರವಂ ೧೦

ಮುದದಿನದೊಂದುಬಿಜ್ಜಣಿಗೆಯಂ ಪ್ರಿಯೆಗೊಯ್ಯನೆ ತಾನೆ ಬೀಸುತಿ
ರ್ದುದನಮರದ್ರುಮಪ್ರಸವಸಂಗದೆ ವಾಸಿತವಾದ ತನ್ನ ಹ
ಸ್ತದ ನವಗಂಧಮಂಡಲೆಯೆ ಮಾನಿನಿ ನಿದ್ರೆಯಿನೆಟ್ಟಿದೊಂದು ತೀ
ಡಿದಪುದಪೂರ್ವಗಂಧಮೆನುತುಂ ತರಳೀಕೃತನೇತ್ರೆಯಾದುದಂ ೧೧

ಇನಿಯಳ್ ಮುರಿದೀಕ್ಷಿಸಿ ಭೋಂ
ಕನೆ ತನ್ನಂ ಕಂಡುದಂ ಭಯಂ ಮಿಗೆ ತಾನಾ
ಘನಕುಚೆಯ ಪಿಂದಡಂಗಿದ
ಬಿನದದೆ [1]ತತ್ಸತಿಗೆ ಕೋಪಮಂ ಪೆರ್ಚಿಸಿತಂ ೧೨

ಮುನಿಸಿಂದುನ್ಮೀಲಿತಲೋ
ಚನೆ [2]ನೋಟ್ಟುದುಮಾಕೆ ನೋಟ್ಟಪಾಂಗದ ಪಾಂಗಿಂ
ತನಗಗ್ಗಳಿಸಿದ ರಾಗದೆ
ಮನದಂಜಿಕೆ ಪೋಗಿ ನುಡಿದ ಚತುರೋಕ್ತಿಗಳಂ ೧೩

ಹೋಗುವುದಕ್ಕೆ ಇದೇ ಒಂದು ಸಮಯವೆಂದು ಮೆಲ್ಲಗೆ ಸ್ವಲ್ಪದೂರಬಂದು, ನಾನು ಬಂದಿರುವುದನ್ನು ತಿಳಿಸಬೇಡಿರಿ ಎಂದು ಸಖಿಯರಿಗೆ ಸಂಜ್ಞೆಮಾಡಿದೆನು. ೧೦. ಬಳಿಕ ಅಡಿಹೆಜ್ಜೆಯಿಂದ ಸದ್ದಾಗದಂತೆ ಮೆತ್ತ ಮೆತ್ತಗೆ ಬಂದು ಈ ಕೋಮಲೆಯ ಕೋಪಗೃಹದ ಒಳಹೊಕ್ಕು ಪ್ರಿಯೆಯ ಹಿಂದೆ ಇದ್ದೆನು. ೧೧. ಸಂತೋಷದಿಂದ ಒಂದು ಬೀಸಣಿಗೆಯನ್ನು ಪ್ರಿಯೆಗೆ ನಾನೆ ಮೆಲ್ಲಗೆ ಬೀಸುತ್ತಿದ್ದೆನು. ಕಲ್ಪವೃಕ್ಷದ ಹೂವಿನ ಸಂಸರ್ಗದಿಂದ ಸುವಾಸನೆಗೊಂಡ ನನ್ನ ಕಯ್ಯಿನ ಹೊಸ ಸುವಾಸನೆಯು ಇವಳಿಗೆ ತಿಳಿಯಿತು. ಅದರಿಂದ ಈ ಮಾನಿನಿ ನಿದ್ದೆಯಿಂದ ಎಚ್ಚೆತ್ತು, 'ಇದೊಂದು ಅಪೂರ್ವಗಂಧವು ಬೀಸುತ್ತಿದೆ' ಎನ್ನುತ್ತ ಚಂಚಲದೃಷ್ಟಿಯುಳ್ಳವಳಾದಳು. ೧೨. ಪ್ರಿಯೆಯು ತಿರುಗಿನೋಡಿ ನನ್ನನ್ನು ಕಂಡಳು. ಭಯವು ಹೆಚ್ಚಿದುದರಿಂದ ನಾನು ಆ ಘನಕುಚೆಯ ಹಿಂದೆ ಅಡಗಿಕೊಂಡು ವಿನೋದದಿಂದ ಅವಳ ಕೋಪವನ್ನು ಹೆಚ್ಚಿಸಿದೆನು. ೧೩. ಮುನಿಸಿನಿಂದ ದೊಡ್ಡದಾಗಿ ತೆರೆದ ಕಣ್ಣಿನಿಂದ ನನ್ನನ್ನು ನೋಡಿದಳು. ಅವಳು ನೋಡಿದ ಕಡೆಗಣ್ಣಿನ ರೀತಿಯಿಂದ ನನಗೆ ಅನುರಾಗವು ಹೆಚ್ಚಿತು, ಭಯುವು ಹೋಯಿತು. ನಾನು ಚಮತ್ಕಾರದ ಮಾತನಾಡಿದೆನು.

೧. ತತ್ಪ್ರಿಯೆಗೆ ತಾಪಮದು ಪೆರ್ಚಿದುದಂ (ಖ) ೨. ನೋಟ್ಟುದನಾಕೆ (ಕಗ)

ಇಂತಿಂತು ನುಡಿದೆನಾ ಪ್ರಿಯೆ
ಗಿಂತಿಂತೀದೇವಿ [1]ನುಡಿದಳೆನಗೆಂಬುದನಿಂ
ತಿಂತು ಮುನಿಗೊಂದುಗುಂದದೆ
ಸಂತಸದಿಂ ಪೇೞ್ದು ಶೌರಿ ಮತ್ತಿಂತೆಂದಂ ೧೪

ಸವತಿಗೆ ಕೊಟ್ಟಪೂರ್ವಮೆನಿಪುತ್ತಮವಸ್ತುವನೆನ್ನನೇಕೆ ಮಾ
ಧವ ಬಱಿಮಾತಿನಿಂ ತಿಳಿಪುವೈ ಕುಡೆ ತೀಱದ ವಸ್ತುವಿರ್ಕೆ ನೀ
ನೆವಗೆ ತಪಕ್ಕನುಜ್ಞೆಗುಡಿಮೆಂದ ಲತಾಂಗಿಗೆ ತಂದು ಪಾರಿಜಾ
ತವನದನಾವಗಂ ಕುಡುವೆನೆಂದಿದನಾಂ ನುಡಿದೆಂ ಪ್ರತಿಜ್ಞೆಯಂ ೧೫

ವII ಎನೆ ಮುನೀಶ್ವರಂ ಕೇಳ್ದು

ಕಲಹಂ ಪುಟ್ಟಿತಲೇ ಮಹೇಂದ್ರನೊಳುಪೇಂದ್ರಂ[2]ಗೆನ್ನ ಮಾತಿಂ ವಧೂ
ಕಲಹಂ ಸಾರ್ಥಕಮಾಯ್ತು ಭಾಪು ಕಲಹಾಲೋಕಾರ್ಥಿಯೆಂದಿಂತು ತ
ನ್ನೊಳೆ ತನ್ನಂ ಪೊಗೞ್ದಚ್ಯುತಂಗೆ [3]ಚಲಮಪ್ಪಂತೆಂದನೇಂ ದೇವ ಪೂ
ಣ್ದಳವಂತಕ್ಕುಮೆ ಪಾರಿಜಾತಹರಣಂ ನೋೞ್ಪಂದು ಸಾಮಾನ್ಯಮೇ ೧೬

ವII ಅದೆಂತೆನೆ

ಸುರರುಂ ದಾನವರುಂ ಪಯೋಧಿಮಥನಂಗೆಯ್ವಂದು ತದ್ದಿವ್ಯಭೂ
ಮಿರುಹಂ ಪುಟ್ಟಿದುದಂತದರ್ಕಧಿಪನಾದಂ ಶಕ್ರನಾ ಶಕ್ರನಾ
ತರುವಂ ಪ್ರೀತಿವಿಶೇಷದಿಂ ಶಚಿಗೆ ಕೊಟ್ಟಂ ಭಾವಿಸಲ್ ಪೆಂಡಿರಾ
ದರಿಸುತ್ತಿರ್ಪ ಪದಾರ್ಥಮಂ ಸುಭಟರನ್ಯರ್ಗೀಯಲೇಂ ಬಲ್ಲರೇ ೧೭

೧೪. ನಾನು ಪ್ರಿಯೆಗೆ ಹೀಗೆ ಹೀಗೆ ಹೇಳಿದೆನು. ಈ ದೇವಿ ನನಗೆ ಹೀಗೆ ಹೀಗೆ ಹೇಳಿದಳು." ಎಂಬುದನ್ನು ಸ್ವಲ್ಪವೂ ಕಡಿಮೆಮಾಡದೆ ಸಂತೋಷದಿಂದ ನಾರದನಿಗೆ ತಿಳಿಸಿ, ಮತ್ತೆ ಹೀಗೆ ಹೇಳಿದನು- ೧೫. "ಮಾಧವಾ! ಅಪೂರ್ವವಾದ ಉತ್ತಮ ವಸ್ತುವನ್ನು ಸವತಿಗೆ ಕೊಟ್ಟು ಬರಿಮಾತಿನಿಂದ ನನ್ನನ್ನೇಕೆ ಸಮಾಧಾನಪಡಿಸುವೆ. ಕೊಡುವುದಕ್ಕಾಗದ ವಸ್ತುವು ಬೇಡ. ನನಗೆ ತಪಸ್ಸಿಗೆ ಅನುಜ್ಞೆಯನ್ನು ಕೊಡು," ಎಂದ ಈ ಸತ್ಯಭಾಮೆಗೆ - "ನಾನು - ನಿನಗೆ ಆ ಪಾರಿಜಾತವು ಯಾವಾಗಲೂ ಇರುವಂತೆ ತಂದುಕೊಡುತ್ತೇನೆ" ಎಂದು ಪ್ರತಿಜ್ಞೆ ಮಾಡಿಹೇಳಿದೆನು" ವII ಎನ್ನಲು ಮುನೀಶ್ವರನು ಕೇಳಿ ೧೬. "ನನ್ನ ಮಾತಿನಿಂದ ಮಹೇಂದ್ರನೊಡನೆ ಕೃಷ್ಣನಿಗೆ ಕಲಹವು ಹುಟ್ಟಿತ್ತಲ್ಲವೆ! ಸ್ತ್ರೀಯರ ಕಲಹವು ಸಾರ್ಥಕವಾಯಿತು. ಭಾಪು ಕಲಹದರ್ಶನ ಕುತೂಹಲಿ! ಎಂದು ತನ್ನನ್ನು ತಾನೇ ಹೊಗಳಿಕೊಂಡು, ಕೃಷ್ಣನಿಗೆ ಛಲಹುಟ್ಟುವಂತೆ- "ದೇವ, ನೀನು ಪ್ರತಿಜ್ಞೆಮಾಡಿದ ಶಕ್ತಿಯಂತೆ ಪಾರಿಜಾತಹರಣವು ಆಗುವುದೆ? ಯೋಚಿಸಿನೋಡಿದರೆ ಅದೇನು ಸಾಮಾನ್ಯವೇ? ವII ಅದು ಹೇಗೆಂದರೆ ೧೭. ಸುರರೂ ಅಸುರರೂ ಕ್ಷೀರಸಾಗರವನ್ನು ಕಡೆದಾಗ ಆ ದಿವ್ಯವೃಕ್ಷವು ಹುಟ್ಟಿತು. ಅದಕ್ಕೆ ಇಂದ್ರನು ಅಧಿಪತಿಯಾದನು. ಇಂದ್ರನು ಆ ವೃಕ್ಷವನ್ನು

---

೧. ನುಡಿದಳೆಂಬುದನಂದೆಂತಂತುಂಗುಂದದೆ ಮುನಿಯೊಳ್ (ಕ) ನುಡಿದಳೆಂಬುದನಂದಂ ತಂತುಂಗುಂದದೆ ಮುನಿಯೊಳ್ (ಗ) ೨. ಎನ್ನ ಗೆಯ್ದೀ (ಖ) ೩. ಚಲಮಪ್ಪಂತೆಂದನಿಂ ನೀನೆ ಪೊಣ್ಮಲ್ದೇಂ ತಕ್ಕುಮೇ (ಖ)

ವ॥ ಎಂದು ಮುನೀಂದ್ರಬೃಂದಾರಕಂ ನುಡಿಯಲಿಂದ್ರಾವರಜಂ ಕೇಳ್ದು

ತಾನಿಂದ್ರಂ ನಿಜನಾಮದೊ
ಳಾನಿಂದ್ರಾವರಜನೆಂದೊಡಗ್ರಜನಿಂದ್ರಂ
ತಾನೆನಗನುಜಂಗಭಿಮತ
ದಾನವನಿತ್ತೆನ್ನ ಪೂಣ್ಕೆಯಂ ಸಲಿಸದಿರಂ ೧೮

ನೀವೀ ಮಾತಂ ಪೇಟ್ದೊಡೆ
ದೇವೇಂದ್ರಂ ಪಾರಿಜಾತಮಂ ಸಂತಸದಿಂ
ದೀವಲ್ಲಿಗೆ ಸಂದೆಯಮೇ
ನಾವನುಮಿಷ್ಟತೆಗೆ ತುಷ್ಟಿವಡದವನೊಳನೇ ೧೯

ವ॥ ಎನೆ ವನರುಹಾಸನತನಯನಿಂತೆಂದ

ದೇವಿಯರಟ್ತೆಯಂ ಸಲಿಸಲಿಲ್ಲದ ವಸ್ತುವನಾಗುಮಾಡಿ ನೀ
ವೀವೊಲವಿಂದೆ ಪೂಣ್ದಿರೆನೆ ಮುಂ ತನಗುಳ್ಳ ಪದಾರ್ಥಮಂ ಶಚೀ
ದೇವಿಗೆ ನಿಚ್ಚಮಟ್ತೆಯನೊಡರ್ಚುವುದಂ ನಗವೈರಿ ಪಾರಿಜಾ
ತಾವನಿಜಾತಮಂ ನಿಮಗೆ ಕೊಟ್ಟಪನೆಂಬುದಿದಲ್ತೆ ವಿಸ್ಮಯಂ ೨೦

ವ॥ ಅಂತುಮಲ್ಲದೆಯದೊಂದು ಸಮಯದೊಳ್ ಇಂದುಲೇಖಾಶೇಖರಂ ಗಿರೀಂದ್ರ ಕನ್ಯಾಸಮನ್ವಿತನಾಗಿ ಸುಟೆವಲ್ಲಿ ಸಂಕ್ರಂದನನಂದನವನಮಧ್ಯದೊಳನೇಕ ನಾಕಿಭಟರ ಕಾಪಿನಿಂ ಪೆಂಪುವೆತ್ತ ನಿಜಸೌರಭದೊಳಪೂರ್ವಾಕಾರದೊಳತಿಮನೋಹರಮಾದ ಪಾರಿಜಾತಮನಗಜಾತೆ ಕಂಡು,

ಪ್ರೀತಿವಿಶೇಷದಿಂದ ಶಚಿಗೆ ಕೊಟ್ಟನು. ಯೋಚಿಸಿನೋಡು. ಹೆಂಡಿರು ಆದರಿಸುತ್ತಿರುವ ಪದಾರ್ಥವನ್ನು ಸುಭಟರು ಬೇರೆಯವರಿಗೆ ಕೊಡಬಲ್ಲರೇ!" ವ॥ ಎಂದು ನಾರದನು ಹೇಳಿದನು. ಕೃಷ್ಣನು ಅದನ್ನು ಕೇಳಿ, ೧೮. "ನಿಜವಾದ ಹೆಸರಿನಲ್ಲಿ ಆತನು ಇಂದ್ರ, ನಾನು ಇಂದ್ರನ ತಮ್ಮ ಉಪೇಂದ್ರ ಎನಿಸಿಕೊಂಡಿರುವೆವು. ಹೀಗಿರುವಾಗ ಅಣ್ಣನಾದ ಇಂದ್ರನು, ತಮ್ಮನಾದ ನನಗೆ ಇಷ್ಟದಾನವನ್ನು ಕೊಟ್ಟು, ನನ್ನ ಪ್ರತಿಜ್ಞೆಯನ್ನು ಸಲ್ಲಿಸದಿರನು. ೧೯. "ನೀವು ಈ ಮಾತನ್ನು ಹೇಳಿದರೆ, ದೇವೇಂದ್ರನು ಪಾರಿಜಾತನವನ್ನು ಸಂತೋಷದಿಂದ ಕೊಡುವುದರಲ್ಲಿ ಸಂದೇಹವೆ? ಇಷ್ಟರಾದವರಿಗೆ ಬೇಕಾದುದನ್ನು ಕೊಟ್ಟು ತುಷ್ಟಿಪಡದವನು ಯಾವನಾದರೂ ಇರುವನೆ?!" ವ॥ ಎನ್ನಲು ಬ್ರಹ್ಮಪುತ್ರ ನಾರದನು-ಹೀಗೆಂದನು ೨೦. "ನೀವು ದೇವಿಯರ ಇಷ್ಟವನ್ನು ಸಲ್ಲಿಸುವುದಕ್ಕಾಗಿ ಇಲ್ಲದ ವಸ್ತುವನ್ನು ಸಿದ್ಧಮಾಡಿ ತಂದು ಕೊಡುವೆನೆಂದು ಪ್ರೀತಿಯಿಂದ ಪ್ರತಿಜ್ಞೆಮಾಡಿದಿರೆನ್ನುವಾಗ ಮುಂಚೆಯೇ ತನಗಿರುವ ಪದಾರ್ಥವನ್ನು ಶಚೀದೇವಿಗೆ ನಿತ್ಯವೂ ಸಂತೋಷಪಡಿಸುವ ಆ ಪಾರಿಜಾತವೃಕ್ಷವನ್ನು ನಿಮಗೆ ಕೊಡುತ್ತಾನೆ ಎಂಬುದು ಆಶ್ಚರ್ಯವಲ್ಲವೇ? ವ॥ "ಅದೂ ಅಲ್ಲದೆ ಒಂದು ಸಮಯದಲ್ಲಿ ಚಂದ್ರಶೇಖರನು ಗಿರೀಂದ್ರಕನ್ಯೆಯೊಡನೆ ಸಂಚರಿಸುವಾಗ ಇಂದ್ರನ ನಂದನವನ ಮಧ್ಯದಲ್ಲಿ ಅನೇಕ ದೇವಭಟರ ಕಾವಲಿನಲ್ಲಿ ಮಹಿಮೆಯನ್ನು ಪಡೆದ ತನ್ನ ಸುಗಂಧದಿಂದಲೂ ಅಪೂರ್ವವಾದ ಆಕಾರದಿಂದಲೂ ಅತಿಮನೋಹರವಾದ ಪಾರಿಜಾತವನ್ನು ಗಿರಿಜೆ ಕಂಡು ಕುತೂಹಲಗೊಂಡು 'ಎಲೆ ದೇವಾ,

ಕೌತುಕಂಬಟ್ಟು ಎಲೆ ದೇವಾ ಜಗತ್ತ್ರಯವಲ್ಲಭಾ ನಿಮಗೆ ವಲ್ಲಭೆಯಾಗಿರ್ದೆನಗಮಿಲ್ಲದ ಭೂತಪೂರ್ವಮಪ್ಪ ಪಾರಿಜಾತಮೆಂತಾ ಶಚಿಗೆ ದೊರೆಕೊಂಡುದು. ಎನಗೀ ಮಹೀರುಹಮನಿತ್ತು ಮನದಟ್ಟೆಯಂ ಸಲಿಸವೇಟ್ಟುದೆಂದಾಗ್ರಹಂ ಮಾಡಲಾ ಚಂಡಿಯ ಮನಂಗೊಂಡಾಗ್ರಹಮನೆಂತಾನುಂ ಸಂತೈಸಿ ಕಳೆದಂ, ಅಂತುಮಾ ತ್ರಿಪುರಹರಂ ಮೊದಲಾಗಿ ಶಚೀಪತಿಯ ಪಾರಿಜಾತಮಂ ಕಳೆದುಕೊಂಡನಿಲ್ಲೆಂದು ಪೇಟ್ಟುದುಮದಂ ಪುರುಷತ್ರಯಾತ್ಮಕಂ ಕೇಳ್ದು

ಆಗಜೇಶಂಗೆ ಜಗತ್ತ್ರಯಪ್ರಭುಗದೇಗಾನಂ ಸುರೋರ್ವೀಜಮಂ
ನಗಜಾವಲ್ಲಭೆಗೀಯೆನೆಂದು ಮೊದಲೊಳ್ ಶಕ್ರಂಗೆ ತಾಂ ಕೊಟ್ಟುದಂ
ಮಗುಟ್ದುಂ ಕೊಳ್ವುದು ಪೆರ್ಮೆಗಾವುಚಿತಮೆಂಬೀ [1]ಮಾಟ್ಕೆಯಿಂದಂ ಮನಂ
ದೆಗೆದಂ ಪೋ ಪೆಱತಲ್ತು ನೀನುಮಱಿಯೈ ಕೇಳ್ದೀಶಸಾಮರ್ಥ್ಯಮಂ ೨೧

ವ|| ಎಂದು ತತ್ಕಥಾಪ್ರಪಂಚಮಂ ಮಾಣ್ದು ಸಮನಂತರಂ ವಿರಿಂಚಸಂಭವಮಂ ಗಂಭೋಜನಯನನಿಂತೆಂದಂ

ಕೊಂದಾ ಭೌಮನನದಿತಿಗೆ
ತಂದಾ ಕುಂಡಲಮನಿತ್ತುದರ್ಕೆನಗೊಲವಿಂ
ದಂದೀವ ಮೆಚ್ಚ ನಗರಿಪು
ವಿಂದೀಗುಂ ಪಾರಿಜಾತಕುಜಮನಮೋಘಂ ೨೨

ವ|| ಎಂದು ದೇವಕೀನಂದನಂ ನುಡಿಯೆ ವಿರಿಂಚನಂದನಂ ಕೇಳ್ದು ದೇವ ನೀವಪ್ಪೊಡುಚಿತವಚನಮಂ ನುಡಿದಿರ್ ಈ ಮಾತಂ ಪುರುಹೂತಂಗೆ ಪೇಟ್ದೊಡೆ

ಜಗತ್ರಯವಲ್ಲಭಾ, ನಿಮಗೆ ವಲ್ಲಭೆಯಾದ ನನಗೂ ಇಲ್ಲದ ಅಭೂತಪೂರ್ವವಾದ ಪಾರಿಜಾತವು ಆ ಶಚಿಗೆ ಹೇಗೆ ದೊರೆಯಿತು? ನನಗೆ ಈ ವೃಕ್ಷವನ್ನು ಕೊಟ್ಟು ಮನದ ಆಸೆಯನ್ನು ಸಲ್ಲಿಸಬೇಕೆಂದು ಆಗ್ರಹ ಮಾಡಿದಳು. ಈಶ್ವರನು ಆ ಚಂಡಿಯ ಮನಸ್ಸಿನ ಆಗ್ರಹವನ್ನು ಹೇಗೋ ಸಮಾಧಾನಪಡಿಸಿ ಕಳೆದನು. ಹಾಗೆ ಆ ತ್ರಿಪುರಹರನು ಮೊದಲುಗೊಂಡು ಯಾರೂ ಶಚೀಪತಿಯ ಪಾರಿಜಾತವನ್ನು ಕಿತ್ತುಕೊಂಡವರಿಲ್ಲ." ಎಂದು ಹೇಳಿದನು. ಅದನ್ನು ತ್ರಿಮೂರ್ತ್ಯಾತ್ಮಕನಾದ ಕೃಷ್ಣನು ಕೇಳಿ ೨೧. "ಜಗತ್ರಯವಿಭುವಾದ ಪಾರ್ವತೀಶನಿಗೆ ಅದೇನು ಗಹನ! ಮೊದಲೇ ತಾನು ಇಂದ್ರನಿಗೆ ಕೊಟ್ಟು ಕಲ್ಪವೃಕ್ಷವನ್ನು ಮತ್ತೆ ಹಿಂದಕ್ಕೆ ತೆಗೆದುಕೊಳ್ಳುವುದು ಹಿರಿಮೆಗೆ ಉಚಿತವಲ್ಲವೆಂದು ಮನಸ್ಸನ್ನು ಹಿಂದೆಗೆದನು. ಹೋಗು! ಬೇರೇನೂ ಅಲ್ಲ. ಈಶ್ವರನ ಸಾಮರ್ಥ್ಯವನ್ನು ನೀನೂ ಕೇಳಿ ತಿಳಿದಿಲ್ಲವೇ?" ವ|| ಎಂದು ಆ ಕಥಾಪ್ರಪಂಚವನ್ನು ಬಿಟ್ಟು, ಬಳಿಕ ನಾರದನಿಗೆ ಕೃಷ್ಣನು ಹೀಗೆಂದನು. ೨೨. "ಆ ನರಕಾಸುರನನ್ನು ಕೊಂದು ಆ ಕುಂಡಲವನ್ನು ತಂದು ಅದಿತಿಗೆ ಕೊಟ್ಟುದಕ್ಕೆ ನನಗೆ ಪ್ರೀತಿಯಿಂದ ಇಂದ್ರನು ಅಂದು ಕೊಡಬೇಕಾಗಿದ್ದ ಬಹುಮಾನಕ್ಕಾಗಿ ಪಾರಿಜಾತ ವೃಕ್ಷವನ್ನು ನಿಜವಾಗಿಯೂ ಕೊಡುವನು." ವ|| ಎಂದು ಕೃಷ್ಣನು ಹೇಳಿದನು. ನಾರದನು ಅದನ್ನು ಕೇಳಿ, "ದೇವ, ನೀವೇನೋ ಉಚಿತವಾದ ಮಾತನ್ನೇ ಹೇಳಿದಿರಿ. ಈ ಮಾತನ್ನು

---

೧. ಪೆರ್ಮೆಯಿಂದಂ (ಕಗ)

ಎನ್ನಾಜ್ಞೆಗೆನ್ನಪದವಿಗ
ಮೆನ್ನರ್ಬೆಸಕೆಯ್ಯರಿಂತಿದೇವಿರಿದೆನಗೆಂ
ದೆನ್ನದೆ ನೀಂ ಗೆಯ್ದೊಳ್ಪಿಂ
ಮನ್ನಿಸಿ ಸುರಚಕ್ರಿ ಮೆಚ್ಚುಗುಡಲಱಿದಪನೇ ೨೩

ಮನುಜಂ ಕೃಷ್ಣಂ ದೇವೇಂ
ದ್ರನೆನಾನಂತರಮದಾವುದೆನ್ನೊಳ್ ತನಗೆಂ
ದನವಧಿಗರ್ವದೆ ಕುಡಲಱಿ
ವನೆ ನಿಮಗಾ ವಜ್ರಿ ಪಾರಿಜಾತದ್ರುಮಮಂ ೨೪

ಅನಲನ ತೇಜದಿಂ ಯಮನ ಸಾಹಸದಿಂ ದನುಪುತ್ರನಣ್ಮಿನಿಂ
ವನನಿಧಿನಾಥನುದ್ಧತಿಕೆಯಿಂ ಪವಮಾನನ ಶಕ್ತಿಯಿಂ ಕುಬೇ
ರನ ಬಲದಿಂ ಮಹೇಶನ ಮಹತ್ವದಿನಾರ್ಗಮಸಾಧ್ಯಮೆಂಬ ಬ
ಲ್ಪಿನೊಳಗವ್ವೆರಿ ನಿಮ್ಮ ವಿನಯೋಕ್ತಿಗೆ ತಾಂ [1]ನಗದೇಕೆ ಮಾಣ್ಬನೈ ೨೫

ಪಿಡಿವೆಂ ವಜ್ರಮನೆಂಬುದಗ್ರದಿವಿಜೇಭಾರರೂಢನಾಗಿರ್ಪೆನೆಂ
[2]ಬೆಡವಂಕಂ ಬಲವಂಕಮೆಂಬೆಡೆಗಳೊಳ್ ನಾಕಿವ್ರಜಂ ಬರ್ಪುದೆಂ
ಬೊಡನೇಕಾದಶರುದ್ರರಷ್ಟವಸುಗಳ್ ಪನ್ನಿರ್ವರಾದಿತ್ಯರುಂ
ನಡೆವರ್ ಸಂಗರಕೇಳಿಗೆಂಬೆಸಕದಿಂದುದ್ವೃತ್ತನಾ ವೃತ್ರಹಂ ೨೬

ವ|| ಅದು ಕಾರಣದಿಂ

ಇಂದ್ರನಿಗೆ ಹೇಳಿದರೆ, ೨೩. 'ನನ್ನ ಆಜ್ಞೆಗೂ ನನ್ನ ಪದವಿಗೂ ಎಂತಹವರು ತಾನೆ ಹೇಳಿದ ಕೆಲಸವನ್ನು ಮಾಡದಿರುವರು? ನನಗೆ ಕುಂಡಲವನ್ನು ತಂದು ಕೊಟ್ಟ ಇದೇನು ದೊಡ್ಡ ಕೆಲಸವೇ?' ಎನ್ನುವನೇ ಹೊರತು ನೀನು ಮಾಡಿದ ಉಪಕಾರಕ್ಕೆ ದೇವ ಚಕ್ರವರ್ತಿ ಇಂದ್ರನು ನಿನ್ನನ್ನು ಮನ್ನಿಸಿ, ಬಹುಮಾನವನ್ನು ಕೊಡುವನೆ? ೨೪. "ಕೃಷ್ಣನು ಮನುಜ, ನಾನು ದೇವೇಂದ್ರ, ಅವನಿಗೂ ನನಗೂ, ಎಷ್ಟು ವ್ಯತ್ಯಾಸ? ಸಂಬಂಧವೇನು? ಎಂದು ಅಮಿತವಾದ ಗರ್ವದಿಂದ ಹೇಳುವನೇ ಹೊರತು, ಇಂದ್ರನು ಪಾರಿಜಾತವೃಕ್ಷವನ್ನು ನಿಮಗೆ ಕೊಡಬಲ್ಲನೆ?! ೨೫. "ಅಗ್ನಿಯ ತೇಜಸ್ಸಿನಿಂದಲೂ, ಯಮನ ಸಾಹಸದಿಂದಲೂ, ನಿಋತಿಯ ಪೌರುಷದಿಂದಲೂ ವರುಣನ ಔದ್ಧತ್ಯದಿಂದಲೂ ವಾಯುವಿನ ಶಕ್ತಿಯಿಂದಲೂ, ಕುಬೇರನ ಬಲದಿಂದಲೂ, ಮಹೇಶ್ವರರ ಮಹತ್ತ್ವದಿಂದಲೂ ನಾನು ಯಾರಿಗೂ ಅಸಾಧ್ಯನು" ಎಂಬ ಸಾಮರ್ಥ್ಯದಿಂದ ಕೂಡಿರುವ ಆ ಗಿರಿವ್ವೆರಿ ನಿಮ್ಮ ವಿನಯದ ಮಾತಿಗೆ ನಗದೆ ಇರುವನೆ? ೨೬. "ನಾನು ವಜ್ರಧರ, ಉನ್ನತವಾದ ದೇವಗಜವನ್ನು ಏರುವವನು, ನನ್ನ ಎಡ ಬಲ ಪಕ್ಕಗಳಲ್ಲಿ ದೇವಸಮೂಹವು ಬರುವುದು. ತನ್ನ ಸಂಗಡ ಅಷ್ಟವಸುಗಳೂ ಏಕಾದಶರುದ್ರರೂ ದ್ವಾದಶಾದಿತ್ಯರೂ ಯುದ್ಧಕ್ರೀಡೆಗೆ ನಡೆಯುವರು ಎಂಬ ಹೆಮ್ಮೆಯಿಂದ ಆ ವೃತ್ರಾಸುರಹಂತಕನು ಉದ್ಧತನಾಗಿರುವನು. ವ|| ಆದುದರಿಂದ

---

೧. ಕುಡದೇಕೆ ಮಾಣ್ಬನೊ (ಗ) ೨. ಎಡವಕ್ಕಂ ಬಲವಕ್ಕಮೆಂಬೆಡೆಗಳೊಳ್ ನಾರೀವ್ರಜಂ (ಖ)

ಕುಡಲಱಿಯಂ ನಿಮಗೆಂತುಂ
ಬಿಡೌಜನಾ ಪಾರಿಜಾತಕುಜಮಂ ನೀವಿಂ
ತೆಡವಱಿಯದೆ ಪೂಣ್ದಿರ್ ಗಡ
ಬಿಡಿಮಿನ್ನಬ್ಜಾಕ್ಷ ನಿಮ್ಮ ಮನದಾಗ್ರಹಮಂ ೨೭

ವ|| ಎಂದು ನಾರದಂ ನುಡಿಯೆ

ಪರಶೌರ್ಯೋತ್ಕರ್ಷಮಂ ಮಾಟ್ಪಣಕದ ನುಡಿಗಳ್ ಕರ್ಣಮಂ ತಾಗೆ ಕೋಪ
ಸ್ಫುರಿತಭ್ರೂಕೋಟಿಯುಂ ಕಂಪಿಸುವಧರಮುಮುತ್ಫುಲ್ಲನಾಸಾಗ್ರಮುಂ ನಿ
ರ್ಭರಘರ್ಮಕ್ಲಿನ್ನಗಂಡಸ್ಥಳಮುಮರುಣನೇತ್ರಾಬ್ಜಮುಂ ಕಣ್ಗುರ್ವಾ
ಗಿರೆ ದೈತೇಯಾಂತಕಂ ಸಂಹೃತಿಸಮಯಮಹೋಗ್ರಾಂತಕಾಕಾರನಾದಂ ೨೮

ವ|| ಅಂತು ಶೌರಿ ವೀರಾವೇಶದಿಂದತಿಕ್ಷೋಭಮಂ ತಳೆದು, ಎಲೆ ನಾರದ ಕೇಳೆಮಗೆ ದೇವತೆಗಳೊಳ್ ಕಲಹಮನುಚಿತಮೆಂದು ಸದ್ಭಾವದಿಂ ನುಡಿದೆವಂತಲ್ಲದೊಡೆ

ಕುಡದಂದು ಪಾರಿಜಾತಮ
ನೆಡೆಗುಡದಿನ್ನಾ ಶಚೀಕುಚಕ್ರೀಡೆಗೆ ತಾ
ನೆಡೆಗೊಳ್ಗುಂ ಕೌಮೋದಕಿ
ಬಿಡೌಜನತಿವಿಪುಳಮೆನಿಪ ವಕ್ಷಸ್ಥಳಮಂ ೨೯

೨೭. "ಇಂದ್ರನು ನಿಮಗೆ ಆ ಪಾರಿಜಾತವೃಕ್ಷವನ್ನು ಹೇಗೂ ಕೊಡಲಾರನು. ನೀವು ನಡುವೆ ಸ್ವಲ್ಪವೂ ಆಲೋಚಿಸದೆ ದುಡುಕಿ ಪ್ರತಿಜ್ಞೆ ಮಾಡಿಬಿಟ್ಟಿರಲ್ಲವೆ? ಇನ್ನು ನಿಮ್ಮ ಮನಸ್ಸಿನ ಹಟವನ್ನು ಬಿಡಿ." ವ|| ಎಂದು ನಾರದನು ಹೇಳಿದನು. ೨೮. ಪರಶೌರ್ಯೋತ್ಕರ್ಷ ಮಾಡುವ ಕುಹಕದ ಮಾತುಗಳು ಕಿವಿಗೆ ಬೀಳುತ್ತಲೂ ಆ ರಾಕ್ಷಸಾಂತಕ ಕೃಷ್ಣನು ಕೋಪದಿಂದ ಹೊಳೆಯುವ ಹುಬ್ಬಿನ ಕಡೆಗಳುಳ್ಳವನೂ ನಡುಗುವ ತುಟಿಯುಳ್ಳವನೂ, ಅರಳಿದ ತುದಿಮೂಗುಳ್ಳವನೂ, ಅತಿಯಾದ ಬೆವರು ನೀರಿನಿಂದ ಒದ್ದೆಯಾದ ಕೆನ್ನೆಯುಳ್ಳವನೂ ಕೆಂಪಾದ ನೇತ್ರಕಮಲವುಳ್ಳವನೂ ಕಣ್ಣಿಗೆ ಭಯಂಕರನೂ ಆಗಿ ಪ್ರಳಯಕಾಲದ ಅತ್ಯುಗ್ರಯಮನಂತೆ ಕಾಣಿಸಿದನು. ವ|| ಹಾಗೆ ಕೃಷ್ಣನು ವೀರಾವೇಶದಿಂದ ಅತ್ಯುದ್ವೇಗವನ್ನು ತಳೆದು, "ಎಲೆ ನಾರದ, ಕೇಳು, ನಮಗೆ ದೇವತೆಗಳೊಡನೆ ಕಲಹವು ಅನುಚಿತವೆಂದು ಸದ್ಭಾವನೆಯಿಂದ ಹೇಳಿದೆವು. ಹಾಗೆ ೨೯. ಇಂದ್ರನು, ಪಾರಿಜಾತವನ್ನು ನನಗೆ ಕೊಡದಿದ್ದರೆ ಆತನ ವಿಸ್ತಾರವಾದ ಎದೆಯಲ್ಲಿ ಆ ಶಚಿಯ ಕುಚ ಕ್ರೀಡೆಗೆ ಇನ್ನು ಅವಕಾಶವನ್ನು ಕೊಡದೆ ಕೌಮೋದಕಿಯು ಅಲ್ಲಿ ಅವಕಾಶವನ್ನು ಪಡೆಯುವುದು. (ಇಂದ್ರನು ಪಾರಿಜಾತವನ್ನು ಕೊಡದಿದ್ದರೆ ಅವನೆದೆಗೆ ಗದೆಯ ಏಟು ಬೀಳುವುದು)

ಈಯದೊಡೆ ಪಾರಿಜಾತಮ
ನೀಯದಮೋಘಂ ಸಿತಾತಪತ್ರಪ್ರಕರ
ಚ್ಛಾಯೆಯನಸ್ತ್ರಪ್ರಕರ
ಚ್ಛಾಯೆಯನೀಗುಂ ನಿಳಿಂಪಚಕ್ರಿಗೆ ಶಾರ್ಙ್ಗಂ ೩೦

ತ್ರಿದಶಪತಿ ಪಾರಿಜಾತ
ಪ್ರದನಾಗದೊಡಾಧಿಪತ್ಯಸವನಮದಿನ್ನಾ
ಗದು ತನ್ನಗಾರಿಗಾಗಿ
ಪ್ಪುದು ಧಾರಾಖಡ್ಗಸವನಮಂ ಮತ್ಖಡ್ಗಂ ೩೧

ಭೂರುಹಮಿದು ದಿವ್ಯಂ ಬಿಡ
ಬಾರದೆನಲ್ ದೇವರಾಜ್ಯಕಂಠಿಕೆ ತನಗಿಂ
ಬಾರದು ಬರ್ಕುಂ ತನ್ನಗ
ವೈರಿಯ ಕಂಠಕ್ಕೆ ಮತ್ಸುದರ್ಶನಚಕ್ರಂ ೩೨

ವ|| ಎಂದು ನುಡಿದು, ಆ ದೇವಚಕ್ರವರ್ತಿ ವಿಕ್ರಮಾಕ್ರಾಂತಬಳ ನಮುಚಿ ಪಾಕ ಜಂಭ ಶಂಬರಾದಿ ನಿಳಿಂಪಾರಿಜಾತನೆಂಬಖರ್ವಗರ್ವದಿಂ ಪಾರಿಜಾತಮಂ ತರಲೀಯನೆಂಬುದುಮುಬ್ಬೆಗದಿಂ ಸತ್ಯಭಾಮೆಗಾಂ ಮಾಡಿದ ಪ್ರತಿಜ್ಞೆಯಂ ಮಾಣ್ದೆನಪ್ಪೊಡೆ, ಈ ಮಹೀಮಂಡಲಂ ರಸಾತಳಕ್ಕಿಟಿಯದೆಯುಂ ಕುಲಶಿಖರಿಗಳ್ ನೆಲೆಯಿಂ ತಳರದೆಯುಂ, ಸಮುದ್ರಂಗಳ್ ಸೀಮೋಲ್ಲಂಘನಂಗೆಯ್ಯದೆಯುಂ ದಿಗ್ಗಜಂಗಳ್ ನಿಜಸ್ಥಾನಮಂ ಬಿಟ್ಟೋಡದೆಯುಂ ಚಂದ್ರಸೂರ್ಯಮಂಡಲಂಗಳ್ ಕಾಲಚಕ್ರನಿರ್ವರ್ತನದೊಳ್ ಅಪವರ್ತಿಸದೆಯುಂ ಎಂತು ಪ್ರಯುಕ್ತಂಗಳಾಗಿರ್ದಪುವು ? ಎನ್ನ ವಚನಮವ್ಯವಸ್ಥಿತಮಾದಂದೀ ಲೋಕವ್ಯವಸ್ಥೆಯುಂ ಕೆಟ್ಟುಪೋಕುಂ, ಅದು ಕಾರಣದಿಂ ಮದೀಯ

೩೦. ಆ ದೇವರಾಜನು ಪಾರಿಜಾತವನ್ನು ನನಗೆ ಕೊಡದಿದ್ದರೆ ನನ್ನ ಶಾರ್ಙ್ಗಚಾಪವು ಅವನಿಗೆ ಶ್ವೇತಚ್ಛತ್ರದ ನೆಳಲನ್ನು ಖಂಡಿತವಾಗಿಯೂ ಕೊಡುವುದಿಲ್ಲ. ಅಸ್ತ್ರಗಳ ಸಮೂಹದ ನೆಳಲನ್ನು ಕೊಡುವುದು. ೩೧. "ದೇವಪತಿಯು ಪಾರಿಜಾತವೃಕ್ಷವನ್ನು ಕೊಡದಿದ್ದರೆ ಇನ್ನು ಆ ಗಿರಿವೈರಿಗೆ ಆಧಿಪತ್ಯಾಭಿಷೇಕವು ಆಗುವಂತಿಲ್ಲ. ನನ್ನ ಖಡ್ಗವು ತನ್ನ ಧಾರೆ (ಅಲಗು)ಯಿಂದ ಅಭಿಷೇಕ ಮಾಡುತ್ತದೆ. ೩೨. "ಈ ಕಲ್ಪವೃಕ್ಷವು, ಸ್ವರ್ಗವನ್ನು ಬಿಡಬಾರದು ಎಂದರೆ ಇಂದ್ರನಿಗೆ ದೇವರಾಜ್ಯ ಕಂಠಾಭರಣಮಾಲೆಯು ಇನ್ನು ಇರಬಾರದು. ಅವನ ಕಂಠಕ್ಕೆ ನನ್ನ ಸುದರ್ಶನಚಕ್ರವು ಬರುವುದು" ವ|| ಎಂದು ಹೇಳಿ ಆ ದೇವರಾಜನು ಬಲ, ನಮುಚಿ, ಪಾಕ, ಜಂಭ, ಶಂಬರಾದಿ ದೇವವೈರಿಗಳನ್ನು ತನ್ನ ವಿಕ್ರಮದಿಂದ ಆಕ್ರಮಿಸಿದೆನೆಂಬ ಗರ್ವದಿಂದ ಪಾರಿಜಾತವನ್ನು ತರುವುದಕ್ಕೆ ಕೊಡಲಾರನೆಂಬ ಭ್ರಮೆಯಿಂದ ಸತ್ಯಭಾಮೆಗೆ ನಾನು ಮಾಡಿದ ಪ್ರತಿಜ್ಞೆಯನ್ನು ಬಿಟ್ಟೆನಾದರೆ, ಈ ಭೂಮಂಡಲವು ಪಾತಾಳಕ್ಕಿಳಿಯುವುದು. ಕುಲಗಿರಿಗಳು ನೆಲೆಯಿಂದ ಚಲಿಸುವುವು. ಸಮುದ್ರಗಳು ದಡವನ್ನು ಮೀರುವುವು. ದಿಗ್ಗಜಗಳು ತಮ್ಮ ಸ್ಥಾನವನ್ನು ಬಿಟ್ಟೋಡುವುವು. ಚಂದ್ರಸೂರ್ಯ ಮಂಡಲಗಳು ಪ್ರಯುಕ್ತವಾದ ಕಾಲಚಕ್ರನಿರ್ವರ್ತನೆಯನ್ನು ಬಿಟ್ಟು ಹಿಂದಿರುಗುವುವು. ನನ್ನ ವಚನವು ಅವ್ಯವಸ್ಥಿತವಾದರೆ ಈ ಲೋಕವ್ಯವಸ್ಥೆಯೂ

ಪಾರಿಜಾತಹರಣಪ್ರತಿಜ್ಞೆಯನೆಂತಾದೊಡಂ ಸಲ್ವಂತೆ ಮಾಡಿದಪ್ಪೆಂ, ಈ ವೃತ್ತಾಂತಮಂ ನೀವೆ ಪೋಗಿ ಪೇೞ್ ನೆಗೞ್ತೆವಡೆದೇಕಾದಶರುದ್ರರುಂ ದ್ವಾದಶಾದಿತ್ಯರುಂ ಅಷ್ಟವಸುಗಳುಂ ಅಷ್ಟಲೋಕಪಾಲಕರುಂ ಗರುಡ ಗಂಧರ್ವ ಸಿದ್ಧ ವಿದ್ಯಾಧರೋರಗ ಯಕ್ಷ ರಾಕ್ಷಸ ಕಿನ್ನರ ಕಿಂಪುರುಷಾದಿ ಸಮಸ್ತ ಮರುದ್ಗಣಂ ಬೆರಸೈರಾವತಗಜಸ್ಕಂಧಾರೂಢನುಂ ವಜ್ರಾಯುಧಕಲಿತಕರತಳನುಮಾಗಿ ನಾಳಿನ ದಿವಸಂ ದಿವಸೇಂದ್ರೋದಯಸಮಯದೊಳ್ ಆ ಮಹೇಂದ್ರನಂ ಸಂಗ್ರಾಮಕ್ಕೆ ಬರವೇೞೆಂ ಆವೆಮ್ಮ ಗರುಡನನೇಱಿಕೊಂಡೇಕಾಂಗದಿಂ ಬಂದಪೆವೆಂದಾ ನಾರದನನೆ ದಿವಿಜರಾಜಂಗೆ ದೂದಟ್ಟ

ಸಮರೋತ್ಸವಲಬ್ಧಿಯಿನುಪ
ಶಮಿಸೆ ನಿಜಕ್ರೋಧವತುಳಲೀಲೆಯಿನಿರ್ದಂ
ಕಮಲಾಕ್ಷಂ ಕೆಲದೊಳ್ ತ
ನ್ನ ಮನೋರಮೆ ಸತ್ಯಭಾಮೆಯಿರ್ಪಿನಮಾಗಳ್ ೩೩

ನೆಗಱುತ್ತಿರ್ದುದನಾಕುಳಂ ಮದನರಾಗಂ ಚಕ್ರಿಗಂ ಸತ್ಯಭಾ
ಮೆಗಮೀ ವಲ್ಲಭಂ ವಿಧೂತ್ಸವದೊಳತ್ಯುತ್ಸಾಹದಿಂ ಕೂಡುಗಾಂ
ಪಗಲಂ ತೀರ್ಚುವೆನೆಂದತಿತ್ವರಿತದಿಂ ಪೋಪಂತೆ ಮಾರ್ತಂಡನ
ಸ್ತಗಿರೀಂದ್ರಕ್ಕಿೞಿದಂ ಮುಕುಂದವಸನದ್ಯೋತಾಹೃತಾತ್ಮಪ್ರಭಂ ೩೪

ವ॥ ಅನಂತರಂ

ಕೆಟ್ಟುಹೋಗುವುದು. ಆದುದರಿಂದ ನನ್ನ ಪಾರಿಜಾತಹರಣ ಪ್ರತಿಜ್ಞೆಯನ್ನು ಹೇಗಾದರೂ ಸಾಧಿಸುವೆನು, ಬಿಡುವುದಿಲ್ಲ. ಈ ವೃತ್ತಾಂತವನ್ನು ನೀವೇ ಹೋಗಿ ಹೇಳಿ ಪ್ರಸಿದ್ಧರಾದ ಏಕಾದಶರುದ್ರರು, ದ್ವಾದಶಾದಿತ್ಯರು, ಅಷ್ಟವಸುಗಳು, ಅಷ್ಟಲೋಕಪಾಲಕರು, ಗರುಡಗಂಧರ್ವ ಸಿದ್ಧವಿದ್ಯಾಧರೋರಗ ಯಕ್ಷರಾಕ್ಷಸ ಕಿನ್ನರ ಕಿಂಪುರುಷರು ಇವರೇ ಮೊದಲಾದ ಸಕಲದೇವ ಸಮೂಹದೊಡನೆ ಐರಾವತಾರೂಢನೂ ವಜ್ರಾಯುಧ ಧಾರಿಯೂ ಆಗಿ ನಾಳೆಯ ದಿನ ಸೂರ್ಯೋದಯಸಮಯದಲ್ಲಿ ಆ ಮಹೇಂದ್ರನನ್ನು ಯುದ್ಧಕ್ಕೆ ಬರಹೇಳಿರಿ. ನಾವೂ ನಮ್ಮ ಗರುಡನನ್ನೇರಿಕೊಂಡು ಏಕಾಂಗದಿಂದ ಬರುತ್ತೇವೆ" ಎಂದು ಆ ನಾರದನನ್ನೇ ದೇವರಾಜನಿಗೆ ದೂತ (ವಾರ್ತಾಹರ)ನನ್ನಾಗಿ ಕಳುಹಿಸಿದನು. ೩೩. ಯುದ್ಧೋತ್ಸವಲಾಭದಿಂದ ಕೃಷ್ಣನ ಕೋಪವು ಶಾಂತವಾಯಿತು. ತನ್ನ ಮನೋರಮೆ ಸತ್ಯಭಾಮೆ ಪಕ್ಕದಲ್ಲೇ ಇದ್ದಳು. ಆದುದರಿಂದ ಆ ಕೃಷ್ಣನು ಅತಿಶಯ ಲೀಲೆಯುಳ್ಳವನಾಗಿದ್ದನು. ೩೪. ಕೃಷ್ಣ ಸತ್ಯಭಾಮೆಯರಿಗೆ ತಡೆಯಿಲ್ಲದೆ ಕಾಮರಾಗವು ಉದ್ರೇಕಗೊಳ್ಳುತ್ತಿದೆ. ಇನ್ನು ಈ ಪ್ರಿಯರು ಚಂದ್ರೋದಯ ಸಮಯದಲ್ಲಿ ಅತ್ಯಾನಂದದಿಂದ ಕೂಡಲಿ ನಾನು ಹಗಲನ್ನು ಮುಗಿಸುತ್ತೇನೆ ಎಂದು ಅತಿತ್ವರೆಯಿಂದ ಹೋಗುವಂತೆ ಸೂರ್ಯನು ಅಸ್ತಗಿರಿಗೆ ಇಳಿದನು. ಅವನ ಕಾಂತಿ ಕೃಷ್ಣನ ಪೀತಾಂಬರಕ್ಕೆ ಬಂದಿತು. ವ॥ ಅನಂತರ,

ಮೃಗಮದಲಲಾಮದಿಂದಂ
ಬಗೆಗೊಳಿಸುತ್ತಿರ್ಪ ಸತ್ಯಭಾಮೆಯ ವದನೇಂ
ದುಗೆ ದೊರೆಯೆಂಬಿನಮುದಯಿಸಿ
ಮೃಗಧರಬಿಂಬ ವಿರಾಜಿಸಿತ್ತಂಬರದೊಳ್ ೩೫

ವ॥ ಆ ವಿಮಲಕುಮುದಿನೀಮಿತ್ರಮರೀಚಿಸುಧಾಧವಳಿತಮಾದ ರಾತ್ರಿಯೊಳ್ ಮಧುಸೂದನಂ ಸತ್ಯಭಾಮೆಯು ಸೂಟ್ಗಿವಂದು ಸುರತಾಮೃತಾರ್ಣವದೊಳೋಲಾಡಿ ಸುಖಸುಪ್ತಿಯಿಂದಿರ್ಪಿನಂ

ಸುರರ್ಗೆ ಹಿತಾರ್ಥಮೆಂದಸುರರೊಳ್ ಹರಿ ಕಾದುವುದಲ್ತು ವಿಸ್ಮಯಂ
[1]ಸುರರೊಳೆ ಕಾದುವಂದಮಿದು ವಿಸ್ಮಯಮಾನಿದನಿಂದು ನೋಟ್ಪೆನೆಂ
ದಿರದನುರಾಗದಿಂದುದಯಿಪಂತುದಯಾದ್ರಿಯನೊಯ್ಯನೇಱಿದಂ
ಸರಸಿಜಬಂಧುವೇಱೆ ವಿಜಯಾಂಗನೆ ಕೃಷ್ಣನ ಬಾಹುಪೀಠಮಂ ೩೬

ವ॥ ಆ ಸಮಯದೊಳಗಣ್ಯಪುಣ್ಯ ಪಾಠಕರ ಮಂಗಳಸ್ತವನಕಳಕಳಮನಾಲಿಸುತ್ತುಪ್ಪವಡಿಸಿ ನಿರ್ವರ್ತಿತ ನಿತ್ಯನಿಯಮನುಮಂಗೀಕೃತ ಮಂಗಳಾಭರಣನುಂ ವಿತರಣ ವಿಶೇಷ ತೋಷಿತವಂದಿವೃಂದನುಮಾಗಿ ಪುಂಡರೀಕಾಕ್ಷಂ ತಾರ್ಕ್ಷ್ಯನಂ ಸ್ಮರಿಸೆ

ನಿಜಪಕ್ಷಾನಿಳನಿಂ ತೆರಳ್ದುಬರೆ ಮೇಘಾನೀಕಮಾಕಾಶಸಿಂ
ಧುಜಳಂ ತುಳ್ಕೆ ರವೀಂದುಗಳ್ ಬೆದಱೆ ಪಾಠಾವಾರದೊಳ್ ವೀಚಿಕಾ
ವ್ರಜಮುಜ್ಜೃಂಭಿಸೆ ಭೂತಳಂ ನಡುಗೆ ಶೈಲಶ್ರೇಣಿ [2]ಬೇಱೇಱೆ ವಿ
ಶ್ವ [3]ಜಗತ್ ಕ್ಷೋಭಕರಸ್ವಭಾವಗತಿಯಿಂ ಬಂದಂ ವಿಹಂಗಾಧಿಪಂ ೩೭

೩೫. ಕಸ್ತೂರಿಯ ತಿಲಕದಿಂದ ಮನೋಹರವಾದ ಸತ್ಯಭಾಮೆಯ ಮುಖಚಂದ್ರನಿಗೆ ಸಮವೆನ್ನುವಂತೆ ಚಂದ್ರಮಂಡಲವು ಆಕಾಶದಲ್ಲಿ ಹೊಳೆಯಿತು. ವ॥ ಆ ವಿಮಲಚಂದ್ರ ಕಿರಣಾಮೃತದಿಂದ ಬೆಳ್ಳಗಾದ ಆ ರಾತ್ರಿಯಲ್ಲಿ ಕೃಷ್ಣನು ಸತ್ಯಭಾಮೆಯೊಡಗೂಡಿ, ಸುರತಾಮೃತಸಾಗರದಲ್ಲಿ ಓಲಾಡಿ ಸುಖನಿದ್ರೆಯಿಂದ ಇದ್ದನು. ೩೬. "ದೇವತೆಗಳ ಹಿತಾರ್ಥವಾಗಿ ಕೃಷ್ಣನು ರಾಕ್ಷಸರೊಡನೆ ಕಾದುವುದು ಆಶ್ಚರ್ಯವಲ್ಲ. ದೇವತೆಗಳೊಡನೆಯೆ ಕಾದುವ ಈ ಅಂದವು ಆಶ್ಚರ್ಯ. ನಾನು ಇಂದು ಇದನ್ನು ನೋಡುತ್ತೇನೆ" ಎಂದು ಅನುರಾಗದಿಂದ ಉದಯಿಸುವಂತೆ ಕಮಲಬಂಧು ಸೂರ್ಯನು, ವಿಜಯಲಕ್ಷ್ಮಿಯು ಕೃಷ್ಣನ ಬಾಹುಪೀಠವನ್ನೇರುವಂತೆ, ಉದಯಾದ್ರಿಯನ್ನು ಮೆಲ್ಲಗೆ ಏರಿದನು. ವ॥ ಆ ಸಮಯದಲ್ಲಿ ಅಸಂಖ್ಯಾತ ಪುಣ್ಯಪಾಠಕರ ಮಂಗಳಸ್ತುತಿಯ ಕಲಕಲವನ್ನು ಕೇಳುತ್ತ ಎದ್ದ ಕೃಷ್ಣನು, ನಿತ್ಯನಿಯಮಗಳನ್ನು ನೆರವೇರಿಸಿ, ಮಂಗಳಾಭರಣಗಳನ್ನು ಧರಿಸಿ, ದಾನವಿಶೇಷದಿಂದ ವಂದಿ ಸಮೂಹವನ್ನು ಸಂತೋಷಪಡಿಸಿ, ಗರುಡನನ್ನು ಸ್ಮರಿಸಿದನು. ೩೭. ಪಕ್ಷಿರಾಜನಾದ ಆ ಗರುಡನು ವಿಶ್ವಕ್ಷೋಭಕರವಾದ ತನ್ನ ಸಹಜಗಮನದಿಂದ ಕೃಷ್ಣನೆಡೆಗೆ ಬಂದನು. ಬರುವಾಗ ಅವನ ರೆಕ್ಕೆಗಳ ಗಾಳಿಯಿಂದ ಮೋಡಗಳ ಗುಂಪು ಚದರಿ ಆಕಾಶವನ್ನೆಲ್ಲಾ ವ್ಯಾಪಿಸಿತು. ಆಕಾಶಗಂಗೆಯ ನೀರು ತುಳುಕಿತು. ಸೂರ್ಯಚಂದ್ರರು ಬೆದರಿದರು.

---

೧. ಸುರರೊಡಗಾದುವಂದ (ಕಗ) ೨. ಜೇಱೇಱೆ(ಕಖಗ) ೩. ಜನ (ಖ)

ವ|| ಅಂತು ಬಂದು ದೇವಕೀನಂದನಂಗೆ ವಿನತಾನಂದನಂ ವಿನಯವಿನಮಿತೋತ್ತಮಾಂಗನಾಗಿ ಕೈಗಳಂ ಮುಗಿದು

ತವೆ ದಿಕ್ಕುಂಡಾಲಮಮಂ ತುತ್ತುವ ದಶದಿಶೆಯಂ ಸುತ್ತುವಾಕಾಶಮಂ ಮು
ತ್ತುವ ಚಂದ್ರಾದಿತ್ಯರಂ ಮೀಂಟುವ ಕಡಲನಳುರ್ತೀಂಟುವಿಂದ್ರಾದ್ಯರಂ ಸೀಂ
ಟುವ ಯಕ್ಷಾಧೀಶನಂ ಕಟ್ಟುವ ಜವನೆರ್ದೆಯಂ ಮೆಟ್ಟುವೀಶಂಗೆ [1]ಬೂತ
ಟ್ಟುವಗುರ್ವಂ ತೋಱಿದಪ್ಪೆಂ ಬೆಸಸುಬೆಸಸಿದೇನೆಂಬುದುಂ ಕೃಷ್ಣನೆಂದಂ ೩೮

ಅನುಪಮಮತರ್ಕ್ಯಮಗಣಿತ
ಮನಿವಾರಿತಮಲ್ತೆ ನಿನ್ನ ಸಾಹಸಗರ್ವಂ
ವಿನತಾಪ್ರಿಯನಂದನ ನೀಂ
ಮುನಿದಂದಾವುದುಮಸಾಧ್ಯಮಲ್ತಿದನಱಿವೆಂ ೩೯

ಸೆಱೆಯಿರ್ದ ನಿನ್ನ ಜನನಿಯ
ಸೆಱೆಯಂ ಬಿಡಿಸಲ್ ಮಹೇಂದ್ರನೊಳ್ ನೀಂ ಮುಂ ತ
ಳ್ತಿಱಿದಮರ್ದಂ ತಂದೆಯೆನಲ್
ನೆಱೆ ಬಣ್ಣಿಪರಾರೊ ನಿನ್ನ ವಿಕ್ರಮಗುಣಮಂ ೪೦

ವ|| ಎಂದಸುರಸೂದನಂ ಸಪ್ರಸಾದವಚನದಿಂ ನುಡಿಯೆ ಗರುಡಂ ಕೇಳ್ದು

ದೇವರ ಸಾಮರ್ಥ್ಯದಿನೆ
ನ್ನೀ ವಿಕ್ರಮಮೆಸೆವುದರ್ಕತೇಜದಿನರ್ಕ
ಗ್ರಾವದ [2]ಕಾಯ್ಪೆಸೆವಂತಿರೆ
ಭಾವಿಪೊಡೇನುಂಟೆ ಬೇಱೆ ವಿಕ್ರಮವೆನ್ನೊಳ್ ೪೧

ಸಮುದ್ರದಲ್ಲಿ ಅಲೆಗಳ ಸಮೂಹವು ಮೇಲೆದ್ದಿತು. ಭೂತಲವು ನಡುಗಿತು. ಪರ್ವತಗಳ ಸಾಲು ಸಡಿಲಿತು. ವ|| ಹಾಗೆ ಬಂದು ಗರುಡನು ಕೃಷ್ಣನಿಗೆ ವಿನಯದಿಂದ ತಲೆಬಾಗಿ ವಂದಿಸಿದನು. ೩೮. ಆ ಗರುಡನು-ದಿಗ್ಗಜಗಳನ್ನು ಕಬಳಿಸುವೆನು, ಹತ್ತು ದಿಕ್ಕನ್ನೂ ಸುತ್ತುವೆನು, ಆಕಾಶವನ್ನು ಮುತ್ತುವೆನು, ಚಂದ್ರಸೂರ್ಯರನ್ನು ಮೀಟುವೆನು, ಸಮುದ್ರವನ್ನು ಆವರಿಸಿ ಕುಡಿಯುವೆನು, ಇಂದ್ರಾದಿಗಳನ್ನು ಒರಸುವೆನು, ಕುಬೇರನನ್ನು ಕಟ್ಟುವೆನು, ಯಮನ ಎದೆಯನ್ನು ಮೆಟ್ಟುವೆನು, ಈಶ್ವರನಿಗೆ ಲಜ್ಜೆಗೆಡಿಸುವ ಸಾಮರ್ಥ್ಯವನ್ನು ತೋರಿಸುವೆನು, ಅದೇನೆಂಬದನ್ನು ಆಜ್ಞಾಪಿಸು" ಎನ್ನಲು ಕೃಷ್ಣನು ಹೇಳಿದನು. ೩೯. ವಿನತೆಯ ಪ್ರಿಯನಂದನ, ನಿನ್ನ ಸಾಹಸವು ಅಸದೃಶವೂ ಊಹಿಸಲಾಗದುದೂ ಅಗಣಿತವೂ ನಿವಾರಿಸಲಾಗುದುದೂ ಅಲ್ಲವೆ? ನೀನು ಕೋಪಿಸಿಕೊಂಡಾಗ ಯಾವುದೂ ಅಸಾಧ್ಯವಲ್ಲ. ಇದನ್ನು ನಾನು ಬಲ್ಲೆನು. ೪೦. "ನಿನ್ನ ತಾಯಿಯ ಸೆರೆಯನ್ನು ಬಿಡಿಸುವುದಕ್ಕಾಗಿ ನೀನು ಮುಂಚೆ ಮಹೇಂದ್ರನ ಸಂಗಡ ಪ್ರತಿಭಟಿಸಿ ಯುದ್ಧವನ್ನು ಮಾಡಿ ಅಮೃತವನ್ನು ತಂದೆಯೆನ್ನುವಾಗ ನಿನ್ನ ಪರಾಕ್ರಮವನ್ನು ವರ್ಣಿಸುವವರು ಯಾರು!"

೧. ದೂತ (ಖ) ೨. ಕಾಯ್ಪೇಱುವವೋಲ್ (ಕಗ)

ವ|| ಎನೆ ವೈನತೇಯನ ವಿನಯಭಾಷಿತಕ್ಕೆ ಮೆಚ್ಚಿ ಸಂತಸಮನಪ್ಪುಕೆಯ್ದು

ಹರಿದರ್ಪಮನಪಹರಿಸಲ್
ಹರಿಪೀಠದೆ ಹರಿಶತಪ್ರಭಂ ತಳರ್ದು ಮನೋ
ಹರಿವೆರಸು ಹರಿ ಹರಿನ್ಮುಖ
ಭರಿತಾನಕನಿನದದೇೞಿದಂ ಖಗಪತಿಯಂ ೪೨

ಈ ದೇವಿಯ ಭೂಷಣ ರ
ತ್ನೋದಿತರುಚಿ ಬಳಸೆ ಪಂಚರತ್ನಪ್ರಭನಿಂ
ದಾದಂ ಗರುಡನೆನಲ್ ಪ
ದ್ಮೋದರನೊಡನೇಱೆ ದೇವಿ ಗರುಡನೊಳೆಸೆದಳ್ ೪೩

ಪ್ರಭವಿಸಿದುದು ಭಾನುಗೆ ಚಿ
ತ್ರಭಾನುವೆಸರೀಗಳೆನಿಸಿ ಪೀತಾಂಬರಕೌ
ಸ್ತುಭಶಂಖ[1]ಚಕ್ರದೇಹ
ಪ್ರಭೆಗಳ್ ತಳ್ಪೊಯ್ಯೆ ನಭದೊಳೆಸೆದಂ ಕೃಷ್ಣಂ ೪೪

ಆನಕವೀಚಿರವಂ ಧ್ವಜ
ಮೀನಂ ಶೇಷಾಕ್ಷತಾಂಬುಕಣ[2]ಮೆಸೆವ ಧರಾಂ
ಭೋನಿಧಿಯಿಂ ಖಗರಾಜಂ
ಮೈನಾಕಂ ನಾಕದತ್ತಲೊಗೆದಂತೊಗೆದಂ ೪೫

ವ|| ಎಂದು ಅಸುರಾರಿ ಕೃಷ್ಣನು ಪ್ರೀತಿವಚನದಿಂದ ಹೇಳಿದನು. ಅದನ್ನು ಕೇಳಿ ಗರುಡನು ೪೧. ಸೂರ್ಯನ ತೇಜಸ್ಸಿನಿಂದ ಸೂರ್ಯಕಾಂತಶಿಲೆಯ ಕಾವೇರುವಂತೆ ನಿನ್ನ ಸಾಮರ್ಥ್ಯದಿಂದ ನನ್ನ ಈ ಪರಾಕ್ರಮವು ಪ್ರಕಾಶಿಸುವುದು. ಯೋಚಿಸಿ ನೋಡಿದರೆ ನಿನ್ನದಲ್ಲದೆ ನನ್ನಲ್ಲಿ ಬೇರೆ ಪರಾಕ್ರಮವಿದೆಯೆ?! ವ|| ಎನ್ನಲು ಗರುಡನ ವಿನಯವಚನಕ್ಕೆ ಮೆಚ್ಚಿ, ಕೃಷ್ಣನು ಸಂತೋಷದಿಂದ ೪೨. ಇಂದ್ರನ ದರ್ಪವನ್ನು ಅಪಹರಿಸುವುದಕ್ಕಾಗಿ ಶತಸೂರ್ಯರ ಪ್ರಭೆಯ ಕೃಷ್ಣನು ಸಿಂಹಾಸನದಿಂದ ಎದ್ದು ಸತ್ಯಭಾಮೆಯೊಡನೆ ಪಟಹ ವಾದ್ಯಧ್ವನಿಯು ದಿಙ್ಮುಖಗಳನ್ನು ತುಂಬುತ್ತಿರಲು ಗರುಡನನ್ನೇರಿದನು. ೪೩. "ಈ ದೇವಿಯ ಆಭರಣರತ್ನಗಳಿಂದ ಹರಡಿದ ಕಾಂತಿಯು ಆವರಿಸಿದುದರಿಂದ ಗರುಡನು ಇಂದು ಪಂಚರತ್ನ ಪ್ರಭೆಯುಳ್ಳವನಾದನು!" ಎನ್ನುವಂತೆ ಸತ್ಯಭಾಮೆಯು ಕೃಷ್ಣನೊಡನೆ ಗರುಡನನ್ನೇರಿ ಪ್ರಕಾಶಿಸಿದಳು. ೪೪. ಸೂರ್ಯನಿಗೆ ಚಿತ್ರಭಾನುವೆಂಬ ಹೆಸರು ಈಗ ಸಂಭವಿಸಿತು ಎನ್ನಿಸಿ, ಪೀತಾಂಬರ ಕೌಸ್ತುಭ ಶಂಖ ಚಕ್ರ ದೇಹಪ್ರಭೆಗಳು ಸಂಮಿಳಿತವಾಗಿರಲು ಕೃಷ್ಣನು ಆಕಾಶದಲ್ಲಿ ಪ್ರಕಾಶಿಸಿದನು. ೪೫. ಪಟಹ ವಾದ್ಯ ಧ್ವನಿಗಳೆಂಬ ಅಲೆಗಳ ಶಬ್ದವೂ, ಧ್ವಜಗಳೆಂಬ ಮೀನುಗಳೂ, ಶೇಷಾಕ್ಷತೆಗಳೆಂಬ ನೀರಹನಿಗಳೂ ಹೊಳೆಯುವ ಧರೆಯೆಂಬ ಸಮುದ್ರದಿಂದ ಗರುಡನು, ಮೈನಾಕಪರ್ವತವು ಸ್ವರ್ಗದ ಕಡೆಗೆ ಹೊರಟಂತೆ ಹೊರಟನು.

---

೧. ಚಕ್ರಗದೆಯ (ಖ) ೨. ಮೊಗೆವಪರಾಂಭೋನಿಧಿಯಿಂ (ಕಗ) ಮೊಗೆವ ಸುಧಾಂಭೋ ನಿಧಿಯೆನೆ (ಖ) ಮೊಗೆವ ಸುಧಾಂಭೋನಿಧಿಯಿಂ (ಮೂಲ)

ವ॥ ಅಂತು ಖಗನಾಥಂ ಗಗನ[1]ವೀಥಿಯೊಳತಿಕ್ರಮಿತ ಪವನಸ್ಕಂಧನಾಗಿ ಪೋಪಲ್ಲಿ

ಅಡಕಿಲ್ಗೊಂಡೂರ್ಧ್ವಲೋಕಪ್ರತತಿ ವಿಪುಲದೇವಾಲಯಂ ಚಂದ್ರಸೂರ್ಯರ್
ಸೊಡರ್ಗಳ್ ತಾರಾಳಿ ಪುಷ್ಪಂ ಸುರನದಿ ವಸುಧಾರಾಪ್ಲವಂ ದ್ವೀಪವೇೞುಂ
ಕಡಲೇೞುಂ ವೃತ್ತಪೀಠಂ ಕನಕಗಿರಿ ಮಹಾಲಿಂಗಮೆಂಬಂತು ಚೆಲ್ವಂ
ಪಡೆದತ್ತೀ ವಿಶ್ವವಸ್ಮಜ್ಜಠರಕಮಲಭೂಕಲ್ಪಿತಂ ಸತ್ಯಭಾಮೇ ೪೬

ವ॥ ಎಂದು ಪೇೞುತ್ತುಮತಿಬೇಗದಿಂ ಪೋಗಿ ವಸುದೇವನಂದನಂ ದೇವೇಂದ್ರನ ನಂದನಮನೆಯ್ದಿ ಪೊಕ್ಕು

ತ್ರಿದಶಕುಜಾತಮೈದಱೊಳಮಿಂತಿದೆ ಪಲ್ಲವದಿಂ ಬೆಡಂಗಿನಿಂ
ತಿದೆ ನವಪುಷ್ಪದಿಂ [2]ಸೊಬಗಿನಿಂತಿದೆ ಸೌರಭದಿಂ ಮನೋಜ್ಞವಾ
ಯ್ತಿದಱ ವಿಲಾಸವೀ ತರುಚತುಷ್ಕದೊಳಾವುದೊ[3] ಪಾರಿಜಾತವಿಂ
ತಿದೆ ಪೆಱತಲ್ಲವೆಂದಱಿಪಿ [4]ತೋಱಿದನಾ ಪ್ರಿಯೆಗಾ ಮಹೀಜಮಂ ೪೭

ವ॥ ಅಂತು ತೋಱಿ [5]ಸಂತಮಿರದೆ

ಕೆಲರಂ ಚಕ್ರವಿಘಾತದಿಂ ಕೆಲರನುತ್ಕೌಮೋದಕೀಘಾತದಿಂ
ಕೆಲರಂ ಶಾರ್ಙ್ಗವಿಮುಕ್ತ ಬಾಣಹತಿಯಿಂ ಕೊಂದಿಕ್ಕಿ ಕಾದಿರ್ದ ದೋ
ರ್ಬಲಗರ್ವೋದ್ಧತರಂ ಮುರಾರಿ ವಿಜಯಶ್ರೀ ನೋಟ್ಪವೋಲ್ ಸತ್ಯಭಾ
ಮೆ ಲತಾಕೋಮಲೆ ನೋಟ್ಪೆನಂ ಕಳೆದುಕೊಂಡಂ ಪಾರಿಜಾತದ್ರುಮಂ ೪೮

ವ॥ ಹಾಗೆ ಪಕ್ಷಿರಾಜ ಗರುಡನು ಗಗನಮಾರ್ಗದಲ್ಲಿ ವಾತಸ್ಕಂಧವನ್ನು ದಾಟಿ ಹೋಗುವಲ್ಲಿ, ೪೬. ಕೃಷ್ಣನು ಸತ್ಯಭಾಮೆಯನ್ನು ನೋಡಿ ಅಡುಕಿದಂತಿರುವ ಮೇಲಿನ ಲೋಕಗಳ ಸಮೂಹವೇ ವಿಶಾಲವಾದ ದೇವಾಲಯ, ಚಂದ್ರ ಸೂರ್ಯರೇ ದೀಪಗಳು, ನಕ್ಷತ್ರ ಸಮೂಹವೇ ಹೂ, ದೇವಗಂಗಾ ನದಿಯೆ ಸುವರ್ಣಧಾರಾ ಪ್ರವಾಹ, ಸಪ್ತಸಮುದ್ರಗಳೂ ಸಪ್ತದ್ವೀಪಗಳೂ ವೃತ್ತಪೀಠ, ಸುವರ್ಣಾದ್ರಿ ಮೇರುವೇ ಮಹಾಲಿಂಗವೆಂಬಂತೆ, ನಮ್ಮ ನಾಭಿಕಮಲದಿಂದ ಜನಿಸಿದ ಬ್ರಹ್ಮನಿಂದ ಕಲ್ಪಿತವಾದ ಪ್ರಪಂಚವು ಚೆಲುವನ್ನು ಪಡೆದಿದೆ, ಸತ್ಯಭಾಮೇ," ವ॥ ಎಂದು ಹೇಳುತ್ತ ಅತಿವೇಗದಿಂದ ಹೋಗಿ ಕೃಷ್ಣನು, ದೇವೇಂದ್ರನ ನಂದನವನವನ್ನು ಸಮೀಪಿಸಿ ಅದನ್ನು ಪ್ರವೇಶಿಸಿದನು. ೪೭. "ದೇವವೃಕ್ಷಗಳೈದರಲ್ಲಿ ಇದೇ ಚಿಗುರಿನಿಂದಲೂ ಬೆಡಗಿನಿಂದಲೂ ಹೊಸ ಹೂವಿನಿಂದಲೂ ಸೊಬಗಿನಿಂದಲೂ ಸುವಾಸನೆಯಿಂದಲೂ ಮನೋಹರವಾಗಿದೆ. ಇದರ ವಿಲಾಸವು ಮಿಕ್ಕ ಈ ನಾಲ್ಕರಲ್ಲಿ ಯಾವುದೊಂದಕ್ಕೂ ಇಲ್ಲ. ಆದುದರಿಂದ ಇದೇ ಪಾರಿಜಾತ ವೃಕ್ಷ ಬೇರಾವುದೂ ಅಲ್ಲ" ಎಂದು ಪ್ರಿಯೆ ಸತ್ಯಭಾಮೆಗೆ ಆ ಮರವನ್ನು ತೋರಿಸಿದನು. ವ॥ ಹಾಗೆ ತೋರಿಸಿ ಸುಮ್ಮನಿರದೆ ೪೮. ಆ ವನವನ್ನು ಕಾಯುತ್ತಿದ್ದ ತೋಳಿನ ಬಲದಿಂದ ಗರ್ವಿತರಾದ ಆಳುಗಳಲ್ಲಿ ಕೆಲವರನ್ನು ಚಕ್ರದಿಂದ ಹೊಡೆದೂ ಕೆಲವರನ್ನು ಎತ್ತಿದ ಕೌಮೋದಕೀಗದೆಯಿಂದ ಹೊಡೆದೂ ಕೆಲವರನ್ನು ತನ್ನ ಬಿಲ್ಲಿನಿಂದ ಬಿಟ್ಟ ಬಾಣದ ಹೊಡೆತದಿಂದಲೂ ಕೊಂದು

೧. ವೀಥಿಯಿಂದತಿಕ್ರಮಿತ (ಕಗ) ೨. ಸುಭಗಮಿಂತಿದೆ (ಕಗ) ೩. ಈಕ್ಷಿಸೆ (ಕಗ) ೪. ತೋಱೆನಿಜ (ಕಗ) ೫. ಮತ್ತಮಿರದೆ (ಕಗ)

ವ॥ ಅಂತು ಪಾರಿಜಾತದ್ರುಮಮಂ ಕಳೆದುಕೊಂಡುಮಾಖಂಡಲಂಗೆ ಭಂಗಮಂ ಕುಡದೆ ಪೋಗಲೊಲ್ಲೆನೆಂದು ಸಮರಾಮಂತ್ರಣಾರ್ಥಂ ಪಾಂಚಜನ್ಯಶಂಖಮಮಂ ಪೂರ್ಯಿಸೆ

ನೆರವಂ ಪೇೞುರಗೇಂದ್ರ ನಿನ್ನುರಗರಂ ದಿಕ್ಪಾಲಕಶ್ರೇಣಿ ನೀಂ
ನೆರವಾಗೇಂ ಪಡಿಪಾತಲೇ ರವಿಯೆಲೇ ಮಾದೇವಲೇ ಬೊಮ್ಮ ಕೇ
ಳ್ದಿರೆ ನೀಮುಂ ನೆರವಾಗಿಮೀ ಕುಲಿಶಿಗೆಂತುಂ ಗೆಲ್ವನೇಕಾಂಗದಿಂ
ಮುರವಿಧ್ವಂಸಕನೆಂದು ಸಾಱುವವೊಲಾಯ್ತಾ ಪಾಂಚಜನ್ಯಸ್ವನಂ ೪೯

ವ॥ ಅನ್ನೆಗಂ ಪನ್ನಗಾರಿವಾಹನ ಬಾಹು ನಿಹತಶೇಷಾನಿಮಿಷವನಪಾಲಕರ್ ಪೌಲೋಮಿಯ ಸಮೀಪಕ್ಕೆ ಪೋಗಿ

ತನಗೇಕಗ್ಗದ ಪಾರಿಜಾತಮಹಿಜಂ ಪೌಲೋಮಿಗಾಂ ವೀರಕಾ
ಮಿನಿಯೆಂ ರೂಪಿನೊಳಗ್ಗಳಂ ಸೊಬಗಿನಿಂ ಮೇಲೀ ಕುಜಂ ಯೋಗ್ಯವಿ
ನ್ನೆನಗೆಂಬಂದದೆ ಸತ್ಯಭಾಮೆ ಪತಿಯಂ ದೈತ್ಯಾರಿಯಂ ತಂದು ದೇ
ವಿ ನಿಜೋದ್ಯಾನದ ಪಾರಿಜಾತತರುವಂ ಕೈಕೊಂಡಳುತ್ಸಾಹದಿಂ ೫೦

ವ॥ ಎಂದು ಬಿನ್ನವಿಸಲತಿಕುತೂಹಲಾಕುಲಿತೆಯಾಗಿ

ಸ್ತನಕಂಪತ್ರುಟ್ಯದೇಕಾವಳಿ ಗತಿಜವನಿರ್ಮುಕ್ತಮಂಜೀರಮಾಂದೋ
ಲನ[1]ಭಾರವ್ಯಸ್ತಕರ್ಣೋತ್ಪಲಮವಿರಳಘರ್ಮಾಂಬುಧೌತಾಂಗರಾಗಂ
ಘನಸೋಷ್ಣಶ್ವಾಸಲೋಲಾಳಕಮದ್ಧೃಥಕಚಸ್ರಸ್ತಮಾಲ್ಯಂ ಭಯಂ ಮಾ
ಟ್ಟಿನೆಗಂ ಪೌಲೋಮಿ ಬಂದಳ್ ಕುಲಿಶಿಗಪಜಯಶ್ರೀಯೆ ಬರ್ಪಂದದಿಂದಂ ೫೧

ಆ ಕೃಷ್ಣನು, ವಿಜಯಶ್ರೀಯೆ ನೋಡುವಂತೆ ಕೋಮಲೆಯಾದ ಆ ಸತ್ಯಭಾಮೆಯು ನೋಡುತ್ತಿರುವಲ್ಲಿ, ಆ ಪಾರಿಜಾತವೃಕ್ಷವನ್ನು ಕಿತ್ತುಕೊಂಡನು. ವ॥ ಹಾಗೆ ಪಾರಿಜಾತವೃಕ್ಷವನ್ನು ಕಿತ್ತು ತೆಗೆದುಕೊಂಡೂ ಇಂದ್ರನಿಗೆ ಭಂಗವನ್ನುಂಟುಮಾಡದೆ ಹೋಗಲಾರೆನೆಂದು ಯುದ್ಧಕ್ಕೆ ಕರೆಯುವುದಕ್ಕಾಗಿ ಪಾಂಚಜನ್ಯವನ್ನು ಊದಿದನು. ೪೯. ಆ ಪಾಂಜಜನ್ಯ ಶಂಖಧ್ವನಿಯು "ನಾಗೇಂದ್ರನೇ, ಈ ಇಂದ್ರನಿಗೆ ನಿನ್ನ ಉರಗರನ್ನು ಸಹಾಯಾರ್ಥವಾಗಿ ಬರಹೇಳು. ದಿಕ್‌ಪಾಲಕರೇ, ನೀವು ನೆರವಾಗಿರಿ. ಬೇರೆ ಮಾತೇನು! ಎಲೆ ಸೂರ್ಯ, ಎಲೆ ಮಹಾದೇವ (ಶಿವಾ) ಎಲೆ ಬ್ರಹ್ಮ ಕೇಳಿದಿರಾ, ನೀವೂ ಇವನ ಸಹಾಯಕ್ಕೆ ಬನ್ನಿ. ಈ ಮುರಾರಿ ಕೃಷ್ಣನು ಏಕಾಂಗದಿಂದಲೇ ಗೆಲ್ಲುವನು" ಎಂದು ಸಾರುವಂತಿದ್ದಿತು. ವ॥ ಅಷ್ಟರಲ್ಲಿ ಕೃಷ್ಣನ ಕಯ್ಯಿಂದ ಹತರಾಗದೆ ಉಳಿದಿದ್ದ ದೇವವನ ಪಾಲಕರೆಲ್ಲರೂ ಶಚೀದೇವಿಯ ಸಮೀಪಕ್ಕೆ ಹೋಗಿ, ೫೦. "ಶ್ರೇಷ್ಠವಾದ ಪಾರಿಜಾತ ತರುವು ಶಚಿಗೇಕೆ! ನಾನು ವೀರಪತ್ನಿ, ರೂಪದಲ್ಲೂ ಸೊಬಗಿನಲ್ಲೂ ಮೇಲು, ಈ ವೃಕ್ಷವು ಇನ್ನು ನನಗೆ ಯೋಗ್ಯವಾದುದು, ಎಂದು ಹೇಳುವಂತೆ ಪತಿಯಾದ ಕೃಷ್ಣನನ್ನು ಕರೆದುಕೊಂಡು ಬಂದು, ದೇವೀ ನಿಮ್ಮ ಉದ್ಯಾನದ ಪಾರಿಜಾತವೃಕ್ಷವನ್ನು ಸತ್ಯಭಾಮೆ ಉತ್ಸಾಹದಿಂದ ತೆಗೆದುಕೊಂಡಳು." ವ॥ ಎಂದು ವಿಜ್ಞಾಪಿಸಿದರು. ಶಚಿಯು ಕೌತುಕಾನ್ವಿತ ಳಾದಳು. ೫೧. ಸ್ತನಗಳ ನಡುಕದಿಂದ ಏಕಾವಳಿಯ ಹಾರವು ಕಿತ್ತುಹೋಯಿತು. ನಡಿಗೆಯ ವೇಗದಿಂದ ಕಾಲುಬಳೆ ಕಳಚಿ ಬಿದ್ದುಹೋಯಿತು. ತೂಗಾಟದ ಭಾರದಿಂದ ಕಿವಿಯ

---

೧. ಭಾರಧ್ವಸ್ತ (ಕಗ)

ವ॥ ಅಂತು ಬಂದು ಸಭಾಂತರಾಳದೊಳಿರ್ದ ನಿಜಕಾಂತನಂತಿಕಮಂ ಪೊರ್ದಿ

ಎನಗತಿಖೇದವಪ್ಪಿನೆಗಮಿಂದು ಪದಾರ್ಥವಿಹೀನವಾಯ್ತು ನಂ
ದನಮಮರೌಘವಿಂದಫಲವಾಂಛಿತವಾದುದಸಾರವಾದುದಿಂ
ದನಿಮಿಷಲೋಕಮಿಂದು ನಿಜಕೀರ್ತಿ ಮಲೀಮಸವಾಯ್ತೆಲೇ ಸುಧಾ
ಶನಪತಿ ಪಾರಿಜಾತಹರಣಂ ಮುರವೈರಿಯಿನಾದ ದೂಸಱಿಂ ೫೨

ವ॥ ಎಂಬುದುಂ ಶಚೀನಾಥನಾತ್ಮಗತದೊಳ್ ಬಗೆದು ನೋಡಿ ನಾರದಂ ಕದನದೂತನಾಗಿ ಬಂದಱಿಪಿದ ಕಾರ್ಯಪ್ರಪಂಚವೀಗಳ್ ಪಾಂಚಜನ್ಯರವದೊಳಂ ಶಚಿಯ ಪುಯ್ಯಲೊಳಂ ವಿದಿತಮಾದುದೆಂದು ಕದನೋದ್ಯೋಗದಿಂ ಕುಪಿತಚಿತ್ತನಾಗಿ ಬೃಹಸ್ಪತಿಯ ಮೊಗಮಂ ನೋಡೆ

ಕಲಹಕ್ರೀಡೆಗೆ ಬಂದನಾವನಱಿವೈ ತ್ರೈಲೋಕ್ಯಸೃಷ್ಟಿಸ್ಥಿತಿ
ಪ್ರಲಯೈಕಕ್ಷಮನಾ ಮಹಾವಿಭುಗೆ ಲೀಲಾಮಾತ್ರಮೀ ದೇವಮಂ
ಡಲಮಂ ಗೆಲ್ವುದಿದರ್ಕೆ ದೇವ ಕಲಹಂ ಬೇಡುತ್ತಮಾಂಗಸ್ಥಿತಾಂ
ಜಲಿಯಾಗೀಗಳೆ ಪೋಗಿ ನೀನೆ ಕುಡು ಕೃಷ್ಣಂಗಾ ಮರುದ್ಭೂಜಮಂ ೫೩

ವ॥ ಎಂದು ಸುರಪುರೋಹಿತನಾಗಾಮಿಕಾರ್ಯಮಂ ಪೇಟಲಾ ಯೋಧನ ಪುನಸ್ಸಂಧಾನ ವಿಶಾರದಂ ನಾರದನಿಂತೆಂದಂ

ಅಲಂಕಾರ ನೈದಿಲೆಯು ಭಿನ್ನವಾಯಿತು. ಬೆವರು ನೀರಿನಿಂದ ಅಂಗರಾಗವು ತೊಳೆದು ಹೋಯಿತು. ಘನವಾದ ಬಿಸಿಯುಸಿರಿನಿಂದ ಮುಂಗುರುಳು ಚಂಚಲವಾಯಿತು. ಸಡಿಲವಾದ ಮುಡಿಯಿಂದ ಹೂಮಾಲೆ ಜಾರಿಬೀಳುತ್ತಿದ್ದಿತು. ಇವೆಲ್ಲವೂ ಭಯವನ್ನುಂಟುಮಾಡುತ್ತಿರಲು ಆ ಶಚಿಯು ಇಂದ್ರನ ಹತ್ತಿರಕ್ಕೆ ಅಪಜಯಲಕ್ಷ್ಮಿಯಂತೆ ಬಂದಳು. ವ॥ ಹಾಗೆ ಬಂದು ಸಭೆಯ ಮಧ್ಯದಲ್ಲಿದ್ದ ತನ್ನ ಪತಿಯ ಸಮೀಪಕ್ಕೆ ಹೋಗಿ ೫೨. "ಅಮರೇಶ್ವರ, ಇಂದು ಕೃಷ್ಣನು ಪಾರಿಜಾತವೃಕ್ಷವನ್ನಪಹರಿಸಿದುದರಿಂದ ನನಗೆ ಅತಿಖೇದವಾಗುವಂತೆ ನಂದನವನವು ಉತ್ತಮಪದಾರ್ಥವಿಹೀನವಾಯಿತು. ದೇವ ಸಮೂಹವು ವಿಫಲೇಷ್ಟಾರ್ಥವುಳ್ಳವರಾದರು. ದೇವಲೋಕವು ನಿಸ್ಸಾರವಾಯಿತು. ನಿನ್ನ ಕೀರ್ತಿಯೇ ಮಲಿನವಾಯಿತು" ವ॥ ಎಂದಳು. ಇಂದ್ರನು ತನ್ನ ಮನಸ್ಸಿನಲ್ಲೇ ಆಲೋಚಿಸಿ ನೋಡಿ "ನಾರದನು ಕದನದೂತನಾಗಿ ಬಂದು ತಿಳಿಸಿದ ಕಾರ್ಯಪ್ರಪಂಚವು ಈಗ ಪಾಂಚಜನ್ಯ ಧ್ವನಿಯಿಂದಲೂ ಶಚಿಯ ಹುಯ್ಯಲಿನಿಂದಲೂ ತಿಳಿದಂತಾಯಿತು" ಎಂದುಕೊಂಡು ಕದನೋದ್ಯುಕ್ತನಾಗಿ ಕೋಪಗೊಂಡು ಬೃಹಸ್ಪತಿಯ ಮುಖವನ್ನು ನೋಡಿದನು. ೫೩. ಬೃಹಸ್ಪತಿಯು "ಕಲಹ ಕ್ರೀಡೆಗೆ ಬಂದಿರುವವನು ಯಾರೆಂಬುದನ್ನು ಬಲ್ಲೆಯಾ? ಆತನು ತ್ರೈಲೋಕ್ಯ ಸೃಷ್ಟಿ ಸ್ಥಿತಿ ಪ್ರಲಯಗಳಿಗೆ ಏಕೈಕಶಕ್ತನು. ಆ ವಿಭುವಿಗೆ ಈ ದೇವಮಂಡಲವನ್ನು ಜಯಿಸುವುದು ಲೀಲಾಮಾತ್ರವಾದುದು. ದೇವ! ಇದಕ್ಕೆ ಕಲಹವು ಬೇಡ, ನೀನು ಈಗಲೆ ಕೃಷ್ಣನೆಡೆಗೆ ಹೋಗಿ ವಂದಿಸಿ, ಅವನಿಗೆ ಪಾರಿಜಾತ ವೃಕ್ಷವನ್ನು ಒಪ್ಪಿಸು" ವ॥ ಎಂದು ಸುರಪುರೋಹಿತನು ಮುಂದಿನ ಕಾರ್ಯವನ್ನು ತಿಳಿಸಿದನು. ಯುದ್ಧವನ್ನು ಪುನಃ ಆರಂಭಿಸುವಂತೆ ಮಾಡುವುದರಲ್ಲಿ ವಿಶಾರದನಾದ ನಾರದನು,

ದಿವಿಜಾಧೀಶನನೊಂದೆ ಮೆಯ್ಯೊಳೆ ಮುಕುಂದಂ ಗೆಲ್ವನೆಂಬುಕ್ತಿಯು
ಕ್ತವೆ ವಾಚಸ್ಪತಿ ನೀಂ ಬಳಾಬಳವಿಚಾರಂಗೆಯ್ಯದೇನೆಂಬೆ ವಾ
ಸವನೊಳ್ ಬೆಂಬಲವಪ್ಪ ವೀರರಮರರ್ [1]ತಾಮಲ್ಲರೇ ಶಕ್ರನೇ
ಱುವುದೈರಾವತಮಲ್ಲವೇ ಕುಲಿಶಿಗಸ್ತ್ರಂ ವಜ್ರಮೇನಲ್ಲವೇ ೫೪

ವ|| ಅಂತುಮಲ್ಲದೆ

ತ್ರಿದಶಾಧೀಶ್ವರಸಂಪದಂ ಸಫಲಮೀ ಪೌಲೋಮಿಯಿಂ ಪಾರಿಜಾ
ತದಿನೀ ದಿವ್ಯಪದಾರ್ಥಯುಗ್ಮದೊಳಗಿಂದೊಂದಂ ಮುಕುಂದಂಗೆ ಬ
ಲ್ಲಿದನೆಂದೀವುದೆ ಪಾರಿಜಾತಮನಿದೇಂ ಪೌಲೋಮಿಯಂ ನಾಳೆ ಬ
ಲ್ಲಿದರಾರಾನುಮಪೇಕ್ಷಿಗೆಯ್ಯಲವರ್ಗೀಯಲ್ವೇಟ್ಕುಮೆಂಬಂದಮೇ ೫೫

ವ|| ಎಂದು ನುಡಿದ ನಾರದನ ನುಡಿಗನುಗುಣಮಾಗಿ ವಿಬುಧಮಂತ್ರಿಯಂ ಮಾರ್ಕೊಂಡು

[2]ಬಗೆದಂದೀ ಪಂದೆಗಜ್ಜಂಗಳನಱಿಪುವ ನಿನ್ನುಕ್ತಿಯಂತಿರ್ಕೆ ದೈತ್ಯಾ
ರಿ ಗಡಂ ಮಾಱಾಂತು [3]ಬಂದಂ ಗಡ ಸುರಕುಜಮಂ ಸತ್ಯೆಗಿತ್ತಂ ಗಡಂ ಕಾ
ದಿ ಗಡಂ ಗೆಲ್ವಂ [4]ಗಡೆಮ್ಮಂ ಗಡೆಮಗೆ ಗಡಂ ನೀಂ ಗಡಂ ಬುದ್ಧಿವೇಳ್ದ
ಪ್ಪೆ ಗಡಂ ದೇವೇಜ್ಯ[5]ನಲ್ಲಿಂ ಯದುಕುಲಕುಟಿಲಂಗಾನಲಾವಾವೆ[6]ಸಾಲ್ವಂ ೫೬

ವ|| ಎಂದು ನುಡಿದು

೫೪. "ವಾಚಸ್ಪತಿಯೇ, ಕೃಷ್ಣನು ದೇವಚಕ್ರವರ್ತಿಯನ್ನು ಏಕಾಂಗದಿಂದ ಗೆಲ್ಲುವನೆಂದು ಹೇಳುವ ಮಾತು ಯುಕ್ತವಾದದ್ದೆ?! ನೀನು ಬಲಾಬಲ ವಿಚಾರವನ್ನೇ ಮಾಡದೆ ಏನೋ ಹೇಳುತ್ತೀಯೆ. ಇಂದ್ರನಿಗೆ ಬೆಂಬಲವಾದ ವೀರರು ಅಮರರಲ್ಲವೆ? ಇಂದ್ರನೇರುವ ವಾಹನವು ಐರಾವತವಲ್ಲವೆ? ಇಂದ್ರನ ಅಸ್ತ್ರವು ವಜ್ರಾಯುಧವಲ್ಲವೆ?! ವ|| ಅದೂ ಅಲ್ಲದೆ ೫೫. "ದೇವಚಕ್ರವರ್ತಿಯ ಸಂಪತ್ತು ಈ ಶಚಿಯಿಂದಲೂ ಪಾರಿಜಾತದಿಂದಲೂ ಸಫಲವಾಗಿದೆ. ಈ ದಿವ್ಯಪದಾರ್ಥಗಳೆರಡರಲ್ಲಿ ಒಂದಾದ ಪಾರಿಜಾತವನ್ನು ಬಲ್ಲಿದನೆಂದು ಕೃಷ್ಣನಿಗೆ ಕೊಡಬಹುದೆ? ಇದೇನು! ನಾಳೆ ಯಾವನೋ ಬಲಿಷ್ಠನು ಶಚಿಯನ್ನು ಅಪೇಕ್ಷಿಸಿದರೆ ಅವಳನ್ನೂ ಅವನಿಗೆ ಕೊಡಬಹುದೆ?" ವ|| ಎಂದು ಹೇಳಿದ ನಾರದನ ಮಾತಿಗನುಗುಣವಾಗಿ ದೇವಮಂತ್ರಿಯನ್ನು ಪ್ರತಿಭಟಿಸಿ ೫೬. "ಯೋಚಿಸಿ ನೋಡಿದಲ್ಲಿ ಹೇಡಿಗಳ ಕೆಲಸಗಳನ್ನು ತಿಳಿಸುವ ನಿನ್ನ ಮಾತು ಹಾಗಿರಲಿ. ರಾಕ್ಷಸಾರಿಯಂತೆ! ಪ್ರತಿಭಟಿಸಿ ಬಂದನಂತೆ! ಕಲ್ಪವೃಕ್ಷವನ್ನು ಸತ್ಯೆಗೆ ಕೊಟ್ಟನಂತೆ? ಅವನು ಕಾದಿ ನಮ್ಮನ್ನು ಗೆಲ್ಲುವನಲ್ಲವೆ; ನಮ್ಮನ್ನು ಗೆಲ್ಲುವನಲ್ಲವೆ? ನೀನು ನಮಗೆ ಬುದ್ಧಿಯನ್ನು ಹೇಳುತ್ತಿರುವೆಯಲ್ಲವೆ? ನೀನು ದೇವಗುರು ಅಲ್ಲವೆ?! ಇನ್ನು ಆ ಯದುಕುಲ ಕುಟಿಲನಿಗೆ ತಕ್ಕುದನ್ನು ಮಾಡಲು ನಾವೇ ಸಾಕು" ವ|| ಎಂದು ಹೇಳಿದನು. ಆಗ

೧. ತಾಮಲ್ಲವೇ (ಖ) ೨. ಬಗೆಗೆಂದುಂ (ಕಗ) ೩. ಪೂಣ್ದಂ (ಖ) ೪. ಗಡಂ ನೀಂ ಗಡಮೆನಗೆ ಗಡೀಗಳ್ ಗಡಂ (ಕಗ) ೫. ನಿಲ್ಲೀ (ಕಗ) ೬. ಸಾಲ್ದೆಂ (ಕಗ) ಸೋಲ್ವೆಂ (ಖ)

ನೆರೆದಾಶಾಧೀಶರಲ್ಲಲ್ಲಿಗೆ ಕೆಳರ್ದು ಸಿಡಿಲ್ದೆಳ್ದುತಿರ್ಪಲ್ಲಿ ತತ್ಸಂ
ಗರಕೇಳೀಲೋಲದಿಕ್ಪಾಲಕರ ಕಟಕಕೋಟೀರಕೇಯೂರಹಾರೋ
ತ್ಕರದಿಂದನ್ಯೋನ್ಯಸಂಘಟ್ಟದೊಳೆ ಸಿಡಿವ ಮಾಣಿಕ್ಯಸಂದೋಹವಾ ವೀ
ರರ ಕೋಪೋಗ್ರಾನಲಜ್ವಾಲೆಯಂ ಕಡಿಯೆ ಸಿಡಿಲ್ವಂತಗುರ್ವಾದುದೆತ್ತಂ ೫೭

ಆಳೆಟ್ಟು ಗರ್ಜಿಪಾಶಾ
ಪಾಳರ ಕಣ್ಮಲರ ಕೆಂಪು ಪರ್ವಿದುದಾ ದಿ
ಕ್ಪಾಳರ ವೀರರಸಾಬ್ಧಿಯ
ವೇಳಾವಿದ್ರುಮದ ಕೆಂಪಿದೆನೆ [1]ತತ್ಸಭೆಯಂ ೫೮

ವ|| ಆ ಸಭಾಕ್ಷೋಭೆ[2]ಸಮಯದೊಳಾಹವಕ್ಷುಭಿತನಾಗಿ ಸುರಪತಿ ಗುರೂಕ್ತಿಯಿಂ ಸಂದಿಗ್ಧಸಮರೋದ್ಯೋಗನಾಗಿರ್ದುದನಱಿದು ನಾರದಂ ಶಚೀವದನಮಂ ನೋಡಿ

ಪ್ರಾಕೃತಮರ್ತ್ಯನಾದ ಹರಿ ಪೂಣ್ದು ಗಡಂ ನಿಜಕಾಂತೆಗಿತ್ತನೀ
ನಾಕಮಹೀಜಮಂ ಪಿರಿದುಮಾತನ ಶೌರ್ಯಮಿದಲ್ತು ಮೈಮೆವೆ
ತ್ತಾಕೆಯ ತೋಳ ಸೋಂಕಿನ ಗುಣಂ ಗತಭಾಗ್ಯೆಯ ನಿನ್ನ ತೋಳ ಸೋಂ
ಕೀ ಕುಲಿಶಾಸ್ತ್ರನಿಂ ತೊಲಗಿಸಿತ್ತು ನಿಸರ್ಗದ ಶೌರ್ಯಮಂ ಶಚೀ ೫೯

ವ|| ಎಂದು [3]ಮುಟ್ಟೆಮೂದಲಿಸೆ ಕಟ್ಟೇವದಿಂ ಶಚೀದೇವಿ ದೇವರಾಜನಿದಿರೊಳ್ ನಿಂದು

೫೭. ಅಲ್ಲಿ ಸೇರಿದ್ದ ದಿಕ್ಪಾಲಕರು ಅಲ್ಲಲ್ಲಿಯೇ ಕೆರಳಿ, ಸಿಡಿದೆದ್ದರು. ಯುದ್ಧ ಕ್ರೀಡೆಯಲ್ಲಿ ಆಸಕ್ತರಾದ ಅವರ ಕೈಬಳೆ, ಕಿರೀಟ, ತೋಳುಬಂದಿಗಳು ಮತ್ತು ಹಾರಗಳು, ಒಂದಕ್ಕೊಂದು ಡಿಕ್ಕಿ ಹೊಡೆದು, ಹಾರುವ ಕೆಂಪುರತ್ನಗಳ ಸಮೂಹವು ಆ ವೀರರ ಕೋಪವೆಂಬ ಉಗ್ರಾಗ್ನಿಜ್ವಾಲೆಯ ಕಿಡಿಯೆ ಸಿಡಿಯುತ್ತಿರುವಂತೆ ಎಲ್ಲೆಲ್ಲೂ ಭಯಂಕರವಾಯಿತು. ೫೮. ವೀರಾವೇಶದಿಂದ ಗರ್ಜಿಸುವ ಆ ದಿಕ್ಪಾಲಕರ ಕೆಂಪು ಹೂವಿನಂತಾದ ಕಣ್ಣಿನ ಕೆಂಪು ಆ ದಿಕ್ಪಾಲರ ವೀರರಸಸಮುದ್ರದ ದಡದ ಹವಳದ ಚಿಗುರಿನ ಕೆಂಪಿನಂತೆ ಆ ಸಭೆಯಲ್ಲಿ ಹರಡಿತು. ವ|| ಆ ಸಭೆಯ ಗಲಿಬಿಲಿಯ ಸಮಯದಲ್ಲಿ ಇಂದ್ರನು ಯುದ್ಧದ ವಿಷಯದಲ್ಲಿ ಚಂಚಲಮನಸ್ಸಕನಾಗಿ ದೇವಗುರುವಿನ ಮಾತಿನಿಂದ ಯುದ್ಧವನ್ನು ಮಾಡುವುದರಲ್ಲಿ, ಸಂದಿಗ್ಧೋದ್ಯೋಗನಾಗಿರುವುದನ್ನು ಅರಿತ ನಾರದನು ಶಚಿಯ ಮುಖವನ್ನು ನೋಡಿದನು. ೫೯. "ಸಾಮಾನ್ಯ ಮನುಷ್ಯನಾದ ಕೃಷ್ಣನು, ತನ್ನ ಕಾಂತೆಗೆ ಪ್ರತಿಜ್ಞೆ ಮಾಡಿ, ಈ ಕಲ್ಪವೃಕ್ಷವನ್ನು ಕೊಟ್ಟನಲ್ಲವೆ! ಇದು ಆತನ ಶೌರ್ಯಾಧಿಕ್ಯದಿಂದೇನಲ್ಲ. ಮಹಿಮೆಯನ್ನು ಪಡೆದ ಆಕೆಯ ತೋಳ ಸೋಕಿನ ಗುಣ. ಭಾಗ್ಯಹೀನೆಯಾದ ನಿನ್ನ ತೋಳ ಸೋಂಕು ಈ ವಜ್ರಾಯುಧನಾದ ಇಂದ್ರನಿಗಿದ್ದ ಸಹಜ ಶೌರ್ಯವನ್ನೂ ತೊಲಗಿಸಿತು ಶಚೀ," ವ|| ಎಂದು ಮನಸ್ಸಿಗೆ ತಾಕುವಂತೆ ಮೂದಲಿಸಿದನು. ಶಚಿಯು ಬಹು ವ್ಯಥೆಯಿಂದ ಇಂದ್ರನ ಎದುರಿಗೆ ನಿಂತು

೧. ತತ್ಸಭೆಯೊಳ್ (ಖ) ೨. ಸಮಯದೊಳವಕ್ಷೋಭಿತನಾಗಿ (ಖ) ೩. ಮುಟ್ಟೆ (ಖ)

ಅನಿಮೇಷಾನೋಕಹಂ ಪೋದುದನಱಿದು ಗಡಿನ್ನುಂ ನಿಳಿಂಪೇಭಪೂರ್ವಾ
ಸನದೊಳ್ [1]ಕಾಲ್ಗೆಯ್ಯದಿನ್ನುಂ ನಿಜಕುಲಿಶಮಹಾಸ್ತ್ರಕ್ಕೆ ಕೈನೀಡದಿನ್ನುಂ
ಮುನಿಸಿಂ ಮೇಲೆತ್ತದಿನ್ನುಂ ದನುಜರಿಪುವಿನೊಳ್ ಕಾದದೇಕಿರ್ಪೆ ಸಂಕ್ರಂ
ದನ ನೀಂ ಪೌಲೋಮಿಯಪ್ಪೆನ್ನಧಿಪನೆನಿಸಿ ಬನ್ನಕ್ಕೆ ಮುಯ್ಯಾಂತು ನಿಲ್ವೈ ೬೦

ವ|| ಎನೆ ಕುಲಿಶಧರ[2]ನಾಂಗಿರಸನತ್ತಲವಲೋಕನಂಗೆಯ್ದು

ದಿವಿಜಮಹೀಜಮಂ ಮನುಜನುಯ್ದೊಡೆ ಸೈರಿಸೆ ಪುಟ್ಟುಗುಂ ಪರಾ
ಭವಮದಱಿಂದಮೀ ಮುನಿಪನೀ ಸುರರೀ ಶಚಿದೇವಿಯೆಂದ ಕ
ಜ್ಜವೆ ಬಗೆವೊಕ್ಕುದಿನ್ನೆಮಗೆ ಸಾಮದ ಭೇದದುಪಪ್ರದಾನದೊಂ
ದವಸರಮಲ್ತು ದಂಡಮೆ ದಲುದ್ಯಮಮಿಂ [3]ಪೆಱಪಿಂಗಿರಂಗಿರಾ ೬೧

ವ|| ಎಂದು ರಣರಸಾಡಂಬರಮನಳವಡಿಸಿದಾಗಳ್

ಅಸಮಕ್ರೋಧಕೃಶಾನು ಪೆರ್ಚಿ ಮನದಿಂ ಸರ್ವಾಂಗಮಂ ಕೂಡೆ ಭೇ
ದಿಸಿ ಪೊಣ್ಮಿರ್ದುದು ತಚ್ಛಿಖಾಶಕಲದುರ್ಬೆಂಬಂತೆ ಕೆಂಪೇಱಿದ
ಕ್ಷಿಸಹಸ್ರಂ [4]ರುಧಿರೋಕ್ಷಿತಾಕ್ಷತ ಸಹಸ್ರಾಕಾರದಿಂ ತನ್ನೊಳು
ರ್ವಿಸೆ ಯುದ್ಧಾಪಜಯಕ್ಕೆ ಪಕ್ಕುಗುಡುವಂತಿರ್ದಂ ಸಹಸ್ರಾಂಬಂಕಂ ೬೨

ವ|| ಆ ಪ್ರಸ್ತಾವದೊಳ್

೬೦. ನಾಥ! ದೇವತರು ಹೋದುದನ್ನು ತಿಳಿದೂ ನೀನು ಇನ್ನೂ ಐರಾವತದ ಹೆಗಲ ಮೇಲೆ ಕಾಲಿಡದೆ ಇನ್ನೂ ಮಹಾಸ್ತ್ರ ವಜ್ರಾಯುಧಕ್ಕೆ ಕೈ ನೀಡದೆ, ಇನ್ನೂ ದಂಡೆತ್ತದೆ, ಕೋಪದಿಂದ ಇನ್ನೂ ಆ ಕೃಷ್ಣನೊಡನೆ ಕಾದದೆ ಏಕಿರುವೆ! ನೀನು ಶಚಿಯಾದ ನನ್ನ ಪತಿಯಾಗಿದ್ದೂ ಅವಮಾನಕ್ಕೆ ಹೆಗಲೊಡ್ಡುವೆಯಾ?" ವ|| ಎನ್ನಲು ವಜ್ರಧರನಾದ ಇಂದ್ರನು ಬೃಹಸ್ಪತಿಯ ಕಡೆ ನೋಡಿ, ೬೧. "ಗುರುವೇ! ದೇವತೆಗಳ ಕಲ್ಪವೃಕ್ಷವನ್ನು ಮನುಷ್ಯನು ತೆಗೆದುಕೊಂಡು ಹೋಗುವುದನ್ನು ಸೈರಿಸಿದರೆ ಅಪಮಾನವು ಉಂಟಾಗುವುದು. ಅದುದರಿಂದ ಈ ನಾರದಮುನಿಯೂ ಈ ದೇವತೆಗಳೂ ಈ ಶಚಿದೇವಿಯೂ ಹೇಳಿದ ಕಾರ್ಯವೇ ಮನಸ್ಸಿಗೆ ಹೊಕ್ಕಿದೆ. ಇನ್ನು ನಮಗೆ ಸಾಮ ಭೇದ ದಾನೋಪಾಯಗಳಿಗೆ ಸಮಯವಿಲ್ಲ. ದಂಡವೇ ನಿಜವಾಗಿ ಉಪಯುಕ್ತವಾಗುವುದು. ನೀವು ಇನ್ನು ಸುಮ್ಮನೆ ಇರಿ." ವ|| ಎಂದು ರಣೋದ್ಯೋಗವನ್ನು ನಡೆಸಿದನು. ೬೨. ಅಸಮಾನವಾದ ಕೋಪಾಗ್ನಿಯು ಮನಸ್ಸಿನಲ್ಲಿ ಹತ್ತಿ ಉರಿಯುತ್ತ ಮನಸ್ಸಿನಿಂದ ಸರ್ವಾಂಗವನ್ನೂ ಭೇದಿಸಿಕೊಂಡು ಆ ಉರಿಯ ಚೂರುಗಳು ಹೊರ ಹೊಮ್ಮಿವೆ ಎಂಬಂತೆ ಕೆಂಪೇರಿದ ಸಾವಿರ ಕಣ್ಣೂ, ರಕ್ತದಿಂದ ಒದ್ದೆಯಾದ ಸಾವಿರ ಅಕ್ಷತೆಗಳಂತೆ ಉಬ್ಬುತ್ತಿರಲು ಇಂದ್ರನು ಅಪಜಯಕ್ಕೆ ಗುರಿಯಾಗುವಂತಿದ್ದನು. ವ|| ಆ ಸಂದರ್ಭದಲ್ಲಿ

೧. ಕಾಲ್ಗಾಯದಿನ್ನುಂ (ಕ) ಕಾಲ್ಗೊಯ್ಯವಿನ್ನುಂ (ಖ) ಕಾಲ್ಗೊಗಯದಿನ್ನುಂ (ಮೊಅ) ೨. ಅಂಗೀರಸನತ್ತಲಾಲೋಚನಂಗೆಯ್ದು (ಕಗ) ೩. ಪೆಱತಿಲ್ಲ ನಿಶ್ಚಯಂ (ಖ) ೪. ರುಧಿರಾಕ್ಷತಕ್ಷಕ (ಕ) ಸಮರಕ್ಷತಾಕ್ಷತ (ಖ) ರುಧಿರಾಚ್ಯುತಕ್ಷಕ (ಗ)

ವಿಲುಠದ್ಘಂಟಾಪಟಿಷ್ಠಧ್ವನಿಬಧಿರಿತದಿಙ್ಮಂಡಲಂ ಕರ್ಣತಾಳಾ
ನಿಲಲೋಲದ್ವೀಚಿಮಾಲಾಂಬರಸರಿದುದಕಂ ಪುಷ್ಕರೋಚ್ಚಾಟನ ವ್ಯಾ
ಕುಲಿತಬ್ರಹ್ಮಾಸನಾಂಭೋರುಹವತಿವಿತತಾಯೋಗರತ್ನಪ್ರಭಾಪಿಂ
ಗಲಿತಸ್ವರ್ಗಾಂತರಾಳಂ ಹಿಮಗಿರಿಧವಳಂ ಬಂದುದಿಂದ್ರದ್ವಿಪೇಂದ್ರಂ ೬೩

ವ॥ ಅನಂತರಂ

ದ್ವಿರದಮನಿಂದ್ರನೇಱೆ ಶಿಖಿ ಮೇಷಮನೇಱಿದನೇಱಿದಂ ಯಮಂ
ಪುರುಷಲುಲಾಯಮಂ ನಿರುತಿ ಮರ್ತ್ಯನನೇಱಿದನೇಱಿದಂ ಜಲಾ
ಕರಪತಿ ನಕ್ರಮಂ ಪವನನೇಣನನೇಱಿದನೇಱಿದಂ ಸುಧಾ
ಕರಧರಬಂಧು ಪುಷ್ಪಕಮನೇಱಿದನಿಂದುಧರಂ ವೃಷೇಂದ್ರನಂ ೬೪

ದೊರೆಯಾದರ್ ಭೋಗದಿಂದಿಂದ್ರನೊಳಿನೆ ಕೃತಕೃತ್ಯರ್ ವಿರಿಂಚಾದಿದೇವರ್
ಚರಿತಾರ್ಥರ್ ಕಾರ್ತವೀರ್ಯಪ್ರಭೃತಿನೃಪರೆನಲ್ ಮೊಗ್ಗೆ ಸಾಕ್ಷಾತ್ಸುರಾಧೀ
ಶ್ವರಭೋಗಂ ನೋಡೆನಲ್ ಘೂರ್ಣಿಸೆ ಬಹುಕಹಳಾಶಂಖಭೇರೀರವಂ ತ
ಳ್ತಿರೆ ನಾನಾಚ್ಛತ್ರಷಂಡಂ ಬಳಸಿಬರೆ ಮರುತ್ಸೇನೆ ಬಂದಂ ಮಹೇಂದ್ರಂ ೬೫

ವ॥ ಅಂತು ಬಂದು ಸಂಗ್ರಾಮರಂಗದೊಳೊಡ್ಡಿದೊಡ್ಡಣದ ಸುರಸೈನ್ಯನಿಕರಮಂ ಬೇಱೆವೇಱೆ ಪೆಸರ್ವೆಸರೊಳ್ ಸತ್ಯಭಾಮೆಗೆ ತೋಱಲೆಂದು ಸರೋಜನಾಭನಿಂತೆಂದಂ

೬೩. ಹಿಮಗಿರಿಯಂತೆ ಬೆಳ್ಳಗಿರುವ ಇಂದ್ರನ ಆನೆ ಐರಾವತವು ಅದರ ಆಭರಣಗಳಲ್ಲಿ ಮೆಟ್ಟಿರುವ ರತ್ನಗಳ ಕಾಂತಿಯಿಂದ ಸ್ವರ್ಗದ ಅಂತರಾಳವನ್ನೆಲ್ಲಾ ವಿವಿಧ ವರ್ಣವುಳ್ಳದನ್ನಾಗಿಸುತ್ತ ಬಂದಿತು. ಬರುವಾಗ ಅಲುಗುವ ಅದರ ಘಂಟೆಗಳ ಗಟ್ಟಿಯಾದ ಶಬ್ದದಿಂದ ದಿಙ್ಮಂಡಲವು ಕಿವುಡಾಯಿತು. ಕಿವಿಯೆಂಬ ಬೀಸಣಿಗೆಯಿಂದ ಬೀಸಿದ ಗಾಳಿಯು, ದೇವಗಂಗಾ ನದಿಯ ನೀರಿನ ಅಲೆಗಳ ಸಾಲನ್ನು ಹೆಚ್ಚಿಸಿತು. ಸೊಂಡಲಿನ ತುದಿಯಿಂದ ಬ್ರಹ್ಮನ ಪೀಠವಾಗಿರುವ ಕಮಲವನ್ನು ಎಲ್ಲಿ ಕೀಳುವುದೋ ಎಂಬ ಚಿಂತೆಯುಂಟಾಯಿತು. ವ॥ ಅನಂತರ ೬೪. ಇಂದ್ರನು ಐರಾವತವನ್ನು ಏರಲು, ಅಗ್ನಿಯು ಟಗರನ್ನೂ, ಯಮನು ಕೋಣನನ್ನೂ, ನಿಋತಿಯು ಮನುಷ್ಯನನ್ನೂ, ವರುಣನು ಮೊಸಳೆಯನ್ನೂ, ವಾಯುವು ಜಿಂಕೆಯನ್ನೂ, ಕುಬೇರನು ಪುಷ್ಪಕವನ್ನೂ, ಈಶ್ವರನು ವೃಷಭೇಂದ್ರನನ್ನೂ ಏರಿದರು. ೬೫. ಸುಕೃತಶಾಲಿಗಳೂ ಇಷ್ಟಾರ್ಥಸಿದ್ಧಿಯನ್ನು ಪಡೆದವರೂ ಆದ ಬ್ರಹ್ಮಾದಿ ದೇವತೆಗಳೂ ಕಾರ್ತವೀರ್ಯನೇ ಮೊದಲಾದ ರಾಜರೂ ಭೋಗ ವಿಚಾರದಲ್ಲಿ ಇಂದ್ರನಿಗೆ ಸಮಾನರಾದರು ಎನ್ನುವಾಗ ಸಾಕ್ಷಾತ್ತಾದ ಸುರ ಚಕ್ರವರ್ತಿಯ ಭೋಗವು ಬೇರೆಯವರಿಗೆ ಸಾಧ್ಯವೇ ನೋಡಿ, ಎನ್ನುವಂತೆ ಹಲವು ಕಹಳೆಗಳ ಮತ್ತು ಶಂಖ ನಗಾರಿಗಳ ಧ್ವನಿಯು ಮೊರೆಯುತ್ತ ಹರಡುತ್ತಿರುವಲ್ಲಿ, ನಾನಾ ಬಗೆಯ ಛತ್ರಿಗಳ ನೆರಳು ಹರಡಿಯೂ, ದೇವಸೇನೆಯು ಬಳಸಿ ಬರುತ್ತಲೂ ಇರಲು ಮಹೇಂದ್ರನು ಬಂದನು. ವ॥ ಹಾಗೆ ಬಂದು ಯುದ್ಧರಂಗದಲ್ಲಿ ಒಡ್ಡಿ ನಿಂತ ಗುಂಪಿನಲ್ಲಿ ದೇವಸೇನೆಯ ಸಮೂಹವನ್ನು ಬೇರೆ ಬೇರೆ ಹೆಸರು ಹಿಡಿದು ಸತ್ಯಭಾಮೆಗೆ ತೋರಿಸಬೇಕೆಂದು, ಸರೋಜನಾಭನು

ವಿಶದಶ್ವೇತಾತಪತ್ರಾವಳಿ ವಿಳಸಿತನಾಗಿರ್ಪ ಕೋಟೀರರತ್ನಾಂ
ಶುಶಿಖಾಕಿರ್ಮ್ಮೀರಿತೋದ್ಯಚ್ಚಮರಜಪವನಾಂದೋಲ[೧]ತಾಟಂಕನಾಗಿ
ರ್ಪ ಶಚೀಸಂಯುಕ್ತನಾಗಿರ್ಪಿಭಮನಣೆದು ಬಿಟ್ಟಿಕ್ಕಲೆಂದಿರ್ಪ ವಜ್ರಾಂ
ಕುಶಮಂ ನಾನಾಪ್ರಕಾರಂ ಪೊಳೆಯೆ ಪೊಳೆಯಿಸುತ್ತಿರ್ಪವಂ ದೇವರಾಜಂ ೬೬

ಜಗಮೀರೇೞುಮದೊಂದು ಪುಲ್ಗುಡಿಸಿಲಂತಳ್ಕಾಡೆ ಕಲ್ಪಾಂತದೊಳ್
ನೆಗೆವೊಂದಗ್ನಿಯೊಳಿಂತಿದೊಂದೆಸಕಮಿಲ್ಲೆಂಬನ್ನೆಗಂ ಹೇಮಮೌ
ಳಿಗಭಸ್ತಿಚ್ಚಲದಿಂ ದೃಢಭ್ರುಕುಟಿರೇಖಾವ್ಯಾಜದಿಂ ಜ್ವಾಲೆಯುಂ
ಪೊಗೆಯುಂ ತಳ್ತೊಗೆವೀ ಶಿಖಾಸ್ತ್ರಕರನೀ ಮೇಷಸ್ಥಿತಂ ಪಾವಕಂ ೬೭

ಭ್ರುಕುಟೀಬದ್ಧಾಂಧಕಾರಂ ನಿಜತನುರುಚಿಯಂ ಗೆಲ್ವ ನೇತ್ರಾರುಣಾಂಶು
ಪ್ರಕರಂ ಮಾಣಿಕ್ಯಮೌಳಿದ್ಯುತಿಗೆ ಮಲೆವ ದಂಷ್ಟ್ರಾಸ್ಫುಲಿಂಗೋತ್ಕರಂ ಕೋ
ಪಕೃಶಾನೂಳ್ಕಾಳಿಯಂ ತೂಳ್ದುವ ಮಹಿಷಮನೇಱಿರ್ಪ ದಂಡಾಯುಧಂಗೊಂ
ಡ ಕರಾಳಸ್ವಾಂತನುಜ್ಜೃಂಭಿತರಣರಭಸಭ್ರಾಂತನೀತಂ ಕೃತಾಂತಂ ೬೮

ಕುಡುಮಿಂಚೆಂಬಂತು ದಂಷ್ಟ್ರಾವಳಿ ಪೊಳೆಯೆ ಸಿಡಿಲ್ಗೆಂಡವೆಂಬಂತು ಕಣ್ಗಳ್
ಕಡುಗೆಂಪಂ ತಾಳ್ದೆ ಸಂವರ್ತನಜಲಧರವೆಂಬಂತು ರೂಪೊಂದಗುರ್ವಂ
ಕುಡೆ ರೌದ್ರಂಬೆತ್ತು ಕಾಯ್ವೇಱುವ ಸಮರರಸೋದ್ರೇಕದಿಂ ಮುದ್ಗರಾಸ್ತ್ರಂ
ಬಿಡಿದುಗ್ರಾಟೋಪಮಂ ಬೀಱುವ ನರರಥದೊಳ್ ತೋಱುವೀತಂ ನಿಶಾಟಂ ೬೯

ಹೀಗೆಂದನು. ೬೬. ತೆರೆದ ಅತಿ ಶುಭ್ರವಾದ ಬಿಳಿಯ ಕೊಡೆಗಳ ಸಾಲಿನಿಂದ ಹೊಳೆಯುತ್ತಿರುವವನೂ, ಕಿರೀಟದ ರತ್ನಗಳ ಕಾಂತಿಯಿಂದ ವಿಧವಿಧವಾದ ಚಿತ್ರವರ್ಣವುಳ್ಳುದಾದ ಚಾಮರಗಳ ಗಾಳಿಯಿಂದ ತೂಗಾಡುತ್ತಿರುವ ಕಡುಕುಳ್ಳವನೂ ಶಚಿಯೊಡಗೂಡಿದವನೂ, ಐರಾವತವನ್ನು ಪೀಡಿಸಿ ಮುನ್ನುಗ್ಗಿಸಬೇಕೆಂದಿರುವವನೂ ಆಗಿ ವಜ್ರಾಯುಧವನ್ನು ನಾನಾವಿಧವಾಗಿ ಹೊಳೆಯಿಸಬೇಕೆಂದು ತಿರುಗಿಸುತ್ತಿರುವವನು, ದೇವರಾಜನು. ೬೭. ಪ್ರಳಯಕಾಲದಲ್ಲಿ ಹದಿನಾಲ್ಕು ಲೋಕಗಳನ್ನೂ ಒಂದು ಹುಲ್ಲಿನ ಗುಡಿಸಲಿನಂತೆ ನಿಶ್ಶೇಷವಾಗಿ ಉರಿಸುವ ತೀವ್ರಾಗ್ನಿಯಲ್ಲೂ ಈ ಬಗೆಯ ಕಾರ್ಯಾಸಕ್ತಿಯಿಲ್ಲವೆಂಬಂತೆ ಸುವರ್ಣಕಿರೀಟದ ಕಾಂತಿಯೆಂಬ ನೆವದಿಂದ ಉರಿಯನ್ನೂ, ದೃಢವಾದ ಹುಬ್ಬುಗಂಟಿನ ಸಾಲೆಂಬ ನೆವದಿಂದ ಹೊಗೆಯನ್ನೂ ಬೀರುತ್ತ ಆಗ್ನೇಯಾಸ್ತ್ರವನ್ನು ಹಿಡಿದು ಟಗರಿನ ಮೇಲೆ ಕುಳಿತಿರುವವನು ಅಗ್ನಿ. ೬೮. ಹುಬ್ಬುಗಂಟಿನಿಂದಾದ ಕತ್ತಲೆಯು ಅವನ ದೇಹಕಾಂತಿಯನ್ನು ಜಯಿಸುತ್ತ ಕಣ್ಣಿನ ರಕ್ತವರ್ಣಕಾಂತಿಯು ಮಾಣಿಕ್ಯಕಿರೀಟದ ಕಾಂತಿಯನ್ನು ಪ್ರತಿಭಟಿಸುತ್ತ ಕೋರೆಹಲ್ಲುಗಳ ಕಿಡಿಗಳ ಗುಂಪು ಕೋಪಾಗ್ನಿಯ ಕಿಡಿಗಳ ಗುಂಪನ್ನು ದೂರಕ್ಕಟ್ಟುತ್ತ ಇರಲು, ಕೋಣನನ್ನೇರಿಕೊಂಡು, ದಂಡಾಯುಧವನ್ನು ಹಿಡಿದು ಕಠಿನಹೃದಯನಾಗಿ ಉಕ್ಕೇರಿದ ರಣರಸ ರಭಸದಿಂದ ಭ್ರಾಂತನಾಗಿರುವ ಈತನೇ ಯಮ. ೬೯. ಡೊಂಕಾದ ಮಿಂಚೆನ್ನುವಂತೆ ಕೋರೆ ಹಲ್ಲುಗಳು ಹೊಳೆಯುತ್ತ, ಸಿಡಿಲಿನ ಕೆಂಡದಂತೆ

೧. ಮಾಲಾಂಕ (ಖ)

ವಿಪುಳಕ್ರೋಧಾನಳೌರ್ವಂ ಭ್ರುಕುಟಿತಿಮಿರವೇಳಾತಮಾಲಂ ಲಲಾಟ
ತ್ರಿಪತಾಕಾವೀಚಿ ರಕ್ತೇಕ್ಷಣರುಚಿಪಟಲೀವಿದ್ರುಮಂ ನಿರ್ಗಳತ್ಸ್ವೇ
ದಪಯಃಪೂರಂ ವಿಭೂಷಾಮಲಮಣಿಗಣನಾಗಿರ್ದ ತನ್ನೊಳ್ ಸಮುದ್ರಾ
ಧಿಪತಿತ್ವಂ ಸಂದ ಪಾಶಾನ್ವಿತನುರುಮಕರಾರೂಢನೀತಂ ಪ್ರಚೇತಂ ೨೦

ಗಿರಿಕುಲಮಂ ತೆರಳ್ದುಬರೆ ಪಾರಿಸುವಬ್ಧಿಯನೊಂದನೊಂದಱೊಳ್
ಬೆರೆಸುವ ಧಾರಿಣೀವಲಯಮಂ ಕವಿದಿಕ್ಕುವ ತನ್ನ ಲೋಕಸಂ
ಹರಣದ ವೇಗದಿಂದೆಸೆಯೆ [1]ಚಿತ್ರವಿಭೂಷಣನೇತ್ರರಾಗದಿಂ
[2]ಕರತರುವೆತ್ತಿ ಪಲ್ಲವಿಸುವೀ ಮೃಗವಾಹನಿವಂ ಪ್ರಭಂಜನಂ ೨೧

ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀ
ಕ್ಷಣದಿನೆನಲ್ ರಣಪ್ರತಿಘದಿಂ ಕದಪಿಂದೊಗೆತರ್ಪ ಘರ್ಮವಾಃ
ಕಣತತಿ ನೇತ್ರದಿಂ ನೆಗೆವ ರಾಗಮಗುರ್ವಿಸುವೀ ವಿಳಾಸ [3]ಭೂ
ಷಣಮೆನಿಸಿರ್ದ ಪುಷ್ಪಕವಿಮಾನಮನೇಱಿದವಂ ಧನೇಶ್ವರಂ ೨೨

ಕಣ್ಣು ಬಹಳ ಕೆಂಪಾಗಿ ಪ್ರಳಯಕಾಲದ ಮೋಡವೆಂಬಂತೆ ರೂಪವು ಭಯಂಕರವಾಗಿ ರೌದ್ರತೆಯನ್ನು ತಾಳಿ ಕಾಯ್ದುಕ್ಕುವ ಯುದ್ಧ ರಸೋದ್ರೇಕದಿಂದ ಮುದ್ಗರಾಸ್ತ್ರವನ್ನು ಧರಿಸಿ, ಉಗ್ರಾಟೋಪವನ್ನು ಬೀರುತ್ತ ನರವಾಹನನಾಗಿರುವ ಈತ ನಿಋತಿ ರಾಕ್ಷಸ. ೨೦. ಅಧಿಕವಾದ ಕೋಪವೆಂಬ ಔರ್ವಾಗ್ನಿಯುಳ್ಳವನೂ, ಗಂಟುಹುಬ್ಬಿನ ಕತ್ತಲೆಯೆಂಬ ತೀರದ ಹೊಂಗೆಯ ಮರಗಳುಳ್ಳವನೂ, ಹಣೆಯ ಮೂರು ಸುಕ್ಕುಗಳೆಂಬ ಅಲೆಗಳುಳ್ಳವನೂ, ಕೆಂಗಣ್ಣಿನ ಕಾಂತಿಸಮೂಹವೆಂಬ ಹವಳವುಳ್ಳವನೂ, ಹೆಚ್ಚಾಗಿ ಸುರಿಯುವ ಬೆವರು ನೀರಿನ ಪ್ರವಾಹಯುತನೂ ಆಭರಣಗಳ ನಿರ್ಮಲ ಮಣಿಗಣವುಳ್ಳವನೂ ಆಗಿ, ತನಗೆ ಸಮುದ್ರಾಧಿಪತಿತ್ವವು ಸಾರ್ಥಕವಾಗಿ ಒಪ್ಪುತ್ತಿರಲು ಪಾಶಹಸ್ತನಾಗಿ ಮೊಸಳೆಯನ್ನೇರಿರುವ ಈತನು ವರುಣನು. ೨೧. ಗಿರಿಗಳ ಸಮೂಹವನ್ನು ತೆರಳಿ, ಆವರಿಸುವಂತೆ ಹಾರಿಸುವ, ಸಮುದ್ರವನ್ನು ಒಂದರೊಡನೊಂದನ್ನು ಸೇರಿಸುವ, ಭೂಮಂಡಲವನ್ನೇ ಕವಿದಿಕ್ಕುವ, ತನ್ನ ಲೋಕಸಂಹಾರ ವೇಗದಿಂದ ಕೂಡಿದ, ವಿಚಿತ್ರಭೂಷಣಗಳ ಮತ್ತು ಕಣ್ಣಿನ ಕೆಂಪಿನಿಂದ ಕೈಯಲ್ಲಿರುವ ಮರವನ್ನು ಪಲ್ಲವಯುಕ್ತವೋ ಎಂಬಂತೆ ಮಾಡುತ್ತಿರುವ ಈ ಮೃಗವಾಹನನು ವಾಯು. ೨೨. ಯುದ್ಧದ ಕೋಪದಿಂದ ಕೆನ್ನೆಯಿಂದ ಹೊರಡುವ ಬೆವರು ನೀರೂ, ಕಣ್ಣಿನಿಂದ ಹಾರುವ ಕೆಂಪೂ, ಕೆನ್ನೆಯಿಂದ ರಣರಸವೇ ಹೊರಡುತ್ತಿದೆ, ಕಣ್ಣಿನಿಂದ ಯುದ್ಧರಾಗವೇ (೧ ಆಸಕ್ತಿ, ಕೆಂಪು) ಚೆಲ್ಲುತ್ತಿದೆಯೆನ್ನುವಂತೆ ಇದ್ದು, ವಿಲಾಸ ಭೂಷಣವೆನಿಸಿದ ಪುಷ್ಪಕವಿಮಾನವನ್ನು ಏರಿರುವವನು ಕುಬೇರ.

೧. ರತ್ನ (ಕಗ) ೨. ಕರತಲಹೇತಿಪಲ್ಲವ ಕುಜಂ (ಕಗ) ೩. ಗಳಾ ವಿಭೂಷಣ (ಕ) ಗಳಾ ವಿಭೀಷಣಂ (ಗ)

ದೀಪ್ತತರಂ ತೃತೀಯನಯನಾರ್ಚಿ ಕಿರೀಟಭುಜಂಗಭೋಗರ
ತ್ನಪ್ರಕರಾರ್ಚಿಯಂತೆ ನಿಟಲತ್ರಿಪತಾಕೆ ಕರತ್ರಿಶೂಲಹೇ
ತಿಪ್ರತಿಬಿಂಬದಂತೆ ತನುದೀಧಿತಿ ರೌದ್ರರಸಾಂಬುರಾಶಿಫೇ
ನಪ್ರಭೆಯಂತಗುರ್ವಿಸುವ ಶಾಕ್ವರವಾಹನನೀತನೀಶ್ವರಂ ೭೩

ಇವರಾಶಾಧಿಪರೀ ದಿಶಾಧಿಪರೆ ಸೇನಾನಾಯಕರ್ ದೇವದಾ
ನವವಿದ್ಯಾಧರಸಿದ್ಧ ಸಾಧ್ಯಫಣಭೃದ್ಗಂಧರ್ವಯಕ್ಷಾದಿ ವೀ
ರವರರ್ ನೋಡಿವರಿತ್ತಲೀನೆರೆದು ನಿಂದರ್ ದ್ವಾದಶಾದಿತ್ಯರಿಂ
ತಿವರೇಕಾದಶರುದ್ರರಷ್ಟವಸುಗಳ್ ಮತ್ತಿತ್ತಲೀತೋರ್ಪವರ್ ೭೪

ವII ಎಂದು ತೋಱಿ ನಿಜಭುಜಾವಷ್ಟಂಭಮಂ ತೋಱಲೆಂದು ಶಾರ್ಙ್ಗ ಶರಾಸನಮನೇಱಿಸಿ ನೀವಿ ಜೇವೊಡೆಯೆ

ಪವಿನಿ[೧]ರ್ಘೋಷೋಪಮಾನಂ ಪ್ರಳಯಘನಘಟಾಗರ್ಜನಾಭಂ ಮಹಾಭೈ
ರವದುರ್ವಾರಾಟ್ಟಹಾಸಪ್ರತಿನಿಧಿ ಯಮಬಾಹಾಪರಿಸ್ಫಾಲನಪ್ರ
ಖ್ಯಮೆನಲ್ ಧೂತಾಖಿಲೋಕಂ ಭ್ರಮದವನಿತಲಂ ಪ್ರೋಚ್ಚಲದ್ವಾರ್ಧಿನಿರ್ಭಿ
ನ್ನವಿರಿಂಚಾಂಡಂ ಪೊದಟ್ಟಿತ್ತಸುರರಿಪುಧನುರ್ದಂಡ ಚಂಡಪ್ರಣಾದಂ ೭೫

ವII ತದನಂತರಂ

೭೩. ಹೊಳೆಯುವ ಮೂರನೆಯ ಕಣ್ಣಿನ ಜ್ವಾಲೆಯು ಕಿರೀಟದಲ್ಲಿರುವ ಸರ್ಪಫಣಾ ಮಣಿಗಳ ಕಾಂತಿಯಂತೆಯೂ, ಹಣೆಯ ಮೂರು ಮಡಿಪುಗಳು ಕೈಯ್ಯ ತ್ರಿಶೂಲದ ಪ್ರತಿ ಬಿಂಬದಂತೆಯೂ ದೇಹಕಾಂತಿಯು ರೌದ್ರರಸಸಾಗರದ ನೊರೆಯು ಹೊಳಪಿನಂತೆಯೂ ಅತಿಶಯ ಭಯಂಕರವಾಗಿರುವ ವೃಷಭವಾಹನನಾದ ಈತನು ಈಶ್ವರ. ೭೪. ಇವರು ದಿಗಧೀಶರು ಇವರೇ ಸೇನಾನಾಯಕರು. ಇವರು ದೇವದಾನವ ವಿದ್ಯಾಧರ ಸಿದ್ಧ ಸಾಧ್ಯೋರಗ ಗಂಧರ್ವಯಕ್ಷಾದಿ ವೀರರು. ನೋಡು, ಇತ್ತ ನೆರೆದಿರುವವರು ದ್ವಾದಶಾದಿತ್ಯರು, ಇವರು ಏಕಾದಶರುದ್ರರು, ಮತ್ತೆ ಇತ್ತಕಡೆ ಕಾಣಿಸುವವರು ಅಷ್ಟವಸುಗಳು". ವII ಎಂದು ತೋರಿಸಿ, ತನ್ನ ಭುಜದರ್ಪ (ಗರ್ವ)ವನ್ನು ತೋರಿಸ ಬೇಕೆಂದು ಆ ಶಾರ್ಙ್ಗಧರ (ಕೃಷ್ಣ)ನು ಬಿಲ್ಲಿಗೆ ಹೆದೆಯನ್ನೇರಿಸಿ ನೀವಿ ಟಂಕಾರ ಮಾಡಿದನು. ೭೫. (ಸಿಡಿಲಿನ ಧ್ವನಿಗೆ ಸಮಾನವೂ ಪ್ರಳಯಕಾಲದ ಮೇಘಗರ್ಜನೆಗೆ ಸದೃಶವೂ ಮಹಾಭೈರವನ ಅಟ್ಟಹಾಸಕ್ಕೆ ಪ್ರತಿನಿಧಿಯೂ ಯಮನ ತೋಳು ತಟ್ಟಿದ ಶಬ್ದದಂತಿರುವುದೂ ಆದ ಅಸುರಾರಿಯ ಧನುರ್ದಂಡದ ಚಂಡಪ್ರಣಾದವು ಲೋಕವನ್ನು ನಡುಗಿಸಿ ಭೂಮಿಯನ್ನು ತಿರುಗಿಸಿ ಸಮುದ್ರವನ್ನುಕ್ಕಿಸಿತು, ಬ್ರಹ್ಮಾಂಡವನ್ನು ಭೇದಿಸಿತು. ವII ಆಮೇಲೆ

೧. ನಿಶ್ಶೇಷೋಪಮಾನಂ (ಖ)

ಬಲಿರಿಪು ಬಾಣಾವಳಿಯಂ
ಬಲವೈರಿಯ ಬಲದ ಮೇಲೆ ಕಱಿದಂ ಗಗನ
ಸ್ಥಲಿ ಮಸೆವಿಸಿಲಿಂ ಕಣೆಗ
ಱ್ತಲೆಯಿಂ ಕೆಂಗರಿಯ ಸಂಜೆಯಿಂ ತೀವುವಿನಂ ೭೬

ಮಾಲೆಗೊಳುತ್ತುಮೊತ್ತರಿಸಿ ಪಾಯ್ವ ಸರಲ್ಗಳಿನುಣ್ಮೆ [೧]ವಿಸ್ಫುಲಿಂ
ಗಾಲಿ ಬರಲ್ ಸರಲ್ಮೞೆ ಸಿಡಿಲ್ಮೞೆಯಂ ಗೆಲೆವಂದುದೆಂಬಿನಂ
ಶೈಲಧರಂ ಕಱುತ್ತು ಕಱೆಯುತ್ತಿರೆ ಮಾರ್ಗಣವೃಷ್ಟಿಯಂ ಲಯ
ಜ್ವಾಲಶಿಖಾಳಿಯಂತೆ ವಿಶಿಖಾಳಿಗಳುರ್ಚಿದುವಿಂದ್ರಸೇನೆಯಂ ೭೭

ವ॥ ಅಂತು ದಾನವಾಂತಕನಿಸುವಮೋಘನಿಶಿತಸಾಯಕಸಂಹತಿಯ ಸಂಹೃತಿತ್ರಾಸದಿಂ ವಾಸವಂ ನಿಜಜನನೀಗರ್ಭಾವಾಸವಂ ಪುಗುವನೆಂಬಂತೆ ಸುಗಿಯೆಯುಂ, ಜಾತವೇದನಪಜಯ ಜಾತವೇದನನಾಗಿ ಮಯ್ದೆಗೆಯೆಯುಂ, ಕೀನಾಶಂ ತ್ರಿಲೋಕೀನಾಶ[೨]ಮಿಂದಕ್ಕುಮೆಂದು ಶಂಕಿಸೆಯುಂ, ದಾನವನದಟನುೞಿದಾನವನತನಾಗಿ ಬರ್ದುಂಕುವೆನೆಂದು ಚಿಂತಿಸೆಯುಂ, [೩]ಪ್ರಚೇತಂ ನಿರತಿಶಯಾಕಂ ಪ್ರಚೇತನಾಗಿ ಸರಿಯೆಯುಂ, ಪವಮಾನನಿಂತಪ್ಪವಮಾನಮಾದುದೆಂದು ಮೊಗಂಮುಚ್ಚಿಯೆಯುಂ, ಧನದನೀ ಮಹಾಯೋಧನದ ಬಾಧೆಗೊಳಗಾದೆನೆಂದೋಡಿಪೋಗೆಯುಂ, [೪]ಭವನಿಂತಪ್ಪ ಪರಿಭವಂ ದೊರೆಕೊಂಡುದೆಂದು ಬೆಱಗಾಗೆಯುಂ, ಅಷ್ಟವಸುಗಳೀ ಸೋಲವತಿಕಷ್ಟವಸುಗಳಂ ಬಿಡುವೆವೆಂದೊಳಸಾರೆಯುಂ, ದ್ವಾದಶಭಾನುಗಳ್ ವಿಗತಭಾನುಗಳಾಗಿ ಪೆಱ ಸಾರೆಯುಂ, ಏಕಾದಶಸ್ಥಾಣುಗಳ್ ನಿಂದ ನೆಲೆಯಿಂ ಸ್ಥಾಣುಗಳಂತೆ ಮಿಡುಕದಿರೆಯುಂ,

೭೬. ಮಸೆದಲಗಿನ ಬಿಸಿಲಿನಿಂದಲೂ ಬಾಣಗಳ ಕತ್ತಲೆಯಿಂದಲೂ ಕೆಂಪಾದ ಗರಿಯ ಸಂಜೆಯಿಂದಲೂ ಆಕಾಶ ಪ್ರದೇಶವು ತುಂಬುವಂತೆ ಕೃಷ್ಣನು, ಬಲವೈರಿಯಾದ ಇಂದ್ರನ ಬಲದ ಮೇಲೆ ಬಾಣಸಮೂಹವನ್ನು ಸುರಿಸಿದನು ೭೭. ಬಾಣದ ಮಳೆಯು ಸಿಡಿಲಿನ ಮಳೆಯನ್ನು ಗೆದ್ದಿತೆನ್ನುವಂತೆ ಸಾಲಾಗಿ ಮುಂದೆ ತಳ್ಳುತ್ತ ಹಾರುವ ಬಾಣಗಳಿಂದ ಕಿಡಿಗಳು ಹುಟ್ಟಿ ಬರುತ್ತಿರುವಂತೆ ಕೃಷ್ಣನು ಉತ್ಸಾಹಗೊಂಡು ಗುರಿಯಿಟ್ಟು, ಬಾಣದ ಮಳೆಯನ್ನು ಸುರಿಸುತ್ತಿದ್ದನು. ಆ ಬಾಣಗಳು ಪ್ರಳಯಾಗ್ನಿಜ್ವಾಲೆಯ ನಾಲಗೆಯಂತೆ ಇಂದ್ರನ ಸೇನೆಯನ್ನು ತಗುಲಿದವು. ವ॥ ಹಾಗೆ ರಾಕ್ಷಸಾಂತಕನು ಪ್ರಯೋಗಿಸುವ ವ್ಯರ್ಥವಾಗದ ಹರಿತವಾದ ಬಾಣಸಮೂಹವು ಸಂಹಾರಮಾಡುವುದೆಂಬ ಭಯದಿಂದ ಇಂದ್ರನು ತನ್ನ ತಾಯಿಯ ಗರ್ಭಗೃಹವನ್ನು ಹೊಗುವನೋ ಎಂಬಂತೆ ಹಿಂಜರಿದನು. ಅಗ್ನಿಯು ಅಪಜಯ ವೇದನೆಯಿಂದ ಕದನದಿಂದ ಮೈದೆಗೆದನು. ಯಮನು ಇಂದು ತ್ರಿಲೋಕವು ನಾಶವಾಗುವುದೆಂದು ಶಂಕಿಸಿದನು. ನಿಋತಿಯು ಪರಾಕ್ರಮವನ್ನು ಬಿಟ್ಟು, ತಾನು ತಲೆಬಾಗಿಸಿ ವಂದಿಸಿ ಬದುಕುವೆನೆಂದು ಆಲೋಚಿಸಿದನು. ವರುಣನು ಅಧಿಕವಾಗಿ

---

೧. ವಿಸ್ಫುಲಿಂಗಾಳಿಸರಲ್ (ಕಗ) ವಿಸ್ಫುಲಿಂಗಾವಳಿಯಿಂ (ಖ).೨. ಮಿದಕ್ಕುಮೆಂದು (ಕಗ) ೩. ಪ್ರಚೇತನಂ ನಿರತಿಶಯಾಕಂ ಪಪ್ರಚೇತನನಾಗಿ (ಕಗ) ೪. ಶೂಲಧರನೀ ಕಾಳಗದ ಲೀಲೆಯೆಂದು ಬೆಱಗುವಡೆಯೆಯುಂ (ಖ)

**ವಿದ್ಯಾಧರರ[1]ಶಸ್ತ್ರವಿದ್ಯಾಧರರಾಗಿ ಶರಣುಗಲ್ ಬಗೆದಿರೆಯುಂ, ಸಿದ್ಧರ್ ಸಮರಕೇಳಿಗಪ್ರಸಿದ್ಧರೆನಿಸಿ ಮನಂದೆಗೆಯೆಯುಂ, ಸಾಧ್ಯರ್ ಹೇಲಾಸಾಧ್ಯರೆನಿಸಿ ಬೆಂಗೊಟ್ಟೋಡೆಯುಂ, ಯಕ್ಷರ್ ಭಗ್ನದಂಷ್ಟ್ರಹರ್ಯಕ್ಷರೆನಿಸಿ ಪೊಡರ್ಪುಡುಗೆಯುಂ, ಪನ್ನಗರ್ ವಿಧೃತವಿಪನ್ನಗರೆನಿಸಿ ನಡುಗೆಯುಂ, ಗಂಧರ್ವರಸಮರಕೇಳಿಗಂಧರ್ ಗೆಗಿಡುವವ ತೆಱದಿನುಮ್ಮಳಿಸೆಯುಂ, ವಿಯಚ್ಚರರ್ ನೋಟ್ಟ ನೆರವಿಯಚ್ಚರಿಯಿಂ ಮಿಗೆ ನಗುವಂತು ತಲ್ಲಣಿಸೆಯುಂ, ಕಿಂಪುರುಷರಾವ ಭುಜಬಲದ [2]ಸೊರ್ಕಿಂ ಪುರುಷಸಿಂಹನೊಳ್ ಪೊಣರ್ವಮೆಂದು ಬಟ್ಟುಱಿಯುಂ, ಕಿನ್ನರರೇ ಕಿನ್ನರಕಾಂತಕನೊಳ್ ಸೆಣಸಲೆಂದಟ್ಟುಱಿಯುಂ, ಅನೇಕಪರಾಜಿಗಳನೇಕ ಪರಾಜಯಮನೊಳಕೊಂಡು ಸುರುಳೆಯುಂ, ವಾಹಸಮಿತಿ ಸಂಸಕ್ತರಕ್ತಪ್ರವಾಹಸಮಿತಿಯಾಗಿ ಪೊರಳೆಯುಂ, ಸ್ಯಂದನಂಗಳ್ ಭಯರಸಪ್ರಸ್ಯಂದನಂಗಳಾಗಿ ಸಾಲಿಡೆಯುಂ, ಪದಾತಂ ಮಹಾಪದಾತಂಕಮನಾಂತು ಪಡಲಿಡೆಯುಂ, ಅದಂ ನಾರದಂ ಕಂಡು ನೀರದಮಾರ್ಗಮಂಡಲದಿನಾಖಂಡಲನಭಿಮುಖಕ್ಕೆ ಬಂದು**

ಕಂಪನಗೊಂಡ ಚಿತ್ತವುಳ್ಳವನಾಗಿ ಯುದ್ಧರಂಗದಿಂದ ಸರಿದನು. ವಾಯುವು ಇಂತಹ ಅವಮಾನವಾಯಿತೆಂದು ಮುಖಮುರಿದನು. ಧನದನು ಈ ಮಹಾಯುದ್ಧದ ಬಾಧೆಗೊಳಗಾದೆನೆಂದು ಓಡಿಹೋದನು. ಈಶ್ವರನು ಇಂತಹ ಪರಿಭವವುಉಂಟಾಯಿತು ಎಂದು ಬೆರಗಾದನು. ಅಷ್ಟವಸುಗಳು ಈ ಸೋಲು ಅತಿಕಷ್ಟ, ಪ್ರಾಣವನ್ನು ಬಿಡೋಣ ಎಂದು ಒಳಸರಿದರು. ದ್ವಾದಶಸೂರ್ಯರು ಕಾಂತಿಹೀನರಾಗಿ ಹಿಂದೆ ಹೋದರು ಏಕಾದಶ ರುದ್ರರು ನಿಂತೆಡೆಯಲ್ಲೇ ಮೋಟುಮರಗಳಂತೆ ಚಲಿಸದೆ ನಿಂತರು. ವಿದ್ಯಾಧರರು ಅಶಸ್ತ್ರವಿದ್ಯಾಧರರಾಗಿ ಕೃಷ್ಣನನ್ನು ಮರೆಹೋಗಲು ಯೋಚಿಸಿದರು. ಸಿದ್ಧರು, ಯುದ್ಧ ಕೇಳಿಗೆ ಅಪ್ರಸಿದ್ಧರೆನಿಸಿ ಮನದೆಗೆದರು. ಸಾಧ್ಯರು ಲೀಲಾಜಾಲವಾಗಿ ನಮ್ಮನ್ನು ಜಯಿಸುವನೆಂದು ಬೆಂಗೊಟ್ಟೋಡಿದರು. ಯಕ್ಷರು ಕೋರೆಹಲ್ಲನ್ನು ಕಳೆದುಕೊಂಡ ಸಿಂಹದಂತೆ ಪರಾಕ್ರಮಹೀನರಾದರು. ಪನ್ನಗರು ವಿಪತ್ತೆಂಬ ಪರ್ವತವು ಮೇಲೆ ಕವಿದಂತೆ ನಡುಗಿದರು. ಗಂಧರ್ವರು ಯುದ್ಧಕ್ರೀಡಾಗಂಧವೇ ಇಲ್ಲದವರಂತೆ ದ್ವೇಷವನ್ನು ಕಳೆದುಕೊಳ್ಳುವವರಾದರು. ನೋಡುವವರು ಆಶ್ಚರ್ಯದಿಂದ ಹೆಚ್ಚಾಗಿ ನಗುವಂತೆ ಖೇಚರರು ಭೀತಿಗೊಂಡರು. ಕಿಂಪುರುಷರು "ಯಾವ ಭುಜಬಲದ ಸೊಕ್ಕಿನಿಂದ ಪುರುಷ ಸಿಂಹನೊಡನೆ ಯುದ್ಧಮಾಡಿದೆವೋ" ಎಂದು ಬಾಗಿದರು. ಕಿನ್ನರರು ಏಕೆ ಇನ್ನು ಈ ನರಕಾಂತಕನೊಡನೆ ಹೋರಾಟವೆಂದು ಹೆದರಿ ಅಶಕ್ತರಾದರು. ಆನೆಗಳ ಸಾಲು ಅಪಜಯವನ್ನು ಪಡೆದು ಕುಗ್ಗಿ ಹೋದವು. ಕುದುರೆಗಳ ಸಮೂಹವು ಗಾಯಗೊಂಡು ರಕ್ತಪ್ರವಾಹವನ್ನು ಪಡೆದು ಹೊರಳಾಡಿದವು. ರಥಗಳು ಭಯರಸದ ನದಿಗಳಾಗಿ ಹರಿದೋಡಿದವು. ಕಾಲಾಳುಗಳ ದಂಡು, ಮಹಾ ಆಪತ್ತಿನ ಭಯದಿಂದ ದಿಕ್ಕು ದಿಕ್ಕಿಗೆ ಚದುರಿ ಹೋಯಿತು. ಅದನ್ನು ಕಂಡು ನಾರದನು ಮೇಘಮಾರ್ಗದಿಂದ ಇಳಿದು ಇಂದ್ರನ

೧. ಅಸ್ತ್ರ ವಿದ್ಯಾಧರರಾಗಿ (ಗ) ೨. ಸೋಕಿಂ (ಕಖ)

ವಿಭವಾರ್ಥಂ ಸೈನ್ಯಮಂ ಪಾಲಿಸುವುದು ಸಮರಕ್ಕೇ ನೆರಂಬಾರ್ವುದೇ ವೀ
ರಭಟಂ ನೀಂ ಸೇನೆ ಬೆಂಗೊಟ್ಟೊಡೆ ಪೆಱದಗೆಯಲ್ ನಿನ್ನ ಶೌರ್ಯಪ್ರಭಾವ
ಕ್ಕಭಿಭಾವಂ ಪೊರ್ದುಗುಂ ನಿಶ್ಚಯಮದನಱಿದೀ ನಿನ್ನ ವೇದಂಡಕೋದಂ
ಡಭುಜಾದಂಡಂಗಳಿಂದೊರ್ವನೆ ಗಿರಿಧರನೊಳ್ ಕಾದು ನೀಂ ವಜ್ರಪಾಣೀ ೭೮

ವ|| ಎಂಬುದುಂ ದ್ವಂದ್ವಯುದ್ಧಕ್ಕೆ ಬಗೆದಂದು ನಮುಚಿ ವಿದ್ರಾವಣಂ ರಾವಣಾಂತಕನ ಮೇಲ್ಐರಾವಣಮಂ ಸಾರ್ಚಿ ನಿಂದ ಪದದೊಳ್ ಸತ್ಯಭಾಮೆ ಸೋಪಹಾಸವಚನದಿಂ ಶಚಿಗಿಂತೆಂದಳ್

ಕುಲಗೋತ್ರವೈರಿಯುಂ ಬಲ
ದಲನನುಮೆಂದಮರಪತಿಯನೊಲ್ಲದೆ ಪೋದರ್
ಕುಲಗೋತ್ರವೀರಭಟರುಂ
ಬಲನಾಥರುಮುಂತುಮಮರರೇನೋಡುವರೇ ೭೯

ನಿನಗುಳ್ಳುದಂ ನಿಳಿಂಪಾ
ವನಿಜಮನೆನಗಿತ್ತೆ ನೀನಿದಲ್ತು ವಿಚಿತ್ರಂ
ತನಗಿಲ್ಲದ ಪರಿಭವಮಂ
ದನುಜಾರಿ ಬಲಾರಿಗಿತ್ತನೆನಗಿದು ಚಿತ್ರಂ ೮೦

ವ|| ಎನೆ ಕೇಳ್ದು ಕಟ್ಬೇವಮುಂ ನೋವುಮಳವಿಗಟೆಯೆ ಶಚಿಯಿಂತೆಂದಳ್

ಎದುರಿಗೆ ಬಂದನು ೭೮. "ಪ್ರಭುಗಳು ಸೇನೆಯನ್ನು ರಕ್ಷಿಸುವುದು ವಿಭವಾರ್ಥವಾಗಿಯೇ ಹೊರತು ಯುದ್ಧಕ್ಕೆ ಅದರ ನೆರವನ್ನು ಅಪೇಕ್ಷಿಸುವರೆ? ವೀರಭಟನಾದ ನೀನೂ, ನಿನ್ನ ಸೇನೆಯು ಹಿಮ್ಮೆಟ್ಟಿ ಓಡಿತೆಂದು, ಹಿಂದೆಗೆದರೆ ನಿನ್ನ ಶೌರ್ಯಪ್ರಭಾವಕ್ಕೆ ಕುಂದುಂಟಾಗುವುದು, ನಿಶ್ಚಯ, ಇದನ್ನರಿತು ನೀನು ನಿನ್ನ ಆನೆ, ವಜ್ರಾಯುಧ, ಬಿಲ್ಲು ಭುಜದಂಡಗಳಿಂದ ಏಕಾಂಗದಿಂದ ಕೃಷ್ಣನಲ್ಲಿ ಕಾದು ವಜ್ರಪಾಣಿ!" ವ|| ಎಂದು ಹೇಳಿದನು. ಇಂದ್ರನು ಆಗ ದ್ವಂದ್ವಯುದ್ಧಕ್ಕೆ ಮನಸ್ಸು ಮಾಡಿ, ರಾವಣಾಂತಕ (ಕೃಷ್ಣ)ನ ಮೇಲೆ ಐರಾವತವನ್ನು ಬಿಟ್ಟನು. ಆ ಸಂದರ್ಭದಲ್ಲಿ ಸತ್ಯಭಾಮೆ, ಕುಚೋದ್ಯದ ನಗು ಮಾತಿನಿಂದ ಶಚಿಗೆ ಹೀಗೆಂದಳು. ೭೯. "ಇಂದ್ರನು ಕುಲಗೋತ್ರಗಳಿಗೆ ವೈರಿ (ಕುಲಪರ್ವತಗಳಿಗೆ ದ್ವೇಷಿ) ಬಲ (ಶಕ್ತಿ)ನಾಶಕ, (ಬಲಾಸುರನನ್ನು ಸೀಳಿದವನು) ಎಂದು ತಿಳಿದು ದೇವ ಪತಿಯನ್ನು ಒಲ್ಲದೆ ಬಿಟ್ಟು ಹೋದರು. ಕುಲಗೋತ್ರಗಳ ವೀರಭಟರೂ ಬಲ (ಸೇನಾ) ನಾಥರೂ ಆದ ಅಮರರು, ಸುಮ್ಮನೆ ಓಡುವರೇನು?! ೮೦. ನಿನಗೆ ಇದ್ದ ಕಲ್ಪವೃಕ್ಷವನ್ನು ನೀನು ನನಗೆ ಕೊಟ್ಟೆ. ಇದೇನೂ ವಿಚಿತ್ರವಲ್ಲ. ತನಗಿಲ್ಲದೆ ಇದ್ದ ಅಪಜಯವನ್ನು ಕೃಷ್ಣನು ಇಂದ್ರನಿಗೆ ಕೊಟ್ಟನು. ಇದು ನನಗೆ ವಿಚಿತ್ರವಾಗಿ ಕಾಣುತ್ತದೆ!" ವ|| ಎನ್ನಲು ಅತಿಯಾದ ವ್ಯಥೆಯೂ ಮತ್ಸರವೂ ನೋವೂ ಮಿತಿಮೀರಲು ಶಚಿಯು ಹೀಗೆಂದಳು.

ರಥಚರಣಪಾಣಿ ಬಲಮಂ
ಮಥಿಯಿಸೆ ಜಂಭಾರಿಗಾಯ್ತು ಗೀರ್ವಾಣಹತಿ
ವ್ಯಥೆ [೧]ನೀಂ ಗೀರ್ವಾಣಹತಿ
ವ್ಯಥೆಯಂ ಮತ್ತೇಕೆ ತಂಗಿ ಪಡೆದಪೆಯೆನಗಂ ೮೧

ದಿವಿಜರ್ ಸೋಲೆ ಸುರದ್ರುಮಂ ನಿನಗೆ ಸಾರ್ದತ್ತೆಂದು ಬೇಱೊಂದು ರೂ
ಪವಿಲಾಸಂ ಪೆಱತೊಂದು ದೇಸಿ ಪೊಸತೊಂದುನ್ಮಾದಮಾಗಿರ್ಪ ದ
ರ್ಪವಿದೇಂ ಪಿಂಗಿತೆ ಯುದ್ಧವಿಂದ್ರತರು [೨]ಕೈಸಾರ್ದತ್ತೆ ಮೇಣ್ ಕಾಣಲ
ಕ್ಕುವುಪೇಂದ್ರೇಂದ್ರರೊಳೀಗಳೆಕ್ಕತುಳದಿಂದಂ ಗೆಲ್ಲಸೋಲಂಗಳಂ ೮೨

ವ|| ಎನಲತಿಚತುರೆ ಸತ್ಯಭಾಮೆಯಿಂತೆಂದಳ್

[೩]ಭಂಗಮೊಡರ್ಚೆ ನಿನ್ನ ವಚನಂ ನಿನಗಕ್ಕ ವಿರೋಧಿಯಾದುದೇ
ಕಾಂಗದೆ ಕಾದೆ ನೋಡುವೆವುಪೇಂದ್ರಮಹೇಂದ್ರರೊಳಪ್ಪ ಗೆಲ್ಲಸೋ
ಲಂಗಳನೆ[೪]ಂಬೆಯೋಜೆನಿಪೇಂದ್ರನೊಳಾದುದು ಗೆಲ್ಲವಿಂದ್ರನೊಳ್
ಸಂಗಳಿಸಿತ್ತು [೫]ಸೋಲವಱಿದಂತುಟೆ ಕಾಳೆಗವೀ ಮಹೇಂದ್ರನಾ ೮೩

ವ|| ಎನೆ ತದೀಯ ಚತುರೋಕ್ತಿಗತಿಕುಪಿತೆಯಾಗಿ

೮೧. "ಚಕ್ರಪಾಣಿಯು ಸೇನೆಯನ್ನು ಮಥಿಸಲಾಗಿ ಇಂದ್ರನಿಗೆ ಗೀರ್ವಾಣಹತಿ (ದೇವತೆಗಳ ಧ್ವಂಸ)ಯಾಯಿತು. ತಂಗಿ, ಮತ್ತೆ ನೀನೇಕೆ ನನಗೆ ಗೀರ್ವಾಣಹತಿಯನ್ನು (ವಾಗ್ಬಾಣಗಳ ಹಿಂಸೆಯನ್ನು) ಉಂಟುಮಾಡುವೆ? ೮೨. ದೇವತೆಗಳು ಸೋತುದರಿಂದ ಕಲ್ಪವೃಕ್ಷವು ನಿನಗೆ ಬಂದಿತೆಂದು ಬೇರೊಂದು ರೂಪವಿಲಾಸವೂ ಬೆಡಗೂ ಹೊಸದಾದ ಒಂದು ಉನ್ಮಾದವೂ ಆಗಿರುವ ಈ ದರ್ಪವೇಕೆ! ಯುದ್ಧವು ನಿಂತುಹೋಯಿತೆ? ಕಲ್ಪತರು ನಿನ್ನ ಕೈಗೆ ಸೇರಿತೆ? ಮತ್ತೆ ಆಗುವ ಕೃಷ್ಣ ಮತ್ತು ಇಂದ್ರರ ಸಮಯುದ್ಧದಲ್ಲಿ ಜಯಾಪಜಯಗಳನ್ನು ಕಾಣಬಹುದು. ವ|| ಎನ್ನಲು ಅತಿಚತುರೆ ಸತ್ಯಭಾಮೆ ಹೀಗೆಂದಳು. ೮೩. "ಅಕ್ಕ, ಭಂಗವನ್ನುಂಟುಮಾಡುವುದಕ್ಕೆ ನಿನ್ನ ಮಾತೇ ನಿನಗೆ ವಿರೋಧಿಯಾಗಿದೆ. ಏಕಾಂಗದಿಂದ ಕಾದಿದಾಗ ಉಪೇಂದ್ರ ಮಹೇಂದ್ರ (ಕೃಷ್ಣೇಂದ್ರ)ರಲ್ಲಿ ಆಗುವ ಜಯಾಪಜಯಗಳನ್ನು ನೋಡುತ್ತೇವೆ" ಎಂದು ನೀನು ಹೇಳುವ ಮಾತಿನ ಕ್ರಮದಿಂದಲೇ ಉಪೇಂದ್ರನಿಗೆ ಜಯವೂ ಇಂದ್ರನಿಗೆ ಅಪಜಯವೂ ಸಂಘಟಿಸಿತು. ಈ ಮಹೇಂದ್ರನ ಕಾಳೆಗವು ಇನ್ನೇನು ತಿಳಿದಂತೆಯೇ ಇದೆ. ವ|| ಎನ್ನಲು ಅವಳ ಚಾತುರ್ಯದ ಮಾತಿಗೆ ಶಚಿ ಅತಿ ಕೋಪಗೊಂಡು

೧. ಯೀಗೀರ್ವಾಣಾದಿ (ಕಗ) ೨. ಕೈಸಾರ್ದಲ್ಲಿ (ಖ) ೩. ಭಂಗಮೊಡರ್ಚೆ (ಕಗ) ೪. ನೆಂಬಯಾದಿಯಿ (ಕಗ) ೫. ಸೋಲದರಿವಂತುಟೆ (ಕಗ)

ಸಿಡಿಲೆನ್ನೋಪಂಗೆ ಶಸ್ತ್ರಂ ಮರದ ಗದೆ ಗಡಂ ನಿನ್ನ ಕಾಂತಂಗೆ ಕಾಯ್ಪಿಂ
ಗೆಡೆಗೊಂಡೈರಾವತೇಭಂ ಮದಧಿಪತಿಗೆ ವಾಹಂ ತ್ವದೀಶಂಗೆ ಗೃಧ್ರಂ
ಗಡ ದೇವೇಂದ್ರತ್ವ[1]ವೀ ಮತ್ಪತಿಗೆ ಪದವಿ ಗೋಪಾಲಕತ್ವಂ ಗಡಂ ನಿ
ನ್ನೊಡೆಯಂಗಿನ್ನೇತಱೊಳ್ ಮತ್ಪತಿಗೆ ದೊರೆ ಭವದ್ವಲ್ಲಭಂ ಸತ್ಯಭಾಮೇ ೮೪

ವ|| ಎಂದು ಪೌಲೋಮಿ ನುಡಿಯಲಾ ನುಡಿಯನನುಕ್ರಮದಿಂ ನಿರಾಕರಿಸಲೆಂದು

ಅಸುರಯಮದಂಡವೆನಲು
ರ್ವಿಸುವ ಮಹಾಗದೆಯನಿಟೆಸಿ ವಜ್ರಮನಭಿವ
ರ್ಣಿಸಿದಪೆ ಕೇವಣದೊಳ್ ಕೀ
ಲಿಸಲಲ್ಲದೆ ಪ್ವರವಂತದೇನಾಯುಧಮೇ ೮೫

ನಾಗಾಂತಕನೀ ಗರುಡಂ
ನಾಗನದೈರಾವತಂ ಪರಾಜಿತವಂತಾ
ನಾಗೇಂದ್ರನದಂ [2]ಬಣ್ಣಿಸಿ
ನಾಗಾರಿಯನಕಟ ಗೃಧ್ರನೇಂದೇಟೆಪುದೇ ೮೬

ನುಡಿದಿರ್ ನಿಂದಿಸಿ ಗೋಪನೆಂದು ಹರಿಯಂ ಗೋಪತ್ವಮುಂಟೆಂತದೆಂ
ದೊಡೆ ಗೋವಾಚಕಮಪ್ಪ ನಾಕಮಹಿಮುಖ್ಯಾನೇಕವಸ್ತೂತ್ಕರ
ಕ್ಕೊಡೆಯಂ ಮತ್ಪ್ರಿಯನಿಂತು ನಿಮ್ಮ ನುಡಿ ನಂದಾಸ್ತೋತ್ರವಾಯ್ತಕ್ಕ ಕೇ
ಳ್ವೊಡೆ ಮತ್ಕಾಂತಕೃತಪ್ರಸಾದಮೆ ವಲಂ ತ್ವತ್ಕಾಂತನಿಂದ್ರತ್ವಮುಂ ೮೭

೮೪. "ನನ್ನ ಪತಿಗೆ ಸಿಡಿಲು ಅಸ್ತ್ರವಾಗಿದೆ. ನಿನ್ನ ಕಾಂತನಿಗೆ ಮರದ ಗದೆಯಲ್ಲವೆ! ಕ್ರೌರ್ಯಕೋಪಗಳನ್ನುಳ್ಳ ಐರಾವತವು ನನ್ನ ಅಧಿಪತಿಗೆ ವಾಹನ. ನಿನ್ನ ಪತಿಗೆ ವಾಹನವು ಹದ್ದಲ್ಲವೆ! ನನ್ನ ಪತಿಗೆ ದೇವೇಂದ್ರತ್ವ ಪದವಿ, ನಿನ್ನೊಡೆಯನಿಗೆ ಗೋಪಾಲಕತ್ವವಲ್ಲವೆ! ಇನ್ನಾವುದರಲ್ಲಿ ನನ್ನ ಪತಿಗೆ ನಿನ್ನ ವಲ್ಲಭನು ಸಮಾನನಾಗಿರುವನೇ, ಸತ್ಯಭಾಮೇ?! ವ|| ಎಂದು ಶಚೀದೇವಿಯು ಹೇಳಲು ಆ ಮಾತನ್ನು ಅನುಕ್ರಮದಿಂದ ನಿರಾಕರಿಸಬೇಕೆಂದು, ೮೫. "ಅಸುರರಿಗೆ ಯಮದಂಡವೆನ್ನುವಂತೆ ಕ್ರೂರವಾಗಿರುವ ಮಹಾಗದೆಯನ್ನು ಕೀಳು ಮಾಡಿ, ವಜ್ರವನ್ನು ಅಭಿವರ್ಣಿಸುತ್ತೀಯೆ ನೀನು, ವಜ್ರವು ಆಭರಣಗಳ ಸಂದಿನಲ್ಲಿ ಕೆತ್ತುವುದಕ್ಕೇ ಹೊರತು ಅದೊಂದು ಆಯುಧವೆ?!" ೮೬. "ಈ ಗರುಡನು ನಾಗಾಂತಕ (ನಾಗ = ೧ ಹಾವು ೨ ಆನೆ), ಐರಾವತವು ನಾಗ. ನಾಗೇಂದ್ರ (ಶೇಷ)ನೂ ಗರುಡನಿಂದ ಪರಾಜಿತನಾಗಿರುವನು. ಪರಾಜಿತವಾದ (ಐರಾವತ) ನಾಗನನ್ನು ವರ್ಣಿಸಿ, ನಾಗಾರಿ ಗರುಡನನ್ನು ಹದ್ದೆಂದು ತಿರಸ್ಕರಿಸುವುದೇ?" ೮೭. "ಅಕ್ಕ, ನೀವು ಕೃಷ್ಣನನ್ನು ಗೋಪನೆಂದು, ನಿಂದಿಸಿ ಮಾತನಾಡಿದಿರಿ. ನಿಜವಾಗಿ ಕೃಷ್ಣನಿಗೆ ಗೋಪತ್ವವು ಉಂಟು. ಗೋವಾಚಕವು ತಿಳಿಸುವ (ವಾಚ್ಯಾರ್ಥವಾದ) ಸ್ವರ್ಗಭೂಮಿಯೇ ಮೊದಲಾದ ಅನೇಕ ವಸ್ತುಸಮೂಹಕ್ಕೆ

೧. ವಸ್ತತ್ಪತಿಗೆ (ಮೂಲ) ೨. ಬಣ್ಣಿಸೆ (ಕ)

ವ|| ಎಂದು ಸತ್ರಾಜಿತ್ತನೂಜೆ ನುಡಿಯೆ ಪೌಲೋಮಿ ಕನಲ್ದು

ಒಂದು ನಿಟಿಲಾಕ್ಷಿ ಮಿಗಿಲುಂ
ಟೆಂದು ಹರಂ ತಾಳ್ದಿದಂ ಸ್ವಯಂಪ್ರಭೆಯನೆಂ
ದಂದು ಸಹಸ್ರವಿಲೋಚನ
ದಿಂದೆಸೆವಿಂದ್ರಂ [1]ಹರಿಪ್ರಸಾದಸ್ಪೃಹನೇ ೮೮

ವ|| ಎನೆ ಸತ್ರಾಜಿತಿ ಮುಗುಳ್ನಗೆ ನಕ್ಕು

ಉಸಿರಲ್ವೇಡಿದನಕ್ಕ ಕೇಳ್ದಱಿವೆನಿಂದ್ರಂಗೆಮ್ಮ ಭಾವಂಗೆ ನೇ
ತ್ರಸಹಸ್ರಂ ದೊರೆಕೊಂಡ ದುಸ್ಥಿತಿಯನಾ ಹಾಸ್ಯೋಕ್ತಿಯಂತಿರ್ಕೆ ರಂ
ಜಿಸುಗುಂ ಕಣ್ ಪಲವೆಂಬೋಡೀಯವಯವಂ ಹೀನಾಧಿಕಂ ಲೇಸೆ ಮಾ
ಣ ಸದಾಳಾಪಮನಣ್ಮಿ ಕಾದುಗೆ ಸಹಸ್ರಾಕ್ಷಂ ಸರೋಜಾಕ್ಷನೊಳ್ ೮೯

ವ|| ಎಂದು ನುಡಿಯೆ ತತ್ಸಂವಾದದೊಳ್ ಸತ್ಯಭಾಮೆಯಿಂ ಶಚೀದೇವಿಗಾದ ವಾಕ್ಪರಾಜಯಮುಂ ವಸುದೇವಸುತನಿಂ ತನಗಾದ ರಣಪರಾಜಯಮುಂ ತನಗತಿ[2]ಕ್ಷೋಭಮಂ ಪಡೆಯೆ

ಗುಣಟಂಕಾರನಿನಾದವಾತ್ಮಗಳ ಹೂಂಕಾರಸ್ವನಂ ಲೋಲಕಂ
ಕಣಝುಂಕಾರರವಂ ವಿಮುಕ್ತಶರಭೀಂಕಾರಸ್ವರಂ ಕೇಳಲಾ
ಯ್ತಣಕಂ ನೋಡಿರೆ ಕಾಣಬಾರದಿವನಸ್ತ್ರಾದಾನಸಂಧಾನಮೋ
ಕ್ಷಣವೇಗಂಗಳೆನಲ್ ಬಲಾರಿ ಕಱಿದಂ ಬಾಣೋತ್ಕರಾಸಾರಮಂ ೯೦

ನನ್ನ ಪ್ರಿಯನು ಅಧಿಪತಿ. ಆದುದರಿಂದ ಈ ನಿಮ್ಮ ನುಡಿಯು ನಿಂದಾಸ್ತೋತ್ರವಾಗಿದೆ. ಕೇಳಿ, ನಿಮ್ಮ ಕಾಂತನ ಇಂದ್ರತ್ವವೂ ನಿಜವಾಗಿ ನನ್ನ ಕಾಂತನ ಅನುಗ್ರಹವೇ!" ವ|| ಎಂದು ಸತ್ಯಭಾಮೆ ಹೇಳಲು ಶಚಿಯು ಬಹಳವಾಗಿ ಕೋಪಿಸಿ, ೮೮. "ಹಣೆಯ ಕಣ್ಣೊಂದು ತನಗೆ ಹೆಚ್ಚಾಗಿದೆಯೆಂದು ಹರನು ಸ್ವಯಂ ಪ್ರಭುತ್ವವನ್ನು ಪಡೆದಿರುವನೆನ್ನುವಾಗ ಸಾವಿರ ಕಣ್ಣುಗಳಿಂದ ಪ್ರಕಾಶಿಸುವ ಇಂದ್ರನು ಹರಿ (ಕೃಷ್ಣ) ಪ್ರಸಾದವನ್ನು ಅಪೇಕ್ಷಿಸುವವನೇ?!" ವ|| ಎನ್ನಲು ಸತ್ಯಭಾಮೆ ಮುಗುಳುನಗೆ ನಕ್ಕು, ೮೯. "ಇದನ್ನು ಹೇಳಬೇಡಕ್ಕ, ನಮ್ಮ ಭಾವನಾದ ಇಂದ್ರನಿಗೆ ಸಾವಿರ ಕಣ್ಣುಗಳು ಪ್ರಾಪ್ತವಾದ (ಸಿಕ್ಕಿದ) ದುಸ್ಥಿತಿಯನ್ನು ಕೇಳಿ ತಿಳಿದಿರುವೆನು. ಆ ಹಾಸ್ಯಕರವಾದ ಮಾತು ಹಾಗಿರಲಿ. ಹಲವು ಕಣ್ಣುಗಳು ಹೊಳೆಯುವುವು ಎನ್ನುವುದಾದರೆ ಯಾರಿಗೇ ಆಗಲಿ ಅವಯವವು ಹೀನವಾಗಿ ಅಥವಾ ಅಧಿಕವಾಗಿದ್ದರೆ ಅದು ಒಳ್ಳೆಯದೆ? ಈ ಅಸದ್ಭಾಷಣವನ್ನು ಬಿಡು, ನಿಲ್ಲಿಸು, ಸಹಸ್ರಾಕ್ಷನು (ಇಂದ್ರನು) ಸರೋಜಾಕ್ಷ (ಕೃಷ್ಣ)ನೊಡನೆ ಪೌರುಷದಿಂದ ಯುದ್ಧವನ್ನು ಮಾಡಲಿ." ವ|| ಎಂದು ಹೇಳಲು ಆ ಸಂವಾದದಲ್ಲಿ ಸತ್ಯಭಾಮೆಯಿಂದ ಶಚೀದೇವಿಗಾದ ವಾಕ್ಪರಾಜಯವೂ ವಸುದೇವಸುತನಿಂದ ತನಗಾದ ರಣಪರಾಜಯವೂ ಇಂದ್ರನಿಗೆ ಅತ್ಯುದ್ವೇಗವನ್ನು ಉಂಟು ಮಾಡಿತು. ೯೦. ಆಗ ಬಿಲ್ಲಿನ ಹೆದೆಯ ಟಂಕಾರಧ್ವನಿಯೂ ಇಂದ್ರಕಂಠದ ಹೂಂಕಾರ ಧ್ವನಿಯೂ ಚಂಚಲವಾದ ಕಂಕಣಗಳ ಝುಂಕಾರಶಬ್ದವೂ ಪ್ರಯೋಗಿಸುವ ಬಾಣಗಳ

೧. ಪರ (ಖ) ೨. ಕ್ಷೋಭಮಾಗೆ

ಪೀತಾಂಬರಧರನಂ ಪುರು
ಹೂತಶಿಲೀಮುಖನಿಕಾಯಮೆಱಗಿದುದಿನಿಸುಂ
ಪೂತ ನವಕರ್ಣಿಕಾರಕು
ಜಾತದೊಳೆಱಗುವ ಶಿಲೀಮುಖಾಳಿಯ ತೆಱದಿಂ ೯೧

ಹರಿಯಂ ಪ್ರತಾಪನಿಧಿಯಂ
ಶರಸಂಕುಲವೆಱಗಿಯುಂ ನಿರರ್ಥಕವಾದ
ತ್ತುರಿವರಿವ ದಾವಶಿಖಿಯೊಳ್
ಪರಿತಂದೆಱಗುವ ಪತಂಗವಿತತಿಯ ತೆಱದಿಂ ೯೨

ವ|| ಆ ಸಮಯದೊಳ್

ಪೊಲಗಿಡೆ ಸಹಸ್ರನೇತ್ರಂ
ಸಲೆ ನಿಲೆ ಕಣೆ ಕಣೆಯನೊರಸಿ ಗಱಿ ಗಱಿಯಂ ತ
ಳ್ತಲಗಲಗನೊರಸಿ ಪಾಯ್ತರೆ
ಜಲಜಾಕ್ಷಂ ಲಕ್ಕಲೆಕ್ಕದಿಷುಗಳನೆಚ್ಚಂ ೯೩

ವ|| ಅಂತು ವಿಷ್ಣುಜಿಷ್ಣುಗಳ್ ಪರಸ್ಪರಂ ಶರವರ್ಷಮಂ ಕಱೆಯೆ

ಒಂದೊಂದಂ ಮಾರ್ತಾಗಿದು
ವೊಂದೊಂದಂ ಮೊನೆಯ ಕಿಚ್ಚಿನಿಂದುರುಪಿದುವೊಂ
ದೊಂದಂ ಕಡಿದಿಕ್ಕಿದುವೊಂ
ದೊಂದಂ ¹ಪಿಳ್ಕಿಂದೆ ಸೀಳ್ದುವಂಬಂಬರದೊಳ್ ೯೪

ಭೀಂಕಾರಸ್ವರವೂ ಕೇಳಿಸಿತು. ಇದೇನೊ ಕುಚೋದ್ಯವಾಗಿದೆ. ಇವನು ಅಸ್ತ್ರಗಳನ್ನು ತೆಗೆದುಕೊಳ್ಳುವ ಬಿಲ್ಲಿನಲ್ಲಿ ಹೂಡುವ, ಬಿಡುವ ವೇಗಗಳನ್ನು ನೋಡಲಾಗುವುದಿಲ್ಲ ಎನ್ನುವಂತೆ ಇಂದ್ರನು ಬಾಣಸಮೂಹದ ಮಳೆಯನ್ನು ಕರೆದನು. ೯೧. ಇಂದ್ರನ ಶಿಲೀಮುಖಗಳ (ಬಾಣಗಳ) ಸಮೂಹವು ಕೃಷ್ಣನನ್ನು ಸ್ವಲ್ಪವಾಗಿ ಹೂಬಿಟ್ಟಿರುವ ಹೊಸ ಬೆಟ್ಟದಾವರೆಯ ಮರದಲ್ಲಿ ಎರಗುವ ಶಿಲೀಮುಖಗಳ (ತುಂಬಿಗಳ) ಸಮೂಹದಂತೆ ಎರಗಿತು. ೯೨. ಉರಿಯು ಹರಡುತ್ತಿರುವ ಕಾಡುಕಿಚ್ಚಿಗೆ ಓಡಿಬಂದು ಬೀಳುವ ದೀಪದ ಹುಳುಗಳಂತೆ ಇಂದ್ರನ ಬಾಣಗಳು ಪ್ರತಾಪನಿಧಿಯಾದ ಹರಿಯನ್ನು ಮುತ್ತಿಯೂ ನಿರರ್ಥಕವಾದವು. ವ|| ಆ ಸಮಯದಲ್ಲಿ ೯೩. ಸಹಸ್ರಾಕ್ಷನು ದಿಕ್ಕುಗೆಡುವಂತೆ, ಬಾಣವು ಬಾಣವನ್ನು ತೀಡಿ, ಗರಿಯು ಗರಿಯನ್ನು ತಡೆದು, ಅಲಗು ಅಲಗನ್ನು ಒರಸಿ ಹಾರುತ್ತಿರಲು ಕೃಷ್ಣನು ಲಕ್ಷಸಂಖ್ಯೆಯ ಬಾಣಗಳನ್ನು ಹೊಡೆದನು. ವ|| ಹಾಗೆ ವಿಷ್ಣುಜಿಷ್ಣುಗಳು (ಕೃಷ್ಣೇಂದ್ರರು) ಪರಸ್ಪರ ಬಾಣಗಳ ಮಳೆಯನ್ನು ಕರೆಯಲು ೯೪. ಬಾಣಗಳು ಆಕಾಶದಲ್ಲಿ ಒಂದು ಮತ್ತೊಂದನ್ನು ಪ್ರತಿಯಾಗಿ ತಾಕಿದುವು. ಒಂದು ಇನ್ನೊಂದನ್ನು ಪಿಳುಕಿನಿಂದ

---

೧. ಪಿಳ್ಕಿಂಗೆ (ಖ)

ನರನೀ ವಜ್ರಿಯ ಸೂನುವಾದ[1]ನಿತಜೆಂ ಬಿಲ್ಬಲ್ಮೆಯಿಂ ಲೋಕದೊಳ್
ಪಿರಿಯಂ ತಾನೆನೆ ವಜ್ರಿಗಾವನೊ ಸಮರ ಬಿಲ್ಬಲ್ಮೆಯಿಂದೆಂಬಿನಂ
ಶರದಿಂದಂ ಶರಮಂ ನಿವಾರಿಸಿ ಮಹಾಸ್ತ್ರಕ್ಕೆಚ್ಚು ದಿವ್ಯಾಸ್ತ್ರಮಂ
ಹರಿಶೌರ್ಯಂ ಹರಿ ತೋಱಿದಂ ಹರಿಯ ಸಾಮರ್ಥ್ಯಕ್ಕೆ ಸಾಮರ್ಥ್ಯಮಂ ೯೫

ಅರಿದಲ್ತಂದಿನ ರಾವಣಪ್ರಮುಖದೈತ್ಯಾಧೀಶರಂ ಗೆಲ್ದುದೀ
ಸುರಚಕ್ರೇಶನನಾಂತು ಗೆಲ್ವುದರಿದೆಂದಾಗಳ್ ಜಯಪ್ರಾಪ್ತಿಯೊಳ್
ಹರಿಗಂ ಸಂಶಯಬುದ್ಧಿಯಾದುದೆನೆ ಬೇಱುತ್ಪ್ರೇಕ್ಷಿಸಲ್ ಬೇಱೆ ಬಿ
ತ್ತರಿಸಲ್ ಬೇಱಭಿವರ್ಣಿಸಲ್ ಪವಣೆ ಬಾಹಾವಿಕ್ರಮಂ ಶಕ್ರನಾ ೯೬

ವ॥ ಆಗಳಾ ಸುಪರ್ವರಾಜಂ ಸುಪರ್ವಮೆನಿಸಿದ ಪರ್ವತಾಸ್ತ್ರಮಂ ತೊಟ್ಟು ತೊಟ್ಟನಿಸೆ

ತಂಡದಿನಲಗಿನ ಮೊನೆಯೊಳ್
ಖಂಡಿತಮದ್ರಿಗಳನುಗುಳ್ವ ಪರ್ವತಶರಮಂ
ಖಂಡಿಸಿದನಕಾಂಡತಟಿ
ತ್ಕಾಂಡಾಭ ಪವಿಪ್ರಕಾಂಡಕಾಂಡದೆ ಕೃಷ್ಣಂ ೯೭

ವ॥ ತದನಂತರಂ

ಶಿಖಿಯುಂ ಧೂಮಮುಮಲಗಿನ
ಮುಖದೊಳ್ ಪೊಱಮಡುವಿನಂ ಶತಕ್ರತು ತೊಟ್ಟಂ
ಶಿಖಿಬರ್ಹವಸನಯುತನಂ
ಶಿಖಿನಾಮ[2]ಗ್ರಹಸಮಗ್ರಮಂ ಶಿಖಿಶರಮಂ ೯೮

ಸೀಳಿದವು. ೯೫. ಅರ್ಜುನನು ಈ ಇಂದ್ರನ ಮಗನಾದ ಮಾತ್ರದಿಂದಲೇ ಬಿಲ್ಲಿನ ಸಾಮರ್ಥ್ಯದಲ್ಲಿ ಲೋಕದಲ್ಲಿ ಮೇಲಾದವನೆನ್ನಿಸಿಕೊಂಡನೆಂದ ಮೇಲೆ ಬಿಲ್ಲಿನ ಬಲದಲ್ಲಿ ಇಂದ್ರನಿಗೆ ಸಮನಾದವರು ಯಾರಿರುವರು ಎನ್ನುವಂತೆ ಇಂದ್ರನು ಕೃಷ್ಣನ ಬಾಣವನ್ನು ಬಾಣದಿಂದಲೇ ನಿವಾರಿಸಿ, ಮಹಾಸ್ತ್ರಕ್ಕೆ ದಿವ್ಯಾಸ್ತ್ರವನ್ನು ಹೊಡೆದು, ಕೃಷ್ಣನಿಗೆ ತನ್ನ ಸಾಮರ್ಥ್ಯವನ್ನು ತೋರಿಸಿದನು. ೯೬. ಹಿಂದಿನ ರಾವಣನೇ ಮೊದಲಾದ ರಾಕ್ಷಸಾಧೀಶರನ್ನು ಗೆದ್ದುದು ಅಸಾಧ್ಯವಲ್ಲ, ಈಗ ಈ ಸುರಚಕ್ರವರ್ತಿಯನ್ನು ಎದುರಿಸಿ ಗೆಲ್ಲುವುದು ಅಸಾಧ್ಯ ಎಂದು ಆಗ ತನಗೆ ಜಯವಾಗುವುದರಲ್ಲಿ ಕೃಷ್ಣನಿಗೂ ಸಂಶಯಬುದ್ಧಿಯಾಯಿತೆನ್ನುವಾಗ ಇಂದ್ರನ ಬಾಹುಪರಾಕ್ರಮವು ಉತ್ಪ್ರೇಕ್ಷಿಸುವುದಕ್ಕೂ ವಿವರಿಸುವುದಕ್ಕೂ ವರ್ಣಿಸುವುದಕ್ಕೂ ಸಾಧ್ಯವೆ?! ವ॥ ಆಗ ಆ ದೇವರಾಜನು ಒಳ್ಳೆಯ ಗೆಣ್ಣುಗಳುಳ್ಳದು ಎನ್ನಿಸಿಕೊಂಡ ಪರ್ವತಾಸ್ತ್ರವನ್ನು ತೊಟ್ಟು ತಟ್ಟನೆ ಹೊಡೆದನು. ೯೭. ಖಂಡಿತವಾಗಿಯೂ ಅಲಗಿನ ಮೊನೆಯಿಂದ ಪರ್ವತಗಳನ್ನು ಉಗುಳುವ ಆ ಪರ್ವತಾಸ್ತ್ರವನ್ನು ಕೃಷ್ಣನು ಅಕಾಲದಲ್ಲಿ ಕಾಣುವ ವಿದ್ಯುದ್ಬಾಣದಂತಿರುವ ಶ್ರೇಷ್ಠವಾದ ವಜ್ರಾಸ್ತ್ರದಿಂದ ತುಂಡುಮಾಡಿದನು. ವ॥ ಆ ಮೇಲೆ ೯೮. ಇಂದ್ರನು ನವಿಲುಗರಿಯ ಗರಿ (ವಸ್ತ್ರ)ಯುತವಾದ ಆಗ್ನೇಯವೆಂಬ ಸಾರ್ಥಕವಾದ ಹೆಸರಿನ ಅಸ್ತ್ರವನ್ನು ಅದರ

೧. ನಿದಜೆ(ಖ) ೨. ಗ್ರಸನನೋಗ್ರಮಂ (ಕಗ) ಗ್ರಸನಸೋಗ್ರಮಂ (ಮೂಲ)

ವ|| ಆ ಮಹಾಮಾರ್ಗಣಕ್ಕೆ

ಶರಧಿಯನುಗುಳ್ವ ಶರಮಂ
ಶರಧಿಯಿನಸುರಾರಿ ತೆಗೆದು ತೊಟ್ಟೆಚ್ಚಂ ಜ್ಯಾ
ಸ್ವರವೆಸೆಯೆ ಪುಂಖಕಾರ್ತ
ಸ್ವರವಿಭವಾರುಣಸಮಗ್ರಮಂ ವಾರುಣಮಂ ೯೯

ವ|| ಆ ವಾರುಣಾಸ್ತ್ರದಿಂದಾಗ್ನೇಯಾಸ್ತ್ರಂ ಪ್ರತಿಹತಮಾಗೆ

ಪಗೆ ಕೌಶಿಕಂಗೆ ಪಗಲೀ
ಪಗಲಂ ಕಿಡಿಸಿದನದರ್ಕೆ ಕೌಶಿಕನೆನುತುಂ
ನಗೆ ಸತ್ಯಭಾಮೆ ಕೌಶಿಕ
[1]ನಗೆಯೆತ್ತಿದನಂಧಕಾರಶರದಿಂ ಪಗಲಂ ೧೦೦

ವ|| ಅದಂ ಕಂಡು

ಮಣಿಪುಂಖಚಿತ್ರಭಾನು
ಪ್ರಣಿಚಿತಮಂ ಚಿತ್ರಭಾನುಶರಮಂ ವಿಲಯೋ
ಲ್ಬಣಚಿತ್ರಭಾನುಶಿಖಿಯೊಳ್
ತೊಣೆಯೆನಿಪುದನಸುರವೈರಿ ತೊಟ್ಟಾರ್ದೆಚ್ಚಂ ೧೦೧

ವ|| ಆ ಮಾರ್ತಂಡಕಾಂಡಂ ತಿಮಿರಶರಾತಿರೇಕಮಂ ತೂಳ್ದೆ

ನಿಜಮುಖವಿಷಾಗ್ನಿದಗ್ಧ
ತ್ರಿಜಗಂ ಶರಮಿಂತಿದೆಂದು ಸಕ[2]ಲಗ್ರಹಮಂ
ದು ಜನಿಸೆ ಶಚೀಭುಜಂಗಂ
ಭುಜಂಗಬಾಣದೆ ಭುಜಂಗತಲ್ಪನನೆಚ್ಚಂ ೧೦೨

ಅಲಗಿನ ಬಾಯಿಯಿಂದ ಹೊಗೆಯೂ ಉರಿಯೂ ಹೊರಡುವಂತೆ ತೊಟ್ಟನು. ವ|| ಆ ಮಹಾಸ್ತ್ರಕ್ಕೆ ೯೯. ಕೃಷ್ಣನು ಪಿಳುಕಿನ ಸುವರ್ಣದ ವೈಭವದ ಕೆಂಪಿನಿಂದ ಪೂರ್ಣವಾದುದೂ, ಸಮುದ್ರವನ್ನೇ ಉಗುಳುತ್ತಿರುವುದೂ ಆದ ವಾರುಣಶರವನ್ನು ಬತ್ತಳಿಕೆಯಿಂದ ತೆಗೆದು ಬಿಲ್ಲಿನಲ್ಲಿ ತೊಟ್ಟು ಹೊಡೆದನು. ವ|| ಆ ವಾರುಣಾಸ್ತ್ರದಿಂದ ಆಗ್ನೇಯಾಸ್ತ್ರವು ಪ್ರತಿಹತವಾಯಿತು. ೧೦೦. ಕೌಶಿಕ(ಇಂದ್ರ)ನು ಅಂಧಕಾರಾಸ್ತ್ರದಿಂದ ಹಗಲನ್ನು ಹೋಗಲಾಡಿಸಿ ಕತ್ತಲೆಯನ್ನುಂಟುಮಾಡಿದನು. (ಕೌಶಿಕನಿಗೆ) ಗೂಬೆಗೆ ಹಗಲು ಹಗೆ (ಯಾದದ್ದು) ಆದ್ದರಿಂದ ಅವನು ಹಗಲನ್ನು ಕೆಡಿಸಿದನು." ಎಂದು ಸತ್ಯಭಾಮೆ ನಕ್ಕಳು. ವ|| ಅದನ್ನು ನೋಡಿ. ೧೦೧. ಕೃಷ್ಣನು ರತ್ನಖಚಿತವಾದ ಬಾಣದ ಪಿಳುಕಿನ ವಿಚಿತ್ರ ಕಾಂತಿಯಿಂದ ಕೂಡಿ, ಪ್ರಲಯ ಕಾಲದಲ್ಲಿ ಉಲ್ಬಣಗೊಂಡ ಸೂರ್ಯಾಗ್ನಿಗಳ ಜತೆಯದು ಎನ್ನಿಸುವ ಸೂರ್ಯಾಸ್ತ್ರವನ್ನು ಕೊಟ್ಟು, ಅಬ್ಬರಿಸಿ ಹೊಡೆದನು. ವ|| ಆ ಸೂರ್ಯಾಸ್ತ್ರವು ಅಂಧಕಾರಾತಿರೇಕವನ್ನು ಓಡಿಸಿತು. ೧೦೨. ಶಚೀಪತಿಯು ಈ ಬಾಣವು (ಅಸ್ತ್ರವು) ತನ್ನ ಬಾಯ ವಿಷಾಗ್ನಿಯಿಂದ ಮೂರು ಲೋಕವನ್ನು ಸುಟ್ಟುದು ಎಂದು, ಸಕಲಗ್ರಹವೂ

೧. ನಗೆಯೊಡ್ಡಿದ (ಖ) ೨. ಲಾ (ಕ)

ಅಗಸೂದನನ್ನೆಚ್ಚ ಮಹೋ
ರಗಶರಮಂ ಸಿದ್ಧಸಾಧ್ಯಯಕ್ಷಪ್ರಮುಖರ್
[1]ಖಗರಚ್ಚರಿವಡೆ ತಱಿದಂ
ಖಗಪತಿ ಜಗದಿಂ ಖಗೇಂದ್ರವಾಹನನೆಡೆಯೊಳ್ ೧೦೩

ವ|| ಅದರ್ಕೆ ಬೆಕ್ಕಸಂಬಟ್ಟು ಮಘವನಮೋಘ ಮೇಘಬಾಣದಿಂದಿಸೆ

ಪರುಷಸ್ತನಿತಮನಚಿರಾಂ
ಶುರುದ್ಧಮಂ ಮೇಘಚಯಮನುಗುಟುತ್ತುಂ ಪು
ಷ್ಕರದಿಂ ಬರ್ಪಾ [2]ಪುಷ್ಕರ
ಧರಶರಮಂ ಪುಷ್ಕರಾಕ್ಷನೀಕ್ಷಿಸಿ ಕಂಡಂ ೧೦೪

ವ|| ಅಂತು ಕಂಡು ಕಾಂಡಧಿಯಿನೇಣವಾಹನಬಾಣಮಂ ತೆಗೆದು ತೊಡರ್ಚಿ

ಅಭಿಭವಿಸಿದನಿನ್ನಮರ
ಪ್ರಭುವಂ ಮುನಿದೀ [3]ಪ್ರಭಂಜನಂ ತಾನೆಂದಂ
ಬಭಿನುತಿ ನೆಗಟೆ ನಿಶಾಟ
ಪ್ರಭಂಜನಂ ತತ್ಪ್ರಭಂಜನಾಸ್ತ್ರದಿನೆಚ್ಚಂ ೧೦೫

ವ|| ಆ [4]ಪ್ರಭಂಜನಪ್ರಹರಣಂ ಮೇಘಮಾರ್ಗದೊಳೆ ಮೇಘಬಾಣಮಂ ಪ್ರತಿಹತಂ ಮಾಡೆ ನಾಡೆಯುಂ ಮುಳಿದು

ಅಂಜುವಂತೆ ಸರ್ಪಾಸ್ತ್ರದಿಂದ ಶೇಷಶಯನನ್ನು ಹೊಡೆದನು. ೧೦೩. ಇಂದ್ರನು ಹೊಡೆದ ಮಹೋಗ್ರವಾದ ಸರ್ಪಶರವನ್ನು ಸಿದ್ಧಸಾಧ್ಯಯಕ್ಷರೇ ಮೊದಲಾದವರು ಆಶ್ಚರ್ಯ ಪಡುವಂತೆ ಗರುಡವಾಹನನು ಗರುಡಬಾಣದಿಂದ ಮಧ್ಯದಲ್ಲೇ ತುಂಡುಮಾಡಿದನು. ವ|| ಇಂದ್ರನು ಅದಕ್ಕೆ ಆಶ್ಚರ್ಯಪಟ್ಟು, ಅಮೋಘವಾದ ಮೇಘಬಾಣದಿಂದ ಹೊಡೆದನು. ೧೦೪. ಕಠಿನವಾದ ಗುಡುಗು ಮಿಂಚುಗಳುಳ್ಳುದೂ ಮೋಡಗಳ ಗುಂಪನ್ನೇ ಉಗುಳುವುದೂ ಆಗಿ ಆಕಾಶದಿಂದ ಬರುತ್ತಿರುವ ಆ ಮೇಘಬಾಣವನ್ನು ಕಮಲಾಕ್ಷನು ನೋಡಿದನು. ವ|| ಹಾಗೆ ಅದನ್ನು ನೋಡಿ, ಕೃಷ್ಣನು ಬತ್ತಳಿಕೆಯಿಂದ ವಾಯವ್ಯಾಸ್ತ್ರವನ್ನು ತೆಗೆದು ಬಿಲ್ಲಿನಲ್ಲಿ ತೊಟ್ಟು, ೧೦೫. ಕೋಪಿಸಿಕೊಂಡ ಈ ವಾಯುವು ಇನ್ನು ದೇವೇಂದ್ರನನ್ನು ತಿರಸ್ಕರಿಸುವನು ಎಂಬ ಸ್ತುತಿಯು ಹೆಚ್ಚುತ್ತಿರಲು ಕೃಷ್ಣನು ಆ ವಾಯವ್ಯಾಸ್ತ್ರದಿಂದ ಹೊಡೆದನು. ವ|| ಆ ವಾಯವ್ಯಾಸ್ತ್ರವು ಮೇಘಮಾರ್ಗದಲ್ಲೇ ಆ ಮೇಘಾಸ್ತ್ರವನ್ನು ಪ್ರತಿಹತಮಾಡಿತು. ಆಗ ಇಂದ್ರನು ಅತಿಯಾಗಿ ಕೋಪಿಸಿಕೊಂಡು

---

೧. ಬಗೆವ (ಖ) ೨. ಪುಷ್ಕರಶರಮಂ (ಕ) ಪುಷ್ಕರಶರಮಂ ಸಲೆ (ಗ) ೩. ಮಹಾಪ್ರಭಂಜನನುತನೆಂ (ಕಗ) ೪. ಪ್ರಭಂಜನಪ್ರದರಂ (ಕಗ) ಪ್ರಭಂಜನಶರದಿಂ (ಖ)

ಹರನೇತ್ರವಹ್ನಿಯುಂ ಸಂ
ಹರಣಾಗ್ನಿಯುಮಿದಱ ಕಾಯ್ಬಿನೊಳ್ ದೊರೆಯಕ್ಕುಂ
ದೊರೆಯಲ್ತು ಗರ್ಜನಾಡಂ
ಬರದಳಿದರ್ಕೆನಿಪ ವಜ್ರದಿಂ ವ್ಯಪನಿಟ್ಟಂ ೧೦೬

ಪೊಳೆಪಿಂ ಸಿಡಿಲ್ದು ಕೆಂಡದ
ಮಱೆಯಂ ಕಱೆವೆಸಕದಿಂದೆ ಬರ್ಪುದನಾಗಳ್
ಘಟಿಲನೆ ಪಿಡಿದಂ ಮಿಂಚುಂ
ಬುಳುವಂ ಪಿಡಿವಂತೆ ವಜ್ರಮಂ ದನುಜಹರಂ ೧೦೭

ಕುಳಿಶಂ ಪ್ರತಿಹತಮಾದೊಡ
ಮೊಳ್[1] ಸಾರದೆ ಸೋರ್ವ ಮದದಿಭೇಂದ್ರಮನಾಖಂ
ಡಳನಣೆದು ನೂಂಕಿದಂ ಮಾ
ಪೊರ್ಣಳವಿನಮಂಕುಶದ ಪೊಳೆಪು ದಿಗ್ಭಿತ್ತಿಗಳೊಳ್ ೧೦೮

ವಾರಣರಣದೆ ಮದೀಯಾ
[2]ಧೋರಣ ರಣವಿದ್ಯೆ ಮೆಱೆಗುಮೆಂದಿಂದ್ರನ ಸಾ
ಧಾರಣರಣರಭಸೋದ್ಯಮ
ಕಾರಣರಣ[3]ಪಟಹಲಟಹನೆಯ್ದಿದನಿಭದಿಂ ೧೦೯

ತಾರಾಚಳನಂ ಜನಿಯಿಸೆ
ತಾರಾಚಳದೊಡನೆ ರೋಹಣಂ ಪೋರ್ದುದೆನಲ್
ವಾರಣದೊಡನೆ ಖಗಪ್ರಭು
ವಾರಣದೊಳ್ ಪೋರ್ದು ಚಿತ್ರವಿಧದಿಂ ಪೊಣರ್ದಂ ೧೧೦

೧೦೬. ಹರನ ನೇತ್ರಾಗ್ನಿಯೂ ಪ್ರಳಯಾಗ್ನಿಯೂ ಇದರ ಕಾರ್ಯದಲ್ಲಿ ಸಮವಾಗುವುದು ಗರ್ಜನೆಯ ಆಡಂಬರದಲ್ಲಿ ಇದಕ್ಕೆ ಸಮವಲ್ಲ ಎನ್ನಿಸುವ ವಜ್ರಾಯುಧದಿಂದ ಹೊಡೆದನು. ೧೦೭. ಹೊಳೆದು ಸಿಡಿದು ಕೆಂಡದ ಮಳೆಯನ್ನು ಸುರಿಸುತ್ತ ಬಂದ ವಜ್ರಾಯುಧವನ್ನು ಕೃಷ್ಣನು ಮಿಂಚುಹುಳುವನ್ನು ಹಿಡಿಯುವಂತೆ ತಟ್ಟನೆ ಹಿಡಿದನು. ೧೦೮. ವಜ್ರಾಯುಧವು ಪ್ರತಿಹತವಾದರೂ ಹಿಂಜರಿಯದೆ ಇಂದ್ರನು ಮದೋದಕವು ಸೋರುತ್ತಿರುವ ಐರಾವತವನ್ನು ಅಂಕುಶದ ಹೊಳಪು ದಿಗ್ಭಿತ್ತಿಗಳಲ್ಲಿ ಪ್ರತಿಬಿಂಬಿಸುತ್ತಿರಲು ಅದರಿಂದ ಪೀಡಿಸಿ ಕೃಷ್ಣನ ಮೇಲೆ ಬಿಟ್ಟನು. ೧೦೯. ಆನೆಗಳ ಯುದ್ಧದಲ್ಲಿ ನನ್ನ ಗಜಾರೂಢ ರಣವಿದ್ಯೆಯು ಪ್ರಕಾಶವಾಗುವುದು ಎಂದು ಇಂದ್ರನು ಅಸಾಧಾರಣವಾದ ಯುದ್ಧಾಸಕ್ತಿಯ ರಭಸದಿಂದ ಭೋರ್ಗರೆವ ಭೇರಿಗಳ ವಿಲಾಸ ಧ್ವನಿಯಾಗುತ್ತಿರಲು, ಆನೆಯ ಮೇಲೇರಿ ಬಂದನು. ೧೧೦. ಆಗ ನಕ್ಷತ್ರಗಳು ಚಲಿಸುವ ಹಾಗೆ ಬೆಳ್ಳಿಯ ಬೆಟ್ಟದೊಡನೆ ರೋಹಣಗಿರಿಯು ಹೋರಾಡಿತು ಎನ್ನುವಂತೆ ಐರಾವತದೊಡನೆ ಗರುಡನು

೧. ಸೋರದೆ (ಕಗ) ೨. ಧಾರಣ (ಖ) ೩. ಲಟಹಲಟಹ (ಕಗ) ಲಟಹಪಟಹ (ಖ)

ಅತಿವಾತಾಘಾತದಿಂ ಬೆಳ್ಮುಗಿಲೆ ನೆಲಗೆ ಬಿಳ್ದಿತ್ತೆನಲ್ ತಾರ್ಕ್ಷ್ಯಪಕ್ಷಾ
ಹತಿಯಿಂದೈರಾವತಂ ತೊಟ್ಟನೆ ತೊಳೆ ದಿವದಿಂ ಪಾರಿಯಾತ್ರಾದ್ರಿಯೊಳ್ ಬೀ
ಟೆ ತದೀಯನಾನುಪ್ರಯಾತಂ ಗರುಡನೆಱಗಲಂತಲ್ಲಿ ಸಂಗ್ರಾಮಭಂಗಾ
ನ್ವಿತನಾಗಿರ್ದಿಂದ್ರನಂ ನೋಡುತೆ ರಣದೊಳುಪೇಂದ್ರಂ ಸಕಾರುಣ್ಯನಾದಂ ೧೧೧

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯಮಹಾಪ್ರಬಂಧದೊಳ್ ಪಾರಿಜಾತಹರಣ ಸತ್ಯ
ಭಾಮಾಪೌಲೋಮಿಸೋಪಹಾಸವಚನ
ಸುರೇಶ್ವರಾಪಜಯವರ್ಣನಂ
ತ್ರಯೋದಶಾಶ್ವಾಸಂ

ವಿಚಿತ್ರವಿಧದಿಂದ ಯುದ್ಧವನ್ನು ಮಾಡಿದನು. ೧೧೧. ಅತಿಯಾದ ಗಾಳಿಯ ಹೊಡೆತದಿಂದ ಬಿಳಿಯ ಮೋಡವೇ ನೆಲಕ್ಕೆ ಬಿದ್ದಿತು ಎನ್ನುವಂತೆ ಗರುಡನ ರೆಕ್ಕೆಯ ಬಲವಾದ ಏಟಿನಿಂದ ಐರಾವತವು ತಟ್ಟನೆ ಆಕಾಶದಿಂದ ಪಾರಿಯಾತ್ರಾದ್ರಿಯಲ್ಲಿ ಬಿದ್ದಿತು. ಅದನ್ನು ಅನುಸರಿಸಿ ಗಮಿಸಿದ ಗರುಡನು ಅಲ್ಲೂ ಮೇಲೆ ಬಿದ್ದನು. ಅಲ್ಲಿ ಯುದ್ಧ ಪರಾಜಯವನ್ನು ಪಡೆದ ಇಂದ್ರನನ್ನು ನೋಡಿ, ಕೃಷ್ಣನು ಕರುಣೆಯುಳ್ಳವನಾದನು. ಇದು ಸಮಸ್ತಕಮಲ ಭವಾಂಡ ಮಾಲಾ... ಘಟನಾ ಸ್ವತಂತ್ರ.... ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರ ರುದ್ರ ಪ್ರಣೀತ ಶ್ರೀಜಗನ್ನಾಥವಿಜಯ ಮಹಾಪ್ರಬಂಧದಲ್ಲಿ ಪಾರಿಜಾತಹರಣ ಸತ್ಯಭಾಮಾ ಶಚಿಯರ ಕುಚೋದ್ಯವಚನ ಸುರೇಶ್ವರಾಪಜಯವರ್ಣನೆಗಳ ಹದಿಮೂರನೆಯ ಆಶ್ವಾಸ.

# ಚತುರ್ದಶಾಶ್ವಾಸಂ

ಶ್ರೀದಸಖಂ ಪುರರಿಪು ಬಿ
ಲ್ವೋದಕಪತಿನಾಮನಲ್ಲಿ ಸನ್ನಿದನಾಗಿ
ರ್ದಾ ದೇವೇಂದ್ರನ ಪರಿಭವ
ಖೇದವನಾಱಿಸಿ ಬಟಿಕ್ಕುಪೇಂದ್ರಂಗೆಂದಂ ೧

ನೆಱಿಪಲ್ ಪೂಣ್ಕೆಯನಮರರೊ
ಳಿಱಿವುದಿದೇಗಣಿದಮಮರಹಿತನಚ್ಯುತ ನೀ
ನಿಱಿವುದನುಚಿತವದರ್ಕಾ
ನಱಿಪುವೆನೊಂದಮರರಹಿತಮನೆನ್ನಭಿಮತಮಂ ೨

ವ।। ಅಂತದಾವುದೆನೆ, ಕೃತಯುಗಾಂತರಾಳದೊಳ್ ಮಯವಿದ್ಯುನ್ಮಾಲಿತಾರಕಾಕ್ಷದಾನವರ್ ದುರಾಸದಮುಮಂತರಿಕ್ಷಚಾರಿಯುಂ ಸಂಚಾರವೇಗ ದುರ್ಲಕ್ಷ್ಯಮುಮೆನಿಸಿದಾ ತ್ರಿಪುರಮಂ ಜಗನ್ಮಯರಥಾರೂಢನಾಗಿ ನಾಗರಾಜಜ್ಯಾಲತಾರೋಪಿತ ಮೇರುಚಾಪದಿಂ ಪಾಶುಪತಾಸ್ತ್ರಮಂ ಪ್ರಯೋಗಿಸಿ ನಿಟಲೇಕ್ಷಣಾಶುಶುಕ್ಷಣಿಯಿಂದಮಂದಾನುರುಪೆ ದಗ್ಧಶೇಷದಾನವರ್ ಬಟಿಕ್ಕೆ ನಿರ್ಬಂಧದಿಂ ದಿವ್ಯಸಹಸ್ರವರ್ಷಮುಗ್ರೋಗ್ರತಪಮಂ ಮಾಡಿ ತಾವೆನಗಸಾಧ್ಯರುಂ ಮುನ್ನಿನಿಂ ದ್ವಿಗುಣಸಾಹಸರುಂ ದ್ವಿಗುಣಸೈನ್ಯರುಂ ದ್ವಿಗುಣದೋರ್ವಳಚತುರ್ವಳರುಮಪ್ಪಂತು ಪಿತಾಮಹನಿಂ ಮಹಾವರಂಗಳಂ ಪಡೆದು ಮುನ್ನಂತರಿಕ್ಷಚರ ತ್ರಿಪುರವಾಸಿಗಳೀಗಳ್ ಭೂವಿವರಗತ ಷಟ್ಪುರನಿವಾಸಿಗಳಾಗಿರ್ದರ್, ಅವಂದಿರಂ ನಿಕುಂಭದಾನವೇಶ್ವರಪುರಸ್ಸರಂ ಕ್ಷಯಮನೈದಿಸಿ ಯಮಪುರಮಂ ಪುಗುವಂತೆ ಮಾಡಿ

೧. ಶ್ರೀದ (ಕುಬೇರ) ಸಖನಾದ ಈಶ್ವರನು ಬಿಲ್ವೋದಕ ಪತಿಯೆಂಬ ಹೆಸರಿನವನು ಅಲ್ಲಿ ಬಂದು, ದೇವೇಂದ್ರನ ಪರಿಭವದುಃಖವನ್ನು ಆರಿಸಿ, ಬಳಿಕ ಕೃಷ್ಣನಿಗೆ ಹೇಳಿದನು. ೨. "ನಿನ್ನ ಪ್ರತಿಜ್ಞೆಯನ್ನು ನೆರವೇರಿಸುವುದಕ್ಕಾಗಿ ದೇವತೆಗಳೊಡನೆ ಯುದ್ಧ ಮಾಡುವುದು ಯಾವ ಲೆಕ್ಕ? ದೇವತೆಗಳಿಗೆ ಹಿತನಾದ ಅಚ್ಯುತಾ! ನೀನು ದೇವತೆಗಳನ್ನು ಇರಿಯುವುದು ಅನುಚಿತ. ಆದುದರಿಂದ ನಾನು ನನಗೆ ಅಭಿಮತವಾದ ಒಂದು ದೇವ ಹಿತ ಕಾರ್ಯವನ್ನು ನಿನಗೆ ತಿಳಿಸುತ್ತೇನೆ. ವ।। "ಅದು ಯಾವುದೆಂದರೆ, ಕೃತಯುಗಮಧ್ಯದಲ್ಲಿ ಮಯ, ವಿದ್ಯುನ್ಮಾಲಿ, ತಾರಕಾಕ್ಷರು ಹಿಡಿಯಲು ಕಷ್ಟವಾದುದೂ ಅಂತರಿಕ್ಷಸಂಚಾರಿಯೂ ನೋಡಲಾಗದ ಸಂಚಾರವೇಗವುಳ್ಳುದೂ ಆದ ತ್ರಿಪುರವನ್ನು ಜಗನ್ಮಯರಥವನ್ನೇರಿ ನಾಗರಾಜನನ್ನೇ ಹೆದೆ ಬಳ್ಳಿಯನ್ನಾಗಿ ಏರಿಸಿದ ಮೇರುಪರ್ವತಚಾಪದಿಂದ ಪಾಶುಪತಾಸ್ತ್ರವನ್ನು ಪ್ರಯೋಗಿಸಿ, ಹಣೆಗಣ್ಣಿನ ಬೆಂಕಿಯಿಂದ ಅಂದು ನಾನು ಉರಿಸಿದೆನಲ್ಲವೆ? ಆಗ ಸುಟ್ಟುಳಿದ ರಾಕ್ಷಸರು ನಿಯಮದಿಂದ ದಿವ್ಯಸಹಸ್ರವರ್ಷ ಅತ್ಯುಗ್ರತಪಸ್ಸನ್ನು ಮಾಡಿ, ತಾವು ನನಗೆ ಅಸಾಧ್ಯರೂ ಮೊದಲಿಗಿಲ್ಲದ ದ್ವಿಗುಣ ಸೈನ್ಯವುಳ್ಳವರೂ ದ್ವಿಗುಣ ಬಾಹುಬಲಚತುರ್ಬಲವುಳ್ಳವರೂ ಆಗುವಂತೆ ಬ್ರಹ್ಮನಿಂದ ಮಹಾವರಗಳನ್ನು ಪಡೆದು ಮುಂಚೆ ಅಂತರಿಕ್ಷಸಂಚಾರಿಗಳಾಗಿದ್ದವರು ಈಗ ಭೂವಿವರಗಳಲ್ಲಿರುವ ಷಟ್ಪುರನಿವಾಸಿಗಳಾಗಿರುವರು. ಅವರನ್ನು ನಿಕುಂಭ

ಷಟ್ಪುರವನಮೋಘಬಾಣೌಘವಹ್ನಿಯಿಂದುರುಪಿ ನಿನ್ನದೊಂದಭಿನವವಿಜಯಕೀರ್ತಿಯಂ ಕೈಕೊಳ್ವುದೆಂದು ಕಾಳಕೂಟಧರಂ ಪೇೞೆ ಮಾನವಜನ್ಮ ನಾಟಕಧರಂ ಕೈಟಭಾಂತಕನಂತೆಗೆಯ್ವುನೆಂದಾ ಬಿಲ್ವೋದಕೇಶ್ವರಂಗೆ ಪೊಡವಟ್ಟಾ ಪ್ರದೇಶದಿಂ ತಳರ್ದು ಗರುಡವಾಹನಂ ಶರದಂಬುವಾಹಸುಭಗನಭೋವೀದಿಯಿಂ ದ್ವಾರಾವತಿಗೆಯ್ತಂದು

ತಳಿಯುತ್ತುಂ [1]ಪೌರನಾರೀಜನದ ವಿಮಲ ಶೇಷಾಕ್ಷತಾನೀಕಮಂ ಕೈ
ಕೊಳುತುಂ ಬಂಧುವ್ರಜಾಶೀರ್ವಚನನಿಚಯಮಂ ಕೇಳುತುಂ ತೂರ್ಯಘೋಷಂ
ಗಳನೊಲ್ದಾಲೋಕಿಸುತ್ತುಂ ಪುರದ ಸಿರಿಯನಂತಃಪುರಸ್ತ್ರೀಯರಂ ಮಂ
ಗಳವಸ್ತುಸ್ತೋಮದಿಂ ರಂಜಿಸುವರಮನೆಯಂ ಪೊಕ್ಕನುತ್ಸಾಹದಿಂದಂ ೩

ವ|| ಅಂತು ಪೊಕ್ಕು ಸುಖಸಂಕಥಾವಿನೋದದಿಂದಿರೆ ಶರತ್ಸಮಯಾನಂತರಂ

[2]ಅಣೆಯರವಾಡಿ ಮೂಡಗಡಲೊಳ್ ತೆರೆಮಾಲೆಯನೆತ್ತಿ ದೇವವಾ
ರಣಕರಶೀಕರೋತ್ಕರಮನಾಂತು ಶಚೀರಮಣಾಭಿಷೇಕವಾಃ
ಕಣನಿಕುರುಂಬಮಂ ತಳೆದು ಬಂದೆಸಗಿತ್ತತಿಶೈತ್ಯಕಾರಣಂ
ಪ್ರಣಯ[3]ವಿಮುಕ್ತ ವಲ್ಲಭವಿದಾರಣವಿಂದ್ರದಿಶಾಸಮೀರಣಂ ೪

ರಾಕ್ಷಸೇಶ್ವರನೊಡನೆ ನಾಶಮಾಡಿ, ಯಮಪುರವನ್ನು ಸೇರುವಂತೆ ಮಾಡಬೇಕು. ಷಟ್ಪುರವನ್ನು ಅಮೋಘ ಬಾಣಾಗ್ನಿಯಿಂದ ಉರಿಸಿ, ನಿನ್ನದೊಂದು ನವೀನ ವಿಜಯ ಕೀರ್ತಿಯನ್ನು ಪಡೆಯಬೇಕು." ಎಂದು ಹೇಳಿದನು. ಮನುಜ ಜನ್ಮ ನಾಟಕಧಾರಿಯೂ ಕೈಟಭಾಂತಕನೂ ಆದ ಕೃಷ್ಣನು "ಹಾಗೆಯೇ ಮಾಡುವೆನು" ಎಂದು, ಬಿಲ್ವೋದಕೇಶ್ವರನಿಗೆ ವಂದಿಸಿ, ಆ ಪ್ರದೇಶದಿಂದ ಹೊರಟು ಗರುಡನನ್ನೇರಿ, ಶರತ್ಕಾಲದ ಮೋಡಗಳಿಂದ ಮನೋಹರವಾದ ಆಕಾಶಮಾರ್ಗದಿಂದ ದ್ವಾರಾವತಿಗೆ ಬಂದನು. ೩. ಪುರನಾರಿಯರ ವಿಮಲ ಶೇಷಾಕ್ಷತೆಯನ್ನು ಕೈಕೊಳ್ಳುತ್ತ ಬಂಧುಗಳ ಆಶೀರ್ವಾದ ವಚನಗಳನ್ನು ಕೇಳುತ್ತ, ಮಂಗಳವಾದ್ಯ ಧ್ವನಿಗಳನ್ನು ಕೇಳುತ್ತ ಪುರದ ಐಶ್ವರ್ಯ ಸೌಂದರ್ಯವನ್ನೂ ಅಂತಃಪುರ ಸ್ತ್ರೀಯರನ್ನೂ ನೋಡುತ್ತ ಮಂಗಳವಸ್ತು ಸಮೂಹದಿಂದ ರಂಜಿಸುವ ಅರಮನೆಯನ್ನು ಸೇರಿದನು. ವ|| ಹಾಗೆ ಸೇರಿ ಸುಖಸಂಕಥಾವಿನೋದದಿಂದ ಇರುತ್ತಿದ್ದನು. ಶರತ್ಕಾಲವಾದ ಬಳಿಕ ೪. ಪೂರ್ವಸಮುದ್ರದಲ್ಲಿ ಚೆನ್ನಾಗಿ ಆಟವಾಡಿ ತೆರೆಯ ಸಾಲನ್ನೆತ್ತಿ ಇಂದ್ರನ ಐರಾವತದ ಸೊಂಡಲಿನ ತುದಿಯ ತುಂತುರುಹನಿಯನ್ನು ಪಡೆದು ಶಚೀರಮಣನ ಅಭಿಷೇಕದ ನೀರಿನ ಹನಿಗಳನ್ನು ತಳೆದು, ಅತಿ ಶೈತ್ಯಕ್ಕೆ ನಿಮಿತ್ತವೂ ವಿರಹಿತರಾದ ಪ್ರಿಯಜನರನ್ನು ಪ್ರಣಯಕಾರಣದಿಂದ ಸೀಳುವುದೂ ಆದ ಪೂರ್ವದಿಕ್ಕಿನ ಗಾಳಿಯು

---

೧. ವಾರನಾರೀಜನದ ತಳಿವ (ಖ) ೨. ಅಣೆಯರಮಾಗಿ ಮೂಡಗಡಲಿಂ (ಖ) ೩. ವಿಯುಕ್ತ (ಖ)

ಹಿಮಮನಲರ್ಚೆ ತೀಡೆ ಪವನಂ ವನಮಾಲೆಗೆ ಪೋಯ್ತು ವಿಭ್ರಮಂ
ಭ್ರಮರನಿಷೇವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಣ್ತ ಕ
ಬ್ಬ್ರಮೃತರಸಾವಿಳಂ ವಿಳಯಮೆಯ್ದಿದುದಬ್ಜವನಾ ನಾಳಿಕೇ
ರಮನವಳಂಬಿಸಿರ್ದುವು [1]ಫಲಂ ರಸಪೂರಿತಮಾಗಿ ಮಾಗಿಯೊಳ್ ೫

ಬಿಟ್ಟು ಸರೋಜಮಂ ಕುವಲಯಕ್ಕಡಿಯಿಟ್ಟುದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷನದೀನದನಿರ್ಝರಾಂಬು ರೂ
ಪಿಟ್ಟುದು ಚಂದ್ರಕಾಂತಹಿಮವಾರಿಗೆ ಚಿಂತಿಸಿ ಚಕ್ಕವಕ್ಕಿ ಸಾ
ಲಿಟ್ಟುದು ಕಣ್ಣ ನೀರನೆನೆ ಮಾಗಿ ಬರಲ್ ಮೊದಲಿಟ್ಟುದೆಂಬಿನಂ ೬

[2]ಜಲಜಲನೊಟ್ಟುತಿರ್ದುದು ನದೀತತಿ ಲೋಧ್ರಲತಾಂತಸೌರಭ
ಕ್ಕಲವರಿಸಿತ್ತು ಮತ್ತಮಧುಪಾಳಿ ರತಿಪ್ರಿಯನಂ ಪ್ರಿಯಂಗು ತ
ನ್ನಲರ್ಗಣೆಯಿಂ ಜಗತ್ತ್ರಯಮುಮಂ ಗೆಲಿಸಿತ್ತೆಳೆವೆಣ್ಣ ಮೆಯ್ಯಕೋ
ಮಲನಖರೇಖೆಯಂತಿರೆರೆಗೆಯ್ಗಳೊಳಾದುವು ಕೂಡೆ ಬೀಳಿಗಳ್ ೭

ಹಿಮವರ್ಷಬಿಂದುಗಳ್ ಸಂ
ಕ್ರಮಿಸಿರೆ ವನತರುನಿಕಾಯದೊಳ್ ನವಮುಕುಳೌ
ಘಮನಾಂತ [3]ಸುರಭಿಜಾತಂ
ಭ್ರಮರಾಳಿಗೆ ಪರಿಮಳಾನುಮಿತಮಾಯ್ತೆತ್ತಂ ೮

ಬಂದು ಬೀಸಿತು. ೫. ಗಾಳಿ ಮಾಗಿಯಲ್ಲಿ ಹಿಮವನ್ನು ಹೆಚ್ಚಿಸಿ ಬೀಸಿದುದರಿಂದ ವನಗಳ ಸಾಲಿನ ಬೆಡಗು ಅಡಗಿತು. ತುಂಬಿಗಳು ನೈದಿಲೆಯನ್ನು ಆಶ್ರಯಿಸಬೇಕಾಯಿತು. ಬಲಿತ ಕಬ್ಬು ಅಮೃತರಸ ಪೂರ್ಣವಾಗಿ ನಲಿಯಿತು. ಕಮಲವನಸಮೂಹವು ಲಯವಾಯಿತು. ರಸಪೂರ್ಣವಾದ ತೆಂಗಿನ ಕಾಯಿಗಳು ತೆಂಗಿನ ಮರವನ್ನು ಅವಲಂಬಿಸಿದುವು. ೬. ಮಾಗಿಯು ಬರಲಾರಂಭವಾಗುತ್ತಲೂ ತುಂಬಿಗಳು ಕಮಲಗಳನ್ನು ಬಿಟ್ಟು ನೈದಿಲೆಗೆ ಅಡಿಯಿಟ್ಟವು. ಜಾಜಿಯ ಹೂ ದಿಕ್ಕುಗಳ ದಡಗಳನ್ನೂ ಸುವಾಸನೆಗೊಳಿಸಿದುವು. ಎಲ್ಲಾ ನದ ನದೀ ಝರಿಗಳ ನೀರೂ ಹೆಪ್ಪುಗಟ್ಟಿತು. ಚಂದ್ರಕಾಂತಶಿಲೆಯ ನೀರಿನಂತೆ ತಣ್ಣಗಿರುವ ಹಿಮದ ನೀರಿನಿಂದ ಚಿಂತೆಗೊಳಗಾಗಿ ಚಕ್ರವಾಕವು ಕಣ್ಣೀರನ್ನು ಸುರಿಸಿತು. ೭. ನದಿಗಳು ಜಲಜಲನೆ ಮೆತ್ತಗೆ ಹರಿಯುತ್ತಿದ್ದವು. ಮದಿಸಿದ ತುಂಬಿಗಳು ಲೋಧ್ರ ಪುಷ್ಪದ ಸುವಾಸನೆಗೆ ಬೇಸರಪಟ್ಟವು. ಪ್ರಿಯಂಗುವು ತನ್ನ ಹೂವಿನ ಬಾಣದಿಂದಲೆ ಮನ್ಮಥನು ಲೋಕತ್ರಯವನ್ನೂ ಜಯಿಸುವಂತೆ ಮಾಡಿತ್ತು. ನವಯುವತಿಯರ ಕೋಮಲವಾದ ಅಂಗದಲ್ಲಿ ಪ್ರಿಯನಿಂದಾದ ಉಗುರಿನ ಗೆರೆಯಂತೆ ಎರೆಯ ಗದ್ದೆಗಳಲ್ಲಿ ಬಿರುಕುಂಟಾಯಿತು. ೮. ಕಾಡಿನ ಮರಗಳ ಗುಂಪಿನಲ್ಲಿ ಹಿಮವು ಸುರಿದು, ಹನಿಗಳು ಮುಚ್ಚಿಕೊಂಡಿದ್ದುದರಿಂದ ಹೊಸ ಮೊಗ್ಗು ಹೂಗಳನ್ನು ಧರಿಸಿರುವ ಸಂಪಗೆಮರಗಳ ಗುಂಪು ತುಂಬಿಗಳ ಗುಂಪಿಗೆ ವಾಸನೆಯಿಂದ

೧. ರಸಂ (ಗ) ೨. ಜಲಜಲನುರ್ಕುತಿರ್ದುದು (ಕಖಗ) ೩. ಸುರಭಿವಾತಂ (ಕಗ) ಸುರಭಿವ್ರಾತಂ (ಖ)

ತಳೆದ ಸುವರ್ಣಭೂಷಣದ [1]ಪೂಸಿದ ಕುಂಕುಮದಿಟ್ಟ ರೋಚನಾ
ತಿಳಕದ ರಾಗದಿಂ ಮದನರಾಗಮೆ ಮೂರ್ತಿಯನಾಂತವೊಲ್ ಮನಂ
ಗೊಳಿಪೆಳವೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ದೆಳವಿಸಿಲಂ ಮನಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ೯

ತಳರ್ದು ಕುಳಾಯದಿಂ ಬದಿರ್ದೆಱಂಕೆಯ ನೀರ್ವನಿಯಂ ತೆರಳ್ದ ತು
ಪ್ಪುಳನೊನೆದಂಟ ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ
ಣ್ಗಳನರೆಮುಚ್ಚಿ ತೋದ ಗಱಿಯಂ ನಸು ಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೊಡ ಮೇಲೆ ದನಿಗೆಯ್ಯುತುಮಿರ್ದುವು [2]ಮುಂಬಗಲ್ವರಲ್ ೧೦

ಪಲ್ಗಿರಿದು ಪುರ್ಬನುರ್ಬಿ ಬೆ
ರಲ್ಗೊನೆಯಿಂ ತುರಿಸಿ ಬರಿಯ ಸೀರ್ದುಪ್ಪುಟ ಬಂ
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ೧೧

ಪೊಱಮಟ್ಟು ತೊಱೆಯ ನಡುವಣ
ಕುಱುವಂಗಳ ಕೆಲದೊಳಿರ್ದು ಕಾದುವು ಬಿಸಿಲಂ
ಮಱೆಗಳ್ ಪಕ್ಕಂಬಿಡದೆಡೆ
ಗಿಱಿದಿರೆ ಕುಂಭೀರಕಮಠಕರ್ಕಟಕಂಗಳ್ ೧೨

ಮಾತ್ರ ಗೋಚರಿಸಿತು. ೯. ತೊಟ್ಟುಕೊಂಡ ಸುವರ್ಣಭೂಷಣದ, ಲೇಪಿಸಿದ ಕುಂಕುಮ ಕೇಸರಿ ಗಂಧದ, ಇಟ್ಟುಕೊಂಡ ಗೋರೋಚನ ತಿಲಕದ ಬಣ್ಣದಿಂದ ಮನ್ಮಥರಾಗವೇ ಮೂರ್ತಿೀಭವಿಸಿದಂತೆ ಮನೋಹರರಾದ ನವಯುವತಿಯರು ಮನೆಯ ಅಂಗಳದ ಚಿನ್ನದ ಜಗಲಿಯಲ್ಲಿ ಕುಳಿತು ಎಳೆ ಬಿಸಿಲನ್ನು ಇಷ್ಟದಿಂದ ಕಾಯಿಸಿಕೊಂಡರು. ಅವರನ್ನು ನೋಡಿ ಮನ್ಮಥನು, ಅಗಲಿದ ಪ್ರಿಯರ ಮೇಲೆ ಕೋಪಿಸಿಕೊಂಡನು. ೧೦. ಹಕ್ಕಿಗಳು ಗೂಡಿನಿಂದ ಹೊರಕ್ಕೆ ಬಂದು, ರೆಕ್ಕೆಯನ್ನು ಬಿಚ್ಚಿ ನೀರ ಹನಿಗಳನ್ನು ಕೊಡವಿ, ಮುದ್ದೆಯಾದ ತುಪ್ಪುಳನ್ನು ಕೊಕ್ಕಿನಿಂದ ಕುಕ್ಕಿ ಸರಿಪಡಿಸಿ, ಬಿಸಿಲಿಗೆ ಇದಿರಾಗಿ ನಿಂತು ಕಣ್ಣುಗಳನ್ನು ಅರೆಮುಚ್ಚಿ, ಒದ್ದೆಯಾದ ಗರಿಯನ್ನು ಸ್ವಲ್ಪ ಜೋಲಿಸಿ, ಮರಗಳ ತುದಿಕೊಂಬೆಯ ಮೇಲೆ ಧ್ವನಿ ಮಾಡುತ್ತ ಮಧ್ಯಾಹ್ನದವರೆಗೂ ಇದ್ದವು. ೧೧. ಅದೊಂದು ಕೋಡಗವು ಮರದ ಕೊಂಬೆಯ ಮೇಲೆ ಕುಳಿತು, ಹಲ್ಲನ್ನು ಕಿರಿದು ಹುಬ್ಬನ್ನು ಹಾರಿಸಿ, ಬೆರಳ ತುದಿಯಿಂದ ಪಕ್ಕೆಯನ್ನು ತುರಿಸಿ, ಪಕ್ಕದ ಸಣ್ಣ ರೋಮಗಳನ್ನು ಉಗುರಿನಿಂದ ಬಾಚಿ, ಬಿಸಿಲನ್ನು ಕಾಯಿಸಿಕೊಂಡಿತು. ೧೨. ಮೊಸಳೆ, ಹಾವು, ಆಮೆ, ಏಡಿಗಳು ತಮ್ಮ ಮರಿಗಳು ಪಕ್ಕವನ್ನು ಬಿಡದೆ ಒತ್ತಾಗಿ ತುಂಬಿಕೊಂಡಿರಲು, ನದಿಯ ಮಧ್ಯದ ದ್ವೀಪಗಳ ಪಕ್ಕದಲ್ಲಿದ್ದು ಬಿಸಿಲನ್ನು ಕಾಯಿಸಿ ಕೊಂಡವು. ೧೩. ಅತ್ಯಂತ ಶೀತಪ್ರಸಾರಕ್ಕೆ ಒಳಗೇ ಹೆದರಿ, ಪೂರ್ವದಿಕ್ಕಿನ ಗಾಳಿಯು

---

೧. ಸೂಸಿದ ಕುಂಕುಮವಿಟ್ಟ (ಕ) ಪೂಸಿದ ಕುಂಕುಮವಿಟ್ಟ (ಖಗ) ೨. ಮುಂಬಗಲ್ವರಂ (ಕ)

ಎಸೆವಿಂದ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತಶೀತ
ಪ್ರಸರಕ್ಕುಳ್ಕಳ್ಕಿ ಮೇಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು
ಟ್ಟಿಸುತುಂ ತೆಂಕಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೊಳ್ ತಣ್ಪನಾಳ್ದಲ್
ಬಿಸಿಲಂ ಬೆಳ್ದಿಂಗಳೆಂದೀಕ್ಷಿಸುವುದು ತರಳೋತ್ತಾನತಾರಂ ಚಕೋರಂ ೧೩

ಇದಿರೊಳ್ ನಿಂದೆಡೆಗಾಲೊಳಿಟ್ಟು ಮಱಿಯಂ ನಿಶ್ಚೇಷ್ಟೆಯಿಂ ಮೇಪುಗೊ
ಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯಂ ಕಂಡಿಸಲ್
ಪದನೆಂದೇೞಲೊಡರ್ಚಿಯುಂ ನಿಜವಪುಸ್ಸಂಕೋಚದಿಂ ಬಿರ್ಚಲಾ
ಱದೆ ಪಟ್ಟಿರ್ದುದು ಕೂಡೆ ಬೇಡವಡೆ ದೇಹಸ್ತಂಭವಾದಂದದಿಂ ೧೪

ಮಱಿಗಳನಿಱುಂಕಿ ಮೋಹದಿ
ನೆಱಂಕೆಯಿಂ ಗೂಡುಗೊಂಡು ಗೂಡಿನೊಳಿರದೇ
ನೊಱಗಿರ್ದುದೊ ಕೂಗದೆ ಕ
ಣ್ದೆಱೆಯದೆ ಕುಕ್ಕುಟಕುಟುಂಬಿನೀನಿಕುರುಂಬಂ ೧೫

ಬೆಳೆದುದು ಹಿಮವರ್ಷದೆ [1]ರಾ
ತ್ರಿಳತೆಯೆನಲ್ ಬಳೆದುವಿರುಳ್ಗಳೊಳ್ ಸುರತಂಗಳ್
ಬಳೆದುವು ದಂಪತಿಶತದೊಳ್
ಬಳೆವಿನೆಗಂ ಮದನನಾಜ್ಞೆಯುಂ ಭುಜಬಲಮುಂ ೧೬

ತಳ್ಳಿದುದರಿಂದ ಪಕ್ಕಕ್ಕೆ ಹೋದಂತೆಯೂ ಅಗ್ನಿಯ ಹತ್ತಿರ ಹೋಗಲು ಇಷ್ಟಪಟ್ಟಂತೆಯೂ ಆಶ್ಚರ್ಯವನ್ನುಂಟುಮಾಡುತ್ತ ಸೂರ್ಯನು ದಕ್ಷಿಣದಿಕ್ಕಿಗೆ ಹೋದನು. ಅವನ ಬಿಸಿಯ ಕಿರಣಗಳು ಮಾಗಿಯಲ್ಲಿ ತಂಪನ್ನು ಪಡೆದುದರಿಂದ ಆ ಬಿಸಿಲನ್ನು ಬೆಳುದಿಂಗಳೆಂದು ಚಕೋರಪಕ್ಷಿಯು ಕತ್ತೆತ್ತಿ ಚೆನ್ನಾಗಿ ತೆರೆದ ಕಣ್ಣಿನಿಂದ ನೋಡುತ್ತಿತ್ತು. ೧೪. ತನ್ನ ಮರಿಯನ್ನು ಕಾಲುಗಳ ನಡುವೆ ಇಟ್ಟುಕೊಂಡು, ಮೇವೂ ಇಲ್ಲದೆ ಚಲಿಸದೆ ಕಣ್ಣನ್ನು ಮುಚ್ಚಿಕೊಂಡು, ಹಿಮಸಮೂಹದಿಂದ ನಡುಗುತ್ತ ಎದಿರಿಗೇ ನಿಂತಿರುವ ಜಿಂಕೆಯನ್ನು ಕಂಡ ಬೇಡರು ಅದನ್ನು ಹೊಡೆಯುವುದಕ್ಕೆ ಇದೇ ಸರಿಯಾದ ಸಮಯವೆಂದು ಏಳಲು ಪ್ರಯತ್ನಿಸಿದರು. ಆದರೆ ಚಳಿಯಿಂದ ದೇಹವನ್ನು ಮುದುರಿಕೊಂಡಿದ್ದ ಅವರು ಮೈಬಿಚ್ಚಿ ಏಳಲಾರದೆ ದೇಹವು ಸ್ತಬ್ಧವಾದಂತೆ ಮಲಗಿಯೇ ಇದ್ದರು. ೧೫. ಮರಿಗಳ ಗುಂಪಿನಿಂದ ಕೂಡಿದ ಕೋಳಿಗಳು ತಮ್ಮ ಮರಿಗಳನ್ನು ರೆಕ್ಕೆಯೊಳಗೆ ಹುದುಗಿಸಿಟ್ಟುಕೊಂಡು, ಮೋಹದಿಂದ ಗೂಡಿನಲ್ಲೇ ಇದ್ದು, ಕೂಗದೆಯೂ ಕಣ್ಣನ್ನೂ ತೆರೆದುಕೊಂಡೂ ಅದೆಷ್ಟು ಹೊತ್ತು ಮಲಗಿಯೇ ಇದ್ದವೋ ಚಳಿಯಿಂದ! ೧೬. ಹಿಮವು ಸುರಿಯುವುದರಿಂದ ರಾತ್ರಿಯೆಂಬ ಬಳ್ಳಿ ಬೆಳೆಯಿತೆನ್ನುವಂತೆ ಚಳಿಗಾಲದ ರಾತ್ರಿಗಳು ಬೆಳಗಿದವು. ಆ ರಾತ್ರಿಗಳಲ್ಲಿ ಸುರತಕ್ರೀಡೆಗಳೂ ಬೆಳೆದವು. ನೂರಾರು ದಂಪತಿಗಳಲ್ಲಿ ಮನ್ಮಥನ ಆಜ್ಞೆಯೂ ತೋಳಿನ ಬಲವೂ ಬೆಳೆಯಿತು.

---

೧. ಧಾತ್ರಿಲತೆಗಳೆನೆ (ಖ)

ಒದವೆ ರಸಂ ವನಾಮಳಕಸಂತತಿ ಕೋಮಳವಾದುದೆತ್ತಲುಂ
ಬದರಫಲಾಳಿ [1]ಪಣ್ತಧರಮಾದುದು ಕುಂಜವನಾಳಿ ನಂಜು ಮು
ಟ್ಟದ ತೆಱನಾದುದುತ್ಪಲಕದಂಬಕ[2]ವಂಬಕಹರ್ಷಕಾರಿಯಾ
ದುದು ಹಿಮಕಾಲಮೀಗ ಶಿಶಿರಾಗಮವಾದ ಬೆಡಂಗಿದೆಂಬಿನಂ ೧೭

ರವಿರುಚಿಯಂ ಹಿಮಾಂಶುರುಚಿಯೆಂದು ಚಕೋರಚಯಂಗಳೀಂಟುತಿ
ರ್ಪುವು ಬಡಬಾಗ್ನಿಯಂ ಪವಳಮೆಂದಿರದಂಬುಚರಂಗಳೊಂದಿ ನಿ
ಲ್ಪುವು ಹರಭಾಳಲೋಚನಮನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮವೆಂದಿಟಿಪನೇವೊಗಟ್ಟೆ ಶಿಶಿರಪ್ರಭಾವಮಂ ೧೮

ಇನಿಸುಗುರ್ವೆಚ್ಚನಪ್ಪುಣಿಸು ಕುಂಕುಮದಣ್ಪೆ ಕದಂಬದಂಬುಲಂ
ಕನಕವಿಭೂಷಣಾಳಿ ಪೊಸಜಾದಿಯ ಪೂ ದವಳಾರವಟ್ಟಱಂ
ಜನಿಯಿಸಲಂಚೆವಾಸುಗಳೊಳೋಪಳ ಪೆರ್ಮೊಲೆವೆಂಕೆಯಿಂದದೇಂ
ತನತನಗಿಕ್ಕಿ ಮೆಟ್ಟಿದುದಗೊ ಭೋಗಿಜನಂ ಶಿಶಿರಾತಿರೇಕಮಂ ೧೯

ವ|| ಅಂತು ಶಿಶಿರದೆಸಕಂ ಮಸುಳೆ

[3]ಧೃತಮಾದ್ಯದ್ವಾಮನಾಂಕದ್ವಿರದ ಮದಜಲಾಮೋದಭಾರಂ ತ್ರಿಕೂಟಾ
ದ್ರಿತಟಾಬ್ಧಿಸ್ವೈರಚಾರಂ ಮಳಯಗಿರಿವಿಹಾರಂ ಚಳತ್ಸಿಂಹಳಸ್ತ್ರೀ
ಶ್ರುತಿಪೂರಂ ತಾಮ್ರಪರ್ಣೀನಿಕಟವನರಟದ್ಭೃಂಗಝೇಂಕಾರವಾಂದೋ
ಳಿತಚೋಳೀತಾರಹಾರಂ ಸುಟಿದುದಭಿನವಂ ದಕ್ಷಿಣಾಶಾಸಮೀರಂ ೨೦

೧೭. ಹಿಮಕಾಲದ ಜತೆಗೆ ಶಿಶಿರವೂ ಬಂದ ಬೆಡಗು ಇದು ಎನ್ನುವಂತೆ ಎಲ್ಲೆಲ್ಲೂ ಕಾಡುನೆಲ್ಲಿಯ ಸಮೂಹವು ರಸವು ಒದಗಿದುದರಿಂದ ಕೋಮಲವಾಯಿತು. ಎಲಚೀಹಣ್ಣಿನ ಗುಂಪು ಕಳಿತು ಕೆಂದುಟಿಯಾಯಿತು. ಕಮಲವನಗಳು ನಂಜುತಾಕಿದಂತೆ ಆದವು. ನೈದಿಲೆಯ ಸಮೂಹವು ಸಂತೋಷಕಾರಿಯಾಯಿತು. ೧೮. ಶಿಶಿರದ ಪ್ರಭಾವವನ್ನು ಏನು ಹೇಳಲಿ? ಬಿಸಿಲನ್ನು ಬೆಳದಿಂಗಳೆಂದು ಚಕೋರಪಕ್ಷಿಗಳು ಪಾನಮಾಡುತ್ತಿರುವುವು. ಬಡಬಾಗ್ನಿಯನ್ನು ಹವಳದ ಬಳ್ಳಿಯೆಂದು ಜಲಚರಗಳು ಜತೆಗಾಗಿ ನಿಲ್ಲುವುವು. ಹರನ ಉರಿಗಣ್ಣನ್ನು ಮನ್ಮಥನು ಕೆಂಪುಗಂಧದ ಬೊಟ್ಟೆಂದುಕೊಂಡು ಲೆಕ್ಕಿಸದಿರುವನು. ೧೯. ಉಗುರು ಬೆಚ್ಚಗಿರುವ ಊಟ, ಕುಂಕುಮಕೇಸರಿ ಗಂಧದ ಲೇಪನ, ಕರ್ಪೂರ ತಾಂಬೂಲ (ಸೇವನೆ), ಸುವರ್ಣಭೂಷಣಗಳು ಹೊಸಜಾಜಿಯ ಹೂ (ಸುಣ್ಣವನ್ನು ಬಳಿದು) ಬೆಳ್ಳಗಿರುವ ಮನೆ, ಇವೆಲ್ಲವೂ ಅಕ್ಕರೆಯನ್ನುಂಟುಮಾಡಿದುದರಿಂದ ಹಂಸ ತೂಲಿಕಾ ತಲ್ಪದಲ್ಲಿ ಪ್ರಿಯೆಯ ದಪ್ಪಮೊಲೆಗಳ ಅಪ್ಪುಗೆಯ ಶಾಖದಿಂದ ಭೋಗಿಜನತೆಯು ಶಿಶಿರಾತಿರೇಕವನ್ನು ತುಳಿದುಹಾಕಿತು. ವ|| ಹಾಗೆ ಶಿಶಿರದ ಕಾರ್ಯವು ಕುಂದಲು ೨೦. ವಾಮನನೆಂಬ ಹೆಸರಿನ ಮದಿಸಿದ ದಕ್ಷಿಣದಿಕ್ಕಿನ ಆನೆಯ ಮದಜಲವನ್ನು ಧರಿಸಿ ಭಾರವಾದ ತ್ರಿಕೂಟಾಚಲದ ಪಕ್ಕದ ಸಮುದ್ರದ ಮೇಲೆ ಸ್ವೇಚ್ಛೆಯಿಂದ ಸಂಚರಿಸಿದ, ಮಲಯಗಿರಿಯಲ್ಲಿ

---

೧. ಪಣ್ತುದರೆಯಾದುದು (ಮೊಲಿ) ೨. ವಂತದು ಹರ್ಷ (ಖ) ೩. ದೃತಮಾದ್ಯತ್ಪುಷ್ಪದಂತೆ (ಖಗ)

ಅಂತು ಬೆಡಂಗನಾಂತ ಕಳಿಕಾನಿವಹಂ ಮೊನೆದೋಱದನ್ನಮ
ಬ್ಜಂ ತಲೆದೋಱದನ್ನಮೊಸೆದನ್ಯಭೃತಂ ದನಿದೋಱದನ್ನಮೋ
ರಂತೆ ವಸಂತದೆಟ್ಟರಮೆ ತೋಱುವವೋಲ್ [1]ತಲೆದೋಱದತ್ತು ವಾ
ಸಂತಿ ವಸಂತದೂತವೆಸರಿಂತಿದು ಸಾರ್ಥಕವಾಗಿ ತೋರ್ಪಿನಂ ೨೧

ತೆಂಕಣಗಾಳಿ ಬೀಸುತಿರೆ ಪಣ್ಣೆಲೆ ಪಣ್ಣನೆ ಬೀೞೆ ನೀರಸ
ತ್ವಂ ಕಿಡೆ ನುಣ್ಪಿನಿಂ [2]ಮೊನಸಿ ನಿಂದೆಲೆಗಂಟೊಡೆದೊತ್ತಿಬತ್ತು ಚೂ
ತಾಂಕುರವೋತಗಲ್ದ ವಧುಗಳ್ಗೆ ವಿಷಾಂಕುರವಂಗಜಂಗೆ [3]ರಾ
ಗಾಂಕುರವುತ್ಕ ಕೋಕಿಲಕುಲಕ್ಕಮೃತಾಂಕುರವಿಂತಿದೆಂಬಿನಂ ೨೨

ಕಲಿಕೆಗಳೆಂಬ ಹರ್ಷಪುಳಕಾವಳಿಯಂ ತಳೆದಿರ್ಪಳಾಮ್ರಕೋ
ಮಲೆ ಮಧುಪಾವಳೀನಿನದಮೆಂಬ ಕಳಧ್ವನಿಯಿಂದೆ ಮಲ್ಲಿಕಾ
ಲಲಿತೆ ಕಡಂಗಿ ಪಾಡಿದಪಳಬ್ಜಿನಿ ತನ್ನ ಪರಾಗಮೆಂಬ ತಂ
ಬುಲಮುಗೆ ನಕ್ಕಪಳ್ ವಿಕೃತಿಯಂ ಮಧುಸಂಗತಿ ಮಾಡದಿರ್ಕುಮೇ ೨೩

ವಿಹರಿಸಿದ, ಸಿಂಹಳಿಯ ಓಲೆಯನ್ನಲುಗಿಸಿದ, ತಾಮ್ರಪರ್ಣೀನದಿಯ ಸಮೀಪದ ವನದಲ್ಲಿ ಸಂಚರಿಸುತ್ತಿರುವ ತುಂಬಿಗಳ ಝೇಂಕಾರದಿಂದ ಕೂಡಿದ, ಚೋಳ ವನಿತೆಯರ ಮುತ್ತಿನ ಹಾರವನ್ನು ತೂಗಾಡಿಸಿದ. ದಕ್ಷಿಣದಿಕ್ಕಿನ ಗಾಳಿಯು ಬೀಸಿತು. ೨೧. ಇನ್ನೂ ಬೇರೆ ಮೊಗ್ಗುಗಳು ಮೊನೆಯನ್ನು ತೋರಿಸದೆಯೂ, ಕಮಲವು ತಲೆಗಾಣಿಸದೆಯೂ, ಸಂತೋಷದಿಂದ ಕೋಗಿಲೆಯು ಕೂಗದೆಯೂ ಇರುವಾಗಲೇ ವಾಸಂತಿಹೂವು, ಬೆಡಗಿನಿಂದ ವಸಂತದೂತಿಯೆಂಬ ತನ್ನ ಹೆಸರು ಅನ್ವರ್ಥವಾಗುವಂತೆಯೂ ವಸಂತದ ಔನ್ನತ್ಯವನ್ನು ತೋರಿಸುವಂತೆಯೂ ಮೊದಲು ತಾನು ಕಾಣಿಸಿಕೊಂಡಿತು. ೨೨. ದಕ್ಷಿಣ ದಿಕ್ಕಿನ ಗಾಳಿ ಬೀಸಿತು, ಹಣ್ಣೆಲೆಗಳು ಪಣ್ಣನೆ ಬಿದ್ದುಹೋದವು. ಮರಗಳ ನೀರಸತ್ವವು ತಪ್ಪಿತು. ಮಾವಿನ ಮರಗಳಲ್ಲಿ ಚಿಗುರುಮೊಗ್ಗು ಮೊನೆಗಾಣಿಸಿ, ಗಂಟೊಡೆದುಕೊಂಡು ಹೊರಗೆ ಚೆನ್ನಾಗಿ ಕಾಣಿಸುವಂತೆ ಚಿಗುರುಂಟಾಯಿತು. ಅದು ಮುಂಚೆ ಪ್ರೀತಿಸಿದ ಪ್ರಿಯರನ್ನು ಆಗಲಿದ್ದ ಯುವತಿಯರಿಗೆ ವಿಷದ ಮೊಳಕೆಯಾಗಿ ಕಾಮನಿಗೆ ರಾಗದ ಮೊಳಕೆಯಾಗಿ ಕೋಗಿಲೆಗಳ ಸಮೂಹಕ್ಕೆ ಅಮೃತದ ಮೊಳಕೆಯಾಗಿ ಕಾಣಿಸುವಂತಿದ್ದಿತು. ೨೩. ಮಾವಿನಮರಗಳೆಂಬ ಕೋಮಲೆಯರು (ಮಧುಸಂಗದಿಂದ) ಮೊಗ್ಗುಗಳೆಂಬ ಸಂತೋಷದ ರೋಮಾಂಚನವನ್ನು ಕಳೆದರು. ಮಲ್ಲಿಕಾ ವನಿತೆಯು ಉತ್ಸಾಹಗೊಂಡು ತುಂಬಿಗಳ ಧ್ವನಿಯೆಂಬ ಕಲನಾದದಿಂದ ಹಾಡಿದಳು. ಕಮಲಿನಿಯು ತನ್ನ ಪರಾಗವೆಂಬ ತಂಬುಲವು ಚೆಲ್ಲುವಂತೆ ನಕ್ಕಳು. ಮಧುಸಂಗತಿಯು (೧ ಮದ್ಯದ ಸಂಪರ್ಕ ೨. ವಸಂತಋತುವಿನ ಸಂಪರ್ಕ) ವಿಕಾರವನ್ನುಂಟುಮಾಡದೆ ಇರುವುದೆ!

---

೧. ನನೆದೋಱದತ್ತು ವಾಸಂತಿವಸಂತದೂತಿವೆಸಱಿಂಬುದು (ಕಗ) ೨. ಸೊಗಸಿ (ಮೊಲಿ) ೩. ರಾಗಾಂಕುರವುದ್ಘ (ಮೊಲಿ)

ಸುಮನೋಬಾಣೇಭಕುಂಭಸ್ಥಳಕಳಿತಕನತ್ಸಾಂದ್ರಸಿಂಧೂರಮುದ್ಯಾ
ನಮಹಾಂಭೋಧಿಪ್ರವಾಳಂ ಮಧುವಿಟಪರಿರಂಭೋತ್ಥಪೃಥ್ವೀಮನೋರಾ
ಗಮಿದೆಂಬೊಂದಂದದಿಂ ರಂಜಿಸಿದುದೆಸೆವ ಪೂಗೆಂಪಿನಿಂ ದಕ್ಷಿಣಾಯಾ
ತಮರುನ್ನ ಸ್ಯೋತ್ತಪಲಾಶಂ ಪ್ರಸವಕೃತಘನಾಳೀಪಲಾಶಂ ಪಲಾಶಂ ೨೪

ತೆಂಬೆಲರೆಂಬ ಸುಯ್ ನಿಮಿರೆ ಮಲ್ಲಿಗೆಯೆಂಬಲರ್ಗಣ್ಗಳೊಳ್ ಕರಂ
ತುಂಬಿಗಳೆಂಬ ಕಾಡಿಗೆಯ ಕಣ್ಬನಿ ಪೊಣ್ಮೆ ಬೆಡಂಗುವೆತ್ತು ಮಾ
ವೆಂಬ ಲತಾಗೃಹಕ್ಕೆ ವನಲಕ್ಷ್ಮಿ ವಸಂತಕನಂ ಪಿಕಸ್ವನಾ
ಡಂಬರೆ ತಾನದೇಂ ಪಿಡಿದು ತಂದಳೊ ಸಪ್ರಣಯಪ್ರಕೋಪದಿಂ ೨೫

ತೀವಿದ ನುಣ್ಗೊನರ್ ಕಿಱುಗೊನರ್ ನಸುಬಲ್ಗೊನರೆಂಬಿವೇೞ್ಗೆವೆ
ತ್ತಾವಗಮೊಳ್ದಳಿರ್ ಪೊಸದಳಿರ್ ನಸುಕೆಂದಳಿರಾಗಿ ತಳ್ತ ನಾ
ನಾವಿಧದಳ್ಗೆಗೊಂಬು ಸೆಳೆಗೊಂಬೆಳಗೊಂಬುಗಳಿಂದಮೊಪ್ಪುವಿ
ಮ್ಮಾವಿನ ಬಳ್ಳಿಮಾವಿನೆಳಮಾವಿನ ಸೊಂಪೆಸೆಗುಂ [1]ವನಾಂತದೊಳ್ ೨೬

ಕಳಿಕೆ ಕೊನರ್ ತಳಿರ್ ಮುಗುಳಲರ್ ಮಿಡಿ ಕಾಯ್ ನಸುದೋರೆ ದೋರೆಪಣ್
ಬಳಸಿರಲಾಗಳಾವ ಪರಿಯಿಂ ನಡೆನೋೞ್ಪೊಡಮಂತೆ ತಾನೆ ಕ
ಣ್ಗಳ ಸಿರಿ ತಾನೆ ರಮ್ಯಮೆನಿಸಿರ್ದು ವಿಯೋಗಿಜನಕ್ಕೆ ವಲ್ಲಭಾ
ವಳಿಗಿದು ಡಾಮರಂ ಮದನತೋಮರಮಾದುದು ಬಂದ ಮಾಮರಂ ೨೭

೨೪. ಇದು ಮನ್ಮಥನ ಆನೆಯ ಕುಂಭಸ್ಥಳದಲ್ಲಿ ಅಂಟಿಕೊಂಡು ಹೊಳೆಯುವ ಒತ್ತಾದ ಸಿಂಧೂರ, ಉದ್ಯಾನವೆಂಬ ಮಹಾಸಮುದ್ರದ ಹವಳ, ವಸಂತನೆಂಬ) ಪಲಾಶ = ಎಲೆ; ಮಾಂಸ* ವಿಟನು ಆಲಿಂಗಿಸಿದುದರಿಂದ ಭೂದೇವಿಯಲ್ಲಿ ಉದಿಸಿದ ಮನೋರಾಗ ಎನ್ನುವಂತೆ ಹೂವಿನ ಕೆಂಪಿನಿಂದ ದಕ್ಷಿಣದಿಕ್ಕಿನ ಗಾಳಿಯು ನೆಟ್ಟ ಉನ್ನತವಾದ ಮುತ್ತುಗದ ಮರವು ತನ್ನ ಹೂವಿಗೆ ಮುತ್ತಿದ ತುಂಬಿಗಳೇ ಎಲೆಯಾಗಿರುವಂತೆ ರಂಜಿಸಿತು. ೨೫. ವನಲಕ್ಷ್ಮಿಯು, ತಂಗಾಳಿಯೆಂಬ ನಿಟ್ಟುಸಿರುಬಿಡುತ್ತ. ಮಲ್ಲಿಗೆಯ ಹೂಗಳೆಂಬ ಹೂಗಣ್ಣಿನಿಂದ ತುಂಬಿಗಳೆಂಬ ಕಣ್ಣುತಪ್ಪಿಸಿದ ಕೂಡಿದ ನೀರನ್ನು ಹೊಮ್ಮಿಸುತ್ತ ಬೆಡಗನ್ನು ಪಡೆದು ಕೋಗಿಲೆಯ ಧ್ವನಿಯ ಆಡಂಬರದಿಂದಲೂ ಪ್ರಣಯಕೋಪದಿಂದಲೂ ಕೂಡಿದವಳಾಗಿ, ವಸಂತನನ್ನು ಮಾವಿನ ಲತಾಗೃಹಕ್ಕೆ ಅದು ಹೇಗೆ ಹಿಡಿದು ತಂದಳೋ! ೨೬. ತುಂಬಿದ ನುಣುಪಾದ ಚಿಗುರು, ಚಿಕ್ಕ ಚಿಗುರು, ಸ್ವಲ್ಪ ದೊಡ್ಡ ಚಿಗುರು ಎಂಬಿವೇ ಏಳಿಗೆಯನ್ನು ಪಡೆದು ಒಳ್ಳೆಯ ಚಿಗುರೆಲೆ ಹೊಸಚಿಗುರೆಲೆ ಸ್ವಲ್ಪಕೆಂಪಾದ ಚಿಗುರೆಲೆಗಳಾಗಿ ತುಂಬಿರುವ ಪಕ್ಕದ ಕೊಂಬೆ, ಬೆತ್ತದಂತೆ ಬಾಗುವ ಕೊಂಬೆ, ಎಳೆಯ ಕೊಂಬೆಗಳಿಂದ ಒಪ್ಪುವ ಇಮ್ಮಾವು ಬಳ್ಳಿಮಾವು ಎಳಮಾವು ಮರಗಳು ವನಮಧ್ಯದಲ್ಲಿ ಸೊಂಪಾಗಿದ್ದವು. ೨೭. ಮೊಗ್ಗು, ಮೊಳಕೆ, ಚಿಗುರು, ಅರಳುಮೊಗ್ಗು, ಹೂವು, ಮಿಡಿಕಾಯಿ, ಬಲಿತ ಕಾಯಿ ದೋರೆ ಹಣ್ಣು ಎಂಬೆಲ್ಲವೂ ಸುತ್ತಲೂ ತುಂಬಿರಲು ಯಾವರೀತಿಯಿಂದ ನೋಡಿದರೂ ತಾನೇ

೧. ವಸಂತದೊಳ್ (ಖ)

* ಎಲೆಯೆಂಬ ಅರ್ಥವನ್ನು ಸ್ವೀಕರಿಸಿ ಅನುವಾದ ಮಾಡಲಾಗಿದೆ (ರಂ).

ನವರತ್ನೋಜ್ವಲನೂಪುರಕ್ವಣಿತವಾಮಾವಾಮವಾಮಾಂಘ್ರಿಸ
ಲ್ಲವಸಂಘಟ್ಟನದಿಂ ತಳಿರ್ತಲರ್ದು ತನ್ನೊಳ್ ತತ್ಪದಾಲಕ್ತಕಾಂ
ಶುವ ಕೆಂಪುಂ ತಳಿರ್ಗೆಂಪುಮುಳ್ಳಲರ ಕೆಂಪುಂ ಸಾಡೆಯುಂ ಚೆಲ್ವುವೀ
ಱುವಿನಂ ಮೂವಡಿಗೆಂಪುವೀಱೆದುದಶೋಕಾನೋಕಹಂ ಚೈತ್ರದೊಳ್ ೨೮

ಲಲನೆಯರುನ್ನತಸ್ತನದ ಸೋಂಕಿನೊಳೀ ತರುವೇ ಪ್ರಮೋದದಿಂ
ಪುಳಕಿತಮಾಯ್ತು ಕಾಂತೆಯರ ಪೆರ್ಮೊಲೆಸೋಂಕಿನೊಳಾವ ಮಾನವರ್
ಪುಳಕಿತರಾಗದಿರ್ಪರೆನೆ ತನ್ವಿಯರುದ್ಧಕುಚಂಗಳೊತ್ತಿನಿಂ
ಬೆಳೆದು ನವಾಂಕುರಂ [1]ಕುರವಕೋತ್ಕರದೊಳ್ ಕರಮೊಪ್ಪಿ ತೋಱುಗುಂ ೨೯

ಹಸಿತಾಂಭೋಜಾಸ್ಯೆಯರ್ ಮುಕ್ಕುಳಿಸಿಯುಗುಳ್ದಿನಂ ಸೀದುವಂ ಸೀದುವಂ ಸೇ
ವಿಸಿ ಸೋರ್ಕಿಂದೀ ಮಹೀಜಂ ತಳೆದು ಪುಳಕಘರ್ಮಾಂಬುಸಂದೋಹಮಂ ಸಂ
ತಸದಿಂ ಪಾಡುತ್ತುಮಿರ್ದತ್ತೆನಿಸಿ ಮುಗುಳ್ಗಳಂ ಪೂಗಳಂ ತಾಳ್ದಿ ಭೃಂಗೀ
ರಸವದ್ಗೇಯಪ್ರಣಾದಾಕುಳ ವಕುಳಕುಳಂ ಚೆಲ್ವುವೆತ್ತಿರ್ದುದೆತ್ತಂ ೩೦

ಸುದತಿಯರ ನಯನಕಾಂತಿಯೆ
ಪುದಿದದಱೊಳ್ ಬಱಿಕ ಪೋಗದಿರ್ದತ್ತೆನೆ ಪೂ
ತಂದು ಪಕ್ಷ್ಮ ಳೇಕ್ಷಣಾಲೋ
ಕದಿನುದ್ಯಾನದ್ರುಮೈಕತಿಲಕಂ ತಿಲಕಂ ೩೧

ಕಣ್ಣುಗಳ ಸಿರಿ, ತಾನೇ ರಮ್ಯ ಎನಿಸಿದ ಫಲಿಸಿದ ಮಾವಿನಮರವು ಅಗಲಿದ ಪ್ರಿಯರಿಗೂ ಕಾಂತೆಯರಿಗೂ ಭಯಂಕರವಾಗಿ ಮನ್ಮಥನ ಗದೆ, ಈಟಿಯಾಗಿತ್ತು. ೨೮. ಸುಂದರಯುವತಿಯ ನವರತ್ನಖಚಿತವಾದ ಕಾಲುಬಳೆಯು ಧ್ವನಿಮಾಡುತ್ತಿರುವ ಎಡಗಾಲಿನ ಸಂಘಟ್ಟನದಿಂದ ಚಿಗುರಿ ಹೂಬಿಟ್ಟು ಆ ಯುವತಿಯ ಅಂಗಾಲಿನ ಅರಗಿನ ರಸದ ಕೆಂಪೂ ಚಿಗುರುಗಳ ಕೆಂಪೂ ಸ್ವಲ್ಪ ಅರಳಿದ ಹೂವಿನ ಕೆಂಪೂ ಚೆನ್ನಾಗಿರಲು ಚೈತ್ರಮಾಸದಲ್ಲಿ ಅಶೋಕವೃಕ್ಷವು ಮೂರು ಮಡಿ ಕೆಂಪನ್ನು ಬೀರುತ್ತ ಹೊಳೆಯುತ್ತಿದ್ದಿತು. ೨೯. ಲಲನೆಯರ ಉನ್ನತ ಸ್ತನದ ಸ್ಪರ್ಶದಿಂದ ಈ ಮರವೇ ಸಂತೋಷದಿಂದ ರೋಮಾಂಚನವನ್ನು ಪಡೆಯಿತು. ಕಾಂತೆಯರ ದಪ್ಪಮೊಲೆಗಳ ಸ್ಪರ್ಶದಿಂದ ಯಾವ ಪುರುಷನು ತಾನೆ ರೋಮಾಂಚನವನ್ನು ಪಡೆಯನು?! ಎನ್ನುವಂತೆ ತರುಣಿಯರ ಸ್ತನಾಲಿಂಗನದಿಂದ ಕುರವಕವೃಕ್ಷ (ಗೋರಂಟಿಮರಗಳಲ್ಲಿ ಹೊಸ ಚಿಗುರುಂಟಾಗಿ ಬಹಳ ಚೆನ್ನಾಗಿ ಕಾಣಿಸುತ್ತಿದ್ದಿತು. ೩೦. ನಗುವ ಕಮಲಮುಖಿಯರು ಮದ್ಯವನ್ನು ಮುಕ್ಕುಳಿಸಿ ಉಗಿದ ಮದ್ಯವನ್ನು ಸೇವಿಸಿದ ಸೊಕ್ಕಿನಿಂದ ಈ ಮರವು ನವಿರೆಂಬ ಬೆವರುನೀರನ್ನು ಪಡೆದು ಸಂತೋಷದಿಂದ ಹಾಡುತ್ತಿದೆಯೆನ್ನುವಂತೆ ಮೊಗ್ಗುಗಳನ್ನೂ ಹೂಗಳನ್ನೂ ಪಡೆದು ತುಂಬಿಗಳ ಧ್ವನಿಯಿಂದ ಕೂಡಿರುವ ಬಕುಳವೃಕ್ಷವು ವನದಲ್ಲಿ ಎಲ್ಲೆಲ್ಲೂ ಚೆಲುವುಳ್ಳುದಾಗಿದ್ದಿತು. ೩೧. ತನ್ನನ್ನು ನೋಡಿದ ಸುಂದರಿಯರ ಕಣ್ಣಿನ ಕಾಂತಿಯು ತನ್ನಲ್ಲೇ ಅಂಟಿ ಕೊಂಡು ಹೋಗದೆ ಇದೆಯೆನ್ನುವಂತೆ, ವನಕ್ಕೆ ತಿಲಕದಂತಿರುವ ತಿಲಕವೃಕ್ಷವು ಒತ್ತಾದ

---

೧. ಕುರವಕೋತ್ಕರದಿಂ (ಕಗ)

ಮನಸಿಜತೇಜದಂಕುರವನಂಗನೃಪಾಂಗನೆ ತೊಟ್ಟ [೧]ಚೆನ್ನಪೂ
ವನವಧುಚೈತ್ರನಂ [೨]ನಿವಳಿಪುಜ್ವಲದೀಪವೆನಲ್ ಕವಲ್ತು ಕಂ
ಪಿನೊಳನಿತುಂ ವನಾಂತರದ ಪೂಗಳ ಕಂಪನದಿರ್ಪಿ ತನ್ನ ಕಂ
ಪನೆ ಮೆಱೆಯುತ್ತುಮಿರ್ಪಲರ[೩]ಜೊಂಪದಿನಂದೆಸೆದತ್ತು ಚಂಪಕಂ ೩೨

ಅನುನಯದಿಂದೆ ಮೂಡಿದ ಪಸುರ್ನನೆ ಬೆಳ್ನನೆಯಪ್ಪ ಪೊಂಗಿ ಬೆ
ಳ್ನನೆ ಮುಗುಳಪ್ಪ [೪]ಬೆಳ್ಮುಗುಳುಮೊಯ್ಯನೆ ಬಲ್ಮುಗುಳಪ್ಪನುಕ್ರಮಂ
ತನಗೆಸೆಯಲ್ ತೊಡಂಬೆ ಕೆಳಗಾಗೆ ಸಿಡಿಲ್ದು [೫]ಮರಲ್ದುರುಳ್ವ ಕಂ
ಪಿನ ಕಣಿ ತುಂಬಿಯಂ ನೆರೆಪುತಿರ್ದುದು ಮಲ್ಲಿಗೆ ಚೈತ್ರಮಾಸದೊಳ್ ೩೩

ಎಲೆಯೆಂಬ ಚೀನದುಳ್ಳುಡೆ
ತೊಲಗಿರೆ ಮಧು ನೆರೆಯೆ ತನ್ನೊಳೊಲವಿಂದೀ ಪಾ
ಟಲಿಗಾಯ್ತಧರದ ಕಱೆಯೆನೆ
ಯಲರ್ಗೆಱಗಿರ್ದಳಿ ವಿರಾಜಿಕುಂ ಪಾಟಲಿಯೊಳ್ ೩೪

ರೆಪ್ಪೆಯ ಕೂದಲು ಉಳ್ಳ ಯುವತಿಯರ ಕಣ್ಣಿನ ನೋಟದಿಂದ ಹೂವನ್ನು ತಳೆಯಿತು. ೩೨. ಮನ್ಮಥತೇಜಸ್ಸಿನ ಮೊಳಕೆ, ಮನ್ಮಥಪ್ರಿಯೆ ರತಿಯು ಧರಿಸಿರುವ ಸುವರ್ಣದ ಹೂವು, ವನವನಿತೆಯು ಚೈತ್ರನಿಗೆ ನಿವಾಳಿಸುವ ದೀಪ ಎನ್ನುವಂತೆ ಕವಲೊಡೆದು, ಸುವಾಸನೆಯಿಂದ ವನಾಂತರಾಳದಲ್ಲಿರುವ ಎಲ್ಲಾ ಹೂಗಳ ಸುವಾಸನೆಯನ್ನು ಹಿಮ್ಮೆಟ್ಟಿಸಿ, ತನ್ನ ಸುವಾಸನೆಯನ್ನೇ ಮೆರೆಸುತ್ತಿರುವ ಹೂಗೊಂಚಲುಗಳಿಂದ ಸಂಪಗೆಯು ಚೆನ್ನಾಗಿ ಕಾಣಿಸಿತು. ೩೩. ನಮ್ರತೆಯಿಂದ ಉದಿಸಿದ ಹಸುರುಮೊಗ್ಗು ಬಿಳಿಯ ಮೊಗ್ಗಾಗಿ, ಅದು ಉಬ್ಬಿ ದಪ್ಪ ಮೊಗ್ಗಾಗುವ, ಬಿಳಿಯ ದಪ್ಪಮೊಗ್ಗು ಬೇಗ ಅರಳುಮೊಗ್ಗಾಗುವ ಆ ಬಿಳಿಯ ಅರಳುಮೊಗ್ಗು ಹೂವಾಗುವ ಅನುಕ್ರಮವು ನಡೆಯುತ್ತಿರಲು, ಗೊಂಚಲು ಕೆಳಮುಖವಾದಾಗ ಚೆನ್ನಾಗಿ ಅರಳಿಬೀಳುವ ಸುವಾಸನೆಯ ಗಣಿಯಾದ ಮಲ್ಲಿಗೆಯು ಚೈತ್ರಮಾಸದಲ್ಲಿ ತುಂಬಿಗಳನ್ನು ತನ್ನ ಹತ್ತಿರ ಕೂಡಿಸುತ್ತಿದ್ದಿತು. ೩೪. ಎಲೆಯೆಂಬ ಚೀನಾಂಬರದ ಉಡಿಗೆಯು ಕಳೆದು ಹೋದ, ಪುಷ್ಪವತಿಯಾದ ಪಾದರಿಯೊಡನೆ ಪ್ರೀತಿಯಿಂದ ಮಧುವು ೧ ವಸಂತಋತು ೨ ಮಕರಂದ ಸೇರಿದನು. ಆಗ ಅವನಿಂದಾದ ಅವಳ ತುಟಿಯ (ಚುಂಬನದ) ಗಾಯದ, ಕರೆಯೆನ್ನುವಂತೆ ಹೂವಿಗೆ ಮಕರಂದಕ್ಕಾಗಿ ಮುತ್ತಿದ್ದ ತುಂಬಿಯು ಚೆನ್ನಾಗಿ ಕಾಣಿಸುತ್ತಿದ್ದಿತು.

೧. ಚೆನ್ನಪೂ (ಕಖ) ೨. ನೆವಳಿಪುಜ್ವಲ (ಕಗ) ೩. ಜಂಪಕದಿಂದೆಸೆದತ್ತು (ಖ) ೪. ಬೀಗಿ ಮುಗುಳೊಯ್ಯನೆ (ಖ) ೫. ಮರಲ್ದರಲ್ದು (ಕ) ಮರಲ್ದರಲ್ವ (ಖ)

[1]ಚಿರಗಂಧವಲ್ಲದಿರೆಯಿರೆ
ಕೊರಗುವುವೀ ಕ್ಷಣಿಕಭೋಗಕುಸುಮಂಗಳವೇ
ದೊರೆ ಮಿಕ್ಕುವೆಂದು ನಗುವಂ
ತಿರೆ ಬಿರಿದುವು ಸುರಯಿ ಬಿರಯಿಯೆರ್ದೆ ಬಿರಿವಿನೆಗಂ ೩೫

ಸೊವಡಿಂಗೆ ಮುಸುಕಿದಳಿ ಮು
ದ್ರೆವೊಲಿರೆ ಮದನನ ಸುಗಂಧಭಂಡಾರದವೋಲ್
ನವಸೌರಭಮಂ [2]ತಾಳ್ದಿ
ರ್ದುವು ಸೇವಂತಿಗೆ ವಸಂತಸಮಯೋತ್ಸವದೊಳ್ ೩೬

ಚಿತ್ತಭವನಂಗರಾಗದ
ಕತ್ತುರಿ ತೀವಿರ್ದ ಪೊನ್ನ ಬಟ್ಟಲ್ಗಳೆನಲ್
ಮತ್ತಾಳಿ ಮುಸುಕಿ ನಿಲಲೆಸೆ
ಯುತ್ತಿರ್ದುವು ಕರ್ಣಿಕಾರಕುಸುಮಚಯಂಗಳ್ ೩೭

ಸೊನೆವನಿಚಂಚುವಿಂ [3]ಪನಿಯೆ ಮಾಂಗೊನರಂ ನಸುಗರ್ಚೆ ಸೊರ್ಕಿನಿಂ
ತನು ದಳವೇಱೆ ಕಂಠವಿವರಂ ತೊವರೇಱೆ ಪಟುತ್ವವೇಱೆ ಕಾ
ಮನ ನನೆಯಂಬುಗಳ್ ವಿರಹಿವೃಂದದ ಮೆಲ್ಲೆರ್ದೆಯಂ ಪುಗಲ್ ನಿಜ
ಧ್ವನಿ ಬಗೆಯಂ ಪುಗಲ್ ಬಿಡೆ [4]ಪುಗಲ್ ಪುಗಲೆಂದುದು ಕೋಕಿಲವ್ರಜಂ ೩೮

೩೫. ಸ್ಥಿರವಾದ ಸುಗಂಧವಿಲ್ಲದೆ ಹೋಗುವುದರಿಂದ ಈ ಕ್ಷಣಿಕಭೋಗಕ್ಕೋಸ್ಕರ ಇರುತ್ತ ಕೊರಗುವ ಬೇರೆಯ ಹೂಗಳು ನನಗೆ ಯಾವ ಸಮ! ಎಂದು ನಗುವಂತೆ ಸುರಗಿಯ ಹೂವು ವಿರಹಿಗಳ ಎದೆ ಬಿರಿಯುವಂತೆ ಬಿರಿದವು. ೩೬. ಸೊಗಡಿಗೆ ಮುತ್ತಿದ ತುಂಬಿ ಮುದ್ರೆ ಹಾಕಿದಂತೆ ಇರಲು ವಸಂತಮಹೋತ್ಸವಕಾಲದ ಸೇವಂತಿಗೆ ಹೂಗಳು ಸುಗಂಧವನ್ನು ತುಂಬಿರುವ ಮನ್ಮಥನ ಭಂಡಾರಗಳಂತೆ ಇದ್ದವು. ೩೭. ಬೆಟ್ಟದಾವರೆ ಹೂಗಳು ಮದಿಸಿದ ತುಂಬಿಗಳು ಮುತ್ತಿಕೊಂಡಿದ್ದುದರಿಂದ ಮನ್ಮಥನು ಮೈಗೆ ಹಚ್ಚಿಕೊಳ್ಳುವ ಕಸ್ತೂರಿಯು ತುಂಬಿದ ಬಟ್ಟಲುಗಳಂತೆ ಕಾಣಿಸುತ್ತಿದ್ದವು. ೩೮. ಕೋಗಿಲೆಗಳು ಸೊನೆಯ ಹನಿ ಕೊಕ್ಕಿನಿಂದ ಹನಿಯುವಂತೆ ಮಾವಿನ ಚಿಗುರು ಮೊಳಕೆಯನ್ನು ಸ್ವಲ್ಪ ಕಚ್ಚಿ, ಸೊಕ್ಕಿನಿಂದ ಮೈ ಉಬ್ಬೇರಿ ಗಂಟಲ ನಾಳವು ಒಗರಾಗಿ ಗಂಟಲ ಚುರುಕು ಉತ್ತಮವಾಗಲು, ಆ ಕೋಗಿಲೆಗಳು ಕಾಮನ ಮೊನಚಾದ ಬಾಣಗಳು ವಿರಹಿಗಳ ಮೃದುಹೃದಯವನ್ನು ಹೊಗುವಂತೆಯೂ ತಮ್ಮ ಧ್ವನಿಯು ಮನಸ್ಸಿಗೆ ಹೊಗುವಂತೆಯೂ ಇಂಪಾಗಿ "(ವನವನ್ನು) ಪ್ರವೇಶಿಸಬೇಡಿ, ಪ್ರವೇಶಿಸಬೇಡಿ" ಎಂಬುದಾಗಿ ಪುಗಲ್, ಪುಗಲ್ ಎಂದು ಕೂಗುತ್ತಿದ್ದವು.

---

೧. ಸಿರಿಗಂಧ(ಕಗ) ೨. ಕುಡುತಿರ್ದುವು (ಕಗ) ೩. ಪರಿಯೆ (ಖ) ೪. ಪುಗಿಲ್ ಪುಗಿಲೆಂದುದು (ಕಖಗ)

ತಳಿರಂ ಚಿವುಂಟಿ ಪೂಮಿಡಿ
ಗಳನಿಜಿದೆಂಜಲಿಸಿ ಕಾಯ್ಗಳಂ ಪಣ್ಣ ರಸಂ
ಗಳನೀಂಟಿ ತಂಡತಂಡದೆ
[1]ಗಿಳಿ ಗೆಡೆವರೆ ಗಿಳಿಗಳೆಸೆದುವೆಳಮಾವುಗಳೊಳ್ ೩೯

[2]ಸುರಸಪಲಾಶಪುಷ್ಪಚಯದೊಳ್ ವನಲಕ್ಷ್ಮಿಯ [3]ರತ್ನನೂಪುರ
ಸ್ವರಮೆನೆ ಹೇಮತಾಮರಸದೊಳ್ ಜಳದೇವಿಯ [3]ವಕ್ತ್ರಕೂಜಿತ
ಸ್ವರಮೆನೆ ಮಲ್ಲಿಕಾಮುಕುಳದೊಳ್ ರತಿಕಾಂತನ ಬಾಣಭೀಂಕೃತ
ಸ್ವರಮೆನೆ ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವರಂ ೪೦

ಬೆಳಪೀ ಚಂದ್ರಾಂಶು ಪೂತೀ ವಿಚಕಿಲಮಲೆವೀ ತಂಬೆಲರ್ ಬಗ್ಗಿಪೀ ಕೋ
ಕಿಳವೆನ್ನೊಳ್ ತಾವೆ ಮಾಳ್ಕುಂ ಭುವನಜಯಮನಾಂ [4]ಕೈದುಗೆಯ್ವನ್ನಮೇನೆಂ
ದೆಳಮಾವಂ ನೆಮ್ಮಿ ತನ್ನೋಪಳ ಮೊಲೆಗೆಲನಂ ನೋಡುತುಂ ತುಂಬಿಯಿಂದಂ
ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ ೪೧

ಕಲಿಕಾಸಂವೀತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿಕಂಕೆ
ಲ್ಲಿಲತಾಂತಾಕ್ರಾಂತವಾಸಂತಿಕವೆಸೆದುದು ಯೋಗಿವ್ರಜಸ್ವಾಂತಕುಂತಂ
ವಿಲಸನ್ಮಲ್ಲೀಲತಾಂತಂ ರಟದಳಿಪಟಲಾಕ್ರಾಂತಮಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಂತುಕಾಂತಂ ವಸಂತಂ ೪೨

೩೯. ಎಳೆ ಮಾವಿನ ಮರಗಳಲ್ಲಿ ಜೋಡಿಯಾದ ಗಿಳಿಗಳ ಹಲವು ತಂಡಗಳು, ಮಾವಿನ ಚಿಗುರನ್ನು ಜಿಗುಟಿ ಹೂಮಿಡಿಗಳನ್ನು ಕೊಕ್ಕಿನಿಂದ ಕುಕ್ಕಿ, ಕಾಯಿಗಳನ್ನು ಕಚ್ಚಿ ಎಂಜಲು ಮಾಡಿ, ಹಣ್ಣುಗಳ ರಸವನ್ನು ಕುಡಿದು ಶೋಭಿಸುತ್ತಿದ್ದವು. ೪೦. ಮಕರಂದದಿಂದ ಮದಿಸಿದ ತುಂಬಿಗಳ ಇಂಪಾದ ಗಾನವು, ಸುರಸಭರಿತವಾದ ಮುತ್ತುಗದ ಹೂಗಳಲ್ಲಿ ವನಲಕ್ಷ್ಮಿಯ ರತ್ನದ ಕಾಲುಬಳೆಗಳ ಧ್ವನಿಯಂತೆಯೂ, ಹೊಂದಾವರೆಹೂಗಳಲ್ಲಿ ಜಳದೇವಿಯ ಕಂಠಗಾನಸ್ವರದಂತೆಯೂ ಅರಳುತ್ತಿರುವ ಮಲ್ಲಿಗೆಹೂಗಳಲ್ಲಿ ರತಿಕಾಂತನ ಬಾಣದ ಭೀಂಕಾರದಂತೆಯೂ ಹೊಮ್ಮುತ್ತಿದ್ದಿತು. ೪೧. ಚೈತ್ರಮಾಸದಲ್ಲಿ ಅವನ ಮಿತ್ರನಾದ ಮನ್ಮಥನು "ಬೆಳಗುವ ಈ ಚಂದ್ರಿಕೆಯೂ, ಅರಳಿದ ಹೂಗಳೂ, ಬೀಸುವ ಈ ತಂಗಾಳಿಯೂ ಕೂಗುವ ಕೋಗಿಲೆಯೂ ತಾವು ತಾವೇ ನನಗೆ ಲೋಕಜಯವನ್ನುಂಟು ಮಾಡುವುವು. ನಾನು ಆಯುಧವನ್ನು ಹಿಡಿಯಬೇಕಾದುದೇ ಇಲ್ಲ" ಎಂದು ಎಳೆ ಮಾವಿನ ಮರವನ್ನು ಒರಗಿಕೊಂಡು, ತನ್ನ ಪ್ರಿಯೆ ರತಿಯ ಸ್ತನ ತಟಗಳನ್ನು ನೋಡುತ್ತ ತುಂಬಿಯಿಂದಲೂ ಗಿಳಿಯಿಂದಲೂ ತನ್ನ ವೀರತ್ವವನ್ನು ಹಾಡಿ ಹೊಗಳಿಸುವನು. ೪೨. ಮೊಗ್ಗುಗಳಿಂದ ತುಂಬಿದ ಮಾವಿನ ಮರಗಳೂ ಅರೆಬಿರಿದ ಮೊಗ್ಗುಗಳಿಂದ ಕೂಡಿದ ವಕುಳದ ಗಿಡವೂ ಚಿಗುರುಗಳಿಂದ ಹೆಚ್ಚಾಗಿ ಹೊಳೆಯುವ ರಕ್ತಾಶೋಕವೂ, ಹೂಗಳಿಂದ

---

೧. ಗಟಿಪೆಡೆವರೆ ೨. ಸರಸವಿಕಾಸಪುಷ್ಪ (ಕ) ಸರಸವಿಲಾಸಪುಷ್ಪ (ಗ) ೩. ರತ್ನ (ಕಗ) ೪. ಕೈದುಗೊಳ್ವನ್ನ ಮೇಕೆಂ (ಖ)

ವ।। ಆ ವಸಂತದೊಳ್ ವನವಿಲಾಸಮನಱಿಪಲೆಂದು ಸುಪ್ರಸ್ತಾವದೊಳಾಸ್ಥಾಯಿಕೆಯಂ ಪೊಕ್ಕು

ಸುರುಚಿರಚಂಪಕಪ್ರಸವಕಾಂಚನಪುಷ್ಪಚಯಂಗಳಂ ಮನೋ
ಹರವನಮಲ್ಲಿಕಾಮುಕುಳಸಂಕುಳನಿರ್ಮಳಮೌಕ್ತಿಕಾಕ್ಷತೋ
ತ್ಕರಮನುಪೇಂದ್ರಪಾದದುಪಭೂಮಿಗೆ [1]ಸೂಸಿದನುತ್ಸಹಂ ಪೊದ
ಳ್ದಿರೆ ವನಪಾಲಕಂ [2]ನತಿಚಳಾಳಕನುದ್ಗತರೋಮಜಾಳಕಂ ೪೩

ವ।। ತದನಂತರಂ

ಕುರವಕದಂಕುರಂ ತಿಲಕದುಜ್ಜ್ವಲಪುಷ್ಪವಶೋಕದೊಳ್ದಳಿರ್
[3]ಮರುಗದ ನುಣ್ಗೊನರ್ ದವನದೊಳ್ಕುಡಿ ಮಾವಿನ ಕೆಂದಳಿರ್ ನವಾಂ
ಬುರುಹದ ಮೊಗ್ಗೆ ಸಂಪಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ
ಮುರರಿಪುಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ೪೪

ವನಲಕ್ಷ್ಮಿಗೆ ಮಧುವಿಂ ಯೌ
ವನಲಕ್ಷ್ಮಿ ಪೊದಟ್ಟು ರಂಜಿಸಿರ್ದಪುದಾ ನಂ
ದನಲಕ್ಷ್ಮಿಗೆ ಭೋಗಾನಂ
ದನಲಕ್ಷ್ಮಿಯನುಂಟು[4]ಮಾಡು ನಿಜಸಂಗತಿಯಂ ೪೫

ತುಂಬಿದ ಮಾಧವೀಲತೆಯೂ ಹೊಳೆಯುವ ಅರಳಿದ ಮಲ್ಲಿಗೆಹೂವಿನ ಬಳ್ಳಿಯೂ ಝೇಂಕರಿಸುತ್ತಿರುವ ತುಂಬಿಗಳೂ ದಿಗಂತಗಳನ್ನು ಹೆಚ್ಚಾಗಿ ಹೊಳೆಯುವಂತೆ ಮಾಡುವ ಬೆಳದಿಂಗಳೂ ಉಳ್ಳುದಾಗಿ ಸಕಲಜಗತ್ತನ್ನೂ ಜಯಿಸಿದ ಮನ್ಮಥನಿಂದ ಮನೋಹರವಾಗಿ ಯೋಗಿಗಳ ಹೃದಯಕ್ಕೆ ಕುಂತಾಯುಧವಾಗಿರುವುದೂ ಆದ ವಸಂತಕಾಲವು ಮನೋಹರವಾಗಿದ್ದಿತು. ವ।। ಆ ವಸಂತದಲ್ಲಿ ವನದ ಸೊಬಗನ್ನು ಅರಿಕೆ ಮಾಡಬೇಕೆಂದು ಸುಸಂದರ್ಭದಲ್ಲಿ ಸಭೆಯನ್ನು ಹೊಕ್ಕು ೪೩. ಬಹಳ ಚೆನ್ನಾಗಿರುವ ಸಂಪಿಗೆ ಹೂಗಳೆಂಬ ಚಿನ್ನದ ಹೂಗಳನ್ನೂ ಮಲ್ಲಿಗೆಯ ಮೊಗ್ಗುಗಳೆಂಬ ನಿರ್ಮಲವಾದ ಮುತ್ತಿನ ಅಕ್ಷತೆಗಳನ್ನೂ ಕೃಷ್ಣನ ಪಾದ ಸಮೀಪಕ್ಕೆ ಎರಚಿದ ಅವನ ಪಾಲಕನು ಉತ್ಸಾಹದಿಂದ ರೋಮಾಂಚನವುಳ್ಳವನಾಗಿ ತಲೆಬಾಗಿ ನಮಿಸಿದನು. ವ।। ಆಮೇಲೆ ೪೪. ಗೋರಂಟೆಯ ಮೊಳಕೆ, ತಿಲಕದಹೂ, ಅಶೋಕದ ಒಳ್ಳೆಯ ಚಿಗುರು, ಮರುಗದ ಕುಡಿ, ದವನದ ಕುಡಿ, ಮಾವಿನ ಕೆಂಚಿಗುರು, ಹೊಸ ತಾವರೆಯ ಮೊಗ್ಗು, ಸಂಪಗೆಯಹೂ, ಸುರಹೊನ್ನೆಯ ಹೂ ಇವುಗಳನ್ನು ಕೃಷ್ಣನಿಗೆ ಕೊಟ್ಟು. ಅವನಿಂದ ಮೆಚ್ಚನ್ನು ಪಡೆದು, ಸಂತೋಷದಿಂದ ಪ್ರಿಯವಾದ ಮಾತನ್ನು ಆಡಿದನು. ೪೫. "ವನಲಕ್ಷ್ಮಿಗೆ ವಸಂತನಿಂದ ಯೌವ್ವನ ಶ್ರೀಯುಂಟಾಗಿದೆ. ನಂದನ ಲಕ್ಷ್ಮಿಗೆ ನಿನ್ನ ಸಂಪರ್ಕದಿಂದ ಭೋಗಾನಂದ ಲಕ್ಷ್ಮಿಯನ್ನು

೧. ಸೂಸಿದನುತ್ಸವಂ (ಕಖ) ೨. ವಿನತಜಾಲಕ (ಖ) ೩. ಮರುವದ (ಕಗ) ೪. ಮಾಡಿ (ಕಗ)

ತರಳಾಪಾಂಗದ ಬೆಳ್ಪು [1]ಕೆಂದಳದ ಕೆಂಪೋರೊರ್ಮೆ ಪೊಣ್ಮಲ್ ತಳಿ
ರ್ಮರನುಂ ಪೂಮರನಾಗೆ ಪೂಮರನುಮಂತಾ ಬೇಗದಿಂದಂ ತಳಿ
ರ್ಮರನಾಗುತ್ತಿರೆ ಭಿನ್ನಸೃಷ್ಟಿವಡೆಯುತ್ತುಂ ಯಾನವಾಚಾಳಿತಾ
ಭರಣಂ ನಿನ್ನಬಲಾಳಿ ಪೂದಿಡೆವುದಂ ನೋಡಿಂ ವನಕ್ರೀಡೆಯೊಳ್ ೪೬

ವ।। ಎಂದು ಬಿನ್ನವಿಸಲದಂ ಮನದೆ ಕೊಂಡು

ತೆಗೆಯುತ್ತುಂ ಮೇಲುದಂ ಪೆರ್ಮೊಲೆಗೆ ಪರಿಜೆಯಂ ಹಸ್ತದಿಂದೊತ್ತುತುಂ ಸಾ
ವಗಿಸುತ್ತುಂ ಜೋಲ್ದ ಧಮ್ಮಿಲ್ಲಮನಳವಡಿಸುತ್ತುಂ ಕುರುಳ್ದೊಂಗಲಂ ನೀ
ವಿಗೆ ಕಾಂಚೀದಾಮಮಂ ಸಾರ್ಚುತುಮಬಲೆಯರೋರೊರ್ವರೊಂದೊಂದು ಪಾಂಗಿಂ
ಬಗೆಗೊಂಡೇೞ್ವನ್ನೆಗಂ ತನ್ನೊಡನೆ ಹರಿ ವನಕ್ರೀಡೆಗೆಂದೆೞ್ದನಾಗಳ್ ೪೭

ಪಣ್ಣುಗೆಯ ರತ್ನಚಯದಿಂ
ಕಣ್ಣುಳ್ಕೆ ಜಗಂ ತಟಿಲ್ಲತಾ [2]ಪ್ರಭೆಯಿಂದಂ
ಪಣ್ಣಿ ಗೃಹಾಂಗಣತಟದೊಳ್
ಪಣ್ಣಿರ್ದುದು ಪಟ್ಟವರ್ಧನಂ ಭದ್ರಗಜಂ ೪೮

ವ।। ಆ ದ್ವಿಪೇಂದ್ರಮನುಪೇಂದ್ರನೇಱೆ

ಉಂಟುಮಾಡು. ೪೬. ನಿನ್ನ ಅಬಲೆಯರ ಕಡೆಗಣ್ಣಿನ ಬಿಳುಪೂ ಅಂಗಯ್ಯ ಕೆಂಪೂ ಹೊರಟು ಹರಡುವುದರಿಂದ ವನದಲ್ಲಿ ಚಿಗುರಿರುವ ಮರಗಳು ಹೂಬಿಟ್ಟಿರುವ ಮರಗಳಂತೆಯೂ ಹೂಬಿಟ್ಟಿರುವ ಮರಗಳು ಚಿಗುರಿನಿಂದ ಕೂಡಿದ ಮರಗಳಾಗಿಯೂ ಕಾಣಿಸಿ ತಟ್ಟನೆ ಭಿನ್ನಸೃಷ್ಟಿಯನ್ನು ಪಡೆಯುವಂತೆ ಮಾಡಿ, ಅವರ ಸಂಚಾರದಿಂದ ಆಭರಣಗಳು ಶಬ್ದ ಮಾಡುತ್ತಿರಲು ಅವರು ಹೂ ಕೊಯ್ಯುವುದನ್ನು ವನಕ್ರೀಡೆಯಲ್ಲಿ ನೋಡು." ವ।। ಎಂದು ವಿಜ್ಞಾಪಿಸಿದನು. ಅದನ್ನು ಮನಸ್ಸಿಗೆ ತಂದುಕೊಂಡು ೪೭. ಕೃಷ್ಣನು ವನಕ್ರೀಡೆಗೆ ಹೋಗುವುದಕ್ಕಾಗಿ ಸಭೆಯಿಂದ ಎದ್ದನು. ಅವನೊಡನೆ ಹೋಗುವ ಕುತೂಹಲದಿಂದ ಅಲ್ಲಿದ್ದ ಅಂತಃಪುರದ ಅಬಲೆಯರಲ್ಲಿ ಕೆಲವರು ಮೇಲು ಹೊದಿಕೆಯನ್ನು ದಪ್ಪಸ್ತನಗಳ ಮೇಲೆಳೆದುಕೊಳ್ಳುತ್ತಲೂ ಕೆಲವರು ಮೈಯನ್ನು ಹಸ್ತದಿಂದ ಒತ್ತಿಕೊಳ್ಳುತ್ತಲೂ ಜೋಲುತ್ತಿದ್ದ ಜಡೆಯನ್ನು ಸರಿಮಾಡಿಕೊಳ್ಳುತ್ತಲೂ ಜೋಲುವ ಮುಂಗುರುಳನ್ನು ಮೇಲಕ್ಕೆ ತಳ್ಳಿಕೊಳ್ಳುತ್ತಲೂ ಕೆಲವರು ಒಡ್ಯಾಣವನ್ನು ಸೀರೆಯ ನೆರಿಗಂಟಿಗೆ ಸರಿಯಾಗಿ ಸೇರಿಸುತ್ತಲೂ ಬಗೆ ಬಗೆಯ ರೀತಿಯಿಂದ ಕೃಷ್ಣನ ಜತೆಯಲ್ಲೇ ಎದ್ದರು. ೪೮. ಭದ್ರಗಜವು ಅಂಬಾರಿಯನ್ನು ಹಾಕಿ ರತ್ನಗಳಿಂದ ಅಲಂಕೃತವಾಗಿ ಅರಮನೆಯ ಅಂಗಳದಲ್ಲಿ ಸಿದ್ಧವಾಗಿ ನಿಂತಿದ್ದಿತು. ಆನೆಯ ವಿದ್ಯುತ್‌ಪ್ರಭೆಯಂತಹ ರತ್ನಕಾಂತಿಯಿಂದ ಜನರ ಕಣ್ಣು ಕೋರೈಸಿತು. ವ।। ಆ ಪಟ್ಟದಾನೆಯನ್ನು ಕೃಷ್ಣನು ಏರಿದನು.

---

೧. ಕೆಂದಳಿರ (ಕಗ) ೨. ಭ್ರಮೆಯಿಂದಂ (ಖ)

ವನಕೇಳಿಗೆ ದಿಗ್ವನಿತಾ
ಜನಮುಮನಾಮಂತ್ರಿಪಂತೆ ಘೋರೆಸೆ ತೂರ್ಯ
ಸ್ವನಮಖಿಲಾಂತಃಪುರಕಾ
ಮಿನಿಕುಮಾರಕಸಹಸ್ರಸಹಿತಂ ತಳರ್ದಂ ೪೯

ಎರಲಲೆಪಿಂ ತೆಱಂಬೊಳೆದು [1]ಪೊಂಬಳೆದೊಂಗಲನಾಂತ ಕೌಂಗುಗಳ್
ಗಿರಿವನದಲ್ಲಿ ಪೂಮರಗಳೊಳ್ ನಸುದೋರ್ಪವೊಲಿರ್ಕೆಲಂಗಳೊಳ್
ಕರಿಣಿಯನೇಱೆ ಕೈಟಭವಿರೋಧಿಗೆ ಚಾಮರಮಿಕ್ಕುತಿರ್ಪ ತಾ
ಮರಸದಳಾಕ್ಷಿಯರ್ ಪಿಡಿದ ಬೆಳ್ಗೊಡೆ [2]ಚಂದ್ರಮನಂತೆ ತೋಱುಗುಂ ೫೦

ಕದಳಿಕೆಯ ಪೊಯ್ಲಳಂಬರ
ನದಿಯಿಂ ನೊರೆವಿಂಡು ಬಂದು ಮಂಡಳಿಸಿತ್ತೀ
ರದನಿಯ ಮೇಲೆನೆ ಹರಿಗೊ
ಪ್ಪಿದುದಾನೆಯ ಮೇಲೆ ಪಿಡಿದ ಧವಳಚ್ಛತ್ರಂ ೫೧

ಎತ್ತಿದ ಪೀಲಿಯ ಸತ್ತಿಗೆ
ಮುತ್ತಿನ ಕೊಡೆ ಮೇಘಡಂಬರಂ [3]ಗೆಲೆ ಬನಮಂ
ಮುತ್ತುವ ನಡೆಬನವೆನಿಸಿ ಬ
ರುತ್ತಿರ್ದುದು ಬನಕೆ ಪೆಂಡವಾಸದ ತಂಡಂ ೫೨

೪೯. ವನಕ್ರೀಡೆಗೆ ದಿಗ್ವನಿತೆಯರನ್ನು ಕರೆಯುವಂತೆ ವಾದ್ಯಧ್ವನಿಯು ಭೋರ್ಗರೆಯುತ್ತಿದ್ದಿತು. ಅಖಿಲಾಂತಃಪುರಸ್ತ್ರೀಕುಮಾರಸಹಸ್ರಸಹಿತನಾಗಿ ಕೃಷ್ಣನು ಹೊರಟನು. ೫೦. ಹೊಂಬಾಳೆಯ ಗೊಂಚಲುಗಳನ್ನು ಧರಿಸಿರುವ ಅಡಕೆಯ ಮರಗಳೂ ಗಿರಿವನಗಳ ಹೂವಿನ ಮರಗಳೂ ಗಾಳಿ ಬೀಸುವುದರಿಂದ ಬಾಗಿ ಹೊಳೆಯುತ್ತಿದ್ದರೂ ಸ್ವಲ್ಪ ಮಾತ್ರವೇ ಕಾಣಿಸುವಂತೆ ಕೃಷ್ಣನ ಎರಡು ಪಕ್ಕಗಳಲ್ಲೂ ಹೆಣ್ಣಾನೆಗಳನ್ನೇರಿ ಅವನಿಗೆ ಚಾಮರವನ್ನು ಬೀಸುತ್ತ ಕಮಲದಳಾಕ್ಷಿಯರು ಎತ್ತಿ ಹಿಡಿದಿದ್ದ ಬಿಳಿಯ ಕೊಡೆಗಳು ಚಂದ್ರನಂತೆ ಕಾಣಿಸುತ್ತಿದ್ದವು. ೫೧. ಆನೆಯ ಮೇಲೆ ಕೃಷ್ಣನಿಗೆ ಹಿಡಿದಿರುವ ಬಿಳಿಯ ಕೊಡೆಯು, ಧ್ವಜಪಟದ ಹೊಡೆತದಿಂದ ದೇವಗಂಗಾನದಿಯ ನೊರೆಯ ಹಿಂಡು ಬಂದು ಮಂಡಲಾಕಾರವಾಗಿ ಆನೆಯ ಮೇಲೆ ನಿಂತಿದೆಯೆನ್ನುವಂತೆ ಚೆನ್ನಾಗಿ ಕಾಣಿಸುತ್ತಿದ್ದಿತು. ೫೨. ಎತ್ತಿ ಹಿಡಿದ ನವಿಲುಗರಿಯ ಕೊಡೆಯೂ ಮುತ್ತಿನ ಕೊಡೆಯೂ ಮೇಘಾಡಂಬರವನ್ನು ಗೆಲ್ಲುತ್ತಿರಲು, ವನವನ್ನು ಮುತ್ತುವುದಕ್ಕೆ ಬರುತ್ತಿರುವ ಸಂಚರಿಸುವ ವನವೆನ್ನುವಂತೆ ರಾಣೀವಾಸದ ತಂಡವು ವನಕ್ಕೆ ಬರುತ್ತಿದ್ದಿತು. ವII ಹಾಗೆ ಸಮೀಪಿಸಿ ಬರುತ್ತಿರಲು,

---

೧. ಪೂಮುಡಿದೊಂಗಲನಾಂತು (ಖ) ೨. ದೆಕ್ಕೆಯೊಳೊಪ್ಪಿ ತೋಱಿದರ್ (ಖ) ೩. ತಳೆದ ಬನಂ (ಖ)

ವ॥ ಅಂತೆಯ್ದಿದವರ್ಪಲ್ಲಿ

ನಳಿನೀರೇಣುಗಳಂ ಕಳಲ್ದಲರ್ಗಳಂ ಕೀರಾಳಿನಾದಂಗಳಂ
ತಳೆದೆತ್ತಂ ಪಟವಾಸಮಂ ಕೆದಱುತುಂ ಶೇಷಾಕ್ಷತಾನೀಕಮಂ
ತಳಿಯುತ್ತುಂ [1]ಪರಸುತ್ತುಮೊಯ್ಯನಿದಿರ್ಗೊಳ್ವೊಂದಂದದಿಂ ನಂದನಾ
ವಳಿಯಿಂದಂ ವಸುದೇವ [2]ಸೂನುಗಿದಿರ್ವಂದತ್ತೊಂದು ಮಂದಾನಿಳಂ ೫೩

ವ॥ ಅಂತು ಬಂದ ಗಂಧವಹನಂ ಮನದೆಕೊಂಡು ವನೋಪಕಂಠದೊಳ್ ವೈಕುಂಠ ನಿಭೇಂದ್ರಸ್ಕಂಧದಿಂದವನಿತಳಕ್ಕವತರಿಸಿದಾಗಳ್

ತುಡುಗೆಯ [3]ಬಂಬಲ್ವೆಳಗಿಂ
ಬೆಡಂಗುವಡೆದಂಗಕಾಂತಿಯಂ ತುಡುಕುವಿನಂ
ಪಿಡಿಯಿಂದಿಟಿದಳ್ ಕಾರ್ಮುಗಿ
ಲೆಡೆಯಿಂ ಕುಡುಮಿಂಚು ಘಟಿಲನಿಟಿವವೊಲೊರ್ವಳ್ ೫೪

ವ॥ ಮತ್ತೊರ್ವಳ್

ಕೆಂದಳಿರ್ವೆಱೆದ ನವ[4]ಮಾ
ಕಂದದಿನೆಳಗೊಂಬು ನೆಲಕೆ ಫಳಭರದಿಂ ಜೋ
ಲ್ವಂದದಿನಿಟಿದಳ್ ಕುಚಭರ
ಪದಿಂದಂ ನಡು ಬಳ್ಕೆ ಪೊನ್ನಪಣ್ಣುಗೆವಿಡಿಯಿಂ ೫೫

ತೆಂಗಾಳಿಯಿನಂಶುಕದ ಸೆ
ಱಂಗು ತೆಱಂಬೊಳೆಯೆ ಪಿಡಿಯಿನಿಟಿದಳದೊರ್ವಳ್
ತುಂಗಪುಳಿನಾಗ್ರದಿಂ ಧರೆ
ಗಂಗಜನಿಟಿಪುವ ಸಚೀನಕೇತುಶ್ರೀವೋಲ್ ೫೬

೫೩. ವನದ ಮಂದಮಾರುತವು ತಾವರೆಹೂಗಳ ಧೂಳನ್ನೂ ಬಿದ್ದ ಹೂಗಳನ್ನು ಗಿಳಿಗಳ ಧ್ವನಿಯನ್ನೂ ಧರಿಸಿ, ಎಲ್ಲ ಕಡೆಗೂ ವಸ್ತ್ರಗಂಧಚೂರ್ಣವನ್ನು ಎರಚುತ್ತ ಶೇಷಾಕ್ಷತೆಗಳನ್ನು ತಳಿಯುತ್ತ ಹರಸುತ್ತ ಇದಿರುಗೊಳ್ಳುವಂತೆ ಕೃಷ್ಣನಿಗೆ ಇದಿರಾಗಿ ಬೀಸಿತು. ವ॥ ಹಾಗೆ ಬೀಸಿದ ಸುಗಂಧವಾಯುವನ್ನು ಮೆಚ್ಚಿ ಕೃಷ್ಣನು ವನದ ಹತ್ತಿರ ಆನೆಯ ಹೆಗಲಿನಿಂದ ಭೂಪ್ರದೇಶಕ್ಕೆ ಇಳಿದನು. ಆಗ ೫೪. ತೊಟ್ಟ ಆಭರಣಗಳ ಕಾಂತಿಯಿಂದ ಬೆಡಗನ್ನು ಪಡೆದಿರುವ ಅಂಗಕಾಂತಿಯನ್ನು ತಟ್ಟನೆ ಹಿಡಿದು ಕೊಳ್ಳುವಂತೆ ಒಬ್ಬಳು ಕಪ್ಪುಮೋಡದಿಂದ ಮಿಂಚು ಇಳಿಯುವಂತೆ ಹೆಣ್ಣಾನೆಯ ಮೇಲಿಂದ ತಟ್ಟನೆ ಇಳಿದಳು. ವ॥ ಮತ್ತೊಬ್ಬ ೫೫. ಸ್ತನಭಾರದಿಂದ ಬಳುಕುವ ರಮಣಿಯು ಕೆಂಪು ಚಿಗುರಿನಿಂದ ತುಂಬಿದ ಹೊಸ ಮಾವಿನಮರದ ಎಳೆಯ ಕೊಂಬೆಯೊಂದು ಫಲಭಾರದಿಂದ ನೆಲಕ್ಕೆ ಜೋಲುವಂತೆ, ಚಿನ್ನದ ಅಂಬಾರಿಯಿಂದ ಇಳಿದಳು. ೫೬. ದಕ್ಷಿಣದಿಕ್ಕಿನ ಗಾಳಿಯಿಂದ ಉಟ್ಟ ಬಟ್ಟೆಯ ಸೆರಗು ಹೊಳೆಯುತ್ತಿರುವಲ್ಲಿ ಒಬ್ಬಳು ಸುಂದರಿ ಎತ್ತರವಾದ ಮಳಲುದಿಣ್ಣೆಯಿಂದ

೧. ಪರಪುತ್ತು (ಕಗ) ೨. ಸೂನುಗಿದಿರಂ ಬಂದತ್ತು (ಖ) ೩. ಬಂಬಲ್ವೆಳಗುಂ ಬೆಡಂಗುವಡೆದಂಗಕಾಂತಿಯಿಂ ತುಳ್ಕುವಿನಂ (ಖ) ೪. ಮಾಕಂದದ ಸೆಳೆಗೊಂಬು (ಕಗ)

ಪಿಡಿಯಿಂದಿೞಿದಳ್ ಪೆಱಳೊ
ರ್ಪಿಡಿಯಿಂ ನಡುಸಣ್ಣಮೆನಿಪ ವಧು ಮದನನ ಕೈ
ಪಿಡಿಯಂತೆಸೆದೀಕ್ಷಿಪರಂ
ಪಿಡಿಯಂಬಿಂ ಕಾಮನಾರ್ದು ಸಾರ್ದಿಸುವಿನೆಗಂ ೫೭

ಸ್ಮರಕೃತಕಾಚಲಶಿಖರಾಂ
ತರಲತೆ ಮೇಲ್ವಾಯ್ದುದೊಂದು ಸೋಗೆಯ ಬಣ್ಪಿಂ
ಧರೆಗೆಱಗುವಂತದೊರ್ವಳ್
ವರಾಂಗಿ ಬಿಡುಮುಡಿಯಿನೆಸೆದು ಪಿಡಿಯಿಂದಿೞಿದಳ್ ೫೮

ವ|| ಅಂತು ನಿಜಾಂತಃಪುರತರುಣಿಯರ್ ಕರಿಣಿಗಳಿನಿೞಿಯೆ

ಅಂಗತ ರತ್ನ ಕೌಸ್ತುಭಮಣಿದ್ಯುತಿಪಲ್ಲವಿತಂ ಮುರಾರಿ ಬಂ
ದಂ ಗಮನಶ್ರಮಾಂಬುಕಣಭೂಷಣಮೌಕ್ತಿಕಕುಟ್ಮಳಪ್ರರೂ
ಢಾಂಗವಧೂಜನಂ ಬರೆ ವಿಳಾಸದೆ ಜಂಗಮಕಲ್ಪಭೂರುಹಂ
ಜಂಗಮಕಲ್ಪವಲ್ಲರಿಗಳಿಂ ಪರಿವೇಷ್ಟಿತಮಾಗಿ ಬರ್ಪವೋಲ್ ೫೯

ವ|| ಅಂತು ನಡೆತಂದು

ಸಮದ ಪಿಕಸ್ವನವಾದ್ಯಂ
ಭ್ರಮರೀರವಗೀತವನಿಲಲುಳಿತಲತಾನೃ
ತ್ಯಮೊಡರ್ಚುವಿನಂ ಸಂಗೀ
ತಮನುಪವನರಂಗಮಂ ಮುಕುಂದಂ ಪೊಕ್ಕಂ ೬೦

ಮನ್ಮಥನು ಭೂಮಿಗೆ ಇಳಿಸುತ್ತಿರುವ ಚೀನಾಂಬರಧ್ವಜದಂತೆ ಆನೆಯಿಂದ ಇಳಿದಳು. ೫೭. ಒಂದು ಹಿಡಿಗಿಂತಲೂ ಸಣ್ಣನಡುವಿನವಳೆನಿಸಿಕೊಂಡ ಮತ್ತೊಬ್ಬ ಯುವತಿಯು ಮನ್ಮಥನ ಕನ್ನಡಿಯಂತೆ ಹೊಳೆಯುತ್ತ, ಅವಳನ್ನು ನೋಡಿದವರನ್ನು ಕಾಮನು ತಾನು ಹಿಡಿದಿರುವ ಬಾಣದಿಂದ ಗರ್ಜಿಸಿ ಹೊಡೆಯುವಂತೆ ಹೆಣ್ಣು ಆನೆಯಿಂದ ಇಳಿದಳು. ೫೮. ಅದೊಬ್ಬಳು ವರಾಂಗಿಯು ಮನ್ಮಥನ ಕೃತಕಾಲ ಶಿಖರದ ಲತೆಯೊಂದು ಅದರ ಮೇಲೆ ಧುಮುಕಿದ ಒಂದು ನವಿಲಿನ ಭಾರದಿಂದ ಭೂಮಿಗೆ ಬಿದ್ದಂತೆ, ಬಿಚ್ಚಿದ ಮುಡಿಯುಳ್ಳವಳಾಗಿ ಹೆಣ್ಣಾನೆಯಿಂದ ಇಳಿದಳು. ವ|| ಹಾಗೆ ತನ್ನ ಅಂತಃಪುರದ ತರುಣಿಯರು ಹೆಣ್ಣಾನೆಗಳ ಮೇಲಿನಿಂದ ಇಳಿಯಲು, ೫೯. ಭುಜಕಿರೀಟರತ್ನಗಳ ಮತ್ತು ಕೌಸ್ತುಭಮಣಿಯ ಕಾಂತಿಯೆಂಬ ಚಿಗುರೂ ಗಮನಶ್ರಮದಿಂದ ಉದಿಸಿದ ಬೆವರುನೀರು ಹನಿಗಳೆಂಬ ಮತ್ತು ಭೂಷಣಗಳ ಮುತ್ತುಗಳೆಂಬ ಮೊಗ್ಗುಗಳೂ ಉಳ್ಳ ಕೃಷ್ಣನು, ಭೂಷಣ ರತ್ನ ಮೌಕ್ತಿಕಗಳೆಂಬ ಚಿಗುರುಮೊಗ್ಗುಗಳನ್ನುಳ್ಳ ದೃಢಾಂಗಸುಂದರಿಯರೆಂಬ ಲತೆಗಳೊಂದಿಗೆ ಕಲ್ಪಲತೆಗಳಿಂದ ಕೂಡಿದ ಜಂಗಮಕಲ್ಪವೃಕ್ಷದಂತೆ ಬಂದನು. ವ|| ಹಾಗೆ ಬಂದು ೬೦. ಮದಿಸಿದ ಕೋಗಿಲೆಗಳ ಧ್ವನಿಯೆಂಬ ವಾದ್ಯವೂ ಹೆಣ್ಣು ತುಂಬಿಗಳ ಮಧುರಧ್ವನಿಗೀತವೂ ಗಾಳಿಯಲುಗಿಸುವ ಲತೆಗಳ ನೃತ್ಯವೂ ಮೇಳಿಸಿದ ಸಂಗೀತವು ನಡೆಯುತ್ತಿರುವ

ಸಲ್ಲಲಿತಾಂಗಿಯರ್ ಮಣಿವಿಭೂಷಣಕಾಂತಿಯನೀಕ್ಷಣಾಂಶುವಿಂ
ಪಲ್ಲವಪುಷ್ಪಜಾಳಮನಪೂರ್ವಮನೆಯ್ದೆ [೧]ಕುಜಾಳಿಗೀವನಿ
ತ್ತಲ್ಲದೆ ಕೋಮಲಾಂಘ್ರಿರುಚಿಯಿಂ ನಖರೋಚಿಯಿ[೨]ನಧ್ವವಲ್ಲಿಗಂ
ಪಲ್ಲವಪುಷ್ಪಮಂಜರಿಯನಾಗಿಸುತುಂ ನಡೆದರ್ ವನೋರ್ವಿಯೊಳ್ ೬೧

ವನಮಾಲೆಯೊಳ್ ವಿಹಾರಿಸಿ
ವನಮಾಲೆಯೊಳೆಸಗುವಬ್ಜನೀಮಾರುತನಿಂ
ವನಮಾಲೆ ಪೊಳೆಯೆ ಕೃಷ್ಣಂ
ವನಮಾಲಯಮಾಯ್ತು ಲೀಲೆಗೆಂದೆನೆ ಸುಟಿದಂ ೬೨

ವ॥ ಅಂತು ಸುಟಿವಲ್ಲಿ

ಮೊದಲೊಳ್ ತಂಬೆಲರ್ಗಾನೆ ಬೋದಣಿಗೆಗಂಪಂ ಬೀಱಿದೆಂ ಸುಗ್ಗಿ ಬ
ರ್ಪುದನೀ ನಂದನಕಾನೆ ಮುಂದುದೆಗೆದೆಂ ಪುಷ್ಪೇಷುಗಂ ಪುಷ್ಪಬಾ
ಣದ ಮುಂಗಾಣಿಕೆಗೊಟ್ಟೆನಾನೆ [೩]ಪೆಱತೆನ್ನಂತಾದುದೇ ಮ್ಮೆಮೆಗಾ
ಸ್ಪದಮೆಂಬಂತೆವೊಲಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ ೬೩

ವ॥ ಅದಂ ನೋಡಿ ತತ್ಸಮೀಪದೊಳೊಂದು ತುಱುಗಿ ಬಂದ ಮಂದಪವನಪರಿಧೂತಚೂತಮಂ ಕಂಡು

ಉಪವನರಂಗವನ್ನು ಕೃಷ್ಣನು ಪ್ರವೇಶಿಸಿದನು. ೬೧. ಕೃಷ್ಣನ ಸಲ್ಲಲಿತಾಂಗಿಯರು ಮಣಿವಿಭೂಷಣಗಳ ಮತ್ತು ತಮ್ಮ ನೇತ್ರಗಳ ಕಾಂತಿಯಿಂದ ವನದ ವೃಕ್ಷಗಳಿಗೆ ಅಪೂರ್ವವಾದ ಚಿಗುರುಹೂಗಳನ್ನು ಬೇಕಾದಷ್ಟು ನೀಡಿದುದಲ್ಲದೆ ಕೋಮಲವಾದ ಕಾಲಿನ ಕಾಂತಿಯಿಂದಲೂ, ಉಗುರಿನ ಹೊಳಪಿನಿಂದಲೂ ದಾರಿಯ ಬಳ್ಳಿಗಳಿಗೂ ಚಿಗುರು ಹೂಗೊಂಚಲುಗಳನ್ನುಂಟುಮಾಡುತ್ತ ವನಭೂಮಿಯಲ್ಲಿ ನಡೆದರು. ೬೨. ವನದ ಸಾಲಿನಲ್ಲಿ ಸಂಚರಿಸಿ ವಿಹರಿಸಿ ಸರೋವರದ ನೀರಿನ ಮೇಲೂ ಕಮಲಗಳ ಮೇಲೂ ಸುಳಿದು ಬಂದ ಗಾಳಿಯು ಕೃಷ್ಣನ ವನಮಾಲೆಯು ಹೊಳೆಯುವಂತೆ ಮಾಡಿತು. ಈ ವನವು ತನ್ನ ಲೀಲೆಗೆ ನೆಲೆಯಾಯಿತೆಂದು ಕೃಷ್ಣನು ಅಲ್ಲಿ ಸಂಚರಿಸಿದನು. ೬೩. ಇರುವಂತಿಗೆಯು ಮದಿಸಿದ ತುಂಬಿಗಳ ಧ್ವನಿಗಳಿಂದ ತಂಗಾಳಿಗೆ ನಾನೇ ಆರಂಭ ಸುವಾಸನೆಯನ್ನೂ ಬೀರಿದೆನು. ವಸಂತಕಾಲವು ಬಂದುದನ್ನು ನಾನೇ ಈ ನಂದನವನಕ್ಕೆ ಮುಂಚೆ ತೋರಿಸಿದೆನು. ಕಾಮನಿಗೆ ನಾನೇ ಹೂಬಾಣದ ಮುಂಗಾಣಿಕೆಯನ್ನು ಕೊಟ್ಟೆನು. ಬೇರೆ ಯಾವುದು (ಯಾರು) ತಾನೆ ನನ್ನಂತೆ ಈ ಮಹಿಮೆಗೆ ಪಾತ್ರವಾದುದು ಎಂದು

೧. ಕುಜಾಳಿಗಿತ್ತನಿತ್ತಲ್ಲದೆ (ಖ) ೨. ಅಧ್ವರೋಚಿಗಂ (ಖ) ೩. ಪೆಱತೆನ್ನಿಂದಾದುದಾಂ ಮೆಯ್ಮೆಗಾಸ್ಪದಮಾಯ್ತೆಂಬವೊಲಾಯ್ತು (ಖ)

ಸೊನೆಯಿಂ ದಾನಜಲೌಘಮಂ ತೊನೆಪದಿಂ ಕೊಂಬಾಟಮಂ ಕೋಕಿಲ
ಸ್ವನದಿಂ ಬೃಂಹಿತನಾದಮಂ ಮಿಸುಪ ಕೊಂಬಿಂ ಕೊಂಬನಾಟಂದು ಕಾ
ಯ್ಪಿನ ಸೊಂಪಿಂ [೧]ಪೊಳೆವಗ್ರಪಲ್ಲವಮುಮೊಪ್ಪಲ್ ಮಾವಿನೊಳ್ ಪೇಚಿ ಕೈ
ಯನನಂಗದ್ವಿಪದಂತದಿರ್ಪಿದಪುದೀ ಚೂತಂ ವಿಟವ್ರಾತಮಂ ೬೪

ಪಳದಿಂದಂ ಪನಸಾದಿಸತ್ಫಲಮಹೀಜಂ ಪುಷ್ಪದಿಂ ಚಂಪಕಾ
ದಿಳಸತ್ಪುಷ್ಪಕುಜಂ ಪ್ರವಾಳದಿನಶೋಕಾದಿಪ್ರವಾಳಾಂಘ್ರಿಪಂ
ತಳೆಗುಂ ಚೆಲ್ವನದಲ್ಲದಂತು ಫಲದಿಂ ಪುಷ್ಪೌಘದಿಂ ಪಲ್ಲವಾ
ವಳಿಯಿಂ ಕೂಡೆ ವಿಳಾಸಮಂ ತಳೆಗುಮೇ ಚೂತಂಬೊಲನ್ಯದ್ರುಮಂ ೬೫

ವ॥ ಎಂದು ಪೊಗೞೆ [೨]ಕೆಲದೊಳಿರ್ದಶೋಕದ್ರುಮಮನದೊರ್ವಂ ಪಾರ್ಶ್ವವರ್ತಿ ನೋಡಿ

ಸುದತಿಯರಂಘ್ರಿಪಾತದೊಳೆ ಪಲ್ಲವಿಸಿರ್ದನುರಕ್ತವೃತ್ತಿ ಪೆ
ರ್ಚಿದ ಸುಮನಶ್ಶಿಲೀಮುಖವಿಕಾರಮೆ ಈ ತರುರಾಜನೆಮ್ಮೊಳಿಂ
ತಿದು ಸುಮವಾಗಲಾಂ ಸಲೆ ಸಶೋಕನೆನಾದೆನಶೋಕನಾದುದಿಂ
ತಿದು ವಿಪರೀತಮೆಂದು ಪೊಗೞ್ದಿಂ ಪರಿಹಾಸಕನಂದಶೋಕಮಂ ೬೬

ಹೇಳುವಂತೆ ಇದ್ದಿತು. ೬೪. "ಸೊನೆಯಿಂದ ಮದೋದಕವನ್ನೂ ತೂಗಾಟದಿಂದ ಸೊಂಡಿಲಿನ ಚಲನೆಯನ್ನೂ ಕೋಗಿಲೆಯ ಕೂಗಿನಿಂದ ಘೀಂಕಾರಧ್ವನಿಯನ್ನೂ ಹೊಳೆಯುವ ಕೊಂಬೆಯಿಂದ ದಂತವನ್ನೂ ತುದಿಯ ಚಿಗುರಿಂದ ಕೋಪದ ಸೊಂಡಿಲಿನ ತುದಿಯನ್ನೂ ಪ್ರತಿಭಟಿಸುತ್ತ ಇರುವ ಈ ಮಾವಿನ ಮರವು ಮನ್ಮಥನ ಆನೆಯಂತೆ ವಿಟರ ಸಮೂಹವನ್ನು ಕೊಂಬೆಯಿಂದ (ಸೊಂಡಿಲಿನಿಂದ) ಹೆದರಿಸುತ್ತಿದೆ! ೬೫. ಹಣ್ಣಿನಿಂದ ಹಲಸೇ ಮೊದಲಾದ ಒಳ್ಳೆಯ ಹಣ್ಣಿನ ಮರಗಳೂ ಹೂವಿನಿಂದ ಸಂಪಗೆಯೇ ಮೊದಲಾದ ಒಳ್ಳೆಯ ಹೂವಿನ ಗಿಡಮರಗಳೂ ಚಿಗುರಿನಿಂದ ಅಶೋಕವೇ ಮೊದಲಾದ ಒಳ್ಳೆಯ ಚಿಗುರಿನ ಮರಗಳೂ ಚೆಲುವನ್ನು ಪಡೆದಿರುವುವು. ಅಷ್ಟೇ ಹೊರತು ಫಲದಿಂದಲೂ ಪುಷ್ಪದಿಂದಲೂ ಚಿಗುರುಗಳಿಂದಲೂ ಈ ಮಾವಿನಮರದಂತೆ ಒಟ್ಟಿಗೆ ಇನ್ನು ಯಾವ ಮರವಾದರೂ ವಿಲಾಸವನ್ನು ಪಡೆಯುವುದೆ!" ವ॥ ಎಂದು ಹೊಗಳಿದನು. ಪಕ್ಕದಲ್ಲಿದ್ದ ಅಶೋಕವೃಕ್ಷವನ್ನು ಕೃಷ್ಣನ ಪಕ್ಕದಲ್ಲಿದ್ದವನೊಬ್ಬನು ನೋಡಿ, ೬೬. "ಸುಂದರಿಯರ ಕಾಲಿನ ಒದೆತದಿಂದ ರೋಮಾಂಚವನ್ನೂ, ಚಿಗುರನ್ನೂ ಪಡೆದ, (ಅವರಲ್ಲಿ) ಅನುರಕ್ತತೆಯುನ್ನು, ಕೆಂಪಾಗಿರುವಿಕೆಯನ್ನು ಪಡೆದ, ಸುಮನಶ್ಶಿಲೀಮುಖವಿಕಾರವು (= ಪುಷ್ಪ ೧ ಬಾಣದಿಂದ ಆಗಿರುವ ವಿಕಾರ, ೨ ಹೂಗಳಿಗೆ ಮುತ್ತುವ ತುಂಬಿಗಳಿಂದ ಆದ ವಿಕಾರ) ಈ ವೃಕ್ಷರಾಜ (ಅಶೋಕ)ನಲ್ಲೂ ನನ್ನಲ್ಲೂ ಸಮಾನವಾಗಿದೆ, ಆದರೂ ನಾನು ಪೂರ್ತಿಯಾಗಿ ಸಶೋಕನಾಗಿದ್ದೇನೆ. ಇದು ಅಶೋಕನಾಗಿದೆ. ಹೀಗಿರುವುದು ಮಾತ್ರ ಇದಕ್ಕೂ ನನಗೂ ಇರುವ ಭೇದ!" ಎಂದು ಹಾಸ್ಯಗಾರನೊಬ್ಬನು ಅಶೋಕವೃಕ್ಷವನ್ನು ಹೊಗಳಿದನು.

---

೧. ಪೊಡೆವಗ್ರ (ಖ) ೨. ಕೆಲದೊಳಿರ್ದಶೋಕವನದುರ್ಬಂ (ಖ)

ವ|| ಆ ಮಾತಿಂಗೆ ಪೀತಾಂಬರಧರಂ [1]ಸಸ್ಮಿತವದನಾರವಿಂದನಾಗಿ

[2]ಆಸವಗಂಧದ ಬಲಮುಖ
ವಾಸನೆಯೊಳ್ ದೊರೆಯಿದೆಂದು ನೋಡಿದನೊಲವಿಂ
ಕೇಸರಮಂ ಕುಸುಮರಜೋ
ಧೂಸರಮಂ ವನಮಹೀರುಹಾಗ್ರೇಸರಮಂ ೬೭

ವ|| ತದನಂತರಂ

ತರುಣೀಸ್ತನಸಂಗದಿನಂ
ಕುರಿಸಿದ ಕುರವಕನವನಚ್ಯುತಂ ವೀಕ್ಷಿಸಿ ಪೋ
ದಿರುಳೊಗೆದ ರುಕ್ಮಿಣೀಸ್ತನ
ಪರಿರಂಭವನಲ್ಲಿ ನೆನೆದು ಪುಳಕಿತನಾದಂ ೬೮

ಬಿಸರುಹನೇತ್ರೆಯರವ[3]ಲೋ
ಕಸಾಂದ್ರಚಂದ್ರಿಕೆಯನೀಂಟಿ ಮತ್ತದನುದ್ಗಾ
ರಿಸುವಂತೆಸೆದಪುದೆಂದೀ
ಕ್ಷಿಸಿದಂ ಪೂತೆಸೆವ ತಿಲಕಮಂ ಯದುತಿಲಕಂ ೬೯

ಬನದ ವಿಭೂತಿ ತಂಬೆಲರ ಮೆಯ್ಸಿರಿ ತುಂಬಿಯ ಗೀತಶಾಲೆ ಚೈ
ತ್ರನ ತೊಡವೋತಗಲ್ದರೆರ್ದೆದಲ್ಲಣಮೋಪರ ಸೈಪು ಕಾಮನಂ
ಬಿನ ಕಣಿ ಪುಷ್ಪಸಾಯಕನ ಕೀರ್ತಿಯ ಬಿಬ್ತು ಮೊದಲ್ ಮೃಡಾರಿವೀ
ರನ ಜಯಶಕ್ತಿಯೆಂದಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ ೭೦

ವ|| ಆ ಮಾತಿಗೆ ಪೀತಾಂಬರಧರನು ಮುಗುಳುನಗೆಯಿಂದ ಕೂಡಿದ ಮುಖ ಕಮಲವುಳ್ಳವನಾಗಿ, ೬೭. ಹೂವಿನ ಧೂಳಿನಿಂದ ಮಲಿನವಾಗಿ ವನದ ಮರಗಳಲ್ಲಿ ಅಗ್ರಸೇರವಾಗಿರುವ ಒಂದು ಕೇಸರ ವೃಕ್ಷವನ್ನು ಮದ್ಯದ ವಾಸನೆಯಿಂದ ಇದು ಬಲರಾಮನ ಬಾಯಿಯ ವಾಸನೆಗೆ ಸಮವಾಗಿದೆ! ಎಂದು ಪ್ರೀತಿಯಿಂದ ನೋಡಿದನು. ವ|| ಆಮೇಲೆ ೬೮. ತರುಣಿಯ ಸ್ತನಸಂಗದಿಂದ ಚಿಗುರಿದ ಗೋರಂಟಿಯನ್ನು ನೋಡಿ, ಕೃಷ್ಣನು ಕಳೆದ ರಾತ್ರಿಯಲ್ಲಿ ಆದ ರುಕ್ಮಿಣೀಸ್ತನಾಲಿಂಗವನ್ನು ಜ್ಞಾಪಿಸಿಕೊಂಡು ರೋಮಾಂಚನವನ್ನು ಪಡೆದನು. ೬೯. ಕಮಲನೇತ್ರೆಯರ ನೋಟದ ಒತ್ತಾದ ಬೆಳುದಿಂಗಳನ್ನು ಕುಡಿದು ಮತ್ತೆ ಅದನ್ನು ಕಕ್ಕುವಂತಿದೆ. ಎಂದು ಹೂವಿನಿಂದ ತುಂಬಿ ಹೊಳೆಯುವ ತಿಲಕವೃಕ್ಷವನ್ನು ನೋಡಿದನು. ೭೦. ಕೃಷ್ಣನು ಅರಳಿದ ಮಲ್ಲಿಗೆಯನ್ನು "ಇದು ವನದ ಐಶ್ವರ್ಯ, ತಂಗಾಳಿಯ ದೇಹಕಾಂತಿ, ತುಂಬಿಯ ಗೀತಶಾಲೆ, ಚೈತ್ರನ ಆಭರಣ, ಪ್ರೀತಿಸಿ ಅಗಲಿದವರ ಹೃದಯಕ್ಕೆ ಭಯಂಕರ, ಪ್ರಿಯರ ಪುಣ್ಯ, ಕಾಮಬಾಣದ ಗಣೆ, ಪುಷ್ಪಬಾಣನ ಕೀರ್ತಿಯ ಬಿತ್ತನೆಯಲ್ಲಿ ಮೊದಲೆಯ ಬೀಜ, ಶಿವವೈರಿಯಾದ ಮನ್ಮಥನ ಜಯಶಕ್ತಿ" ಎಂದು ಮೆಚ್ಚಿ

೧. ಜಸ್ಮಿತಸ್ವಾಂತನಾಗಿ (ಖ) ೨. ಆಸವಗಂಧದೆ (ಖ) ೩. ಲೋಕಸುಧಾ (ಖ)

ಕಾದಲರಿಷ್ಟಸಿದ್ಧಿಗವಕಾಶಮನೀಯೆ ವಿಕಾಸಮಂಧಕಾ
ರೋದಯಮಂ ವನಾವಳಿಗೆ ಪಿಂಗಿಸೆ ಪಿಂಗಮರೀಚಿ ಬಂಧುರಾ
ಮೋದವತಿಪ್ರಮೋದಮನೊಡರ್ಚೆ ಧರಿತ್ರಿಗೆ ಪೊನ್ನ ಪೂಗೆ ಕಂ
ಪಾದವಲಿರ್ದುದೆಂದು ಪೊಸಸಂಪಗೆಯಂ ಪೊಗಟ್ದಂ ಜನಾರ್ದನಂ ೭೧

ನನೆಕೊನೆವೊಯ್ತು ತನ್ನ ನನೆಯಿಂ [೧]ಮದಮುರ್ವಿಗೆ ತನ್ನ ಪುಷ್ಪದಿಂ
ಮನಸಿಶಯಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು ತನ್ನ ಪ್ಪೂ
ವಿನ ಮಧುವಿಂ ಮದಾಳಿ ಮಧುಪಾಂಕಮನಾಂತುದು ತನ್ನ ಗಂಧದಿಂ
ದನಿಲನೊಳಾಯ್ತು ಗಂಧವಹನತ್ವವದೇಂ ಸುರಹೊನ್ನೆ ಚೆನ್ನನೋ ೭೨

ವ॥ ಎಂದು ಮೆಚ್ಚಿ ಬಿಚ್ಚಳಿಸಿ ಮತ್ತಮನೇಕತರುಗುಲ್ಮಜಾತಿಗಳನತಿಪ್ರೀತಿಯಿಂದಲ್ಲ ಲ್ಲಿಗೆ ನಿರೀಕ್ಷಿಸುತ್ತುಂ ನಡೆತಂದು ವಸಂತರಾಜನೋಲಗದ ಚಿತ್ರಶಾಲೆಯಂತಿರ್ದ ಬಳ್ಳಿ ಮಾವಿನೊಳುಪೇಂದ್ರನಿಂದ್ರಲೀಲೆಯಿಂ ಕುಳ್ಳಿರ್ದನಂ ಪುಷ್ಪಾಪಚಯವಿನೋದಮಂ ನೆಗಟಲೆಂದು

[೨]ಪುಳಿನದ ಬಾಲಪಲ್ಲವದ ಕೋಮಳಶಾಖೆಯ ಚೆಲ್ವನೆಯ್ದೆ ಗೆ
ಲ್ವಳಘಕಟೀತಟಂಗಳರುಣಾಂಘ್ರಿತಳಂಗಳ ದೋರ್ಲತಾಯುಗಂ
ಗಳ ಜಯತೂರ್ಯನಾದಮೆನೆ ಕಾಂಚಿಯ ಮೆಲ್ಲುಲಿ ಗೆಜ್ಜೆಯಿಂಚರಂ
ವಲಯದ ಸುಣ್ಣರಂ ನೆಗಟೆ ನಂದನದೊಳ್ ಸುಟಿದರ್ ಲತಾಂಗಿಯರ್ ೭೩

ನೋಡಿದನು. ೭೧. ಹೊಸಸಂಪಗೆಯ ಹೂವನ್ನು ನೋಡಿ, "ಇದು ಅರಳಿ ಪ್ರಿಯರ ಇಷ್ಟಸಿದ್ಧಿಗೆ ಅವಕಾಶವನ್ನು ಕೊಡುವುದು. ವನಸಮೂಹದ ಕತ್ತಲೆಯನ್ನು ಹೋಗಲಾಡಿಸುವುದು. ಹೊಂಬಣ್ಣದ ಕಾಂತಿಯೂ ಮನೋಹರವಾದ ಸುವಾಸನೆಯೂ ಭೂಮಿಗೆ ಅತಿಸಂತೋಷವನ್ನುಂಟುಮಾಡುವುದು. ಚಿನ್ನದ ಹೂವಿಗೆ ಸುವಾಸನೆಯೂ ಭೂಮಿಗೆ ಅತಿಸಂತೋಷವನ್ನುಂಟುಮಾಡುವುದು. ಚಿನ್ನದ ಹೂವಿಗೆ ಸುವಾಸನೆಯೂ ಒದಗಿದಂತಿದೆ" ಎಂದು ಹೊಗಳಿದನು. ಸುರಹೊನ್ನೆಯನ್ನು ನೋಡಿ, "ಇದರ ಹೂವಿಂದ ಭೂಮಿಗೆ ಮದವು ಹೆಚ್ಚಿ ರೋಮಾಂಚನವಾಯಿತು. ೭೨. ಕಾಮನಿಗೆ ಪುಷ್ಪಬಾಣನೆಂಬ ಹೆಸರು ಪ್ರಕಾಶಿಸಿತು. ಇದರ ಹೂವಿನ ಮಕಕರಂದದಿಂದ ತುಂಬಿಗೆ 'ಮಧುಪ' ಎಂಬ ಹೆಸರು ಬಂದಿತು. ಇದರ ಸುವಾಸನೆಯಿಂದ ವಾಯುವಿಗೆ ಗಂಧವಹನೆಂಬ ಹೆಸರು ಉಂಟಾಯಿತು. ಇದು ಎಷ್ಟು ಚೆನ್ನಾಗಿದೆಯೋ!" ವ॥ ಎಂದು ಮೆಚ್ಚಿ ಹೊಗಳಿ, ಇನ್ನೂ ಅನೇಕ ತರುಗುಲ್ಮಜಾತಿಗಳನ್ನೂ ಅತಿ ಪ್ರೀತಿಯಿಂದ ಅಲ್ಲಲ್ಲೇ ನೋಡುತ್ತ ಬಂದು, ವಸಂತರಾಜನ ಸಭೆಯ ಚಿತ್ರಶಾಲೆಯಂತಿದ್ದ ಬಳ್ಳಿಯೊಡಗೂಡಿದ ಎಳಮಾವಿನ ಕೆಳಗೆ ದೇವೇಂದ್ರನಂತೆ ಕುಳಿತುಕೊಂಡನು. ವನಿತೆಯರು ಹೂಗೊಯ್ಯುವ ವಿನೋದವನ್ನು ಅನುಭವಿಸಲು ಹೊರಟರು. ೭೩. ಮಳಲುದಿಣ್ಣೆಯ, ಎಳೆಚಿಗುರಿನ, ಕೋಮಲವಾದ ಕೊಂಬೆಯ, ಚೆಲುವನ್ನು ಅನುಕ್ರಮದಿಂದ ಗೆಲ್ಲುವ ತಮ್ಮ ಘನನಿತಂಬದ, ಕೆಂಪಾದ ಕಾಲುಗಳ, ತೋಳುಬಳ್ಳಿಗಳ ಮತ್ತು ಜಯದ ತೂರ್ಯಧ್ವನಿಯಂತೆ ಕೇಳಿಸುವ ವಡ್ಯಾಣದ

೧. ಮುದಮುರ್ವಿಗೆ (ಖ) ೨. ಪುಳಿನತಮಾಲಪಲ್ಲವದ (ಕಖಗ)

ದರಹಾಸರುಚಿಶ್ರೀಯೊಳ್
ಬೆರಸಿದ ತನ್ನಧರ[೧]ಕಾಂತಿಯಂತೊಪ್ಪುವುದಂ
ತರಳಾಕ್ಷಿ ಕೊಯ್ದಳಲರೊಳ್
ಬೆರಸಿದ ಮಾಂದಳಿರ ತೋಱದೊಂಗಲನೊರ್ವಳ್ ೭೪

ಉಂಗುಟಮಂ ಮಹೀತಳದೊಳೂಱೆ ಮಡಂ ನಿಮಿರಲ್ಕೆ ನಿಟ್ಟೆನಿಂ
ದಂಗದ ಭಂಗಿ ಕಣ್ಗೊಳಿಸೆ ವಾಮಕರಾಂಚಿತಶಾಖೆ ಶೇಖರ
ಕ್ಕಂಗನೆ ಕೊಯ್ದಳಂದುಸುಕೆಯೊಳ್ಗಳಿರಂ ನಖರಾವಳೀಮಯೂ
ಖಂಗಳೊಡರ್ಚೆ ಕೆಂಪೆಸೆವಶೋಕದೊಳಂ [೨]ಸಿತಪುಷ್ಪಜಾಳಮಂ ೭೫

ವಳಯಝುಣತ್ಕೃತಿ ಪಸರಿಸೆ
ನಳಿತೋಳಂ ನೀಡಿ ನಯನರುಚಿಘನರಕ್ತೋ
ಜ್ವಳತಿಲಕದೊಳ್ ವರಸ್ತ್ರೀ
ತಿಳಕಂ ತಿಳಕಕ್ಕೆ ಕೊಯ್ದಳಲರನದೊರ್ವಳ್ ೭೬

ವಲ್ಲಭನ ತೋಳ [೩]ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ
ನೊಲ್ಲೆಂ ಪೆಱತನೆನುತ್ತುಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದಳದೊರ್ವಳ್ ೭೭

ಮೃದುಧ್ವನಿಯೂ ಕಾಲ್ಗೆಜ್ಜೆಯ ಇಂಪಾದ ಸ್ವರವೂ ಕೈಬಳೆಗಳ ನುಣುಪಾದ ಸ್ವರವೂ ಹರಡುತ್ತಿರಲು, ನಂದನವನದಲ್ಲಿ ಆ ಲತಾಂಗಿಯರು ಸಂಚರಿಸಿದರು. ೭೪. ಒಬ್ಬಳು ತರಳನೇತ್ರೆಯಾದ ಸುಂದರಿ ಮುಗುಳುನಗುವುಳ್ಳ ತನ್ನ ತುಟಿಯಂತೆಯೇ ಹೊಳೆಯುವ ಹೂವಿನಿಂದ ಕೂಡಿರುವ ದೊಡ್ಡ ಮಾವಿನ ಚಿಗುರು ಗೊಂಚಲನ್ನು ಕೊಯ್ದಳು. ೭೫. ಕಾಲ ಹೆಬ್ಬೆರಳನ್ನು ನೆಲದ ಮೇಲೂರಿ ಹಿಮ್ಮಡಿಯನ್ನೆತ್ತಿ ನಿಂತ ರೀತಿಯು ಚೆನ್ನಾಗಿರಲು, ಎಡಗಯ್ಯಿಂದ ಕೊಂಬೆಯನ್ನು ಎಟುಕಿಸಿ ಹಿಡಿದುಕೊಂಡು, ತನ್ನ ಕೈ ಉಗುರುಗಳ ಕಾಂತಿಯು ಕೆಂಪಗೆ ಹೊಳೆಯುವ ಅಶೋಕವೃಕ್ಷದಲ್ಲೂ ಬಿಳಿಯ ಹೂಗಳನ್ನು ಉಂಟುಮಾಡುವಂತೆ ಅದೊಬ್ಬಳು ಯುವತಿ ಮುಡಿದುಕೊಳ್ಳುವುದಕ್ಕಾಗಿ ಅಶೋಕದ ಒಳ್ಳೆಯ ಚಿಗುರನ್ನು ಕೊಯ್ದಳು. ೭೬. ವರವನಿತೆಯರಿಗೆ ತಿಲಕವಾಗಿರುವ ಒಬ್ಬಳು ಸುಂದರಿಯು ಬಳೆಗಳ ಝಣತ್ಕಾರವು ಹರಡುತ್ತಿರಲು ನಳಿತೋಳನ್ನು ನೀಡಿ ತನ್ನ ಕಣ್ಣಿನ ಕಾಂತಿಯಿಂದ ಹೆಚ್ಚು ಕೆಂಪುಳ್ಳದಾಗಿ ಹೊಳೆಯುವ ತಿಲಕವೃಕ್ಷದಲ್ಲಿ ತನ್ನ ತಿಲಕಕ್ಕಾಗಿ ಹೂವನ್ನು ಕಿತ್ತುಕೊಂಡಳು. ೭೭. ಕೋಗಿಲೆಯ ಧ್ವನಿಯಂತೆ ಧ್ವನಿಯುಳ್ಳ ಯುವತಿಯೊಬ್ಬಳು "ನನಗೆ ಪ್ರಿಯನ ತೋಳ ತೆಕ್ಕೆಯೂ ಮಲ್ಲಿಗೆಯ ಹೂವೂ ಎಂದೂ ಕುಂದದಿರಲಿ" ಎಂದೂ "ಬೇರಾವುದನ್ನೂ ನಾನು ಒಲ್ಲೆನು" ಎಂದೂ ಹೇಳುತ್ತ ಮಲ್ಲಿಗೆಯ ಹೂವನ್ನು

---

೧. ಕಾಂತಿಯಿಂತೊಪ್ಪುವುದಂ (ಖ) ೨. ಸಿತಬಾಷ್ಪಜಾಲಮಂ (ಕಗ) ಸ್ಮಿತಪುಷ್ಪಜಾಲಮಂ (ಖ) ೩. ಸೋಂಕೇಂ (ಕ) ಸೋಂಕಿಂ (ಗ)

ಪರಿಮಳಮೆಂಬುದು ಕುಸುಮೋ
ಪರಿಮಳವೆನಿಪಳಿಗಳೆಂಜಲಿತರ[1]ಪ್ರಸವೋ
ತ್ಕರದೊಳೆನುತಬಲೆ ಕೊಂಬಂ
ಕರದೊಳ್ [2]ತೆಗೆದಾಯ್ದಳೆಸಳ ಸಂಪಗೆಯಲರಂ ೭೮

ಇರೆ ಕಂದುವೊಣಗೆ ಸೌರಭ
ಮಿರದಸ್ಥಿರವರ್ಣದಸ್ಥಿರಾಮೋದದ ಮಿ
ಕ್ಕರಲೇಭಂಡಮೆನುತ್ತುಂ
ಸುರಯಿಯ ಬಿಜಿಮುಗುಳನಾಯ್ದಳೊರ್ವಳಲಂಪಿಂ ೭೯

ಈ ತರುವಿಂಗೆ ಮುಂ ನಿಜದೊಳಿಲ್ಲದ ಪಲ್ಲವವಾದುದೀಕೆಯಿಂ
ಕೌತುಕಮೆಂಬಿನಂ ತುಱುಗಿ ಪೂತೆಲೆಯಿಕ್ಕಿದ ಪಾಟಲಾವನೀ
ಜಾತದೊಳಂ ನಿಜಾರುಣಕರದ್ಯುತಿ ಪಲ್ಲವಮಂ ನೆಗಟ್ಚಲೇಂ
ಪ್ರೀತಿಯಿನೊರ್ವಳಾಯ್ದಳೊ ತನೂದರಿ ಪಾದರಿಯೊಳ್ ಲತಾಂತಮಂ ೮೦

[3]ಪಾಸಿನೊಳೆಸಳುದಿರ್ದೊಡದುಂ
ದೇಸೆಗೆನಲ್ ಮುಡಿಗಮಂತೆ ತಾಮಳವಡುಗುಂ
[4]ವಾಸನೆಯನೀವುವೆಂದು ವಿ
ಳಾಸಿನಿ ಪೆಱಳಾಯ್ದಳಲರ್ದ ಸೇವಂತಿಗೆಯಂ ೮೧

ಕೊಯ್ದಳು. ೭೮. ಒಬ್ಬಳು ಅಬಲೆ, "ಇತರ ಎಲ್ಲಾ ಹೂಗಳ ಪರಿಮಳವೂ ಹೂಗಳ ಮೇಲೆ ಕಶ್ಮಲದಂತೆ ಕುಳಿತ ತುಂಬಿಗಳ ಎಂಜಲು" ಎಂದು ಬೇರೆ ಹೂಗಳನ್ನೊಲ್ಲದೆ ಸಂಪಗೆಯ ಮರದ ಕೊಂಬೆಯನ್ನು ಬಾಗಿಸಿ ಎಡಕಯ್ಯಲ್ಲಿ ಹಿಡಿದು ಎಸಳಾದ ಸಂಪಗೆಯ ಹೂವನ್ನು ಆರಿಸಿಕೊಂಡಳು. ೭೯. ಇನ್ನೊಬ್ಬಳು ಇಟ್ಟಿದ್ದರೆ ಬಾಡುವ ಒಣಗಿದರೆ ಸುವಾಸನೆಯೇ ಇಲ್ಲದ ಅಸ್ಥಿರವಾದ ಬಣ್ಣವೂ ಸುವಾಸನೆಯೂ ಉಳ್ಳ ಮಿಕ್ಕ ಹೂಗಳು ಯಾವ ಬೆಲೆಯವು?' ಎಂದು ಸುರಗಿಯ ಬಿರಿಮೊಗ್ಗುಗಳನ್ನೇ ಆರಿಸಿ ಪ್ರೀತಿಯಿಂದ ಕೊಯ್ದಳು. ೮೦. ಒಬ್ಬಳು ಕೃಶೋದರಿ-ಈ ಮರಕ್ಕೆ ಮುಂಚೆ ನಿಜವಾಗಿಯೂ ಇಲ್ಲದೇ ಇದ್ದ ಚಿಗುರು ಈಕೆಯಿಂದ ಉಂಟಾಯಿತು. ಆಶ್ಚರ್ಯ! ಎನ್ನುವಂತೆ, ಎಲೆಗಳು ಉದುರಿಹೋಗಿ, ದಟ್ಟವಾಗಿ ಹೂಬಿಟ್ಟ ಪಾದರೀಮರಗಳಲ್ಲಿ ತನ್ನ ಕೆಂಪಾದ ಕೈಯ್ಯ ಕಾಂತಿಯೆಂಬ ಚಿಗುರನ್ನು ಉಂಟುಮಾಡಬೇಕೆಂದು ಅದೆಷ್ಟು ಪ್ರೀತಿಯಿಂದ ಪಾದರೀಮರದಲ್ಲಿ ಹೂವನ್ನಾರಿಸಿದಳೋ! ೮೧. ಒಬ್ಬಳು ವಿಲಾಸಿನಿ ಹಾಸಿಗೆಯಲ್ಲಿ ಈ ಹೂವಿನೆಸಳು ಉದುರಿದರೆ ಅದೂ ಒಂದು ಬಗೆಯ ಸೊಗಸಿಗೆ ಕಾರಣವಾಗುವುದು. ಅಲ್ಲದೆ ಮುಡಿದುಕೊಳ್ಳುವುದಕ್ಕೂ ಅರ್ಹವಾದುದಾಗಿದೆ. ಸುವಾಸನೆಯನ್ನೂ ಕೊಡುತ್ತದೆ ಎಂದು ಅರಳಿದ ಸೇವಂತಿಗೆಯ ಹೂವನ್ನು ಆರಿಸಿ ಕೊಯ್ದಳು.

---

೧. ಪ್ರಸವೋತ್ಕರಗಳೆನುತಬಲೆ (ಖ) ೨. ತೆಗೆದಾಯ್ದಳೆಸೆವ (ಖ) ೩. ಪಾಸಿನೊಳೆಸಳು ದಿರ್ದೊಡದುಂ ದೇಸೆಗೆನೆಲೆ (ಕ) ಪಾಸಿನೊಳೆಸಳುದಿರ್ದಡದರ್ದುಂ ದೇಸೆಗೆನೆಲೆ (ಖ) ೪. ವಾಸನೆಯಿನಿನಿಯವೆಂದು (ಖ)

ವ॥ ಮತ್ತಮಾ ಸರ್ವರ್ತುಕೋದ್ಯಾನದೊಳೊರ್ವಳ್

ಜಾತಿಗೆ ಪುಷ್ಪಜಾತಿಗಳ ಜಾತಿಯದೇಂ ಸಮಜಾತಿಯಪ್ಪುದೇ
ಜಾತಿಯೆ ಜಾತಿ ಮಿಕ್ಕಲರ ಜಾತಿಯದೇತಱ ಜಾತಿಯೆಂದು ತಾಂ
ಜಾತಿಯ ಜಾತಿಯಂ ಪೊಗೞ್ದು ಜಾತಿವಿಚಾರವಿದಗ್ಧೆ ಕೊಯ್ದಳಾ
ಜಾತಿಯನಾ ವಿಟೀವಿಟವಿಭೂತಿಯನಾ ರತಿರಾಗದೂತಿಯಂ ೮೨

ಗಱಿ ಮೂಡದಿರ್ದೊಡಱಿಯೆಂ
ಗಱಿ ಮೂಡಿದೊಡಾಗಳಂತೆ [1]ತಲೆಗೇಱಿ ಕರಂ
ಮೆಱೆವೀ ಪೊಂಗೇದಗೆಯೊ
ಳ್ಗಱಿ[2]ಗಳ್ ಗಱಿಗಟ್ಟಿ ಮಾಱವೇ ಮಿಕ್ಕಲರಂ ೮೩

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂದಿದಂ ಸೂಡನೆ ಶಂ
ಕರನೆಂದು ಕೊಯ್ದಳೊರ್ವಳ್
ಪರಿಮಳಮಂ ಬೀಱುತಿರ್ಪ ಪೊಂಗೇದಗೆಯಂ ೮೪

ಕಚಬಂಧಂ ಬಿಡುತಂದು ನೀವಿ ಶಿಥಿಲತ್ವಂಬೆತ್ತು ನೀಲಾಲಕ
ಪ್ರಚಯಂ ಸೂಸಿ ಲತಾಂಗಲೇೞೆ ಬೆಮರಂ ತಾಳ್ದಿರ್ದು ಚೀನಾಂಚಲಂ
ಕುಚದೊತ್ತಿಂ ನಸುಜೋಲ್ದು ಕಣ್ಗೆಸೆಯೆ ಬಂದರ್ ಮೂರ್ತಿಶೋಭಾಭರೋ
ಪಚಯ[3]ಶ್ರಾಂತೆಯರಾದವೋಲ್ ವನವಿಹಾರಶ್ರಾಂತೆಯರ್ ಕಾಂತೆಯರ್ ೮೫

ವ॥ ಮತ್ತೂ ಸರ್ವಋತುಗಳ ವೈಭವವೂ ಮೆರೆದಿದ್ದ ಆ ಉದ್ಯಾನದಲ್ಲಿ ಒಬ್ಬಳು ೮೨. ಜಾತಿಯ (= ಜಾಜಿಯ ಮತ್ತು ಮನುಜರ ಜಾತಿಯ) ವಿಚಾರದಲ್ಲಿ ವಿದುಷಿಯಾದ ಒಬ್ಬ ಯುವತಿ-ಜಾತಿ (=ಜಾಜಿ)ಗೆ ಬೇರೆ ಹೂಗಳೆಲ್ಲವರ ಜಾತಿಯು ಸಮವಾಗುವುದೆ?! ಜಾಜಿ (ಜಾತಿ)ಯ ಜಾತಿಯೊಂದೇ ಬೇರೆ; ಅದಕ್ಕೆ ಅದೇ ಸಮ. ಅದಕ್ಕೆ ಸಮಜಾತಿಯದು ಬೇರೆ ಇಲ್ಲ. ಅವೆಲ್ಲವೂ ಜಾತಿಯೇ! (ಜಾಜಿಯೇ?) ಎಂದು, ಜಾತಿ (=ಜಾಜಿ)ಯನ್ನೇ ಹೊಗಳಿ, ಕಾಮುಕರ ಐಶ್ವರ್ಯವೂ ರತಿಗೆ ಪ್ರೀತಿಯ ದೂತಿಯೂ ಆದ ಆ ಜಾತಿ (=ಜಾಜಿ)ಯ ಹೂವನ್ನೇ ಕೊಯ್ದಳು. ೮೩. ಕೇತಕೀಗುಲ್ಮದಲ್ಲಿ ಗರಿ (= ಹೂ) ಬಿಡದಿದ್ದರೆ ನನಗೆ ತಿಳಿಯದು. ಗರಿ ಹೂ ಬಿಟ್ಟರೆ ಆಗಲೇ (ವನಿತೆಯರ) ತಲೆಯ ಮೇಲೇರಿ ಬಹಳವಾಗಿ ಮೆರೆಯುವ ಈ ಹೊಂಗೇದಗೆಯು, ಗರಿಗಟ್ಟಿ (ಶಕ್ತವಾಗಿ) ಬೇರೆ ಹೂಗಳನ್ನು ವಿಕ್ರಯಿಸದೆ ಇರುವುದೆ? ೮೪. ಶಿವನು ಮರುಳು (ಪಿಶಾಚಿ, ಭೂತ)ಗಳ ಒಡನೆ ಆಡಿದುದರಿಂದ ತಾನೂ ಮರುಳಾದನು ಅಲ್ಲದಿದ್ದರೆ ಈ ಹೂವನ್ನು ಮುಡಿದುಕೊಳ್ಳದೆ ಬಿಡುತ್ತಿದ್ದನೆ! ಎಂದು ಒಬ್ಬಳು ಪರಿಮಳವನ್ನು ಬೀರುವ ಹೊಂಗೇದಗೆಹೂವನ್ನು ಕೊಯ್ದುಕೊಂಡಳು ೮೫. ತಮ್ಮ ದೇಹಕಾಂತಿಯು ಹೆಚ್ಚಿ ಭಾರವಾದಂತೆ, ವನವಿಹಾರದಿಂದ ಬಳಲಿದ ಕಾಂತೆಯರು (ಹಿಂದಿರುಗಿ ವಿಶ್ರಾಂತಿಸ್ಥಾನಕ್ಕೆ) ಬಂದರು. ಅವರು ಬರುವಾಗ ತಲೆಗೂದಲ

೧. ತಲೆಗೆದಱಿ(ಕಗ) ೨. ಯೊಳ್ (ಕಗ) ೩. ಕ್ರಾಂತೆಯರಾದವೊಲ್ (ಗ)

ವ|| ಅಂತು ನಿರ್ವರ್ತಿತಪುಷ್ಪಾಪಚಯವಿನೋದೆಯರಾಗಿ

ಮೃದುಕಂಕೆಲ್ಲಿದಳಾದಿಪಲ್ಲವದೊಳಂ ಮಲ್ಲೀಲತಾಂತಾದಿಪು
ಷ್ಪದೊಳಂ ಚೂತಲತಾಲಯಸ್ಥಿತೆಯರಿಂಬಿಂ ಮಾಡಿ ಮಂಜೀರಹಾ
ರದೆ ಕೇಯೂರದ ಕರ್ಣಪೂರದುಡೆನೂಲುತ್ತಂಸದೊಳ್ಪಚ್ಚಮಂ
ಮದನಂ ಮೋಹನಬಾಣಮಂ ತುಡುವಿನಂ ತೊಟ್ಟರ್ ಲತಾತನ್ವಿಯರ್ ೮೬

ಗುರುವೆನಿಪತಿಕರ್ಕಶವೆನಿ
ಪ ರತ್ನಭೂಷಣಮೆ ಲಘುತೆಯಂ ಮಾರ್ದವಮಂ
ಧರಿಯಿಸಿ ಕಂಪಂ ಕುಡುವಂ
ತಿರೆ ದೇಸೆಯನಾಂತುದಲರ ತೊಡವಬಲೆಯರೊಳ್ ೮೭

ವ|| ಅಂತು ಪುಷ್ಪಮಂಡನಮನಾಂತು ಬಂದ ಪೆಂಡವಾಸದೆಳವೆಂಡಿರ್ವೆರಸು ವನ ವಿನೋದಮಂ ತೀರ್ಚಿ ಜಲಕ್ರೀಡೆಯನಾಡಲೆಂದಿರ್ಪಿನಂ

ತನಗತ್ಯಂತಪ್ರಿಯರ್ ಪಾಂಡವರವರೊಳಮೀತಂ ಪ್ರಿಯಂ ಚಕ್ರಿಗೆಂಬ
ರ್ಜುನನಂತಾ ದೇವಕೀನಂದನನ ಬಲದ ಕಣ್ಣುಮ್ಮಯ್ಯುಂ ಕೆತ್ತುತ್ತಿರಲ್ ಭೋಂ
ಕನೆ ಬಂದಂ ದರ್ಶನಂ ನಿರ್ಮಲಶಶಿಕಿರಣಂ ಕಣ್ಗೆ ಸಂಸ್ಪರ್ಶನಂ ಚಂ
ದನತೋಯಂ ಮೆಯ್ಗೆ ಸಂಭಾಷಣಮಮೃತರಸಂ ಜಿಹ್ವೆಗಪ್ಪನ್ನಮಾಗಳ್ ೮೮

ಗಂಟು ಬಿಚ್ಚಿಹೋಗಿತ್ತು. ನೆರಿಯ ಗಂಟು ಸಡಿಲವಾಗಿದ್ದಿತು. ಕಪ್ಪಾದ ಮುಂಗುರುಳುಗಳು ಜೋಲುತ್ತಿದ್ದವು. ಬಳ್ಳಿಯಂತೆ ಕೋಮಲವಾದ ಮೈ ಬೆವರುತ್ತಿದ್ದಿತು. ಚೀನಾಂಬರದ ಸೆರಗು ಕುಚವು ಒತ್ತಿದುದರಿಂದ ಸ್ವಲ್ಪ ಜೋಲುತ್ತ ಶೋಭಿಸುತ್ತಿತ್ತು. ವ|| ಹಾಗೆ ಹೂವನ್ನು ಕೊಯ್ಯುವ ವಿನೋದವನ್ನು ನೆರವೇರಿಸಿದವರಾಗಿ, ೮೬. ಆ ಲತಾಂಗಿಯರು-ಮೃದುವಾದ ರಕ್ತಾಶೋಕವೇ ಮೊದಲಾದ ಚಿಗುರುಗಳಿಂದಲೂ ಮಲ್ಲಿಗೆಯೇ ಮೊದಲಾದ ಹೂಗಳಿಂದಲೂ ಮಾವಿನ ಮರದಡಿ ಮನೆಗಳಲ್ಲಿ ಕುಳಿತುಕೊಂಡು ಕಾಲುಬಳೆ, ಹಾರ, ವಂಕಿ, ಕಿವಿಯೊಡನೆ ವಡ್ಯಾಣ ತಲೆಗೆ ಧರಿಸಲು ಬೇಕಾದ ದಂಡೆ ಕುಚ್ಚು ಮೊದಲಾದ ಆಭರಣಗಳನ್ನು ಕಟ್ಟಿ ಸಿದ್ಧಪಡಿಸಿಕೊಂಡು ಮನ್ಮಥನು ಮೋಹನಬಾಣವನ್ನು ಧರಿಸುವಂತೆ ಧರಿಸಿಕೊಂಡರು. ೮೭. ಭಾರವೂ ಕಾಠಿನ್ಯವೂ ಉಳ್ಳ ರತ್ನಭೂಷಣವೇ ಹಗುರವೂ ಮೃದುವೂ ಆಗಿ ಸುವಾಸನೆಯನ್ನೂ ಕೊಡುವ ಸೊಗಸನ್ನೂ ಪಡೆದುದೆನ್ನುವಂತೆ ಅಬಲೆಯರ ಹೂದೊಡವು ರಂಜಿಸಿತು. ವ|| ಹಾಗೆ ಹೂದೊಡವನ್ನು ತೊಟ್ಟು, ಬಂದ ರಾಣಿವಾಸದ ಯುವತಿಯರೊಡನೆ ವನವಿನೋದವನ್ನು ಮುಗಿಸಿ, ಜಲಕ್ರೀಡೆಯನ್ನು ಆಡಬೇಕೆಂದು ಕೃಷ್ಣನು ಇರುವಾಗ, ೮೮. ಆತನಿಗೆ ಬಲಗಣ್ಣೂ ಬಲಭುಜವೂ ಅದಿರುತ್ತಿದ್ದಿತು. ಅವನಿಗೆ ಅತಿಪ್ರಿಯರಾದ ಪಾಂಡವರಲ್ಲೂ ಮುಖ್ಯ ಪ್ರಿಯನಾದ ಅರ್ಜುನನು ಅಕಸ್ಮಾತ್ತಾಗಿ ತಟ್ಟನೆ ಅಲ್ಲಿಗೆ ಬಂದನು. ಅವನ ದರ್ಶನವು ಕೃಷ್ಣನ ಕಣ್ಣಿಗೆ ನಿರ್ಮಲವಾದ ಚಂದ್ರಕಿರಣದಂತೆಯೂ ಸ್ಪರ್ಶವು ಮೈಗೆ ಗಂಧದ ಲೇಪನದಂತೆಯೂ, ಸಂಭಾಷಣೆಯು ನಾಲಿಗೆಗೆ ಅಮೃತಸರವಾಗಿಯೂ ಇದ್ದಿತು.

ವ॥ ಅನಂತರಂ ಉದ್ಯಾನವನಮಧ್ಯದಿಂ ತನ್ಮಧ್ಯಮಪಾಂಡವ[1]ಪ್ರಕೋಷ್ಠಾವಲಂಬಿ ಕರಾಂಬುರುಹನಾಗಿ ತಳರ್ದಷ್ಪೋತ್ತರಶತಾಧಿಕ ಷೋಡಶ ಸಹಸ್ರಾಂತಃಪುರ ಪುರಂಧ್ರೀಜನಕ್ಕಂ ಸಾಶೀತಿದಶಶತಷಷ್ಟಿಸಹಸ್ರಾಧಿಕಲಕ್ಷಕುಮಾರರ್ಗಂ ಆ ಕುಮಾರರ್ಕಳ ಪೆಂಡವಾಸಕ್ಕಂ ಸಾಷ್ಟಶತ ಷೋಡಶಸಹಸ್ರ ಪುತ್ರಿಯರ್ಗಂ ಆ ರಾಜತನೂಜೆಯರ ವಲ್ಲಭರ್ಗಂ ಮತ್ತಮಸಂಖ್ಯಾತಯಾದವ ವಿಟವಿಟೀಜನಕ್ಕಂ ನೀರಾಡುವೊಡೆ ಸರೋವರಂ ನೆಱಿಯವದು ಕಾರಣದಿಂ ಸಮುದ್ರದಮೆ ಸರೋವರಮಾಗಲೆವೇಱ್ಕುಮೆಂದು ಮನದೊಳಾಜ್ಞಾಪಂಗೆಯ್ದು

ಕರಿಣೀಗಣಾನ್ವಿತಂ ವನ
ಕರಿಪತಿ ನೀರಾಟವಾಡಲೊಯ್ಯನೆ ಬರ್ಪಂ
ತಿರೆ [2]ಗಜಗಮನದ ಸತಿಯರ್
ಬರೆ ಬಂದಂ ಜಲಧಿಗಲಸಗತಿಯಿಂ ಕೃಷ್ಣಂ ೮೯

ವ॥ ಅನ್ನೆಗಮಾ ಸರಿನ್ನಾಥನ ತಟಂಬಿಡಿದು ಸಾರ್ದ ತೆರೆಮಾಲೆಗಳೆ ಪಳುಕಿನ ಸೋಪಾನ ಪಙ್ಕ್ತಿಗಳಾಗೆಯುಂ, ಅತಳಸ್ಪರ್ಶತೋಯಮೆ ಯಥಾಕಾಮಪ್ರಮಾಣತೋಯಮಾಗೆಯುಂ, ಲವಣಭಾವಮೆ ವಿಮಲಾಮೃತಸ್ವಾದುತ್ವಮನಪ್ಪುಕೆಯ್ಯೆಯುಂ, ಪ್ರೇಂಖಿತಶಂಖಸಮುದಯಮೆ ಬೆಳ್ದಾವರೆಗಳಾಗೆಯುಂ, ಬಾಡವಾನಲಶಿಖಾಶಕಲವೃಂದಮೆ ಕೆಂದಾವರೆಗಳಾಗೆಯುಂ, ತದುದ್ಧಾ ಮಧೂಮಸ್ತೋಮಮೆ ನೀಲೋತ್ಪಲಂಗಳಾಗೆಯುಂ, ವ್ಯಕ್ತ ಮುಕ್ತಾಫಲಾಳಿಯೆ ಮೃಣಾಳಂಗಳಾಗೆಯುಂ, ನೀಳರತ್ನಚಯಮೆ ಚಂಚರೀಕಂಗಳಾಗೆಯುಂ, ಸಂಸಕ್ತ ಶುಕ್ತಿಪುಟಸಂಘಾತಮೆ ರಥಾಂಗಮಿಥುನಂ

ವ॥ ಅನಂತರ ಉದ್ಯಾನವನಮಧ್ಯದಿಂದ ಪಾಂಡವರಲ್ಲಿ ಮಧ್ಯದವನಾದ ಅರ್ಜುನನ ಕೈ ಹಿಡಿದುಕೊಂಡು ಹೊರಟ ಕೃಷ್ಣನು ಹದಿನಾರುಸಾವಿರದ ಒಂದು ನೂರೆಂಟು ಜನ ಅಂತಃಪುರಸ್ತ್ರೀಯರಿಗೂ ಕುಮಾರರ ರಾಣಿವಾಸಕ್ಕೂ ಹದಿನಾರು ಸಾವಿರದ ಒಂದು ನೂರೆಂಟು ಜನ ಪುತ್ರಿಯರಿಗೂ ಆ ರಾಜಕುಮಾರಿಯರ ವಲ್ಲಭರಿಗೂ ಇನ್ನೂ ಅಸಂಖ್ಯಾತರಾದ ಯಾದವ ಕಾಮುಕಜನಕ್ಕೂ ನೀರಾಟವಾಡುವುದಕ್ಕೆ ಸರೋವರವು ಸಾಲದು. ಆದುದರಿಂದ ಸಮುದ್ರವೇ ಈಗ ನಮಗೆ ಸರೋವರವಾಗಬೇಕು" ಎಂದು ಮನಸ್ಸಿನಲ್ಲೇ ಆಜ್ಞಾಪಿಸಿದನು. ೮೯. ಕಾಡಾನೆಗಳ ಸಲಗನು ಹೆಣ್ಣಾನೆಗಳ ಗುಂಪಿನೊಡನೆ ಮೆಲ್ಲಗೆ ಬರುವಂತೆ ಕೃಷ್ಣನು ಗಜಗಮನದ ಸತಿಯರ ಜತೆಯಲ್ಲಿ ಸಮುದ್ರಕ್ಕೆ ಮಂದಗಮನದಿಂದ ಬಂದನು. ವ॥ ಅಷ್ಟರಲ್ಲಿ ಆ ನದೀನಾಥನ ದಡವನ್ನು ಹಿಡಿದು ಬಂದ ತೆರೆಯ ಸಾಲುಗಳು ಸ್ಫಟಿಕದ ಮೆಟ್ಟಲುಗಳ ಸಾಲಾದವು. ಪಾತಾಳವನ್ನು ಮುಟ್ಟಿದ್ದ ನೀರು ಬೇಕಾದಷ್ಟು ಅಳತೆಯ ಆಳದ ನೀರಾಯಿತು. ಉಪ್ಪು ನೀರಾಗಿದ್ದುದೇ ನಿರ್ಮಲವಾದ ಅಮೃತಸ್ವಾದೂದಕವಾಯಿತು. ತೆರೆಯಲ್ಲಿ ಹೊರಳುತ್ತಿದ್ದ ಶಂಖಗಳ ಸಮುದಾಯವೇ ಬೆಳ್ದಾವರೆಗಳಾದವು. ಬಡಬಾಗ್ನಿಯ ಉರಿಯ ಕವಲುಗಳೇ ಕೆಂದಾವರೆಗಳಾದುವು. ಆ ಬಡಬಾಗ್ನಿಯ ಹೊಗೆಯ ಸಮೂಹವೇ ಕನ್ನೈದಿಲೆಗಳಾದುವು. ವ್ಯಕ್ತವಾದ ಮುತ್ತುಗಳ ಸಮೂಹವೇ ತಾವರೆಯ ದಂಟುಗಳಾದವು. ನೀಲರತ್ನಗಳ ಸಮೂಹವೇ ತುಂಬಿಗಳಾದವು.

---

೧. ಪ್ರಕೋಷ್ಠಾವಲಂಬಿತಕರಾಂಬುರುಹನಾಗಿ (ಕಖಗ) ೨. ಗಜಗಮನದೆ (ಖ)

ಗಳಾಗೆಯುಂ, ಡಿಂಡೀರಪಿಂಡಪಟಲಮೆ ಹಂಸೆಗಳಾಗೆಯುಂ, ಪಾನೀಯದ್ವಿಪನಿಕಾಯುವೆ ಪುಳಿನಂಗಳಾಗೆಯುಂ, ಮಹಾಮತ್ಸ್ಯಕಚ್ಛಪಕುಳೀರಕುಂಭೀರಕಮಕರನಕ್ರಚಕ್ರಮೆ ವಿವಿಧಸುಗಂಧವಾರಿಪೂರಣ ಯೋಗ್ಯ ನಾನಾದ್ರೋಣೀಕಟಾಹಪರಿಕರಂಗಳಾಗೆಯುಂ, ಇಂತಾ ಸರತ್ಪತಿಯೆ ಸರಸಿಯಾದಲ್ಲಿ

ಸರಸಿಯ ನೀರಜಂಗಳ ರಜಂಗಳ ಪೊಂಪುಟಿವೆತ್ತು ಕಂಪಿನೊಳ್
ಬೆರಸಿ ತದಂತರಂಗದ ತರಂಗದ ನಿರ್ಮಲಬಿಂದುವೃಂದಮಂ
ಧರಿಯಿಸಿ [1]ತೀರಸಾಗರದ ಸಾರಸದಾಗರಮಂ ತೆರಳ್ಚಿ ಸಂ
ಚರಿಸಿದುದೊಪ್ಪುವಂತುಪವನಂ ಪವನಂ [2]ನಿಜಮಂದಚಾರದಿಂ ೯೦

ವ॥ ಆ ಸರೋವರಸಮೀರನಂ ಸರೋಜಲೋಚನಂ ಮನದೆಗೊಂಡು ಬರ್ಪಲ್ಲಿ

ತಾವರೆ ವಕ್ತ್ರಮೂರ್ಮಿ ನಳಿತೋಳ್ ಪೊಣರ್ವಕ್ಕಿ ಪಯೋಧರದ್ವಯಂ
ಸೇವಳರೇಕೆ ಬಾಸೆ ಪುಳಿನಂ ಜಘನಂ ಜಲಶೀಕರಾಳಿ ಮು
ಕ್ತಾವಳಿ ಬಾಳಿಮೀನ್ ನಯನಮಾಗಿರೆ ಜಂಗಮಪದ್ಮಿನೀಕುಲಂ
ಸ್ಥಾವರಪದ್ಮಿನೀಸ್ಥಳಿಗೆ ಬರ್ಪವೊಲೊಪ್ಪಿದುದಂಗನಾಜನಂ ೯೧

ಒಂದಕ್ಕೊಂದು ಸೇರಿಕೊಂಡಿರುವ ಮುತ್ತಿನ ಚಿಪ್ಪುಗಳೇ ಚಕ್ರವಾಕದಂಪತಿಗಳಾದವು. ನೊರೆಯ ಉಂಡೆಗಳ ಸಮೂಹವೇ ಹಂಸೆಗಳಾದವು. ನೀರಾನೆಗಳ ಗುಂಪೇ ಮಳಲದಿಣ್ಣೆಗಳಾದವು. ತಿಮಿಂಗಿಲ ಮೊಸಳೆ ನೀರು ಹಾವು ಏಡಿ ಮೊಸಳೆ ಮೊದಲಾದವುಗಳೇ ಬಗೆ ಬಗೆಯ ಸುಗಂಧೋದಕವನ್ನು ತುಂಬಲು ಯೋಗ್ಯವಾದ ನಾನಾ ಬಗೆಯ ದೋಣಿ ಕೊಪ್ಪರಿಗೆ ಹಂಡೆ ಕೊಳದಪ್ಪಲೆ ಮೊದಲಾದ ಪಾತ್ರಪರಿಕರಗಳಾದವು-ಹೀಗೆ ಸಮುದ್ರವೇ ಸರೋವರವಾಯಿತು. ೯೦. ಸರೋವರದ ಕಮಲಗಳ ಧೂಳೆಂಬ ರೋಮಾಂಚನವನ್ನು ಪಡೆದು, ಸುವಾಸನೆಯನ್ನು ಪಡೆದು, ಸರೋವರದೊಳಗಡೆಯ ಅಲೆಗಳ ನಿರ್ಮಲವಾದ ಜಲಬಿಂದುಗಳನ್ನು ಧರಿಸಿ ಸಾಗರ ತೀರದ ಕಮಲಗಳ ಸರೋವರವನ್ನು ಅಲೆಯುಳ್ಳುದಾಗಿ ಮಾಡಿ ವಾಯುವು ತನ್ನ ಮಂದಗಮನದಿಂದ ಉಪವನವು ಶೋಭಿಸುವಂತೆ ಸಂಚರಿಸಿತು. ವ॥ ಆ ಸರೋವರ ವಾಯುವನ್ನು ಕಮಲನೇತ್ರ ಕೃಷ್ಣನು ಗಮನಿಸಿ ಬರುವಲ್ಲಿ ೯೧. ಅವರ ಮುಖವೇ ಕಮಲ, ಕೋಮಲವಾದ ತೋಳೇ ಅಲೆ, ಸ್ತನದ್ವಯವೇ ಚಕ್ರವಾಕ ಪಕ್ಷಿಗಳ ಜೋಡಿ, ರೋಮರಾಜಿಯೇ ಪಾಚಿ, ಜಘನವೇ ಮಳಲುದಿಣ್ಣೆ, ಮುತ್ತುಗಳೇ ನೀರಿನ ತುಂತುರು ಹನಿಯ ಸಮೂಹ, ಕಣ್ಣುಗಳೇ ಮೀನುಗಳು ಆಗಿರಲು, ಸಂಚರಿಸುವ ತಾವರೆ ಕೊಳಗಳು ಚಲಿಸದ ತಾವರೆಕೊಳಗಳ ಸಮೀಪಕ್ಕೆ ಬರುವಂತೆ ಅಂಗನೆಯರು ಬಂದರು.

---

೧. ತೀರಸಾರಸದಸಾರಸದಾಸರವಂ ತೆರಳ್ಚಿ ಸಂಚರಿಸಿ ವಿರಾಜಿಸಿತ್ತು ಪವನಂ (ಖ)
೨. ನಿಜಮಾಂದಿರಮಂದಚಾರದಿಂ (ಕಗ)

ಅಂಬರದರ್ಪಣದೊಳ್ ತೋ
ರ್ಪಂಬುಜನಾಭಾಂಗನಾಜನಪ್ರತಿಬಿಂಬಾ
ಡಂಬರಮೆನೆ ಕೃಷ್ಣಾಜ್ಞೆಯಿ
ನಂಬರದಿಂದಮರಿಯರ್ ಕೊಳಕ್ಕಿಟಿತಂದರ್ ೯೨

ವ|| ಆ ದೇವಗಣಿಕೆಯರ್ ಪೆಂಡವಾಸದೆಳವೆಂಡಿರೊಳ್ ತಂಡಂಗಲಸಿ ನಿಲೆ

ಜಲಧಿತಟವನಲತಾಸಂ
ಕುಲಮಂ ಶೃಂಗಾರಜಲಧಿತಟವನಲತೆಗಳ್
ಗೆಲೆವಂದು [1]ನಿಂದುವೆಂದೆನೆ
ಜಲಧಿ[2]ಸರೋವೇಲೆಯಲ್ಲಿ ಬಾಲೆಯರೆಸೆದರ್ ೯೩

ಪೊಳೆವನ್ನಂ ತಾರಹಾರಂ ನೆಲೆಮೊಲೆ ಪೊಡರ್ವನ್ನಂ ಕುರುಳ್ ಸೂಸುವನ್ನಂ
ಸೆಳೆವನ್ನಂ ತೆಳ್ವಸಿರ್ ಮೇಲುದು ಮಿಳಿರ್ದೆಸೆವನ್ನಂ ಭುಜಾಂದೋಳಗುಂಜ
ದ್ವಳಯಂ ವಿಕ್ಷೇಪಲೀಲಾಲಸಚರಣರಣನ್ನೂಪುರಂ ಯಾನಕೂಜ
ತ್ಕಳಕಾಂಚೀಭಾಜನಂ ಸ್ತ್ರೀಜನವಿಟಿದುದು ತತ್ತೀರಸೋಪಾನದಿಂದಂ ೯೪

ಒದವಿದ ನಿಜಲಾವಣ್ಯದಿ
ನುದಕಂ ಸ್ಪರ್ಶಾನುಮಿತಮೆನಲ್ ಪೆಣ್ಬಡೆ ನಿಂ
ದುದು ಪೊಕ್ಕು ಜಾನುದಘ್ನೋ
ರುದಘ್ನ ಕಟಿದಘ್ನ ನಾಭಿದಘ್ನ ಸ್ಥಳದೊಳ್ ೯೫

೯೨. ಆಕಾಶವೆಂಬ ಕನ್ನಡಿಯಲ್ಲಿ ಪ್ರತಿಬಿಂಬಿಸಿ ಕಾಣುವ ಕೃಷ್ಣಾಂಗನೆಯರ ಸೊಗಸೆನ್ನುವಂತೆ ದೇವವನಿತೆಯರು ಕೃಷ್ಣನ ಆಜ್ಞೆಯಂತೆ ಆಕಾಶದಿಂದ ಕೊಳಕ್ಕಿಳಿದರು. ವ|| ಆ ದೇವ ವೇಶ್ಯೆಯರು, ಅಂತಃಪುರದ ಯುವತಿಯರ ಗುಂಪಿನಲ್ಲೆ ಸೇರಿ ನಿಂತರು. ೯೩. ಸಮುದ್ರ ತೀರದ ವನದ ಬಳ್ಳಿಗಳ ಸಮೂಹವನ್ನು ಶೃಂಗಾರಸಾಗರತೀರವನದ ಲತೆಗಳು ಜಯಿಸುವುದಕ್ಕಾಗಿ ಬಂದು ನಿಂತಿವೆಯೆನ್ನುವಂತೆ ಆ ಸಾಗರ ಸರೋವರದ ದಡದಲ್ಲಿ ಆ ಬಾಲೆಯರು ಪ್ರಕಾಶಿಸುತ್ತಿದ್ದರು. ೯೪. ಮುತ್ತಿನ ಸರವು ಹೊಳೆಯುತ್ತ, ಉನ್ನತ ಸ್ತನವು ಅದಿರುತ್ತ, ಮುಂಗುರುಳು ಜೋಲುತ್ತ, ತೆಳ್ಳಗಿರುವ ಉದರವು ಒಳಸೆಳೆಯುತ್ತ, ಮೇಲು ಹೊದಿಕೆಯ ಸೆರಗು ಚಲಿಸಿ ಹೊಳೆಯುತ್ತ ತೋಳನ್ನು ಬೀಸುವುದರಿಂದ ಬಳೆಗಳು ಶಬ್ದಮಾಡುತ್ತ ಲೀಲೆಯ ಸಂಚಾರದಿಂದ ಕಾಲ್ಬಳೆಗಳು ಧ್ವನಿಮಾಡುತ್ತ, ನಡೆಯುವುದರಿಂದ ಧರಿಸಿರುವ ವಡ್ಯಾಣವೂ ಶಬ್ದಮಾಡುತ್ತ ಇರಲು, ಆ ಸ್ತ್ರೀಯರೆಲ್ಲರೂ ತೀರದ ಮೆಟ್ಟಲುಗಳಿಂದ ಸರೋವರಕ್ಕೆ ಇಳಿದರು. ೯೫. ಸ್ತ್ರೀಯರ ಆ ಪಡೆಯು ಸರೋವರದಲ್ಲಿ ಮೊಳಕಾಲಿನ ನಡುವಿನ ಮತ್ತು ಹೊಕ್ಕುಳಿನವರೆಗೆ ಬರುವಷ್ಟು ಆಳ ನೀರಿರುವ ಸ್ಥಳಗಳಲ್ಲಿ ನಿಂತುಕೊಂಡರು. ಅವರ ಲಾವಣ್ಯವು ಅಧಿಕವಾಗಿದ್ದುದರಿಂದ ನೀರಿಗೂ ಅವರಿಗೂ

---

೧. ನಿಂದುವಿಂದೆನೆ (ಕಗ) ೨. ಸರೋವಲಯದಲ್ಲಿ (ಖ)

ಅಂಗನೆಯರ್ ಜಲದೊಳ್ ಪುಗೆ
ಮೀಂಗಳಡಂಗುವುದುಮವರ ನಯನಪ್ರತಿಬಿಂ
ಬಂಗಳೆ ಪೊಳೆವೆಳಮೀಂಗಳ
ಭಂಗಿಯನನುಕರಿಸಿ ಪೊಳೆದುವಾ ತಿಳಿಗೊಳದೊಳ್ ೯೬

ವ|| ತದನಂತರಂ

ಮಳಯಾಯಾತಸಮೀರಸಂಚಳಲತಾಸಂತಾನಕಂ ತಮ್ಮರ
ಲ್ಗಳನೊಂದೊಂದಱ ಮೇಲೆ ಕೆಂದಳಿರ್ಗಳಿಂ ಸೂಸಿತ್ತೆನಲ್ ಕೇಳಿ ಸಂ
ಚಳೆಯರ್ ತುಳ್ಕಿದರೊರ್ವರೊರ್ವರೊಳತಿಸ್ವಚ್ಛಾಂಬುವಂ ಕೆಂದಳಂ
ಗಳಿನೀಯಲ್ ವಳಯಸ್ವನಂ ವಿಹರಣಪ್ರಸ್ತಾವನಾತೂರ್ಯಮುಂ ೯೭

ಕರತಳವಾರಿ ತಳ್ತು ನಖರದ್ಯುತಿವಾರಿಯೊಳೊಂದಿ ಹಾರಬಂ
ಧುರರುಚಿವಾರಿಯೊಳ್ ಬೆರಸಿ ಸುಸ್ಮಿತದೀಧಿತಿವಾರಿಯೊಳ್ ತನೂ
ದರಿಯರಲಂಪಿನಿಂ ತುಳುಕೆ ಕೃಷ್ಣನ ಮೇಲೆ ಪೊದಱ್ದುದಂಬು ಕ
ರ್ಪುರವಟಿಯಂತಿರಾಲಿವಟಿಯಂತಿರಲರ್ವಟಿಯಂತಿರೆತ್ತಲುಂ ೯೮

ವನರುಹಲೋಚನಂ ನಿಜಕರಾಂಜಲಿವಾರಿಯಿನೊರ್ಮೆ ಪಾರ್ಶ್ವವ
ರ್ತಿನಿಯ ಸಮುನ್ನತಸ್ತನಯುಗಕ್ಕಭಿಷೇಕಮನೀಯೆ ಕಂಡು ಮಾ
ನಿನಿ ತನಗೀರ್ಷ್ಯೆ ಪುಟ್ಟೆ ಮನದೊಳ್ ನಯನಾಂಜಲಿವಾರಿಯಿಂ ಪುನಃ
ಪುನರಭಿಷೇಕಮಂ ನಿಜಸುವೃತ್ತಕುಚಕ್ಕೆ ಪೆಱದಳ್ ನೆಗಟ್ಟೆದಳ್ ೯೯

ಭೇದವಿಲ್ಲದಂತಾಗಿ ನೀರನ್ನು ಮುಟ್ಟಿ ತಿಳಿದುಕೊಳ್ಳಬೇಕಾಯಿತು! ೯೬. ಆ ಅಂಗನೆಯರು ನೀರಿನಲ್ಲಿಳಿದರು. ಅಲ್ಲಿದ್ದ ಮೀನುಗಳು ಅಡಗಿಕೊಂಡವು. ಆಗ ಆ ತಿಳಿನೀರಿನಲ್ಲಿ ಅವರ ಕಣ್ಣುಗಳ ಪ್ರತಿಬಿಂಬಗಳೇ ಎಳೆ ಮೀನುಗಳಂತೆ ಹೊಳೆಯುತ್ತಿದ್ದವು. ವ|| ಆ ಮೇಲೆ ೯೭. ಜಲಕ್ರೀಡೆಯಾಡುತ್ತ ನೀರಿನಲ್ಲಿ ಸಂಚರಿಸುವ ಆ ಯುವತಿಯರ ಕೈಬಳೆಗಳು ವಿಹಾರ ತೂರ್ಯಧ್ವನಿಯನ್ನು ಕೊಡುತ್ತಿರುವಲ್ಲಿ, ತಮ್ಮ ಕೆಂಪು ಕೈಗಳಿಂದ ಸ್ವಚ್ಛವಾದ ನೀರನ್ನು ಒಬ್ಬರು ಮತ್ತೊಬ್ಬರ ಮೇಲೆ ತುಳುಕಿ ಎರಚಿದರು. ಅದು ಮಲಯಗಿರಿಯಿಂದ ಬೀಸುವ ಗಾಳಿಯಿಂದ ಚಲಿಸುವ ಬಳ್ಳಿಗಳು ತಮ್ಮ ಹೂಗಳನ್ನು ಒಂದು ಮತ್ತೊಂದರ ಮೇಲೆ ತಮ್ಮ ಕೆಂಪು ಚಿಗುರುಗಳಿಂದ ಚೆಲ್ಲುತ್ತಿರುವಂತೆ ಕಾಣಿಸುತ್ತಿದ್ದಿತು. ೯೮. ಕೃಶೋದರಿಯರು ಪ್ರೀತಿಯಿಂದ ಕೃಷ್ಣನ ಮೇಲೆ ಕೈಯ್ಯಿಂದ ನೀರನ್ನು ಎರಚಿದರು. ಅದು ಉಗುರುಗಳ ಕಾಂತಿಯೆಂಬ ನೀರಿನೊಡನೆ ಸೇರಿ ಹಾರಗಳ ಮನೋಹರವಾದ ಕಾಂತಿಯೆಂಬ ನೀರಿನೊಡನೆ ಬೆರೆತು, ಮುಗುಳುನಗುವೆಂಬ ನೀರಿನೊಡನೆ ಕೂಡಿ, (ಅನುಕ್ರಮವಾಗಿ) ಕರ್ಪೂರದ ಮಳೆಯಂತೆಯೂ ಆಲಿಕಲ್ಲಿನ ಮಳೆಯಂತೆಯೂ ಎಲ್ಲ ಕಡೆಯಲ್ಲೂ ಚೆನ್ನಾಗಿ ಕಾಣಿಸಿ ಪ್ರಸಿದ್ಧವಾಯಿತು. ೯೯. ಕಮಲನೇತ್ರನು, ತನ್ನ ಕೈಬೊಗಸೆಯಿಂದ ಒಂದು ಸಾರಿ ಪಕ್ಕದಲ್ಲಿದ್ದವಳ ಸಮುನ್ನತ ಕುಚಗಳ ಮೇಲೆ ನೀರನ್ನು ಸುರಿದನು. ಅದನ್ನು ಕಂಡ ಬೇರೆ ಮಾನಿನಿಯೊಬ್ಬಳು ಈರ್ಷ್ಯೆಗೊಂಡು ತನ್ನ ಬೊಗಸೆಗಣ್ಣಿನ ನೀರಿನಿಂದ ತನ್ನ ಸುವೃತ್ತ

ಸವತಿಯ ಮೇಲೆ ಮುಂ ತುಳುಕಿ ತನ್ನಯ ಮೇಲಧಿಪಂ ಬಟಿಕ್ಕೆ ತು
ಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆಯ್ದೆ ಕೋ
ಪವನೊಳಕೊಂಡು ತನ್ನಿ ಬಸಮಲ್ಲದ ಕೃಷ್ಣನ ಮೇಲೆ ತಾಂ ತುಳುಂ
ಕುವ ಸಲಿಲಕ್ಕೆ ಕುಂಕುಮದ ರಾಗಮನಿತ್ತಳಪಾಂಗರಾಗದಿಂ ೧೦೦

ಮತ್ತೊರ್ವಳ್ ಮೇಳದ ವಧು
ವಿತ್ತಳ್ ಪರಿಹಾಸಕಾಂತಿಯಿಂ ಕೃಷ್ಣನ ಮೇ
ಲೊತ್ತುವ ನಿಜಕರಯಂತ್ರದ
ಕತ್ತುರಿನೀರ್ಗಮಲಮಲಯಜದ್ರವರುಚಿಯಂ ೧೦೧

ತನು ಲಾವಣ್ಯರಸಂಗಳಂ ಪಸರಿಸುತ್ತಿರ್ಪನ್ನೆಗಂ ಕಣ್ಣುಮಂ
ಮನಮಂ ಪಂಕರುಹಾಕ್ಷನೊಳ್ ಪಸರಿಸುತ್ತುಂ ತೋಯಮಂ ತನ್ಮುಕುಂ
ದನ ಮೇಲಟ್ಟಿಱುಬ್ಬರ್ಕೆಯಿಂ ಪಸರಿಸುತ್ತಿರ್ದಳ್ ಪೆಱಳ್ ತನ್ನ ಮೇ
ಲೆನಿತಾನುಂ ನನೆಯಂಬುಗಳ್ ಪಸರಿಪನ್ನಂ ಕಾಮಕೋದಂಡದಿಂ ೧೦೨

ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ
ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ ಲತಾಂತಲೇಖೆಯಿಂ
ತುಳ್ಕೆ ವಿಲಾಸವಂಗಜನ ಬಾಳ ಪೊಗರ್ ನಿಜಬಾಹುಮೂಲದಿಂ
ತುಳ್ಕೆ ತುಳುಂಕಿದಳ್ ಹರಿಯ ಮೇಲೆ ಪೆಱಳ್ ತರಳಾಕ್ಷಿ ತೋಯಮಂ ೧೦೩

ಕುಚಕ್ಕೆ ಮತ್ತೆ ಮತ್ತೆ ಅಭಿಷೇಕವನ್ನು ಮಾಡಿದಳು. ೧೦೦. ತನ್ನ ಸವತಿಯ ಮೇಲೆ ಮುಂಚೆ ನೀರನ್ನು ತುಳುಕಿಸಿ ಆಮೇಲೆ ಕೃಷ್ಣನು ತನ್ನ ಮೇಲೆ ಎರಚಿದ ನೀರು ತನಗೆ ಮನ್ಮಥ ಬಾಣಗಳಂತೆ ತಾಕಿದುದರಿಂದ ಕೋಪಗೊಂಡ ಯುವತಿಯೊಬ್ಬಳು, ವಶನಾಗದ ಕೃಷ್ಣನ ಮೇಲೆ ತಾನು ಎರಚುವ ನೀರಿಗೆ ತನ್ನ ಕಡೆಗಣ್ಣಿನ ಕೆಂಪಿನಿಂದ ಕುಂಕುಮದ ಬಣ್ಣವನ್ನುಂಟುಮಾಡಿದಳು. ೧೦೧. ಮತ್ತೊಬ್ಬಳು ಮೇಳದ ಯುವತಿ ಕೃಷ್ಣನ ಮೇಲೆ ತಾನು ಒತ್ತುವ ಪಿಚುಕಾರಿಯ ಕಸ್ತೂರಿಯ ನೀರಿಗೆ ತನ್ನ ಪರಿಹಾಸದ ನಗುವಿನ ಕಾಂತಿಯಿಂದ ಶ್ರೀಗಂಧದ ಬಣ್ಣವನ್ನುಂಟುಮಾಡಿದಳು. ೧೦೨. ಮತ್ತೊಬ್ಬಳು ತನ್ನ ಮೇಲೆ ಕಾಮನ ಬಿಲ್ಲಿನಿಂದ ಎಷ್ಟೋ ಪುಷ್ಪ ಬಾಣಗಳು ಹರಡುತ್ತಿರುವಲ್ಲಿ, ದೇಹದಿಂದ ಲಾವಣ್ಯ ರಸವನ್ನು ಹರಡುತ್ತ ದೃಷ್ಟಿಯನ್ನೂ ಮನಸ್ಸನ್ನೂ ಕಮಲಾಕ್ಷನ ಮೇಲೆ ಹರಡಿ, ಅತಿಶಯ ಪ್ರೀತಿಯಿಂದ ನೀರನ್ನು ಎರಚುತ್ತಿದ್ದಳು. ೧೦೩. ಬೇರೆ ಚಂಚಲಾಕ್ಷಿಯೊಬ್ಬಳು ತನ್ನ ಮುಖದಿಂದ ಮುಗುಳುನಗುವೂ ಕಡೆಗಣ್ಣಿನ ನೋಟದಿಂದ ಅನುರಾಗರಸವೂ ಕುಚಾಗ್ರದಿಂದ ಹಾರಗಳ ಹೊಳಪೂ ಲತೆಯಂತಿರುವ ಅಂಗಲೇಖೆಯಿಂದ ವಿಳಾಸವೂ ಬಾಹುಮೂಲದಿಂದ ಮನ್ಮಥನ ಕತ್ತಿಯ ಕಾಂತಿಯೂ ತುಳುಕುತ್ತಿರಲು ಹರಿಯ ಮೇಲೆ ನೀರನ್ನು ತುಳುಕಿದಳು.

ಸ್ಫುರಿತಾಂಗಂ ಸೂಸೆ ಲಾವಣ್ಯಮನೆಸೆವಲರ್ಗಣ್ ಚೆಲ್ವಮಂ ಸೂಸೆ ಲೀಲಾ
ದರಹಾಸಂ ಸೂಸೆ ಬೆಳ್ದಿಂಗಳನಲಘುಕುಚಂ ಮೇಲುದಂ ಸೂಸೆ ಚಾಮೀ
ಕರಕಾಂಚೀಮಂಜುಗುಂಜದ್ಧ್ವನಿ ಕಿವಿಗಮರ್ದಂ ಸೂಸೆ ತಳ್ಪೊಯ್ದು ಸುಯ್ ಕ
ತ್ತುರಿಗಂಪಂ ಸೂಸೆ ಲಕ್ಷ್ಮೀಪತಿಯ ತನುವಿನೊಳ್ ಸೂಸಿದಳ್ ನೀರನೊರ್ವಳ್ ೧೦೪

ಸ್ತನಲಕ್ಷ್ಯಾಲೋಕನಂ ಸಿಂಪಿಸೆ ಮುರರಿಪು ತನ್ವಂಗಿ ತಾರುಣ್ಯಭಾರಾ
ತಿನಿರೋಧಾಲಸ್ಯದಿಂ ಮೆಯ್ಮುರಿದಳೆನೆ ಪೆಱಳ್ ಸಾಚಿಯಿಂ ನಿಂದು ಪೀನ
ಸ್ತನಪಾರ್ಶ್ವೋದ್ಭಿನ್ನವಸ್ತ್ರಾಂಚಲೆ ಹರಿಕರಿಯಂತ್ರಾಂಬುಧಾರಾವಳೀಸ್ಪ
ರ್ಶನಸೌಖ್ಯಾಪೇಕ್ಷೆಯಿಂ ಭೋಂಕನೆ ಮೊಲೆದೆಱಪಂ ಪೆತ್ತವೊಲ್ ಶೋಭೆವೆತ್ತಳ್ ೧೦೫

ಮುರಮಥನಂ ಸಿಂಪಿಸೆ ಕ
ತ್ತುರಿನೀರಂ [1]ತನ್ಮೃಗೋದ್ಭವಾಸಿತಧಾರಾ
ಪರಿಕಲಿತಪರಾವೃತಮುಖಿ
ಹರಿಹಸ್ತಾಕೃಷ್ಟಕೇಶಹಸ್ತೆವೊಲೆಸೆದಳ್ ೧೦೬

ಉದಯನಗೇಂದ್ರದಂತಿರೆ ಬೃಹದ್ಭುಜಕೂಟಯುಗಂ ಮುಕುಂದನ
ಭ್ಯುದಿತದಿನೇಶನಂ ಪಟಿಯೆ ಹಸ್ತದ ಕಾಂಚನವಾರಿಯಂತ್ರಮಂ
ತದಱ ನಿಮಿರ್ಕೆವೆತ್ತ ಘುಸೃಣೋದಕಧಾರೆ ನವಾರುಣಾಂಶುವೊಲ್
ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜಿನೀಕದಂಬಮಂ ೧೦೭

೧೦೪. ಮತ್ತೊಬ್ಬಳು ಹೊಳೆಯುವ ತನ್ನ ಅಂಗವು ಲಾವಣ್ಯವನ್ನೂ, ಕಣ್ಣು ಹರ್ಷವನ್ನೂ ಲೀಲೆಯ ಕಿರುನಗೆಯು ಬೆಳುದಿಂಗಳನ್ನೂ ಸ್ತನವು ಮೇಲು ಹೊದಿಕೆಯನ್ನೂ ಚಿನ್ನದ ವಡ್ಯಾಣದ ಮನೋಹರವಾದ ಗುಜುಗುಜುಧ್ವನಿಯು ಕಿವಿಗೆ ಅಮೃತವನ್ನೂ ತಾಕುವ ಉಸಿರು ಕಸ್ತೂರಿ ಕಸ್ತೂರಿಯ ವಾಸನೆಯನ್ನೂ ಸೂಸುತ್ತ ಇರಲು ಕೃಷ್ಣನ ಮೇಲೆ ನೀರನ್ನು ಸೂಸಿದಳು. ೧೦೫. ಮತ್ತೊಬ್ಬಳು ತನ್ವಂಗಿಯು ಕೃಷ್ಣನು ಅವಳ ಸ್ತನಗಳ ಮೇಲೆ ದೃಷ್ಟಿಯಿಟ್ಟು ನೀರನ್ನು ಚಿಮ್ಮಲು ತಾರುಣ್ಯದ ಭಾರದಿಂದ ಪೀಡಿತಳಾಗಿ ಆಲಸ್ಯದಿಂದ ಮೈಮುರಿದಳೆನ್ನುವಂತೆ ಪಕ್ಕಕ್ಕೆ ತಿರುಗಿ ನಿಂತಳು. ಆಗ ಸ್ತನದ ಪಕ್ಕದ ವಸ್ತ್ರದ ಸೆರಗು ಹಾರಿದಂತೆ ಮೇಲೆ ಹೋಯಿತು. ಆಗ ಅವಳು ಕೃಷ್ಣನ ಕಯ್ಯಿನ ಪೀಚುಕಾರಿಯ ಧಾರೆಯ ಸ್ಪರ್ಶನ ಸೌಖ್ಯಾಪೇಕ್ಷೆಯಿಂದ ತಟ್ಟನೆ ಮೊಲೆಯ ಮೇಲಿನ ಹೊದಿಕೆಯನ್ನು ತೆಗೆದು ತೆರಪು ಮಾಡಿದವಳಂತೆ ಸೊಗಸನ್ನು ಪಡೆದಳು. ೧೦೬. ಕೃಷ್ಣನು ಸುಂದರಿಯೊಬ್ಬಳ ಮೇಲೆ ಕಸ್ತೂರಿಯ ನೀರನ್ನು ಎರಚಿದನು. ಆ ನೀರಿನ ಧಾರೆಯು ಮುಖವನ್ನು ಮುಟ್ಟಿತು. ಒಡನೆಯೇ ಅವಳು ಪಕ್ಕಕೆ ಮುಖವನ್ನು ತಿರುಗಿಸಿದಳು. ಆಗಲೂ ನೀರು ಧಾರೆಯು ತಾಕುತ್ತಲೇ ಇದ್ದುದರಿಂದ ಕೃಷ್ಣನು ಕಯ್ಯಿಂದ ಅವಳ ಕೂದಲನ್ನು ಹಿಡಿದು ಎಳೆಯುತ್ತಿರುವಂತೆ ಕಾಣಿಸಿದಳು. ೧೦೭. ಕೃಷ್ಣನ ಭುಜಶಿಖರಗಳು ಉದಯಗಿರಿ ಶಿಖರದಂತೆ ಇದ್ದವು. ಕೃಷ್ಣನು ಉದಯಿಸುವ ಸೂರ್ಯನಿಗಿಂತಲೂ ಅಧಿಕ

---

೧. ತನ್ಮೃಗೋತ್ಥವಾಸಿತಧಾರಾ (ಮೊಲಿ)

ಸಕಲಾಂತಃಪುರಕಾಮಿನೀನಿಕರನಿರ್ಯದ್ಯಂತ್ರಧಾರಾಕರಂ
ಬಕಮಂ ತಾಳ್ದುಳಿವಿಂಗೆ ಮೇಗೊಗೆದ ಮಾರ್ಣಾಳಂಗಳೆಂದಂಚೆವಿಂ
ಡು ಕಲಧ್ವಾನಮನೆತ್ತಲುಂ ಪಸರಿಸುತ್ತೋರಂತವಂ ಪಾಜೆ ಪಾ
ಜೆ ಕರ್ದುಂಕಲ್ ಮೊದಲಿಟ್ಟುವೇಂ ಪಿರಿದೊ ವಾರಿಕ್ರೀಡನಾಡಂಬರಂ ೧೦೮

ಮುಡಿಯೊಳ್ ಜೋಲ್ದಿರ್ದುದಂ ಮಲ್ಲಿಗೆಯ ಕಿಱುಮುಗುಳ್ಮಾಲೆಯಂ ಸನ್ಮೃಣಾಳಂ
ತೊಡರ್ದತ್ತೆಂದಂತದರ್ಕಾವ್ವಳಿಸಿ ಮುಡಿಗೆ [1]ಪಾಯ್ವಂಚೆಗಂ ಬೆರ್ಚಿ ಸಾಸಿ
ರ್ಮಡಿ [2]ಪೆರ್ಚಲ್ ಭೋಂಕೆನಲ್ ಮೈಮುಱಿದು ಪಿಡಿದ ಲೀಲಾಬ್ಜದಿಂ ಪೊಯ್ವ ಪಾಂಗಿಂ
[3]ಕಡೆಗಣ್ಣಿಂ ಪಿಂದೆ ಸೂಸುತ್ತಬಲೆ ಹರೆಯೊಳಾನಂದಮಂ ತಂದಳೊರ್ವಳ್ ೧೦೯

ಸವನದಿನಂಗರಾಗಮುಮಲಕ್ತಕರಾಗಮುಮೆಯ್ದೆ ಪೋಗಲಂ
ತವಯವದಲ್ಲಿ ತೋಱುವುಗುರ್ವೊಯ್ಲಳವಟ್ಟ ವ್ರಣಂಗಳುಂ ವಧೂ
ನಿವಹದೊಳಾವ ಮಂಡನಮುಮಂ ಗೆಲೆವಂದುವು ಮಿಕ್ಕ ಮಂಡನಂ
ಯುವತಿಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ ೧೧೦

ತೇಜಸ್ಸುಳ್ಳವನಾಗಿದ್ದನು. ಅವನ ಕಯ್ಯ ಚಿನ್ನದ ಜಲಯಂತ್ರವೂ ಅದರಿಂದ ಚಿಮ್ಮುವ ಕುಂಕುಮಕೇಸರಿಯ ನೀರ ಧಾರೆಯೂ ಉದಯಸೂರ್ಯನ ಕೆಂಪಾದ ಕಿರಣಗಳಂತೆ ಕಮಲಮುಖಿಯರೆಂಬ ಹೊಸದಾದ ಕಮಲಿನೀ ಸಮೂಹವನ್ನು ಮುಸುಕಿತು. ೧೦೮. ಕೃಷ್ಣನ ಅಂತಃಪುರಸ್ತ್ರೀಯರೆಲ್ಲರೂ ಜಲಯಂತ್ರಗಳಿಂದ ಚಿಮ್ಮುವ ನೀರಿನ ಧಾರೆಗಳನ್ನು, ಬಾಣಗಳ ಹೊಡೆತವನ್ನು ತಡೆದು ಉಳಿವಿಗಾಗಿ ಸರೋವರದಿಂದ ಮೇಲೆ ಹಾರಿದ ತಾವರೆಯ ದಂಟು (ಕಾವು)ಗಳೆಂದು ಭ್ರಮಿಸಿ, ಹಂಸಗಳ ಹಿಂಡುಗಳು ಕಲ ಧ್ವನಿಯನ್ನು ಹರಡುತ್ತ ಮೇಲೆ ಹಾರಿ ಆ ನೀರಿನ ಧಾರೆಗಳನ್ನೇ ತಿನ್ನಲು ಆರಂಭಿಸಿದುವು. ಆ ಕ್ರೀಡೆಯ ಆಡಂಬರವು ಆದೆಷ್ಟೋ! ೧೦೯. ಒಬ್ಬಳು ಅಬಲೆಯ ಮುಡಿಯಿಂದ ಜೋಲುತ್ತಿದ್ದ ಚಿಕ್ಕ ಮೊಗ್ಗಿನ ಒಂದೆಳೆಯ ಮಾಲೆಯನ್ನು ಕಂಡು ಒಳ್ಳೆಯ ತಾವರೆಯ ದಂಟು ಜೋಲುತ್ತಿದೆಯೆಂದು ಭ್ರಮಿಸಿದ ಒಂದು ಹಂಸೆಯು ಅದನ್ನಪೇಕ್ಷಿಸಿ ಮುಡಿಗೆ ಹಾರಿತು. ಆ ಅಬಲೆ ಬೆಚ್ಚಿ, ಹಂಸೆಯು ಸಾವಿರ ಪಾಲು ಹೆಚ್ಚು ಬೆಚ್ಚುವಂತೆ ತಟಕ್ಕನೆ ತಿರುಗಿದಳು. ಕಯ್ಯಲ್ಲಿ ಹಿಡಿದುಕೊಂಡಿದ್ದ ಲೀಲಾಕಮಲದ ಹೂವಿನಿಂದ ಅದನ್ನು ಹೊಡೆಯುವಂತೆ ಕಡೆಗಣ್ಣಿನಿಂದ ಹಿಂದೆ ನೋಡಿದಳು. ಇದನ್ನು ನೋಡಿದ ಕೃಷ್ಣನಿಗೆ ಆನಂದವಾಯಿತು. ೧೧೦. ಜಲಕ್ರೀಡೆಯಲ್ಲಿ ಅಭಿಷೇಕವಾದುದರಿಂದ ಗಂಧಾದಿ ಅಂಗರಾಗವೂ ಅರಗಿನ ರಸದ ರಾಗವೂ (ಕೆಂಪೂ) ತೊಳೆದು ಹೋಗಿ, ಯುವತಿಯರ ಸ್ತನಾದ್ಯಂಗಗಳಲ್ಲಿ ಪ್ರಿಯನ ಉಗುರಿನಿಂದ ಹಿಂದೆ ಆಗಿದ್ದ ಗಾಯಗಳು ಸ್ಪಷ್ಟವಾಗಿ ಕಾಣುವಂತಾದುವು. ಅಲ್ಲದೆ ಅವು ಆ ಯುವತಿಯರ ಎಲ್ಲಾ ಆಭರಣಗಳ ಕಾಂತಿಯನ್ನೂ ತಿರಸ್ಕರಿಸುತ್ತಿದ್ದವು. (ಅದು

---

೧. ಪಾಯ್ವಂಚೆಯಿಂ ಬೆರ್ಚು (ಕ ಗ) ೨. ಪೆರ್ಚಲ್ (ಕ ಗ) ೩. ಕಡೆಗಣ್ಣಿಂ ಪಿಂದೆ (ಕ ಗ) ಕಡೆಗಣ್ಗೆ ಪಿಂದೆ (ಮೊ ಅ).

ಶ್ರುತಿಕುಮುದಂಗಳ್ ಕೇಳೀ
ಪತಿತಂಗಳ್ ಕೊಳನ ತಡಿಗೆ [1]ಸಾರ್ದುವು ತೆರೆಯಿಂ
ಶ್ರುತಿಮಂಡನವಾದೊಡಮೇಂ
ಪತಿತರ್ ನಿರ್ಮಳರ ನಡುವೆ [2]ಯೋಗ್ಯರೆ ಸುಳಿಯಲ್ ೧೧೧

ಲಲನಾಸಂತತಿ ಪಲ್ಲವಾಧರವ ಕೆಂಪಂ ಕಣ್ಮಲರ್ಗಿತ್ತು ಕ
ಣ್ಮಲರ್ವೆಳ್ಪಂ ನಿಜಪಲ್ಲವಾಧರಕೆ [3]ಕೊಟ್ಟಂದೀಗ ಮಾಱುೊಡ್ಡಿತೀ
ಸಲಿಲಕ್ರೀಡೆಯೊಳೆಂಬಿನಂ ವನಿತೆಯರ್ ನೀರಾಟದಿಂದಾದ ಕ
ಣ್ಮಲರ್ಗೆಂಪಿಂದಧರೋಷ್ಠಪಲ್ಲವದ ಬೆಳ್ಪಿಂ ಸಾಡೆ ಕಣ್ಗೊಪ್ಪಿದರ್ ೧೧೨

ವ॥ ಅಂತು ಸಾಗರಕ್ರೀಡೆಯಂ ಮಾಡಿ ಪುರುಷೋತ್ತಮಂ ತತ್ತೀರ ಭೂರಂಗಮನಲಂಕರಿಸಿ ನಿಲ್ವುದುಂ

ಪರೆದಾ ನೀಳಾಳಕಂ ಜೋಲ್ದಲೆವ ಕಚಭರಂ ಕೆಂಪುವೆತ್ತಿರ್ದ ಕಣ್ದಾ
ವರೆ ಬೆಳ್ಪೇಱಿರ್ದ ಬಿಂಬಾಧರಮಣಿ ತನುವಂ ಸಾಂದು ಪತ್ತಿರ್ದ ಚೀನಾಂ
ಬರವಿಂಬಾಗಿರ್ಪಿನಂ ಬಂದುದು ಮೃದುತರಲೀಲಾಪದನ್ಯಾಸಮುದ್ಯ
ದ್ದರಹಾಸಂ ಪೆಂಡವಾಸಂ ವಿಜಿತರತಿವಿಳಾಸಂ ಸುಖಶ್ರೀನಿವಾಸಂ ೧೧೩

ವ॥ ಅನಂತರಂ ದಿವ್ಯಾಭರಣಭೂಷಣಂಗಳಿಂ ಪಸದನಂಗೆಯ್ದಲ್ಲಿ

ಸರಿಯಾದುದೇ) ಯುವತಿಯರಿಗೆ ಮಿಕ್ಕ ಒಡವೆಗಳಿಂದೇನು ಭೂಷಣವೋ! ರತೋತ್ಸವದ ಚಿಹ್ನೆಯೇ ದಿವ್ಯಭೂಷಣ! ೧೧೧. ಶ್ರುತಿ (ಕಿವಿ)ಗೆ ಮಂಡನ (ಭೂಷಣ)ವಾಗಿದ್ದು ಜಲಕ್ರೀಡೆಯಲ್ಲಿ ಪತಿತವಾದ = ಬಿದ್ದು ಹೋದ ನೈದಿಲೆ ಹೂಗಳು ತೆರೆಯಿಂದ, ಕೊಳದ ದಡವನ್ನು ಸೇರಿದವು. ಶ್ರುತಿ ಮಂಡನ (= ವೇದವೇ ಭೂಷಣ)ವಾದರೇನು? ಪತಿತರು (ಭ್ರಷ್ಟರು) ನಿರ್ಮಲರ ನಡುವೆ ಸುಳಿಯಲು ಯೋಗ್ಯರೇ?! ೧೧೨. ಲಲನೆಯರು ಜಲಕ್ರೀಡೆಯಲ್ಲಿ ತಮ್ಮ ಚಿಗುರುದುಟಿಯ ಕೆಂಪನ್ನು ಹೂಗಣ್ಣಿಗೆ ಕೊಟ್ಟು ಅದರ ಬಿಳುಪನ್ನು ತಮ್ಮ ಚಿಗುರುದುಟಿಗೆ ತೆಗೆದುಕೊಂಡು ಮಾರಾಟ ಮಾಡಿದಂತಾಯಿತು ಎನ್ನುವಂತೆ-ನೀರಾಟದಲ್ಲಿ ಕಣ್ಣು ಕೆಂಪಾಯಿತು. ತಾಂಬೂಲರಾಗವು ತೊಳೆದು ಹೋಗಿ ತುಟಿ ಬೆಳ್ಳಗಾಯಿತು. ಆದರೂ ಅವರು ಚೆನ್ನಾಗಿ ಕಣ್ಣಿಗೊಪ್ಪಿದರು. ವ॥ ಹಾಗೆ ಸಾಗರ ಕ್ರೀಡೆಯನ್ನಾಡಿ ಪುರುಷೋತ್ತಮನು ಸಾಗರತೀರದ ಭೂರಂಗವನ್ನಲಂಕರಿಸಿದ್ದನು. ೧೧೩. ಹರಡಿದ ಮುಂಗುರುಳೂ ಜೋಲುತ್ತಿರುವ ಕೇಶರಾಶಿಯೂ ಕೆಂಪಾದ ಕಣ್ದಾವರೆಯೂ ಬಿಳುಪಾದ ತೊಂಡೆದುಟಿಯೂ ಒದ್ದೆಯಾದ ಮೈಗೆ ಅಂಟಿಕೊಂಡ ಚೀನಾಂಬರವೂ ಒಪ್ಪುತ್ತಿರಲು ರತಿಯ ವಿಳಾಸವನ್ನೂ ಮೀರಿಸಿ, ನಗು ನಗುತ್ತ ಸುಖಶ್ರೀಗೆ ನೆಲೆಯೆನಿಸಿದ ರಾಣೀವಾಸವು ಮೃದುತರವಾದ ಲೀಲಾಗಮನದಿಂದ ಬಂದಿತು. ವ॥ ಅನಂತರ ದಿವ್ಯಾಭರಣ ಭೂಷಣಗಳಿಂದ ಅಲಂಕರಿಸಿಕೊಳ್ಳುವಾಗ,

---

೧. ಸಾರ್ದಾ ತೆರೆಯಿಂ (ಕ) ೨. ಯೋಗಮೆ (ಖ) ೩. ಕೊಟ್ಟಂದೀಗ ಮಾಱಾಡಿತೀ (ಕ) ಕೊಟ್ಟೊಂದೀಗ ಮಾಱುೊಡ್ಡಿತೀ (ಖ)

ಸಲಿಲವಿನೋದದೊಳ್ ಹರಿ ತುಳುಂಕಿದ ಕುಂಕುಮವಾಃಕಣೋತ್ಕರಂ
ಮಲಯಜವಾಃಕಣಾವಳಿ ಮೃಗೋದ್ಭವವಾಃಕಣ[1]ವೃಂದಮೀ ಲತಾ
ಲಲಿತೆಯರಂಗದೊಳ್ ತೊಡರ್ದು ಪೋಗದೆ ನಿಂದುವೆನಲ್ ವರಾಂಗನಾ
ವಲಿಗೆಸೆದತ್ತು ಮಾಣಿಕದ ಮುತ್ತಿನ ನೀಲದನರ್ಘ್ಯಮಂಡನಂ ೧೧೪

ಕಡಲಿಂತಂಬುಜಷಂಡಮಾಯ್ತಮರಿಯರ್ [2]ಕ್ರೀಡಾರ್ಥದಿಂದೊರ್ಮೊದಲ್
ನಡೆತಂದರ್ [3]ಧರೆಗಿಂತಿದರ್ಕೆ ಸಕಲದ್ವೀಪಾಧಿಪಕ್ರೀಡೆಯುಂ
ಪಡಿಯಾಯ್ತಿಲ್ಲಿದಮಾನುಷಂ ವಿಭುನಿಜಾಂಬುಕ್ರೀಡೆಯೆಂದರ್ಜುನಂ
ನುಡಿಯಲ್ ಸಸ್ಮಿತವಕ್ತ್ರನಾಲಿಸುತುಮಿರ್ದಂ [4]ದೇವಕೀನಂದನಂ ೧೧೫

ಇದು ಸಮಸ್ತಕಮಳಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥ ವಿಜಯ ಮಹಾಪ್ರಬಂಧದೊಳ್ ತ್ರಿಪುರಾಂತಕದರ್ಶನ
ಹೇಮಂತಶಿಶಿರವಸಂತವನಜಲಕ್ರೀಡಾವರ್ಣನಂ
ಚತುರ್ದಶಾಶ್ವಾಸಂ

೧೧೪. ಜಲಕ್ರೀಡೆಯಲ್ಲಿ ಕೃಷ್ಣನು ಲಲಿತಾಂಗಿಯರ ಮೇಲೆ ತುಳುಕಿದ ಕುಂಕುಮಕೇಸರಿಯ ಗಂಧದ, ಶ್ರೀಗಂಧದ ಮತ್ತು ಕಸ್ತೂರಿಯ ಗಂಧದ ನೀರ ಹನಿಗಳು ಅವರ ಅಂಗದಲ್ಲೇ ಅಂಟಿಕೊಂಡು ನಿಂತಿವೆಯೆನ್ನುವಂತೆ, ಆ ವರಾಂಗಿಯರು ಧರಿಸಿದ ಕೆಂಪಿನ ಮುತ್ತಿನ ಮತ್ತು ನೀಲಮಣಿಯ ಅಮೌಲ್ಯವಾದ ಆಭರಣಗಳು ಹೊಳೆಯುತ್ತಿದ್ದವು. ಆಗ
೧೧೫. ವಿಭುವೇ! ಸಮುದ್ರವು ಹೀಗೆ ಪದ್ಮಸರೋವರವಾಯಿತು. ದೇವಗಣಿಕೆಯರು ಕ್ರೀಡೆಗಾಗಿ, ಇದೇ ಮೊದಲನೆಯ ಬಾರಿ ಭೂಮಿಗೆ ಒಟ್ಟಿಗೆ ಬಂದರು. ಈ ಕ್ರೀಡೆಗೆ ಸಕಲ ದ್ವೀಪಾಧಿಪರ ಕ್ರೀಡೆಯು ಸಮವಾಗಲಾರದು. ನಿನ್ನ ಈ ಜಲಕ್ರೀಡೆಯು ಅಮಾನುಷವಾದುದು ಎಂದು ಅರ್ಜುನನು ಹೇಳಿದನು. ದೇವಕೀನಂದನನಾದ ಕೃಷ್ಣನು ಮುಗುಳುನಗೆಯೊಡಗೂಡಿ ಅರ್ಜುನನು ಹೇಳುವುದನ್ನು ಕೇಳುತ್ತಿದ್ದನು. ಇದು ಸಮಸ್ತಕಮಲಭವಾಂಡಮಾಲಾ... ಲಕ್ಷ್ಮೀಕಾಂತ ಶ್ರೀಪಾದಭಕ್ತಿಯುಕ್ತಸುಕವೀಂದ್ರ ರುದ್ರಪ್ರಣೀತವಾದ ಜಗನ್ನಾಥವಿಜಯ ಮಹಾಪ್ರಬಂಧದಲ್ಲಿ ತ್ರಿಪುರಾಂತಕ (ಬಿಲ್ವೇಶ್ವರ) ದರ್ಶನ ಹೇಮಂತ ಶಿಶಿರ ವಸಂತಋತುಗಳ ಮತ್ತು ಕೃಷ್ಣನ ವನಕ್ರೀಡೆ ಜಲಕ್ರೀಡೆಗಳ ವರ್ಣನೆಯ ಹದಿನಾಲ್ಕನೆಯ ಆಶ್ವಾಸ.

---

೧. ವೃಂದಮೀಗಳೀ ಲಲನೆಯರಂಗದೊಳ್ (ಖ) ೨. ಕ್ರೀಡಾರ್ಥಮೆಂದೊರ್ಮೊದಲ್ (ಕಗ)
೩. ಧರೆಗಿಂತಿದು ಸಕಲದೇವದ್ವೀಪಸತ್ಕ್ರೀಡೆಯುಂ (ಖ) ೪. ರುಕ್ಮಿಣೀವಲ್ಲಭಂ (ಖ)

# ಪಂಚದಶಾಶ್ವಾಸಂ

ಶ್ರೀ ತನಗೆ [1]ನಲ್ಲಳಪ್ಪಂ
ದಾ ತೋಯಧಿತಟನೊಳಿರ್ಪವೊಲ್ ಹರಿ ವೀರ
ಶ್ರೀ ತನಗದೊಂದುಕಾರ್ಯದ
ಕೌತುಕದಿಂ ಪೊರ್ದೆ ವಾರ್ಧಿತೀರದೊಳಿರ್ದಂ ೧

ವ|| ಅನ್ನೆಗಂ ಷಟ್ಪುರದೈತ್ಯನಾಯಕಂ ನಿಕುಂಭನಂಭೋದಮಾರ್ಗಾಂತರದಿಂದಂತರ್ಹಿತಸ್ವರೂಪನಾಗಿ ಬರುತ್ತುಂ ವಸುದೇವಸುತನ ಸಾಗರ[2]ಕ್ರೀಡಾವಿಲಾಸಮಂ ಕಂಡು ಕೌತುಕಂಬಟ್ಟು ನೋಡಿ ಲತೆಯೆ ಸತಿಯರಾದಂತೆಯುಂ ಸೌದಾಮಿನಿಯೆ ಭಾಮಿನಿಯರಾದಂತೆಯು ವಿಧುಕಳೆಯೆ ವಧುಗಳಾದಂತೆಯುಂ ಮೃಣಾಳಿಕೆಯೆ ಬಾಳಿಕೆಯರಾದಂತೆಯುಂ ನನೆಯಂಬೆ ನಿತಂಬಿನಿಯರಾದಂತೆಯುಂ ಕಂತುಶಕ್ತಿಯೆ ಕಾಂತೆಯರಾದಂತೆಯುಂ ಸೊಗಯಿಸುವನಂತಕೋಟಿ ಕಾಂತೆಯರೊಳ್ ರೂಪವಿಳಾಸದಿಂ ದೇಸೆವೆತ್ತ ಯಾದವಕನ್ಯೆಯಪ್ಪ ಕಳಕಂಠರುತಿಯಂ ಮರಾಳಗತಿಯಂ ಶೃಂಗಾರವತಿಯಂ ಭಾನುಮತಿಯಂ ಕಂಡು ಕಣ್ಸೋಲ್ತಾ ಕನ್ನೆಯಂ ತಳೆದುಕೊಂಡು

ವಿಲಸನ್ಮಾಣಿಕ್ಯ [3]ಭೂಷಾರುಚಿರಚನೆ ಘನಶ್ಯಾಮದೇಹಪ್ರಭಾವಂ
ಡಲಿ ವಿಸ್ಪಷ್ಟಾಟ್ಟಹಾಸದ್ಯುತಿ ವಿತತನಭಶ್ಚಕ್ರದೊಳ್ ಸಂಜೆಯುಂ ಕ
ತ್ತಲೆಯುಂ ಬೆಳ್ದಿಂಗಳುಂ ತೀವಿದುದು ಪಗಲಿದೆಂಬಂತಗುರ್ವಾಗೆ [4]ದಕ್ಷಂ
ಖಲನಾಕಾಶಕ್ಕೆ ತೊಟ್ಟೆಂದೊಗೆದನೊಗೆವಿನಂ ಯಾದವಾಕ್ರೋಶನಾದಂ ೨

೧. ಶ್ರೀಲಕ್ಷ್ಮೀದೇವಿ ತನಗೆ ಪ್ರಿಯಳಾಗುವಾಗ ತಾನು ಕ್ಷೀರಸಾಗರದ ತೀರದಲ್ಲಿ ಹಿಂದೆ ಇದ್ದಂತೆಯೇ ಕೃಷ್ಣನು, ವೀರಶ್ರೀಯು ಅದೊಂದು ಕಾರ್ಯದ ಕುತೂಹಲದಿಂದ ತನ್ನನ್ನು ಸೇರುವವಳಾಗಿದ್ದುದರಿಂದ, ಈಗಲೂ ಸಮುದ್ರತೀರದಲ್ಲೇ ಇದ್ದನು. ವ|| ಆಗ ಷಟ್ಪುರ ರಾಕ್ಷಸನಾಯಕನಾದ ನಿಕುಂಭನು ಆಕಾಶಮಾರ್ಗದಿಂದ ತನ್ನ ರೂಪವನ್ನು ಮರಸಿಕೊಂಡು ಬರುತ್ತಿದ್ದನು. ಅವನು ಕೃಷ್ಣನ ಸಾಗರಕ್ರೀಡೆಯ ವಿಲಾಸವನ್ನು ಕುತೂಹಲದಿಂದ ನೋಡಿದನು. ಬಳ್ಳಿಗಳೂ, ಮಿಂಚೂ, ಚಂದ್ರಕಳೆಯೂ, ಕಮಲನಾಳವೂ, ಪುಷ್ಪಬಾಣವೂ, ಮನ್ಮಥ ಶಕ್ತಿಯೂ ಕಾಂತೆಯರ ಆಕೃತಿಯನ್ನು ತಳೆದಂತೆ ಸೊಗಸುತ್ತಿರುವ ಅನಂತಕೋಟಿ ಕಾಂತೆಯರಲ್ಲಿ ರೂಪವಿಲಾಸಗಳಿಂದ ಒಪ್ಪುವ ಯಾದವಕನ್ಯೆಯೂ, ಕೋಗಿಲೆಯ ಕಂಠಧ್ವನಿಯವಳೂ, ಹಂಸಗಮನೆಯೂ, ಶೃಂಗಾರವತಿಯೂ ಆದ ಭಾನುಮತಿಯನ್ನು ಕಂಡು ಕಣ್ಣು ಸೋತು ಆ ಕನ್ಯೆಯನ್ನು ಎತ್ತಿಕೊಂಡನು. ೨. ಆಕೆಯ ಹೊಳೆಯುವ ಮಾಣಿಕ್ಯಾಭರಣಗಳ ಕಾಂತಿಯೂ ರಕ್ಕಸನ ಮೋಡದಂತೆ ಅತಿಕಪ್ಪಾದ ದೇಹದ ಪ್ರಭಾಮಂಡಲವೂ ಅಟ್ಟಹಾಸದ ಬಿಳುಪೂ ವಿಸ್ತಾರವಾದ ನಭೋಮಂಡಲದಲ್ಲಿ ಹರಡಿ, ಇದೇನು? ಹಗಲೇ ಸಂಜೆಗೆಂಪೂ ಕತ್ತಲೆಯೂ ಬೆಳುದಿಂಗಳೂ ತುಂಬಿತು!

---

೧. ನಲ್ಲಳಪ್ಪಂತಾ (ಖ) ೨. ಕ್ರಿಡಾಭಿರಾಮವಿಭೂತಿಯಂ (ಖ) ೩. ಚೂಡಾಮಣಿರುಚಿರ (ಕಗ) ೪. ರಕ್ತೇಕ್ಷಂ ಖಲನಾಕಾಶಕ್ಕೆ (ಕ) ರಕ್ತೇಕ್ಷಣನಾಕಾಶಕ್ಕೆ (ಗ)

ವ|| ಆಗಳ್

ಗಾಂಡಿವಮಂ ಪಿಡಿದಕ್ಷಯ
ಕಾಂಡಧಿಯಂ ಬಿಗಿದು ಕನ್ಯಕಾಚೋರನನಾ
ಖಂಡಲಸುತನೆಯ್ದಿ ನಭೋ
ಮಂಡಲಮಂ ಪುದಿದನೆಯ್ದೆ ಶರಪಂಜರದಿಂ ೩

ಅಮರೇಂದ್ರಾತ್ಮಜನೆಚ್ಚು ವಾಯುಪಥದೊಳ್ ಕೇರ್ಗಟ್ಟಿದೊಂದಸ್ತ್ರ ಜಾ
ಲಮನೊಟ್ಟೈಸಲದೆಂತುಮಾರದೆ ಖಳಂ ಸ್ತ್ರೀರತ್ನದಿಂ ವೀರರ
ತ್ನಮನರ್ಘ್ಯಂ ಪಿಡಿದುಯ್ವೆನೀತನನೆನುತುಂ ಕನ್ನೆಯಂ ಬಿಟ್ಟು ದು
ರ್ದಮ ದೋರ್ದರ್ಪದಿನೆತ್ತಿಕೊಂಡು ನೆಗೆದಂ ವ್ಯೋಮಕ್ಕೆ ಗಾಂಡೀವಿಯಂ ೪

ವ|| ಆ ವ್ಯತಿರೇಕದೊಳತಿಕುಪಿತನಾಗಿ ಶಂಬರಸೂದನಂ[1]ಬೆರಸು ನಡೆತಂದು

ಧನುವಿನ ಟಂಕೃತಂ ವಿಶಿಖಬೀಂಕೃತಮುತ್ಕಟಕೋಪಹೂಂಕೃತಂ
ವನಜಭವಾಂಡಮಂ ಪುದಿಯೆ ದೈತ್ಯಹರಂ ಶರಭಿನ್ನಪಾಕಶಾ
ಸನಗಜಕುಂಭನಂ ನಯನರಾಗವಿನಿರ್ಜಿತತಪ್ತಶಾತಕುಂ
ಭನನಸಮಾನರೌದ್ರರಸಕುಂಭನನೆಯ್ದಿದನಾ ನಿಕುಂಭನಂ ೫

ವ|| ಅಂತೆಯ್ದಿ ಕೌಂತೇಯನಂ ಕವುಂಕುಳೊ[2]ಳವುಂಕಿ ಪೋತರ್ಪ ಯಾತುಧಾನಪ್ರಧಾನನಂ ನೋಡಿ ಬಲಭದ್ರಭೀಮಸೇನಜರಾಸಂಧಶಲ್ಯ ಪ್ರಭೃತಿ ನಾಗಾಯುತಬಲಪ್ರಖ್ಯಾತರಾತತಜ್ಯಂ

ಎನ್ನುವಂತೆ ಭಯಂಕರವಾಗಿರುವಲ್ಲಿ, ದಕ್ಷನಾದ ಆ ನೀಚನು ತಟ್ಟನೆ ಆಕಾಶಕ್ಕೆ ಹಾರಿದನು. ಅದರಿಂದ ಯಾದವರಲ್ಲಿ ಆಕ್ರೋಶಧ್ವನಿಯು ಉಂಟಾಯಿತು. ೩. ಆಗ ಅರ್ಜುನನು, ಗಾಂಡೀವಧನುಸ್ಸನ್ನು ಧರಿಸಿ ಅಕ್ಷಯತೂಣೀರವನ್ನು ಬಿಗಿದುಕೊಂಡು, ಕನ್ಯಾಚೋರನನ್ನು ಅಟ್ಟಿಸಿಕೊಂಡು ಹೋಗಿ ಆಕಾಶಮಂಡಲವನ್ನು ಬಾಣಪಂಜರದಿಂದ ಪೂರ್ತಿಯಾಗಿ ತುಂಬಿದನು. ೪. ಅರ್ಜುನನು ಬಾಣಗಳನ್ನು ಪ್ರಯೋಗಿಸಿ, ಆಕಾಶಮಾರ್ಗದಲ್ಲಿ ಗೋಡೆಯನ್ನು ಕಟ್ಟಿದ ಆ ಅಸ್ತ್ರದ ಜಾಲವನ್ನು ಇದಿರಿಸಿ ಜಯಿಸಲಾರದೆ ಆ ನೀಚನು 'ಸ್ತ್ರೀರತ್ನಕ್ಕಿಂತಲೂ ವೀರರತ್ನವು ಹೆಚ್ಚು ಅಮೌಲ್ಯವಾದುದು, ಈತನನ್ನೆ ಹಿಡಿದುಕೊಂಡು ಹೋಗುತ್ತೇನೆ' ಎಂದುಕೊಂಡು ಭಾನುಮತಿಯನ್ನು ಬಿಟ್ಟು ಅದಮ್ಯವಾದ ಬಾಹು ದರ್ಪದಿಂದ ಅರ್ಜುನನನ್ನು ಎತ್ತಿಕೊಂಡು ಆಕಾಶಕ್ಕೆ ನೆಗೆದನು. ವ|| ಆ ಸಂದರ್ಭದಲ್ಲಿ ಕೃಷ್ಣನು ಅತಿ ಕುಪಿತನಾಗಿ ಮನ್ಮಥನೊಡನೆ ಹೊರಟು, ೫. ಧನುಸ್ಸಿನ ಟಂಕಾರವೂ, ಬಾಣಗಳ ಭೀಂಕಾರವೂ, ಉತ್ಕಟವಾದ ಕೋಪದ ಹೂಂಕಾರವೂ ಬ್ರಹ್ಮಾಂಡವನ್ನು ತುಂಬಲು, ಬಾಣಗಳಿಂದ ಇಂದ್ರನ ಐರಾವತದ ಕುಂಭವನ್ನು ಸೀಳಿದವನೂ, ತನ್ನ ಕಣ್ಣಿನ ಕಂಪಿನಿಂದ ಪುಟವಿಟ್ಟ ಚಿನ್ನವನ್ನೂ ಜಯಿಸಿದವನೂ ರೌದ್ರರಸಕುಂಭನೂ ಆದ ಆ ನಿಕುಂಭನನ್ನು ಅಟ್ಟಿಸಿಕೊಂಡು ಹೋದನು. ವ|| ಹಾಗೆ ಹೋಗಿ ಅರ್ಜುನನನ್ನು ಕೌಂಕುಳಲ್ಲಿ

---

೧. ಬೆರಸಂಬುಜನಾಭಂ ನಡೆದು (ಖ) ೨. ಅವುಂಕಿ ಕೊಂಡು ಪೋಗುತಿರ್ಪ (ಖ)

**ಮಾಡಲಾರದಾ ದಿವ್ಯಧನುವನೇಱಿಸಿ ಯಂತ್ರಮತ್ಸ್ಯಮನೆಚ್ಚು ಪಾಂಚಾಲರಾಜತನೂಜೆಯಂ ಕೈಕೊಂಡು ಸ್ವಯಂವರಕ್ಕೆ ನೆರೆದನೇಕನರಪಾಲಕರಂ ಬೆಂಕೊಂಡ ಮಹಾಪ್ರಚಂಡನಂ, ಪಾಕಶಾಸನಪ್ರೇಷಿತ ಪುಷ್ಕರಾವರ್ತಘನಧಾರಾವರ್ತ ದುರ್ಭೇದ ನಿರ್ಭರಕಾಂಡಪಂಜರದಿಂ ಖಾಂಡವವನಮನಾಶುಶುಕ್ಷಣಿಯ ನೂಡಿ ರೂಢಿವೆತ್ತವಾರ್ಯ ಭುಜಬಲವೀರ್ಯನಂ, ಯುಧಿಷ್ಠಿರ ರಾಜಸೂಯಯಾಗವ್ಯಯಧನಾಗಮ ನಿಮಿತ್ತಮುತ್ತರ ದಿಗ್ವಿಜಯದೊಳ್ ಉತ್ತರ ದಿಕ್ಪಾಲಕನಪ್ಪ ಕುಬೇರನನದಿರ್ಪಿ ಕಪ್ಪಂಗೊಂಡು ಬಂದಪ್ರತಿಮ ಪ್ರತಾಪನೆನಿಸಿದನಂ, ಅನಿತಲ್ಲದಿನ್ನಾಗಾಮಿಕಾರ್ಯದೊಳಿಂದ್ರಕೀಲಕುತ್ಕೀಲದಲ್ಲಿ ಮೂಕ ದಾನವಸೂಕರವ್ಯಾಜದಿಂ ರಾಜಮೌಳಿಯಂ ಮಲ್ಲಯುದ್ಧದಿಂ ಗೆಲ್ದುಂಗೊಂಡು ಪಾಶುಪತಾಸ್ತ್ರಮಂ ಪಡೆದಪ್ರತಿಮನೆನಿಸಲುಂ, ಏಕಾದಶರುದ್ರ ದ್ವಾದಶಾದಿತ್ಯಪ್ರಮುಖನಿಖಿಲಾಮರಗ್ರಾಮಣಿಚಕ್ರವರ್ತಿಯೆಂಬಾ ಮಹೇಂದ್ರಂಗಮಸಾಧ್ಯರುಮಾದ [೧]ಹಿರಣ್ಯ ಪುರಸ್ಥಿತಾಖಿಲ ಕಾಲಕೇಯರನಸಂಖ್ಯಾತನಿವಾತಕವಚರಂ [೨]ಧುರಂಧರೋದ್ಧತ್ತಾತಳತಳತ್ತಾಳನಿಕಾಯಮಂ ಸಾಯಕಸಂಘಾತದಿಂ ಯಮಪುರಕ್ಕೆ ಕಳುಪಿ ವಿಕ್ರಮಖ್ಯಾತಿಯನಪ್ಪುಕೆಯ್ಯಲುಂ ಘೋಷಯಾತ್ರಾಮಿಷದಿಂದೈಶ್ವರ್ಯಮಂ ಮೆಱೆಯಲೆಂದು ಬಂದ ದುರ್ಯೋಧನನನಾ ಯೋಧನನನಾ ಯೋಧನಚ್ಛಲದಿಂ ಕಟ್ಟಿಕೊಂಡು ಪೋಪ ಚಿತ್ರಾಂಗದನೆಂಬ ಗಂಧರ್ವರಾಜನಂ ಮಾರ್ಗಣೌಘದಿಂ ಮೇಘಮಾರ್ಗಮಂ ಕೆತ್ತು ಪೋಗಲೀಯದೆ ತಂದು ಧರ್ಮನಂದನಂಗೊಪ್ಪಿಸಿ ಧೀರೋದಾತ್ತವೃತ್ತಿಯಿಂದೆಸೆಯಲುಂ ಗೋಗ್ರಹಣಕಾರಣೇಕಾದಶಾಕ್ಷೌಹಿಣೀ ವಾಹಿನಿವೆರಸು ಬಂದ ಕುರುವೃಂದಮೆಲ್ಲಮನೊಂದೆ ತೇರೊಳ್ [೩]ಕಾಲಚಕ್ರಂ ಸುತ್ತುವಂತೆ ಸುತ್ತಿ**

ಅವುಕಿಕೊಂಡು ಹೋಗುತ್ತಿರುವ ರಾಕ್ಷಸಮುಖ್ಯನನ್ನು ನೋಡಿ, ಬಲರಾಮ ಭೀಮಸೇನ ಜರಾಸಂಧ ಶಲ್ಯರೇ ಮೊದಲಾದ ಹತ್ತುಸಾವಿರ ಆನೆಗಳ ಬಲವುಳ್ಳವರೆಂದು ಪ್ರಸಿದ್ಧರಾದವರು ಹೆದೆಯೇರಿಸಲಾರದಿದ್ದ ಆ ದಿವ್ಯ ಧನುಸ್ಸನ್ನೇರಿಸಿ, ಮತ್ಸ್ಯಯಂತ್ರವನ್ನು ಭೇದಿಸಿ ಪಾಂಚಾಲ ರಾಜಕುಮಾರಿಯನ್ನು ವಶಪಡಿಸಿಕೊಂಡು, ಸ್ವಯಂವರಕ್ಕೆ ನೆರೆದ ಅನೇಕ ರಾಜರನ್ನು ಬೆನ್ನಟ್ಟಿದ ಮಹಾ ಪ್ರಚಂಡನನ್ನು, ಇಂದ್ರನು ಕಳುಹಿಸಿದ ಪುಷ್ಕರಾವರ್ತ ಮೇಘಧಾರಾವೃಷ್ಟಿಯಿಂದ ದುರ್ಭೇದ್ಯವಾದ ಪರಿಪೂರ್ಣ ಬಾಣಪಂಜರದಿಂದ ಖಾಂಡವವನವನ್ನು ಅಗ್ನಿಗೆ ಆಹುತಿಮಾಡಿ (ಉಣ್ಣಿಸಿ) ಪ್ರಸಿದ್ಧನಾದ ಅವಾರ್ಯ ಭುಜಬಲದ ವೀರನನ್ನು, ಧರ್ಮರಾಯನ ರಾಜಸೂಯಯಾಗದ ವ್ಯಯಕ್ಕೆ ಬೇಕಾದ ಧನಸಂಪಾದನೆಗಾಗಿ ಉತ್ತರ ದಿಗ್ವಿಜಯದಲ್ಲಿ ಉತ್ತರದಿಕ್ಪಾಲಕನಾದ ಕುಬೇರನನ್ನು ನಡುಗಿಸಿ ಕಪ್ಪವನ್ನು ತೆಗೆದುಕೊಂಡು ಬಂದು ಅಸಮಾನ ಪ್ರತಾಪವುಳ್ಳವನೆನ್ನಿಸಿಕೊಂಡವನನ್ನು, ಅಷ್ಟೂ ಅಲ್ಲದೆ ಇನ್ನೂ ಮುಂದಿನ ಕಾರ್ಯಕ್ಕಾಗಿ ಇಂದ್ರಕೀಲಪರ್ವತದ ಮೂಕದಾನವ ಸೂಕರ ವ್ಯಾಜದಿಂದ ಚಂದ್ರಮೌಳೀಶ್ವರನನ್ನು ಜಟ್ಟಿಯ ಕಾಳಗದಲ್ಲಿ ಜಯಿಸಿ, ಅವನಿಂದ ಪಾಶುಪತಾಸ್ತ್ರವನ್ನು ಪಡೆದು, ಅಪ್ರತಿಮಲ್ಲ (ಜಟ್ಟಿ)ನೆನಿಸಿಕೊಳ್ಳಲು, ಏಕಾದಶ ರುದ್ರದ್ವಾದಶಾದಿತ್ಯರೇ ಮೊದಲಾದ ಸಕಲ ದೇವಾಗ್ರಣಿ ಚಕ್ರವರ್ತಿಯೆಂಬ ಮಹೇಂದ್ರನಿಗೂ ಅಸಾಧ್ಯರಾದ ಹಿರಣ್ಯಪುರಸ್ಥಿತರಾದ ಸಕಲ ಕಾಲಕೇಯರನ್ನೂ ಅಸಂಖ್ಯಾತರಾದ ನಿವಾತಕವಚರನ್ನೂ, ಧುರಂಧರರಾಗಿ ಪ್ರಸಿದ್ಧರಾದ ತಳತ್ತಾಳ ಸಮೂಹವನ್ನು ಬಾಣಸಮೂಹದಿಂದ ಯಮಪುರಕ್ಕೆ ಕಳುಹಿಸಿ ವಿಕ್ರಮಖ್ಯಾತಿಯನ್ನು ಪಡೆಯುವುದಕ್ಕೂ,

---

೧. ಹಿರಣ್ಯಕಶಿಪುಪುಲಸ್ತಿತಾಳಬಳ ಕಾಲಕೇಯರ (ಖ) ೨. ಧುರಧರೆಯೊಳ್ ತಳತಾಳುಕನಿಕಾಯಮಂ (ಕ) ಧರಧುರನೊಳ್ ತಳತಾಳುಕ ನಿಕಾಯಮಂ(ಮೊಅ) ೩. ಕಾಲಚಕ್ರಮಂ (ಕ)

**ಕರ್ಣ ವಿಕರ್ಣ ಕೃಪ ಕೃತವರ್ಮ ದ್ರೋಣಾಶ್ವತ್ಥಾಮ ಭೀಷ್ಮಧಾರ್ತರಾಷ್ಟ್ರಾದಿಗಳಂ ಚಿತ್ರಯೋಧಿತ್ವದಿಂ ಪ್ರತ್ಯೇಕಂ ಗೆಲ್ದುದಲ್ಲದೆ ಸಂಕುಲದೊಳಂಕೆಗೊಂಡೆಲ್ಲರುಮನೊಂದೆ ಸಮ್ಮೋಹನಾಸ್ತ್ರದಿಂ ಮೋಹಿಸಿ ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟೆಗಳನುಗಿಪಟಂಗೊಂಡು ತಲೆಗಾಚು ಕಳಿಪಿ ನಿಜಾಗ್ರಜನ ಮರ್ಯಾದೆಯಂ ನಿಲಿಸಿ ನಿಸ್ಸಹಾಯಸಾಹಸಮಂ ತೋಱಲುಂ, ಬಟಿಕಂ ಕುರುಕ್ಷೇತ್ರದೊಳೇಕಾದಶಾಕ್ಷೌಹಿಣೀಸನಾಥಂ ಕುರುನಾಥನೊಡ್ಡಿ ಕಾದುವ ಪದಿನೆಂಟು ದಿನದ ಸಮರದಲ್ಲಿ ಮುನ್ನಂ ಸಮಸ್ತಭೂಮೀಶ್ವರವಿರಾಮನಂ ಪರಶುರಾಮನಂ ಗೆಲ್ದ ಕೌರವಜ್ಯಾಯನಂ ಗಾಂಗೆಯೇನಂ ಶರಶಯ್ಯೆಯೊಳೊಱಗಿಸಿ ಬುಜಗರ್ವಮನಖರ್ವಂ ಮೆಱೆಯಲುಂ ಮಹಾರಥಾತಿರಥರುಮತಿಕ್ರಮಿಸಿ ಶಕಟ[1]ವ್ಯೂಹವಿರೂಪಿಸದ್ರಥನಂ ಜಯದ್ರಥನನಸ್ತಮಿತಮಸ್ತಕಚ್ಛೇದನಂಗೆಯ್ದು ಸತ್ಯಪ್ರತಿಜ್ಞನಾಗಲುಂ, ಚಾಪಾಗಮಾಚಾರ್ಯನಂ [2]ಕ್ಷತ್ರಿಯಕುಲವೈದಗ್ಧ್ಯದೀಕ್ಷಾಗುರುವಂ ಕುರುವಂಶಕುಲಿಶತ್ರಾಣನಂ ದ್ರೋಣನನವೋಘಬಾಣರಾಜಿಯಿಂ ಪರಾಜಯಮನೆಯ್ದಿಸಿ ವಿಜಯೋನ್ನತಿಯನೆಯ್ದಲುಂ, ಲಲಾಟಲೋಚನರುದ್ರನಂ ರುದ್ರಾವತಾರನಂ ದಿವ್ಯಾಸ್ತ್ರಪ್ರಭ ಭುಜಬಲೋದ್ದಾಮನನಶ್ವತ್ಥಾಮನಂ ಸಂಗ್ರಾಮಮಂ ತೊಱೆದು ಪೋಪಂತು ತವದ ದೊಣೆಯಿಂ ತವದ ಮಂತ್ರಾಸ್ತ್ರಪ್ರಯೋಗದಿಂ ಕೈಮಿಕ್ಕು ಮೈಮೆದಳೆಯಲುಂ, ಕೃತವರ್ಮಕಾರ್ಮುಕಕೌಶಲಾಸ್ಖಲಿತಸಂಖ್ಯಗನಕ್ಷೌಹಿಣೀದ್ವಿತಯಪರಿಸಂಖ್ಯರಂ ಬಾಹುಬಲಾವಲಿಪ್ತಕರಂ [3]ಸಂಶಪ್ತಕರನಕ್ಷೂಣಬಾಣವರ್ಷದಿಂ ಗೀರ್ವಾಣಪಥಕ್ಕೆ ಸಲಿಸಿ ಶೌರ್ಯಾಡಂಬರವನಲಂಬಿಸಲುಂ, ಸುಪ್ರತೀಕಸಾಮಜದಿಂ ಭೀಮಸೇನನೊತ್ತಿಸುವ ಸಾಹಸೋನ್ಮತ್ತನಂ**

ಘೋಷಯಾತ್ರೆಯ ನೆವದಿಂದ ತನ್ನ ಐಶ್ವರ್ಯವನ್ನು ಮೆರೆಸಬೇಕೆಂದು ಬಂದ ದುರ್ಯೋಧನನನ್ನು ಯುದ್ಧದ ನೆವದಿಂದ ಕಟ್ಟಿ ಹೊತ್ತುಕೊಂಡು ಹೋದ ಚಿತ್ರಾಂಗದನೆಂಬ ಗಂಧರ್ವರಾಜನನ್ನು ಬಾಣಸಮೂಹದಿಂದ ಮೇಘಮಾರ್ಗವನ್ನು ಮುಚ್ಚಿಹೋಗುವುದಕ್ಕೆ ಅವಕಾಶವನ್ನು ಕೊಡದೆ ಕರೆದುಕೊಂಡು ಬಂದು, ಧರ್ಮರಾಜನಿಗೆ ಒಪ್ಪಿಸಿ ಧೀರೋದಾತ್ತ ವೃತ್ತಿಯಿಂದ ಹೊಳೆಯುವುದಕ್ಕೂ, ಗೋಗ್ರಹಣಕಾರಣದಿಂದ ಹನ್ನೊಂದು ಅಕ್ಷೌಹಿಣೀ ಸೇನೆಯೊಡನೆ ಬಂದ ಕೌರವಸಮೂಹವನ್ನೂ ಒಂದೇ ರಥದಿಂದ ಕಾಲಚಕ್ರವು ಸುತ್ತುವಂತೆ ಸುತ್ತಿ ಕರ್ಣವಿಕರ್ಣ ಕೃಪ ಕೃತವರ್ಮ ದ್ರೋಣಾಶ್ವತ್ಥಾಮ ಭೀಷ್ಮಧಾರ್ತರಾಷ್ಟ್ರಾದಿಗಳನ್ನು ಚಿತ್ರಯೋಧಿತ್ವದಿಂದ ಪ್ರತ್ಯೇಕವಾಗಿ ಗೆದ್ದುದಲ್ಲದೆ ಸಾಮೂಹಿಕವಾಗಿ ಮೇಲೆ ಬಿದ್ದ ಎಲ್ಲರನ್ನೂ ಒಂದೇ ಸಮ್ಮೋಹನಾಸ್ತ್ರದಿಂದ ಮೋಹಿಸಿ, ಮೂರ್ಧಾಭಿಷೇಕ ಮಾಡಿಸಿಕೊಂಡಿದ್ದವರ ಶಿರೋಭೂಷಣಗಳಲ್ಲಿ ಕಟ್ಟಿರುವ ಪಟ್ಟೆಗಳನ್ನು ಭೇದಿಸಿ, ತಲೆಗಾದು ಕಳುಹಿಸಿ ತನ್ನ ಅಗ್ರಜನ ಮರ್ಯಾದೆಯನ್ನು ಉಳಿಸಿ ಅಸಹಾಯಸಾಹಸವನ್ನು ತೋರಿಸಲೂ, ಬಳಿಕ ಕುರುಕ್ಷೇತ್ರದಲ್ಲಿ ಹನ್ನೊಂದು ಅಕ್ಷೌಹಿಣೀ ರಕ್ಷಣೆಯುಳ್ಳವನಾದ ದುರ್ಯೋಧನನನ್ನು ಪ್ರತಿಭಟಿಸಿ ಕಾದುವ ಹದಿನೆಂಟು ದಿನದ ಯುದ್ಧದಲ್ಲಿ ಮುಂಚೆ ಸಮಸ್ತರಾಜರನ್ನೂ ಸಂಹರಿಸಿದ, ಪರಶುರಾಮನನ್ನು ಜಯಿಸಿದ ಕೌರವ ಜೇಷ್ಠನಾದ ಭೀಷ್ಮನನ್ನು ಶರಶಯ್ಯೆಯಲ್ಲಿ ಮಲಗಿಸಿ ಅಧಿಕವಾದ ಭುಜಗರ್ವವನ್ನು ಮೆರೆಸುವುದಕ್ಕೂ ಮಹಾರಥಾತಿರಥರನ್ನೂ ಮೀರಿ ಶಕಟವ್ಯೂಹವನ್ನು ವಿರೂಪಗೊಳಿಸಿ ತಲೆಮರೆಸಿಕೊಂಡು ಜಯದ್ರಥನನ್ನು

---

೧. ವ್ಯೂಹನಿರೂಪಿತ ಲಸದ್ರಥನಂ (ಕ) ೨. ಕ್ಷತ್ರಿಯ ಕಳತ್ರವೈಧವ್ಯದೀಕ್ಷಾಗುರುವಂ (ಖ)
೩. ಸಮಸಪ್ತಕರನಕ್ಷೌಹಿಣೀಬಾಣವರ್ಷದಿಂ (ಖ)

ಭಗದತ್ತನಂ [1]ತತ್ಕರಟಿಕರಟಂಬೆರಸು ವಿಕೃತಕಂಠನಪ್ಪಂತು ಒಂದೇ ಭಲ್ಲದಿಂದೆಚ್ಚು ಬಿಲ್ಲಾಳ್ತನಮಂ ನೆಗಳ್ಚಿಯುಂ, ಭಾರ್ಗವಪ್ರಸಾದಾಸಾದಿತಚಾಪವಿದ್ಯನಂ ನಾನಾಸ್ತ್ರಪ್ರಯೋಗನಿರವದ್ಯನಂ ಜಗನ್ನೇತ್ರಪುತ್ರನಂ ದುರ್ಯೋಧನ ಪ್ರಿಯಮಿತ್ರನಂ ಕಾಕಪತಾಕನಂ ಕಾಲಪೃಷ್ಠಕಾರ್ಮುಕನಂ ಸಹಜಾತ ವ್ಯಕುಂಡಲಕಿರಣಮಂಡಲಾಕೀರ್ಣನಂ ಕರ್ಣನಂ ದ್ವಂದ್ವಕಲಹದಿಂ ದೇವಾಂಗನಾ ರತಿಕಲಹದೊಳ್ ತೊಡರ್ಚಿ ಸಂಪೂರ್ಣಮನೋರಥನಾಗಲ್ವೇಡಿರ್ದ ಭಾರತಮಲ್ಲನಂ ಬಿಡುಬಿಡೆಂದು ಗಜಿಱಿ ಗರ್ಜಿಸೆ

ಪ್ರತ್ಯೇಕಂ ಪಾರ್ಥನಿರಲ್
ದೈತ್ಯನಸಂಖ್ಯಾತಕೋಟಿಮೂರ್ತಿಯನಾಂತೊಂ
ದತ್ಯಾರಭಟೆಯಿನಿರ್ದಂ
ಪ್ರತ್ಯಗ್ರಭ್ರಾಂತಿ ಕೃಷ್ಣನೊಳ್ ನೆಗಳ್ವಿನೆಗಂ ೬

ಸೂರ್ಯಾಸ್ತಮಯದೊಳಗೇ ಶಿರಶ್ಛೇದನ ಮಾಡಿಕೊಂಡು ಸತ್ಯಪ್ರತಿಜ್ಞನಾಗಲೂ ಧನುರ್ವಿದ್ಯಾಚಾರ್ಯನೂ ಕ್ಷತ್ರಿಯಕುಲವೈದುಷ್ಯದೀಕ್ಷಾಗುರುವೂ ಕುರುವಂಶವನ್ನು ವಜ್ರಾಯುಧದಂತೆ ರಕ್ಷಿಸುವವನೂ ಆದ ದ್ರೋಣಾಚಾರ್ಯನನ್ನು ಅಮೋಘ ಬಾಣಸಮೂಹದಿಂದ ಪರಾಜಯಗೊಳಿಸಿ, ವಿಜಯೋನ್ನತಿಯನ್ನು ಪಡೆಯಲೂ, ಹಣೆಗಣ್ಣಿನ ಈಶ್ವರನಂತೆ ರುದ್ರನೂ ರುದ್ರಾವತಾರನೂ ದಿವ್ಯಾಸ್ತ್ರ ಬಲಭುಜ ಬಲೋದ್ದಾಮನೂ ಆದ ಅಶ್ವತ್ಥಾಮನನ್ನು ಯುದ್ಧವನ್ನೇ ತೊರೆದು ಹೋಗುವಂತೆ ಅಕ್ಷಯತೂಣೀರದ ಮಂತ್ರಾಸ್ತ್ರ ಪ್ರಯೋಗದಿಂದ ಮಾಡಿ ಮಹಿಮೆಯನ್ನು ಪಡೆಯಲೂ, ಕೃತವರ್ಮನ ಬಿಲ್ಲಿನ ಕುಶಲತೆಯಿಂದಲೂ ಯುದ್ಧದಿಂದ ಚಲಿಸದ ಎರಡು ಅಕ್ಷೌಹಿಣೀ ಸಂಖ್ಯೆಯ ತೋಳಿನ ಬಲದಿಂದ ಗರ್ವಿತರಾದ ಸಂಶಪ್ತಕರನ್ನು ಕ್ಷೀಣವಾಗದ ಬಾಣವೃಷ್ಟಿಯಿಂದ ದೇವಮಾರ್ಗಕ್ಕೆ ಸಲ್ಲಿಸಿ, ಶೌರ್ಯಾಡಂಬರವನ್ನು ಅವಲಂಬಿಸಲೂ, ಸುಪ್ರತೀಕವೆಂಬ ಆನೆಯಿಂದ ಭೀಮನನ್ನು ಅದುಮಿ ನೆಗ್ಗಿಸುವ ಸಾಹಸದಿಂದ ಉನ್ಮತ್ತನಾದ ಭಗದತ್ತನನ್ನು ಆ ಆನೆ ಮತ್ತು ಅದರ ತಲೆಯ ಚಿಪ್ಪಿನೊಡನೆ ಛಿನ್ನಕಂಠನಾಗುವಂತೆ ಒಂದೇ ಭಲ್ಲದಿಂದ ಹೊಡೆದು ಬಿಲ್ಲಾಳ್ತನವನ್ನು ಪ್ರಸಿದ್ಧಪಡಿಸಲೂ ಪರಶುರಾಮನ ಅನುಗ್ರಹದಿಂದ ಧನುರ್ವಿದ್ಯೆಯನ್ನು ಪಡೆದವನೂ ನಾನಾಬಗೆಯ ಅಸ್ತ್ರಪ್ರಯೋಗದಲ್ಲಿ ಸ್ತುತ್ಯನೂ ಜಗನ್ನೇತ್ರನಾದ ಸೂರ್ಯನ ಪುತ್ರನೂ ದುರ್ಯೋಧನನ ಪ್ರಿಯಮಿತ್ರನೂ ಕಾಕಧ್ವಜನೂ ಕಾಲಪೃಷ್ಠವೆಂಬ ಬಿಲ್ಲನ್ನು ಧರಿಸಿದವನೂ ಸಹಜಾತ ದಿವ್ಯಕುಂಡಲ ಕಿರಣಸಮೂಹ ವ್ಯಾಪ್ತನೂ ಆದ ಕರ್ಣನನ್ನೂ ದ್ವಂದ್ವಯುದ್ಧದಿಂದ ದೇವಾಂಗನೆಯರೊಡನೆ ರತಿಕ್ರೀಡಾಕಲಹದಲ್ಲಿ ತೊಡಗಿಸಿ ಸಂಪೂರ್ಣ ಮನೋರಥನಾಗಬೇಕಾಗಿರುವ ಭಾರತಮಲ್ಲ ಅರ್ಜುನನನ್ನು ಬಿಡು ಬಿಡು." ಎಂದು ಗರ್ಜಿಸಿದನು. ೬. ಅರ್ಜುನನು ಪ್ರತ್ಯೇಕವಾಗಿರಲು ಆ ರಾಕ್ಷಸನು ಅಸಂಖ್ಯಾತ ಕೋಟಿ ದೇಹಗಳನ್ನು ಧರಿಸಿ, ಕೃಷ್ಣನಿಗೂ ಇದೇನು ಹೊಸ ಸೃಷ್ಟಿಯೋ ಎಂಬ ಭ್ರಾಂತಿಯುಂಟಾಗುವಂತೆ ಅತ್ಯಾಡಂಬರದ

೧. ತತ್ಕರಮುಂ ಕಂಠಂಬೆರಸು ನಿಕೃತ್ತ ಕಂಠನಪ್ಪಂತು (ಕ)

ಆ ವಿವಿಧಮೂರ್ತಿಯೊಳ್ ಮಾ
ಯಾವಿಯ ನಿಜಮೂರ್ತಿಯಿಂತುಟೆಂದಱಿದೆಚ್ಚಂ
ಜ್ಯಾವಿಪುಲವಿರುತಿ ಜಗಮಂ
ತೀವಿರೆ ರೌದ್ರಾಸ್ತ್ರದಿಂ ಜನಾರ್ದನನಾಗಳ್ ೭

ಸಿಡಿಲಿದಱುಣ್ಮುವೊಳ್ಗಿಡಿಯೊಳಂ ಪಡಿಯಲ್ಲೆನಲೆಯ್ದಿ ಸಾಯಕಂ
ನಡೆ ಖಳನದ್ರಿಭೇದಿಕುಲಿಶಂ ನಡೆದೆನ್ನನಿದೊಂದು ನಟ್ಟುದಾ೦
ಪಡೆದೆನಿಷುಪ್ರಹಾರಮನಪೂರ್ವಮನೆಂದತಿಹರ್ಷಮತ್ತನಾ
ದೆಡೆಯೊಳೆ ತನ್ನಿಶಾಟಭುಜದಿಂದೆ ನುಸುಸಳ್ದಿಟಿತಂದನರ್ಜುನಂ ೮

ವ॥ ಆ ವಿಜಯನ ಪರಾಜಯದೀನ[1]ವದನಮಂ ಹಿರಣ್ಯಾಕ್ಷರಿಪು ನಿರೀಕ್ಷಿಸಿ

ನೆರೆದೆಂಟುಂ ದಿಗ್ಗಜಂಗಳ್ ದಿಗಧಿಪತಿ[2]ಭಟಪ್ರೇರಿತಂಗಳ್ ಭ್ರುತಾಡಂ
ಬರಶಂಬಸ್ಪರ್ಧಿದಂತಾಗ್ರದೊಳುರಮನನಷ್ಟಂಭದಿಂದೊತ್ತೆ ತನ್ನಿ
ಷ್ಠುರದಂತಸ್ಪರ್ಶಹರ್ಷೋದ್ಗತಪುಳಕದೆ ಮಾಱೊತ್ತಿ ದೈತ್ಯೇಶನಾ ಭೂ
ಧರಧುರ್ಯೇಭಂಗಳಂ ತೊಟ್ಟನೆ ಕೆಡಪುವನಾಶ್ಚರ್ಯಮೀ ದೈತ್ಯವೀರ್ಯಂ ೯

ಮಾದೇವಂಗಂ ಬಲ್ಲಿದ
ನೀ ದೈತ್ಯಂ ಬ್ರಹ್ಮವರದಿನಿವನಿಂದೆನಗಿಂ
ದಾದುದು ಪರಿಭವಮೆಂಬೀ
ಖೇದಮಿದೇಂ ಬ್ರಹ್ಮವರಮಿದಾರ್ಗಮಲಂಘ್ಯಂ ೧೦

ಆರ್ಭಟದಿಂದ ಇದ್ದನು. ೭. ಆಗ ಕೃಷ್ಣನು ಆ ವಿವಿಧ ಮೂರ್ತಿಗಳಲ್ಲಿ ಆ ರಾಕ್ಷಸನ ನಿಜಮೂರ್ತಿ ಯಾವುದೆಂಬುದನ್ನು ತಿಳಿದು ಬಿಲ್ಲಿನ ಹೆದೆಯ ಘನವಾದ ಟಂಕಾರವು ಜಗತ್ತನ್ನು ತುಂಬುತ್ತಿರಲು ರೌದ್ರಾಸ್ತ್ರವನ್ನು ತೊಟ್ಟು ಹೊಡೆದನು. ೮. ಸಿಡಿಲು ಈ ಬಾಣದಿಂದ ಹೊರಡುವ ಒಂದು ಒಳ್ಳೆಯ ಕಿಡಿಗೂ ಸಮವಲ್ಲವೆನ್ನುವಂತೆ ಆ ರೌದ್ರಾಸ್ತ್ರವು ಅವನ ಮೈಯಲ್ಲಿ ನೆಟ್ಟುಕೊಂಡಿತು. ಆ ಖಳನು ಪರ್ವತಗಳನ್ನು ಭೇದಿಸುವ ವಜ್ರಾಯುಧವೂ ನಾಟದ ನನ್ನನ್ನು ಇದು ನಾಟಿತು. ನಾನು ಅಪೂರ್ವವಾದ ಈ ಬಾಣದೇಟನ್ನು ತಿಂದೆನು. ಎಂದು ಅತಿ ಹರ್ಷದಿಂದ ಮತ್ತನಾದನು. ಆ ಸಮಯದಲ್ಲಿ ಅರ್ಜುನನು ಅವನ ಭುಜದಿಂದ ನುಸುಳಿಕೊಂಡಿಳಿದನು. ವ॥ ಆ ಅರ್ಜುನನ ಪರಾಜಯದ ದೀನಮುಖವನ್ನು ಕೃಷ್ಣನು ನೋಡಿ ಹೀಗೆಂದನು. ೯. "ಒಟ್ಟುಗೂಡಿದ ದಿಗ್ಗಜಗಳೆಂಟೂ ದಿಕ್ಪಾಲರಿಂದ ಪ್ರೇರಿತಗಳಾಗಿ ವಜ್ರಾಯುಧಾಡಂಬರದೊಡನೆ ಸ್ಪರ್ಧಿಸುವ ತಮ್ಮ ದಂತಗಳ ತುದಿಯಿಂದ ಗರ್ವದೊಡನೆ ಎದೆಯನ್ನು ಇರಿದರೆ ಆತ ಆ ಕಠಿನವಾದ ದಂತದ ಆ ಇರಿತದ ಹರ್ಷದಿಂದ ಆದ ರೋಮಾಂಚನದಿಂದ ಪ್ರತಿಯಾಗಿ ಇರಿದು ಭೂಭಾರವಹನಸಮರ್ಥಗಳಾದ ಆ ದಿಗ್ಗಜಗಳನ್ನು ತಟ್ಟನೆ ಬೀಳಿಸುವನು. ಈ ದೈತ್ಯನ ವೀರ್ಯವು ಆಶ್ಚರ್ಯಕರವಾದುದು. ೧೦. ಈ ದೈತ್ಯನು ಬ್ರಹ್ಮದೇವನ ವರಪ್ರಭಾವದಿಂದ ಮಹಾದೇವ (ರುದ್ರ)ನಿಗಿಂತಲೂ ಬಲಿಷ್ಠನು. ಇವನಿಂದ ನನಗೆ ಈಗ ಈ ಪರಿಭವವಾಯಿತು ಎಂಬ ಖೇದವು ನಿನಗೆ

---

೧. ವದನಮಂ ಕಾರುಣ್ಯದಿಂ ಹಿರಣ್ಯಕರಿಪು ನೋಡಿ (ಕಗ) ೨. ಭಟಾಕೀಲಿತಂಗಳ್ (ಖ)

ವ॥ ಎಂದು [೧]ಪಾಂಡುನಂದನನ ಮನದ ಹೇವಮಂ ವಸುದೇವನಂದನಂ ಕಳೆದು ಪೆಂಡವಾಸತಂಡವಮಂ ನಿಜಪುರಕ್ಕೆ ಕಳಿಪಿ ಕಲಹಕೇಳೀನಿಮಿತ್ತಂ ಬರುತ್ತುಮಿರ್ಪಿನಂ ನಿಕುಂಭನಂಬರಗತಿಯಿನತಿವೇಗದಿಂ ಪೋಗಿ ಷಟ್ಪುರಬಹಿರ್ದ್ವಾರಕ್ಕನತಿದೂರದೊಳಿರ್ಪುದೊಂದಗ್ರಹಾರದೊಳೊರ್ವಂ ಮಹಾದ್ವಿಜನಮ್ನಧ್ವರಪೂಜೆಗೆಂದು ನೆರಪಿದ ಸಮಸ್ತರಾಜನ್ಯಕಮಂ ಸೌಜನ್ಯಕದಿನೊಡಗೊಂಡುಯ್ದು ದುರ್ಜಯ ಭುಜಾರ್ಜಿತಂಗಳಪ್ಪ ಚತುರ್ದಶಭುವನೈಕಸಾರವಸ್ತುವಾಹನ ಸಮೂಹಂಗಳಿನೌಚಿತ್ಯಮಂ ಮಾಡಿ ಲಬ್ಧಸಾಂಪರಾಯಸಹಾಯನಾಗಿ ನಿಜನಿಧನಸೂಚಕೋತ್ಪಾತಕೌತುಕರಸಮನಾತ್ಮೋದಾರವೀರರಸದಿನೊತ್ತಂಬರಿಸುತ್ತುಂ ಅಂದಿನಿರುಳಂ ಕಳೆದಾದಿತ್ಯೋದಯದೊಳಾಹವೋತ್ಸಾಹದಿಂದಿರೆ

ಭಾರತಮಲ್ಲನರ್ಜುನನ ಶಂಬರವೈರಿಯ ಚಂಡಚಾಪಮೌ
ರ್ವೀರವಮೇಕದೇಶದೊಳಡಂಗಿದುದಲ್ಲದೆ [೨]ಕೂಡಡಂಗೆ ದಿ
ಗ್ವಾರಣವಾರ್ದಡಂಗೆ ಚತುರಂತಧರಿತ್ರಿ [೩]ಪೊದಟ್ಟು ಷಟ್ಪುರ
ದ್ವಾರದೊಳಂದು ಕೇಲಣಮಾದುದು ಕೃಷ್ಣನ ಶಾರ್ಙ್ಗಘೋಷಣಂ ೧೧

ಬೇಡ. ಬ್ರಹ್ಮವರವು ಯಾರೂ ಮೀರಲಾಗದುದು." ವ॥ ಎಂದು ಅರ್ಜುನನ ಮನಸ್ಸಿನ ದುಃಖವನ್ನು ಕೃಷ್ಣನು ಹೋಗಲಾಡಿಸಿ, ರಾಣಿವಾಸದ ತಂಡವನ್ನು ತನ್ನ ಪಟ್ಟಣಕ್ಕೆ ಕಳುಹಿಸಿ, ಸಮರಕ್ರೀಡೆಗಾಗಿ ಬರುತ್ತಿದ್ದನು. ನಿಕುಂಭನು ಆಕಾಶಗಮನದಿಂದ ಅತಿವೇಗದಲ್ಲಿ ಅಲ್ಲಿಂದ ಹೊರಟು ಷಟ್ಪುರದ ಹೊರಬಾಗಿಲಿಗೆ ಸ್ವಲ್ಪದೂರದಲ್ಲಿರುವ ಅಗ್ರಹಾರದ ಒಬ್ಬ ಬ್ರಾಹ್ಮಣೋತ್ತಮನು ಯಾಗಪೂಜೆಗೆಂದು ಸೇರಿಸಿದ ಸಮಸ್ತರಾಜಕ್ಷತ್ರಿಯಸಮೂಹವನ್ನು ಸೌಜನ್ಯದಿಂದಲೇ ಸಂಗಡ ಕರೆದುಕೊಂಡು ಹೋದನು. ದುರ್ಜಯರಾದ ವೀರರು ತಮ್ಮ ತೋಳ್ಬಲದಿಂದ ಸಂಪಾದಿಸಿದ ಹದಿನಾಲ್ಕು ಲೋಕಗಳ ಪ್ರಮುಖಸಾರ ವಸ್ತುವಾಹನ ಸಮೂಹಗಳಿಂದ ಆ ರಾಜರನ್ನು ಉಪಚರಿಸಿ, ಯುದ್ಧಕ್ಕೆ ಬೇಕಾದ ಸಹಾಯವುಳ್ಳವನಾದನು. ತನ್ನ ಮರಣ ಸೂಚಕವಾದ ಉತ್ಪಾತ ಕೌತುಕರಸವನ್ನು ತನ್ನ ಅತಿ ಮಹತ್ತಾದ ವೀರರಸದಿಂದ ಒತ್ತರಿಸಿ ತಳ್ಳುತ್ತ ಅಂದಿನ ರಾತ್ರೆಯನ್ನು ಕಳೆದನು. ಮರುದಿನ ಸೂರ್ಯೋದಯ ಸಮಯದಲ್ಲಿ ಯುದ್ಧದ ಉತ್ಸಾಹದಿಂದ ಇದ್ದನು. ೧೧. ಭಾರತ ಮಲ್ಲನಾದ ಅರ್ಜುನನ ಮತ್ತು ಮನ್ಮಥನ ಕ್ರೂರವಾದ ಬಿಲ್ಲಿನ ಮೌರ್ವಿಯ ಧ್ವನಿಯು ಎಲ್ಲೋ ಒಂದು ಕಡೆಯಲ್ಲಿ ಅಡಗಿತು. ಅಲ್ಲದೆ ದಿಗ್ಗಜಗಳು ಘೀಂಕರಿಸಿ ಅಡಗಿದವು. ಚತುರ್‌ದಿಗಂತಭೂಮಿಯೂ ಅಡಗುವಂತೆ ಕೃಷ್ಣನ ಶಾರ್ಙ್ಗಚಾಪದ ಟಂಕಾರವು ಷಟ್ಪುರದ್ವಾರದಲ್ಲೂ ಹೆಚ್ಚಾಗಿ ಕೇಳಿಸಿತು.

---

೧. ಪಾಂಡುಸುತನ ಮನಃಖೇದವಮಂ (ಕಗ) ೨. ಕೂಡಡಂಗೆ ದಿಗ್ವಾರಣವಟ್ಟಿಡಂಗೆ (ಕ) ೩. ಪೊರಳ್ದು (ಕಗ)

ಆರವಮಿಕ್ಕಿ ಡೊಕ್ಕರಿಸೆ ಬಾಯ್ದೆಱೆದುರ್ವರೆ ಘೀಳಿಡುತ್ತುಮು
ದ್ಧಾರಿಸಿದತ್ತು ಗರ್ಭಗತಷಟ್ಪುರಸೇನೆಯನೆಂಬಿನಂ [1]ಮಹೀ
ದ್ವಾರದಿನಂದು ಶಾರ್ಙ್ಗರುತಿಗೇಳ್ದು ಸಸಂಭ್ರಮಘೋಷಷಟ್ಪುರೀ
ಭೂರಿಬಲವಂ ಸಹಾಯನೃಪಕೋಟಿಯುತಂ ಪೊಱಮಟ್ಟುದಾವಗಂ ೧೨

ಪೊಱಮಟ್ಟು ಬಲಂ ಕಿಕ್ಕಿಱಿ
ಗಿಱಿದೆತ್ತಂ ನಡೆಯೆ ತನ್ಮಹಾಸೈನ್ಯಮನ
ಬ್ಬುಱಿ ಕಾಳಕಾತ್ರಿ ನುಂಗಿದ
ತೆಱನಾಯ್ತು ಪದೋತ್ಥಸಾಂದ್ರಧೂಳೀತಿಮಿರಂ ೧೩

ಬಳಭಾರಂ ಭೂಮಿಯಂ ಬಾಯ್ದೆಱೆಸೆ ನೆಗೆದ ಪಾತಾಳಮೂಲಾಂಧಕಾರಂ
ಬಳವತ್ಸೈನ್ಯೇಭಕರ್ಣಾನಿಳನುದಧಿಗಳಂ ತುಳ್ಕೆ ನೀಳ್ದೌರ್ವಧೂಮಾ
ವಳಿ ಸೇನಾಕೇತುಚಕ್ರಂ ಪೊಡೆಯೆ ಪೊಡರ್ದ ರಾಹುಸ್ಫಟಾಟೋಪಮೆಂಬಂ
ತಿಳೆಯಂ ತಳ್ತುರ್ವಿ ಪರ್ವಿತ್ತಮರಪಥಮನಾ ಸೈನ್ಯಧೂಳೀತಮಿಸ್ರಂ ೧೪

ವ|| ಅಂತು ಚತುರಂಗಬಲಂ ಕ್ಷಿತಿಕ್ಷೋಭಮಾಗೆ ನಡೆದು ಜಗತ್ತ್ರಯದ್ರೋಹಂ ವ್ಯೂಹತ್ರಯದಿನೊಡ್ಡಿ ನಿಲೆ

[2]ಧೃತರಜನನಿಲಂ ದಿತಿಜ
ಪ್ರತಿಕೂಲಂ ಹರಿಗೆ ಸೈನ್ಯದರ್ಶನದನುಕೂ
ಲತೆಯಂ [3]ಮೆಱೆದನುಚಿತಂ
ದಿತಿಜಪ್ರತಿಕೂಲನಚ್ಯುತಂಗನುಕೂಲಂ ೧೫

೧೨. ಆ ಧ್ವನಿಯು ಹೊಡೆದು ಅದುಮಲು ಭೂಮಿಯು ಬಾಯ್ತೆರೆದು, ಕಿರಿಚುತ್ತ ಗರ್ಭದಲ್ಲಿ ಇದ್ದ ಷಟ್ಪುರ ಸೇನೆಯನ್ನು ಕಾರಿತು ಎನ್ನುವಂತೆ, ಅಂದು ಶಾರ್ಙ್ಗದ ಧ್ವನಿಯನ್ನು ಕೇಳಿ ಸಂಭ್ರಮದಿಂದ ಘೋಷಿಸುತ್ತ ಷಟ್ಪುರಸೈನ್ಯವು ಭೂಮಿಯ ದ್ವಾರದಿಂದ ಸಹಾಯಕರಾದ ಕೋಟ್ಯಂತರರಾಜರೊಡನೆ ಹೊರಟುಬಂದಿತು. ೧೩. ಹೊರಟ ಆ ಸೈನ್ಯವು ಕಿಕ್ಕಿರಿದು ಎಲ್ಲ ಕಡೆಗೂ ನಡೆಯಿತು. ಆ ಸೈನ್ಯದ ಕಾಲ ತುಳಿತದಿಂದ ಎದ್ದ ಸಾಂದ್ರವಾದ ಧೂಳಿನ ಕತ್ತಲೆಯು, ಆ ಮಹಾಸೈನ್ಯವನ್ನು ಕಾಳರಾತ್ರಿಯು ಭಯಂಕರವಾಗಿ ನುಂಗಿದಂತಾಯಿತು. ೧೪. ಸೈನ್ಯದ ಭಾರವು ಭೂಮಿಯ ಬಾಯನ್ನು ಬಿಡಿಸಿದುದರಿಂದ ಮೇಲೆದ್ದ ಪಾತಾಳ ಮೂಲದ ಕಗ್ಗತ್ತಲೆ, ಬಲಿಷ್ಠವಾದ ಸೈನ್ಯದ ಆನೆಗಳ ಕಿವಿಯ ಬೀಸುಗಾಳಿ ತುಳುಕಿಸಿದುದರಿಂದ ಮೇಲೆದ್ದ ಔರ್ವಾಗ್ನಿಯ ಹೊಗೆ, ಸೇನೆಯ ಧ್ವಜಮಂಡಲವೂ ಹೊಡೆದುದರಿಂದ ಅಲುಗಿದ ರಾಹುವಿನ ಹೆಡೆಯು ಆಟೋಪ ಎನ್ನುವಂತೆ ಆ ಸೈನ್ಯದ ಧೂಳಿನ ಕತ್ತಲೆಯು ಭೂಮಿಯಲ್ಲಿ ತುಂಬಿ ಹೆಚ್ಚಾಗಿ ಆಕಾಶವನ್ನೂ ವ್ಯಾಪಿಸಿತು. ವ|| ಹಾಗೆ ಚತುರಂಗಬಲವು ಭೂಮಿಗೇ ಹೆದರಿಕೆಯಾಗುವಂತೆ ನಡೆದು ಬಂದಮೇಲೆ ಜಗತ್ತ್ರಯ ದ್ರೋಹಿಯು ವ್ಯೂಹತ್ರಯವನ್ನೊಡ್ಡಿ ಪ್ರತಿಭಟಿಸಿ ನಿಂತನು. ೧೫. ಧೂಳನ್ನು ಧರಿಸಿದ ವಾಯುವು ರಾಕ್ಷಸನಿಗೆ ಪ್ರತಿಕೂಲವಾಗಿ ಬೀಸಿ, ಕೃಷ್ಣನಿಗೆ ಸೈನ್ಯವನ್ನು ನೋಡುವುದಕ್ಕೆ

---

೧. ಬಹಿರ್ದ್ವಾರದಿನಂದು (ಕಗ) ೨. ಹೃತರಜನೀಲಂ ದಿವಿಜ (ಖ) ೩. ಮೆಱೆವ (ಕಗ)

ವ|| ಆಗಳಗುರ್ವಂ ಬೀಱೆ ಬೇಱೊಂದು ದೆಸೆಯೊಳೊಡ್ಡಿ ನಿಂದ ರಾಜಸೈನ್ಯಮಂ ನೋಡಿ ಚೋಳನಾಭೀಳತೆಯಂ ಮಾಳವನಾಳಾಪಮಂ ಗೂರ್ಜಕನ ದೌರ್ಜನ್ಯಮಂ ಗುಜ್ಜಳನ ಬಿಜ್ಜೆಯಂ ಕರಹಾಟನ ಕೌಟಿಲ್ಯಮಂ ವರಾಟನಾಟೋಪಮಂ ಪಾರಿಯಾತ್ರನ ವೀರವೃತ್ತಿಯಂ ಪಾರಶೀಕನ ಪೌರುಷಮಂ ಕೇರಳನಾರಭಟೆಯಂ ಹಮ್ಮೀರನಣ್ಮಂ ಹೂಣನಕ್ಷೂಣಬಲಮಂ ಪಾಂಡ್ಯನ ಗಂಡಗುಣಮಂ ಪಲ್ಲವನ ಬಿಲ್ಲಾಳ್ತನಮಂ ಕೋಸಳನ ಸಾಹಸಮಂ ಕೌಶಲನ ಆದೇಶಮಂ ಡಹಳನಹಂಮಿಕೆಯಂ ಸಿಂಹಣನ ಸಂರಂಭಮಂ ಡೊಕ್ಕಾರನುರ್ಕಂ ತುರುಷ್ಕನಬಿರ್ಕೆಯಂ ಬರ್ಬರನ ಗರ್ಬಮಂ ಮಂದರನ ದಂದು[೧]ಗ ವ್ಯವಸಾಯಮಂ ಮಾದ್ರನುದ್ರೇಕಮಂ ಮರುವಿನುರವಣೆಯಂ ವಂಗನ ತುಂಗವಿಕ್ರಮಮಂ ಅಂಗನ ಸಂಗರೋತ್ಸಾಹಮಂ ಸೈಂಧವನ ವಂದ್ಯಕೋಪಮಂ ಶಂಬರನವಷ್ಟಂಭಮಂ ಮಗಧನ ಮೊಗದ ಮುಳಿಸಂ ಸಗರನ ಬಗೆಯ ಕಲುಷಮಂ ಸೌರಾಷ್ಟ್ರನ ಧಾರ್ಷ್ಟ್ಯಮಂ ಖಸಕನ ಮಸಕಮಂ ನಿವಾರಿಸಿ ಜಯಂಗೆಯ್ವುದೆಂದು ವಿಜಯಂಗೆ ಪೇೞ್ದು ಮತ್ತೊಂದೆಡೆಯೊಳೊಡ್ಡಿ ನಿಂದ ಕೂಟಯೋಧಿನಿಶಾಟಬಲಮಂ ನೋಡಿ ಬರಸಿಡಿಲ ಬಳಗದಂತೆ ಕುಳಿಕಾಹಿಯ ಕಡುಪಿನಂತೆ ನೆಲಮುಕ್ಕನ ತೆಕ್ಕೆಯಂತೆ ಮಿತ್ತುವಿನ ಮೊತ್ತದಂತಿರ್ದಸಂಖ್ಯಾತ ದೈತ್ಯನಾಯಕರ ಮಾಯಾಪ್ರಯೋಗಮಂ ಪ್ರತಿಹತಂ ಮಾಡಿ ಗೆಲ್ವುದೆಂದು ಶಂಬರಧ್ವಂಸಿಗೆ ಪೇೞ್ದು ಮಧ್ಯಪ್ರದೇಶದೊಳೊಡ್ಡಿ ನಿಂದನಂ ಚಾತುರ್ದಂತವರೂಥಿನೀಸನಾಥನಂ ಷಟ್ಪುರನಾಥನಂ ಕಂಡಾನೀತವ್ಯಾಹತದಿವ್ಯಾಯುಧಮನ

ಅನುಕೂಲತೆಯನ್ನು ಪ್ರಕಟಿಸಿದನು. ಅದು ಉಚಿತವೇ. ರಾಕ್ಷಸರಿಗೆ ಪ್ರತಿಕೂಲನಾದವನು ದೇವನಾದ ಕೃಷ್ಣನಿಗೆ ಅನುಕೂಲನಾಗಿರುವುದು ಸಹಜ. ವ|| ಆಗ ಭಯವನ್ನು ಬೀರಿ ಬೇರೊಂದು ದಿಕ್ಕಿನಲ್ಲಿ ಒಡ್ಡಿನಿಂತ ಕ್ಷತ್ರಿಯಸೈನ್ಯವನ್ನು ಕೃಷ್ಣನು ನೋಡಿ, "ಚೋಳರ ಭಯಂಕರತೆಯನ್ನೂ ಮಾಳವನ ಆಲಾಪವನ್ನೂ ಗುರ್ಜರನ ದೌರ್ಜನ್ಯವನ್ನೂ ಬಿಜ್ಜಳನ ವಿದ್ಯೆಯನ್ನೂ, ಕರಹಾಟನ ಕುಟಿಲತೆಯನ್ನೂ ವರಾಟನ ಆಟೋಪವನ್ನೂ ಪಾರಿಯಾತ್ರನ ವೀರವರ್ತನೆಯನ್ನೂ ಪಾರಶೀಕನ ಪೌರುಷವನ್ನೂ ಕೇರಳನ ಆರ್ಭಟವನ್ನೂ ಹಮ್ಮೀರನ ಪೌರುಷವನ್ನೂ ಹೂಣನ ಕ್ಷೀಣವಾಗದ ಬಲವನ್ನೂ ಪಾಂಡ್ಯನ ಗಂಡುತನವನ್ನೂ ಪಲ್ಲವನ ಬಿಲ್ಲಾಳ್ತನವನ್ನೂ ಕೋಸಲನ ಸಾಹಸವನ್ನೂ ಕೌಶಲನ ಆದೇಶವನ್ನೂ ಡಹಳನ ಹಮ್ಮನ್ನೂ ಸಿಂಹಳನ ಸಡಗರವನ್ನೂ ಡೊಕ್ಕಾರನ ಔದ್ಧತ್ಯವನ್ನೂ ತುರುಷ್ಕನ ಆವರಿಸುವಿಕೆಯನ್ನೂ ಬರ್ಬರನ ಗರ್ವವನ್ನೂ ಮಂದರನ ತೊಂದರೆಯು ಉದ್ಯೋಗವನ್ನೂ ಮಾದ್ರನ ಉದ್ರೇಕವನ್ನೂ ಮರುವಿನ ದುಡುಕುತನವನ್ನೂ ವಂಗನ ಉನ್ನತ ಪರಾಕ್ರಮವನ್ನೂ ಅಂಗನ ಯುದ್ಧೋತ್ಸಾಹವನ್ನೂ ಸೈಂಧವನ ಸಾರ್ಥಕ ಕೋಪವನ್ನೂ ಶಂಬರನ ಆತ್ಮವಿಶ್ವಾಸವನ್ನೂ ಮಗಧನ ಮುಖದ ಮನಿಸನ್ನೂ ಸಗರನ ಮನಸ್ಸಿನ ಕಲ್ಮಷವನ್ನೂ ಸೌರಾಷ್ಟ್ರನ ಧಾರ್ಷ್ಟ್ಯವನ್ನೂ ಖಸಕನ ಮಸಕವನ್ನು ನಿವಾರಿಸಿ, ಜಯವನ್ನು ಪಡೆಯಬೇಕು ಎಂದು ಅರ್ಜುನನಿಗೆ ಹೇಳಿದನು. ಮತ್ತೊಂದು ಕಡೆ ಒಡ್ಡಿನಿಂತ ಮೋಸದ ಯುದ್ಧವನ್ನು ಮಾಡುವ ರಾಕ್ಷಸ ಸೇನೆಯನ್ನು ನೋಡಿ, "ಬರಸಿಡಿಲ ಬಳಗದಂತೆ ಕೇಕುರಿನ ಕ್ರೌರ್ಯದಂತೆ ಸರ್ಪದ ತೆಕ್ಕೆಯಂತೆ ಮೃತ್ಯುವಿನ ಮೊತ್ತದಂತೆ ಇದ್ದ ಅಸಂಖ್ಯಾತರಾಕ್ಷಸನಾಯಕರ ಮಾಯಾ ಪ್ರಯೋಗವನ್ನು ಪ್ರತಿಹತಮಾಡಿ, ಗೆಲ್ಲಬೇಕೆಂದು" ಮನ್ಮಥನಿಗೆ ಹೇಳಿದನು. ಮಧ್ಯಪ್ರದೇಶದಲ್ಲಿ ಒಡ್ಡಿ ನಿಂತ ನಾಲ್ಕು ಕೋರೆಗಳಿರುವ ಆನೆಗಳ ಸೇನೆಯಿಂದ ರಕ್ಷಿತನಾದ ಷಟ್ಪುರನಾಥನನ್ನು ಕಂಡನು. ನಾನು ಈತನ ಅಪ್ರತಿಹತವಾದ ದಿವ್ಯಾಯುಧವನ್ನೂ, ಅಕಂಟಕಸಾಹಸವನ್ನೂ, ಅಖಂಡವಾದ ಉಚ್ಚಂಡ ತೇಜಸ್ಸನ್ನೂ, ಅವಿಶ್ರಾಂತ ವಿಕ್ರಮವನ್ನೂ

---

೧. ಧುರವ್ಯವಸಾಯಮಂ (ಕಗ)

ಪ್ರತ್ಯೂಹಸಾಹಸಮನಖಂಡಿತೋಚ್ಚಂಡತೇಜಮನವಿಶ್ರಾಂತವಿಕ್ರಾಂತಮನಪ್ರಮೇಯ ಮಾಯಾವಿತ್ವಮನನಿವಾಯ ಧೈರ್ಯಮನಸಾಮಾನ್ಯಸಾಮರ್ಥ್ಯಮನವಕ್ಲಿಷ್ಟಭುಜಾವಷ್ಟಂಭಮಮಂ ಭಂಗಿಸಿ ಸಂಗರಚೈತ್ರಮಂ ಕ್ಷಣಮಾತ್ರದಿಂ ಕೈಕೊಳ್ವೆನೆಂದರವಿಂದ[1]ನಾಭನಕ್ಷೋಭದಿನದಿರದಿದಿರಂ ನಡೆಯೆ ಕದನೋದ್ಯೋಗ ಶಂಖಕಾಹಳ ಭಂಭಾದಿಗಂಭೀರನಾದಮಂಭೋರುಹಭವಾಂಡಮಮಂ ತೀವಿದಾಗಳ್

ಎಲೆ ಪೊಣ್ಮಿತ್ತು ಮುರಾರಿಗಾಂತರಿಚಮೂ ಭಂಭಾರವಂ ಭಾರವಂ
ನೆಲಕಂ ಪಿಂಗಿಸಿ ಕೀರ್ತಿಯಿಂದಿಟೆಸಿ ನೀಹಾರಾಗಮಂ ರಾಗಮಂ
ಸರಿ ಮಾಳ್ಕುಂ ನಮಗಚ್ಯುತಂ ತೊಲಗಿಮಿಂ ಸಂದೇಹದಿಂ ದೇಹದಿಂ
ಪುಲಕಂ ಪೊಣ್ಮಿರೆ ನೋಡುವಂ ಪರಿಮಿಳದ್ರಾಜನ್ಯಮಂ ಜನ್ಯಮಂ ೧೬

ವ॥ ಎಂದಖಿಳವೃಂದಾರಕವೃಂದವೆಟ್ಟಿಂದು ನಭದೊಳಭಿರಾಮತೆಯಿನಿರೆ

ಶಾರದಘನರುಚಿ ಸಮರವಿ
ಶಾರದ ವೀರಾವಲೋಕಸಮ್ಮದನಿರ್ದಂ
ನಾರದನಾತನ ವಿಕೃತಿಯ
ನಾರದನಂದೊಸೆದು ನೋಡಿ ವಿಸ್ಮಿತರಾದರ್ ೧೭

ವ॥ ಅನ್ನೆಗಂ

ಮುಸಕಂಗೊಡತ್ತಮಿತ್ತಂ ಮುಸುಜೆ ನಿಜನಿಜಾಕ್ಷೌಹಿಣೀಸೈನ್ಯಯುಕ್ತರ್
ವಸುಧೇಶರ್ ಘೋರಸೋರಂತಿಸುವುದುಮಿಜೆವೊಂದಸ್ತ್ರಶಸ್ತ್ರಂಗಳಂ ಛೇ
ದಿಸುತುಂ ತದ್ರೂಪರಂಗಂಗಳನವರವರಕ್ಷೌಹಿಣೀಸೈನ್ಯಮಂ ತೆ
ತ್ತಿಸುತಂ ಪ್ರತ್ಯೇಕವಂಬಿಂ ಪೊಣರ್ದನತಿರಥಂ [2]ಪಾರ್ಥನುತ್ತಾರಿಸಾರ್ಥಂ ೧೮

ಅಮಿತ ಮಾಯಾವಿತ್ವವನ್ನೂ, ಅನಿವಾರ್ಯಧೈರ್ಯವನ್ನೂ, ಅಸಾಮಾನ್ಯ ಸಾಮರ್ಥ್ಯವನ್ನೂ ಲೀಲಾಭುಜಗರ್ವವನ್ನು ಭಂಗಿಸಿ ಯುದ್ಧಜಯವನ್ನು ಕ್ಷಣಮಾತ್ರದಲ್ಲಿ ಪಡೆಯುವೆನೆಂದು ಆ ಕಮಲನಾಭನು ಉದ್ವೇಗ ಭೀತಿಗಳಿಲ್ಲದವನಾಗಿ ಎದುರಿಸಿ ನಡೆದನು. ಯುದ್ಧೋದ್ಯೋಗ ಸೂಚಕವಾದ ಶಂಖಕಹಳೆ ಭಂಭವೇ ಮೊದಲಾದವುಗಳ ಗಂಭೀರನಾದವು ಬ್ರಹ್ಮಾಂಡವನ್ನು ತುಂಬಿತು. ಆಗ ೧೬. "ಎಲೆಲಾ ಕೃಷ್ಣನಿಗೆ ಪ್ರತಿಭಟಿಸಿದ ಶತ್ರುಸೈನ್ಯದ ಭಂಭಾಧ್ವನಿಯು ಹೊಮ್ಮಿತು. ಆ ಅಚ್ಯುತನು ಭೂಭಾರವನ್ನು ಹೋಗಲಾಡಿಸುವನು. ತನ್ನ ಕೀರ್ತಿಯ ಔನ್ನತ್ಯದಿಂದಲೂ ಬಿಳುಪಿನಿಂದಲೂ ಹಿಮಗಿರಿಯನ್ನೂ ಕುಗ್ಗಿಸುವನು. ನಮಗೆ ಪ್ರೀತಿ ಸಂತೋಷಗಳನ್ನು ಉಂಟುಮಾಡುವನು. ಇನ್ನು ಸಂದೇಹವನ್ನು ಬಿಡಿ. ದೇಹವು ರೋಮಾಂಚಗೊಳ್ಳುವಂತೆ ಕ್ಷತ್ರಿಯಸಮೂಹದೊಡನೆ ಆಗುವ ಯುದ್ಧವನ್ನು ನೋಡೋಣ." ವ॥ ಎಂದು ಅಖಿಲ ದೇವತೆಗಳ ಸಮೂಹವೂ ಬಂದು ಆಕಾಶದಲ್ಲಿ ಮನೋಹರವಾಗಿ ಕಂಗೊಳಿಸಿತು. ೧೭. ಶರತ್ಕಾಲದ ಮೇಘದಕಾಂತಿಯನ್ನು ಪಡೆದಿರುವವನೂ ಯುದ್ಧವಿಶಾರದರಾದ ವೀರರನ್ನೂ ನೋಡುವುದರಲ್ಲಿ ಅತಿಯಾಗಿ ಸಂತೋಷಪಡುವವನೂ ಆದ ನಾರದನು, ಆಕಾಶದಲ್ಲಿ ಬಹಳ ಕುತೂಹಲದಿಂದ ಇದ್ದನು. ಆಗಿನ ಆತನ ವಿಕಾರವನ್ನು ಆಸಕ್ತಿಯಿಂದ ನೋಡಿ ಯಾರು ತಾನೇ ವಿಸ್ಮಯಗೊಳ್ಳದಿರುವರು? ವ॥ ಅಷ್ಟರಲ್ಲಿ ೧೮. ಶತ್ರುಸಮೂಹವನ್ನು ಮುಳುಗಿಸಿದ ಅತಿರಥನಾದ ಅರ್ಜುನನು

---

೧. ನಾಭನತಿಕ್ಷೋಭದಿ (ಖ) ೨. ಪಾರ್ಥನುತರಾರ್ಥಂ (ಕ) ಪಾರ್ಥನಿತ್ತಾರಿತಾರ್ಥಂ (ಗ)

ನರನಿಸುವೀ ಕ್ರಮಂ ನೆಗಟ್ದ ಖಾಂಡವದಾಹದೊಳಿಲ್ಲದದ್ಭುತಂ
ನರನಿವನೊರ್ವನಲ್ಲ ಶತಕೋಟಿನರರ್ ನೆರೆದೆಚ್ಚರೆಂಬಿನಂ
ಶರಮಯಮಂಬರಂ ಪೆಣಮಯಂ ಸಮರಕ್ಷಿತಿ ಚಾಪಟಂಕೃತ
ಸ್ವರಮಯವಷ್ಟದಿಗ್ವಳಯಮಪ್ಪಿನಮಂದಿಸುತುರ್ದಿನರ್ಜುನಂ ೧೯

ವ॥ ಅದಲ್ಲದೆಯುಮಿತ್ತಲ್

ಇದಿರೊಳ್ ನಿಂದು ನಿಜಸ್ವರೂಪದಿನದೆಂತು ದಾನವರ್ ಕಾದಲಾ
ರದದೃಶ್ಯಾಕೃತಿಯಿಂದಿಸುತ್ತಿರಲದೃಶ್ಯಾಕಾರಂ [೧]ದಿವ್ಯಮಂ
ತ್ರದೆ ತನ್ನೆಚ್ಚುರಗೇಷುಗಳ್ ನಡೆ ಬಟಿಕ್ಕಂ ಭೀಕರಾನೇಕ[೨]ರೂ
ಪದ ಮಯಾವಿಗಳೆಯ್ದುವಂತೆ ನೆಗಟ್ದಿಂ ಮಾರಂ ಪ್ರತೀಕಾರಮಂ ೨೦

ವ॥ ಅದೆಂತೆನೆ

ವಾರಣವಾಗಿ ಪೋರ್ವ ಪುಲಿಯಾಗಿ ತಗುಳ್ವಹಿಯಾಗಿ ಕೊಲ್ವ ಕಂ
ಠೀರವವಾಗಿ ಪಾಯ್ವ ತಗರಾಗಿ ಪಳಂಚುವ ಪಂದಿಯಾಗಿ ನೀ
ರ್ದಾರಿಪ ಭೂತವಾಗಿ ಬೆದಱಿಟ್ಟುವ ಚಂಡಿಕೆಯಾಗಿ ಪೀರ್ವ ಮಾ
ಭೈರವನಾಗಿ ನುಂಗುವ ಮಹಾಸ್ತ್ರದಿನೆಚ್ಚು ಮೃಡಾರಿ ಕಾದಿದಂ ೨೧

ವ॥ ಮತ್ತಂ

ಕೋಪಗೊಂಡು ಸುತ್ತಲೂ ಮುತ್ತಿ, ತಮ್ಮತಮ್ಮ ಅಕ್ಷೌಹಿಣೀ ಸೈನ್ಯದೊಡನೆ ನಿಂತು ರಾಜರು, ತಟ್ಟನೆ ಬಾಣಗಳನ್ನು ತನ್ನ ಮೇಲೆ ಪ್ರಯೋಗಿಸಿದರೂ, ಆ ಒಂದೊಂದು ಅಸ್ತ್ರಶಸ್ತ್ರಗಳನ್ನು ಛೇದಿಸುತ್ತ ಆ ರಾಜರ ಅಂಗಗಳನ್ನೂ ಅವರವರ ಸೈನ್ಯವನ್ನೂ ಪ್ರತ್ಯೇಕವಾದ ಬಾಣಗಳಿಂದ ನಾಟಿಸಿ ತುಂಬಿಸುತ್ತ ಯುದ್ಧವನ್ನು ಮಾಡಿದನು. ೧೯. ಅರ್ಜುನನು ಬಾಣಗಳನ್ನು ಹೊಡೆಯುವ ಈ ಕ್ರಮವು ಪ್ರಸಿದ್ಧವಾದ ಖಾಂಡವದಹನದಲ್ಲೂ ಇರಲಿಲ್ಲ. ಇದು ಅದ್ಭುತವಾಗಿದೆ. ಅರ್ಜುನನು ಈಗ ಒಬ್ಬನೇ ಆಗಿಲ್ಲ. ನೂರು ಕೋಟಿ ಅರ್ಜುನರು ಸೇರಿ ಹೊಡೆದರು ಎನ್ನುವಂತೆ ಆಕಾಶವು ಬಾಣಮಯವಾಯಿತು. ಯುದ್ಧರಂಗವು ಶವಮಯವಾಯಿತು. ಅಷ್ಟದಿಙ್ಮಂಡಲ ಧನುಷ್ಟಂಕಾರಮಯವಾಯಿತು. ಅರ್ಜುನನು ಹಾಗೆ ಯುದ್ಧವನ್ನು ಮಾಡಿದನು. ವ॥ ಅದಲ್ಲದೆಯೂ ಇತ್ತಕಡೆ, ೨೦. ರಾಕ್ಷಸರು, ತಮ್ಮ ನಿಜಸ್ವರೂಪದಿಂದ ಎದುರಿಗೆ ನಿಂತು, ಯುದ್ಧ ಮಾಡಲಾರದೆ ಅದೃಶ್ಯರೂಪದಿಂದ ಹೊಡೆಯುತ್ತಿದ್ದರು. ಅದೃಶ್ಯರಾದ ಅವರನ್ನು ಮನ್ಮಥನು ದಿವ್ಯಮಂತ್ರಗಳಿಂದ ಅಭಿಮಂತ್ರಿಸಿದ ಬಾಣಗಳಿಂದ ಹೊಡೆದನು. ಅವು ಆ ಮಾಯಾವಿಗಳ ದೇಹವನ್ನು ನಾಟಿದವು. ಬಳಿಕ ಬಗೆ ಬಗೆಯ ಭೀಕರಾಕಾರದ ಅವರು ಎದುರಿಗೆ ಬರುವಂತೆ ಪ್ರತೀಕಾರವನ್ನು ಮಾಡಿದನು. ವ॥ ಅದು ಹೇಗೆಂದರೆ ೨೧. ಈಶ್ವರಾರಿಯಾದ ಮನ್ಮಥನು ಆನೆಯಾಗಿ ಹೋರುವ, ಹುಲಿಯಾಗಿ ಮೇಲೆ ಬೀಳುವ, ಹಾವಾಗಿ ಕೊಲ್ಲುವ, ಸಿಂಹವಾಗಿ ಮೇಲೆ ಹಾರುವ, ತಗರಾಗಿ ಸಂಘಟ್ಟಿಸುವ, ಹಂದಿಯಾಗಿ ಸೀಳುವ, ಭೂತವಾಗಿ ಬೆದರಿಸುವ, ಚಂಡಿಯಾಗಿ ಹೀರುವ, ಮಹಾಭೈರವನಾಗಿ ನುಂಗುವ ಮಹಾಸ್ತ್ರದಿಂದ ಹೊಡೆದು ಆ ರಾಕ್ಷಸರೊಡನೆ ಯುದ್ಧವನ್ನು ಮಾಡಿದನು. ವ॥ ಮತ್ತು

೧. ದಿವ್ಯಮಂತ್ರದ (ಕಗ) ೨. ರೂಪದೆ ಮಾಯಾವಿಗಳೆಯ್ದೆ ಮತ್ತೆ ನೆಗಟ್ದಿಂ ಮಾಯಾ (ಕಗ)

ದವಶಿಖಿಯಾಗಿ ದಳ್ಳಿಸುವ ಸಂಹರಣೋಗ್ರಸಮೀರನಾಗಿ ಬೀ
ಸುವ ಸಿಡಿಲಾಗಿ ಪೊಯ್ವ ತಮವಾಗಿ ಕರಂಗುವ ಮೇಘವಾಗಿ ಪೆ
ರ್ಚುವ ಕಡಲಾಗಿ ಘೂರ್ಣಿಸುವ ನಂಜಿನ ಪೆರ್ಮಳೆಯಾಗಿ ಕೊಲ್ವಗ
ಪ್ರವಿತತಿಯಾಗಿ ಬೀೞ್ವಿಸಕವದ್ಭುತವಾದುದು ವೈಷ್ಣವಾಸ್ತ್ರದಿಂ ೨೨

ವ|| ಆ ಸಮಯದೊಳ್

ಭೈರವಮಿದು ಸಂವರ್ತನ
ಭೈರವದೀರ್ಣಾಸ್ಯಮೆನಿಸಲೇಱಿಸಿ ಬಿಲ್ಲಂ
ನಾರಿಯೊಳೊಗೆದ ರವಂ ಮದ
ನಾರಿಯೊಳತಿಮುದಮನೀಯೆ ಹರಿ ಜೇವೊಡೆದಂ ೨೩

ವೈರೀಭವ್ರಾತಕಂಠೀರವರವಮರಿಹಂಸವ್ರಜಪ್ರಾವೃಡಂಭೋ
ದಾರಾವಂ ಶತ್ರುಗೋತ್ರಾಚಲಕುಲಬಲಭಿದ್ವಜ್ರಘೋಷಂ ವಿಪಕ್ಷ
ಕ್ರೂರಾಹಿವ್ಯೂಹತಾರ್ಕ್ಷ್ಯಧ್ವನಿಯೆನೆ ಜಗಮಂ ಕೊರ್ವಿ ಪರ್ವಿತ್ತುದಾರಂ
ಧೀರಂ ಸ್ಫಾರಂ ಗಂಭೀರ ದನುಜರಿಪುಧನುರ್ದಂಡಟಂಕಾರನಾದಂ ೨೪

ವ|| ಆಗಳಾ ಬಿಲ್ವೋದಕೇಶ್ವರಾದಿಷ್ಟಕದನಮಿದೆಂದಾ ಮದನಾರಿಯಂ ಮನದೊಳ್ ನೆನೆದು

ವಿವಿಧಾಸ್ತ್ರಂ ವ್ಯೋಮಮಂ ಟಂಕೃತಿ ರುತಿ ದೆಸೆಯಂ ದ್ವಿಟ್ಕಬಂಧಾಳಿ ಭೂಚ
ಕ್ರವನೆತ್ತಂ ತೀವುವನ್ನಂ ಮುರಹರನಿಸುತಿರ್ದಂ ಶರಾದಾನಸಂಧಾ
ನವಿಮೋಕ್ಷಾಲಕ್ಷ್ಯವೇಗಂ ಸ್ಫುರಿತಮಕುಟನುತ್ತಾರಹಾರಂ ಚಳತ್ಕ
ರ್ಣವಿಭೂಷಂ ಚಂಚಲತ್ಕಂಕಣನನವರತಂ ಮಂಡಲೀಭೂತಚಾಪಂ ೨೫

೨೨. ವೈಷ್ಣವಾಸ್ತ್ರವು ಕಾಡುಕಿಚ್ಚಾಗಿ ಉರಿಯಿತು. ಪ್ರಳಯಕಾಲದ ಉಗ್ರವಾಯುವಾಗಿ ಬೀಸಿತು. ಸಿಡಿಲಾಗಿ ಹೊಡೆಯಿತು. ಕತ್ತಲೆಯಾಗಿ ಕಪ್ಪಾಯಿತು. ಮೋಡವಾಗಿ ಹೆಚ್ಚಿತು. ಕಡಲಾಗಿ ಮೊರೆಯಿತು. ವಿಷದ ದೊಡ್ಡ ಮಳೆಯಾಗಿ ಕೊಂದಿತು. ಪರ್ವತ ಸಮೂಹವಾಗಿ ಬಿದ್ದಿತು. ಹೀಗೆ ಅದರ ಕಾರ್ಯವು ಅದ್ಭುತವಾಗಿದ್ದಿತು. ವ|| ಆ ಸಮಯದಲ್ಲಿ ೨೩. ಭಯಂಕರವಾದ ಈ ಧ್ವನಿಯು ಪ್ರಳಯಕಾಲಭೈರವನ ತೆರೆದ ಬಾಯಿಯ ಧ್ವನಿ ಎನ್ನಿಸಲು, ಕೃಷ್ಣನು ಬಿಲ್ಲಿಗೆ ಹೆದೆಯನ್ನೇರಿಸಿದನು. ಆ ಹೆದೆಯಿಂದಾದ ಟಂಕಾರಧ್ವನಿಯು ಮನ್ಮಥನಿಗೆ ಸಂತೋಷವನ್ನುಂಟುಮಾಡುವಂತೆ ಮೀಟಿದನು. ೨೪. ರಾಕ್ಷಸಾರಿಯಾದ ಕೃಷ್ಣನ, ಉದಾರವೂ ಧೀರವೂ ವಿಸ್ತಾರವೂ ಗಂಭೀರವೂ ಆದ ಧನುಸ್ಸಿನ ಟಂಕಾರನಾದವು ಶತ್ರುಗಳೆಂಬ ಆನೆಗಳ ಸಮೂಹಕ್ಕೆ ಸಿಂಹಧ್ವನಿ, ಶತ್ರುಗಳೆಂಬ ಹಂಸೆಗಳ ಗುಂಪಿಗೆ ವರ್ಷಾಕಾಲದ ಮೋಡದ ಗುಡುಗು, ಶತ್ರುಗಳೆಂಬ ಕುಲಪರ್ವತಗಳಿಗೆ ಇಂದ್ರನ ವಜ್ರಾಯುಧ ಧ್ವನಿ, ಶತ್ರುಪಕ್ಷವೆಂಬ ಕ್ರೂರವಾದ ಸರ್ಪಸಮೂಹಕ್ಕೆ ಗರುಡನ ಧ್ವನಿ ಎನ್ನುವಂತೆ ಕೊಬ್ಬಿ ಜಗತ್ತನ್ನು ಹಬ್ಬಿತು. ವ|| ಆಗ ಆ ಬಿಲ್ವೋದಕೇಶ್ವರನು ಹೇಳಿದ ಯುದ್ಧವೇ ಇದು ಎಂದು ಕೃಷ್ಣನು ಈಶ್ವರನನ್ನು ನೆನೆದನು. ೨೫. ಹೊಳೆಯುವ ಕಿರೀಟಾಗ್ರವೂ ಶ್ರೇಷ್ಠವಾದ ಮುತ್ತುಗಳ ಹಾರವೂ ಚಲಿಸುವ ಕರ್ಣಾಭರಣವೂ ಹೆಚ್ಚಾಗಿ ಚಲಿಸುವ

[೧]ಬಾಣಾಂತಗತಂ ಜಗಮೆನೆ
ಬಾಣಾಳಿಯನಸುರಸೈನ್ಯದೊಳ್ ಕಱಿದೊಡೆ ಗೀ
ರ್ಬಾಣಪದವಾದುದರಸುರ
ಶ್ರೇಣಿಗೆ ಬಿಸವಂದಮಸುರಹರನಿಸುವಂದಂ ೨೬

ವ|| ಅನಂತರಂ

ಚಲದಿಂದೆಯ್ದಿ ಧನುರ್ವಲಂ ಕವಿದುದಂತಶ್ವೀಯಮಂತಾ ಧನು
ರ್ವಲಮಶ್ವೀಯಮಿದಿರ್ಚೆ ನೂಂಕಿದುದುದಗ್ರೇಭಾಳಿಯಂತಾ ಧನು
ರ್ವಲಮಶ್ವೀಯಮಿಭಾಳಿ ಸಂಗಳಿಸೆ ತೇರ್ಗಳ್ ಸಾರ್ದುವಂತಾ ಧನು
ರ್ವಲಮಶ್ವೀಯಮಿಭಾಳಿ ತೇರ್ಗಳಿನಿತುಂ ಬಂದಾಂತುವಚ್ಯಾಕ್ಷನಂ ೨೭

ನವಮೇಘಾಳಿವೊಲಂಬುವಂ ಕಱಿವ ಧನ್ವಿವ್ರಾತಮಂ ಘೂರ್ಣಿತಾ
ರ್ಣವಭಂಗಾಳಿವೊಲೆಯ್ದುವಶ್ವಚಯಮಂ ಸಂಚಾರಿಶೈಲಾಳಿವೊಲ್
ಜವದಿಂ ಬರ್ಪಿಭಕೋಟಿಯಂ ರಣಮಹೋದನ್ವದ್ವಹಿತ್ರಾಳಿಯುಂ
ತೆವೊಲೆಟ್ಟಿರ್ಪ ರಥೌಘಮಂ ತವಿಸಿದಂ ದೈತ್ಯಾರಿ ನಾನಾಸ್ತ್ರದಿಂ ೨೮

ವ|| ಅನಂತರಂ

ಕೈಕಪ್ಪವೂ ಉಳ್ಳ ಕೃಷ್ಣನು, ಬಾಣಗಳನ್ನು ಬತ್ತಳಿಕೆಯಿಂದ ತೆಗೆಯುವ, ಅವನ್ನು ಬಿಲ್ಲಿನಲ್ಲಿ ಹೂಡುವ ಪ್ರಯೋಗಿಸುವ ವೇಗವನ್ನು ತಿಳಿಯಲು ಸಾಧ್ಯವಿಲ್ಲದಂತೆ ಯಾವಾಗಲೂ ಗುಂಡಾಗಿಸಿದ ಬಿಲ್ಲಿನಿಂದ ಬಗೆ ಬಗೆ ಅಸ್ತ್ರಗಳು ಆಕಾಶವನ್ನೂ ಹೆದೆಯ ಟಂಕಾರವು ದಿಕ್ಕುಗಳನ್ನೂ ಶತ್ರುಗಳ ಮುಂಡಗಳು ಭೂಮಂಡಲವೆಲ್ಲವನ್ನೂ ತುಂಬುವಂತೆ ಆ ಅಸ್ತ್ರಗಳನ್ನು ಪ್ರಯೋಗಿಸುತ್ತಿದ್ದನು. ೨೬. ಜಗತ್ತು (ಬಾಣದ ಕೊನೆಯಲ್ಲಿದೆ) ಎನ್ನುವಂತೆ ಕೃಷ್ಣನು, ರಾಕ್ಷಸಸೇನೆಯಲ್ಲಿ ಬಾಣಸಮೂಹವನ್ನು ಸುರಿಸಿದನು. ಅದರಿಂದ ರಾಕ್ಷಸಸಮೂಹಕ್ಕೆ ಗೀರ್ಬಾಣ (= ದೇವತೆಗಳ) ಪದವು (ಸ್ಥಾನವು) ದೊರಕಿತು. (= ಶತ್ರುಗಳು ಸತ್ತು ಸ್ವರ್ಗಸ್ಥರಾದರು) ಕೃಷ್ಣನು ಬಾಣವನ್ನು ಹೊಡೆಯುವ ಅಂದವು ಆಶ್ಚರ್ಯಕರವಾದುದು. ೨೭. ವ|| ಅನಂತರ ರಾಕ್ಷಸನ ಬಿಲ್ಲಿನ ಕಾಲಾಳ ಸೈನ್ಯವು ಹಟದಿಂದ ಕೃಷ್ಣನ ಮೇಲೆ ಬಂದಿತು. ಆಮೇಲೆ ಕುದುರೆಯ ಸೇನೆಯು ಬಂದಿತು ಎದುರಿಸಿತು ತಾನು ಜಯಿಸುವೆ ನೆಂಬ ಹಟದಿಂದ ಆನೆಯ ಸೇನೆಯು ಮುನ್ನುಗ್ಗಿತು. ಈ ಮೂರು ಬಗೆಯ ಜತೆಗೆ ರಥ ಸೇನೆಯೂ ಹಟವನ್ನು ತೊಟ್ಟು ಬಂದಿತು. ಈ ನಾಲ್ಕು ವಿವಿಧ ಸೇನೆಯೂ ಕೃಷ್ಣನ ಮೇಲೆ ಬಂದು ಮುತ್ತಿತು. ೨೮. ರಾಕ್ಷಸಾರಿ ಕೃಷ್ಣನು ಹೊಸ ಮೋಡಗಳ ಗುಂಪಿನಂತೆ ಅಂಬುವನ್ನು (= ೧ ನೀರನ್ನು, ೨ ಬಾಣವನ್ನು) ಕರೆಯುವ ಬಿಲ್ಲಿನ ಸೇನೆಯನ್ನೂ, ಮೊರೆಯುವ ಸಮುದ್ರದ ಅಲೆಗಳಂತೆ ನುಗ್ಗುವ ಕುದುರೆಯ ಸೇನೆಯನ್ನೂ ಸಂಚರಿಸುವ ಪರ್ವತಸಮೂಹದಂತೆ ವೇಗದಿಂದ ಬರುವ ಆನೆಗಳ ಗುಂಪನ್ನೂ ಯುದ್ಧಮಹೋತ್ಸವಕ್ಕಾಗಿ ಸಮುದ್ರದ ಮೇಲಿನ ಹಡಗುಗಳ ಸಮೂಹದಂತೆ ಬರುವ ರಥಸಮೂಹವನ್ನೂ ನಾನಾ ಅಸ್ತ್ರಗಳಿಂದ ನಾಶಪಡಿಸಿದನು. ವ|| ಅನಂತರ

---

೧. ಬಾಣವ್ರಾತಂ (ಖ)

ಭುಜಗರ್ವಂ ಭುಜಗರ್ವದೊಳ್ ಸೆಣಸೆ ಧೈರ್ಯಂ ಧೈರ್ಯಮಂ ಬೀಱೆ ಬಾ
ಣಜವಂ ಬಾಣಜವಕ್ಕೆ ಮತ್ಸರಿಸೆ ಕೋಪಂ ಕೋಪದಿಂ ತಿಣ್ಣಮಾ
ಗೆ ಜಗನ್ನಾಥನ ಷಟ್ಪುರೇಶನ ರಣಾನ್ಯೋನ್ಯಪ್ರತಾಪೋದಯಂ
ತ್ರಿಜಗದ್ವಿಸ್ಮಯಮಾದುದೇವ್ರೋಗಟ್ಟಿಪೆಂ ತದ್ವಂದ್ವಸಂಗ್ರಾಮಮಂ ೨೯

ಸಲಿಲಾಸ್ತ್ರಂ ಜ್ವಲನಾಸ್ತ್ರಮಂ ಗೆಲೆ ಸಮೀರಾಸ್ತ್ರಂ ಪಯೋದಾಸ್ತ್ರಮಂ
ಗೆಲೆ ಮೇಘಾಸ್ತ್ರಮಿನಾಸ್ತ್ರಮಂ ಗೆಲೆ ಪತಂಗಾಸ್ತ್ರಂ ತಮಿಸ್ರಾಸ್ತ್ರಮಂ
ಗೆಲೆ ವಜ್ರಾಸ್ತ್ರಮಗಾಸ್ತ್ರಮಂ ಗೆಲೆ ಖಗೇಂದ್ರಾಸ್ತ್ರಂ ಭುಜಂಗಾಸ್ತ್ರಮಂ
ಗೆಲೆ ಗೆಲ್ವಾಸೆಯಿನಂದು ಕೇಶವನಿಕುಂಭರ್ ತಮ್ಮೊಳೆಚ್ಚಾಡಿದರ್ ೩೦

ವ|| ಅಂತು ಕಾದುವಲ್ಲಿ

ಬಾಣಾದಿಶಸ್ತ್ರಯುದ್ಧಧು
ರೀಣತೆಯಂದಿರ್ಕೆ ಕೃಷ್ಣಕಾಮಾರ್ಜುನರಂ
ಪ್ರಾಣಾಹುತಿಗೊಂಡು ಜಗ
ಚ್ಛ್ರೇಣಿಯನಾಂ ಬೞಿಕೆ ತುತ್ತಿದಪೆನಶ್ರಮದಿಂ ೩೧

ವ|| ಎಂದು ಬಗೆದಂದು

ಮೃಡಮುಖ್ಯಾಮರರುಂ ಭಯಂಬಡುವಿನಂ [1]ಬ್ರಹ್ಮಾಂಡಮಾ ಭಾಂಡಮಿಂ
ದೊಡೆವಂತದ್ಭುತ ರೂಪಮಾಯ್ತೆನೆ ದಿಶಾವ್ಯೋಮಾವಧಿಸ್ಥೂಲಮ
ಪ್ಪೊಡಲಿಂ ವರ್ಧಿಸಿ ವಕ್ತ್ರಕೋಟಿ ಬಹುಬಾಹಾವ್ಯೂಹವಾಶ್ಚರ್ಯಮಂ
ಕುಡಲಾಭೀಳವಿಭೀಷಣಾರಭಟೆಯಿಂದಿರ್ದಂ ನಿಕುಂಭಾಸುರಂ ೩೨

೨೯. ಕೃಷ್ಣ ಮತ್ತು ನಿಕುಂಭರ ತೋಳಿನ ಗರ್ವವೂ ಧೈರ್ಯವೂ ಬಾಣವೇಗವೂ ಕೋಪವೂ ಪ್ರತಾಪವೂ ಒಬ್ಬರದನ್ನು ಮತ್ತೊಬ್ಬರದು ಸ್ಪರ್ಧಿಸಿ ಮೀರುತ್ತಿದ್ದಿತು. ಹೀಗೆ ಅವರ ದ್ವಂದ್ವ ಯುದ್ಧವು ಮೂರುಲೋಕಕ್ಕೂ ಆಶ್ಚರ್ಯಕರವಾಯಿತು. ಅದನ್ನು ಏನೆಂದು ಹೊಗಳಲಿ! ೩೦. ಅಂದು ಆ ಕೃಷ್ಣನಿಕುಂಭರು ಒಬ್ಬರನ್ನೊಬ್ಬರು ಗೆಲ್ಲುವ ಆಸೆಯಿಂದ ಒಬ್ಬರು ಪ್ರಯೋಗಿಸಿದ ಆಗ್ನೇಯಾಸ್ತ್ರವನ್ನು ಮತ್ತೊಬ್ಬರ ಜಲಾಸ್ತ್ರವೂ ಒಬ್ಬರ ಮೇಘಾಸ್ತ್ರವನ್ನು ಮತ್ತೊಬ್ಬರ ವಾಯವ್ಯಾಸ್ತ್ರವೂ, ಸೂರ್ಯಾಸ್ತ್ರವನ್ನು ಮೇಘಾಸ್ತ್ರವೂ ಅಂಧಕಾರಾಸ್ತ್ರವನ್ನು ಸೂರ್ಯಾಸ್ತ್ರವೂ, ಪರ್ವತಾಸ್ತ್ರವನ್ನು ವಜ್ರಾಸ್ತ್ರವೂ, ಸರ್ಪಾಸ್ತ್ರವನ್ನು ಗರುಡಾಸ್ತ್ರವೂ ಗೆಲ್ಲುತ್ತಿರಲು ಪರಸ್ಪರ ಅಸ್ತ್ರಗಳಿಂದ ಯುದ್ಧವನ್ನು ಮಾಡಿದರು. ವ|| ಹಾಗೆ ಕಾದುವುದರಲ್ಲಿ ನಿಕುಂಭನು ೩೧. ಬಾಣಗಳೇ ಮೊದಲಾದ ಶಸ್ತ್ರಯುದ್ಧ ಧುರೀಣತೆಯು ಹಾಗಿರಲಿ. ಮೊದಲು ಕೃಷ್ಣ ಮನ್ಮಥಾರ್ಜುನರ ಪ್ರಾಣಗಳನ್ನು ಆಹುತಿಗೊಂಡು ಬಳಿಕ ಜಗತ್ ಸಮೂಹವನ್ನು ಸುಲಭವಾಗಿ ಕಬಳಿಸುವೆನು. ವ|| ಎಂದು ಯೋಚಿಸಿದನು. ೩೨. ನಿಕುಂಭಾಸುರನು - ಈಶ್ವರನೇ ಮೊದಲಾದ ದೇವತೆಗಳೂ ಭಯಪಡುವಂತೆಯೂ ಬ್ರಹ್ಮಾಂಡವೆಂಬ ಮಡಕೆಯು ಒಡೆಯುವಂತೆಯೂ ಅದ್ಭುತರೂಪವಾಯಿತು ಎನ್ನುವಂತೆಯೂ ದಿಗಾಕಾಶಾವಧಿಯಾದ ಸ್ಥೂಲೋನ್ನತದೇಹವನ್ನು ಬೆಳೆಸಿ, ಕೋಟ್ಯಂತರ

---

೧. ಬ್ರಹ್ಮಾಂಡಮುಚ್ಚಂಡದಿಂದೊಡೆದಂದದ್ಭುತ (ಕ) ಬ್ರಹ್ಮಂಡಮುಚ್ಚಂಡದಿಂ ಪೊಡೆದದದ್ಭುತ (ಗ)

ಏಕಕ್ಷಣಮಿವನಿರ್ದೊಡೆ
ಲೋಕ[1]ಕ್ಷಯಮಪ್ಪುದೆಂದು ಚಕ್ರದಿನಿಟ್ಟಾ
ವೈಕುಂಠಂ ಭೂತಾವಳಿ
ಗಾಕಲ್ಪಗ್ರಾಸಮಾಗೆ [2]ಮಡಿಪಿದನವನಂ ೩೩

ವ|| ಅನ್ನೆಗಂ

[3]ಜೃಂಭಾಸ್ತ್ರದಿಂದೆ ಬಲಮಂ
ಸ್ತಂಭಿಸಿ ನೃಪವೀರಜನಮನಪ್ರತಿಮಲ್ಲಂ
ಜಂಭಾರಿಸೂನು ವಿಜಯ [4]ವಿ
ಜೃಂಭಣಮಂತೆಸೆಯೆ ತೂಱಿ ತೀರ್ದಂ ಸರಲಂ ೩೪

ವ|| ಅಲ್ಲಿಂ ಬೞಿಯಿಂ

ಶಂಬರವಧ[5]ಹರ್ಷಮುಮೀ
ಶಂಬರಮೊಗೆದಂತಿರೊಗೆಯೆ ಹರ್ಷಂ ಮಾಯಾ
ಲಂಬನ ದನುಜರನಂದು ವಿ
ಲಂಬನಮಿನಿಸಿಲ್ಲದಿಕ್ಕಿ ಗೆಲ್ದಂ ಮದನಂ ೩೫

ಭಾಸುರಮೆನೆ [6]ನೆಗೞೆ ನಿಕುಂ
ಭಾಸುರವಧಕೀರ್ತಿ ಕೞಿಯೆ ಪೂವಿನ ಮೞೆಯಂ
ವಾಸವನಾ ವಿಜಿತರಣಾ
ವಾಸವನೊಸೆದೀಕ್ಷಿಸುತ್ತೆ ತಳರ್ದಂ ಬೞಿಯಂ ೩೬

ಮುಖ ಭುಜಸಮೂಹವು ಆಶ್ಚರ್ಯವನ್ನುಂಟುಮಾಡುವಷ್ಟು ಅದ್ಭುತ ಭಯಂಕರವಾದ ಆರ್ಭಟದಿಂದ ಕಂಗೊಳಿಸಿದನು. ೩೩. ಈ ರಾಕ್ಷಸನು ಇನ್ನು ಒಂದು ಕ್ಷಣ ಕಾಲ ಜೀವಿಸಿದ್ದರೆ ಲೋಕಕ್ಷಯವಾಗುವುದು ಎಂದುಕೊಂಡ ಕೃಷ್ಣನು ಅವನನ್ನು ಚಕ್ರಾಯುಧದಿಂದ ಹೊಡೆದು ಕೊಂದು ಅವನ ದೇಹವು ಭೂತಸಮೂಹಕ್ಕೆ ಕಲ್ಪಾಂತದವರೆಗೆ ಗ್ರಾಸವಾಗುವಂತೆ ಮಾಡಿದನು. ೩೪. ಅರ್ಜುನನು ಜೃಂಭಾಸ್ತ್ರದಿಂದ ನಿಕುಂಭಸೇನೆಯನ್ನು ಸ್ತಬ್ಧಗೊಳಿಸಿ ಅವನ ಕಡೆಯ ವೀರನೃಪರನ್ನು ತನ್ನ ವಿಜಯಾಡಂಬರವು ಪ್ರಕಟವಾಗುವಂತೆ ಬಾಣಗಳಿಂದ ಹೊಡೆದು ತೂರಿ ತೀರಿಸಿದನು. ತನಗೆ ಪ್ರತಿಮಲ್ಲರಿಲ್ಲವೆನಿಸಿದನು. ವ|| ಆಮೇಲೆ ೩೫. ಶಂಬರವಧೆಯ ಹರ್ಷವು ಶಿವನವರೆಗೂ ಆದಂತೆ ಎಲ್ಲೆಲ್ಲೂ ಸಂತೋಷವು ಉಂಟಾಗಲು, ಮನ್ಮಥನು ಮಾಯೆಯನ್ನು ಅವಲಂಬಿಸಿದ್ದ ರಾಕ್ಷಸರನ್ನು ಸ್ವಲ್ಪವೂ ವಿಳಂಬಮಾಡದೆ ಕೊಂದು ಗೆದ್ದನು. ೩೬. ನಿಕುಂಭಾಸುರನನ್ನು ಕೊಂದ ಕೀರ್ತಿಯು ಎಲ್ಲೆಲ್ಲಿಯೂ ಹರಡಲು, ಹೂವಿನ ಮಳೆಯನ್ನು ಸುರಿಸುವುದಕ್ಕಾಗಿ ಇಂದ್ರನು ಯುದ್ಧರಂಗವನ್ನು ಆಸಕ್ತಿಯಿಂದ ನೋಡುತ್ತ

೧. ಕ್ಷಯಮೆಂದು ಚಕ್ರದಿಂದಿಟ್ಟಾಗಳ್ (ಕಗ) ೨. ಕೆಡಪಿದನವನಂ (ಕಗ) ೩. ಜೃಂಭಾಸ್ತ್ರದಿನಿಸೆ ಸೈನ್ಯಂ ಸ್ತಂಭಿಸೆ (ಕಗ) ೪. ವಿಜೃಂಭಣದಿಂದೆಸೆಯೆ ತೂಗುತಿರ್ದಂ (ಕಗ) ೫. ಹರ್ಷಮದಾ ಶಾಂಬರಮೊಗೆವಂತಿರೊಗೆಯೆ (ಮೂಅ) ೬. ನೆಗಳ್ದ (ಕಗ)

ಕ್ಷಿತಿಚಕ್ರೋದರಸನ್ನಿವಿಷ್ಟಮನನಂತಾಕ್ಷೌಹಿಣೀದೈತ್ಯರ
ಕ್ಷಿತಮಂ ಷಟ್ಪುರಮಂ ವಿಮರ್ದಿಸಿ ಮಹಾಸ್ತ್ರಾನೀಕದಿಂ ರುಕ್ಮಿಣೀ
ಪತಿ ಬಂದೊಪ್ಪಿರೆ ಪೊಕ್ಕನಾತ್ಮಪುರಮಂ ಕಾಂತಾಕಟಾಕ್ಷಚ್ಛಟಾ
ತತಿಯೊಳ್ ಸೂಸುವ ಸೇಸೆಗಳ್ ಪಡೆವಿನಂ ಸ್ಪರ್ಶಾನುಮೇಯತ್ವಮಂ ೩೭

ಪಾರ್ಥಂ ಯಮಜಾಧ್ವರಗೋ
ಪಾರ್ಥಂ ಬೀಳ್ಕೊಂಡು ಪೋಗೆ ಪರಿವೃತನಾರೀ
ಸಾರ್ಥಂ [1]ವಿಶ್ರುತತರಕವಿ
ಸಾರ್ಥಂ ನಿಜರಾಜಗೃಹದೊಳಿರ್ದಂ ಕೃಷ್ಣಂ ೩೮

ವ॥ ಅಂತು ನಿತ್ಯೋತ್ಸವದಿನಿರ್ಪನಮದೊಂದುದಿವಸಂ ಶಿಶುಪಾಲನಟ್ಟಿದ ಭಟ್ಟಪುತ್ರಂ ಬಂದು ನೃಪಮಂದಿರಾಂಗಣದೊಳ್ ನಿಂದಿರ್ದಕಾಂಡಚಂಡಾಶನಿ[2]ಪಟಿಷ್ಠನಿಷ್ಠುರಧ್ವನಿಯುಮುತ್ತಂಭಿತಭುಜಸ್ತಂಭನುಮುತ್ತಾನಿತಾಸ್ಯನುಮುಚ್ಛೃಂಖಲವಚನವಾಚಾಲನುಮಾಗಿ

ಇದಮೋಘಂ ನಿಟಿಲೇಕ್ಷಣಾಧಿಕಭುಜಂಗಳ್ ಪೋದುವೆಂತೆಂತು ಸಾ
ರ್ದುದು ಭಂಗಂ ಗರುಡಚ್ಛದಾನಿಳನಿನೆಂತೆಂತಂದವಂಗೀಯೆ ಪೊ
ರ್ದಿದಳೆಂತೆಂತು ಪೆಱಂಗೆ ರುಕ್ಮಿಣಿಯದಂತಂತುರ್ವಿತಂತಂತೆ ಪ
ರ್ವಿದದಂತಂತೆ ಪೊದಟ್ಟುದಾ ದನುಜನುಗ್ರಾಟೋಪಕೋಪಾನಲಂ ೩೯

ಬಂದನು. ೩೭. ರುಕ್ಮಿಣೀಪತಿ ಕೃಷ್ಣನು-ಭೂಮಂಡಲೋದರದಲ್ಲಿರುವುದೂ ಅನಂತ ಅಕ್ಷೌಹಿಣೀಸೇನೆಯಿಂದ ರಕ್ಷಿತವೂ ಅದ ಷಟ್ಪುರವನ್ನು ಮಹಾಸ್ತ್ರಸಮೂಹದಿಂದ ವಿಮರ್ದಿಸಿದನು. ಬಳಿಕ ಅಲ್ಲಿಂದ ಬಂದು, ಕಾಂತೆಯರು ಬೀರುವ ಕಡೆಗಣ್ಣಿನ ಬೆಳಕಿನಲ್ಲಿ ಅವನ ಮೇಲೆ ತಳಿಯುವ ಅಕ್ಷತೆಗಳು ಗೋಚರಿಸದೆ, ಮುಟ್ಟಿನೋಡಿ ತಿಳಿಯಬೇಕಾಗಿರುವಲ್ಲಿ ತನ್ನ ರಾಜಧಾನಿಯನ್ನು ಪ್ರವೇಶಿಸಿದನು. ೩೮. ಅರ್ಜುನನು ಧರ್ಮರಾಯನ ಯಾಗಸಂರಕ್ಷಣೆಗಾಗಿ ಕೃಷ್ಣನನ್ನು ಕೇಳಿ, ಬಿಡುವನ್ನು ಪಡೆದು ಹೊರಟುಹೋದನು. ಕೃಷ್ಣನು ಸುತ್ತುವರಿದ ಅಂತಃಪುರಸ್ತ್ರೀಯರೊಡನೆ; ಪ್ರಸಿದ್ಧರಾದ ಕವಿಗಳ ಸಮೂಹದಿಂದ ಕೂಡಿ, ತನ್ನ ಅರಮನೆಯಲ್ಲಿ ಇದ್ದನು. ವ॥ ಹಾಗೆ ನಿತ್ಯೋತ್ಸವದಿಂದ ಇರುತ್ತಿರುವಾಗ ಅದೊಂದು ದಿವಸ ಶಿಶುಪಾಲನು ಕಳುಹಿಸಿದ ಭಟ್ಟಪುತ್ರನು ಬಂದು ಅರಮನೆಯ ಅಂಗಳದಲ್ಲಿ ನಿಂತುಕೊಂಡು ಅಕಾಲದ ಸಿಡಿಲ ಗರ್ಜನೆಯಂತೆ ಕ್ರೂರವಾದ ಧ್ವನಿಯಿಂದ ಕಂಭದಂತಿರುವ ತನ್ನ ತೋಳನ್ನೂ ಮುಖವನ್ನೂ ಮೇಲೆತ್ತಿದವನಾಗಿ ತಡೆಯಿಲ್ಲದೆ ಸ್ವೇಚ್ಛೆಯಿಂದ ಹರಟಿದನು. ೩೯. ಶಿಶುಪಾಲನ ಉಗ್ರಾಡಂಬರದ ಕೋಪಾಗ್ನಿಯೂ, ಅವನ ಹಣೆಯಲ್ಲಿದ್ದ ಕಣ್ಣೂ ಹೆಚ್ಚಾಗಿದ್ದ ತೋಳುಗಳೂ ಹೇಗೆ ಹೋದುವೋ ಹಾಗೆ, ಗರುಡನ ರಕ್ಕೆಯ ಗಾಳಿಯಿಂದ ಹೇಗೆ ಭಂಗವಾಯಿತೋ ಹಾಗೆ ಅವನಿಗೆ ಸೇರಬೇಕಾದ ರುಕ್ಮಿಣಿ ಹೇಗೆ ವರನಿಗೆ ಸೇರಿದಳೊ ಹಾಗೆ ಸತ್ಯವಾಗಿಯೂ

೧. ಸಂಸ್ತುತ ಸುಕವಿರಸಾರ್ಥಂ (ಕಗ) ೨. ಪದಿಷ್ಠ (ಕಗ)

ಪೊಗಟ್ಟಿಂಗ್ಗಳವೇನನೆಂಬೆನಖಿಲಬ್ರಹ್ಮಾಂಡ[1]ಭಾಂಡಕ್ಕಮಾ
ವಗೆಗಿಚ್ಚೆಂಬಿನೆಗಂ ನಿಶಾಚರನ ಕೋಪೋಗ್ರಾನಳಂ ಪೊತ್ತುತುಂ
ಪೊಗೆಯುತ್ತುಂ ಕಿಡಿಗುಟ್ಟುತುಂ ಮಸೆಯುತುಂ ದಳ್ಳೆಂಬ ಭೋರೆಂಬ ಭುಗ್
ಭುಗಿಲೆಂಬೇಟಿಗೆಯನಾಂತು ಕೇಸುರಿಗಳಂ [2]ಸೂಸಿತ್ತಗುರ್ವಪ್ಪಿನಂ ೪೦

[3]ನುಡಿಯಲ್ ಭಾನುವಿನಗ್ನಿ ತೀವ್ರತರನಂತಾ ಭಾನುವಿಂದಗ್ನಿಯಿಂ
ಸಿಡಿಲತ್ಯಂತದುರಾಸದಂ ಬಗೆವೊಡಂತಾ ಬಾನುವಿಂದಗ್ನಿಯಿಂ
ಸಿಡಿಲಿಂ ರುದ್ರಲಲಾಟನೇತ್ರವರಿದಂತಾ ಭಾನುವಿಂದಗ್ನಿಯಿಂ
ಸಿಡಿಲಿಂ ರುದ್ರಲಲಾಟನೇತ್ರದಿನತರ್ಕ್ಯಂ ಚೈದ್ಯಕೋಪಾನಳಂ ೪೧

ರಣವೀರಂ ಶುಂಭನಿಂ ಜಂಭನೆ ದನುಜರೊಳಾ ಶುಂಭನಿಂ ಜಂಭನಿಂ ರಾ
ವಣನೆಂತುಂ ವೀರನಿಂತೀ ಧರೆ ಪೊಗಟ್ವಿನಮಾ ಶುಂಭನಿಂ ಜಂಭನಿಂ ರಾ
ವಣನಿಂದಂಧಾಸುರಂ ವೀರತೆಯೊಳಧಿಕನಾ ಶುಂಭನಿಂ ಜಂಭನಿಂ ರಾ
ವಣನಿಂದಂಧಾಸುರಾಧೀಶನಿನತಿ[4]ಶಯಮಾ ವೀರರೊಳ್ ಚೇದಿರಾಜಂ ೪೨

ಜವನುಗ್ರಂ ಮಾರಿಯಿಂ ಮಿತ್ತುವೆ ಗಡ ಜವನಿಂ ಮಾರಿಯಿಂ ಮಿತ್ತುವಿಂ ಭೈ
ರವನಾಕಲ್ಪಾಂತದೊಳ್ ರೌದ್ರನೆ ಗಡ ಜವನಿಂ ಮಾರಿಯಿಂ ಮಿತ್ತುವಿಂ ಭೈ
ರವನಿಂ ಕಾಮಾರಿ ತಾಂ ಕ್ರೂರನೆ ಗಡ ಜವನಿಂ ಮಾರಿಯಿಂ ಮಿತ್ತುವಿಂ ಭೈ
ರವನಿಂ ಕಾಮಾರಿಯಿಂ ಚೈದ್ಯನೆ ಗಡ ಜಗಮಂ ತಿಂದು ತೇಗಲ್ ಸಮರ್ಥಂ ೪೩

ವಿಸ್ತರಿಸಿತು. ೪೦. ಆ ನಿಶಾಚರನ ಕೋಪವೆಂಬ ಉಗ್ರಾಗ್ನಿಯು ಅಖಿಲ ಬ್ರಹ್ಮಾಂಡಗಳೆಂಬ ಮಡಕೆಗೆ ಆವಿಗೆಯ ಕಿಚ್ಚು ಎನ್ನುವಂತೆ ಹೊಗೆದೋರಿ, ಹತ್ತಿ, ಕಿಡಿಯನ್ನು ಹಾರಿಸಿ, ಮಸೆಯುತ್ತ ದಳ್, ಭೋರ್, ಭುಗಿಲ್ ಎಂಬ ಶಬ್ದಮಾಡುತ್ತ ಏಳಿಗೆಯನ್ನು ಪಡೆದು, ಕೆಂಪಾದ ಉರಿಗಳನ್ನು ಹರಡುತ್ತ ಭಯಂಕರವಾಗಿದೆ. ಅದನ್ನೇನು ಹೇಳಲಿ; ಅದು ಹೊಗಳುವವನಿಗೆ ನಿಲುಕುವುದಿಲ್ಲ. ೪೧. ಸೂರ್ಯನಿಗಿಂತ ಅಗ್ನಿ ತೀವ್ರತರವಾದುದು ಸೂರ್ಯಾಗ್ನಿಗಳಿಗಿಂತಲೂ ಸಿಡಿಲು ತೀವ್ರತಮವಾಗಿ ಹತ್ತಿರ ಹೋಗಲಸಾಧ್ಯವಾದುದು. ಅವುಗಳಿಗಿಂತಲೂ ರುದ್ರನ ಹಣೆಗಣ್ಣಿನ ಅಗ್ನಿಯು ಕ್ರೂರತಮವಾದುದು. ಇವುಗಳೆಲ್ಲಕ್ಕಿಂತಲೂ ಚೈದ್ಯ ಶಿಶುಪಾಲನ ಕೋಪಾಗ್ನಿಯು ಊಹಿಸಲಾಗದಷ್ಟು ತೀವ್ರವಾದುದು. ಶಿಶುಪಾಲನ ಕೋಪಾಗ್ನಿಯು ಊಹಿಸಲಾಗದಷ್ಟು ತೀವ್ರವಾದುದು. ೪೨. ರಾಕ್ಷಸರಲ್ಲಿ ಶುಂಭನಿಗಿಂತ ಜಂಭನೇ ಯುದ್ಧವೀರ. ಆ ಶುಂಭ ಜಂಭರಿಗಿಂತ ರಾವಣನು ಆ ಶುಂಭ ಜಂಭ ರಾವಣರಿಗಿಂತಲೂ ಅಂಧಾಸುರನು ವೀರತೆಯಲ್ಲಿ ಅಧಿಕನು ಆ ಶುಂಭ ಜಂಭ ರಾವಣಾಂಧಾಸುರರಿಗಿಂತಲೂ, ಚೇದಿರಾಜ ಶಿಶುಪಾಲನು ಮಿಗಿಲು ೪೩. ಮಾರಿಗಿಂತ ಯಮನು ಉಗ್ರನು. ಯಮನಿಗಿಂತ ಮೃತ್ಯು ಉಗ್ರ, ಆ ಮಾರಿ ಯಮ ಮೃತ್ಯುಗಳಿಗಿಂತ ಪ್ರಳಯಕಾಲದ ಭೈರವನು ಉಗ್ರನು. ಅವರೆಲ್ಲರಿಗಿಂತ ಕಾಮಾರಿ ರುದ್ರನು ಕ್ರೂರನು. ಅವರೆಲ್ಲರಿಗಿಂತ ಕ್ರೂರನಾದ ಶಿಶುಪಾಲನೆ ಜಗತ್ತನ್ನು ತಿಂದು ತೇಗಲು

---

೧. ಭಾಂಡಕ್ಕದಾ (ಗ) ೨. ಸೂಸುತ್ತಗುರ್ವಪ್ಪಿನಂ (ಖಗ) ೩. ನುಡಿಯೇಂ (ಕ) ನುಡಿಯಿಂ (ಗ) ೪. ಕ್ಷಯಮೋವೀರನಾ ಚೇದಿನಾಥಂ (ಕಗ)

ತರುಣಾಸ್ತ್ರಹತನೆಂದು ದಾನವಚಮೂವಿಸ್ತಾರಕಂ ತಾರಕಂ
ನರಬಾಣಾಹತನೆಂದು ಪಾರ್ಥಿವೃತಪೃಥ್ವೀರಾವಣಂ ರಾವಣಂ
ಸ್ಮರಕಾಂಡಹತನೆಂದು [1]ವೈರಿದವವರ್ಷಾಶಂಬರಂ ಶಂಬರಂ
ಪುರುಳಿಲ್ಲೆಂದಿಟಿಪಂ ನಿಜಾನ್ವಯಸುಹೃತ್ಸಂತಾನವಂ ತಾನವಂ ೪೪

ಎತ್ತಿ ಹರಿ [2]ಬರ್ಕೆ ಪೊಣ್ಮಲಿ
ದೆತ್ತುವೆನಾಂ ಸೈನ್ಯಭರದೆ ಶೇಷನ ಶಿರದೊಳ್
ಪೊತ್ತುವ ಕಿಡಿ ಪೆಡೆವಣಿಗಳ
ನೊತ್ತರಿಪಿನಮೆಂದು ಚೈದ್ಯನಟ್ಟಿದನೆನ್ನಂ ೪೫

ವ|| ಎಂದು ನಿರ್ಘಾತಸ್ಫೋಟನಂಗೆಯ್ದು ನಿಲ್ವುದುಮಾ ಪ್ರಸ್ತಾವದೊಳ್ ಯುಧಿಷ್ಠಿರರಾಜಂ ರಾಜಸೂಯಯಜ್ಞ ಪೂಜೆಗೆಂದು ಬಟೆಯಟ್ಟಿದ ಮುಖ್ಯಪುರುಷನುಪಾಯನ ಪೊರಸ್ಸರಂ ಬಂದು ಪೊಡಮಟ್ಟು ಬಿನ್ನಪಂಗೆಯ್ಯೆ ಕಾರ್ಯಪರ್ಯಾಲೋಚನತತ್ಪರನಾಗಿ

[3]ಪರಿಹೃತ ಶಾರಿಕಾಶುಕಶಿಶು[4]ವ್ರಜಮುಜ್ಝಿತ ಸಾಳಭಂಜಿಕೋ
ತ್ಕರಮವಿನಿರ್ಮಿತಾಪ[5]ವರಕೌಘವಪಾಸ್ತ ಗವಾಕ್ಷರಾಜಿ ನಿ
ರ್ವಿರಚಿತಚಿತ್ರಮೆಂದೆನಿಪ ಮಂತಣಸಾಲೆಗೆ ಬಂದನಿಂದ್ರಸಿಂ
ಧುರಗತಿ ರೇವತೀಧವನುಮುದ್ಧವನುಂ ಬರೆ ರುಕ್ಮಿಣೀಧವಂ ೪೬

ಸಮರ್ಥನು. ೪೪. ಆ ಶಿಶುಪಾಲನು "ತಾರಕಾಸುರನು ರಾಕ್ಷಸಸೇನೆಯನ್ನು ವಿಸ್ತರಿಸಿದವನಾದರೂ ತರುಣ (ಕುಮಾರ)ನ ಅಸ್ತ್ರದಿಂದ ಹತನಾದನೆಂದೂ, ಸಮುದ್ರವು ಸುತ್ತುವರಿದಿರುವ ಭೂಮಿಯನ್ನೇ ಆರ್ತಧ್ವನಿಗೊಳಿಸಿದ ರಾವಣನು ನರ(ರಾಮ)ನ ಬಾಣದಿಂದ ಹತನಾದನೆಂದೂ ಶತ್ರುಗಳೆಂಬ ಕಾಡುಕಿಚ್ಚಿಗೆ ಜಲ(ರೂಪ)ವಾದ ಶಂಬರಾಸುರನು ಮನ್ಮಥನ ಬಾಣದಿಂದ ಹತನಾದನೆಂದೂ ಅವರು ತನ್ನ ಸಂತತಿಯವರೂ ಮಿತ್ರರೂ ಆದರೂ ಹುರುಳಿಲ್ಲದವರೆಂದು ಅವರನ್ನು ಹೀನವಾಗಿ ಕಾಣುವನು. ೪೫. "ಕೃಷ್ಣನು ದಿಟ್ಟತನದಿಂದ, ನನ್ನ ಮೇಲೆ ಬರಲಿ ನಾನು ಸೈನ್ಯದ ಭಾರದಿಂದ ಶೇಷನ ತಲೆಯಲ್ಲಿ ಹತ್ತುವ ಕಿಡಿಗಳು ಅವನ ಹೆಡೆಯ ಮಣಿಗಳನ್ನು ಒತ್ತರಿಸುವಂತೆ ನಾನು ಎದುರಿಸುವೆನು" ಎಂದು ಚೈದ್ಯನು ನನ್ನನ್ನು ಕಳುಹಿಸಿದನು. ವ|| ಎಂದು ಸಿಡಿಲೆರಗಿದಂತೆ ಮಾತಾಡಿ ನಿಂತನು. ಆ ಸಂದರ್ಭದಲ್ಲೇ ಧರ್ಮರಾಜನು ರಾಜಸೂಯಯಜ್ಞಪೂಜೆಗೆಂದು ಹೇಳಿಕಳುಹಿಸಿದವರಲ್ಲಿ ಮುಖಂಡನಾದವನು ಉಪಾಯನವನ್ನು ಮುಂದಿಟ್ಟುಕೊಂಡು ಬಂದು ವಂದಿಸಿ, ವಿಜ್ಞಾಪಿಸಿದನು. (ಆಗ) ಕೃಷ್ಣನು ಕಾರ್ಯಪರ್ಯಾಲೋಚನೆಯಲ್ಲಿ ಆಸಕ್ತನಾದನು. ೪೬. ಇಂದ್ರನ ಆನೆಯಂತೆ ನಡೆಯುವ ಬಲರಾಮನೂ, ಉದ್ಧವನೂ ತನ್ನ ಜತೆಯಲ್ಲಿ ಬರಲು ಕೃಷ್ಣನು, ಗಂಡುಹೆಣ್ಣುಗಿಳಿಗಳಾಗಲಿ ಶಿಶುಗಳಾಗಲಿ ಬೊಂಬೆಗಳಾಗಲಿ ಮಲಗುವ ಕೋಣೆಗಳಾಗಲಿ ಗವಾಕ್ಷಗಳಾಗಲಿ ಬರೆದ ಚಿತ್ರಗಳಾಗಲಿ

---

೧. ವೈರಿವಧಹರ್ಷಾಶಂಬರಂ (ಕಗ) ವೈರಿದಶಂಬಾಶಂಬರಂ (ಖ) ೨. ನೀಮ್ಮೆಣೆತ್ತುವೆನಾಂ (ಕಗ) ೩. ಪರಿವೃತ (ಕಗ) ೪. ವ್ರಜಮೂರ್ಜಿತ (ಕಗ) ೫. ವರಕೌರಘವಪಾರ್ಥ (ಕ) ವಕೌಘನ ಪಾರ್ಥ (ಖ) ವರಕೌಘವಹರ್ಥ (ಗ)

ವ|| ಅಂತು ಬಂದು ತನ್ಮಂದಿರನಿವಿಷ್ಟರಮಣೀಯಮಣಿವಿಷ್ಟರಂಗಳನಲಂಕರಿಸಿ

ಕಲಧೌತಸಿತಂ ರಾಮಂ
ಕಲಧೌತಪಿಶಂಗನುದ್ಧವಂ ಕೆಲದೊಳ್ ಕ
ಣ್ಗೊಳಿ ರಜತಮಹಾರಜತಾ
ಚಲಮಧ್ಯದ[1]ನೀಲಗಿರಿವೊಲೆಸೆದಂ ಕೃಷ್ಣಂ ೪೭

ಮುಸುಕೆ ಹರಿಕಾಂತಿ ನೀಲೀ
ವಸನಂ ಸ್ಪರ್ಶಾನುಮೇಯಮಾದುದು ರಾಮಂ
ಗಸಿತಾಂಬರಮಂ ಮಱೆವಿಡಿ
ದ ಸುವರ್ಣದ ವಿಧ್ಧದಂತಿರುದ್ಧವನೆಸೆದಂ ೪೮

ವ|| ಆಗಳಲ್ಲಿ ರಾಮಂ ಸಾಮಜವಿರೋಧಿಯಂತೆ ಸಾಮಜೋದ್ಯಮಕೆ ಮನದೊಳ್ ಮುಳಿದು ದಂಡಧರನಂತೆ ದಂಡಧರನಾಗಿ

ಭವನಂ ಗೆಲೆ ಮೂರ್ತಿ ಸಭಾ
ಭವನಂ ಘೂರ್ಣಿಸೆ ಗಭೀರರವದಿಂ ಲುಳಿತ
ಶ್ರವಣಾಲಂಕರಣಂ ವೈ
ಶ್ರವಣಾದಿ ದಿಗೀಶರಳ್ಕೆ [2]ಹಲಿ ಗರ್ಜಿಸಿದಂ ೪೯

ಚಿತ್ರಪಟಗಳಾಗಲಿ ಇಲ್ಲದೆ ರಹಸ್ಯಾಲೋಚನೆಗೆ ತಕ್ಕದ್ದಾದ ಮಂತ್ರಶಾಲೆಗೆ ಬಂದನು. ವ|| ಹಾಗೆ ಬಂದು ಎಲ್ಲರೂ ಆ ಮಂದಿರದಲ್ಲಿದ್ದ ರಮಣೀಯವಾದ ರತ್ನಪೀಠಗಳನ್ನಲಂಕರಿಸಿದರು. ೪೭. ಬೆಳ್ಳಿಯಂತೆ ಬೆಳ್ಳಗಿರುವ ಬಲರಾಮನೂ ಚಿನ್ನದಂತೆ ಕೆಂಪಾಗಿರುವ ಉದ್ಧವನೂ ಪಕ್ಕಗಳೆರಡರಲ್ಲೂ ಕುಳಿತು ಚೆನ್ನಾಗಿ ಕಾಣಿಸುತ್ತಿದ್ದರು. ಅವರಿಬ್ಬರ ಮಧ್ಯದಲ್ಲಿ ಕುಳಿತ ಕೃಷ್ಣನು ಕೈಲಾಸ ಮೇರುಪರ್ವತಗಳ ಮಧ್ಯದ ನೀಲಗಿರಿಯಂತೆ ಪ್ರಕಾಶಿಸುತ್ತಿದ್ದನು. ೪೮. ಬಲರಾಮನನ್ನು ಕೃಷ್ಣನ ಇಂದ್ರನೀಲಕಾಂತಿಯು ಮುಸುಕಿದುದರಿಂದ ಅವನಿಗೆ ತನ್ನ ನೀಲಿಯ ವಸ್ತ್ರವನ್ನು ಮುಟ್ಟಿ ತಿಳಿದುಕೊಳ್ಳುವಂತಾಯಿತು. ಉದ್ಧವನು ನೀಲಿಯ ವಸ್ತ್ರವನ್ನು ಮರೆಯಾಗಿ ಹಿಡಿದ ಸುವರ್ಣಮೂರ್ತಿಯಂತೆ ಹೊಳೆಯುತ್ತಿದ್ದನು ವ|| ಆಗ ಅಲ್ಲಿ ಬಲರಾಮನು ಸಾಮಜವಿರೋಧಿ (= ಆನೆಗೆ ವಿರೋಧಿ = ೧. ಸಿಂಹ, ೨. ಸಾಮೋಪಾಯ ವಿರೋಧಿ)ಯಂತೆ ಸಾಮೋಪಾಯದಿಂದ ಆಗುವ ಕಾರ್ಯಕ್ಕೆ ಮನಸ್ಸಿನಲ್ಲಿ ಕೋಪಿಸಿ, ಯಮನಂತೆ ದಂಡ (ದಂಡೋಪಾಯ)ವನ್ನೇ ನಿರ್ಧರಿಸಿದನು. ೪೯. ಬಲರಾಮನ ಆಕಾರವು ರುದ್ರನನ್ನೂ ಗೆಲ್ಲುವಂತೆಯೂ ಗಂಭೀರಧ್ವನಿಯು ಸಭಾಭವನವನ್ನು ನಡುಗಿಸುವಂತೆಯೂ ಇರಲು, ಕುಂಡಲವನ್ನು ತೂಗಾಡಿಸುತ್ತ ಕುಬೇರನೆ ಮೊದಲಾದ ದಿಕ್ಪಾಲಕರು ಹೆದರುವಂತೆ ಗರ್ಜಿಸಿದನು.

---

೧. ನೀಲಗಿರಿಯೆನಲ್ ಹರಿಯೆಸೆದಂ (ಖ) ೨. ಹರಿ (ಕಗ)

ಇರಿಸಿ ತಮೋಗುಣಮಮಂ ಮಿ
ಕ್ಕ ರಜಸ್ಸತ್ವಂಗಳಂ ಬಹಿಷ್ಕರಿಸುವವೋಲ್
ಅರುಣಾಧರಪಾಂಡುರದಶ
ನರುಚಿಗಳಾನನದಿನೊಗೆಯೆ ಲಾಂಗಲಿ ನುಡಿದಂ ೫೦

ಜಾತರೂಪರಕ್ತನಯನನುದಧಿಗರ್ಜನಂ ಮನೋ
ಜಾತರೂಪಮಥನಕೋಪನೆಂದನೆಮ್ಮ ಕಾರ್ಯಮೀ
ಜಾತ[೧]ರೂಪವಿಂತುಟೇ ವಿರೋಧಿಕಾಂತೆಯರ್ಗೆ ಗುಂ
ಜಾತರೂಪಪಲ್ಲವಂಗಳಕ್ಕೆ ಪಚ್ಚವದ್ರಿಯೊಳ್ ೫೧

ಸಂಗರವೆಮ್ಮ ಮತಂ ಜಯ
ಸಂಗರಮತಮಿರ್ಕೆ ತಣಿಪುವೆಂ ಮುಸಲಮನೀ
ಲಾಂಗಲಮಂ [೨]ರಿಪುಬಲದಬ
ಲಾಂಗಲವಂ ಭೂತಕೋಟಗಿಲ್ಲೆನೆ ಧರೆಯೊಳ್ ೫೨

ಕಾಂಡನಿಪಾತಂ ವೈರಿಗ
ಕಾಂಡನಿಪಾತಮನೊಡರ್ಚುವಂತಿರೆ ನೆಗಟಲ್
ಪಾಂಡುರಕೀರ್ತಿಯೆ ನೆಗಟ್ಟುಂ
ಪಾಂಡುತನೂಭವರ ನಣ್ಪು ನೆಗಟ್ಟುಮೆ ಬಟೆಯಂ ೫೩

೫೦. ತಮೋಗುಣವನ್ನು ತನ್ನಲ್ಲಿಟ್ಟುಕೊಂಡು, ಮಿಕ್ಕ ಸತ್ತ್ವರಜೋಗುಣಗಳನ್ನು ಹೊರತಳ್ಳುವಂತೆ ಬಿಳಿಯ ಹಲ್ಲಿನ ಕಾಂತಿಯೂ, ಕೆಂಪಾದ ತುಟಿಯ ಕಾಂತಿಯೂ ಹರಡುತ್ತಿರಲು ಬಲರಾಮನು ಹೇಳಿದನು. ೫೧. ಅಪರಂಜಿ (ಚಿನ್ನ)ಯಂತೆ ಕೆಂಪಾದ ಕಣ್ಣುಳ್ಳವನೂ, ಸಮುದ್ರದಂತೆ ಗರ್ಜಿಸುವವನೂ, ರುದ್ರಕೋಪವುಳ್ಳವನೂ ಆದ ಬಲರಾಮನು "ನಮಗೆ ಒದಗಿದ ಈ ಕಾರ್ಯವು ಅಲ್ಲ. ನಮ್ಮ ವಿರೋಧಿಗಳ ಕಾಂತೆಯರಿಗೆ ಬೆಟ್ಟದಲ್ಲಿ ಗುರುಗುಂಜಿಯ ಮತ್ತು ಮರದ ಎಳೆಚಿಗುರಿನ ಆಭರಣವು ಆಗುವಂತೆ ಆಗಲಿ! (ಪಚ್ಚ = ಒಡವೆ) ೫೨. "ಯುದ್ಧವೇ ನಮಗೆ ಇಷ್ಟವಾದುದು. ಸಾಮೋಪಾಯವು ಹಾಗಿರಲಿ. ಯುದ್ಧದಲ್ಲಿ ಈ ಒನಕೆಯನ್ನೂ ಈ ನೇಗಿಲನ್ನೂ ತೃಪ್ತಿಪಡಿಸುವೆನು. ಶತ್ರು ಸೈನಿಕರ ಪತ್ನಿಯರ ನಿವಾಸದ ಅಂಗಳವು ಭೂತಕೋಟಿಗೆ ಮನೆಯಾಗುವಂತೆ ಆಗಲಿ. ೫೩. "ನಮ್ಮ ಬಾಣವು ತಾಕಿ, ವೈರಿಗೆ ಅಕಾಲನಿಪಾತ (ನಾಶ)ವನ್ನುಂಟುಮಾಡುವಂತೆ ಮಾಡಿದರೆ ನಮಗೆ ನಿರ್ಮಲ ಕೀರ್ತಿಯೇ ಬರುವುದು. ಪಾಂಡವರ ಪ್ರೀತಿಯೂ ಬಳಿಕ

೧. ರೂಪವಿಂತುಟೀ (ಮೊಲಿ) ೨. ರಿಪುಬಲದಬಲಾಂಗಲಮಮಂ ಭೂತಕೋಟಿ ನಿಲ್ಲೆನೆ (ಕ) ರಿಪುಬಲದೆ ಬಲಾಂಗಲಮಮಂ ಭೂಪಕೋಟಿ ನಿಲ್ಲೆನೆ (ಖ)

ದಮಘೋಷಸೂನುಬಳದು
ರ್ದಮಘೋಷಮದೆತ್ತದನ್ನ ನಡೆವಂ ಮುನ್ನಂ
ಸಮವಾಯವೆತ್ತಿ ಬರೆ ರಿಪು
ಸಮವಾಯವದಲ್ಲವಾಯವಾತನೊಳಧಿಕಂ ೫೪

ಪಿರಿದುಂ ನಿನ್ನೊಳುಪೇಂದ್ರ ಚೈದ್ಯನೆಸಗಂ ಸನ್ಮಾನವಂ ಮಾನವಂ
[1]ಹರಿಯೇನೆಂದುಜಿದಿರ್ದಪಂ ಸ್ಫುಟಮರುತ್ಕುಂಭೀಷಣಂ ಭೀಷಣಂ
ಕರಣೀಯಂ ನಮಗಾತನೊಳ್ ಚಲಿತಭೂಭೃದ್ವಿಗ್ರಹಂ ವಿಗ್ರಹಂ
ಪರಮದ್ರೋಹನನೆತ್ತಿಪೋಗಿ ಚಲದಿಂ ಕೊಂದಿಕ್ಕುವ ನಿಕ್ಕುವಂ ೫೫

ಧೀರಂ ಧೀರಂ ಜಿತಂ ನೀಂ ತಡೆದಿರದೆ ಯಶಸ್ಸಾಧನಂ ಸಾಧನಂ ಮು
ನ್ನೀರಂ ನೀರಂಧ್ರವಾದರ್ಪಿಸೆ ನಡೆದದಟಂ ದಾನವಂ ದಾನವಂ ದು
ಷ್ಪಾರಂ ಪಾದಂ ಕ್ಷಣಂ ಮಾರ್ಕೊಳೆ ಮಡಿಯಿಸು ಕಾಮಾರಿವೊಲ್ ಮಾರಿವೊಲ್ ನೀ
ಹಾರಂ ಹಾರಂ ಹರಾಂಗಂ ಬರೆ ನಿಜಯಶದೊಳ್ ಭಾಸಮಾನಂ ಸಮಾನಂ ೫೬

ವ|| ಎನೆ ಕೇಳ್ದು

ಯಮುನಾಪ್ಲವಮಂ ಗಂಗೆಯ
ವಿಮಲಪ್ಲವಮೊಂದಿದಂತೆ ಸಭೆಯಂ ಪುದಿದಂ
ಗ[2]ಮರೀಚಿಯನುಜ್ವಲದಂ
ತಮರೀಚಿ ಪುದುಂಗೊಳಲ್ಕೆ ಕೃಷ್ಣಂ ನುಡಿದಂ ೫೭

ನಮ್ಮ ಮೇಲೆ ಹೆಚ್ಚೇ ಆಗುವುದು. ೫೪. "ದಮಘೋಷನ ಮಗ ಶಿಶುಪಾಲನ ಸೇನೆಯ ದುರ್ದಮವಾದ ಯುದ್ಧಘೋಷಣೆಯು ಪ್ರಾರಂಭವಾಗುವುದಕ್ಕಿಂತ ಮೊದಲೇ ನಾವು ದಂಡೆತ್ತಿ ಹೋಗೋಣ. ಆ ಸಮುದಾಯವು ನಮ್ಮ ಮೇಲೆ ಎತ್ತಿಬಂದರೆ ಅದು ಸಾಮಾನ್ಯ ಶತ್ರು ಸಮೂಹವಾಗುವುದಿಲ್ಲ. ಆತನಲ್ಲಿ ಸಾಮರ್ಥ್ಯವು ಮರ್ಮವೂ ಅಧಿಕವಾಗುವುದು. ೫೫. "ಕೃಷ್ಣಾ! ಅದೂ ಅಲ್ಲದೆ ಸ್ಪಷ್ಟವಾಗಿ ಇಂದ್ರನ ಐರಾವತವನ್ನು ಅಪೇಕ್ಷಿಸುತ್ತ ಭಯಂಕರನಾಗಿರುವ ಆ ಶಿಶುಪಾಲನು ನಿನ್ನನ್ನು ಸನ್ಮಾನಿಸುವುದಿಲ್ಲ. ಹರಿಯು ಮನುಷ್ಯನೆಂದು ಲಕ್ಷಿಸದೆ ಇರುವನು. ನಾವು ಆತನೊಡನೆ ಮಾಡಬೇಕಾದ ಯುದ್ಧವು ಚಲಿಸುವ ಪರ್ವತದೊಡನೆ ಮಾಡುವ ಯುದ್ಧವಾಗುವುದು. ಪರಮದ್ರೋಹಿಯಾದ ಆತನ ಮೇಲೆ ನಾವೇ ಎತ್ತಿಹೋಗಿ ಚಲದಿಂದ ನಿಜವಾಗಿಯೂ ಕೊಂದುಹಾಕೋಣ. ೫೬. ಧೈರ್ಯಶಾಲಿಯೂ, ಪ್ರಾಜ್ಞನೂ, ಆದ ನೀನು ಯಶಸ್ಸಿಗೆ ಸಾಧನವಾದ ನಮ್ಮ ಸೈನ್ಯವು ಸಮುದ್ರವನ್ನು ಆಕ್ರಮಿಸಿ, ಸಾವಕಾಶ ಮಾಡದೆ ನಡೆದು, ದುರ್ದಾಂತನೂ ನಮ್ಮನ್ನು ಲಕ್ಷ್ಯಮಾಡದಿರುವವನೂ ಆದ ಆ ಶಿಶುಪಾಲನನ್ನು ಪರಾಕ್ರಮದಿಂದ ಪ್ರತಿಭಟಿಸು. ಅವನು ಒಂದು ಕ್ಷಣಕಾಲ ಎದುರಿಸಿದನಾದರೆ ಸಾಕು. ೫೭. ರುದ್ರನಂತೆಯೂ ಮಾರಿಯಂತೆಯೂ ಒಡನೆ ಸಾಯಿಸು. ಅದರಿಂದ, ಹೊಳೆಯುತ್ತಿರುವ ಹಿಮವೂ ಮುತ್ತಿನಹಾರವೂ ಹರನ

---

೧. ಹರಿಯೇನೆಂದುಜಿದಿರ್ದನಂ (ಕ) ಹರಿಯೇನೆಂದುಜಿದಿರ್ದಸಂ (ಖ) ಹರಿಯೇನೆಂದುಜಿದಿರ್ದನ (ಗ) ೨. ಮರೀಚಿಯಿನುಜ್ವಲ (ಕ)

ದಾರುಣಚ್ಛೈದ್ಯಶಿರಶ್ಛೇ
ದಾರುಣಜಲಪಾನಮಂ ತದೀಯಕ್ರವ್ಯಾ
[೧]ಹಾರಮನೀಯುಷ್ಮದ್ವಾ
ಹಾರಮದಿಂ ಭೂತಕೋಟಿಗೀಗುಂ ಧುರದೊಳ್ ೫೮

ವ॥ ಎಂದು ಮಂದರಧರಂ ಗಂಭೀರಭಾಷೆಯಿಂ ನುಡಿದುದ್ಧವನ ವದನಮಂ ನೋಡೆ

ಕನಕಾಚಲಚೂಳಿಕೆಯಿಂ
ದ್ಯುನದಿಯ ಪೊನಲಿಟಿವ ತೆಱದೆ ಕನಕಪ್ರಭನಾ
ನನದಿಂದುಜ್ವಲದಶನಾಂ
ಶುನಿಕಾಯಂ ಪೊಣ್ಮೆ ನುಡಿದನುದ್ಧವಸಚಿವಂ ೫೯

ಬವರದಿನತ್ತ ಶತ್ರು ಕರೆವಂ ಬಟಿಯಟ್ಟುವನಿತ್ತ ಮಿತ್ರನಾ
ಬವರದ ನಣ್ಪಿನುಜ್ಜುಗದೊಳೊಂದನೊಡರ್ಚಿದೊಡೊಂದು [೨]ಮಾಡಪ್ಪೊ
ಲ್ಲವೆ ಗಡ ಕಾರ್ಯಸಂಕಟಮಿದಾದೊಡಮಿಲ್ಲಿಗೆ ಪೇೞ್ವೆನಂತೆ ದಾ
ನವವಧುಮಂತೆ ಧರ್ಮಸುತದರ್ಶನಮೊರ್ಮೊದಲಪ್ಪುಪಾಯಮಂ ೬೦

ವ॥ ಅದೆಂತೆಂದೊಡೆ

ದೇಹವೂ ನಿನ್ನ ಕೀರ್ತಿಗೆ ಸಮವಾಗುವುವು." ಅನಂತರ ಯಮುನಾನದಿಯ ಪ್ರವಾಹವನ್ನು ಗಂಗಾನದಿಯ ನಿರ್ಮಲ ಪ್ರವಾಹವು ಸೇರಿದಂತೆ ಮುಂಚೆ ಸಭೆಯಲ್ಲಿ ಹರಡಿದ್ದ ಕೃಷ್ಣನ ಅಂಗದ ನೀಲಕಾಂತಿಯನ್ನು ಅವನ ಉಜ್ವಲವಾದ ಹಲ್ಲಿನ ಹೊಳಪು ಸೇರಿಕೊಳ್ಳುತ್ತಿರಲು ಕೃಷ್ಣನು ಹೇಳಿದನು. ೫೮. ನಿಮ್ಮ ಈ ನುಡಿ ಯುದ್ಧದಲ್ಲಿ ಭಯಂಕರನಾದ ಶಿಶುಪಾಲನ ಶಿರಶ್ಛೇದದಿಂದ ಹೊರಡುವ ರಕ್ತದ ಪಾನವನ್ನೂ, ಅವನ ಮಾಂಸದ ಆಹಾರವನ್ನೂ ಭೂತಕೋಟಿಗೆ ಕೊಡುತ್ತದೆ." ವ॥ ಎಂದು ಮಂದಧರ ಕೃಷ್ಣನು, ಗಂಭೀರಭಾಷೆಯಿಂದ ನುಡಿದು ಉದ್ಧವನ ಮುಖವನ್ನು ನೋಡಿದನು. ೫೯. ಮೇರುಗಿರಿಯ ಶಿಖರದಿಂದ ದೇವಗಂಗೆಯ ಪ್ರವಾಹವು ಇಳಿಯುವಂತೆ ಕನಕಪ್ರಭೆಯು ಉದ್ಧವನ ಬಾಯಿಂದ ಹೊಳೆಯುವ ಹಲ್ಲಿನ ಕಾಂತಿಯು ಹೊಮ್ಮುತ್ತಿರಲು ಆ ಸಚಿವನು ಹೇಳಿದನು. ೬೦. "ಅತ್ತ ಕಡೆ ಶತ್ರುವು ಯುದ್ಧಕ್ಕೆ ಕರೆದನು. ಇತ್ತ ಕಡೆ ಮಿತ್ರನು ಯಾಗಪೂಜೆಗೆ ಬರಬೇಕೆಂದು ಹೇಳಿ ಕಳುಹಿಸಿರುವನು. ಆ ಯುದ್ಧದ ಈ ಪ್ರೀತಿಯ ಉದ್ಯೋಗಗಳಲ್ಲಿ ಒಂದನ್ನು ಮಾಡಿದರೆ ಮತ್ತೊಂದನ್ನು ಮಾಡುವುದು ಕಷ್ಟ, ಸರಿಯಾದದ್ದೂ ಅಲ್ಲ. ಕಾರ್ಯವು ಹೀಗೆ ಇಕ್ಕಟ್ಟಾಗಿದ್ದರೂ ರಾಕ್ಷಸವಧೆಯೂ ಧರ್ಮರಾಜನ ಸಂದರ್ಶನವೂ ಒಟ್ಟಿಗೆ ಆಗುವ ಒಂದು ಉಪಾಯವನ್ನು ಹೇಳುವೆನು. ವ॥ ಅದು ಹೇಗೆಂದರೆ

---

೧. ಹಾರಮನೀಯಸ್ಮದ್ವಾಹಾರಮದಿಂ (ಕಗ) ೨. ಮಾಙ್ಪುಪೊಲ್ಲವೆಗೆಡೆ (ಕ) ಮಾಙ್ಗುಪಲ್ಲವೆಗೆಡೆ (ಗ)

ಯಮಜಾತಂ ಯಜ್ಞಪೂತಂ ಬರಿಸೆ ಬರೆ ನೃಪವ್ರಾತವಾ ಪೂಜೆಗಾತಂ
ಸಮವಾಯಂ ಬಂದಮೇಯಂ ಸಕಲನೃಪಕುಲಜ್ಯಾಯನಾಂ ಪೂಜನೀಯಂ
ಸಮನಾವಂ ಪೂರ್ವದೇವಂಗೆನಗೆನೆ ಕೆಳರ್ದುದ್ದ್ರೇವನಾ ದುಷ್ಟಭಾವಂ
ನಮಗಾದಂ ಕೋಪವಾದಂದವನಟೆಗುಮಸದ್ವಾದನುದ್ವೃತ್ತಮಾದಂ ೬೧

ವ॥ ಎಂಬುದುಮಾ ಮಾತನತಿಪ್ರೀತಿಯಿಂದಾದರಿಸಿ

ನೆಱೆಯರಿದಪ್ಪ ಕಾರ್ಯಫಲಮಂ ಬಲಮಂ ಪ್ರಸಿದ್ಧಿಯೊಳ್
ನಿಱಿಸುವ ನೋಡಿ ಕಾಲಗತಿಯಂ ಧೃತಿಯಂ [1]ಕ್ಷಿತಿಯಂ ನಿರ್ಮಿರ್ಚುವೀ
[2]ನೆಱವಿನೊಳೆಯ್ದೆ ಕಂಡು ನಯಮಂ [3]ಜಯಮಂ ಪ್ರಿಯಮಂ ಪ್ರಧಾನರಾ
ರಱೆಪುವರಿಂತಧೀಶಹಿತಮಂ ಮಿತಮಂ [4]ಮತಮಂ ಮಹಾಮತೀ ೬೨

ವ॥ ಎಂದು [5]ನಿರ್ವರ್ತಿತ ಮಂತ್ರಾಲೋಚನನಾಗಿ ಧರ್ಮಜಯಾಗಪೂಜಾವ್ಯಾಜದಿಂ ಚೈದ್ಯನಂ ಯುದ್ಧರಂಗಪೂಜೆಗೆ ಭಾಜನಂ ಮಾಳ್ಪುದೆ ಕಜ್ಜಮೆಂದುಪೇಂದ್ರನಿಂದ್ರ ಪ್ರಸ್ಥಗಮನೋದ್ಯುಕ್ತನಪ್ಪುದುಂ ಬಲಾಧ್ಯಕ್ಷಂ ವಿಜಯಪ್ರಸ್ಥಾನಭೇರಿಯಂ ಪೊಯ್ಸಿದಾಗಳ್

ಹರಿ ಮತ್ಸ್ಯಾಕಾರದೊಳ್ ಪುಚ್ಛದೆ ಜಲನಿಧಿಯಂ ಪೊಯ್ವ ನಾಟ್ಯಕ್ರಿಯಾಡಂ
ಬರದೊಳ್ ಕಾಲಾಗ್ನಿರುದ್ರಂ ನಿಜಪದತಳದಿಂ ತಾಳಮಂ ಕೊಟ್ಟ ದೇವೇ
ಶ್ವರವಜ್ರಕ್ಕಳ್ಕಿ ಗೋತ್ರಾಚಳತತಿ ಕಡಲಂ ಪೊಕ್ಕ ತದ್ಧ್ವಾನಮುಂ ಧಿ
ಕ್ಕರಿಸಿತ್ತಕ್ಷೂಣಕೋಣಪ್ರಹತಬಹುಳ ಭಾಂಕಾರಭೇರೀನಿನಾದಂ ೬೩

೬೧. "ಯಾಗದೀಕ್ಷೆಯಿಂದ ಪವಿತ್ರನಾದ ಧರ್ಮರಾಜನು ಕರೆಯಿಸಲು ರಾಜಸಮೂಹವು ಬರುವುದು. ಆ ಪೂಜೆಗೆ ಶಿಶುಪಾಲನೂ ತನ್ನವರೊಡನೆ ಬರುವನು. ಅವನು ನಾನು ಅಮೇಯನು, ಸಕಲ ರಾಜಕುಲದಲ್ಲಿ ಹಿರಿಯನು, ಪೂಜನೀಯನು, ಪೂರ್ವದೇವ (= ರಾಕ್ಷಸ)ನಾದ ನನಗೆ ಸಮನಾವನು! ಎಂದು ದುಷ್ಟಭಾವವುಳ್ಳವನಾಗಿ ರೇಗಿ, ಕತ್ತನ್ನೆತ್ತಿ ಹೇಳಿದಾಗ ನಮಗೆ ಅತಿಯಾಗಿ ಕೋಪವುಂಟಾಗುವುದು. ಅದರಿಂದ ಅವನು ಹತನಾಗುವನು. ಕೆಟ್ಟಮಾತು ಬಹು ಪ್ರಮಾದಕರ" ವ॥ ಎಂದು ಹೇಳಿದನು. ಆ ಮಾತನ್ನು ಅತಿಪ್ರೀತಿಯಿಂದ ಆದರಿಸಿ ಶ್ರೀಕೃಷ್ಣನು ೬೨. "ಬಹು ಕಷ್ಟಸಾಧ್ಯವಾದ ಕಾರ್ಯದ ಫಲವನ್ನೂ ಅದಕ್ಕೆ ಬೇಕಾದ ಬಲವನ್ನೂ ಚಲವನ್ನೂ ಪ್ರಸಿದ್ಧಿಯಲ್ಲಿ ನಿಲ್ಲಿಸುವ ಕಾಲಗತಿಯನ್ನೂ ಧೈರ್ಯವನ್ನೂ ನೋಡಿ, ಭೂಮಿಯನ್ನು ವಿಸ್ತರಿಸುವ, ಸಹಾಯದಲ್ಲಿ ಸರಿಯಾಗಿ ನೋಡಿ, ನಯವನ್ನೂ ಜಯವನ್ನೂ ಪ್ರಿಯವಾಗಿ, ಅಧೀಶರಿಗೆ ಹಿತವೂ ಮಿತವೂ ಆದ ಮತವನ್ನು ಹೀಗೆ ನಿಮ್ಮಂತೆ ತಿಳಿಸುವ ಪ್ರಧಾನರು ಯಾರು! ಮಹಾಮತೀ!" ವ॥ ಎಂದು ಮಂತ್ರಾಲೋಚನೆಯನ್ನು ನೆರವೇರಿಸಿದವನಾಗಿ, ಧರ್ಮರಾಜನ ಯಾಗಪೂಜಾವ್ಯಾಜದಿಂದ ಶಿಶುಪಾಲನನ್ನು ಯುದ್ಧರಂಗಪೂಜೆಗೆ ಪಾತ್ರನನ್ನಾಗಿ ಮಾಡುವುದೇ ಕಾರ್ಯವೆಂದು ಆ ಕೃಷ್ಣನು ಇಂದ್ರ ಪ್ರಸ್ಥಪುರಕ್ಕೆ ಹೋಗಲುದ್ಯುಕ್ತನಾದನು. ಸೇನಾಧ್ಯಕ್ಷನು ವಿಜಯ ಪ್ರಸ್ಥಾನಭೇರಿಯನ್ನು ಹೊಡೆಯಿಸಿದನು. ಆಗ ೬೩. ಬಲವಾದ ಕೋಲುಗಳಿಂದ ಜೋರಾಗಿ ಹೊಡೆದ ಭೇರಿಗಳ ಭಾಂಕಾರಧ್ವನಿಯು ಹರಿ

---

೧. ಸ್ಥಿತಿಯೆಂ (ಖ) ೨. ತೆರವಿನೊಳೆಯ್ದೆ (ಖ) ೩. ಭಯಮಂ (ಖ) ೪. ನುತಮಂ (ಕ) ೫. ನಿವೃತ್ತ (ಗ)

ವ|| ಆ ಭೇರೀನಿನಾದಮಂ ಕೇಳ್ದು

ಪ್ರತಿಪಾದಕ್ಷೇಪಡೋಳಾಯಿತಧರಣಿತಳಂ ಕರ್ಣತಾಳೋತ್ಥವಾತಾ
ಹತಿಯಾತಾಯಾತಗೋತ್ರಾಚಲತತಿ ಮದವಾರಾಶಿನೀರದ್ವಿಪೌಘೀ
ಕೃತದಿಙ್ನಾಗೌಘಮುದ್ಯತ್ತರಳಕದಳಿಕಾರಣ್ಯತೀರದ್ರುಮಾಳಂ
ಕೃತತಾರಾಧ್ವಾಪಗಂ ಬಂದುದು ಘನಘಟೆಯಂ ಮುಟ್ಟೆ ಮತ್ತೇಭಸೈನ್ಯಂ ೬೪

ಕ್ಷಿತಿಚಕ್ರಂ ತನ್ನ ಪರ್ವಿಂ ತೆರೆಮಸಗಿದ ವಾರಾಶಿಯಂ ಪೋಲ್ವನಂ ಹೇ
ಷಿತಘೋಷಾಪೂರಿತಾಶಂ ಖುರಪರಿಪಿಹಿತಕ್ಷೋಣಿ ಪರ್ಯಾಣರತ್ನ
ದ್ಯುತಿವಲ್ಲೀವೇಲ್ಲಿತಾಭ್ರಂ ನೆರೆದುದಿನಹಯೋಚ್ಚೈಶ್ರವಂಗಳ್ಗಮಿಂತೀ
ಗತಿ ಸತ್ವಂ ರೂಪು ರೋಮಚ್ಛವಿ ಸಮನಿಸದೆಂಬಂತು ದಿವ್ಯಾಶ್ವಸೈನ್ಯಂ ೬೫

ಪರಿಧಾವಚ್ಚಕ್ರಮಾಲಾಚಟುಲವತಿಜವೋತ್ಸಾಹವಾಹ[೧]ವ್ರಜೋದ್ಯ
ತ್ಖುರವೃದ್ಧಂಡಧ್ವಜಾಳಿಸ್ಫುರಿತವಖಿಲಶಸ್ತ್ರಾಸ್ತ್ರಸಂದೋಹರುದ್ಧಂ
ವಿರುವದ್ಘಂಟಾಸಮಗ್ರಂ ರಣರಸಿಕಮಹಾವೀರದುರ್ವಾರವತ್ಸು
ದ್ಧರಸೂತೋಚ್ಛೃಂಖಳಂ ಛೋಂಕೆನೆ ನೆರೆದುದನೂನಂ ವರೂಥಪ್ರತಾನಂ ೬೬

ಮತ್ಸ್ಯಾವತಾರದಲ್ಲಿ ಬಾಲದಿಂದ ಸಮುದ್ರವನ್ನು ಹೊಡೆದಾಗಲೂ ಕಾಲಾಗ್ನಿರುದ್ರನು, ನಾಟ್ಯಕ್ರಿಯಾಡಂಬರದಲ್ಲಿ ತನ್ನ ಅಂಗಾಲಿನಿಂದ ತುಳಿದಾಗಲೂ ದೇವೇಂದ್ರನ ವಜ್ರಯುದ್ಧಕ್ಕೆ ಹೆದರಿ ಗೋತ್ರಪರ್ವತಗಳ ಗುಂಪು ಸಮುದ್ರದಲ್ಲಿ ಧುಮುಕಿದಾಗಲೂ ಆದ ಧ್ವನಿಗಳನ್ನು ಧಿಕ್ಕರಿಸಿತು. ವ|| ಆ ಭೇರಿಯ ಧ್ವನಿಯನ್ನು ಕೇಳಿ, ೬೪. ಮದ್ದಾನೆಗಳ ಸೇನೆಯು ಉನ್ನತವಾಗಿ, ಮೋಡಗಳನ್ನು ತಾಕುತ್ತಾ ನಡೆಯಿತು. ಅದು ಒಂದೊಂದು ಹೆಜ್ಜೆಯಿಡುವಾಗಲೂ ಭೂಮಿಯು ತೊಟ್ಟಿಲಿನಂತೆ ತೂಗಾಡುತ್ತಿದ್ದಿತು. ಆನೆಗಳ ಕಿವಿಯೆಂಬ ಬೀಸಣಿಗೆಯಿಂದೆದ್ದ ಗಾಳಿ ಕುಲಪರ್ವತಗಳನ್ನು ಹಿಂದಕ್ಕೂ ಮುಂದಕ್ಕೂ ಚಲಿಸುವಂತೆ ಮಾಡಿತು. ಅವುಗಳ ಮದೋದಕಸಮುದ್ರವು ದಿಗ್ಗಜಗಳನ್ನು ಮುಳುಗಿಸಿ ನೀರಾನೆಗಳನ್ನಾಗಿ ಮಾಡಿತು. ಆನೆಗಳ ಮೇಲಿನ ಧ್ವಜಗಳು ದೇವಗಂಗೆಯ ತೀರವೃಕ್ಷಗಳಂತೆ ಅಲಂಕರಿಸಿದವು. ೬೫. ಸೂರ್ಯಾಶ್ವಕ್ಕಾಗಲಿ ಉಚ್ಚೈಶ್ರವಕ್ಕಾಗಲಿ ಈ ವೇಗವೂ ಬಲವೂ ರೂಪವೂ ರೋಮಕಾಂತಿಯೂ ಇಲ್ಲವೆಂದೆನಿಸಿಕೊಂಡ ಕುದುರೆಗಳ ಸೈನ್ಯವು ಕೂಡಿ ನಡೆಯಿತು. ಅದರ ಹಬ್ಬುವಿಕೆಯಿಂದ ಭೂಮಂಡಲವು ತೆರೆಯು ಹೆಚ್ಚಿದ ಸಮುದ್ರವನ್ನು ಹೋಲುವಂತಾಯಿತು. ಕೆನೆತವು ದಿಕ್ಕುಗಳನ್ನು ತುಂಬಿತು. ಗೊರಸುಗಳಿಂದ ಭೂಮಿ ಮುಚ್ಚಿ ಹೋಯಿತು. ಜೀನುಗಳಲ್ಲಿರುವ ರತ್ನಗಳ ಕಾಂತಿಯ ಬಳ್ಳಿಯಿಂದ ಆಕಾಶವು ಆವೃತವಾಯಿತು. ೬೬. ಯಾವ ನ್ಯೂನತೆಯೂ ಇಲ್ಲದ ರಥಗಳ ಸಮೂಹವೂ ಬೇಗನೆ ಸೇರಿ ಹೊರಟಿತು. ಅವು ಓಡುವಾಗ ಚಕ್ರಗಳು ಕಿರುಗುಟ್ಟುತ್ತಿದ್ದವು. ವೇಗೋತ್ಸಾಹದಿಂದ ರಥದ ಕುದುರೆಗಳ ಕಾಲು ಆಕಾಶದಲ್ಲೇ ಇರುವಂತೆ ಕಾಣಿಸುತ್ತಿದ್ದಿತು. ಧ್ವಜಗಳು

---

೧. ವ್ರಜೋಚ್ಚಾಮರ (ಕ) ವ್ರಜೋಡ್ಡಾಮರ (ಗ)

ಕರಿಕುಂಭೋತ್ಕಂಠೀರವ ವರವಭಯದಕ್ಷ್ವೇಡಿತಂ ರತ್ನಗಾತ್ರ
ತ್ರರುಚಿಸ್ತೋಮಾವಲೀಢಂ ಗುಣಜಕಿಣಕಠೋರಪ್ರಕೋಷ್ಠಂ ಧನುಷ್ಟಂ
ಕರಣಪ್ರೋದ್ದಾಮವಂ ಸಗ್ರಥಿತ[1]ಶರಧಿ ಗೋಧಾತಳತ್ರಾಂಗುಳಿಪ್ರ
ಸ್ಫುರಿತಂ ಧಾನುಷ್ಕಚಕ್ರಂ ನೆರೆದುದು ಚರಣಾಸ್ಫೋಟಿತಕ್ಷೋಣಿಚಕ್ರಂ ೬೭

ವ॥ ಆ ಪ್ರಸ್ತಾವದೊಳ್

ಅವನೀದೇವಸಮೂಹವೇದನಿನದಂ ಮಾಂಗಲ್ಯಗೀತಾನ್ವಿತೋ
ತ್ಸವತೂರ್ಯಧ್ವನಿ ವಂದಿ[2]ವೃಂದಜಯಜೀಯಾನಂದನಾದಂ ಸುಹೃ
ನ್ನಿವಹಾಶೀರವಮೊಂದನೊಂದು ಗೆಲೆವಂದೆಕ್ಕೆಕ್ಕೆಯಿಂದುರ್ವಿ ಪ
ರ್ವುವಿನಂ ಘೂರ್ಣಿಸುತಿರ್ದುದಾ ನೃಪಗೃಹಂ ಕ್ಷುಭ್ಯತ್ಸುಧಾಂಭೋಧಿವೋಲ್ ೬೮

ತರಳವಿಲೋಚನದ್ಯುತಿ ದರಸ್ಮಿತಕಾಂತಿ ನವೀನಮೌಕ್ತಿಕಾ
ಭರಣಮರೀಚಿ ಕಣ್ಗೊಳಿಸೆ ಮಂಗಳಲಕ್ಷ್ಮಿಯ ಮೇಳದಾಕೆಯರ್
ನೆರೆದ [3]ವೊಲಾಗಳಂತಪುರದಂಗನೆಯರ್ ನಡೆತಂದು ಬಾಹುವ
ಲ್ಲರಿ ಕುಡೆ ದೇಸೆಯಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯಂ ೬೯

ಹೊಳೆಯುತ್ತಿದ್ದವು. ರಥವು ಎಲ್ಲಾ ಬಗೆಯ ಶಸ್ತ್ರಾಸ್ತ್ರಗಳಿಂದ ತುಂಬಿದ್ದಿತು. ಘಂಟೆಗಳು ಹೆಚ್ಚಾಗಿ ಶಬ್ದಮಾಡುತ್ತಿದ್ದವು. ರಣರಸಿಕರಾದ ಮಹಾವೀರರು ದುರ್ವಾರ ರಥಿಕರಾಗಿದ್ದರು. ಉದ್ಧತರಾದ ಸಾರಥಿಗಳು ತಡೆಯಿಲ್ಲದವರಾಗಿದ್ದರು. ೬೭. ಆನೆಯ ಕುಂಭದಲ್ಲಿ ಕುತೂಹಲವುಳ್ಳ ಸಿಂಹಕ್ಕೂ ಭಯವನ್ನುಂಟುಮಾಡುವಂತೆ ಗರ್ಜಿಸುವ ರತ್ನಾಲಂಕೃತವಾದ ಕವಚದ ಕಾಂತಿಯಿಂದ ಮುಚ್ಚಿದ, ಬಿಲ್ಲ ಹೆದೆಯಿಂದ ಮರಗಟ್ಟಿದ ಮುಂಗೈ ಉಳ್ಳ, ಬಿಲ್ಲನ್ನು ಟಂಕಾರಮಾಡುವುದರಲ್ಲಿ ನಿಪುಣವಾದ, ಬತ್ತಳಿಕೆಯನ್ನು ಹೆಗಲಿಗೆ ಕಟ್ಟಿಕೊಂಡಿರುವ, ಮೊಳಕೈಗೆ ಚರ್ಮದ ಪಟ್ಟಿಯನ್ನೂ ಕೈಬೆರಳಿಗೆ ರಕ್ಷೆಯ ನಾಳವನ್ನೂ ಧರಿಸಿದ ಬಿಲ್ಲಿನ ಸೇನಾಮಂಡಲವು ಕಾಲತುಳಿತದಿಂದ ಭೂಮಿಯನ್ನು ಒಡೆಯುತ್ತ ಬಂದಿತು. ವ॥ ಆ ಸಂದರ್ಭದಲ್ಲಿ ೬೮. ಬ್ರಾಹ್ಮಣಸಮೂಹದ ವೇದಧ್ವನಿಯೂ ಮಂಗಳಗೀತಗಳಿಂದ ಕೂಡಿದ ಸಂತೋಷಕರವಾದ ವಾದ್ಯಧ್ವನಿಯೂ ಸ್ತುತಿಪಾಠಕರ ಜಯ ಜಯ ಜೀಯ ಎಂಬ ಆನಂದನಾದವೂ ಸುಹೃನ್ಮಿತ್ರರ ಆಶೀರ್ವಾದಧ್ವನಿಯೂ ಒಂದನ್ನೊಂದು ಗೆಲ್ಲುವಂತೆ ಒಟ್ಟೊಟ್ಟಾಗಿ ಉಬ್ಬಿ ಹಬ್ಬುತ್ತಿರಲು ಅರಮನೆಯು, ಕಡೆದಾಗಿನ ಕ್ಷೀರ ಸಮುದ್ರದಂತೆ ಮೊರೆಯುತ್ತಿದ್ದಿತು. ೬೯. ತಮ್ಮ ಚಂಚಲವಾದ ಕಣ್ಣಿನ ಮುಗುಳುನಗೆಯ ಮತ್ತು ಮುತ್ತಿನ ಆಭರಣಗಳ ಕಾಂತಿಯು ಮನೋಹರವಾಗಿರಲು, ಮಂಗಳಲಕ್ಷ್ಮಿಯ ಮೇಳದವರಂತೆ ಸೇರಿದ ಅಂತಃಪುರದ ಅಂಗನೆಯರು ಬಂದು ಅವರ ಬಳ್ಳಿದೋಳು ಚೆನ್ನಾಗಿ ಕಾಣುತ್ತಿರಲು ತ್ರಿಭುವನಪ್ರಭು ಕೃಷ್ಣನಿಗೆ ಅಕ್ಷತೆಯನ್ನು ಪ್ರೀತಿಯಿಂದ ತಳಿದರು. ವ॥ ಹಾಗೆ ಮಂಗಳಾಚಾರವು ಚೆನ್ನಾಗಿ ನಡೆದ ಮೇಲೆ ಕೃಷ್ಣನು ಸಿಂಹಾಸನದಿಂದ ಎದ್ದು ಬಲಗಾಲನ್ನು

---

೧. ಶರಧಿಗಾದಂ (ಕ) ಶರಧಿಗಾಢಂ (ಗ) ೨. ವೃಂದ ವಿಜಯಾನಂದ ಪ್ರವಾದಂ (ಖ) ೩. ವೊಲಾಗಳಂಪುರತೆದಂಗನೆಯರ್ ನಡೆತಂದು (ಕ) ವೊಲಾಗಳಂತೆ ಪುರದಂಗನೆಯರ್ ನೆರೆತಂದು (ಗ)

ವ|| ಅಂತು ಮಂಗಳಾಚಾರಮೆಸೆಯೆ ಸಿಂಹಪೀಠದಿಂದೆಟ್ಟು ದೈತ್ಯಮಥನಂ ಪ್ರಥಮ ಚಲಿತದಕ್ಷಿಣಚರಣನಾಗಿ

ವೀರಶ್ರೀ ನಲಿದೇಱೆ ತನ್ನ ಭುಜಮಂ ತೇಜಂ ದಿಶಾಧೀಶಕೋ
ಟೀರ[1]ಪ್ರಾಂತವನೇಱೆ ಶತ್ರು ದಿವಮಂ ಪೂಣ್ದೇಱೆ ಬಂದೇಱಿದಂ
ಧೀರಂ ಶೌರಿ ವರೂಥಮಂ ಪ್ರಥಿತಘಂಟಾಯೂಥಮಂ ಶಸ್ತ್ರತೂ
ಣೀರವ್ರಾತಸನಾಥಮಂ ಧ್ವಜಝಷಾಪ್ತ[2]ಸ್ವರ್ಣದೀಪಾಥಮಂ ೭೦

ವ|| ತದನಂತರಂ

ಅತಿಕೋಪೋದ್ಭಿನ್ನಗಂಧದ್ವಿಪಘಟೆಗಳ ಘಂಟಾಠಣತ್ಕಾರದಿಂ ಬೃಂ
ಹಿತದಿಂ ವಲ್ಗತ್ತುರಂಗೋತ್ಕರದ ಖರಖುರಾಳೀರಟತ್ಕಾರದಿಂ ಹೇ
ಷಿತದಿಂ ಸಂಗ್ರಾಮ[3]ರಾಗೋದ್ಧಟಭಟರ ಪದಪ್ರೋಚ್ಚಳತ್ಕಾರದಿಂ ಕ್ಷ್ವೇ
ಡಿತದಿಂ ಬ್ರಹ್ಮಾಂಡಮುಜ್ಜೃಂಭಿಸುತಿರೆ ತಳರ್ದಂ ಶ್ರೀಜಗನ್ನಾಥದೇವಂ ೭೧

ವ|| ಆ ಸಮಯದೊಳಪ್ರಮೇಯಸ್ವಕೀಯಬಲಕಳಕಳಾಕರ್ಣನೋದ್ದೀರ್ಣಕೋಪ ಸ್ಫುಟಿತ ಕಟತಟ ವಿಗಳದವಿರಳದಾನಧಾರಾಪಾನೀಯ ಪರ್ಯಟದಳಿಪಟಲಝುಂಕೃತೋಪಬೃಂಹಿತ ಬೃಂಹಿತನಿನದಭೀಕರಾನೇಕಗಜಘಟಾನೀಕರುಂ, ಖರದಂತಖಂಡನಖಣಖಣಾಯಮಾನಖಲೀನೋತ್ಸ್ಖಲಿತ ಬಹುಳ ಲಾಲಾಪ್ರತಾನಫೇನಪೂರಘುರುಘೋಣಾ ಘೋಷಣೋನ್ಮಿಶ್ರಿತಹೇಷಿತಾರವಭೀಷಣ ವಾಹಸಂದೋಹರುಂ, ಧರಣೀತಳಶಿಲಾಪಟ್ಟಶಲ್ಕೀಕರಣಪಟುನಿಷ್ಠುರವ್ಯಾಘಾತನೇಮಿವಳಯೋಚ್ಚಂಡಚಕ್ರ ಪ್ರಚಯಚೀತ್ಕಾರನಾದಾತಿಶಯವರೂಥಿಚಾಪಟಂಕಾರರವಭಯಂಕರ ವರೂಥಯೂಥರುಂ,

ಮುಂದಿಟ್ಟು ನಡೆದನು. ೭೦. ಧೀರನಾದ ಕೃಷ್ಣನು, ವೀರಶ್ರೀಯು ತನ್ನ ಭುಜವನ್ನೂ, ತನ್ನ ತೇಜಸ್ಸು ದಿಕ್ಪಾಲಕರ ಕಿರೀಟವನ್ನೂ, ಶತ್ರುವು ಸ್ವರ್ಗವನ್ನೂ ಏರುವಂತೆ ಪ್ರತಿಜ್ಞೆಯನ್ನು ಮಾಡಿ ಬಂದು, ಪ್ರಸಿದ್ಧವಾದ ಘಂಟೆಗಳನ್ನು ಕಟ್ಟಿದ, ಶಸ್ತ್ರಬತ್ತಳಿಕೆಗಳಿಂದ ತುಂಬಿದ, ರಥದ ಧ್ವಜವೆಂಬ ಮೀನು ಆಕಾಶಗಂಗೆಯ ನೀರನ್ನು ಸೇರಿದ (ಉನ್ನತವಾದ) ರಥವನ್ನು ಏರಿದನು. ವ|| ಆಮೇಲೆ ೭೧. ಅತಿ ಕೋಪದಿಂದ ಹೆಚ್ಚಾಗಿ ಸೋರುವ ಮದೋದಕದ ಆನೆಗಳ ಘಂಟೆಗಳ ಠಣತ್ಕಾರದಿಂದಲೂ ಘೀಂಕಾರದಿಂದಲೂ, ನೆಗೆಯುವ ಕುದುರೆಗಳ ತೀಕ್ಷ್ಣವಾದ ಗೊರಸುಗಳ ರಟತ್ಕಾರದಿಂದಲೂ ಕೆನೆತದಿಂದಲೂ ಯುದ್ಧ ಕೋಪದಿಂದ ಉದ್ಧತರಾದ ಭಟರ ಕಾಲುಗಳ ಚಳತ್ಕಾರದಿಂದಲೂ ಸಿಂಹನಾದದಿಂದಲೂ ಬ್ರಹ್ಮಾಂಡವು ಉಬ್ಬಿ ಮೈಮುರಿಯುತ್ತಿರಲು ಶ್ರೀಜಗನ್ನಾಥದೇವ ಕೃಷ್ಣನು ಚಲಿಸಿದನು. ವ|| ಆ ಸಮಯದಲ್ಲಿ ಕೃಷ್ಣನೊಡನೆ ಯಾಗಕ್ಕೆ ಹೋಗಲು ಅವನ ಸೇವಕರಾಜರನೇಕರು ಸೇನಾ ಸಮೇತ ರಾಗಿ ದ್ವಾರಕಿಗೆ ಬಂದರು. ಅವರು ಬರುವಾಗ ಅಳೆಯಲಾಗದಷ್ಟು ದೊಡ್ಡದಾದ ತಮ್ಮ ಜತೆಯ ಸೇನೆಯ ಕಲಕಲ(ಗದ್ದಲ)ವನ್ನು ಕೇಳಿ ಹೆಚ್ಚಿದ ಕೋಪದಿಂದ ಆನೆಗಳ ಕಪೋಲವು ಒಡೆದು ಎಡೆಬಿಡದೆ ಮದೋದಕವು ಸುರಿಯಲು ಆರಂಭವಾಯಿತು. ಆ ಮದಧಾರೆಯನ್ನು

---

೧. ವ್ರಾತವನೇಱೆ(ಖ) ೨. ಸ್ವರ್ಣದೀಪೋತ್ಥಮಂ (ಖ) ೩. ರಾಗೋದ್ಧಟರಪದತಳ (ಗ)

**ಅಸಮಸಮರಾರ್ಜಿತಾನೇಕ ವಿಜಯಾಹಂಕಾರಜನಿತ ಹರ್ಷಾವೇಶ ಬಂಹಿಮವತ್ಸಿಂಹನಾದ ವಿವಿಧ ಗತಿನರ್ತನ ಬಹುಪ್ರಕಾರ ಪ್ರಹರಣಚಾರಣಾನ್ಯೋನ್ಯವೀರಾಳಾಪಕಥನಪರಂಪರಾಭೀಷಣಪದಾತಿ ಸಂಘಾತರುಂ, ಯುಗಪತ್ಪ್ರಹನ್ಯಮಾನನಾನಾನಕನಿಸ್ಸಾಣಪಣವಭೇರೀಮೃದಂಗಡಿಂಡಿಮ ಡಮರುಢಕ್ಕಾತಾಳಕಾಂಶ್ಯಾತಾಳಶಂಖ ಕಾಳಹ ಕೋಳಾಹಳ ಬಧಿರಿತದಿಗಂತರಾಳರುಂ, ಕರಿಮಕರಶರಭಭೇರುಂಡಸಿಂಹ ವ್ಯಾಳಶಾರ್ದೂಲಚಿಹ್ನಪರಿವಿರಾಜಿತ ವೈಜಯಂತೀ ವಿಚಿತ್ರಪಿಂಛಚ್ಛತ್ರ ಧವಲಾತಪತ್ರಪ್ರಕರಪರಿಪಿಹಿತಮಿಹಿರಾಂಶುಜಾಳರುಂ, ಅಪ್ರಮಿತಚತುರಂಗಬಲಪದೋದ್ಧೂತ ಧೂಳೀಪಟಲಸಂಭವ ಮಹಾಂಧಕಾರನಿವಾರಣ ಪಟುಹಟನ್ಮಣಿ ಮಯಾಭರಣ ವಜ್ರಕವಚ ಮರೀಚಿನಿಚಯರುಮಾಗಿ ಬಂದು ದ್ವಾರಾವತಿಯ ಪೊಱವೊಟಿಲೊಳಿರ್ದನೇಕದ್ವೀಪಾವನಿಪಸೇವಕ ಕ್ಷತ್ರಿಯರಂ ತ್ರಿಯಾಮಾಚರಸೂದನಂ ಸುಪ್ರಸಾದಾವಲೋಕನದಿಂ ಸಂಭಾವಿಸಿ**

ಕುಡಿಯುವುದಕ್ಕಾಗಿ ತುಂಬಿಗಳು ಸುತ್ತಿ ಮುತ್ತುತ್ತ ಬಲವಾಗಿ ಝೇಂಕರಿಸಿದವು. ಆ ಝೇಂಕಾರದೊಡನೆ ಹೆಚ್ಚಿದ ಆನೆಗಳ ಘೀಂಕಾರವು ಭಯಂಕರವಾಗಿದ್ದಿತು. ಕುದುರೆಗಳ ಕಠಿನವಾದ ಹಲ್ಲುಗಳ ಕಡಿತದಿಂದ ಖಣ ಖಣ ಶಬ್ದ ಮಾಡುವ ಕಡಿವಾಣದ ಬಾಯಿಂದ ಸೋರುವ ಜೊಲ್ಲು ನೊರೆಗಳು ತುಂಬಿದ ಮೂಗಿನ ಘುರು ಘುರು ಶಬ್ದದಿಂದ ಸೇರಿ ಹೆಚ್ಚಿದ ಕೆನೆತವು ಭೀತಿಯನ್ನುಂಟು ಮಾಡುತ್ತಿದ್ದಿತು. ರಥಿಕರು ಭೂಮಿಯ ಮೇಲೆ ಹಾಸಿದಂತಿರುವ ಕಲ್ಲುಗಳನ್ನು ಪುಡಿ ಮಾಡುತ್ತ ಓಡುವ ದೃಢವಾದ ಉನ್ನತವಾದ ಚಕ್ರಗಳುಳ್ಳುದಾಗಿ ಚೀತ್ಕರಿಸುವ ರಥಗಳಲ್ಲಿ ಕುಳಿತು ಭಯಂಕರವಾಗಿ ಬಿಲ್ಲಿನ ಹೆದೆಯನ್ನು ಮಿಡಿದು ಟಂಕಾರ ಮಾಡುತ್ತಿದ್ದರು. ಕಾಲಾಳ ಸೇನೆಯವರು ಅಸಮಾನವಾದ ಯುದ್ಧಗಳಲ್ಲಿ ಅನೇಕ ಸಾರಿ ವಿಜಯುವನ್ನು ಪಡೆದ ಅಹಂಕಾರದಿಂದ ಉಂಟಾದ ಸಂತೋಷಾವೇಶಾತಿಶಯದಿಂದ ಸಿಂಹನಾದ ಮಾಡುತ್ತ ಬಗೆ ಬಗೆಯ ನಡಗೆ, ಕುಣಿತ, ಅನೇಕ ವಿಧ ಆಯುಧಪ್ರಯೋಗಚಾತುರ್ಯಗಳಲ್ಲಿ ತಮ್ಮ ತಮ್ಮಲ್ಲೇ ಸ್ಪರ್ಧಿಸುತ್ತ ತಮ್ಮ ತಮ್ಮ ಪರಾಕ್ರಮವನ್ನು ಪರಸ್ಪರ ಕೊಚ್ಚಿಕೊಳ್ಳುತ್ತಿದ್ದರು. ಒಟ್ಟಿಗೇ ಬಲವಾಗಿ ಬಾರಿಸುವ ಅನೇಕ ವಿಧವಾದ ಡೋಲು, ತಮಟೆ, ನಗಾರಿ, ಮೃದಂಗ, ಡಿಂಡಿಮ, ಡಮರುಗ, ಡಕ್ಕೆ, ತಾಳ, ಕಂಚಿನ ತಾಳ, ಶಂಖ, ಕಹಳೆಗಳ ಕೋಲಾಹಲವು ದಿಙ್ಮಂಡಲವನ್ನು ಕಿವುಡುಗೊಳಿಸುತ್ತಿದ್ದಿತು. ಆನೆ, ಮೊಸಳೆ, ಶರಭ, ಗಂಡಭೇರುಂಡ, ಸಿಂಹ, ಸರ್ಪ, ಹುಲಿ ಮೊದಲಾದವುಗಳ ಚಿಹ್ನೆಯ ಧ್ವಜಗಳಿಂದಲೂ ವಿಚಿತ್ರವಾದ ನವಿಲುಗರಿಯ ಛತ್ರಿ ಬೆಳ್ಗೊಡೆ ಮೊದಲಾದವುಗಳಿಂದಲೂ ಸೂರ್ಯಕಿರಣಗಳೇ ಕಾಣಿಸದಂತೆ ಮರೆಯಾಗುತ್ತಿದ್ದಿತು. ಮಿತಿಯಿಲ್ಲದ ಆನೆ ಕುದುರೆ ತೇರು ಕಾಲಾಳುಗಳಿಂದ ಕೂಡಿದ ಚತುರಂಗ (ನಾಲ್ಕು ಬಗೆಯ) ಸೇನೆಯ ಕಾಲಿನ ತುಳಿತದಿಂದ ಎದ್ದ ಧೂಳಿನ ರಾಶಿಯಿಂದ ಕಗ್ಗತ್ತಲೆಯುಂಟಾಗುತ್ತಿದ್ದಿತು. ಅದನ್ನು ರಾಜರೂ ಸೇನಾಧ್ಯಕ್ಷರೂ ವೀರ ಸೈನಿಕರೂ ಧರಿಸಿರುವ ತಮ್ಮ ಹೊಳೆಯುವ ರತ್ನಾಭರಣ ವಜ್ರಕವಚಗಳ ಕಾಂತಿಮಂಡಲದಿಂದ ನಿವಾರಿಸಿಕೊಂಡು ಮುಂದೆ ನಡೆಯುತ್ತಿದ್ದರು. ಹೀಗೆ ಬಂದು ದ್ವಾರಾವತಿಯ ಹೊರಗಿನ ಬಯಲಿನಲ್ಲಿದ್ದ ಅನೇಕ ದ್ವೀಪಗಳ ದೊರೆಗಳಾದ ಸೇವಕ ಕ್ಷತ್ರಿಯರನ್ನು ನಿಶಾಚರ ವಿನಾಶಕನಾದ ಕೃಷ್ಣನು ಸುಪ್ರಸನ್ನದೃಷ್ಟಿಯಿಂದ ನೋಡಿ ಸಂಭಾವಿಸಿದನು.

ಮುಗಿಯವಿವೆಂದುವೆಂದೆನಿಪುವಂ ಹರಿಸೈನ್ಯರಜೋಂಧಕಾರದಿಂ
ಮುಗಿಯಿಸಿದಂ ದಿವಾಕರಕರಾಬ್ಜಮನೆಂದೊಡಿದಾವ ಕೌತುಕಂ
ಬಗೆಗಿತರಪ್ರಚಂಡರ ಕರಾಬ್ಜಮನೀಕ್ಷಣಚಂದ್ರಿಕಾಂಶುವಿಂ
ಮುಗಿಯಿಪುದೆಂಬಿನಂ ಮುಗಿದುವಂದವನೀಶಕರಾಂಬುಜೋತ್ಕರಂ ೭೨

ವ|| ಆಗಳಾ ನೃಪಕೋಟಿಯಂ ನಿಜೋಲ್ಲಸಿತಭ್ರೂಕೋಟಿಯಿಂ ನಡೆಯಲ್ವೇೞ್ದು

ಅಸಮೋಗ್ರಾನೀಕಿನೀಭಾರದಿನವನಿತಳಂ ಬಳ್ಕಲುಚ್ಚಧ್ವಜಾನೀ
ಕಸಮೀರಾಘಾತದಿಂ ಬಾಂದೊಱೆ ತೆರೆಮಸಗಲ್ ತೂರ್ಯನಿರ್ಘೋಷದಿಂದೆ
ಣ್ದೆಸೆ ಶಬ್ದಾದ್ವೈತಮಾಗಲ್ ನೃಪಸಮಿತಿಶಿಖಾ[1]ರತ್ನಜಾಲಂಗಳಿಂದಂ
ಬಿಸಿಲೆಲ್ಲಂ ಕೆಂಕಮಾಗಲ್ ವಿಜಯಶಿಬಿರಮಂ ಕೃಷ್ಣನೆಯ್ತಂದು ಪೊಕ್ಕಂ ೭೩

ವಿವಿಧವಿನೋದದಿನಿರ್ದಾ
ದಿವಸಂ ಪ್ರಸ್ಥಾನಶಿಬಿರದೊಳ್ ಮಱುದೆವಸಂ
ದಿವಸಕರೋದಯದೊಳ್ ವಿಜ
ಯವರೂಥಮನೇಱೆ ನೆಗೞೆ ಪಟುಪಟಹರವಂ ೭೪

ಈ ಕೋಳಾಹಳದೇಕದೇಶಮನೆ ಪೋಲ್ಗುಂ ವಾರ್ಧಿಸಂಭೂತಮ
ಪ್ಪಾ ಕೋಳಾಹಳವೆಂಬಿನಂ ನಿಜಚಮೂಕೋಳಾಹಳಂ ದಿಙ್ಮುಖಾ
ನೀಕಾಂತಂಬರವಂಬರಂಬರಮಜಾವಾಸಂಬರಂ ಪರ್ವಿರಲ್
ವೈಕುಂಠಂ ನಡೆದಂ ಯುಧಿಷ್ಠಿರನರೇಂದ್ರಾಲೋಕನೋತ್ಕಂಠೆಯಿಂ ೭೫

೭೨. ಇವು ಎಂದೂ ಮುಗಿಯವು ಎನಿಸಿಕೊಂಡಿರುವ ಸೂರ್ಯನ ೧. ಕರದಿಂದ ಅರಳುವ ಕಮಲಗಳನ್ನೂ ಸೂರ್ಯನೆಂಬ ಕಮಲವನ್ನೂ ಕೃಷ್ಣನು ತನ್ನ ಸೈನ್ಯದಿಂದ ಎದ್ದ ದೂಳಿನ ಕತ್ತಲೆಯಿಂದ ಮುಸುಗಿದನು ಎಂದ ಮೇಲೆ ತನ್ನ ನೇತ್ರದ ಕಾಂತಿಯೆಂಬ ಚಂದ್ರಿಕೆಯಿಂದ ಬೇರೆಯ ರಾಜರೇ ಮೊದಲಾದ ಪ್ರಚಂಡರ ಕರಕಮಲವನ್ನು ಮುಗಿಸುವುದು ಆಶ್ಚರ್ಯಕರವೇ?! ಎಂಬಂತೆ ಅಲ್ಲಿ ಬಂದು ನೆರೆದಿದ್ದ ರಾಜರು ಕೃಷ್ಣನಿಗೆ ಕಮಲದಂತಿರುವ ತಮ್ಮ ಕೈಗಳನ್ನು ಮುಗಿದರು. ವ|| ಆಗ ಆ ರಾಜಕೋಟಿಯನ್ನು ಕೃಷ್ಣನು ತನ್ನ ಹೊಳೆಯುವ ಹುಬ್ಬಿನ ಕೊನೆಯ ಸಂಜ್ಞೆಯಿಂದ ನಡೆಯಲು ತಿಳಿಸಿದನು. ೭೩. ಅಸಮಾನವೂ ಉಗ್ರವೂ ಆದ ಸೈನ್ಯದ ಭಾರದಿಂದ ಭೂತಲವು ಬಳುಕುವಂತಾಯ್ತು. ಉನ್ನತವಾದ ಬಾವುಟಗಳ ಗಾಳಿಯ ಹೊಡೆತದಿಂದ ದೇವಗಂಗೆಯ ಅಲೆಗಳು ಹೆಚ್ಚಿದುವು. ವಾದ್ಯಗಳ ಅಧಿಕ ಘೋಷದಿಂದ ಎಂಟು ದಿಕ್ಕೂ ಶಬ್ದಮಯವಾಯಿತು. ರಾಜಸಮೂಹದ ಶಿರೋರತ್ನ ಕಾಂತಿಗಳಿಂದ ಬಿಸಿಲೆಲ್ಲ ಕೆಂಪಾಯಿತು. ಕೃಷ್ಣನು ಬಂದ ವಿಜಯಶಿಬಿರವನ್ನು ಹೊಕ್ಕನು. ೭೪. ಆ ದಿವಸ ಪ್ರಸ್ಥಾನ ಶಿಬಿರದಲ್ಲಿ ಬಗೆ ಬಗೆಯ ವಿನೋದದಿಂದ ಇದ್ದು, ಮರುದಿನ ಸೂರ್ಯೋದಯದಲ್ಲಿ ಪಟಹವಾದ್ಯಗಳು ಧ್ವನಿಮಾಡುತ್ತಿರುವಾಗ ವಿಜಯರಥವನ್ನು ಏರಿದನು. ೭೫. ಕೃಷ್ಣನು ಯುಧಿಷ್ಠಿರರಾಜನನ್ನು ನೋಡುವ ಕುತೂಹಲದಿಂದ ಸೇನೆಯೊಡನೆ ಮುಂದೆ ನಡೆದನು. ಆಗ ಸಮುದ್ರಕಲಕಲವು

---

೧. ರತ್ನರಾಗಂಗಳಿಂದಂ (ಖ)

ಇದು ಚಿತ್ರಂ ಸಲೆ ಸತ್ವಮೂರ್ತಿಯೆನಿಸಿರ್ದಾ ವಿಷ್ಣು ತಾನೆಂತು ಮಾ
ಡಿದನಿಂದೀ ಜಗಮಂ ರಜೋಮಯನೆಂದೆತ್ತಂ ರಜೋಜಾಳಪೂ
ರ್ಣದೊಳಾಕಾಶದೊಳಾತ್ಮಪಾಣಿಪಿಹಿತಾಸ್ಯರ್ ಖೇಚರರ್ ಮುಂದುಗಾ
ಣದೆ ನಿಲ್ವನ್ನೆಗಮಾದುದೇಂ ಪಿರಿದೊ ತತ್ಸೇನಾರಜೋಮಂಡಲಂ ೭೬

ಪದಘಾತೋದ್ಧೂತಧೂಳೀಪಟಲಮಹಿಮರುಗ್ಬಿಂಬಮಂ ನುಂಗಿ ರೋದೋಂ
ತದೊಳಾದಂ ಧ್ವಾಂತಸಂತಾನಮನೊದವಿಸೆ ನಾನಾನಿಶಾತಾಯುಧವ್ರಾ
ತದ ಭಾಸ್ವದ್ವಜ್ರವರ್ಮಪ್ರಕರದ ನೃಪತಿಪ್ರೌಢಚೂಡಾಮಣಿಸ್ತೋ
ಮದ ಸಾಂದ್ರಜ್ಯೋತಿಗಳ್ ಕಣ್ಬೆಳಗೆನೆ ನಡೆದತ್ತಾ ಜಗನ್ನಾಥಸೈನ್ಯಂ ೭೭

ದರಹಾಸಶ್ರೀನಟೀನೂಪುರದುಲಿಯೆನೆ ಮಾತಾಡುತುಂ ತಮ್ಮೊಳತ್ಯಾ
ದರದಿಂದೀವಲ್ಲಿ ಕೈಮಿಕ್ಕುದಿರ್ದ ಘುಸೃಣಕರ್ಪೂರಕಸ್ತೂರಿಕಾಸಾ
ರರಜಂ ತಳ್ಪೊಯ್ದು ನೀವೀಲತೆಗೆ ತಳಿರಲರ್ತುಂಬಿವಿಂಡೆಂಬಿವಂ[1] ಬಿ
ತ್ತರಿಸಲ್ ಬಂದತ್ತು ಪೊಂಬಣ್ಣಿಗೆಯ ಪಿಡಿಗಳೊಳ್ ತಂಡದಿಂ ಪೆಂಡವಾಸಂ ೭೮

ಈ ಕಲ ಕಲದ ಸ್ವಲ್ಪ ಭಾಗಕ್ಕೆ ಮಾತ್ರ ಸಮವಾಗುವುದು ಎನ್ನುವಂತೆ ಕೃಷ್ಣನ ಸೈನ್ಯದ ಕೋಲಾಹಲವು ದಿಕ್ಕುಗಳ ಕಡೆಯವರೆಗೂ, ಆಕಾಶದವರೆಗೂ ಬ್ರಹ್ಮಲೋಕದವರೆಗೂ ಹಬ್ಬಿತು. ೭೬. ಇದು ವಿಚಿತ್ರವಾಗಿದೆ! ಸತ್ತ್ವಮೂರ್ತಿಯೆನಿಸಿಕೊಂಡ ಆ ವಿಷ್ಣು ತಾನೇ ಹೇಗೆ ಈ ಲೋಕವನ್ನು ರಜೋಮಯ (೧ ಧೂಳೀಮಯ, ೨ ರಜೋಗುಣಮಯ)ವಾಗಿ ಮಾಡಿದನೆಂದು, ರಜಸ್ಸಮೂಹದಿಂದ ಪೂರ್ಣವಾದ ಆಕಾಶದಲ್ಲಿ ತಮ್ಮ ಕಯ್ಯಿಂದಲೇ ಮುಖವನ್ನು ಮುಚ್ಚಿಕೊಂಡು ಖೇಚರರು ಮುಂದುಗಾಣದೆ ನಿಲ್ಲುವಂತೆ ಮಾಡಿದ ಆ ಸೇನೆಯ ರಜೋಮಂಡಲವು ಅದೆಷ್ಟು ದೊಡ್ಡದೋ? ಕಾಲಿನ ಹೊಡೆತದಿಂದ ಎದ್ದ ಧೂಳಿನ ಸಮೂಹವು ಸೂರ್ಯಬಿಂಬವನ್ನು ನುಂಗಿ ಭೂಮ್ಯಾಕಾಶಗಳನ್ನು ಕತ್ತಲೆಯ ರಾಶಿಯಿಂದ ತುಂಬಿತು. ಆಗ ಮಸೆದು ಹರಿತವಾದ ನಾನಾ ಆಯುಧಗಳ, ಹೊಳೆಯುವ ವಜ್ರಕವಚಗಳ, ರಾಜ ಪ್ರೌಢರ ಕಿರೀಟರತ್ನ ಸಮೂಹದ ಒತ್ತಾದ ಕಾಂತಿಯೇ ಕಣ್ಣಿಗೆ ಬೆಳಕಾಗಿರಲು ಆ ಜಗನ್ನಾಥ ಸೈನ್ಯವು ನಡೆಯಿತು. ೭೮. ಮುಗುಳುನಗೆಯ ಶಬ್ದವೇ ನಟಿಯ ಕಾಲುಬಳೆಯ ಶಬ್ದವೆನ್ನುವಂತೆ ತಮ್ಮ ತಮ್ಮಲ್ಲೇ ಮಾತನಾಡುತ್ತ ಅತ್ಯಾದರದಿಂದ ಕೊಡುವಾಗ ಕೈಮೀರಿ ಉದುರಿದ ಕುಂಕುಮಕೇಸರಿ ಪಚ್ಚಕರ್ಪೂರ ಕಸ್ತೂರಿಗಳ ಸಾರವತ್ತಾದ ಧೂಳು ಹಾರಿ ಸೇರಿ ನೆರಿಗಂಟಿನ ಬಳ್ಳಿಗೆ ಚಿಗುರು ಹೂ, ತುಂಬಿಗಳ ಗುಂಪೆನ್ನುವಂತೆ ಮಾಡುತ್ತಿರಲು, ರಾಣಿವಾಸವು ತಂಡ ತಂಡವಾಗಿ ಹೆಣ್ಣಾನೆಗಳ ಚಿನ್ನದ ಅಂಬಾರಿಯಲ್ಲಿ

೧. ತುಂಬಿವಿಂಡೆಂಬಿನಂ (ಕಗ)

[1]ನಡೆದೆಳ್ತಂದತ್ತು ಕಣ್ಗೆಂಪುಱಿ ಮೊಗವಡದಾಟೋಪಮಂ ಬೀಱಿ [2]ಪಕ್ಕಂ
ಬಿಡಿದಳ್ಕುತ್ತಾರೆಕಾಱಿರ್ ಬರೆ ಬ್ಭರವಸದಿಂ ಮೇಗಣಾರೋಹಕರ್ ಬಾ
ಯ್ವಿಡೆ ಪೋಪೋಗೆಂದು ದೂರಾಂತರದೊಳೊದಱೆ ಕಾಲ್ಗಾಪಿನಾಳ್ ನಿಂದು ನಿಂದೋ
ರಡಿಗೋರೊರ್ಮಾಲಿಸುತ್ತುಂ ನೆರವಿಯುಲಿಪುಮಂ ವ್ಯಾಳಗಂಧೇಭಚಕ್ರಂ ೭೯

ದಿಗಧೀಶರ್ [3]ಜಗದೀಶರೊಳ್ ಪೊಲಗಿಡಲ್ ದಿಗ್ದಂತಿಗಳ್ ಸೈನ್ಯದಂ
ತಿಗಳೊಳ್ ಪಲ್ಲಟವಾಗಲಬ್ಧಿಗಳನೇಕಾಶ್ವೇಭಲಾಲಾಮದಾ
ಬ್ಧಿಗಳೊಳ್ ತಳ್ತಿರಲರ್ಕಕೇತು ರಥಕೇತುವ್ರಾತದೊಳ್ ಕೂಡಲಿಂ
ತಗಲಂಬೆತ್ತು ಮಹತ್ವಮಂ ತಳೆದು [4]ನೀಟಿದ್ದಿಟ್ಟಿಂದನಬ್ಜೇಕ್ಷಣಂ ೮೦

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥವಿಜಯಮಹಾಪ್ರಬಂಧದೊಳ್ ಷಟ್ಪುರೇಶ್ವರಮಥನ
ಶಿಶುಪಾಲಾಡಂಬರ ಮಂತ್ರಾಲೋಚನ ಯುಧಿಷ್ಠಿರ
ರಾಜಸೂಯ ನಿರೀಕ್ಷಣಾರ್ಥೇಂದ್ರ
ಪ್ರಸ್ಥಪ್ರಯಾಣವರ್ಣನಂ
ಪಂಚದಶಾಶ್ವಾಸಂ

ಬಂದಿತು. ೭೯. ಕ್ರೂರವಾದ ಮದ್ದಾನೆಗಳ ಗುಂಪು, ಅದರ ಕಣ್ಣಿನ ಕೆಂಪು ಮುಖವಾಡದ ಆಟೋಪವನ್ನು ಬೀರುತ್ತಲೂ, ಸಾಕಿದವರು ಪಕ್ಕದಲ್ಲೇ ಹೆದರುತ್ತ ಬರುತ್ತಿರಲು, ಮೇಲೇರಿದ್ದವರು, ವೇಗದಿಂದ ಆನೆಗಳು ನಡೆಯುತ್ತಿದ್ದುದರಿಂದ ಹೋಗು ಹೋಗು ಎಂದು ಕೂಗುತ್ತಲೂ ಕಾಲಾಳಿನ ಗುಂಪಿನವರು ದೂರದಲ್ಲೇ ಕೂಗುತ್ತಲೂ ಇರಲು ಒಂದೊಂದು ಹೆಜ್ಜೆಗೂ ಒಂದೊಂದು ಸಾರಿ ಜನರ ಕೂಗನ್ನು ಕೇಳುತ್ತ ನಡೆಯುತ್ತಿದ್ದಿತು. ೮೦. ವಿಸ್ತಾರವಾದ ಸೈನ್ಯದೊಡನೆ, ಮಹಾಮಹಿಮನೂ ಉನ್ನತನೂ ಕಮಲನೇತ್ರನೂ ಆದ ಕೃಷ್ಣನು ಬಂದನು. ಬರುತ್ತಿರುವಾಗ ಕೃಷ್ಣನ ಅನುಯಾಯಿಗಳಾಗಿ ಬರುತ್ತಿದ್ದ ರಾಜರೊಡನೆ ದಿಕ್ಪಾಲಕರೂ ಬೆರೆತುಹೋಗುವಂತಾಯಿತು. ಸೇನೆಯ ಆನೆಗಳೂ ದಿಗ್ಗಜಗಳೂ ಬೆರೆತು ಪಲ್ಲಟಿಸುವಂತಾಯಿತು. ಸಮುದ್ರಗಳು ಸೇನೆಯ ಆನೆ ಕುದುರೆಗಳ ಮದೋದಕ ಲಾಲಾಜಲಗಳೊಡನೆ ಸೇರಿದವು. ಸೂರ್ಯಧ್ವಜವು ರಥಗಳ ಧ್ವಜಗಳೊಡನೆ ಕೂಡಿತು. ಇದು ಸಮಸ್ತ ಕಮಲಭವಾಂಡ ಮಾಲಾ.... ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರ, ರುದ್ರಪ್ರಣೀತವಾದ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಷಟ್ಪುರೇಶ್ವರಮಥನ, ಶಿಶುಪಾಲಾಡಂಬರ, ಮಂತ್ರಾಲೋಚನ ಯುಧಿಷ್ಠಿರ ರಾಜಸೂಯ ನಿರೀಕ್ಷಣಾರ್ಥೇಂದ್ರ ಪ್ರಸ್ಥಪ್ರಯಾಣ ವರ್ಣನಂ ಪಂಚದಶಾಶ್ವಾಸಂ.

---

೧. ನಡೆತಂದತ್ತಂದು ಕಣ್ಬೆಳ್ಪರೆ (ಖ) ೨. ಪಂಕಂಬಿಡಿದಾರುತ್ತಾರೆಕಾಱಿರ್ ಬರೆ ಭಯವಶದಿಂ (ಖ) ೩. ಧರಣೀಶರೊಳ್ (ಖ) ೪. ಬಂದೆಟ್ಟಿಂದನಬ್ಜೇಕ್ಷಣಂ (ಕಗ)

# ಷೋಡಶಾಶ್ವಾಸಂ

ಶ್ರೀವೃಕ್ಷಪನಸನಿವಹಮು
ಮಾವಿಷ್ಕೃತ [೧]ಕುಸುಮವಿಸರಮೆನೆ ಶಿಖರಿವನಂ
ತೀವಿರೆ ಶಿಖಂಡಮಣಿಕಿರ
ಣಾವಳಿಯಿಂ ಕಾಣಲಾಯ್ತು ರೈವತಶೈಲಂ ೧

ಇರೆ ಶಬರಾಧಿರಾಜಕಟಕಂ ಕಟಕಂ ಕಟಕಂ ಭರೋಗ್ರಸಿಂ
ಧುರಮೆನೆ ನಿರ್ಜರೋಲ್ಲಹರಿಯುಂ ಹರಿಯುಂ ಹರಿಯುಂ ವಿಜೃಂಭಿಪಾ
ಗಿರಿತಟದಲ್ಲಿ ದಾವಶಿಖಿಯುಂ ಶಿಖಿಯುಂ ಶಿಖಿಯುಂ ಪ್ರಭೂತಮಾ
ಗಿರೆ ಬೆಳಗಂ ತಮಂ ತವಿಪಿನಂ ವಿಪಿನಂ ವಿಪಿನದ್ಧಮೊಪ್ಪುಗುಂ ೨

ಕರಿದಾನದ್ರವಗಂಧಚಿತ್ರವಿಹಗಸ್ತೋಮಾರುತಂ ಮಾರುತಂ
ಬರೆ ಕೃಷ್ಣಂಗಿದಿರಂ ಪಳಂಚಲೆದು ಮೇಘಧ್ವಾಂತಮಂ ಧ್ವಾಂತಮಂ
ಪರೆಪುತ್ತಿರ್ದುದು ತನ್ನೊಳೊಂದಿ ನಿಲೆ ತೇಜೋಮೈಹಿರಂ ಮೈಹಿರಂ
ತರುಶಾಖಾನಿಕುರುಂಬಚುಂಬಿತದಿಶಾನೀಕಾನನಂ ಕಾನನಂ ೩

ಜರದಹಿಪೂತ್ಕೃತಂ ವಿಹಗಚೀತ್ಕೃತಮುದ್ಧತಘೂಕಹುಂಕೃತಂ
ಕರಿಕರಸೂತ್ಕೃತಂ [೨]ಪವನಪೀತ್ಕೃತಮುದ್ಧತವೇಣುಝುಂಕೃತಂ
ಗಿರಿಜನದೀಜಳತ್ಕೃತಮಿಭಾರಿಘುಳುತ್ಕೃತಮುಗ್ರ[೩]ದಾವಸಂ
ಚರಣಧಗತ್ಕೃತಂ ಮಹಿಷಶೃಂಗಟಣತ್ಕೃತಮಾ ವನಾಂತರಂ ೪

೧. ಬಿಲ್ವಪತ್ರೆಮರ, ಹಲಸಿನ ಮರಗಳ ಗುಂಪು, ಹೂಗಳಿಂದ ತುಂಬಿದವುಗಳಾಗಿದ್ದು ಅವುಗಳಿಂದ ಆ ಪರ್ವತದ ವನವು ತುಂಬಿರಲು ಶಿಖರದ ರತ್ನಕಿರಣಗಳಿಂದ ರೈವತಶೈಲವು ಚೆನ್ನಾಗಿ ಕಾಣಿಸಿತು. ೨. ಆ ಶೈಲದ ತಪ್ಪಲು ಅಲ್ಲಿರುವ ಬೇಡರೊಡೆಯನ ಪಡೆಯೂ ದಪ್ಪವಾದ ಕೆನ್ನೆ ಕತ್ತುಗಳಿರುವ ಆನೆಯೆನ್ನುವಂತೆ ರೈವತಕಗಿರಿಯು ಒಪ್ಪುತ್ತಿತ್ತು. ಅಲ್ಲದೆ ಝರಿಯ ಪ್ರವಾಹವೂ, ಸಿಂಹವೂ, ಕೋತಿಯೂ, ಕಾಡುಕುದುರೆ, ಕಪ್ಪೆ ಮೊದಲಾದವೂ ಆಡಂಬರ ಮಾಡುತ್ತ ಇದ್ದವು, ಕಾಡುಕಿಚ್ಚೂ ನವಿಲೂ ಮರವೂ ಕೃಷ್ಣಸರ್ಪವೂ ಹೆಚ್ಚಾಗಿದ್ದುವು. ಬೆಳಕನ್ನು ನಾಶಗೊಳಿಸುವಂತೆ ಕತ್ತಲೆಯು ಹರಡಿ ಮುಚ್ಚಿರುವ ವಿಸ್ತಾರವಾದ ಕಾಡೂ ಚೆನ್ನಾಗಿದ್ದಿತು. ೩. ಆ ಕಾಡು ತನ್ನ ಮರದ ಕೊಂಬೆಗಳ ಅಗ್ರಭಾಗದಿಂದ ದಿಕ್ಕುಗಳ ಮುಖವನ್ನು ಚುಂಬಿಸುತ್ತಿದ್ದಿತು. ಸೂರ್ಯಚಂದ್ರರ ತೇಜಸ್ಸೂ ತನ್ನಲ್ಲೇ ಅಡಗುವಂತೆ ಮೇಘಮಾರ್ಗವನ್ನು ಸಂಘಟಿಸಿ ಪೀಡಿಸುತ್ತ ಕತ್ತಲೆಯನ್ನು ಹರಡುತ್ತಿದ್ದಿತು. ಆನೆಗಳ ಮದೋದಕಗಂಧವನ್ನೂ ವಿಚಿತ್ರವಾದ ಪಕ್ಷಿಗಳ ಗುಂಪಿನ ಇಂಪಾದ ಧ್ವನಿಯನ್ನೂ ವಹಿಸಿದ ಆ ವನದ ಮಂದಮಾರುತವು ಕೃಷ್ಣನನ್ನು (ಎದುರುಗೊಂಡಿತು.) ಸ್ವಾಗತಿಸಿತು. ೪. ಆ ವನದ ನಡುವೆ, ಮುದಿಹಾವುಗಳು ಪೂತ್ಕರಿಸುತ್ತಿದ್ದವು. ಹಕ್ಕಿಗಳು ಚೀತ್ಕರಿಸುತ್ತಿದ್ದವು.

---

೧. ಕುಸುಮಮಾದುದೆನೆ (ಖ) ೨. ಪ್ಲವಗಕೀತ್ಕೃತ (ಖ) ೩. ದಾವಸಂಹಚರಣಧಗತ್ಕೃತಂ (ಕಗ)

ನಡುವಿರ್ದಟ್ಟಿರೆ [1]ಪೋತ ವಿಕ್ಕ ಕಳಭಂಗಳ್ ಕೂಡೆ ಸಾರ್ದಿರ್ಕೆಲಂ
[2]ಬಿಡಿದಿಂಬಿಂದೆಳೆಯಾನೆಗಳ್ ಬರೆ ಮರಂಗೊಂಡೊಂದು [3]ಯೂಥಾಧಿಪಂ
ಪೊಡೆಯುತ್ತುಂ ಬರೆ ಮುಂದೆ ಪಿಂದೆ ಪೆಱಗಿಂ ಬಂದೊಂದಿಭಂ ಪಜ್ಜೆಯಂ
ತೊಡೆಯುತ್ತುಂ ಬರೆ ಬರ್ಪ ಯೂಥತತಿಯಿಂ ಚೆಲ್ವಾದುದಾ ಕಾನನಂ ೫

ಸೈರಿಸಲಾರದುರ್ವರೆಯ ಭಾರಮನಲ್ಪಬಲಂಗಳಾ ದಿಶಾ
ವಾರಣರಾಜಿಗಳ್ ತಳೆವುವೀ ಮದವಾರಣವೃಂದದಿಂ ಮಹೀ
ಭಾರಮನೆಂದು ಧಾತ್ರ ಸಮಕಟ್ಟಿದ ವಾರಣಯೂಥಮೆಂಬಿನಂ
ವಾರಣಸಂಕುಲಂ ಬಗೆಗಗುರ್ವಿಸುತಿರ್ದುದದೊಂದುತಾಣದೊಳ್ ೬

ಅತಿಶಯಭದ್ರಮೂರ್ತಿಗೆ ಜಗಕ್ಕಿದು ಮಂಗಳಮೆಂದು ರೌದ್ರದೇ
ವತೆ [4]ಪಿಡಿದಿಕ್ಕುವಾಮಿಷದ ಮುಟ್ಟಗೆಯೆಂಬಿನೆಗಂ ಸಿಡಿಲ್ದು ದಿ
ಗ್ವಿತತಿಗೆ ಸೂಸೆ ಮುನ್ನಮೆರೆಯಾದ[5]ರುರುವ್ರಜವಾಗಳಾಸ್ಯದಿಂ
[6]ಪ್ರತಿಘದೊಳೆತ್ತಿ ಬೀಸಿದುದದೊಂದು ಮದದ್ವಿರದಂ ಮಹಾಹಿಯಂ ೭

ಕೊಬ್ಬಿದ ಗೂಬೆಗಳು ಘೂಂಕರಿಸುತ್ತಿದ್ದವು. ಆನೆಗಳು ಸೊಂಡಿಲಿನಿಂದ ಸೂತ್ಕರಿಸುತ್ತಿದ್ದವು. ಗಾಳಿಯು ಛೀತ್ಕರಿಸುತ್ತಿದ್ದಿತು. ಉನ್ನತವಾದ ಬಿದಿರುಗಳು ಒಂದಕ್ಕೊಂದು ಮಸೆದು ಬಗೆಬಗೆಯ ಶಬ್ದಗಳನ್ನು ಮಾಡುತ್ತಿದ್ದವು. ಗಿರಿಝರಿಗಳು ಝುಳಝುಳ ಶಬ್ದಮಾಡುತ್ತಿದ್ದವು. ಸಿಂಹಗಳು ಗರ್ಜಿಸುತ್ತಿದ್ದವು. ಉಗ್ರವಾದ ಕಾಡುಕಿಚ್ಚು ಧಗಧಗಿಸುತ್ತ ಹರಡುತ್ತಿದ್ದಿತು. ಕಾಡೆಮ್ಮೆಕೋಣಗಳು ತಿವಿಯುವುದರಿಂದ ಕೊಂಬಿನಿಂದ ಟಣಟಣಶಬ್ದವನ್ನು ಮಾಡುತ್ತಿದ್ದವು. ೫. ಆನೆಗಳ ಗುಂಪುಗಳು ಸಂಚರಿಸುತ್ತಿದ್ದವು. ಬಹಳ ಚಿಕ್ಕಮರಿಗಳನ್ನು ನಡುವೆಯೂ ಅಕ್ಕಪಕ್ಕಗಳಲ್ಲಿ ದೊಡ್ಡಮರಿಗಳನ್ನೂ ಹೆಣ್ಣಾನೆಗಳನ್ನೂ ಬಿಟ್ಟುಕೊಂಡು, ಸಲಗವು ಮರವೊಂದನ್ನು ಹಿಡಿದು (ಎಡಬಲವನ್ನು) ಅಪ್ಪಳಿಸುತ್ತ ನಡೆಯುತ್ತಿದ್ದಿತು. ಅದರ ಹಿಂದೆ ಬರುವ ಮತ್ತೊಂದು ಗುಂಪಿನ ಸಲಗವು, ಮುಂದಿನ ಸಲಗನ ಹೆಜ್ಜೆಯ ಗುರುತುಗಳನ್ನು ಅಳಿಸುತ್ತ ಮುಂದುವರಿಯುತ್ತಿದ್ದಿತು. ಅವುಗಳಿಂದ ವನವೇ ಚೆನ್ನಾಗಿದ್ದಿತು. ೬. ಕಾಡಿನ ಒಂದೆಡೆಯಲ್ಲಿದ್ದು ಆನೆಗಳ ಹಿಂಡನ್ನು ನೋಡಿದರೆ, ಬ್ರಹ್ಮನು ಅಲ್ಪಬಲದ ದಿಗ್ಗಜಗಳು ಭೂಮಿಯ ಭಾರವನ್ನು ಪೂರ್ಣವಾಗಿ ತಾವೇ ವಹಿಸಲಾರವು, ಈ ಆನೆಗಳ ಸಹಾಯದಿಂದ ವಹಿಸಬಹುದು ಎಂದು ಇವುಗಳನ್ನು ಸೃಷ್ಟಿಸಿರಬೇಕು ಎನ್ನಿಸುತ್ತಿದ್ದಿತು. ೭. ಅದೊಂದು ದೊಡ್ಡ ಆನೆಯು ಕ್ರೋಧದಿಂದ ಬಹಳ ದೊಡ್ಡದೊಂದು ಹೆಬ್ಬಾವನ್ನು ಹಿಡಿದು ಎಲ್ಲಕಡೆಗೂ ಬೀಸಲಾರಂಭಿಸಿತು. ಆಗ ಆ ಹಾವು ನುಂಗಿದ ಜಿಂಕೆಗಳ ಶರೀರಗಳು ಬಾಯಿಂದ ಸಿಡಿದು, ದಿಕ್ಕುದಿಕ್ಕಿಗೆ ಹಾರಿದವು. ಅದನ್ನು ನೋಡಿದರೆ-ಅತಿಶಯ ಮಂಗಳಮೂರ್ತಿಯಾದ ಭೂಮಿಗೆ ಇದು ಮಂಗಳಕರವಾದುದೆಂದು, ರೌದ್ರ

---

೧. ಚಿಕ್ಕಪೋತ ಕಲಭಂಗಳ್ (ಕಖಗಮೊಅ) ೨. ಬಿಡಿದಣ್ಮಿಂ ಸೆಳೆಯಾನೆಗಳ್ (ಕಗ) ೩. ಯೂಥಪತಿಯಿಂ (ಖಗ) ೪. ಬಟಿದಿಕ್ಕುವಾಮಿಷದ (ಕಗ) ೫. ತರುವ್ರಜವಾಗಳಾಸ್ಯದಿಂ (ಕ) ತುರುವ್ರಜವಾಗಳಾಸ್ಯದಿಂ (ಮೊಅ) ೬. ಪ್ರತಿಘದೊಳೊತ್ತಿ (ಕಗ)

ಬಿದುವೋ ಕೂಟಮೋ ಕರ್ಣತಾಳಮೊ ಪತತ್ರಕ್ಷೇಪಮೋ ನಿರ್ಗಲ
ನ್ಮದಮೋ ನಿರ್ಝರಮೋ ಲಲಾಟಮೊ ಶಿಲಾವಿಸ್ತಾರಮೋ ಕಣ್ಣಕೆಂ
ಪೊ ದವಜ್ವಾಲೆಯೊ ಮೆಯ್ಯ ಕರ್ಪೊ ಕರಿಕೋ ಪೇರಾನೆಯೋ ವಜ್ರಿಗೊ
ಡ್ಡಿದ ನೀಲಾದ್ರಿಯೊ ಪೇಟಿದೆಂಬಿನಮಗುರ್ವಾದತ್ತು ಮತ್ತೊಂದಿಭಂ ೮

ವ|| [1]ಅದಲ್ಲದೆಯಲ್ಲಿಂ ಬೇಱೊಂದು ನೀರ್ಸರೆಗೆಯ್ದಿರ್ದ ಬಟಿಯಂ

ಸರಿಯೆ ಝಷಾಳಿ ಸಂಭ್ರಮಕರಂ ಮಕರಂ ಮಕರಂದರೇಣುಗಳ್
ಪರೆಯೆ ಕಲಂಕೆ ಕೂಡೆ ಕಮಲಂ ಕಮಲಂ ಕಮಲಂ ಮಹೋರ್ಮಿ ಪೊ
ಣ್ಮಿರೆ ಪೊಱಮಟ್ಟಿಭಂ ಬಿನದದಿಂ ನದದಿಂ ನದದಿಂದ್ರವಜ್ರನಿ
ಷ್ಠುರವೆಱಗಿತ್ತಿಭಾಪಘನವಂ ಘನವಂ ಘನವಂಶಜಾಲವಂ ೯

ಒಡಗೊಂಡುಯ್ದೊಂದು ಪದ್ಮಾಕರಹಿಮಜಲಮಂ ಕೊಂಡು ಪೇಲೊಟ್ಟಿ ತಣ್ಪಂ
ಪಡೆದಂಭೋಜಾತಪತ್ರಂಗಳ ಕೊಡೆವಿಡಿದಲ್ಲಿಂ ನಿಕುಂಜ[2]ಸ್ಥಳಕ್ಕು
ಯ್ದುಡಿದತ್ತುತ್ಫುಲ್ಲಮಂ ಸಲ್ಲಕಿಯೆಳೆದಳಿರಂ ಪೇಚಕಸ್ಥಾನಮಂ ಕೈ
ದುಡುಕುತ್ತಾಘ್ರಾಣಿಸುತ್ತುಂ ನಸೆಗನುವಶಮಾಗಿರ್ದುದಂದೊಂದಿಭೇಂದ್ರಂ ೧೦

ದೇವತೆಯು ತನ್ನ ಕಯ್ಯಿಂದ ಹಾಕುವ ಮಾಂಸಬಲಿ, ಹೋಮದ್ರವ್ಯ ಎನ್ನಿಸುತ್ತಿದ್ದಿತು. ೮. ಮತ್ತೊಂದು ದೊಡ್ಡ ಆನೆಯು ಇಂದ್ರನನ್ನು ಎದುರಿಸಲು ನೀಲಪರ್ವತದಂತೆ ಕಾಣಿಸುತ್ತಿದ್ದಿತು. ಆನೆಯ ಕುಂಭವು ಗಿರಿಶಿಖರದಂತೆಯೂ, ಕಿವಿಗಳು ಪರ್ವತದ ರೆಕ್ಕೆಗಳಂತೆಯೂ, ಸುರಿಯುವ ಮದಧಾರೆಯು ಗಿರಿಯ ಝರಿಯಂತೆಯೂ, ಹಣೆಯು ವಿಸ್ತಾರವಾದ ಬಂಡೆಯಂತೆಯೂ, ಕೆಂಪಾದ ಕಣ್ಣು ಬೆಟ್ಟದ ಬೆಂಕಿಯಂತೆಯೂ ಮೈಯ್ಯ ಕಪ್ಪು ಸುಟ್ಟ ಕರಿಕಿನಂತೆಯೂ ಇದ್ದಿತು. (ಆದ್ದರಿಂದ ಆನೆ ಪರ್ವತದಂತೆ ಕಾಣಿಸಿತು.) ವ|| ಅದಲ್ಲದೆ ಇನ್ನೊಂದೆಡೆ ಆನೆಯೊಂದು ಕೊಳಕ್ಕೆ ಹೋಗಿರಲು, ೯. ಮೀನುಗಳ ಗುಂಪೂ ಮೊಸಳೆಯೂ ತ್ವರೆಯಿಂದ ಓಡಿದುವು. ಮಕರಂದರೇಣುಗಳೂ ನೀರಿನ ಮೇಲಿನ ಕೊಳೆಯೂ ಹರಡುವಂತೆಯೂ ನೀರೂ ಕಮಲಗಳೂ ಕಲಕುವಂತೆಯೂ ಆಗಿ, ದೊಡ್ಡದೊಡ್ಡ ಅಲೆಗಳು ಏಳುತ್ತಿರುವಲ್ಲಿ ಬಂದು ವಿನೋದದಿಂದ ವಜ್ರಾಯುಧದ ಧ್ವನಿಯಂತೆ ಘೀಂಕರಿಸುತ್ತ ಘನವಾದ ಬೆನ್ನೆಲುಬುಗಳುಳ್ಳದೂ ದೊಡ್ಡದೂ ದೃಢವಾದುದೂ ಆದ ಮತ್ತೊಂದು ಆನೆಯ ಮೈಮೇಲೆ ಎರಗಿತು. ೧೦. ಒಂದು ಸಲಗವು ಹೆಣ್ಣಾನೆಯನ್ನು ಸಂಗಡ ಒಂದು ತಾವರೆಯ ಸರೋವರಕ್ಕೆ ಕರೆದುಕೊಂಡು ಹೋಗಿ, ತಣ್ಣಗಿರುವ ನೀರನ್ನು ಅದರ ಮೈಮೇಲೆ ಸುರಿದು ಕೆಂಪುಮಾಡಿ, ತಾವರೆಯೆಲೆಗಳ ಕೊಡೆಯನ್ನು ಹಿಡಿದು, ಅಲ್ಲಿಂದ ಬಳ್ಳಿಯ ಮಂಟಪಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಆನೆಬೇಲದ ಎಳೆಚಿಗುರನ್ನು

೧. ಅದಲ್ಲದೆಯುಮೊಂದೆಡೆಯೊಳ್ ಬೇಱೆ ನೀರ್ಸೆಱೆಗೆಯ್ದಿರ್ದ ತಾಣದೊಳ್ (ಖ)
೨. ಸ್ಥಳಕ್ಕುಯ್ದುಡಿದುತ್ಫುಲ್ಲೌಘಮಂ (ಕಗ)

ಒರ್ಮೆ ವನಸ್ಥಳೀಕಮಲಪಾಂಸುವನಿಂಬೆನೆ [1]ಮೆಯ್ಯೊಳೊಟ್ಟಿಕೊ
ಳ್ವೊರ್ಮೆ ಕರಾಗ್ರಮಂ ನೆಗಪಿ ಸಂಭ್ರಮದಿಂ [2]ಪರಿವೊರ್ಮೆ ಶೈಲಸಿಂ
ಧೂರ್ಮಿಗೆ ಬೆರ್ಚಿ ತಾಯ್ವಿಡಿಯ ಸೋಂಕಿನೊಳೊಯ್ಯನೆ ಸೋಂಕಿ [3]ನಿಲ್ವಮು
ದ್ದೊರ್ಮೆಯುಮೊಪ್ಪಿ ತೋಱಿ ಕಲಭವ್ರಜಮಿರ್ದುದದೊಂದು ತಾಣದೊಳ್ ೧೧

ವ|| ಮತ್ತಮೊಂದವಿರಳಮಾದ ಸರಳವನದೊಳ್

ಉಗುವೆಂಟುಂ ಮದವೆತ್ತಿ ಕಟ್ಟೆ [4]ವಿಸರಚ್ಚೀತ್ಕಾರ ಭೀರುಸ್ವರಂ
ಮಿಗೆ ಬಾಯಂ ಬಿಡೆ ಕೆಯ್ಯನಿಟ್ಟು ಸುಗಿವನ್ನಂ ಗರ್ಜಿಸುತ್ತೆಯ್ದಿ ಮು
ತ್ತುಗಳೆತ್ತಂ ಬಿದುವಿಂ ಸ್ವರೌದ್ರರಸಬಿಂದುಶ್ರೇಣಿವೊಲ್ ಸೂಸೆ ದಂ
ತಿಗಳಂ ಸೀಳ್ದು ಪಿಱುಂಬುಳಾಡಿದುದದೊಂದುತ್ಕಂಠಕಂಠೀರವಂ ೧೨

ವ|| ಮತ್ತಮೊಂದು ಗಿರಿದರೀದೇಶದೊಳ್

ಗಱಿವೊಯ್ಯದೆ ಕಣ್ದೆಱೆಯದೆ
[5]ತಿಱುಳಿಂ ತನ್ನೊಡೆದ ತತ್ತಿಯೊಳ್ ಭೇರುಂಡಂ
ಪೊಱಮಡಲದೊಂದು ಶರಭಂ
ಬಿಱಿತೋಡಿತು ಸತ್ವನಿಧಿಯ ಶೈಶವಮಿಳಿದೇ ೧೩

ವ|| ಆ ಮಹಾಗಹನಮಧ್ಯದೊಳ್

ಕಿತ್ತುಕೊಟ್ಟು, ಅದರ ಯೋನಿಪ್ರದೇಶವನ್ನು ಸೊಂಡಿಲಿಂದ ಮುಟ್ಟುತ್ತ, ಮೂಸಿನೋಡುತ್ತ ಕಾಮಪೀಡಿತವಾಗಿದ್ದಿತು. ೧೧. ಅದೊಂದು ಪ್ರದೇಶದಲ್ಲಿ ಆನೆಯ ಮರಿಗಳು ನೆಲದಾವರೆಯ ಹೂವಿನ ಧೂಳನ್ನು ಮೈಮೇಲೆ ಎರಚಿಕೊಳ್ಳುತ್ತ ಸೊಂಡಿಲನ್ನೆತ್ತಿಕೊಂಡು ಓಡುತ್ತಾ ಗಿರಿನದಿಗಳ ಅಲೆಗಳಿಗೆ ಹೆದರಿ, ತಾಯಿಆನೆಯ ಮೈಸೋಕಿ ನಿಲ್ಲುತ್ತ ಮುದ್ದುಬೀರುತ್ತಿದ್ದವು. ವ|| ಮತ್ತೊಂದು ಒತ್ತಾದ ಸರಳವೃಕ್ಷದ ಪ್ರದೇಶದಲ್ಲಿ, ೧೨. ಒಂದು ಅತಿಕುತೂಹಲವುಳ್ಳದೂ ಮೇಲೆತ್ತಿದ್ದ ಕತ್ತುಳ್ಳದೂ ಆದ ಸಿಂಹವು ಅದಕ್ಕೆ ಸಿಕ್ಕಿದ ಆನೆಗಳು ಹೆದರಿ, ಮದೋದಕವೆಂದು ತಟ್ಟನೆ ನಿಂದು ಬಾಯಿಬಿಟ್ಟು ಸೊಂಡಿಲನ್ನೂ ಬಾಯೊಳಗಿಟ್ಟುಕೊಳ್ಳುವಂತೆ ಮಾಡಿ ಕ್ರೂರವಾಗಿ ಗರ್ಜಿಸುತ್ತ ಬಂದಿತು. ಅದು ಮೇಲೆರಗಿ ಆನೆಗಳನ್ನು ಸೀಳಿ ತನ್ನ ರೌದ್ರರಸಬಿಂದುಗಳ ಸಮೂಹದಂತೆ ಕುಂಭದಿಂದ ರಕ್ತಮೌಕ್ತಿಕಗಳು ಎಲ್ಲಕಡೆಗೂ ಚೆಲ್ಲುವಂತೆ ಮಾಡಿ ಚೆಲ್ಲಾಟವಾಡುವಂತೆ ಕೊಂದಿತು. ವ|| ಮತ್ತೊಂದು ಗಿರಿಯ ಗುಹೆಯ ಸಮೀಪದಲ್ಲಿ ೧೩. ಗಂಡಭೇರುಂಡಪಕ್ಷಿಯ ಮೊಟ್ಟೆಯೊಂದು ಒಡೆಯಿತು. ಪಿಂಡದಿಂದ ಇನ್ನೂ ಗರಿಯೇ ಹುಟ್ಟದೆಯೂ ಕಣ್ಣನ್ನೇ ತೆರೆಯದೆಯೂ ಇರುವ ಮರಿಯು ಹೊರಬಂದಿತು. ಆ ಮರಿಯನ್ನು ನೋಡಿಯೇ ಬೆದರಿದ ಶರಭ

---

೧. ಮೆಯ್ಯೊಳೊಟ್ಟಿಕೊಂಡೊರ್ಮೆ (ಮೊಅ) ೨. ಪರಿದೊರ್ಮೆ (ಕಖಗ) ೩. ನಿಲ್ವವೊರ್ಮೆಯುಮೊಪ್ಪಿತೋಱೆ (ಕಗ) ನಿಂದುಮೊರ್ಮೆಯುಮೊಪ್ಪಿತೋಱೆ (ಮೊಅ) ೪. ವಿಸರಂ ಚೀತ್ಕಾರ ಭಿನ್ನಸ್ವರಂ ಮಿಗೆ ಬಾಯೊಳ್ (ಕಗ) ೫. ತಿರುಳಿಂದಾದೊಡೆದು (ಖ)

[1]ಮರೆದಿಂದಾ ಸರ್ಪನಂ ಹಸ್ತಿಯೆ ಪಿಡಿದುದುವಾ ಸರ್ಪನಂ ಹಸ್ತಿಯಂ ಕೇ
ಸರಿ ಕೋಪಾಟೋಪದಿಂ ಪೊಯ್ದುಗ್ಗಿಬಗಿದುದುವಾ ಸರ್ಪನಂ ಹಸ್ತಿಯಂ ಕೇ
ಸರಿಯಂ ಸಿಂಹಾರಿಯೆಂಟುಂಪದದಿನಿಱಿದುದಾ ಸರ್ಪನಂ ಹಸ್ತಿಯಂ ಕೇ
ಸರಿಯಂ ಸಿಂಹಾರಿಯಂ ತುಂಡದೊಳೆ ಪಿಡಿದು ಪಾಱಿತ್ತು ಭೇರುಂಡನಾಗಳ್ ೧೪

ಪರಿ ಬೆಂಬತ್ತೆಯ್ದು ನಾಯಂ ಬಿಡು ನಡೆಯಿಸು ದೀಪಂಗಳಂ ಪಾಸಮಂ ವಾ
ಗುರೆಯಂ ಬೀಸಾಂಕೆಗೊಳ್ಭೋರ್ದಿಸು ಪೊಣರ್ದಿಱಿ ಕೊಲ್ಲೆಂಬ ಘೋರಸ್ವನಂ ಪೊ
ಣ್ಮಿರೆ ವನ್ಯಪ್ರಾಣಿಗಳ್ಗಂತಕನ ಪಡೆಯೆ ದಾಳಿಟ್ಟವೋಲ್ ಬೇಡರಿರ್ದರ್
[2]ಪರುಷಾಕಾರರ್ ವನಾಂತಸ್ತಿಮಿರಮೆ ಶಬರವ್ರಾತಮಾಯ್ತೆಂಬಗುರ್ವಿಂ ೧೫

ಪಾಸದ ನೇಣ್ಗಳಂ ಪೊಸೆವ ಜಾಲಮನೊಪ್ಪಿರೆ ಮಾಟ್ಪ ಕಲ್ಲಿಯಂ
ಕಾಸಿನ ಕಂಬಿಯಂ ಸಮೆವ ಮಾರ್ಗಣಮಂ ಗಱಿಗಟ್ಟುತಿರ್ಪ ಬಿ
ಲ್ಲೀಸುವ ಬಾಣಮಂ ತಿರುಪಿ ತೀರ್ದುವ ಮಾರ್ತಿರುವಂ ತೊಡರ್ಚಿ ನೋ
ಟ್ಪಾ ಸಹಜಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ ೧೬

ಕಮಲಜನಿಲ್ಲಿ ಬಯ್ತನೊಲವಿಂ ಕುಮುದೇಕ್ಷಣವಜ್ರದಂತವಿ
ದ್ರುಮರದನಚ್ಛದಂಗಳನಮರ್ಚಿದ ಜಂಗಮನೀಲಪುತ್ರಿಕಾ
ಸಮಿತಿಯನೆಂಬಿನಂ ಮಿಸುಪ ಕಣ್ ಸುಲಿಪಲ್ಲರುಣಾಧರಂ ಸಕಾ
ಳಿಮತನುಲೇಖೆಯೊಪ್ಪಿರೆ ಪುಳಿಂದಿಯರಿರ್ದರದೊಂದು ತಾಣದೊಳ್ ೧೭

(ಎಂಟು ಕಾಲಿನಮೃಗ)ವೊಂದು ಓಡಿಹೋಯಿತು! ಶೌರ್ಯನಿಧಿಯ ಬಾಲ್ಯವು ಕಿರಿದಾದೀತೇ? ವ|| ಆ ದೊಡ್ಡಕಾಡಿನ ನಡುವೆ ೧೪. ಮರದ ಮೇಲಿದ್ದ ಸರ್ಪವೊಂದನ್ನು ಆನೆಯು ಹಿಡಿದುಕೊಂಡಿತು. ಸರ್ಪಸಹಿತವಾಗಿ ಆ ಆನೆಯನ್ನು ಒಂದು ಸಿಂಹವು ಕೋಪಾಡಂಬರದಿಂದ ಹೊಡೆದು ಸೀಳಿ ಭಿನ್ನಭಿನ್ನವಾಗಿ ಮಾಡಿತು. ಅವು ಮೂರನ್ನೂ ಶರಭವು ತನ್ನ ಎಂಟು ಕಾಲುಗಳಿಂದಲೂ ಇರಿಯಿತು. ಆ ಮೂರರಿಂದ ಕೂಡಿದ ಶರಭನನ್ನು ಗಂಡಭೇರುಂಡವು ಕೊಕ್ಕಿನಿಂದೆತ್ತಿಕೊಂಡು ಹಾರಿತು. ೧೫. ಕಾಡಿನೊಳಗಿನ ಕತ್ತಲೆಯೇ ಬೇಡರ ಗುಂಪಾಗಿದೆಯೆನ್ನುವಂತೆ ಕಪ್ಪಾಗಿ ಕಠಿನರಾಗಿರುವ ಬೇಡರು ವನದ ಪ್ರಾಣಿಗಳ ಮೇಲೆ ಯಮನ ಸೇನೆಯೇ ದಾಳಿಯಿಟ್ಟಂತೆ "ಓಡು, ಬೆನ್ನು ಹತ್ತು, ನಾಯನ್ನು ಬಿಡು, ದೀಹ (ಬೇಟೆಗಾಗಿ ಸಾಕಿರುವ ಕ್ರೂರಮೃಗ)ಗಳನ್ನು ನಡೆಸು, ಹಗ್ಗವನ್ನೂ ಬಲೆಯನ್ನೂ ಬೀಸು ತಡೆಹಿಡಿ, ಅಬ್ಬರಿಸಿ ಬಾಣದಿಂದ ಹೊಡಿ, ಹೋರಾಡಿ ಇರಿ" ಎಂಬುದೇ ಮೊದಲಾದ ಘೋರಧ್ವನಿಯನ್ನು ಹರಡುತ್ತ ಬೇಟೆಯಾಡುತ್ತಿದ್ದರು. ೧೬. ಹಗ್ಗದ ಹುರಿಗಳನ್ನು ಹೊಸೆಯುವ, ಬಲೆಯನ್ನು ತಮಗೆ ಒಪ್ಪುವಂತೆ ಸರಿಯಾಗಿ ಮಾಡುವ, ಒಲೆಯ ಚೀಲವನ್ನೂ ಲೋಹದ ಸರಗಳನ್ನೂ ನೆಟ್ಟಗೆ ಮಾಡುವ, ಬಾಣಕ್ಕೆ ಗರಿಗಳನ್ನು ಕಟ್ಟುವ, ಬಿಲ್ಲನ್ನು ಬಾಗಿಸುವ, ಬಾಣವನ್ನು ತಿರುಗಿಸಿ ನೆಟ್ಟಗೆ ಮಾಡುವ, ಬಿಲ್ಲಿಗೆ ಬೇರೆ ಹೆದೆಯನ್ನು ತೊಡಕಿಸಿ ನೋಡುವ, ಸಹಕರಿಸಿ ಒಂದಾಗಿ ಸಹಜವಾದ ಕೆಲಸ ಮಾಡುವ

---

೧. ಮರಧಿಂದಾ ಸರ್ಪನಂ (ಕಗ) ೨. ತರುಶಾಖಾಳೀ (ಖ)

ತೋರಬಿದಿರ್ಮುತ್ತಿನ ನವ
ಹಾರದ ಕೆಂದಳಿರ್ಗಳುಡೆಯ ವನಚರಿಯೊರ್ವಳ್
ತಾರಾವಳಿಯಿಂ ನವಸಂ
ಧ್ಯಾರಾಗದೊಳೆಸೆವ ನಿಶೆಯನನುಕರಿಸಿರ್ದಳ್ ೧೮

ಲಲಿತ[೧]ಲತಾಕಟುತರುವು
ನ್ಮಿಲನಮಿದೆಂಬಂತೆ ಶಬರದಂಪತಿಗಳ್ ಕೋ
ಮಲಿಮಕಠೋರಿಮರುರ್ವಿಗೆ
[೨]ನೆಲೆಯೆನಿಸಿದರಸದೃಶಕ್ರಿಯಾ ಪಟುಗಾತ್ರರ್ ೧೯

ಉದುರ್ವೊರ್ಯ್ಲೀತನ ಮೆಯ್ಯೊಳೀ ಪುಲಿಯ ಪೊಯ್ಲಿಂದಾದುದೆಂದೋಪವಳ್
ಬಗೆವಂತನ್ನವಧೂರತೋತ್ಸವನಖಾಂಕಾನೀಕಮುಂ ವಂಚಿಪು
ಜ್ಜುಗದಿಂದಂ ಪಿಡಿದೊಂದು ಪೆರ್ಬುಲಿಯನೊರ್ವಂ ಕಕ್ಷದಿಂಬೊತ್ತಿ ತ
ನ್ನ ಗೃಹಕ್ಕೆಟ್ಟಿರುತಿರ್ದನೊಂದೆಡೆಯೊಳುದ್ಯದ್ಧೀವರಂ ಧೀವರಂ ೨೦

ಕರಿ ಪೊಣರ್ದೆಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ[೩]ಡೋಣಿವಿ
ಟ್ಟುರದ ಪಿಸುಟ್ಟಿ ಪೆರ್ದೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾ
ಗಿರೆ ನೆಱೆ ಮೂಱು ಬೇಂಟೆಯುಮನಾಡಿ ತದಾಮಿಷಭಾರದಿಂದೆ ಜೇ
ರ್ಗರೆಯುತೆ [೪]ಮಾಂಸವಾಂತೊಲವಿನಿಂ ಬರುತಿರ್ದನದೊರ್ವ ಲುಬ್ಧಕಂ ೨೧

ಬೇಡರಿಂದ ಆ ವನವು ತುಂಬಿ ಕಾಣಿಸಿತು. ೧೭. ಆ ಕಾಡಿನ ಒಂದೆಡೆಯಲ್ಲಿ ನೈದಿಲೆಯಂತೆ ಕಣ್ಣೂ ವಜ್ರದಂತಿರುವ ಹಲ್ಲೂ, ಹವಳದಂತಿರುವ ತುಟಿಯೂ ಬಹಳ ಕಪ್ಪಾದ ದೇಹವೂ ಉಳ್ಳ ಬೇಡಿತಿಯರು, ಬ್ರಹ್ಮನು ನೈದಿಲೆಯ ಕಣ್ಣೂ ವಜ್ರದ ಹಲ್ಲೂ ಹವಳದ ತುಟಿಯೂ ಇರುವ ಹಲವು ನೀಲರತ್ನದ ಬೊಂಬೆಗಳನ್ನು ಸಂಚರಿಸುವಂತೆ ಸೃಷ್ಟಿಸಿ, ಪ್ರೀತಿಯಿಂದ ಇಲ್ಲಿ ಬಚ್ಚಿಟ್ಟಿರುವವರಂತೆ ಕಾಣಿಸುತ್ತಿದ್ದರು. ೧೮. ಬಿದಿರಿನಲ್ಲುದಿಸಿದ ದಪ್ಪಮುತ್ತುಗಳ ಹೊಸದಾದ ಹಾರವನ್ನು ತೊಟ್ಟು, ಕೆಂಪುಚಿಗುರನ್ನು ಉಟ್ಟುಕೊಂಡಿರುವ ಬೇಡಿತಿಯೊಬ್ಬಳು ನಕ್ಷತ್ರಮಾಲೆಯಿಂದಲೂ ಹೊಸ ಸಂಜೆಗೆಂಪಿನಿಂದಲೂ ಒಪ್ಪುವ ರಾತ್ರಿಯನ್ನು ಹೋಲುತ್ತಿದ್ದಳು. ೧೯. ಲಲಿತವಾದ ಬಳ್ಳಿ ಮತ್ತು ಕಠಿನವಾದ ಮರಗಳ ಸಮ್ಮಿಲನ ಇದು ಎನ್ನುವಂತೆ ಅಸಮಾನ ಕಾರ್ಯಸಾಧನಸಮರ್ಥರಾದ ಬೇಡರ ದಂಪತಿಗಳು ಕೋಮಲತೆ ಕಠೋರತೆಗಳ ಏಳ್ಗೆಗೆ ನೆಲೆಯೆನಿಸಿಕೊಂಡರು. ಅಲ್ಲಿ ೨೦. ಪರಸ್ತ್ರೀಯೊಡನೆ ರತಿಕ್ರೀಡೆಯನ್ನು ಮಾಡಿದ ಬುದ್ಧಿಶಾಲಿಯಾದ ಬೇಡನೊಬ್ಬನು ನಖಕ್ಷತಗಳನ್ನು ತನ್ನ ಹೆಂಡತಿಯು ಹುಲಿಯ ಹೊಡೆತದಿಂದ ಆಗಿರುವ ಗಾಯಗಳೆಂದು ತಿಳಿದುಕೊಳ್ಳುವಂತೆ ವಂಚಿಸುವುದಕ್ಕಾಗಿ, ಹುಲಿಯೊಂದನ್ನು ಹಿಡಿದು ಕಂಕುಳಲ್ಲಿ ಇರಿಕಿಕೊಂಡು ತನ್ನ ಮನೆಗೆ ಬರುತ್ತಿದ್ದನು. ೨೧. ಬಹಳ ಗಟ್ಟಿಗನಾದ ಬೇಡನೊಬ್ಬನು, ಆನೆಯು ಹೋರಾಡಿಯೂ,

---

೧. ಲತಾಕಂಟಕತರುಮಿಲನಮಿದೆಂಬಂತೆ (ಕಗ) ೨. ನೆಲೆಯೆನಿಸಿದ ಸುರತವಿಕ್ರಿಯಾ (ಕಗ) ೩. ದೋಱುವಿರ್ದುರದಸಿವಿಟ್ಟಿ ಪೆರ್ದೊಡೆಯ (ಖ) ೪. ಮತ್ತಕಾಸಿಯೊಲವಿಂ

ವ|| ಮತ್ತೊಂದೆಡೆಯೊಳ್

ತೊರೆದ ಕುಚಂಗಳಿಂದೆ ಕೊಣಸಂ ನಸೆಯಿಂ ಮೃಗಮಂ ಕುರಂಗಿ ಸಾ
ರ್ತರಲೆಡೆಗೊಂಡು ಭಲ್ಲದಿನೆರಟ್ಟಡಿಯಾಗೆ ಕಿರಾತನೆಚ್ಚೊಡಂ
ತರಿಸದೆ ಪುಲ್ಲೆ ಸಾರ್ಚಿ [1]ಮೞೆಯಂ ಮೊಲೆಯಂ ನೆರೆದೇಣನಂ ಬೞೆ
ಕ್ಕೆರಡುಡಿಯಾಯ್ತು ಕೇವಲಮೆ ದೇಹಿಗೆ ಸಂಸೃತಿಮೋಹಬಂಧನಂ ೨೨

ಹರಿಣನನಾರ್ದಿಸಲ್ಕೆ [2]ಶಬರಂ ಶಬರಪ್ರಿಯಕಾಂತೆ ಬಂದು ಬಿ
ಟ್ಟಿರಳೆಯನೀಕ್ಷಿಸುತ್ತುಮಿರಲಾಕೆಯ ಕೇಕರಕಾಂತಿಜಾಲದಿಂ
ಪರಿವೃತವಾಗಿ ತನ್ಮೃಗವದೇಂ ಪಡೆದತ್ತೊ ಮೃಗಾಂಕಮಂಡಲಂ
ಧರೆಗವತೀರ್ಣಮಾದುದೆನಿಪೊಂದಭಿಶಂಕೆಯನೊಂದು ತಾಣದೊಳ್ ೨೩

ತರುಣತಮಾಲಲತೌಘದ
ಪೊರೆಯೊಳ್ ಗೇಯಸ್ವನಾನುಮಿತತನುಲತೆಗಳ್
ಕರಮೆಸೆಯೆ ಗೇಯಗೋಷ್ಠಿಗೆ
ನೆರೆದಿರ್ದ ಪುಳಿಂದಕಾಂತೆಯರ್ಕಳೊಳೊರ್ವಳ್ ೨೪

ಕಾಡುಹಂದಿ ಗರ್ವದಿಂದ ನುಗ್ಗಿಯೂ, ದೊಡ್ಡ ಹುಲಿಯು ಮೇಲೆ ಬಿದ್ದು ಪರಚಿಯೂ ಆಗಿರುವ ತನ್ನ ಎದೆಯ ದೋಣಿಯಂತಿರುವ ಗಾಯದ, ಸೀಳಿರುವ ತೊಡೆಯ ನುಗ್ಗಿದ ರೀತಿಯು ಭಯಂಕರವಾಗಿದ್ದರೂ ಲಕ್ಷಿಸದೆ ಮೂರು ಬೇಟೆಯನ್ನೂ ಚೆನ್ನಾಗಿಯೇ ಅಡಿ ಅವುಗಳ ಮಾಂಸವನ್ನು ಹೊತ್ತುಕೊಂಡು ಭಾರದಿಂದ ಜೀಲೆಂದು ಧ್ವನಿಮಾಡುತ್ತ ಸಂತೋಷದಿಂದ ಮನೆಗೆ ಬರುತ್ತಿದ್ದನು. ವ|| ಮತ್ತೊಂದು ಎಡೆಯಲ್ಲಿ ೨೨. ಹೆಣ್ಣು ಜಿಂಕೆಯು ಹಾಲಿಳಿದ ಮೊಲೆಗಳುಳ್ಳದಾಗಿ ಮರಿಯ ಹತ್ತಿರ ಹೋಗುತ್ತಲೂ ಕಾಮದಿಂದ ಗಂಡುಜಿಂಕೆಯ ಹತ್ತಿರಕ್ಕೆ ಹೋಗುತ್ತ ಇದ್ದಿತು. ಆ ಸಮಯವನ್ನು ನೋಡಿ ಕಿರಾತನೊಬ್ಬನು ಭಲ್ಲದಿಂದ ಆ ಜಿಂಕೆಯನ್ನು ಎರಡು ತುಂಡಾಗುವಂತೆ ಹೊಡೆದನು. ಆದರೂ ಅದು ಮರಿಯ ಬಾಯಿಗೆ ಮೊಲೆಯನ್ನಿಟ್ಟೂ ಗಂಡುಜಿಂಕೆಯನ್ನು ಸೇರಿಯೂ ಬಳಿಕ ಎರಡು ತುಂಡಾಯಿತು. ದೇಹಗಳಿಗೆ ಸಂಸಾರ ಮೋಹಬಂಧನವು ಸಾಮಾನ್ಯವಾದುದೇ! ೨೩. ಬೇಡನೊಬ್ಬನು ಒಂದು ಜಿಂಕೆಯನ್ನು ಅಬ್ಬರಿಸಿ ಹೊಡೆದನು. ಅವನ ಪ್ರಿಯಕಾಂತೆಯು ಬಿದ್ದ ಆ ಜಿಂಕೆಯನ್ನು ಓರೆನೋಟದಿಂದ ನೋಡುತ್ತಿದ್ದಳು. ಆ ಕಾಂತಿಮಂಡಲವು ಜಿಂಕೆಯ ದೇಹದ ಸುತ್ತಲೂ ಹರಡಿತು. ಆದುದರಿಂದ ಮೃಗಾಂಕ ವಾದ ಚಂದ್ರಮಂಡಲವೇ ಭೂಮಿಗೆ ಇಳಿದು ಬಂದಿದೆಯೋ ಎಂಬ ಶಂಕೆ ಯಾಗುವಂತೆ ಆಯಿತು. ೨೪. ಎಳೆಯ ಹೊಂಗೆಯ ಗಿಡಗಳ ಪಕ್ಕದಲ್ಲಿರುವ ಹಾಡುವ

೧. ಮಗನಂ (ಕಗ) (ಖ) ೨. ಶಬರಂ ಬರಲಾ ಪ್ರಿಯಕಾಂತೆ ಕಂಡು (ಕಗ)

ತುಱುಗೆವೆಗಣ್ಣ ಕಾಂತಿ ಮರಗತ್ತಲೆಯಂ ಬೆದಱಿಟ್ಟೆ ತೊಂಡೆವಾ
ಯ್ದೆಱೆ ಕಿಸುಸಂಜೆವೀಱೆ ದಶನಾಂಶು ನವಾಮೃತಪೂರವೆಂಬಿನಂ
ಪೊಱಮಡೆ ಸಿಂಗವಾನೆ ಪುಲಿ ಪುಲ್ಲೆ ನವಿಲ್ ಫಣಿ ತಮ್ಮ ವೈರಮಂ
ಮಱೆದೊಡನಾಲಿಸಲ್ ಶಬರಿ ಪಾಡಿದಳಚ್ಯುತನಂಕಮಾಲೆಯಂ ೨೫

ವ|| ಅಂತು ಮನೋಹರಮಾದ ಗಹನಮಂ ದಾಂಟಿ ಧರಣೀಧರಕಟಕಂ ರೈವತ ಧರಣೀಧರಕಟಕಮಂ ಮುಟ್ಟೆವರೆ

ಹರಿ ಗೋಲಾಂಗೂಲ ಡೋಲಾಯಿತತರುವಿಟಪಂ ನಿರ್ಘೃಣವ್ಯಾಘ್ರ[೧]ಭೀತಿ
ಸ್ಫುರಿತತ್ವಂಗನ್ಮೃಗೌಘಂ ಜಲದಜಗರಫೂತ್ಕಾರವಾತ ಸ್ಫುಟದ್ಗ
ಹ್ವರಗರ್ಜತ್ಸಿಂಹನಿರ್ದಾರಿತ ಮದಗಜಕುಂಭಸ್ಥಳೀಮುಕ್ತಮುಕ್ತೋ
ತ್ಕರಗುಂಜಾಪುಂಜ ಕಿಮ್ಮೀರಿತಕಟಕಮಗುರ್ವಾದುದುರ್ವೀಧರೇಂದ್ರಂ ೨೬

ತ್ರಿದಶನಗೇಂದ್ರಂ ಧನುವಾ
ದುದು ಪಶುಪತಿಗಲ್ಪಮುನಿಗೆ ಸೆಡೆದುದು ವಿಂಧ್ಯಂ
ಸದೃಶಮೆ ಬಣ್ಣಿಂ ಪೆಂಪಿಂ
ಗಿದಱೊಳೆನಲ್ ತಳೆದುದಚಲವತ್ತುನ್ನತಿಯಂ ೨೭

ಬೇಡಿತಿಯರನ್ನು ಅವರ ಹಾಡಿನ ಸ್ವರದಿಂದ ಬೇಡಿತಿಯರು ಎಂದು ತಿಳಿದುಕೊಳ್ಳಬೇಕಾಗಿದ್ದಿತು. ಹಾಗೆ ಗಾನಗೋಷ್ಠಿಗೆ ಸೇರಿದ್ದ ಬೇಡರ ಹೆಂಡಿರಲ್ಲಿ ಒಬ್ಬಳು ೨೫. ಒತ್ತಾದ ರೆಪ್ಪೆಯ ಕಣ್ಣಿನ ಕಾಂತಿಯಿಂದ ಮರಗತ್ತಲೆಯನ್ನು ಬೆದರಿಸುತ್ತಲೂ, ತೊಂಡೆಹಣ್ಣಿನಂತೆ ಕೆಂಪಾದ ತುಟಿಯ ಕಾಂತಿಯಿಂದ ಸಂಜೆಯ ಕೆಂಪನ್ನು ಮೀರಿಸುತ್ತಲೂ ಹಲ್ಲಿನ ಹೊಳಪಿನಿಂದ ಅಮೃತಧಾರೆಯನ್ನು ಸುರಿಸುವಂತೆಯೂ ಇದ್ದು ಕೃಷ್ಣನ ಬಿರುದು ಮಾಲೆಯನ್ನು ಬಹಳ ಚೆನ್ನಾಗಿ ಹಾಡಿದಳು. ಅದನ್ನು ಸಿಂಹವೂ ಆನೆಯೂ ಹುಲಿಯೂ ಹುಲ್ಲೆಯೂ ನವಿಲೂ ಹಾವೂ ಪರಸ್ಪರ ವೈರವನ್ನು ಮರೆತು ಒಟ್ಟಿಗೆ ಕುಳಿತು ಕೇಳುತ್ತಿದ್ದವು. ವ|| ಹಾಗೆ ಮನೋಹರವಾದ ಕಾಡನ್ನು ದಾಟಿ, ಕೃಷ್ಣನ ಸೇನಾಸಮೂಹವು ರೈವತಗಿರಿಯ ತಪ್ಪಲುಪ್ರದೇಶವನ್ನು ಸಮೀಪಿಸಿ ಬಂದಿತು. ೨೬. ಆ ಪರ್ವತದಲ್ಲಿ ಅನೇಕ ಬಗೆಯ ಕೋತಿಗಳು ಮರಗಳ ಕೊಂಬೆಗಳನ್ನು ತೊಟ್ಟಿಲಿನಂತೆ ತೂಗಾಡಿಸುತ್ತಿದ್ದವು. ಕರುಣೆಯಿಲ್ಲದ ಕ್ರೂರವಾದ ಹುಲಿಗಳ ಭಯದಿಂದ ಬೆವರು ನವಿರೆದ್ದು ಮೃಗಗಳು ಓಡಿಹೋಗುತ್ತಿದ್ದವು. ಮುದಿ ಹೆಬ್ಬಾವುಗಳ ಉಸಿರಿನ ಗಾಳಿಯಿಂದ ಗುಹೆಗಳು ಒಡೆದು ಹೋಗುತ್ತಿದ್ದವು. ಗರ್ಜಿಸುವ ಸಿಂಹಗಳು ಸೀಳಿದ ಮದಗಜಗಳ ಕುಂಭಸ್ಥಳದಿಂದ ಹೆಚ್ಚಾಗಿ ಸುರಿದ ಉತ್ತಮವಾದ ಮುತ್ತುಗಳ ಮತ್ತು ಗುರುಗುಂಜಿಗಳ ವಿಚಿತ್ರಕಾಂತಿಯು ತಪ್ಪಲು ಪ್ರದೇಶವನ್ನೂ ಕೃಷ್ಣನ ಕಟಕವನ್ನೂ ವ್ಯಾಪಿಸಿದ್ದಿತು. ಹೀಗೆ ಆ ಪರ್ವತವು ಭಯಂಕರ ವಾಗಿದ್ದಿತು. ೨೭. ಮೇರುಗಿರಿಯು ಈಶ್ವರನಿಗೆ ಬಿಲ್ಲಾಯಿತು. ವಿಂಧ್ಯಪರ್ವತವು ಸಾಮಾನ್ಯ

---

೧. ಭೀತಿತ್ವರಿತಂಧಾವನ್ಮೃಗೌಘಂ (ಕಗ)

[1]ಬಳಿದ ಶಿಖಂಡವಳ್ಳಿಱಿಯೆ ಕೇಸರಿ ಸೀಳೆ ಸಮೀರಪಾತವ
ಗ್ಗಳಿಸೆ ಪುಳಿಂದರಾರ್ದಿಸೆ ಸಿಡಿಲ್ದುಗುತಂದುವು ಪುಷ್ಪಸಾಯಕಂ
ಗಳ ಪೊಗರ್ವಟ್ಟು ಚಂದ್ರಿಕೆಯ ಬಿಱ್ತೆಳಮಿಂಚಿನ ತತ್ತಿ ತಾರಕಂ
ಗಳ ಮಱಿಯೆಂಬ ಪಾರಧರವಾರಣವೇಣುವರಾಹಮೌಕ್ತಿಕಂ ೨೮

ಮದಗಜಗಂಧಮುದ್ದೆಸಕೆ ಘೋಂಕೆನೆ ಲಂಘಿಸಿ ಚಂದ್ರಕಾಂತಕೂ
ಟದ ಕೆಲದಲ್ಲಿ ನಿಂದಿಭದುದಗ್ರತನುಪ್ರತಿಬಿಂಬಮಂ ಮದೇ
ಭದ ತನುಗೆತ್ತು ಪಾಯ್ದು ಶಿಲೆಯಂ ಮೃತವಾದುದಿಭದ್ವಿಷಂ ಬರ್ದುಂ
ಕಿದುದಿಭಮಂತೆ ನಿರ್ಮಲರ [2]ಸನ್ನಿಧಿ ಮಾಳ್ಕುಮಪಾಯನಾಶಮಂ ೨೯

ಬೆಳಗಂ ಪಸರಿಸುವರುಣೋ
ಪಳದೊಳ್ ಮೃಗಿ ನಿಲೆ ದವಾಗ್ನಿ ಮುಸುಕಿದುದದನೆಂ
ದೊಳಱಿ ಮೃಗಮಿತ್ತಲಸುವಂ
ಕಳೆದತ್ತು ವಿವೇಕಮುಂಟೆ ಮೋಹಾಕುಲರೊಳ್ ೩೦

ಮರೆಯುನೆರೆಗೊಂಡು ಮಱಿವ
ಟ್ಟರೆಯಿರೆ ಕಾಯ್ದುರಿವ ಸೂರ್ಯಕಾಂತದಿನೆಟ್ಟ
ತ್ತಿರದೋಡಿದುದಜಗರವ
ಸ್ಥಿರಗುಣನಾಶ್ರಯದೊಳಾರುಮಿರಲಱಿದಪರೇ ೩೧

ಮುನಿಯಾದ ಅಗಸ್ತ್ಯನಿಗೆ ಹೆದರಿ ನಮಸ್ಕರಿಸಿತು. ಅವು ಘನತೆಯಲ್ಲೂ ಮಹಿಮೆಯಲ್ಲೂ ಇದಕ್ಕೆ ಸಮವೇ! ಅಲ್ಲ ಎನ್ನುವಂತೆ ಆ ರೈವತಗಿರಿಯು ಅತ್ಯುನ್ನತವಾಗಿದ್ದಿತು. ೨೮. ಉನ್ನತವಾದ ಗಿರಿಶಿಖರವು ಚುಚ್ಚಿದುದರಿಂದಲೂ ಸಿಂಹವು ಸೀಳಿದುದರಿಂದಲೂ ಗಾಳಿಯ ಹೊಡೆತವು ಹೆಚ್ಚಾದುದರಿಂದಲೂ ಬೇಡರು ಅಬ್ಬರಿಸಿ ಓಡಿದುದರಿಂದಲೂ ಮುತ್ತುಗಳು ಕ್ರಮವಾಗಿ ಮೋಡದಿಂದಲೂ ಆನೆಗಳ ಕುಂಭಸ್ಥಲದಿಂದಲೂ ಬಿದಿರುಗಳಿಂದಲೂ ಹಂದಿಗಳಿಂದಲೂ ಸಿಡಿದು ಉದುರಿದವು. ಅವು ಮನ್ಮಥನ ಕಾಂತಿಯ ಬೊಟ್ಟುಗಳು, ಚಂದ್ರಿಕೆಯ ಬೀಜಗಳು, ಎಳೆಮಿಂಚಿನ ಮೊಟ್ಟೆಗಳು, ನಕ್ಷತ್ರಗಳ ಮರಿಗಳು ಎಂಬಂತೆ ಕಂಗೊಳಿಸಿದವು. ೨೯. ಒಂದು ಆನೆಯು ಚಂದ್ರಕಾಂತಶಿಲೆಯ ಸಮೀಪದಲ್ಲಿ ನಿಂತಿದ್ದಿತು. ಅದರ ಪ್ರತಿಬಿಂಬ ಆ ಶಿಲೆಯಲ್ಲಿ ಬಿದ್ದಿದ್ದಿತು. ಒಂದು ಸಿಂಹವು ಪ್ರತಿಬಿಂಬವನ್ನೇ ಆನೆಯೆಂದು ಭಾವಿಸಿ ಕುಂಭವನ್ನು ಸೀಳಲು ಚಂದ್ರಕಾಂತದ ತುದಿಗೆ ಹಾರಿ ಡಿಕ್ಕಿಹೊಡೆದುಕೊಂಡು ಸತ್ತಿತು. ನಿಜವಾದ ಆನೆಯು ಬದುಕಿತು! ನಿರ್ಮಲರ ಸನ್ನಿಧಿಯು ಅಪಾಯವನ್ನು ನಾಶಮಾಡುವುದಲ್ಲವೆ! ೩೦. ಇನ್ನೊಂದು ಕಡೆ ಬೆಳಕು ಹರಡುತ್ತಿರುವ ಸೂರ್ಯಕಾಂತ ಶಿಲೆಯಲ್ಲಿ ಹೆಣ್ಣುಜಿಂಕೆಯು ನಿಂತಿದ್ದರೆ, ತನ್ನ ಪ್ರಿಯೆಯನ್ನು ಕಾಡುಕಿಚ್ಚು ಮುಸುಕುತ್ತಿದೆಯೆಂದು ಹೆದರಿದ ಗಂಡುಜಿಂಕೆ ಪ್ರಾಣವನ್ನು ಬಿಟ್ಟಿತು! ಮೋಹಪೀಡಿತರಾದವರಿಗೆ ವಿವೇಕವಿರುವುದೆ? ೩೧. ಒಂದು ಹೆಬ್ಬಾವು ಜಿಂಕೆಯೊಂದನ್ನು ನುಂಗಿ,

---

೧. ಬಳಸಿ (ಕ) ೨. ಸಂಗತಿ (ಕಗ)

ಪ್ರತಿಬಿಂಬವನಾಳಿಗೆ ಮರ
ಕತಾಶ್ಮದೊಳ್ ಪಾಯ್ದು ಕಪಿ ಹತಾಶಂ [1]ವನಸಂ
ಹತಿಗಮದಂಜಿದುದಾಶಾ
ಹತ ಮಾಡದೆ ತಥ್ಯದಲ್ಲಿ ಮಿಥ್ಯಾಭಯಮಂ ೩೨

ಮೇದುರನೀಲಾಶ್ಮಮನಂ
ಭೋದಭ್ರಾಂತಿಯೊಳೆ ನೋಡಿ [2]ಕುಣಿದುವು ಶಿಖಿಗಳ್
ಆದರದಿಂದಂ ಹರ್ಷವಿ
ಷಾದಗುಣಂ ಭ್ರಾಂತಿಸಂಭವಂ ದೇಹಿಗಳೊಳ್ ೩೩

ಕೊಳನಂ ಬಳಸಿದ ವಜ್ರೋ
ಪಳದೊಳ್ ಮಾರ್ಪೊಳೆದು ಮಱಿಗಳಿರ್ಮಡಿಯಾದಂ
ತೆಳಸಿ ಬರೆ ಹಂಸಿ ಹರ್ಷಮ
ನೊಳ್[3]ಕೊಳ್ವುದಪತ್ಯರಲ್ಲಿ ತಣಿವಿಲ್ಲಾರ್ಗಂ ೩೪

ವ॥ ಮತ್ತೊಂದೆಡೆಯೊಳ್ ಮಾಣಿಕ್ಯಶಿಖರದ ಶೋಣ[4]ಘೃಣಿಯೆ ಘನೀಭೂತವಾದಂತೆ ಕೆಂಕಮಾದ ಕಂಕೆಲ್ಲಿವಲ್ಲೀಭವನದೊಳ್ ಕಾಮಕಲಹದಿಂ ಕೆದಱಿದ ಕಿನ್ನರ ಕನ್ಯೆಯರ ಮುಡಿಯ ಕೇದಗೆಯ ಕುತ್ತುಂಗಱಿಗಳಾಕೆಯರ ಕೇಕರಚ್ಛಟೆಗಳೆ ಕೆದಱಿ ನಿಂದಂತಿರಂದಂಬಡೆಯೆಯುಂ, ಒಂದೆಡೆಯೊಳಿಂದ್ರನೀಲಮಣಿಚೂಳಿಕೆಯ ಮೇಚಕಮರೀಚಿಯೆ ಗಟ್ಟಿಗೊಂಡಂತೆ ಕರ್ಪುವೀಱುವ ಬಾಳತಮಾಳಗಳೋವರಿಗಳೊಳತನುಲೀಲೆಯಿಂ ಸೂಸಿರ್ದ ಸಿದ್ಧನಾರಿಯರ ಕರ್ಣಪೂರಕುಮುದಂಗ

ಚಲಿಸದೆ ಮತ್ತಿನಿಂದ ಮಲಗಿದ್ದಿತು. ಹತ್ತಿರದಲ್ಲೇ ಇದ್ದ ಸೂರ್ಯಕಾಂತಶಿಲೆಯು ಕಾಯ್ದು ಉರಿಯು ತಾಕಿದುದರಿಂದ ಎಚ್ಚೆತ್ತು ಅಲ್ಲಿರದೆ ಓಡಿ ಹೋಯಿತು! ಅಸ್ಥಿರ ಗುಣವುಳ್ಳವರ ಆಶ್ರಯದಲ್ಲಿ ಯಾರು ತಾನೆ ಇರಬಲ್ಲರು? ೩೨. ಪಚ್ಚೆಯ ಮಣಿಯಲ್ಲಿ ಪ್ರತಿಬಿಂಬಿಸಿದ ವನವನ್ನು ನಿಜವಾದ ಕಾಡೆಂದೇ ಭಾವಿಸಿ ಆ ಮಣಿಯ ಮೇಲೆ ಹಾರಿಹಾರಿ ಪೆಟ್ಟುತಿಂದು ನಿರಾಶೆಯುಳ್ಳುದಾದ ಕಪಿಯು ನಿಜವಾದ ಕಾಡಿಗೂ ಅಂಜುವಂತಾಯಿತು. "ಆಶಾಭಂಗವು ಸತ್ಯವಾದುದರಲ್ಲೂ ಮಿಥ್ಯೆಯೆಂಬ ಭೆಯವನ್ನುಂಟುಮಾಡದೆ! ೩೩. ಸಾಂದ್ರವಾಗಿ ಉಬ್ಬಿರುವ ನೀಲಮಣಿಗಳ ಗುಂಪನ್ನು ನೋಡಿ, ಮೋಡವೆಂದು ಭ್ರಮಿಸಿ ನವಿಲುಗಳು ಆದರದಿಂದ ಕುಣಿಯಲು ತೊಡಗಿದವು. ದೇಹಿಗಳಲ್ಲಿ ಹರ್ಷವಿಷಾದ ಗುಣಗಳು ಭ್ರಾಂತಿಯಿಂದ ಸಂಭವಿಸತಕ್ಕವು. ೩೪. ಕೊಳವನ್ನು ಬಳಸಿ ಇರುವ ವಜ್ರಶಿಲೆಯಲ್ಲಿ ಪ್ರತಿಬಿಂಬಿಸಿದ ತನ್ನ ಮರಿಗಳು ಎರಡರಷ್ಟಾಗಿರುವುದನ್ನು ನೋಡಿ ಹಂಸಿಯು ಸಂತೋಷಗೊಂಡಿತು. ಮಕ್ಕಳೆಷ್ಟಾದರೂ ಯಾರಿಗೂ ತೃಪ್ತಿಯಿಲ್ಲ. ವ॥ ಮತ್ತೊಂದು ಎಡೆಯಲ್ಲಿ ಕೆಂಪು ರತ್ನಶಿಖರದ ಕೆಂಪುಹೊಳಪೇ ಗಟ್ಟಿಯಾದಂತೆ ಕೆಂಪಾಗಿರುವ ರಕ್ತಾಶೋಕಲತೆಯ ಭವನದಲ್ಲಿ ರತಿಕಲಹದಲ್ಲಿ ಕೆದರಿದ ಕಿನ್ನರ ಕನ್ಯೆಯರ ಮುಡಿಯ ಕೇದಗೆಯ ಚಿಕ್ಕಎಸಳುಗಳು ಅವರ ಕಟಾಕ್ಷದ ಕಾಂತಿಗಳು ಹರಡಿ ನಿಂತಿರುವಂತೆ

---

೧. ವನಸಂಗತಿಗ (ಕಗ) ೨. ಕುಣಿವುವು (ಕಗ) ೩. ಕೊಂಡುದಪತ್ಯರಲ್ಲಿ (ಖ) ೪. ಘೃಣಿಯಿಂ (ಕಗ)

ಳಾಕೆಯರ ದರಹಾಸದ್ಯುತಿಯೆ ಸೂಸಿದಂತೆಸೆಯುತ್ತಿರೆಯುಂ, ಮುಂತೊಂದೆಡೆಯೊಳ್ ಚಂದ್ರಕಾಂತದೊಡ್ಡುಂಗಲ್ಗಳ ಕಾಂತಿಯೆ ಕುಪ್ಪಳಿಸಿದಂತವಿರಳಮಾಗಿ ಕ್ರೂತ ಚೂತಲತೆಯ ಬಾಳ್ಪೊಂಪದೊಳಲಂಪುವೆತ್ತ ಬೇಟದ ತೋಟಯಿಂದುದಿರ್ದ [೧]ಪರಿಕಲಿಸಿದ ವಿದ್ಯಾಧರಪುರಂಧ್ರಿಯರ ಸಿರಿಖಂಡಪತ್ರಭಂಗಂಗಳಾಕೆಯರ ಶೃಂಗಾರರಸದ ಬಳಿಯ ತಿಳಿನೊರೆಯೆ ಪರಿಕಲಿಸಿ ಮಸುಳದಿರ್ದ ಪರಿಯನನುಕರಿಸೆಯುಂ, [೨]ಮುಂದೆಯೊಂದೆಡೊಳ್ ಗರುಡೋದ್ಗಾರದ ಪಚ್ಚೆಯ ಗಂಡಶೈಲದ ಪಸುರ್ವೆಳಗೆ ಮಂದೈಸಿದಂತೆ ಪಸುರ್ತ್ತೆಸೆವ ಕದಳಿಕದಂಬದಿಱುಂಬಿನೊಳ್ ಸಪ್ರಣಯಪ್ರಕೋಪದಿಂ ಪರಿದು ಸಡಿಲ್ದ ಗಂಧರ್ವಗಣಿಕೆಯರ ಹಾರಮಂಜೀರಮಣಿಗಳಾಕೆಯರ ಲಾವಣ್ಯತೇಜದುರುಳಿಗಳೆ ಸಿಡಿಲ್ದಿರ್ದ ಭಂಗಿಯನನುಕರಿಸೆಯುಂ, ಒಂದೆಡೆಯೊಳ್ ವಜ್ರ ವೈಡೂರ್ಯ ಶಿಲಾಪಟ್ಟಕಂಗಳ ವಿರಳದೀಧಿತಿಯೆ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ ಜಲಕ್ರೀಡೆಯಿಂ ಚೆಲ್ಲಿರ್ದ ಯಕ್ಷಯುವತಿಯರ ಕರಕಲಿತ ಕುಂಕುಮಂಗಳಾಕೆಯರ ಮನದನುರಾಗಮೆ ಚೆಲ್ಲಿರ್ದುದೆಂಬ ಚೆಲ್ವನವಟ್ಟೈಸೆಯುಮತಿರಮಣೀಯಮಾಗಿ

ತರುಕಾಂಡಂ ದೆಸೆಯಾನೆಗಳ್ಗೆ ಕಟಕಂಡೂವ್ಯಾಪ್ತಿಯಂ ಪಿಂಗಿಸು
ತ್ತಿರೆ ಕೂಟಂ ಸ್ಥಳಯಾನಮಂ ರವಿಹಯಂಗಳ್ಗೀಯೆ ರತ್ನಾಂಶು ಚ
ತ್ರುರುಚಿಕ್ಷೌಮವಿತಾನವಂ ಕುಡೆ ನಭೋಗೇಹಕ್ಕೆ ತಾಳ್ದತ್ತು ಮೈ
ಹಿರವಂ ಕೇಳಿರಸಾರ್ಥವಿಶ್ರಮಿತ ನಾನಾದೈವತಂ ರೈವತಂ ೩೫

ಅಂದವಾಗಿದ್ದವು. ಇನ್ನೊಂದು ಕಡೆ ಇಂದ್ರನೀಲಮಣಿಯ ಶಿಖರದ ಅತಿಯಾಗಿ ಕಪ್ಪಾದ ಕಾಂತಿಯೆ ಗಟ್ಟಿಯಾದಂತೆ ಕಪ್ಪನ್ನು ಬೀರುವ ಹೊಂಗೆಯ ಎಳೆಯ ಮರಗಳ ಕೋಣೆಗಳಲ್ಲಿ ಕಾಮಲೀಲೆಯಲ್ಲಿ ಚೆಲ್ಲಿದ ಸಿದ್ಧನಾರಿಯರ ಕಿವಿಯ ಆಭರಣದ ಬಿಳಿ ನೈದಿಲೆ ಹೂಗಳು ಅವರ ಮುಗುಳುನಗೆಯ ಹೊಳಪೇ ಚೆಲ್ಲಿರುವಂತೆ ಕಾಣಿಸುತ್ತಿದ್ದವು. ಮುಂದೆ ಇನ್ನೊಂದು ಕಡೆಯಲ್ಲಿ ಚಂದ್ರಕಾಂತದ ಹಾಸುಗಲ್ಲುಗಳ ಕಾಂತಿಯೇ ಕುಪ್ಪಳಿಸಿದಂತೆ ಒತ್ತಾಗಿ ಹೂ ಬಿಟ್ಟಿರುವ ಮಾವಿನ ಬಳ್ಳಿಯ ಹಸಿಚಪ್ಪರದಲ್ಲಿ ಹೆಚ್ಚಾದ ಕಾಮಸ್ಪರ್ಧೆಯಲ್ಲಿ ಉದುರಿದ ವಿದ್ಯಾಧರ ಪತ್ನಿಯರ ಶ್ರೀಗಂಧದ ಪತ್ರಭಂಗಗಳ ರಾಶಿಯು ಅವರ ಶೃಂಗಾರರಸದ ಬಿಳಿಯ ನೊರೆಯೆ ಹರಡಿ ಮಸುಳದೆ ಇರುವಂತೆ ಕಾಣಿಸುತ್ತಿತ್ತು. ಮುಂದೆ ಒಂದು ಕಡೆ ಗರುಡಪಚ್ಚೆಯ ಮಣಿಯ ಗುಹೆಯ ಹಸಿರುಕಾಂತಿಯೆ ದಟ್ಟವಾದಂತೆ ಹಸುರಾಗಿ ಹೊಳೆಯುವ ಬಾಳೆಯಗಿಡಗಳ ಗುಂಪಿನ ಇಕ್ಕಟ್ಟಾದ ಸ್ಥಳದಲ್ಲಿ ಪ್ರಣಯಕೋಪದಿಂದ ಹರಿದುಬಿದ್ದಿರುವ ಅಪ್ಸರೆಯರ ಹಾರ ಕಾಲಂದುಗೆಗಳ ರತ್ನಗಳು ಆಕೆಯರ ಲಾವಣ್ಯ ತೇಜಸ್ಸುಗಳ ಉಂಡೆಗಳೇ ಸಿಡಿದು ಬಿದ್ದಿರುವಂತೆ ಕಾಣಿಸುತ್ತಿದ್ದವು. ಮತ್ತೊಂದು ಎಡೆಯಲ್ಲಿ ವಜ್ರ, ವೈಡೂರ್ಯ ಶಿಲಾಪಟ್ಟಿಗಳ ಒತ್ತಾದ ಕಾಂತಿಯೇ ಕೊಳವಾಗಿ ತುಳುಕಾಡುತ್ತಿರುವಂತೆ ತಿಳಿನೀರಿನಿಂದೊಪ್ಪುವ ಸರೋವರದ ದಡಗಳಲ್ಲಿ ಜಲಕ್ರೀಡೆಯಲ್ಲಿ ಚೆಲ್ಲಿದ ಯಕ್ಷಯುವತಿಯರ ಕೈಯಲ್ಲಿದ್ದ ಕುಂಕುಮಗಳು ಆಕೆಯರ ಮನಸ್ಸಿನ ಅನುರಾಗವೇ ಚೆಲ್ಲಿದೆಯೆಂಬ ಚೆಲುವನ್ನು ಪಡೆದಿದ್ದಿತು. ಹೀಗೆ ಆ ಪ್ರದೇಶವು ಅತಿ ಮನೋಹರವಾಗಿದ್ದಿತು. ೩೫. ಆ ರೈವತಗಿರಿಯ ಮರಗಳ ಕಾಂಡಗಳು ದಿಗ್ಗಜಗಳ ಕೆನ್ನೆಗಳ ನವೆಯನ್ನು (ಉಜ್ಜಿಕೊಳ್ಳು

೧. ಪರ (ಕಗ) ೨. ಒಂದೊಂದೆಡೆಯೊಳ್ (ಕಗ)

ವ|| ಅಂತು ಮಹಿಮೋರ್ಜಿತವಾದೂರ್ಜಯಂತಗಿರಿಸಾನುವನಿನಿಸಾನು [1]ಮಿಟೆವಲ್ಲಿ

ಗಂಧವಹಂ ಹೋಮ ಹವಿ
ರ್ಗಂಧ ಪರಂಪರೆಯನೆಸಗಲಸುರಾರಿ ಹವಿ
ರ್ಗಂಧಮಿದೇನೆನೆ ತತ್ಸಂ
ಬಂಧವಿದಂ ನಯವಿಶುದ್ಧನುದ್ಧವನೆಂದಂ ೩೬

ಮುನಿಹೋಮಗಂಧಮಿದು ಪೇ
ೞ್ವೆನದಂ ಸ್ವರ್ಗಾಪವರ್ಗಫಲಾಯಿ ತಪೋ
ವನಮಿರ್ಪುದು ಪಾವನಮೀ
ಸನಾತನಾಚಲದಗಮ್ಯರಮ್ಯಸ್ಥಳದೊಳ್ ೩೭

ನುಡಿವ ನಡೆವಿಷ್ಟಫಲಮಂ
ಕುಡುವ ಮಹಾಜ್ಯೋತಿಯಾಗಿ ತೋಱುವ ರವಿಯಿ
ರ್ದೆಡೆಗೆ ನೆೞಲ್ವೀಱುವ ಬಾಂ
ಗಡರ್ದೇಱುವ ತರುಗಳಾ ತಪೋವನತರುಗಳ್ ೩೮

ಇರದಘಮರ್ಷಿಸಲ್ ಬಗೆದ ಸಿದ್ಧಿಯ ನೀವಜೆವಂತೆ ನಿರ್ಜರಾ
ಮರತೆಯನುಂಟುಮಾಡುವೊಳಪೊಕ್ಕ ಪದಾರ್ಥಮನೆಯ್ದೆಕಲ್ಗಳಾ
ಗಿರಿಸುವ ಸೋಂಕೆ ಕತ್ತರಿಸಿ ಖಂಡಿಪ ಸಿದ್ಧರಸಹ್ರದಂ ಸುಧಾ
ಸರಸಿ [2]ಶಿಲೋದಕೋಗ್ರನದಿ ಕತ್ತರಿವಾಣಿಯ ವಾಪಿ [3]ವಿಸ್ಮಯಂ ೩೯

ವುದರಿಂದ) ಹೋಗಲಾಡಿಸುತ್ತಿದ್ದವು. ಅದರ ಶಿಖರಗಳು ಸೂರ್ಯನ ರಥದ ಕುದುರೆಗಳಿಗೆ ಸ್ವಲ್ಪಕಾಲ ಭೂಸ್ಥಲಗಮನಕ್ಕೆ ಅವಕಾಶವನ್ನುಂಟುಮಾಡುತ್ತಿದ್ದವು. ಶಿಖರದ ರತ್ನಗಳ ಕಾಂತಿಗಳು ಆಕಾಶಗೃಹಕ್ಕೆ ಚಿತ್ರದುಕೂಲದ ಮೇಲುಕಟ್ಟನ್ನು ಒದಗಿಸುತ್ತಿದ್ದವು. ಸೂರ್ಯ ಸಂಬಂಧದ ಆ ಗಿರಿಯ ಶಿಖರದಲ್ಲಿ ಕ್ರೀಡಾರಸಾರ್ಥವಾಗಿ ನಾನಾ ದೇವತೆಗಳು ಬಂದು ವಿಶ್ರಮಿಸಿಕೊಳ್ಳುತ್ತಿದ್ದರು. ವ|| ಹಾಗೆ ಮಹಿಮೆಯಿಂದ ಊರ್ಜಿತವಾದ ರೈವತಕಗಿರಿಯ ತಪ್ಪಲಿನಲ್ಲಿ ಸ್ವಲ್ಪ ಇಳಿದಾಗ ೩೬. ಗಾಳಿಯು, ಹೋಮದ ಹವಿಸ್ಸಿನ ಸುವಾಸನೆಯನ್ನು ಪರಂಪರೆಯಾಗಿ ತರುತ್ತಿದ್ದಿತು. ಅದನ್ನು ಸೇವಿಸಿದ ಕೃಷ್ಣನು, 'ಹವಿಸ್ಸಿನ ಗಂಧವು ಇದೇನು? ಎಲ್ಲಿಯದು?' ಎಂದು ಪ್ರಶ್ನಿಸಿದನು. ಅದರ ಸಂಬಂಧವನ್ನು ತಿಳಿದವನೂ ನೀತಿಜ್ಞನೂ ಆದ ಉದ್ಧವನು ಹೇಳಿದನು. ೩೭. ಇದು ಮುನಿಗಳು ಮಾಡುವ ಹೋಮದ ಸುವಾಸನೆ. ಅದರ ವಿಚಾರವನ್ನು ಹೇಳುತ್ತೇನೆ. ಈ ಸನಾತನವಾದ ಪರ್ವತದ ಅಗಮ್ಯವೂ ರಮ್ಯವೂ ಆದ ಪ್ರದೇಶದಲ್ಲಿ ಪರಿಶುದ್ಧವೂ ಸ್ವರ್ಗಮೋಕ್ಷ ಫಲದಾಯಕವೂ ಆದ ತಪೋವನವೊಂದಿದೆ. ೩೮. ಆ ತಪೋವನದ ಮರಗಳು ಆಕಾಶಕ್ಕೆ ಅಡರಿ ಏರಿ, ಮಹಾಜ್ಯೋತಿಯಾದ ಸೂರ್ಯನಿರುವ ಎಡೆಗೂ ನೆಳಲನ್ನು ಕೊಡುವುವು, ನುಡಿಯುವುವು, ನಡೆಯುವುವು ಬೇಡಿದುದನ್ನು ಕೊಡುವುವು. ೩೯. ಅಲ್ಲಿರುವ ಸಿದ್ಧರಸದ ಮಡುವಿನಲ್ಲಿ ಮುಳುಗಿದರೆ

---

೧. ಇಳಿದಲ್ಲಿ (ಖ) ೨. ಶಿಲೋದಕಾಗ್ರನದಿ (ಕಗ) ೩. ನಿಶ್ಚಯಂ (ಖ)

ಮನುಜನಿದಱೊಂದೆ ಕುವಲಯ
ಮನೊಂದೆ ಪದ್ಮಮನುಮಾಧಿಪಂಗೇಱಿಸೆ ತೊ
ಟ್ಟನೆ ಕುವಲಯಪತಿಪದ್ಮೇ
ಶನಪ್ಪ ಪೂಗೊಳನೆ ಬನದ ಪೂಗೊಳನೆಲ್ಲಂ ೪೦

ಈ ತಾಪಸರಿರ್ದೆಡೆಗೆ ರ
ಸಾತಳ ಪುರುಷಪ್ರಯಾಣಕೇಳೀಯಾತಾ
ಯಾತಾಧ್ವಮೆನಿಸುತಿರ್ಪುವು
ಪಾತಾಳಸ್ಪರ್ಶಿಗಳ್ ಬಿಲದ್ವಾರಂಗಲ್ ೪೧

[1]ಸದಸನ್ಮತಿಗಳ್ ಪಿಡಿವಂ
ದದಿನೇಕಾನೇಕಪದಮುಮಂ ಸಿರಿ ಮೈಸೋಂ
ಕಿದರಂ ಪಿಡಿವುವು ಮುಂ ಮಿಡು
ಕದಂತು [2]ತಡನಡೆವ ವಜ್ರಲೇಪದ ಶಿಲೆಗಳ್ ೪೨

ಮುನಿಜನದಾಜ್ಞಾಬಲದಿಂ
ಮುನಿಯದೆ ಪುಲಿ ಪುಲ್ಲೆ ಸಿಂಗವಾನೆ ನವಿಲ್ ಪಾ
ವನಿತುಂ ಕೆಳೆಗೊಂಡಿರ್ಪುವು
[3]ಮುನಿಧೇನುಗಳವೆನೆ ಮಚ್ಚಿ ಸುಟಿವುವು ಪೊಲದೊಳ್ ೪೩

ಇಷ್ಟಾರ್ಥ ಸಿದ್ಧಿಯಾಗುವುದು, ಅಮೃತಸರಸ್ಸಿನಲ್ಲಿ ಮುಳುಗಿದರೆ ಕಣ್ಣಿಗೆ ಕಾಣುವಂತೆ ಮುಪ್ಪೂ ಮರಣವೂ ಇಲ್ಲದ ದೇವತ್ವವುಂಟಾಗುವುದು. ಶಿಲೋದಕದ ಉಗ್ರನದಿಯು ಒಳಹೊಕ್ಕ ಪದಾರ್ಥವನ್ನು ಕಲ್ಲಾಗಿಸುವುದು. 'ಕತ್ತರಿವಾಣಿ' ಎಂಬ ಬಾವಿ, ಮುಟ್ಟಿದರೆ ಕತ್ತರಿಸಿ ಚೂರುಚೂರು ಮಾಡುವುದು. ಇದೆಲ್ಲವೂ ಆಶ್ಚರ್ಯಕರ. ೪೦. ಆ ತಪೋವನದಲ್ಲಿರುವ ಹೂವಿನ ಕೊಳದ ಮಹಿಮೆಯೂ ಅಮಿತವಾದುದು. ಅದರಲ್ಲಿರುವ ಒಂದೇ ಒಂದು ನೈದಿಲೆಯ ಹೂವನ್ನು ಉಮಾಪತಿಯಾದ ಶಿವನಿಗೆ ಏರಿಸಿದ ಮನುಜನು ತಟ್ಟನೆ ರಾಜ (ಚಂದ್ರ)ನಾಗುವನು. ಒಂದೇ ಒಂದು ಕಮಲಪುಷ್ಪವನ್ನು ಏರಿಸಿದವನು ಸೂರ್ಯ (ನಾರಾಯಣ)ನಾಗುವನು. ೪೧. ಈ ಋಷಿಗಳಿರುವೆಡೆಯಿಂದ ಪಾತಾಳಕ್ಕೆ ಬಿಲದ್ವಾರಗಳಿರುವುವು. ಅವು ವಿನೋದಾರ್ಥವಾಗಿ ಮಹಾಪುರುಷರು ಪಾತಾಳಕ್ಕೆ ಹೋಗಿ ಬರುವ ಮಾರ್ಗಗಳೆನಿಸಿಕೊಂಡಿರುವುವು. ೪೨. ಸದ್ಬುದ್ಧಿಯುಳ್ಳವರು ಒಂದು ಪದ (ಗುರಿ, ಸ್ಥಾನ, ಮಾರ್ಗ)ವನ್ನೂ ಅಸದ್ಬುದ್ಧಿಯುಳ್ಳವರು ಅನೇಕ ಪದ (ಗುರಿ, ಸ್ಥಾನ, ಮಾರ್ಗ)ಗಳನ್ನೂ ಹಿಡಿಯುವ ಹಾಗೆ, ಅಲ್ಲಿರುವ ವಜ್ರಲೇಪದ ಶಿಲೆಗಳು ಐಶ್ವರ್ಯಮದವುಳ್ಳವರನ್ನು ಮುನ್ನಡೆದು ಆಶ್ರಮಕ್ಕೆ ಬಾರದಂತೆ ಅವರ ಕಾಲುಗಳನ್ನು ಹಿಡಿದುಕೊಳ್ಳುವುವು.

---

೧. ಸದಸನ್ಮತಿಗಳ್ ಪಡೆವಂದದಿಂ ವಿವೇಕಾವಿವೇಕಪಥಮಂ ಮುಂ ಪೊರ್ದಿದರಂ ಪಿಡಿವುವು ಸಲೆಮಿಡುಕದಂತು ತದ್ವನದ ವಜ್ರಲೇಪದ ಶಿಲೆಗಳ್ (ಕಗ) ೨. ತಡನ್ರಡೆವ (ಖ) ೩. ಧೇನುಗಳವನೆ ಮೆಚ್ಚಿ (ಕ) ಧೇನುಗಳವನಮರ್ಚಿ (ಖ)

ನಲಿದೊಡವರಿವುವು ತಾಯ್ಗಳ
ಮೊಲೆಯಂ ಪಲ್ಲಟದಿನುಣ್ಬುತೊಱಗಿರ್ಪುವು ಮೆ
ಯ್ಗಲಸಿರೆ ಸಿಂಹದ ಶರಭದ
ಪುಲಿಯಾನೆಯ ಹೋಮಧೇನುವಿನ ಶಿಶುತತಿಗಳ್ ೪೪

ಯೋಗಿಗಳಿರ್ಪ ತಮಾಲಲ
ತಾಗೃಹದೋವರಿಗಳೊಳಗೆ ಸೊಡರ್ಗಳುದಂಚ
ದ್ಭೋಗಮಣಿಯಾಗೆ ದೀವಿಗೆ
ಯಾಗಿರ್ಪುವು ಫಣಿಗಳನುಪಮಂ [1]ಯೋಗಬಲಂ ೪೫

ಯಮಿಗಳ ಹೋಮಾಕ್ಷತಚರು
ಸಮಿತ್ಕುಶಂ ಸೂಸಿದಂಗಳಂಗಳ ಕಸವಂ
ಸಮಯಂದಪ್ಪದೆ ತೊಡೆವುವು
ಚಮರೀಮೃಗವಾತ್ಮವಾಳಸಮ್ಮಾರ್ಜನಿಯಿಂ ೪೬

ಕರಿಣಿಗಳಾಯೆಡೆಯೊಳ್ ಪು
ಷ್ಕರಶೀಕರನಿಕರದಿಂದೆ ನೀರ್ದಳಿವುವು [2]ಕ
ಮ್ಮರಲಿಂ ವನ ಜಂಗಮವ
ಲ್ಲರಿಗಳ್ ಬಂದಲ್ಲಿ ವಿರಚಿಪುವು ಪೂವಲಿಯಂ ೪೭

ಯತಿವರರ ಹೋಮಚರುಸಂ
ತತಿಗಳ ಮೇಲೆಱಗದಂತು ಮಕ್ಷಿಕಮಶಕ
ಪ್ರತತಿಯನಾತ್ಮಚಲತ್ಕ
ರ್ಣತಾಳವೃಂತದೊಳೆ ಸೋವುವಿಭಕಲಭಂಗಳ್ ೪೮

೪೩. ಮುನಿಗಳ ಆಜ್ಞಾಬಲದಿಂದ ಪರಸ್ಪರ ವೈರವನ್ನೂ ಕೋಪವನ್ನೂ ಬಿಟ್ಟು ಸಹಜ ವಿರೋಧದ ಹುಲಿ ಜಿಂಕೆಗಳೂ, ಸಿಂಹ ಆನೆಗಳೂ, ನವಿಲು ಹಾವುಗಳೂ ಕೆಳೆಗೊಂಡಿರುವುವು. ಅವುಗಳನ್ನು ನೋಡಿ ಮೆಚ್ಚಿ ಮುನಿಧೇನುಗಳು ಬಯಲಿನಲ್ಲಿ ನಿರ್ಭೀತಿಯಿಂದ ಚರಿಸುವುವು. ೪೪. ಅಲ್ಲಿ ಸಿಂಹ ಶರಭಗಳೂ ಆನೆಗಳೂ ಹುಲಿಗಳೂ ಹೋಮಧೇನುಗಳೂ ನಲಿದು ಒಡನೆ ಸಂಚರಿಸುವುವು. ಅವುಗಳ ಮರಿಕರುಗಳು ಬೇರೆ ಪ್ರಾಣಿಗಳ ಮೊಲೆಗಳನ್ನೂ ಭೇದವಿಲ್ಲದೆ ಕುಡಿಯಲೂಬಹುದು. ಬೇರೆ ಪ್ರಾಣಿಗಳ ಪಕ್ಕದಲ್ಲಿ ಮಲಗಿರುವುದೂ ಉಂಟು. ೪೫. ಯೋಗಿಗಳಿರುವ ಹೊಂಗೆಯ ಮರಗಳ ಪರ್ಣಶಾಲೆಯಲ್ಲಿ ಸರ್ಪಗಳ ಹೆಡೆಯ ಮಣಿಗಳು ಭೋಗರತ್ನವಾಗಿಯೂ ದೀಪಗಳಾಗಿಯೂ ಇರುವುವು. ಯೋಗಬಲವು ಅನುಪಮವಾದುದು! ೪೬. ಋಷಿಗಳ ಹೋಮದ ಅಕ್ಷತೆ ಚರು ಸಮಿತ್ತು ದರ್ಭೆಗಳಿಂದ ಚೆಲ್ಲಿ ಆದ ಕಸವನ್ನು ಚಮರೀಮೃಗಗಳು ಸಮಯತಪ್ಪದೆ ತಮ್ಮ ಬಾಲದ ಪೊರಕೆಯಿಂದ ಗುಡಿಸುವುವು. ೪೭. ಚಮರೀಮೃಗಗಳು ಗುಡಿಸಿದ ಸ್ಥಳಕ್ಕೆ ಹೆಣ್ಣಾನೆಗಳು ತಮ್ಮ ಸೊಂಡಿಲಿನ ತುದಿಯಿಂದ ತಂದ ನೀರನ್ನು ಚಿಮುಕಿಸಿ

---

೧. ಯೋಗಿಬಲಂ (ಖ)  ೨. ಕಮ್ಮರಲಲರಿಂ (ಖ)

ಎಳವಿಸಿಲೊಳ್ ಮುನಿಬಾಲರ್
ಜಲಧೌತಂ ಮಾಡಿ ಕಟ್ಟೆ ಸಾರಂಗಂ ನಿ
ಶ್ಚಲತೆಯಿನಾಱಿಸುವುದು ವ
ಲ್ಕಲಕೌಪೀನಂಗಳಂ ಕವಲ್ಗೊಂಬುಗಳೊಳ್ ೪೯

ತನುಕಂಡೂತಿ ತಪೋಧನ
ತನುಕಷಣದೆ ಪಸಿವು ಹೋಮದೂರ್ವೆಯೆ ತೃಷೆ ಪಾ
ವನಪಾತ್ರಜಲದೆ ಕಿಡೆ ಮೆ
ಚ್ಚನಿಂದೆ ಮೃಗಶಿಶುಗಳೆಸೆವುವಾ ವನಗೃಹದೊಳ್ ೫೦

ಒಡಗೂಡಿ ವೇದವೋದುವು
ವೊಡನೋದುವ ವಟುಗಳೋದನಾಲಿಸಿ ತಪ್ಪಂ
ಪಿಡಿವುವುಪನ್ಯಾಸದೆ ಬ
ಕ್ಕುಡಿಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್ ೫೧

ಮುನಿಬಾಲಕಿಯರ್ ಮಧ್ಯಂ
ದಿನದೊಳ್ [1]ಬಂದರ್ಘ್ಯಜಲಮನುಯ್ವೆಡೆಯೊಳ್ ಮೇ
ಲೆ ನೆಟಿಲ್ ಪುದಿದೊದವಿರೆ ಸೋ
ಗೆನವಿಲ್ಗಳ್ ಸೋಗೆವಿರ್ಚಿ ಬರ್ಪುವು ನಭದೊಳ್ ೫೨

ಸಾರಿಸುವುವು. ವನದ ಚಲಿಸುವ ಬಳ್ಳಿಗಳು ಹೂಗಳನ್ನು ತಂದು ಅಲ್ಲಿ ಹೂಬಲಿಗಳನ್ನು ಇಡುವುವು. ೪೮. ಆನೆಯ ಮರಿಗಳು ಋಷಿವರ್ಯರು ಹೋಮಕ್ಕಾಗಿ ಸಿದ್ಧಪಡಿಸಿರುವ ಚರು ಮೊದಲಾದವುಗಳ ಮೇಲೆ ನೊಣಗಳೂ ಸೊಳ್ಳೆಗಳೂ ಮುತ್ತದಂತೆ ತಮ್ಮ ಚಲಿಸುವ ಕಿವಿಗಳೆಂಬ ಬೀಸಣಿಗೆಗಳಿಂದ ಬೀಸಿ, ಅವನ್ನು ಅಟ್ಟುವುವು. ೪೯. ಮುನಿಬಾಲಕರು ಸ್ನಾನಮಾಡಿ, ಒಗೆದು ಶುದ್ಧಿಗೊಳಿಸಿ, ಆಶ್ರಮದ ಗಂಡು ಜಿಂಕೆಗಳ ಕವಲು ಕೊಂಬುಗಳ ಮೇಲೆ ಹರಡಿದ ಒದ್ದೆಯ ನಾರುಬಟ್ಟೆ ಕೌಪೀನಗಳನ್ನು ಜಿಂಕೆಗಳು ಎಳೆಬಿಸಿಲಿನಲ್ಲಿ ಚಲಿಸದೆ ಒಂದೇ ಕಡೆಯಲ್ಲಿ ನಿಂತುಕೊಂಡು ಒಣಗಿಸುತ್ತವೆ. ೫೦. ಆ ವನದ ಆಶ್ರಮಗಳಲ್ಲಿ ಜಿಂಕೆಯ ಮರಿಗಳು, ತಮ್ಮ ಮೈನವೆಯನ್ನು ಋಷಿಗಳ ಮೈಗೆ ಉಜ್ಜಿಕೊಳ್ಳುವುದರಿಂದ ಹೋಗಲಾಡಿಸಿಕೊಳ್ಳುವುವು, ಹೋಮಕ್ಕೆ ತಂದ ಗರುಕೆಯ ಹುಲ್ಲಿನಿಂದ ಹಸಿವನ್ನಡಗಿಸಿಕೊಳ್ಳುವುವು. ಕಮಂಡಲದ ನೀರಿನಿಂದ ಬಾಯಾರಿಕೆಯನ್ನು ತೀರಿಸಿಕೊಳ್ಳುವುವು. ಹೀಗೆ ಅವು ಸಂತೋಷದಿಂದ ಇರುವುವು. ೫೧. ಋಷ್ಯಾಶ್ರಮದಲ್ಲಿರುವ ಗಂಡು ಹೆಣ್ಣು ಗಿಳಿಗಳು-ವೇದವನ್ನು ಕಲಿಯುವ ಬ್ರಹ್ಮಚಾರಿ ವಿದ್ಯಾರ್ಥಿಗಳೊಡನೆ ತಾವೂ ವೇದವನ್ನು ಕಲಿಯುವುವು. ಪುನರಾವೃತ್ತಿ ಮಾಡುವಾಗ ಮತ್ತು ಬೇರೆ ಸಂದರ್ಭಗಳಲ್ಲಿ ವಟುಗಳು ಹೇಳುವುದರಲ್ಲಿ ತಪ್ಪೇನಾದರೂ ಕಂಡರೆ ತಿಳಿಸುವುವು. ಮುನಿಗಳು ಉಪನ್ಯಾಸ ಮಾಡುವಾಗ ಈ ಗಿಳಿಗಳು ಆ ವಿಷಯವಾಗಿ ಚರ್ಚೆಮಾಡುತ್ತವೆ.

---

೧. ಬಂದಗ್ರ (ಖ)

ಯತಿವನಿತಾವಿಲಾಸಗತಿಯಿಂ ಗತಿಗೆಟ್ಟುವಿವೆಂದು ನಿಂದಿಸಲ್
ಗತಿಗಿಡಿಪಾಜ್ಞೆಯುಳ್ಳವರೆ ಸದ್ಗತಿಯಂ ಕುಡಲಾರ್ಪರೆಂದು ಸಂ
ತತಮುಪ[೧]ಧಾವಿಪಂತೆ ಯತಿಕಾಮಿನಿಯರ್ ಮೊಗೆದುಯ್ವ ನೀರ್ಗಳಂ
ಲತೆಗೆಱೆವಲ್ಲಿ [೨]ಕೂಡಿ ಬೞೆಯೊಳ್ ಸುೞೆದಾಡುವುವಂಚೆವಿಂಡುಗಳ್ ೫೩

ಭಂಗಮನಾಳ್ದುವೀಕೆಯರ ಕುಂತಳವೆಂಬುದದಿರ್ಕೆ ತುಂಬಿಗಳ್
ಭಂಗಮನಾಳ್ದುವೀ ಮುನಿವಧೂಟಿ ಕುರುಳ್ಗಳಿನೆಂದು ಭಂಗಿಸಲ್
ಭಂಗಚಿಕಿತ್ಸೆಗೆಯ್ದಪುವೆನಲ್ ದುರಿತಾಪಹಮಪ್ಪ ಹೋಮಧೂ
ಮಂಗಳ ಕಂಪನುಣ್ಬುವಳಿರಾಜಿಗಳಾ ಮುನಿಗೇಹರಾಜಿಯೊಳ್ ೫೪

ವ॥ ಆಗಳ್

ಒಡವರ್ಪೆಂ [೩]ಬೆಸಸೆಂಬ ಕೈಗುಡುವ ತೀರ್ಥಕ್ಕುಯ್ವ ದೇವಾರ್ಚನ
ಕ್ಕೆಡೆಯಂ ಮಾಡುವ ಹೋಮಸಾಧನ [೪]ಸಮಿದ್ದರ್ಭಾರ್ಘ್ಯತೋಯಂಗಳಂ
ಕುಡುವಿರ್ದಲ್ಲಿಗೆ ಕಂದಮೂಲಫಲಮಂ ತಂದೀವ ಪರ್ಯಾಪ್ತಿಯಿಂ
ಪಡೆಗುಂ ತುಷ್ಟಿಯನಿಂತು ವೃದ್ಧಯತಿಗಳ್ಗಾಸ್ಥಾನದೊಳ್ ವಾನರಂ ೫೫

೫೨. ಋಷಿಬಾಲಕಿಯರು ಮಧ್ಯಾಹ್ನಕಾಲದಲ್ಲಿ ನದಿಗೋ ಸರೋವರಕ್ಕೋ ಹೋಗಿ ಅರ್ಘ್ಯೋದಕವನ್ನು ತರುವಾಗ ಗಂಡುನವಿಲುಗಳು ತಮ್ಮ ಗರಿಗಳನ್ನು ಬಿಚ್ಚಿ ಆ ಬಾಲೆಯರಿಗೆ ನೆಳಲಾಗುವಂತೆ ಅವರ ಮೇಲುಗಡೆಯಲ್ಲಿ ಆಕಾಶದಲ್ಲಿ ಹಾರಿಬರುವುವು. ೫೩. 'ಮುನಿವನಿತೆಯರ ನಡಿಗೆಯ ವಿಲಾಸಗತಿಯಿಂದ ಈ ಹಂಸಿಗಳು ಗತಿಗೆಟ್ಟವು!' ಎಂದು ಜನರು ಅವನ್ನು ನಿಂದಿಸಿದರು. ಆಗ ಹಂಸಿಗಳು 'ಹೌದು, ಗತಿಗೆಡಿಸಲು ಸಮರ್ಥರಾದವರೇ ಸದ್ಗತಿಯನ್ನು ಕೊಡಬಲ್ಲರು!' ಎಂಬಂತೆ ಆ ಹಂಸದ ಹಿಂಡುಗಳು ಹೋಗಿ, ನೀರನ್ನು ಮೊಗೆದು ಬಳ್ಳಿಗಳಿಗೆ ಎರೆಯುವ ಮುನಿವನಿತೆಯರನ್ನು ಹಿಂಬಾಲಿಸಿಕೊಂಡಿರುತ್ತವೆ! ೫೪. ಮುನಿ ಸುವಾಸಿನಿಯರ ಮುಂಗುರುಳು ಭಂಗ ವಕ್ರತೆ-ಅವಮಾನವನ್ನು ಪಡೆದುವು ಎಂಬುದು ಹಾಗಿರಲಿ, ತುಂಬಿಗಳೂ ಇವರ ಕುರುಳುಗಳಿಂದ ಭಂಗವನ್ನು (ಸೋಲನ್ನು) ಪಡೆದವು ಎಂದು ನೋಡಿದವರು ಭಂಗಿಸಿದುದರಿಂದ ಋಷಿಪತ್ನಿಯರಿಗೆ ಋಷಿಗಳಿಗೆ ತಮ್ಮಿಂದ ಅಪರಾಧವಾದಂತಾಯಿತು ಎಂದುಕೊಂಡ ತುಂಬಿಗಳು ಆ ಪಾಪಪರಿಹಾರ ಪ್ರಾಯಶ್ಚಿತ್ತಾರ್ಥವಾಗಿಯೋ ಎಂಬಂತೆ (ಭಂಗಚಿಕಿತ್ಸೆ = ವಕ್ರತೆಯನ್ನು ಪಡೆಯುವ ಪ್ರಾಯಶ್ಚಿತ್ತ) ಹೋಮ ಧೂಮದ ವಾಸನೆಯನ್ನು ಸೇವಿಸುತ್ತಿದ್ದುವು. ವ॥ ಆಗ ೫೫. ಆ ಆಶ್ರಮದಲ್ಲಿ ಕಪಿಯು ವೃದ್ಧರಾದ ಋಷಿಗಳಿಗೆ "ಆಜ್ಞಾಪಿಸಿ, ಜತೆಯಲ್ಲಿ ಬರುತ್ತೇನೆ" ಎಂದು ಹೇಳುತ್ತಲೂ ಕೈಹಿಡಿದುಕೊಂಡು ತೀರ್ಥಕ್ಕೆ

---

೧. ಸೇವಿಪಂತೆ (ಮೊಅ) ೨. ಕೂಡೆ (ಖ) ೩. ಬೆಸನೆಂಬ (ಕಗ) ೪. ಸಮಿದ್ದರ್ವ್ಯಾರ್ಘ್ಯ (ಖ)

ಎಡ್ಡವೆನಲಿಂಡೆಗಟ್ಟುವ
ಗದ್ದುಗೆಗುಡುವೆಡೆಗೆ ನೀರನಡಕುವ ಫಲಮಂ
ಬಡ್ಡಿಸಿ [1]ನಿವೇದ್ಯಮೀವೀ
ಗೊಡ್ಡಾಟದ ಮುಸುಗಳೆಸೆವುವಾ ಮುನಿವನದೊಳ್ ೫೬

ಮುನಿಧೇನುಗಳಂ ಕಾವುವು
ಮುನಿವನಿತೆಯರ್ಗಜ್ಜಗಾಪೆನಿಪ್ಪುವು ಮುನಿಗೇ
ಹನಿಕಾಯದ ಬಾಗಿಲ್ಗಾ
ದು ನಿಲ್ವುವಂತಲ್ಲಿ ಜಂಬುಕಂಗಳ್ ಸತತಂ ೫೭

ಈಯೆ ಮನಕ್ಕನುಕ್ರಮತಪಂ ಪರಿಣಾಮಮ[2]ನಂತೆ ಕೃಚ್ಛ್ರ ಚಾಂ
ದ್ರಾಯಣ [3]ಪರ್ಣಭಕ್ಷ ಜಲಭಕ್ಷ ಸಮೀರಣಭಕ್ಷವೃತ್ತಿಯೊಳ್
ಕಾಯಮನೆಯ್ದೆ ಸಾರ್ಚೆ ಬಟಿಕಂ ಮುನಿಗಳ್ ನಿಜಜೀವನಕ್ಕೆ ಯೋ
ಗಾಯತಸೌಖ್ಯಮೆಂಬಮೃತಸೇವೆಯೆ [4]ಕಾರಣವಾಗೆ ವರ್ತಿಪರ್ ೫೮

ಸ್ವರ್ಗಫಲಮಂ ಸ್ವಕೀಯಭು
ಜಾರ್ಗಳದಿಂ ನಿಳ್ಕಿ ಕಳೆದುಕೊಂಡಪನೀತಂ
ನಿರ್ಗಹನದಿನೆನೆ ಗಹನಾಂ
ತರ್ಗತನೆಸೆದಿರ್ದನೂರ್ಧ್ವಬಾಹುವದೊರ್ವಂ ೫೯

ಕರೆದುಕೊಂಡು ಹೋಗುತ್ತಲೂ ದೇವಾರ್ಚನೆಗೆ ಸ್ಥಳವನ್ನು ಮಾಡುತ್ತಲೂ ಹೋಮಕ್ಕೆ ಬೇಕಾದ ಸಮಿತ್ತು ದರ್ಭೆ ಅರ್ಘ್ಯೋದಕಗಳನ್ನು ತಂದುಕೊಡುತ್ತಲೂ ಅವರಿರುವ ಸ್ಥಳಕ್ಕೇ ಕಂದಮೂಲಫಲಗಳನ್ನು ತಂದುಕೊಡುತ್ತಲೂ ಸೇವೆಗೆಯ್ಯುವುದರಿಂದ ಅವರನ್ನು ತೃಪ್ತಿಪಡಿಸಿ ತಾನೂ ಸಂತುಷ್ಟಿಗೊಳ್ಳುವುದು. ೫೬. ಆ ಮುನಿವನದಲ್ಲಿ ಚೇಷ್ಟೆಮಾಡುವ ಕಪ್ಪುಮುಖದ ಕೋತಿಗಳು ಪೂಜೆಗೆ ಮನೋಹರವಾಗಿ ಹೂಮಾಲೆಯನ್ನು ಕಟ್ಟುವ, ಪೀಠವನ್ನು ಕೊಡುವ, ಬೇಕಾದೆಡೆಗೆ ನೀರನ್ನು ತಂದು ತುಂಬುವ ಹಣ್ಣುಕಾಯಿಗಳನ್ನು ಸಿದ್ಧಪಡಿಸಿ ನೈವೇದ್ಯಕ್ಕೆ ಇಡುವ ಕೆಲಸಗಳನ್ನು ಮಾಡುತ್ತವೆ. ೫೭. ಅಲ್ಲಿ ನರಿಗಳು ಋಷಿಗಳ ಹಸುಗಳನ್ನು ಕಾಯುವುವು. ಮುನಿವನಿತೆಯರಿಗೆ ಕೆಲಸಕ್ಕೆ ಅಜ್ಜನಂತೆ ಕಾವಲಿರುವುವು. ಋಷಿಗಳ ಮನೆಗಳ ಬಾಗಿಲನ್ನು ಸಂತತವಾಗಿ ಕಾಯುವುವು. ೫೮. ಅಲ್ಲಿ ಋಷಿಗಳು ತಮ್ಮ ಮನಸ್ಸಿನ ಮೇಲೆ ಕ್ರಮವಾಗಿ ತಪಸ್ಸು ಪರಿಣಾಮವನ್ನುಂಟುಮಾಡುತ್ತಿರಲು, ಕೃಚ್ಛ್ರ, ಚಾಂದ್ರಾಯಣ, ಪರ್ಣಭಕ್ಷಣ, ಜಲಪಾನ, ವಾಯುಭಕ್ಷಣಗಳಿಂದ ದೇಹವನ್ನು ಕ್ಲೇಶಗೊಳಿಸಿ, ಕಡೆಗೆ ತಮ್ಮ ಜೀವನಕ್ಕೆ ಯೋಗಸಮಾಧಿಯ ಅಮೃತಸೇವನೆಯೇ ಕಾರಣವಾಗಲು (ನಿರಾಹಾರದಿಂದ) ಜೀವಿಸುವರು, ವರ್ತಿಸುವರು. ೫೯. ಕಾಡಿನ ಒಳಭಾಗದಲ್ಲಿ

---

೧. ನೀಡುವ ವೇಧೆಯ (ಖ) ೨. ನಕ್ಕೆ (ಕಗ) ೩. ಪರ್ಣಭಕ್ಷಣ ಸಮೀರಣಭಕ್ಷಣ ವೃತ್ತಿಯಿಂದಮೇಂ (ಕ) ೪. ಜೀವನವಾಗಿ ವರ್ತಿಪರ್ (ಕಗ)

ತ್ರಿದಶಪದಸುಖಮನೆಯ್ದಲ್
ತುದಿಗಾಲೊಳ್ ನಿಂದನೀತನೆಂಬಿನಮಂಗು
ಷ್ಠದ ಕೊನೆಯನೂಱಿ ನೆಲದೊಳ್
ಪದುಳಂ ನಿಂದಿರ್ದು ಮಾಳ್ಪನೊರ್ವಂ ತಪಮಂ ೬೦

ಕಪಿಯಂತಷ್ಟಾಪದದಂ
ತೆ ವನಸ್ಪತಿಯಂತೆ [1]ತನ್ನೊಳುತ್ಪಾದಕ ವೃ
ತ್ತಿ ವಿದಿತಮಾಗಿರೆ ಯೋಗಿ
ಪ್ರವರಂ ತಲೆಯೂಱಿ ತಪವನೊರ್ವಂ ಮಾಳ್ಪಂ ೬೧

ವ|| ಅಂತುಮಲ್ಲದೆಯುಂ

ಒಡಲಡಗುವೇಳ್ದು ತಪುತಂ
ದೊಡೆ ಪಾಟ್ಸಿನೆವುಲ್ಲನುರ್ಚುವಂದದಿನೆಲ್ವಂ
ಪಿಡಿದುರ್ಚ ಬೇಳ್ವರರೆಬರ್
ಸುಡಲಟ್ಟೆಸಲಾಱದಗ್ನಿ ಕಂಟಳಿಸುವಿನಂ ೬೨

ಜಲವೃಷ್ಟಿಮಾಣ್ದು ಧೈರ್ಯ
ಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ಪೊಡೆವ ಸಿಡಿ
ಲ್ಗಳ ಮಟಿಗಳೆಱಗೆ ಯೋಗಾ
ಸ್ಖಲಿತಮನರ್ ಬಯಲೊಳಿರ್ಪರಭ್ರಾಗಮದೊಳ್ ೬೩

[2]ಪುಳಕಂ ಪೊಣ್ಮೆದೊಡೈಕಿಲ
ಪುಳಕೋದ್ಗಮಮೆಂದು ಯೋಗಯೋಗ್ಯಸುಖೋದ್ಯ
ತ್ಪುಳಕಂದೋಱದ ಹಿಮವ
ಜ್ಜಳಂಗಳಂ ಪೊಕ್ಕು ಮಾಗಿಯೊಳ್ ಕೆಲರಿರ್ಪರ್ ೬೪

ಒಬ್ಬನು ತೋಳನ್ನು ಮೇಲಕ್ಕೆತ್ತಿ ನೀಡಿ ತಪಸ್ಸನ್ನು ಮಾಡುತ್ತಿದ್ದನು. ಈತನು ಅಗುಳಿಯಂತಿರುವ ತನ್ನ ತೋಳಿನ ಬಲದಿಂದಲೇ ಸ್ವರ್ಗಫಲವನ್ನು ನಿಲುಕಿಸಿ ಕೊಂಡು ಸಾಮರ್ಥ್ಯದಿಂದ ಕಿತ್ತುಕೊಳ್ಳುವನು ಎನ್ನುವಂತೆ ಕಂಗೊಳಿಸುತ್ತಿದ್ದನು. ೬೦. "ಸ್ವರ್ಗಸುಖವನ್ನು ಪಡೆಯಲು ಈತನು ತುದಿಗಾಲಿನಲ್ಲೆ ನಿಂತಿದ್ದಾನೆ ಎನ್ನುವಂತೆ ಒಬ್ಬ ಋಷಿ ನೆಲದ ಮೇಲೆ ತನ್ನ ಕಾಲಿನ ಹೆಬ್ಬೆರಳನ್ನು ಮಾತ್ರ ಊರಿ, ಸುಖದಿಂದ ನಿಂತು ತಪಸ್ಸನ್ನು ಮಾಡುತ್ತಿದ್ದನು. ೬೧. "ಯೋಗಿಶ್ರೇಷ್ಠನೊಬ್ಬನು ಕಪಿಯಂತೆಯೂ ಶರಭದಂತೆಯೂ ವನಸ್ಪತಿಯಂತೆಯೂ ಉತ್ಪಾದಕನಾಗಿ ನೆಲದ ಮೇಲೆ ತಲೆಯನ್ನೂರಿ ನಿಂತು ತಪಸ್ಸನ್ನು ಮಾಡುತ್ತಿದ್ದನು. ವ|| ಹಾಗೂ ಅಲ್ಲದೆ ೬೨. "ಹೋಮಮಾಡಿ, ದೇಹದ ಮಾಂಸವು ಮುಗಿದು ಹೋಗಲು, ಹಳೆಯುನೆಯ ಹುಲ್ಲನ್ನು ಎಳೆಯುವಂತೆ ದೇಹದ ಎಲುಬನ್ನೇ ಹಿಡಿದೆಳೆದುಕೊಂಡು, ಅಗ್ನಿಯು ಅವುಗಳನ್ನು ಸುಟ್ಟು ಜೀರ್ಣಿಸಿಕೊಳ್ಳ

೧. ತನ್ನೊಳುತ್ಪಾದಿತ (ಖ) ೨. ಪುಳಕಂ ಪೊಣ್ಮೆದೊಡೆ ಕೆಲರ್ ಪುಳಕೋದ್ಗಮಮೆಂಬರೆಂದು ಯೋಗಸುಖೋದ್ಯತ್ಪುಳಕಮುಮಂ ತೋಱದೆ ಹಿಮವಳುರ್ವ ಜಳಂಬೊಕ್ಕು (ಕಗ)

[೧]ರವಿಸೆಡೆಗುವಗ್ನಿ ಕಂಪಿಸು
ಗುವಾತ್ಮತೇಜಕ್ಕೆ ತಮಗೆ ರವಿಯಗ್ನಿಯ ತೇ
ಜವದಾವರಿದೆನಿಸಿ ಮುನಿ
ಪ್ರವರರ್ [೨]ಪಂಚಾಗ್ನಿಸಾಧಕರ್ ಬೇಸಗೆಯೊಳ್ ೬೫

ಅನವಧಿ [೩]ಕಾಲಾಸನದಿಂ
ತನುವಂ ಪುತ್ತಡರ್ದು ಮುಚ್ಚೆ ಯೋಗಾಮೃತಸೇ
ವನೆಯಿನನಶ್ವರಮಿರ್ಪರ್
ಮುನಿಗಳವಿದ್ಯಾತಿರೋಹಿತಬ್ರಹ್ಮದವೋಲ್ ೬೬

ವ|| ಎಂದು ಪೇೞೆ ಪದ್ಮೋದರನಾದರಂಬೆರಸು ಕೇಳ್ದು ಪಶ್ಚಿಮ ಕೃತೋರ್ಜಯಂತಭೂಧರೋಪತ್ಯಕನಾಗಿ ನಿತ್ಯಪ್ರಯಾಣಂ ನಡೆವಲ್ಲಿ

ದಿವಿಜಾನೋಕಹ ಕಾಮಧೇನುಗಳೆ ದಿವ್ಯಾವಾಸ ದಿವ್ಯಾನ್ನ ದಿ
ವ್ಯವಿಲೇಪಾದ್ಯಭಿವಾಂಛೆಯಂ ಶಿಬಿರದೊಳ್ ಬಂದಿತ್ತುವಂದಿಂದಿರಾ
ಧವನಾಜ್ಞಾಪಿಸೆ ಬೇಱೆವೇಱವರವರ್ಗಲ್ಲಲ್ಲಿಗೇಂ ಸೌಖ್ಯಗೌ
ರವಮಂ ಪೆತ್ತುದೊ ಜೈತ್ರಯಾತ್ರೆ ಕಟಕಕ್ಕಾ ದ್ವಾರಕಾವಾಸದಿಂ ೬೭

ಲಾರದೆ ಕುಗ್ಗುವಂತೆ ಕೆಲವರು ಅವುಗಳಿಂದ ಹೋಮವನ್ನು ಮಾಡುವರು. ೬೩. ಮಳೆ ಸುರಿಯುವುದು ನಿಂತು ಧೈರ್ಯವನ್ನು ಕೆಡಿಸುವುದಕ್ಕಾಗಿ ಬೆಟ್ಟಗಳು ಸಿಡಿದೊಡೆಯುವಂತೆ ಸಿಡಿಲುಮಳೆಗಳು ಸುರಿದರೂ ಯೋಗಿಗಳು ಕೆಲವರು ಸ್ಥಿರಮನಸ್ಕರಾಗಿ ಬಯಲಿನಲ್ಲೇ ಇರುವರು. ೬೪. "ಕೆಲವರು ಯೋಗಿಗಳು ಮಾಗಿಯ ಕಾಲದಲ್ಲೂ ತಮಗೆ ರೋಮಾಂಚನವಾದರೆ ಅದು ಮಾಗಿಯ ಹಿಮದ ರೋಮಾಂಚನವೆಂದುಕೊಂಡು ಸುಖದಿಂದ ಪುಳಕವಾಗುವುದು ಯೋಗಮಾರ್ಗಕ್ಕೆ ಯೋಗ್ಯವಲ್ಲೆಂದು ಹಿಮಪೂರ್ಣವಾದ ನೀರನ್ನು ಹೊಕ್ಕು ತಪಸ್ಸನ್ನು ಮಾಡುವರು. ೬೫. "ಆತ್ಮತೇಜಸ್ಸಿಗೆ ಸೂರ್ಯನು ಹೆದರಿ ಕುಗ್ಗುವನು; ಅಗ್ನಿಯು ನಡುಗುವನು; ಆದುದರಿಂದ ನಮಗೆ ಈ ಸೂರ್ಯಾಗ್ನಿಗಳ ತೇಜಸ್ಸನ್ನು ಸಹಿಸುವದೇನಸಾಧ್ಯವೇ ಎಂದು ಕೆಲವರು ಯೋಗಿವರ್ಯರು ಬೇಸಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲಿದ್ದು ಯೋಗಸಾಧನೆಯನ್ನು ಮಾಡುವರು. ೬೬. ಆರಂಭದ ಅವಧಿಯೇ ತಿಳಿಯದ ಎಷ್ಟೊ ಕಾಲದಿಂದಲೂ ಯೋಗಾಸನದಲ್ಲಿ ಸ್ಥಿರವಾಗಿರುವವರ ಮೇಲೆ ಹುತ್ತವು ಬೆಳೆದು ಅವರನ್ನು ಮುಚ್ಚಿದ್ದರೂ ಅವರು ಯೋಗಾಮೃತಸೇವನೆಯಿಂದ ಅವಿದ್ಯೆಯಿಂದ ಮರೆಯಾಗಿರುವ ಬ್ರಹ್ಮದಂತೆ ನಶಿಸದೆ ಸ್ಥಿರವಾಗಿರುವರು". ವ|| ಎಂದು ಉದ್ಧವನು ಹೇಳಿದನು. ಕೃಷ್ಣನು ಆದರದಿಂದ ಅದನ್ನು ಕೇಳಿ, ಊರ್ಜಯಂತ ಗಿರಿಯನ್ನು ಪಶ್ಚಿಮಕ್ಕೆ ಇರುವಂತೆ ಮಾಡಿಬಿಟ್ಟು ಅದರ ತಪ್ಪಲು ಪ್ರದೇಶದಲ್ಲೇ ನಿತ್ಯಪ್ರಯಾಣ ಮಾಡುತ್ತ ಹೋದನು. ಮುಂದೆ

೧. ರವಿಯಗ್ನಿ ಕಂಪಿಸುಗುಮಾ ತವೆ ತೇಜಕ್ಕಂಜಿ (ಖ) ೨. ಪಂಚಾಗ್ನಿಮಧ್ಯದೊಳ್ (ಖ) ೩. ಕಾಲಾನಶನದೆ (ಖ)

ಬಲಸಂಘಟ್ಟನದಿಂ ಮಹೀವನವಶೇಷಂ ಪೋಗೆ [1]ಮತ್ತಂತೆ ಭೂ
ತಲದೊಳ್ ಕೂಡೆ ವಿಚಿತ್ರಭೂರುಹವನಂ ತಳ್ತಂತೆ ನಾನಾ [2]ಪ್ರಭೋ
ಜ್ವಲವಾ ಸ್ತ್ರೀಯರ ರಂಗಮಂಟಪಕುಟೀಗೂಢಾಲಯ[3]ಶ್ರೇಣಿ ಕಂ
ಗೊಳಿಸಲ್ ಬೀಡುವಿಡುತ್ತೆ ನಿಚ್ಚವಯಣಂ ಬಂದಂ ಮುರಧ್ವಂಸಕಂ ೬೮

ಕರಟವ್ಯೂಹಾಂತರೀಪಂ ತುಂಗಬಲತರಂಗಂ ರಥಾನೀಕನಕ್ರಂ
ಶರಶಸ್ತ್ರೋದ್ಯೋತನೀರಂ ಸುಭಟಪಟಲವಾದಿತ್ರಕೋಳಾಹಳಾಭೀ
ಳರವಂ ರಾಜನ್ಯಚೂಡಾಮಣಿಕಿರಣಗಣೌರ್ವಾಗ್ನಿ ಸೈನ್ಯಾರ್ಣವಂ ಸಾ
ಗರವಾತ್ಮಸ್ತ್ರೀಯೊಳೊಂದಿತ್ತೆನಿಸಿ ಯಮುನೆಯಂ ಮುಟ್ಟೆವಂದತ್ತಗುರ್ವಿಂ ೬೯

ತೆರೆಯಿಂ ಸಿಡಿಲ್ದ ನೊರೆವಿಂ
ಡಿರೆ ಪುಷ್ಪಸ್ತಬಕಪಟಲಮೆನೆ ವನತಟದೊಳ್
ಕರಮೆಸೆದುದು ಯಮುನಾನದಿ
ಕುರರೀಬಕಕೋಕಹಂಸಕೇಳೀಸುಭಗಂ ೭೦

ಕದಡಿ ಪದಾತಿಘಟ್ಟನದೆ ಕೋಟಿಸಿಜಾಗಿ ತುರಂಗಮಾಂಘ್ರಿಪಾ
ತದೆ ಪುಡಿವಿಟ್ಟು ಕೂಡೆ ರಥಘಾತದೆ ತೀವಿ ಬಟಿಕ್ಕೆ ದಂತಿದಾ
ನದೆ ಕರಿದಾದುದಿಂತು ಯಮುನಾನದಿ ಕೆಮ್ಮನೆ ದೇಸೆಗಾಯ್ತೆ ಕ
ರ್ದಿದಟೊಳಿನಲ್ಕೆ ದಾಂಟಿದುದು ಕೃಷ್ಣನ ಬೀಡು ಕಳಿಂದಕನ್ಯೆಯಂ ೭೧

ಒಂದೆಡೆಯಲ್ಲಿ ಕಟಕವನ್ನು ನಿಲ್ಲಿಸಿದನು. ೬೭. ಆಗ ಕೃಷ್ಣನ ಆಜ್ಞೆಯಂತೆ ಕಲ್ಪವೃಕ್ಷಗಳೂ ಕಾಮಧೇನುವೂ ದಿವ್ಯಗೃಹಗಳನ್ನೂ ದಿವ್ಯಾನ್ನ ದಿವ್ಯ ವಿಲೇಪನಾದಿಯನ್ನೂ ಸೇನಾಸಮೂಹಕ್ಕೆ ಬೇಕಾದ ಸಕಲವನ್ನೂ ಶಿಬಿರಕ್ಕೇ ಬಂದು ಪ್ರತ್ಯೇಕ ಅವರವರಿಗೆ ಬೇಕಾದುದನ್ನು ಅವರವರಿದ್ದಲ್ಲಿಗೆ ಒದಗಿಸಿದವು. ದ್ವಾರಕಾಪುರದಿಂದ ಹೊರಟ ಜೈತ್ರಯಾತ್ರೆಯು ಆ ಕಟಕಕ್ಕೆ ಅದೆಷ್ಟು ಸೌಖ್ಯಗೌರವವನ್ನು ಉಂಟು ಮಾಡಿತೋ! ೬೮. ಸೈನ್ಯದ ಆಕ್ರಮಣದಿಂದ ಭೂಮಿಯ ಮೇಲಿನ ವನವೆಲ್ಲವೂ ಹಾಳಾಗಿ ಹೋಗಿ ಮತ್ತೆ ಒಡನೆಯೇ ವಿಚಿತ್ರವೃಕ್ಷಗಳ ವನವು ಬೆಳೆದು ಹರಡಿತು ಎನ್ನುವಂತೆ ನಾನಾವರ್ಣಗಳಿಂದ ಹೊಳೆಯುವ ಸ್ತ್ರೀಯರ ರಂಗಮಂಟಪ, ಕುಟೀರ, ರಹಸ್ಯಗೃಹ ಮೊದಲಾದ ಅಂದವಾದ ಮಾರ್ಗ ವಾಸಗೃಹ ಗಳಿರುವೆಡೆಯಲ್ಲಿ ಬೀಡು ಬಿಡುತ್ತ ಆ ಕೃಷ್ಣನು ನಿತ್ಯಪ್ರಯಾಣದಿಂದ ಮುಂದುವರಿದು ಬಂದನು. ೬೯. ಆನೆಗಳ ಗುಂಪೆಂಬ ನೀರೊಳಗಿರುವ ದಡವೂ, ಕುದುರೆಗಳ ಸೇನೆಯೆಂಬ ಅಲೆಯೂ, ರಥಗಳ ಗುಂಪೆಂಬ ಮೊಸಳೆಗಳ ಗುಂಪೂ, ಶಸ್ತ್ರಾಸ್ತ್ರಗಳ ಹೊಳಪೆಂಬ ನೀರೂ, ವೀರಭಟರ ಸಮೂಹದ ವಾದ್ಯಗಳ ಧ್ವನಿಯೆಂಬ ಭಯಂಕರವಾದ ಮೊರೆತವೂ ರಾಜರ ಕಿರೀಟದ ಕಿರಣಸಮೂಹವೆಂಬ ಔರ್ವಾಗ್ನಿಯೂ ಉಳ್ಳ ಸೈನ್ಯಸಾಗರವು ಸಮುದ್ರವು ತನ್ನ ಸ್ತ್ರೀಯೊಡನೆ ಸೇರಿತೆನ್ನುವಂತೆ, ಭಯಂಕರವಾಗಿ, ಯಮುನಾನದಿಯನ್ನು ಸಮೀಪಿಸಿತು. ೭೦. ನದಿಯ ನೀರಿನ ತೆರೆಯಿಂದ ಸಿಡಿದ ನೊರೆಯ ಹಿಂಡುಗಳು ಹೂಗೊಂಚಲುಗಳ

---

೧. ಮತ್ತಂತೆ ತದ್ಬಲದೊಳ್ (ಖ) ಮತ್ತಂತೆಯಾ ತಲದೊಳ್ (ಗ) ೨. ಪ್ರಭೋಜ್ವಲನ ಸ್ತ್ರೀಯುತ (ಖ) ೩. ಶ್ರೇಣಿ ಸಲ್ಲಲಿತಂ (ಕಗ)

ಮುರಮಥನಂ ಬಂದೊಸಗೆಗೆ
ಬರುತಿರೆ ಹರ್ಷಾಶ್ರು ಪೊಱಮಡುತಿರೆ ಪುಳಕಂ
ಪುರಮಂ ಪೊಱಮಟ್ಟೊಡವರೆ
ಪರಿಗ್ರಹಂ ಧರ್ಮತನಯನೊಸೆದಿದಿರ್ವಂದಂ ೭೨

ಬರೆ ರಾಮಾಂಗಜಭೀಮಪಾರ್ಥರೆರಡುಂ ಪಕ್ಕಂಗಳೊಳ್ ಬಂದರಾ
ಭರಣದ್ಯೋತಿ ಪಳಂಚೆ ಕೃಷ್ಣ ಯಮಜರ್ ಪ್ರತ್ಯಂತ[1]ಭೂಭೃತ್ಪರಿ
ಸ್ಫುರಿತಂ ಜಂಗಮ ನೀಲಶೈಲನಿಷಧಾದ್ರೀಂದ್ರದ್ವಯಂ ರತ್ನಕೂ
ಟರುಚಿವ್ಯಾವೃತಮೊಂದನೊಂದಿದಿರ್ಗೊಳಲ್ ಬಂದತ್ತೊ ಪೇೞಿಂಬಿನಂ ೭೩

ವ|| ಅಂತು ಬಂದು ಸಾನಂದಸಂಭ್ರಮಪ್ರಣಯಪರಿರಂಭಣ ಪ್ರಣತಿಗಳಂ ಯಥಾಯೋಗ್ಯಮಾಗೆ ಮಾಡಿ ಕೂಡಿದುಭಯವ್ಯೂಹದುತ್ಸಾಹವಾರಾಶಿಯ ನಿರ್ಘೋಷಮಿದೆಂಬಂತೆ ಬಾಜಿಸುವ ಬದ್ದವಣದ ಘೋಷಮುಮಸದಳಮೆಸೆಯುತ್ತಿರೆ ಅನಂತರಂ

ಸಮೂಹವೆನ್ನುವಂತೆ ವನದ ಪಕ್ಕದ ನದಿಯ ದಡದಲ್ಲಿ ಚೆನ್ನಾಗಿ ಕಾಣಿಸುತ್ತಿದ್ದವು. ಕುರರ ಪಕ್ಷಿಗಳೂ, ಬಕಪಕ್ಷಿಗಳೂ, ಚಕ್ರವಾಕ ಪಕ್ಷಿಗಳೂ, ಹಂಸಪಕ್ಷಿಗಳೂ ವಿಹರಿಸುತ್ತಿದ್ದವು. ಇವೆಲ್ಲವುಗಳಿಂದ ಯಮುನಾನದಿಯು ಬಹು ಮನೋಹರವಾಗಿದ್ದಿತು. ೭೧. ಕೃಷ್ಣನ ಸೇನೆಯು ಯಮುನಾನದಿಯನ್ನು ದಾಟುವಾಗ ನದಿಯ ನೀರು ಕದಡಿ ಹೋಯಿತು, ಅವರ ಕಾಲಿನ ತುಳಿತದಿಂದ, ಕುದುರೆಯ ಸೇನೆಯು ಹಾಯುವಾಗ ಅದರ ಕಾಲಿನ ತುಳಿತದಿಂದ ಆ ನೀರು ಕೆಸರಾಯಿತು. ರಥಸೇನೆಯ ರಥಚಕ್ರಗಳು ಸಾಗಿದುದರಿಂದ ಕೆಸರೆಲ್ಲ ಪುಡಿಯಾಯಿತು. ಆಮೇಲೆ ದಾಟಿದ ಗಜಸೇನೆಯ ಮದೋದಕದಿಂದ ಮತ್ತೆ ತುಂಬಿ ಕಪ್ಪಾಗಿ ಕಾಣಿಸುವಂತಾಯಿತು. ಹಾಗಲ್ಲದೆ ಸುಮ್ಮನೆ ನದಿಯು ಕಪ್ಪಾಗುವುದೇ? ೭೨. ಕೃಷ್ಣನು ಬರುತ್ತಿರುವ ಶುಭಸಮಾಚಾರದಿಂದ ಉಂಟಾದ ಆನಂದಬಾಷ್ಪವು ಸುರಿಯುತ್ತಲೂ ಮೈನವಿರೇಳುತ್ತಲೂ ಇರುವಲ್ಲಿ ಧರ್ಮರಾಜನು ಕುಟುಂಬ ಪರಿವಾರದೊಡನೆ ಪಟ್ಟಣದಿಂದ ಹೊರಟು ನಡೆದು ಪ್ರೀತ್ಯಾದರಪೂರ್ವಕವಾಗಿ ಅವನನ್ನು ಎದಿರುಗೊಂಡನು. ೭೩. ಕೃಷ್ಣನ ಎಡಬಲ ಪಕ್ಕಗಳಲ್ಲಿ ಬಲರಾಮನೂ ಮನ್ಮಥನೂ ಬರುತ್ತಿದ್ದರು. ಎದಿರುಗೊಳ್ಳಲು ಹೋಗುತ್ತಿರುವ ಧರ್ಮರಾಯನ ಎಡಬಲ ಪಾರ್ಶ್ವಗಳಲ್ಲಿ ಭೀಮಾರ್ಜುನರು ಬರುತ್ತಿದ್ದರು. ತಮ್ಮ ಅಕ್ಕ ಪಕ್ಕಗಳಲ್ಲಿ ಬರುತ್ತಿರುವ ಆಶ್ರಿತರಾಜರ ಆಭರಣಗಳ ಪ್ರಕಾಶವು ಹರಡುತ್ತಿರುವಲ್ಲಿ ನಡುವೆ ನಡೆದು ಬರುತ್ತಿರುವ ಕೃಷ್ಣ ಧರ್ಮರಾಜರು ರತ್ನಶಿಖರದ ಕಾಂತಿಯಿಂದ ಕೂಡಿದ, ಪಕ್ಕದ ಉಪ ಪರ್ವತಗಳಿಂದ ಕೂಡಿದ ಚರಿಸುವ ನೀಲಗಿರಿ ನಿಷಧಗಿರಿಗಳು ಒಂದನ್ನೊಂದು

---

೧. ಭೂಭೃತ್ಕರಿಜಂಗಮ (ಕ) ಭೂಭೃತ್ಪರೀಕಲಿತರ್ಜಂಗಮ (ಖ) ಭೂಭೃತ್ಕರಿಚಲಿತಂ (ಗ) ಭೂಭೃತ್ಕರೀಂದ್ರರಟಜ್ಜಂಗಮ (ಮೊಲಿ)

ಭೀಮಂ ಕೊಡೆ[೧]ವಿಡಿಯೆ ಯಮಳರ್
ಚಾಮರಮಂ ಬೀಸೆ ನಯದೆ ಕೈಗುಡೆ ಪಾರ್ಥಂ
ಭೂಮೀಶನೆಸಗೆ ರಥಮಂ
ತಾಮರಸಾಕ್ಷಂ ವಿಲಾಸದಿಂ ನಡೆತಂದಂ ೭೪

ಉಪಮಾನಕ್ಕೆನ್ನೊಳೇಂ ಬಂದಪುವೆ ನೆಗಟ್ದ ನಾಗೇಂದ್ರ ಯಕ್ಷೇಂದ್ರ ದೇವೇಂ
ದ್ರಪುರಂಗಳ್ ಭೋಗದಿಂ ಸಂಪದದಿನೆಸಕದಿಂದೆನ್ನ ಕಾಲ್ವಳ್ಳಿಗಂ ಬಂ
ದಪುವೇ ಪೇಟಿಂದು ಹರ್ಮ್ಯಂಗಳ ಸೊದೆವೆಳಗಿಂದಂ ನಗುತ್ತಿರ್ಪವೋಲ್ ರಂ
ಜಿಪುದಿಂದ್ರಪ್ರಸ್ಥವಂತಾ ಪುರಮನೊಸಗೆಯಿಂ ಬಂದು ಪೊಕ್ಕಂ ಮುಕುಂದಂ ೭೫

ಕವಿವುದ್ಯತ್ಪಟವಾಸದಿಂ ತಳಿವ [೨]ಕಾಶ್ಮೀರಾಂಬುವಿಂದೆತ್ತುವು
ತ್ಸವ [೩]ಚೀನಧ್ವಜದಿಂ ಪೊದಟ್ದ ಪಟಹಪ್ರಧ್ವಾನದಿಂ ಮಾನಿನೀ
ನಿವಹಂ ಸೂಸುವ ಸೇಸೆಯಿಂ ಪೊಳೆವ ನಾನಾತೋರಣಾನೀಕಪ
ಲ್ಲವದಿಂ ಪಲವಿಸಿತ್ತು ಶೋಭೆ ನಗರಕ್ಕಂಭೋಜನಾಭಂ ಬರಲ್ ೭೬

ಹರಿಯೊಂದಾಕಾರದಂಗಚ್ಛವಿಯ ಶತಸಹಸ್ರಾಂಶದೊಂದಂಶಮಂ ಪೋ
ಲ್ತು ರತೀಶಂ ತಾನೆ ಚೆಲ್ವಂ ಸೊಬಗೆನಿಸಿ ಮಿಕ್ಕಂ ಗಡಂತಾದೊಡಿಂದ್ರಾ
ವರಜಂಗೆಂತಪ್ಪ ಚೆಲ್ವೆಂತುಟು [೪]ಸೊಬಗದನಿಂ ನೋೞ್ಪೆವೆಂ[೫]ದೀಕ್ಷಣೌತ್ಸು
ಕ್ಯರಸವ್ಯತ್ಯಸ್ತಶೃಂಗಾರದೆ ಪೊಳೆವೆಳವೆಂಡಿರ್ ಕರಂ ಶೋಭೆವೆತ್ತರ್ ೭೭

ಎದಿರುಗೊಳ್ಳಲು ಬರುತ್ತಿವೆಯೋ ಎನ್ನುವಂತೆ ಬಂದರು. ವ॥ ಹಾಗೆ ಬಂದು ಆನಂದ ಸಂಭ್ರಮ ಪ್ರೀತಿಪೂರ್ವಕವಾದ ಯಥೋಚಿತವಾದ ಆಲಿಂಗನ ವಂದನಾದಿಗಳನ್ನು ಪರಸ್ಪರ ಮಾಡಿ, ಸೇರಿದ ಉಭಯ ಸಮೂಹ ಸಾಗರದ ಮೊರೆತವು ಇದು ಎನ್ನುವಂತೆ ಶುಭಸೂಚಕವಾದ್ಯಗಳು ಅಸಾಧ್ಯವಾಗಿ ಧ್ವನಿಮಾಡುತ್ತಿರುವಲ್ಲಿ, ೭೪. ಭೀಮನು ಕೃಷ್ಣನಿಗೆ ಕೊಡೆಯನ್ನು ಹಿಡಿದನು. ನಕುಲ ಸಹದೇವರು ಚಾಮರವನ್ನು ಬೀಸುತ್ತಿದ್ದರು. ಅರ್ಜುನನು ಹಸ್ತಲಾಘವನ್ನು ಕೊಟ್ಟು ರಥವನ್ನೇರಿಸಿದನು. ಧರ್ಮರಾಜನು ರಥವನ್ನು ನಡೆಯಿಸಿದನು. ಆ ಕೃಷ್ಣನು ಹೀಗೆ ವಿಲಾಸದಿಂದ ರಥದಲ್ಲಿ ಕುಳಿತು ಬಂದನು. ೭೫. "ಪ್ರಸಿದ್ಧವಾದ ಆದಿಶೇಷನ ಭೋಗವತೀಪುರವೂ, ಕುಬೇರನ ಅಲಕಾವತೀಪುರವೂ, ದೇವೇಂದ್ರನ ಅಮರಾವತೀಪುರವೂ, ಭೋಗದಲ್ಲೂ ಸಂಪತ್ತಿನಲ್ಲೂ ಉದ್ಯೋಗದಲ್ಲೂ ನನ್ನ ಪಕ್ಕದ ಕಾಲಿಂದ ಸುತ್ತಬಹುದಾದ ಹಳ್ಳಿಗಾದರೂ ಸಮವಾಗುವುವೇ"; ಎಂದು ಉಪ್ಪರಿಗೆಯ ಮನೆಗಳ ಸುಣ್ಣದ ಹೊಳಪಿನಿಂದ ನಗುತ್ತಿರುವಂತೆ ಕಾಣುವ ಇಂದ್ರಪ್ರಸ್ಥ ಪುರವನ್ನು ಕೃಷ್ಣನು ಸಂತೋಷದಿಂದ ಬಂದು ಪ್ರವೇಶಿಸಿದನು. ೭೬. ಕೃಷ್ಣನು ಬಂದುದರಿಂದ, ಹರಡುತ್ತಿರುವ ವಸ್ತ್ರಸುಗಂಧ ಧೂಳಿಯಿಂದಲೂ ಚಿಮುಕಿಸುತ್ತಿರುವ ಕೇಸರಿಯ ನೀರಿನಿಂದಲೂ ಎತ್ತಿಕಟ್ಟಿದ ಚೀನಾಂಬರ ಧ್ವಜದಿಂದಲೂ ಪ್ರಖ್ಯಾತವಾದ ಪಟಹವಾದ್ಯ

೧. ಪಿಡಿದೆಮರ್ಳ (ಕ) ಪಿಡಿದೆಮಳರ್ (ಖಗ) ಪಿಡಿಯೆಮಳ್ಗಳ್ (ಮೂಅ) ೨. ಕಾಶ್ಮೀರಾಂಶು ವಿಂದೆತ್ತಲುತ್ಸವ (ಕಗ) ೩. ಚೆಲ್ವಿಂ (ಖ) ೪. ಸೊಬಗನಿದಂ (ಕಗ) ಸೊಬಗನಿವಂ (ಮೂಅ) ೫. ಈಕ್ಷಿಪುತ್ಕೇಕರಸ (ಖ)

ಅರಲಂಬಂ ದೃಗ್ವಿಡಂಬಂ ಕಱೆಯೆ ಕೆದಱೆ ಮಿಂಚಂ ವಿಭೂಷಾಪ್ರಪಂಚಂ
ಕುರುಳೆತ್ತಂ ನರ್ತಿಸುತ್ತುಂ ಪೊಳೆಯೆ ಬಳಲೆ ಧಮ್ಮಿಲ್ಲಮುದ್ಗಂಧಿಪುಲ್ಲಂ
ದರಹಾಸಂ ಭ್ರೂವಿಳಾಸಂ ನೆಗೞೆ ನಡುಗೆ ಮಧ್ಯಂ ಸ್ತನಾಭೋಗಬಾಧ್ಯಂ
ಸ್ಫುರಿತಾಂಗಂ ಬೀಱೆ ಪಾಂಗಂ ನೆರೆದುದುರುನಿತಂಬಂ ಪುರಸ್ತ್ರೀಕದಂಬಂ ೭೮

ವ|| ಅಂತುಮಲ್ಲದೆ

ಇಳೆಯಂ ಪಾದಾಬ್ಜರಾಗಂ ನಖರುಚಿ ಘುಸೃಣಾಂಭಶ್ಛಟಾ[1]ಸಿಕ್ತಿಯಿಂ ಪೂ
ವಳಿಯಿಂ ದಿಕ್ಚಕ್ರಮಂ ಭ್ರೂಲತೆ ಪೊಳೆವಲರ್ಗಣ್ ಕರ್ಬುವಿಲ್ಲಿಂ ಸ್ಮರಾಸ್ತ್ರಾ
ವಳಿಯಿಂ ರೋದೋಂತಮಂ ಭೂಷಣಮಣಿಕಿರಣಂ ಮಂದಹಾಸಂ ತಟಿತ್ಸಂ
ಕುಳದಿಂ ಬೆಳ್ದಿಂಗಳಿಂ ಪೂರಿಸೆ ನೆರೆದುದಜಸ್ರಂ ಪುರಸ್ತ್ರೀಸಹಸ್ರಂ ೭೯

ಅಳಕಂ ಕಸ್ತೂರಿಯಂ ಸಾಲಿಡೆ ನಸುನಗೆ ಬೆಳ್ದಿಂಗಳಂ ಬೀಱೆ ನೇತ್ರಾಂ
ಚಳಪಾತಂ ಕಾಮನಂಬಂ ಕಱೆಯೆ ಕನಕಮಂಜೀರಿಕಾಸಿಂಜಿತಂ ಚಂ
ಚಳಕಾಂಚೀಕೂಜಿತಂ ಕಂಕಣಝುಣಝುಣಿತಂ ಪೂಣ್ಮೆ ಬಂದತ್ತನೂನಂ
ಕಳಹಂಸೀಯಾನವಾಸ್ಯಶ್ವಸಿತ [2]ಮಧುಪಗಾನಂ ಪುರಸ್ತ್ರೀಪ್ರತಾನಂ ೮೦

ಧ್ವನಿಯಿಂದಲೂ ಮಾನಿನಿಯರು ಎರಚುವ ಅಕ್ಷತೆಗಳಿಂದಲೂ ಹೊಳೆಯುವ ನಾನಾಬಗೆಯ ತೋರಣ ಚಿಗುರುಗಳಿಂದಲೂ ಆ ಇಂದ್ರಪ್ರಸ್ಥಪುರಕ್ಕೇ ಮನೋಹರತೆಯುಂಟಾಯಿತು. ೭೭. "ಕೃಷ್ಣನ ಆಕಾರದ ಮತ್ತು ಅಂಗಕಾಂತಿಯ ಲಕ್ಷಾಂಶದಲ್ಲಿ ಒಂದಂಶವನ್ನು ಮಾತ್ರ ಹೋಲುವ ಕಾಮನು, ತಾನೆ ಚೆಲುವನು, ಸೊಬಗನು ಎನಿಸಿಕೊಂಡು ಅಧಿಕನಾಗಿರುವ ನಲ್ಲವೆ?! ಹಾಗಾದಮೇಲೆ ಕೃಷ್ಣನಿಗೆ ಇನ್ನು ಎಂತಹ ಚೆಲುವೂ ಎಂತಹ ಸೊಬಗೂ ಇದೆಯೋ ನೋಡೋಣ" ಎಂದು ಕುತೂಹಲರಸದ ತ್ವರೆಯಲ್ಲಿ (ಕೈಗೆ ಹಾಕಿಕೊಳ್ಳುವ ಆಭರಣವನ್ನು ಕಾಲಿಗೂ ಕಾಲಿಗೆ ಹಾಕಿಕೊಳ್ಳಬೇಕಾದುದನ್ನು ಕೈಗೋ ಮತ್ತೊಂದು ಅಂಗಕ್ಕೋ ಹಾಕಿಕೊಳ್ಳುವಂತೆ) ವ್ಯತ್ಯಾಸವಾಗಿ ಅಲಂಕರಿಸಿಕೊಂಡು ನವಯುವತಿಯರು ರಂಜಿಸಿದರು. ೭೮. ತಮ್ಮ ಆಭರಣಗಳ ಸಮೂಹವು ಮಿಂಚನ್ನು ಹರಡುತ್ತಲೂ, ಮನ್ಮಥ ನಟನು ಹೂಬಾಣವನ್ನು ಕರೆಯುತ್ತಲೂ, ಇರುವಲ್ಲಿ ನಲಿಯುವ ಮುಂಗುರುಳು ಹೊಳೆಯುತ್ತಲೂ, ಉತ್ತಮ ಸುಗಂಧದ ಹೂವನ್ನು ಮುಡಿದುಕೊಂಡಿರುವ ಜಡೆಮುಡಿಯ ಗಂಟು ಸಡಿಲ ವಾಗುತ್ತಲೂ ಮುಗುಳುನಗುವಿನೊಡನೆ ಹುಬ್ಬಿನ ಬೆಡಗು ಹೆಚ್ಚುತ್ತಲೂ, ಸ್ತನಗಳ ಘನತೆ ವಿಶಾಲತೆಗಳಿಂದ ಬಾಧೆಗೊಳಗಾದ ನಡುವು ನಡುಗುತ್ತಲೂ, ಹೊಳೆಯುವ ಅವಯವವು ಸುರೀತಿಯನ್ನು ಬೀರುತ್ತಲೂ ಇರುವ ಸ್ಥೂಲನಿತಂಬದ ಪುರವನಿತೆಯರ ಸಮೂಹವು ಕೃಷ್ಣನೆಡೆಗೆ ಬಂದು ಸೇರಿತು. ವ|| ಅದೂ ಅಲ್ಲದೆ ೭೯. ಸಾವಿರಾರು ಜನ ಪುರವನಿತೆಯರು ಸಂತತವಾಗಿ ಕೃಷ್ಣನನ್ನು ನೋಡಲು ಬಂದು ಸೇರಿದರು. ಅವರು ಬರುವಾಗ ತಮ್ಮ ಕೆಂದಾವರೆ ಹೂವಿನಂತಿರುವ ಕಾಲಿನ ಕೆಂಪು, ಉಗುರಿನ ಹೊಳಪು ಕೇಸರಿ ಗಂಧೋದಕ

---

೧. ಸಕ್ತಿಯಿಂ (ಕಖ) ೨. ಮಧುರಗಾನಂ (ಖ)

ಜಲಜಾತಾಕ್ಷನನೀಕ್ಷಿಪುತ್ಸುಕತೆಯಿಂ ಕೈಗೆಯ್ಯುತಿರ್ದಂತೆ ಬಂ
ದೊಲವಿಂ ನೋಡುವ ಕಾಂತೆಯೊಪ್ಪಿದಳದೊರ್ವಳ್ ದರ್ಪಣೋಪೇತಹ
ಸ್ತೆ ಲಸನ್ಮೌಕ್ತಿಕಭೂಷೆ ಕುಂಕುಮರಜೋರಮ್ಯಾಂಗಿ ಪೂರ್ಣೇಂದುಮಂ
ಡಲಮಂ ತಾರಕಕೋಟಿಯಂ ತಳೆದ ಸಂಧ್ಯಾಲಕ್ಷ್ಮಿಯೆಂಬಂತೆವೋಲ್ ೮೧

ಜಗುಳ್ದುತ್ತಂಸಮನೊತ್ತು ಸೂಸುವಳಕಾನೀಕಂಗಳಂ ತಿರ್ದು ಮೆ
ಲ್ಲಗೆ ಪೋಗಿನ್ನುಡಿದಪ್ಪುದೊಳ್ನಡು ಕುಚಪ್ರಾಗ್ಭಾರದಿಂದೆಂದು ಬು
ದ್ಧಿಗುಡುತ್ತುಂ ನಡೆತರ್ಪಂ ಚೇಟಿಯರ ಮಾತಂ ಮೀಱಿ ಕೈಮೀಱಿದೊ
ಲ್ಮೆಗೆ ಪಕ್ಕಾಗಿ ಪೆಱಳ್ ಮೃಗಾಕ್ಷಿ ಪರಿತಂದಬ್ಜಾಕ್ಷನಂ ನೋಡಿದಳ್ ೮೨

ಎಱಕಂ ಚಿತ್ತದೊಳುಣ್ಮಿ ಪೊಣ್ಮೆ ನಡೆತರ್ಪೌತ್ಸುಕ್ಯದಿಂ ಮೇಲುದ
ಳ್ಳಿಱಿವುತ್ತುಂಗಕುಚಂಗಳಿಂ ತೊಲಗಲಂಗವ್ಯಕ್ತಿ ಪುಷ್ಪಾಸ್ತ್ರನಾ
ರ್ದೊಱೆಯಿಂದುರ್ಚಿದ ಬಾಳನೇಟಿಸಿರೆ ತನ್ನಂ ನೋಟ್ಪವರ್ ಸೋಲ್ತು ಮೆ
ಯ್ಯಱಿಯಲ್ ಮೆಯ್ಮಱಿದೊಲ್ದು ನೋಡಿದಳದೊರ್ವಳ್
ಗೋಪಮಾರ್ತಂಡನಂ ೮೩

ವನ್ನು ಚುಮುಕಿಸಿ ಎರಚಿ, ಹೂಬಲಿಯನ್ನು ಹರಡಿ ಭೂಮಿಯನ್ನು ತುಂಬುತ್ತಿತ್ತು. ಅವರ ಬಳ್ಳಿಯ ಹುಬ್ಬುಗಳೆಂಬ ಕಬ್ಬಿನ ಬಿಲ್ಲು, ನೇತ್ರಕಮಲವೆಂಬ ಮನ್ಮಥಾಸ್ತ್ರದಿಂದ ದಿಙ್ಮಂಡಲವನ್ನು ತುಂಬುತ್ತಿದ್ದಿತು. ಆಭರಣಗಳ ಕಾಂತಿಯೆಂಬ ಮಿಂಚೂ ಕಿರುನಗುವೆಂಬ ಬೆಳುದಿಂಗಳೂ, ಭೂಮ್ಯಾಕಾಶಗಳ ಮಧ್ಯವನ್ನು ತುಂಬುತ್ತಿದ್ದಿತು. ೮೦. ಹಂಸಗಮನೆಯರೂ ಉಸಿರಿನ ಸುವಾಸನೆಗಾಗಿ, ಝೇಂಕರಿಸುತ್ತ ಜತೆಯಲ್ಲಿ ಬರುವ ತುಂಬಿಗಳುಳ್ಳವರೂ ಆದ ಪುರಸ್ತ್ರೀಯರ ಸಮೂಹವು, ಮುಂಗುರುಳಿನಿಂದ ಕಸ್ತೂರಿಯನ್ನು ಸಾಲಿಡುತ್ತ ಮುಗುಳು ನಗುವೆಂಬ ಬೆಳದಿಂಗಳನ್ನು ಬೀರುತ್ತ ಕಡೆಗಣ್ಣಿನ ನೋಟವೆಂಬ ಪುಷ್ಪಬಾಣವನ್ನು ಕರೆಯುತ್ತ ಚಿನ್ನದ ಕಾಲಂದುಗೆ ವಡ್ಯಾಣ ಬಳೆಗಳ ಬಗೆ ಬಗೆಯ ಶಬ್ದವಾಗುವಂತೆ ಬಂದಿತು. ೮೧. ಮುತ್ತುಗಳ ಹಾರಾಭರಣಗಳನ್ನು ಧರಿಸಿ, ಕುಂಕುಮರಜದಿಂದ ರಮ್ಯವಾದ ಅವಯವವುಳ್ಳ ಒಬ್ಬಳು ಸುಂದರಿಯು, ಕಮಲನೇತ್ರನಾದ ಕೃಷ್ಣನನ್ನು ನೋಡಬೇಕೆಂಬ ಅತ್ಯಾಸಕ್ತಿಯಿಂದ ಅಲಂಕರಿಸಿಕೊಳ್ಳಲು ಕೈಯ್ಯಲ್ಲಿ ಹಿಡಿದುಕೊಂಡಿದ್ದ ಕನ್ನಡಿಯೊಡನೆಯೆ ತ್ವರೆಯಿಂದ ಬಂದಳು. ಅವಳು ಚಂದ್ರಮಂಡಲವನ್ನೂ ಕೋಟ್ಯಂತರ ನಕ್ಷತ್ರಗಳನ್ನೂ ಧರಿಸಿದ ಸಂಧ್ಯಾಲಕ್ಷ್ಮಿಯಂತೆ ಒಪ್ಪುತ್ತಿದ್ದಳು. ೮೨. ಮತ್ತೊಬ್ಬಳು ಹರಿಣಾಕ್ಷಿಯು ಕೃಷ್ಣನನ್ನು ನೋಡಬೇಕೆಂಬ ಮಿತಿ ಮೀರಿದ ಪ್ರೀತ್ಯಾಸಕ್ತಿಯಿಂದ ಅವಳ ದಾಸಿಯರು-ಜಾರುತ್ತಿರುವ ಕಲೆಯ ಭೂಷಣವನ್ನು ಒತ್ತಿಸರಿಪಡಿಸಿಕೊ. ಕೆಳಕ್ಕೆ ಜೋಲುವ ಮುಂಗುರುಳನ್ನು ತಿದ್ದಿಕೋ. ಮೆಲ್ಲಗೆ ನಡಿ, ಸ್ತನಗಳ ಭಾರದಿಂದ ತೆಳ್ಳಗಿರುವ ನಿನ್ನ ಒಳನಡುವು ಮುರಿದೀತು!" ಎಂದು ಬುದ್ಧಿಯನ್ನು ಹೇಳುತ್ತ ಬರುತ್ತಿದ್ದರೂ ಅವರ ಮಾತನ್ನು ಮೀರಿ, ಓಡಿಬಂದು ಆ ಕಮಲಾಕ್ಷನನ್ನು ನೋಡಿದಳು. ೮೩. ಅದೊಬ್ಬಳು ಯುವತಿ ಅವಳ ಚಿತ್ತದಲ್ಲಿ ಕೃಷ್ಣನ ಮೇಲೆ ಪ್ರೀತಿಯು ಉದಿಸಿ ಹೊಮ್ಮುತ್ತಿದ್ದುದರಿಂದ ಔತ್ಸುಕ್ಯದಿಂದ

ನಳಿತೋಳುಂ ತನುಮಧ್ಯಮುಂ ಜಡಿಯೆ ಮುಕ್ತಾಹಾರಮುಂ ನೀಲಕುಂ
ತಳಮುಂ ನರ್ತಿಸೆ ಮೇಲುದುಂ ನಿಱಿಯುಮುಡ್ಡಂಬಾರೆ ವಕ್ಷೋಜಮಂ
ಡಳಮುಂ ಪೀನನಿತಂಬಮುಂ ಪೊಡರೆ ಕಣ್ [೧]ಚೆಲ್ಲಂಗಳಂ ಬೀಱಿ ಕುಂ
ತಳಪುಷ್ಪಂ ಮಿಗೆ ಸೂಸೆ ಬಂದಬಲೆಯೊರ್ವಳ್ ಕೃಷ್ಣನಂ ನೋಡಿದಳ್ ೮೪

ಪೊಡರ್ವ ಕುಚದ್ವಯೋರುಹಭರದಿಂದುಪಹಾರದ ಪೂಗಳಂ ತರಂ
ಬಿಡದೆಡಪುತ್ತುಮಾತ್ಮಗೃಹ[೨]ಹಂಸೆಗಳಿಂ ಪೆಱಗಾಗಿ ಬರ್ಪವೋಲ್
ನಡೆಪೆಱಗಾಗಿ ತನ್ನ ನಿಡಚೇಟಿಯರಂ ಪೆಱಗಿಕ್ಕಿ ಬೇಗದಿಂ
ನಡೆದು ಪೆಱಳ್ ಜನಾರ್ದನನ ರೂಪವಿಲಾಸಮನೊಲ್ದು ನೋಡಿದಳ್ ೮೫

ಅನವದ್ಯಾಂಗನನೀ ಮುರಾಂತಕನನಾಕರ್ಣಾಂತವಿಶ್ರಾಂತಲೋ
ಚನದಿಂದಾವಗವೀಕ್ಷಿಸಲ್ ಮನಸಿಜಂ ಪುಷ್ಪಾಸ್ತ್ರದಿಂದೆಚ್ಚು ತೊ
ಟ್ಟನೆ ಕೊಂದಿಕ್ಕುಗುಮೆನ್ನನೆಂದು ಭಯದಿಂ ನೋಟ್ಪಂದದಿಂ ದೀರ್ಘಲೋ
ಚನೆಯೊರ್ವಳ್ ಕಡೆಗಣ್ಣ ಕೂರ್ಮೊನೆಗಳಿಂ ದೈತ್ಯಾರಿಯಂ ನೋಡಿದಳ್ ೮೬

ತರುಣಮೃಣಾಳದಂತೆ ನೆಱೆದಿಂಗಳ ತಣ್ಗದಿರಂತೆ ಪಾಲ ಬೆ
ಳ್ದೆರೆಗಳ ಬಂಬಲಂತೆ ಕುಮುದೋಜ್ವಲಮಾಲಿಕೆಯಂತೆ ಕಮ್ಮ ಕೇ
ಕರನಿಕರಂ ಗವಾಕ್ಷನಿಕುರುಂಬಕದಿಂ ಪೊಱಪೊಣ್ಮೆ ನೋಡಿದರ್
ಮುರಹರನಂ ಕೆಲರ್ [೩]ವಿವಿಧಹರ್ಮ್ಯಗವಾಕ್ಷವಿಲಗ್ನವಕ್ತ್ರೆಯರ್ ೮೭

ವೇಗದಿಂದ ನಡೆಯುತ್ತಿದ್ದಳು. ಆಗ ಅವಳ ಉನ್ನತ ಸ್ತನಗಳು ತಿವಿಯುತ್ತಿದ್ದ ಮೇಲುಹೊದಿಕೆಯು ಜಾರಿಹೋಗಿ ಸ್ತನಗಳು ಕಾಣಿಸುವಂತಾಯಿತು. ಒಡನೆಯೇ ಆ ದೃಶ್ಯವು ಮನ್ಮಥನು ಅಬ್ಬರಿಸಿ ಒರೆಯಿಂದ ತೆಗೆದ ಕತ್ತಿಯನ್ನು ತಿರಸ್ಕರಿಸುವಂತಾಯಿತು. ಅವಳನ್ನು ನೋಡಿದವರು ಮೋಹದಿಂದ ಮೈಮರೆಯುವಂತಾಯಿತು. ಅವಳು ಕೃಷ್ಣನ ಮೇಲಿನ ಪ್ರೀತಿಯಿಂದ ಮೈಮರೆತುಬಂದು ಕೃಷ್ಣನನ್ನು ನೋಡಿದಳು. ೮೪. ಕೋಮಲವಾದ ತೋಳೂ ತೆಳ್ಳಗಿರುವ ನಡುವೂ ಬಳುಕುತ್ತ, ಮುತ್ತುಗಳ ಹಾರವೂ ಕರಿಯ ಮುಂಗುರುಳೂ ಕುಣಿಯುತ್ತ ಮೇಲುಹೊದಿಕೆಯೂ ನಿರಿಯೂ ಮೇಲೆಹಾರುತ್ತ ಸ್ತನಮಂಡಲವೂ ನಿತಂಬವೂ ಅದಿರುತ್ತ, ಕಣ್ಣು ಹರ್ಷ ವಿನೋದಗಳನ್ನುಬೀರುತ್ತ ಮುಡಿಯ ಹೂಗಳು ಹೆಚ್ಚಾಗಿ ಉದಿರುತ್ತ ಇರಲು ಒಬ್ಬ ಅಬಲೆಯು ಬಂದು, ಕೃಷ್ಣನನ್ನು ನೋಡಿದಳು. ೮೫. ಅದಿರುವ ಸ್ತನಗಳ ಮತ್ತು ತೊಡೆಗಳ ಭಾರದಿಂದ ಉಪಹಾರದ ಹೂಗಳನ್ನು ಸಾಲುಬಿಡದೆ ಎಡವುತ್ತ ತನ್ನ ಮನೆಯ ಹಂಸೆಗಳೂ ಚೇಟಿಯರೂ ಹಿಂದೆ ನಡೆದು ಬರುವಂತೆ ಅತಿತ್ವರೆಯಿಂದ ನಡೆದುಬಂದು ಮತ್ತೆ ಒಬ್ಬಳು ಕೃಷ್ಣನ ರೂಪವಿಲಾಸಗಳನ್ನು ಪ್ರೀತಿಯಿಂದ ನೋಡಿದಳು. ೮೬. ಸ್ತುತ್ಯಾಂಗನಾದ ಈ ಕೃಷ್ಣನನ್ನು ನಾನು ಕಿವಿಯವರೆಗೂ ಹರಡಿರುವ ವಿಶಾಲನೇತ್ರದಿಂದ ಯಾವಾಗಲೂ ನೋಡುತ್ತಿದ್ದರೆ ಮನ್ಮಥನು ನನ್ನನ್ನು

೧. ಚೆಲ್ಲಂಗಳಿಂ ಚಿನ್ನಪೂಗಳನಲ್ಲಲ್ಲಿಗೆ (ಖ) ೨. ಹಂಸೆಗಳಂ (ಕಗ) ೩. ವಿವಿಧಲಗ್ನ ಮನೋಹರ ಯುಕ್ತವಸ್ತ್ರೆಯರ್ (ಖ)

ಹರಿ ಬರೆ ನೋಡುತಿರ್ಕೆಲದ ಮಾಡದ ಚೂಳಿಕೆಯಲ್ಲಿ ಬಂದು ನಿಂ
ದಿರೆ ಮುಖಪಙ್ಕ್ತಿಯಿಂದೆ ಮಣಿದರ್ಪಣತೋರಣಮಾಲೆಯಂ [೧]ಸ್ಥಲೀ
ಸರಸಿಜರಾಜಿಯಂ ವಿವಿಧಪೂರ್ಣಸುಧಾಕರಮಂಡಲಂಗಳಂ
ಪರಿಭವಿಪಾಕೆಯರ್ ಪರಿಭವಂಬಡೆದರ್ ಕುಸುಮಾಸ್ತ್ರಪಾತದಿಂ ೮೮

ವ|| ಅಂತು ನೋಡುವ ಗಾಡಿಕಾರ್ತಿಯರ ಮನಮನಿರ್ಕುಳಿಗೊಂಡು ಸೂಸುವ ಸೇಸೆಗಳನಾಂತು ಸುಹೃಜ್ಜನಸಜ್ಜನಯೋಷಿಜ್ಜನಂಗಳಾಶೀರ್ವಾದಪರಂಪರೆಗಳಂ ಕೈಕೊಂಡು ಪುರದ ಸಿರಿಯನವಲೋಕಿಸುತ್ತುಂ ವಿಪಣಿಮಾರ್ಗಂಬಿಡಿದು ನಡೆತಂದು ಕಡುಚೆಲ್ವುವೀಱೆ ಮುನ್ನಮೆ ಸಮಕಟ್ಟಿ ಮಾಡಿಸಿದನರ್ಘ್ಯರತ್ನರಚನಾವಿರಾಜಿತರಾಜಭವನಮಂ ಮಾಂಗಲ್ಯ ಸಾಕಲ್ಯವಿಭವದಿಂ ಪೊಕ್ಕು ತನ್ನೊಡನೆ ಬಂದು ನೃಪಾಲವೃಂದಮಂ ಪೊಱವೊಱಲ ಶಿಬಿರಕ್ಕೆ ಪೋಗಲ್ವೇಸಿ ಬಿಸರುಹಾಕ್ಷಂ ನವರತ್ನಖಚಿತಸಿಂಹಾಸನದೊಳ್ ಸುಖಾಸೀನನಾಗಿ

ಮಗಧನೃಪಜೀವಝಷಮಂ
ತೆಗೆವುಜ್ಜ್ವಳ[೨]ರಜ್ಜುಜಾಲಮೆನೆ ನಿರ್ಮಲದಂ
ತಗಭಸ್ತಿಚ್ಛಟೆ ಪಸರಿಸಿ
ಸೊಗಯಿಸುತಿರೆ[೩]ವರ ಯುಧಿಷ್ಠಿರಂಗಿಂತೆಂದಂ ೮೯

ಪುಷ್ಪಾಸ್ತ್ರದಿಂದ ಹೊಡೆದು ತಟ್ಟನೆ ಕೊಂದುಹಾಕುವನು ಎಂದು ಭಯದಿಂದ ನೋಡುತ್ತಿರುವವಳಂತೆ ವಿಶಾಲಾಕ್ಷಿಯೊಬ್ಬಳು ತನ್ನ ಕಡೆಗಣ್ಣಿನ ಹರಿತವಾದ ಮೊನೆಗಳಿಂದ ಕೃಷ್ಣನನ್ನು ನೋಡಿದಳು. ೮೭. ವಿಧವಿಧವಾದ ಉಪ್ಪರಿಗೆಯ ಮನೆಗಳ ಗವಾಕ್ಷಗಳಲ್ಲಿ ಮುಖವನ್ನು ಇಟ್ಟುಕೊಂಡ ಕೆಲವರು ಕೃಷ್ಣನು ಬೀದಿಯಲ್ಲಿ ಬರುತ್ತಿರುವಾಗ ಎಳೆಯ ತಾವರೆಯ ದಂಟಿನಂತೆಯೂ ಪೂರ್ಣಚಂದ್ರನ ತಂಪಾದ ಕಿರಣದಂತೆಯೂ ಹೊಳೆಯುವ ನೈದಿಲೆಯ ಮಾಲೆಯಂತೆಯೂ ಇರುವ ತಮ್ಮ ಓರೆನೋಟವನ್ನು ಹೊರಕ್ಕೆ ಬೀರಿ ಕೃಷ್ಣನನ್ನು ನೋಡಿದರು. ೮೮. ಹರಿಯು ಇಂದ್ರಪ್ರಸ್ಥದ ಬೀದಿಯಲ್ಲಿ ಬರುತ್ತಿರುವಾಗ ಬೀದಿಯ ಎರಡು ಪಕ್ಕಗಳ ಸೌಧಗಳ ಬಿಸಿಲು ಮಹಡಿಯಲ್ಲಿ ನಿಂತುಕೊಂಡು, ಕೆಲವರು ಸುಂದರಿಯರು ನೋಡುತ್ತಿದ್ದರು. ಹೊರಕ್ಕೆ ಕಾಣುವ ಅವರ ಮುಖಗಳ ಸಾಲು ರತ್ನದ ಕನ್ನಡಿಗಳ ತೋರಣದ ಮಾಲೆಯನ್ನೂ ನೆಲದಾವರೆಯ ಹೂಗಳ ಸಾಲನ್ನೂ ವಿಧವಿಧವಾದ ಪೂರ್ಣಚಂದ್ರಮಂಡಲಗಳ ಸಮೂಹವನ್ನೂ ಪರಿಭವಿಸುತ್ತ ಇದ್ದಿತು. ಮನ್ಮಥನ ಅಸ್ತ್ರಗಳ ಹೊಡೆತದಿಂದ ಅವರು ಪರಿಭವವನ್ನು ಪಡೆದರು. ವ|| ಕೃಷ್ಣನು ಹಾಗೆ ನೋಡುವ ಆ ವಿಲಾಸವತಿಯರ ಮನಸ್ಸನ್ನು ವಶಪಡಿಸಿಕೊಂಡನು. ಅವರು ತಳಿಯುವ ಅಕ್ಷತೆಗಳನ್ನು ಧರಿಸಿದನು, ಸುಹೃಜ್ಜನರ, ಸಜ್ಜನರ ಮತ್ತು ಸುವಾಸಿನಿಯರ ಆಶೀರ್ವಾದ ಪರಂಪರೆಯನ್ನು ಸ್ವೀಕರಿಸಿದನು. ಪುರದ ಶ್ರೀಯನ್ನು ನೋಡುತ್ತ ವರ್ತಕರ ಅಂಗಡಿಯ ಬೀದಿಯ ಮಾರ್ಗದಿಂದ ನಡೆದನು. ಬಹಳ ಚೆಲುವನ್ನು ಬೀರುವಂತೆ ಮುಂಚೆಯೇ ಯೋಚಿಸಿ ಸಿದ್ಧಪಡಿಸಿದ ಅಮೌಲ್ಯರತ್ನಗಳಿಂದ ರಚಿತವಾಗಿ ಹೊಳೆಯುವ ಅರಮನೆಯನ್ನು

---

೧. ಪಟೀಪರಿಕರರಾಜಿಯಿಂ (ಖ) ೨. ರತ್ನಜಾಲಮೆನೆ (ಕಗ) ೩. ಹರಿಯುಧಿಷ್ಠಿರಂಗಿಂತೆಂದಂ (ಕಖಗ)

ಅಧಿಕೈಶ್ವರ್ಯದ ಮಾಗಧೇಶನಿರೆ ನಿನ್ನೀ ರಾಜಸೂಯಾಧ್ವರಂ
[1]ವಿಧಿಯಲ್ಲೆಂದು ಸಭೀಮನೆಯ್ದಿ ಭರದಿಂ[2]ದೋರ್ಯುದ್ಧಮಂ ಬೇಡಿ ಮಾ
ಗಧನೊಳ್ ಪೋರಿಸುವಲ್ಲಿ ಶಕ್ತಿಕಳೆಯಂ ಭೀಮಂಗೆ ಕೊಟ್ಟದ್ಭುತ
ಪ್ರಧನಾಟೋಪದೆ ಭೀಮನಿಂ ಕೊಲಿಸಿದಂ ಕೃಷ್ಣಂ ಜರಾಸಂಧನಂ ೯೦

ವ|| ಅಂತು ರಾಜರಾಜಪದವೀಗರ್ವ ಖರ್ವೀಕೃತಸಕಲರಾಜಲೋಕನಂ ಯಮರಾಜಧಾನಿಯಂ ಪುಗಿಸಿ

ಅನಿಲಾಪತ್ಯಪುರಸ್ಸರಂ ಮಗುಟ್ಟಿವಂದಾತ್ಮಾಗಮೋತ್ಸಾಹವ
ರ್ಧನದಿಂದುತ್ಪಟವಾಸಮುದ್ಧಿಮಳಸೇನಾನೀಕಮುತ್ತೂರ್ಯನಿ
ಸ್ವನಮುತ್ತೋರಣಮುತ್ಪತಾಕಮೆಸೆವಿಂದ್ರಪ್ರಸ್ಥಮಂ ಬಂದು ಪೊ
ಕ್ಕನುಪೇಂದ್ರಂ ತನಗೆಂದು ಬೇಱೆ ಸಮಕಟ್ಟಿರ್ದಾ ನೃಪಾವಾಸಮಂ ೯೧

ವ|| ಅಂತು ಬಂದು ಪೊಕ್ಕು ಭೀಮನಂ ಪ್ರೇಮಪೂರ್ವಕಂ ನಿಜರಾಜಭವನಕ್ಕೆ ಕಳಿಪಿ ಮಜ್ಜನಭೋಜನಾನಂತರಂ ಕತಿಪಯಾಂತಃಪುರವಾಸಿನೀ ಪರಿಜನಕುಮಾರಜನಪರಿವೃತನಾಗಿ

ವಿವಿಧಸ್ನಿಗ್ಧಗಭೀರಹೃದ್ಯಮಧುರಾರಾವಾದ್ಯದಿಂ ವಾದ್ಯದಿಂ
ಶ್ರವಣಸ್ವಾಂತಸುಖಸ್ವನಾನುಕೃತಸಾರಂಗೇಯದಿಂ ಗೇಯದಿಂ
ಸುವಿಳಾಸಸ್ಫುಟಭಾವಭಾವಿತ ನಟೀಲೀಲಾಸ್ಯದಿಂ ಲಾಸ್ಯದಿಂ
ದಿವಸಂ ಪೋಪಿನಮಿರ್ದನುತ್ಸವವನಶ್ರೀಮಾಧವಂ ಮಾಧವಂ ೯೨

ಮಂಗಳಕರವಾದ ಸಕಲ ವೈಭವದೊಡನೆ ಪ್ರವೇಶಿಸಿದನು. ಬಳಿಕ ತನ್ನ ಸಂಗಡ ಬಂದಿದ್ದ ರಾಜಸಮೂಹಕ್ಕೆ ಪುರದ ಹೊರಗಡೆಯಲ್ಲಿರುವ ಶಿಬಿರಕ್ಕೆ ಹೋಗಲು ಆಜ್ಞಾಪಿಸಿದನು. ಅನಂತರ ಆ ಕಮಲನೇತ್ರನು ನವರತ್ನ ಖಚಿತವಾದ ಸಿಂಹಾಸನದಲ್ಲಿ ಸುಖದಿಂದ ಕುಳಿತುಕೊಂಡನು. ಅನಂತರ ೮೯. ಕೃಷ್ಣನು-ತನ್ನ ನಿರ್ಮಲವಾದ ಹಲ್ಲಿನ ಹೊಳಪು ಒತ್ತಾಗಿ ಹೆಚ್ಚಾಗಿ ಹರಡುತ್ತ ಮಗಧರಾಜ ಜರಾಸಂಧನ ಜೀವವೆಂಬ ಮೀನನ್ನು ತೆಗೆಯುವ ಹೊಳೆಯುತ್ತಿರುವ ಹಗ್ಗದ ಬಲೆಯಂತೆ ಚೆನ್ನಾಗಿ ಕಾಣಿಸುತ್ತಿರಲು ಧರ್ಮರಾಜನಿಗೆ (ಹೀಗೆಂದು ಹೇಳಿದನು). ೯೦. "ಅಧಿಕವಾದ ಐಶ್ವರ್ಯವುಳ್ಳ ಮಗಧರಾಜನಿರುವಾಗ ನೀನು, ರಾಜಸೂಯಯಾಗವನ್ನು ಮಾಡುವುದಕ್ಕಾಗದು, ನಡೆಯುವುದಿಲ್ಲ" ಎಂದು ಹೇಳಿ ಕೃಷ್ಣನು ಭೀಮನೊಡನೆ ಜರಾಸಂಧನ ಹತ್ತಿರ ಹೋಗಿ, ಬಾಹುಯುದ್ಧವನ್ನು ಮಾಡುವಂತೆ ಜರಾಸಂಧನನ್ನು ಒಪ್ಪಿಸಿ, ಅವನೊಡನೆ ಯುದ್ಧ ಮಾಡುವುದಕ್ಕೆ ಬೇಕಾದ ಶಕ್ತಿಕಳೆಯನ್ನು ಭೀಮನಿಗೆ ಕೊಟ್ಟು ಹುರಿದುಂಬಿಸಿ ಅದ್ಭುತವಾದ ಬಾಹುಯುದ್ಧಾಡಂಬರದಲ್ಲಿ ಆ ಭೀಮನಿಂದ ಆ ಜರಾಸಂಧನನ್ನು ಕೊಲ್ಲಿಸಿದನು. ವ|| ಹಾಗೆ ತನ್ನ ಚಕ್ರವರ್ತಿಪದವಿಯ ಗರ್ವದಿಂದ ಸಕಲರಾಜರನ್ನೂ ತಗ್ಗಿಸಿ ಕುಗ್ಗಿಸಿದ್ದ ಜರಾಸಂಧನನ್ನು ಯಮನ ರಾಜಧಾನಿಗೆ ಕಳುಹಿಸಿ; ೯೧. ಕೃಷ್ಣನು ಭೀಮಸೇನನನ್ನು ಮುಂದಿಟ್ಟುಕೊಂಡು, ಹಿಂದಿರುಗಿ ಬಂದು, ತಮ್ಮ ಆಗಮನೋತ್ಸಾಹದ ಸಂತೋಷಕ್ಕಾಗಿ ಸುಗಂಧವಸ್ತ್ರಚೂರ್ಣಗಳಿಂದಲೂ ದೊಡ್ಡ ಸೇನೆಯ ಸಮೂಹದಿಂದಲೂ ತೂರ್ಯವಾದ್ಯಗಳ ಧ್ವನಿಯಿಂದಲೂ ಎತ್ತಿಕಟ್ಟಿದ ಧ್ವಜ

೧. ವಿಧಿಯಲ್ಲೆಂದೆನೆ ಭೀಮನೆಯ್ದಿ (ಕಗ) ೨. ದಂ ಭೇದಮಂ (ಕ) ದಂ ಯುದ್ಧಮಂ (ಗ)

ವ|| ಅನ್ನೆಗಂ

ಇಳೆಯಿಂದಂ ಪೊಂಬಿಸಿಲ್ ಮೆಯ್ದೆಗೆದು ನಗನಿಕಾಯಾಗ್ರದೊಳ್ ಸಾಂದ್ರಧಾತು
ಸ್ಥಳಿ ಹರ್ಮ್ಯಾಗ್ರದೊಳ್ ಮಾಣಿಕದ ಶಿಖರಮುದ್ಯಾನಮಾಲಾಗ್ರದೊಳ್ ಚೆಂ
ದಳಿರೆಂಬಾಶಂಕೆಯಂ ಮಾಟ್ಪಿನ[1]ಮರುಣತೆವೆತ್ತಿರ್ದು ಚೆಲ್ವಾದುದಸ್ತಾ
ಚಳತುಂಗವ್ಯಾಘ್ರಜೃಂಭಾವೃತವದನಮೆನಿಪ್ಪಂದದಿಂ ಭಾನುಬಿಂಬಂ ೯೩

ಕುವಲಯಪೀಡೆಯಂ ಪಡೆವ ಪುಷ್ಪಿತಪದ್ಮಿನಿಗೋತ ಕಾಯ್ಪು ಸಂ
ಭವಿಸಿರೆ ಮಂಡಲಾಗ್ರಕರಮಂ ಕುಲಗೋತ್ರಶಿರಕ್ಕೆ ನೀಡುತಿ
ರ್ಪವಗುಣದಿಂದಮೆಯ್ದಿದುದಧೋಗತಿಯೆಂದು ವಿರಕ್ತನಾದವೊಲ್
ದಿವಕರನಂಬರಂದೊಱಿದು ಪಶ್ಚಿಮವಾರ್ಧಿಗೆ ಮೆಯ್ಯನಿಕ್ಕಿದಂ ೯೪

ಒಂದದ ಪಗಲಿರುಳೆರಡಱ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲ್ದವೊಲೆಸೆದುದು
ಮಂದೈಸಿದ ಸಂಜೆಗೆಂಪು [2]ಪಡುವಣ ದೆಸೆಯೊಳ್ ೯೫

ತೋರಣಮಾಲೆಗಳಿಂದಲೂ ಹೆಚ್ಚಾಗಿ ಹೊಳೆಯುವ ಇಂದ್ರಪ್ರಸ್ಥಪುರವನ್ನು ಪ್ರವೇಶಿಸಿದನು. ಅವನಿಗಾಗಿಯೇ ಬೇರೆ ಸಿದ್ಧಪಡಿಸಿದ್ದ ದಿವ್ಯವಾದ ಅರಮನೆಯನ್ನು ಸೇರಿದನು. ವ|| ಹಾಗೆ ಬಂದು ಪ್ರವೇಶಿಸಿ ಭೀಮನನ್ನು ಪ್ರೇಮಪೂರ್ವಕವಾಗಿ ಅವನ ಅರಮನೆಗೆ ಕಳುಹಿಸಿ, ಮಜ್ಜನಭೋಜನಾನಂತರ ಕೆಲವರು ಅಂತಃಪುರವನಿತೆಯರ ಕುಮಾರರ ಮತ್ತು ಪರಿಜನರ ಸಂಗಡ ಕುಳಿತು ೯೨. ನುಣುಪೂ ಗಂಭೀರವೂ ಹೃದ್ಯವೂ ಮಧುರವೂ ಆದ ವಿಧವಿಧವಾದ ಧ್ವನಿಗಳ ಗೀತವಾದ್ಯಗಳ ಮಾತುಗಳ ಕೇಳಿಕೆಯಿಂದಲೂ ಕಿವಿಗೂ ಮನಸ್ಸಿಗೂ ಹಿತಕರವಾದ ಸ್ವರಗಳನ್ನು ಅನುಕರಿಸಿ ಹೇಳುವ ಸಾರವುಳ್ಳ ಕಂಠದ ಮತ್ತು ಸಾರಂಗಿಯೆಂಬ ವೀಣೆಯ ಗಾನಧ್ವನಿಯಿಂದಲೂ, ಗಾಯಕರಿಂದಲೂ ವಿಲಾಸಯುತವಾದ ಭಾವಗಳನ್ನು ಸ್ಫುಟವಾಗಿ ಭಾವಿಸಿ ಅಭಿನಯಿಸುವ ನಟಿಯರ, ಲೀಲೆಯ ಮುಖದಿಂದಲೂ, ನರ್ತನ ದಿಂದಲೂ ಶ್ರೀಯುತನೂ ಸಂತೋಷಶ್ರೀಯುತನೂ ಆದ ಕೃಷ್ಣನು ಆ ಹಗಲನ್ನು ಕಳೆದನು. ವ|| ಅಷ್ಟರಲ್ಲಿ ೯೩. ಹೊಂಬಣ್ಣದ ಬಿಸಿಲು ಭೂಮಿಯನ್ನು ಬಿಟ್ಟು ಪರ್ವತಗಳ ಶಿಖರಗಳಲ್ಲಿ ಒತ್ತಾದ ಸಿಂಧೂರ ಧಾತು ಸ್ಥಳಗಳಂತೆಯೂ ಉಪ್ಪರಿಗೆಯ ಮನೆಗಳ ಅಗ್ರದಲ್ಲಿ ರತ್ನಶಿಖರದಂತೆಯೂ ಉದ್ಯಾನವನಗಳ ವೃಕ್ಷಗಳ ತುದಿಗಳಲ್ಲಿ ಕೆಂಪುಚಿಗುರುಗಳಂತೆಯೂ ಕೆಂಪಾಗಿ ಕಾಣಿಸುತ್ತಿದ್ದಿತು. ಸೂರ್ಯಮಂಡಲವು ಅಸ್ತಾಚಲವೆಂಬ ಉನ್ನತವಾದ ಹುಲಿಯು ಆಕಳಿಸುತ್ತ ತೆರೆದ ಬಾಯೆಂಬಂತೆ ಕಾಣಿಸುತ್ತಿದ್ದಿತು. ೯೪. ಸೂರ್ಯನು ತಾನು ಕುವಲಯಕ್ಕೆ (= ೧. ನೈದಿಲೆಗೆ ೨. ಭೂಮಂಡಲಕ್ಕೆ) ಪೀಡೆಯನ್ನುಂಟುಮಾಡುವ, ಪುಷ್ಪವತಿಯಾದ ಪದ್ಮಿನಿಯನ್ನು ಪ್ರೇಮಿಸಿದ, ಮತ್ತು ಕೋಪಿಸಿಕೊಂಡು, ಮಂಡಲಾಗ್ರಕರವನ್ನು = (೧.

೧. ಅರುಣತೆವೆತ್ತೆತ್ತು (ಕಗ) ೨. ಬೈಗಿನ (ಕಗ)

ಇನರಥಹತಿಯಿಂ ನೆಗೆದ ಗ
ಗನ[೧]ಧಾತುಸ್ಥಳರಜಂಗಳಿಂ ರೂಪಟೆದ
ತ್ತೆನೆ [೨]ಸಂಜೆ ಕೆಂಪು ತಳ್ತಿರೆ
ಕನಲ್ದು ಪೊಣರಟೆದುವೊಡನೆ ಕೋಕಯುಗಂಗಳ್ ೯೬

ಇನಿಯಳ್ ಪೊಣರಟೆದೊಡದಂ
ನೆನೆನೆನೆದುಂ ಸುಯ್ದುಸುಯ್ದು [೩]ಅಲ್ದಳ್ತಳ್ತು
ಬ್ಬನಿಯಬ್ಬನಿದಪ್ಪದೆ ನೋ
ಡಿ ನೋಡಿ ಜಾನಿಸಿದುದತುಲಶೋಕಂ ಕೋಕಂ ೯೭

ಇದು ಕೋಕಶೋಕಮಂ ನೋ
ಡದ ಕೃಪೆಯೆನೆ ಪದ್ಮನಯನಮಂ ಪದ್ಮಿನಿ ಮು
ಚ್ಚಿದಳೆನೆ ಭಾವಕದಿಂದ
ಲ್ಲದೆ ನಾಯಕಿ [೪]ತಾಳ್ದಳಿನನಗಲ್ಕೆಯ ನೋವಂ ೯೮

ಇಳೆಗೆ ಪಳಗಾಲದಂಬರ
ಮೊಳಸಾರ್ಗುಂ ಬೀಟ್ಗುಮೆಂದು ಧಾತ್ರಂ ಬಲ್ಪಿಂ
ದಳವಡೆ ಬೆಟ್ಟಿದ ಬೆಳ್ಳಿಯ
ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ ೯೯

ಮಂಡಲದ ತುದಿಯಕಿರಣವನ್ನು, ೨. ಕತ್ತಿಯನ್ನು ಹಿಡಿದ ಕಯ್ಯನ್ನು) ಕುಲಗೋತ್ರ ಶಿಖರಕ್ಕೆ = (೧. ಕುಲಗೋತ್ರಪರ್ವತಗಳ ಶಿಖರಕ್ಕೆ, ೨. ತನ್ನ ಕುಲದ ಮತ್ತು ಗೋತ್ರದವಗಲ್ಲಿ ಅಗ್ರಗಣ್ಯರಿಗೆ) ನೀಡುವ ಅವಗುಣಗಳಿಂದ ತನಗೆ ಅಧೋಗತಿಯೊದಗಿತೆಂದು ವಿರಕ್ತನಾದಂತೆ (೧. ಹೆಚ್ಚು ಕೆಂಪಾದವನು, ೨. ಪ್ರಪಂಚದ ಆಸೆಯನ್ನು ಬಿಟ್ಟವನು) ಅಂಬರ (೧. ಆಕಾಶ, ೨. ಬಟ್ಟೆ)ವನ್ನು ತೊರೆದು ಪಶ್ಚಿಮಸಮುದ್ರದಲ್ಲಿ ಮುಳುಗಿದನು! ೯೫. ಒಂದರೊಡನೊಂದು ಸೇರದೆ ಇರುವ ಹಗಲುರಾತ್ರಿಗಳೆರಡರ ಸಂದುಗಳನ್ನು ಕೆಂಪುಬಟ್ಟೆಯಿಂದ ಸೇರಿಸಿ, ವರುಣನೆಂಬ ಚಿಪ್ಪಿಗನು ಹೊಲಿದಂತೆ ಪಶ್ಚಿಮದ ಒತ್ತಾದ ಸಂಜೆಗೆಂಪು ಪ್ರಕಾಶಿಸಿತು. ೯೬. ಸೂರ್ಯರಥದ ಹೊಡೆತದಿಂದ ಹಾರಿದ ಗಗನದ ಧಾತುಸ್ಥಳದ ಧೂಳು ಮುಚ್ಚಿ ರೂಪಗೆಟ್ಟಂತೆ ಸಂಜೆಗೆಂಪು ಮುಚ್ಚಿದ ಚಕ್ರವಾಕ ದಂಪತಿಗಳು ಕೋಪಗೊಂಡು ಒಂದನ್ನೊಂದು ಅಗಲಿದವು. ೯೭. ಪ್ರಿಯೆ ಚಕ್ರವಾಕಿಯು ತನ್ನನ್ನು ಅಗಲಿಹೋದರೂ ಚಕ್ರವಾಕವು ಪ್ರಿಯೆಯನ್ನು ನೆನೆದು ನೆನೆದು, ನಿಟ್ಟುಸಿರುಬಿಟ್ಟು, ಸಂಕಟಪಟ್ಟು ಅತ್ತುಅತ್ತು ಒಂದೊಂದು ತಾವರೆಹೂವಿನ ಪಕ್ಕವನ್ನೂ ಬಿಡದೆ ಪ್ರಿಯೆಯನ್ನು

---

೧. ಧಾತುಸ್ಥಳಿರಜಂಗಳಿಂ (ಕಖಗ) ೨. ಸಂಜೆಗೆಂಪನುಟೆದಿರೆ (ಕಗ) ೩. ಅಳಲ್ದುಳುರುತ್ತಬ್ಬಿನಿದಪ್ಪದೆಲ್ಲಿಯುಂ (ಕಗ) ೪. ತೊಱೆದಳಿನಗಲ್ಕೆಯ (ಕಗ) ತೋಱಳಿನನಗಲ್ಕೆಯ (ಮೊಅ)

ಅನುರಕ್ತನಾಗಿ ಧಾರಿಣಿ
ಗೆ ನಲ್ಲಳಂ ರಾಜಬಾಧೆಗೊಪ್ಪಿಸಿ ರಾಜೀ
ವಿನಿಯಂ ಸತ್ಪಥಮಂ ತೊಱೆ
ದಿನನಪಯಶಮೆನೆ ತಮಂ ಪೊದಟ್ಟುದು ಜಗಮಂ ೧೦೦

[1]ಇನದೀಪಂ ನಂದಿರೆ ಬಂ
ದು ನಿಶಾರಾಕ್ಷಸಿ ಚರಾಚರೌಘಗ್ರಸನಾ
ರ್ಥಿನಿ ಭುವನಭವನಮಂ ಭೋಂ
ಕನೆ [2]ಪಡಿಗೆತ್ತಂದವಾದುದಂದು ತಮಂಧಂ ೧೦೧

*ವ॥ ಅಂತು ಜಗಮೆಲ್ಲಮಮಂ ಕವಿತರ್ಪ ಕಟ್ಟಿಲೆಯೊಳ್

ಪೊದೆದ ನವೀನನೀಲಪಟವಿಕ್ಕಿದ ಕತ್ತರಿಯಣ್ಪು ತೊಟ್ಟ ನೀ
ಲದ ತೊಡವೊಪ್ಪೆ ಜಂಗಮತಮಃಕಳೆಯಂತೆ ತಮಸ್ತಮಾಲವೃ
ಕ್ಷದ ಚಲಶಾಖೆಯಂತೆ ತಮದೊಡ್ಡಿನ ಲೋಲಪತಾಕೆಯಂತೆ ಪ
ರ್ವಿದ ತಮದುರ್ವಿನೊಳ್ ಸುಟಿದರಸ್ಫುಟಚಾರೆಯರಂದು ಜಾರೆಯರ್ ೧೦೨

ಹುಡುಕಿತು. ೯೮. ಪದ್ಮಿನಿಯು ಇನನ (೧. ಪತಿ, ೨. ಸೂರ್ಯ) ಅಗಲಿಕೆಯಿಂದ ಆದ ನೋವನ್ನು ಮನಸ್ಸಿನಲ್ಲಿ ಮಾತ್ರ ಹೊಂದಿದ್ದಳು. ಸೂರ್ಯನು ಅಸ್ತನಾಗಲು ಚಕ್ರವಾಕ ದಂಪತಿಗಳೂ ಅಗಲಿದುದನ್ನು ನೋಡಲಾರದೆ ಕೃಪೆಯಿಂದ ಹೆಚ್ಚಿನ ತನ್ನ ನೋವನ್ನು ಪ್ರಕಟಿಸಿದಳೆನ್ನುವಂತೆ ತನ್ನ ಕಮಲನೇತ್ರವನ್ನು ಮುಚ್ಚಿದಳು. (ಸೂರ್ಯನು ಅಸ್ತನಾದ ಮೇಲೆ ಕಮಲಗಳು ಮೊಗ್ಗಾದವು. ಚಕ್ರವಾಕದಂಪತಿಗಳು ಅಗಲಿದವು.) ೯೯. ಹಳೆಯ ಆಕಾಶವು ಬಿದ್ದು ಭೂಮಿಯೊಳಗೆ ಸೇರುವುದು ಎಂದು ಶಂಕಿಸಿದ ಬ್ರಹ್ಮನು ದೃಢವಾಗಿರುವಂತೆ ಮಾಡುವುದಕ್ಕಾಗಿ ಹೊಡೆದ ಬೆಳ್ಳಿಯ ಮೊಳೆಗಳಂತೆ ನಕ್ಷತ್ರಗಳು ಹೊಳೆದವು! ೧೦೦. ಧಾರಿಣಿಯಲ್ಲಿ (= ೧. ಧರಿಸಿದವಳಲ್ಲಿ, ೨. ಭೂಮಿಯಲ್ಲಿ) ಅನುರಕ್ತ (=೧. ಕೆಂಪಾದವನು, ೨. ಪ್ರೀತಿಯುಳ್ಳವ)ನಾಗಿ ಪ್ರಿಯೆಯಾದ ಕಮಲಿನಿಯನ್ನು ರಾಜ (= ೧ ಚಂದ್ರ, ೨. ದೊರೆ) ಬಾಧೆಗೆ ಗುರಿಮಾಡಿ, ಸನ್ಮಾರ್ಗ (=೧. ಆಕಾಶಮಾರ್ಗ, ೨. ಒಳ್ಳೆಯ ದಾರಿ)ವನ್ನು ಬಿಟ್ಟ (ಪತಿಯ) ಸೂರ್ಯನ ಅಪಯಶಸ್ಸಿನಂತೆ ಕತ್ತಲೆಯು ಜಗತ್ತನ್ನು ಹರಡಿತು. ೧೦೧. ಸೂರ್ಯನೆಂಬ ದೀಪವು ಆರಿರುವಾಗ ಧಾತ್ರಿಯೆಂಬ ರಾಕ್ಷಸಿಯು

---

೧. ದಿನಕರನಂದುಟೆದಿರೆ (ಖ) ೨. ಪಡಿಗೆತ್ತಂದವಾದುದಂಧ (ಕಗ)

* (ಖ) ಪ್ರತಿಯಲ್ಲಿ ೧೦೧ನೆಯ ಪದ್ಯದ ನಂತರ ಈ ಪದ್ಯ ಹೆಚ್ಚಾಗಿ ದೊರೆಯುತ್ತದೆ :

ಪದತಳಮಂತಳಚ್ಚಲಿಸಿನಿಲ್ಲೆನೆ ಧಾರಿಣಿ ಮಾಯಮಾದುದೋ
ವದನಮನುದ್ದಮೆತ್ತಿನಿಲಿಸಿಲ್ಲೆನೆ ವಾರಿದವೀಧಿಮೇಲೆ ಬಿ
ರ್ದುದೊ ತನುವಿಂಗೆ ಸಾರವಿನಿಸಿಲ್ಲೆನೆ ನಾಲ್ದೆಸೆ ತಾಪಿಸಿತ್ತೊ ಪೇ
ಟಿದು ವಿಪರೀತಮೆಂದು ಸುಟಿವರ್ನಿಲೆ ಕಟ್ಟಿಲೆ ಪೆತ್ತುದೇಟ್ಸಿಯಂ

ಜಗುನೆಯ ಪೂರಮೊತ್ತರಿಪ [1]ಗಂಗೆಯಿನೊಡ್ಡಟಿವಂತೆ ಮರ್ಬಿನು
ರ್ಬುಗಿಬಗಿಯಾಗೆ ಬೆಳ್ಪುನೆಗೆತಂದುದಯಾದ್ರಿಯ ಸೆಜ್ಜರಕ್ಕೆ ಪ
ಕ್ಕಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್
ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ ೧೦೩

ವ|| ತದನಂತರಂ

ವಿತತಪ್ರಾಚ್ಯಾದ್ರಿಪೀಠಾಗ್ರಿಮದರುಣಶಿಲಾವೃತ್ತಲಿಂಗಂಬೊಲಿಂಬಾ
ಯ್ತು ತರಂಗೊಂಡೇಟಿಗೆಯಿಂ ರಾಗದಿನುಪಚಿತಚೇತಶ್ಚಕೋರೀಕಂದಬಂ
ದ್ಯುತಿವಲ್ಲೀಸ್ತಂಭಮುಜ್ಜೃಂಭಿತಕುಮುದುಕುಟುಂಬಂ ತಮಶ್ಶೈಲಶಂಬಂ
ರತಿಪಾಟೋಪಾವಲಂಬಂ ಜನಿತವಿಟವಿಡಂಬಂ ಸುಧಾಸೂತಿಬಿಂಬಂ ೧೦೪

ಶೋಣತೆವೆತ್ತ ಮರೀಚಿ
ಶ್ರೇಣಿಯ ಕೆಂದಳಿರನಗ್ರದೊಳ್ ತಳೆದುದುಯ
ಕ್ಷೋಣಿಧರವೆಂಬ ಕಲಶದ
ಮಾಣಿಕಗನ್ನಡಿವೊಲಾಯ್ತು ಹಿಮಕರಬಿಂಬಂ ೧೦೫

ಚರಾಚರ ಪ್ರಾಣಿಸಮೂಹಗಳನ್ನು ನುಂಗಬೇಕೆಂದು ಭೂಲೋಕವೆಂಬ ಮನೆಗೆ ಬಂದು ಹೊಕ್ಕು, ತಟ್ಟನೆ ಬಾಗಿಲನ್ನು ಮುಚ್ಚಿದಂತೆ ಕುರುಡುಕತ್ತಲೆಯು ತುಂಬಿದ್ದಿತು. ವ|| ಹಾಗೆ ಜಗತ್ತೆಲ್ಲವನ್ನೂ ಕವಿಯುತ್ತಿರುವ ಕತ್ತಲೆಯಲ್ಲಿ. ೧೦೨. ಹೊಸ ಕರಿಯ ಬಟ್ಟೆಯನ್ನು ಹೊದೆದುಕೊಂಡು ಕಸ್ತೂರಿಯ ಗಂಧವನ್ನು ಬಳಿದುಕೊಂಡು ನೀಲರತ್ನಗಳ ಒಡವೆಗಳನ್ನು ತೊಟ್ಟು, ಸಂಚರಿಸುವ ಕತ್ತಲೆಯ ಕಳೆಯಂತೆಯೂ ಕತ್ತಲೆಯೆಂಬ ಹೊಂಗೆಯ ಮರದ ಚಲಿಸುವ ಕೊಂಬೆಯಂತೆಯೂ, ಕತ್ತಲೆಯ ಸೈನ್ಯದ ಚಂಚಲಧ್ವಜದಂತೆಯೂ ಆಗಿರುವ ಜಾರೆಯರು ಅಂದು ಹಬ್ಬಿದ ಕಗ್ಗತ್ತಲೆಯಲ್ಲಿ ಬಹಿರಂಗವಾಗಿಯೇ ಸಂಚರಿಸುತ್ತಿದ್ದರು. ೧೦೩. ಯಮುನಾನದಿಯ ಪೂರ್ಣಪ್ರವಾಹ ಜಲರಾಶಿಯು, ಗಂಗಾನದಿಯ ಒತ್ತಡದಿಂದ ಕಲಕಿ ಭಿನ್ನವಾಗುವಂತೆ ಕತ್ತಲೆಯು ಸರಿಯಿತು. ಉದಯಾದ್ರಿ ಶಿಖರವೆಂಬ ತನ್ನ ನಿಲ್ದಾಣಕ್ಕೆ ಬಂದ ಐರಾವತದ ಕಾಂತಿಯಿಂದ ಕೂಡಿದಂತೆಯೂ ಶ್ರೀಗಂಧವನ್ನು ಬಳಿದಂತೆಯೂ ಪೂರ್ಣದಿಙ್ಮುಖವು ಚಂದ್ರೋದಯಸಮಯದಲ್ಲಿ ಬೆಳ್ಳಗೆ ಹೊಳೆಯುತ್ತಿದ್ದಿತು. ವ|| ಆಮೇಲೆ ೧೦೪. ಕ್ಷೀರಸಾಗರೋದಿಕ ಚಂದ್ರಮಂಡಲವು ವಿಶಾಲವಾದ ಪೂರ್ವಾಧಿಪೀಠಾಗ್ರದಲ್ಲಿರುವ ಕೆಂಪುಕಲ್ಲಿನ ವೃತ್ತಾಕಾರದ ಲಿಂಗದಂತೆ ಮನೋಹರವಾಗಿ ಉದಿಸಿತು. ಕ್ರಮವಾಗಿ ಬೆಳೆದು ತನ್ನ ರಾಗ (೧. ಕೆಂಪು, ೨. ಅನುರಾಗ) ದಿಂದ ಚಕೋರಪಕ್ಷಿಗಳ ಸಮೂಹಕ್ಕೆ ಸಂತೋಷವನ್ನುಂಟುಮಾಡಿತು. ಕಾಂತಿಯೆಂಬ ಬಳ್ಳಿಗೆ ಆಶ್ರಯಸ್ತಂಭವಾಗಿ ನೈದಿಲೆಗಳ ಕುಟುಂಬವನ್ನು ವಿಕಾಸಗೊಳಿಸಿತು. ಕತ್ತಲೆಯೆಂಬ ಪರ್ವತವನ್ನು ವಜ್ರಾಯುಧದಂತೆ ಭೇದಿಸಿತು. ಕಾಮನ ಆಡಂಬರಕ್ಕೂ ವಿಟರ ಗಾಬರಿಗೂ ಕಾರಣವಾಯಿತು. ೧೦೫. ಕೆಂಪಾದ ಕಿರಣಗಳ ಸಾಲೆಂಬ ಕೆಂಪು ಚಿಗುರನ್ನು ಅಗ್ರದಲ್ಲಿ ಧರಿಸಿದ ಉದಯಗಿರಿಯೆಂಬ ಕಲಶದ ರತ್ನದ ಕನ್ನಡಿಯಂತೆ ಚಂದ್ರಮಂಡಲವು ಹೊಳೆಯಿತು.

---

೧. ಗಂಗೆಯನೊಡ್ಡಜೆವಂತೆ (ಕ) ಗಂಗೆಯನೊಡ್ಡಜೆಪಂತೆ (ಖ)

ಸಂಗಡಿಸೆ ತನ್ನೊಳರುಣಪಿ
ಶಂಗಸಿತದ್ಯುತಿಗಳೆಂಬನುಕ್ರಮರುಚಿ ಶ
ಕ್ರಂಗೆತ್ತಿದ ಮಾಣಿಕಗೊಡೆ
ಪೊಂಗೊಡೆ [1]ಬೆಳ್ಳಿಗೊಡೆಯೆನಿಸಿದುದು ವಿಧುಬಿಂಬಂ ೧೦೬

ತಾರೇಶತಾರ್ಕ್ಷ್ಯನಂಶುವಿ
ಸಾರಿತಪಕ್ಷಂ ಬರಲ್ ನಭಶ್ಚಂದನಧಾ
ತ್ರೀರುಹಮಂ ಸುತ್ತಿದ ಕಾ
ಳೋರಗನೋಡುವವೊಲೋಡಿ ಪೋದುದು ತಿಮಿರಂ ೧೦೭

[2]ಮೀಂಗಳೆ ಮುತ್ತೆನಿಸುವ ಬೆ
ಳ್ದಿಂಗಳೆ ಪಾಲ್ಗಡಲನಿಟಿಸೆ ಮಂಡಲಶೇಷೋ
ತ್ಸಂಗಶಯನೀಯದೊಳೆ ಕೃ
ಷ್ಣಾಂಗದ್ಯುತಿಯಂತಿರೆಸೆದುದಿಂದುಕಳಂಕಂ ೧೦೮

ಕರಗಿಸೆ ಬೆಳ್ಳಿಯಪ್ಪುಡಿದು ತೆಳ್ಪೊರೆಯೆತ್ತೆ ದುಕೂಲವಪ್ಪ ಕಂ
ಡರಿಸೆ ಮರಾಳವಪ್ಪುರುಳಿಮಾಡಿ ಸರಂಗೊಳೆ ತಾರಹಾರವ
ಪ್ಪರೆದೊಡೆ ಸೌಧಸಂತತಿಗೆ ಪಾಲ್ತೊದೆಯಪ್ಪ ಕಟಿಲ್ಚಿ ಕೂಡೆ ಕ
ರ್ಪುರವಳುಕಪ್ಪುಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ ೧೦೯

ವ|| ಅಂತು ಚೆಲ್ವಾದ ಚಂದ್ರಿಕಾ[3]ವಿಳಾಸದೊಳುಪೇಂದ್ರಂ ಸಾಧಾರಣವಿಟ ಪ್ರಸಾಧನ

೧೦೬. ಉದಯಿಸಿದ ಚಂದ್ರನಲ್ಲಿ ಅನುಕ್ರಮವಾಗಿ ಕೆಂಪಾದ, ಹಳದಿಯ, ಬಿಳಿಯ ಕಾಂತಿಗಳು ಒದಗಿದವು. ಆದುದರಿಂದ ಚಂದ್ರಮಂಡಲವು ಮೊದಲು ರತ್ನದ ಕೊಡೆಯನ್ನೂ ಆಮೇಲೆ ಚಿನ್ನದ ಕೊಡೆಯನ್ನೂ ಅದಾದಮೇಲೆ ಬೆಳ್ಳಿಯ ಕೊಡೆಯನ್ನೂ ಇಂದ್ರನಿಗೆ ಎತ್ತಿಹಿಡಿದಂತೆ ಕಾಣಿಸುತ್ತಿದ್ದಿತು. ೧೦೭. ಚಂದ್ರನೆಂಬ ಗರುಡನು, ತನ್ನ ಕಿರಣಗಳೆಂಬ ರೆಕ್ಕೆಗಳನ್ನು ಬೀಸಿ ಬಂದುದರಿಂದ ಆಕಾಶವೆಂಬ ಶ್ರೀಗಂಧವೃಕ್ಷಕ್ಕೆ ಸುತ್ತಿಕೊಂಡಿದ್ದ ಕೃಷ್ಣಸರ್ಪವು ಓಡಿಹೋಗುವಂತೆ ಕತ್ತಲೆಯು ಓಡಿಹೋಯಿತು. ೧೦೮. ಬೆಳುದಿಂಗಳು ಕ್ಷೀರಸಾಗರವನ್ನು ಮೀರಿಸಿದ್ದಿತು. ನಕ್ಷತ್ರಗಳು ಸಾಗರದ ಮುತ್ತುಗಳಂತೆ ಇದ್ದುವು. ಚಂದ್ರಮಂಡಲವು ಸಿಂಬಿಯಂತೆ ಸುತ್ತಿಕೊಂಡ ಆದಿಶೇಷನ ಕೊಡೆಯಂತೆಯೂ ಚಂದ್ರನ ಕಳಂಕವು ಕೊಡೆಯ ಮೇಲೆ ಮಲಗಿರುವ ಕೃಷ್ಣನ ಅಂಗಕಾಂತಿಯಂತೆಯೂ ಹೊಳೆಯುತ್ತಿದ್ದಿತು. ೧೦೯. ಬೆಳುದಿಂಗಳು ಬಹು ಸಾಂದ್ರವಾಗಿದ್ದು, ಕರಗಿಸಿದರೆ ಬೆಳ್ಳಿಯೂ, ತುಂಡುಮಾಡಿ ಪೊರೆಯೆತ್ತಿದರೆ ದುಕೂಲವೂ, ಕೆತ್ತಿದರೆ ಹಂಸವೂ, ಗುಂಡಗೆಮಾಡಿ ಸರಮಾಡಿದರೆ ಮುತ್ತಿನಹಾರವೂ, ಅರೆದರೆ ಸೌಧಗಳಿಗೆ ಬಳಿಯಬಹುದಾದ ಹಾಲಿನಂತೆ ಬೆಳ್ಳಗಿರುವ ಸುಣ್ಣವೂ ಆಗುವ ಅತಿಶಯಗುಣವನ್ನು ಪಡೆದಿದ್ದಿತು. ವ|| ಹಾಗೆ ಚೆಲುವಾದ ಬೆಳುದಿಂಗಳ ವೈಭವದಲ್ಲಿ ಕೃಷ್ಣನು, ಸಾಧಾರಣ ವಿಟನ ವೇಷಭೂಷಣಗಳಿಂದ ತನ್ನ ರೂಪವನ್ನು

---

೧. ಬೆಳ್ಳಿಗೊಡೆಯೆನಿಸಿದುದು ಶಶಿಬಿಂಬಂ (ಕಗ) ಬೆಳ್ಗೊಡೆಯಿದೆನಿಸಿದುದು ವಿಧುಬಿಂಬಂ (ಖ) ೨. ತಿಂಗಳ ಬಿತ್ತೆನಿಸುವ (ಖ). ೩. ವಿಳಾಸದೊಳುಪೇಂದ್ರಸಾಧಾರಣ ಪ್ರಸಾಧನಪ್ರಚ್ಛನ್ನ ನಾರಿ (ಕ) ವಿಳಾಸದೊಳುಪೇಂದ್ರಸಾಧಾರಣಪ್ರಸಾಧನಪ್ರಚ್ಛನ್ನನಾಗಿ (ಗ)

ಪ್ರಚ್ಛನ್ನನಾಗಿ ನಿಜಪ್ರಿಯಸಖಂ ಪಾರ್ಥನೊಡವರೆ ನಾಗರಿಕ ವಿಟ ವಿದೂಷಕ ಪೀಠಮರ್ದಕಪುರಸ್ಸರ ಪೌರವಿಹಾರಕ್ಕೆ ಪೊಱಮಡೆ

ನವನೀಲೋತ್ಪಲಲಕ್ಷ್ಮಿಯಂ ನಗಿಸಿ ಮಲ್ಲೀರಾಮೆಯಂ ಮೇಳವಾ
ಡಿ ವನೇಜಾತಿನಿಯಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸ
ಬ್ಬವಕಾಱಂಗೆಣೆಯಾಗಿ ವಾರವನಿತಾಸೌಭಾಗ್ಯಘಂಟಾರುತಂ
[1]ಸುವಿಟಸ್ವೈರರವಾರುತಂ ಕುಸುಮಚಾಪಜ್ಯಾರುತಂ ಮಾರುತಂ ೧೧೦

ವ|| ಆ ಮಂದಮಾರುತನಂ ಮನಂಗೊಂಡು ನಯನಭ್ರಮರಪುಷ್ಪವಾಟವೆಂಬ ವೇಶ್ಯಾವಾಟದೊಳಗಣೆ ಬರ್ಪಾಗಳ್

ತನುಲತೆ ಶೋಭೆಯಂ ತಳೆದು ನಿಲ್ವಿನೆಗಂ ಮುಖಲಕ್ಷ್ಮಿಪೂರ್ಣಚಂ
ದ್ರನನಿಟೆಕೆಯ್ದು ನಿಲ್ವಿನೆಗಮಾಭರಣಪ್ರಭೆಗಳ್ ಪೊದಱ್ದು ನಿ
ಲ್ವಿನೆಗಮಪಾಂಗಮಾಳಿಕೆ ವಿಜೃಂಭಿಸಿ ನಿಲ್ವಿನೆಗಂ ಮನೋಭವಂ
ನನೆಗಣೆದೊಟ್ಟು [2]ನಿಲ್ವಿನೆಗಮೊತ್ತೆಗೆ ನಿಂದೆಳವೆಂಡಿರೊಪ್ಪಿದರ್ ೧೧೧

ವ|| ಅಲ್ಲಿ

ಪವಳದಿನಿಂಗಡಲ್ ಶಫರದಿಂ ಕೊಳನುನ್ಮದಭೃಂಗನಾದದಿಂ
ದವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ಭೂಷಣಾಂಶುವಿಂ
ಕವಿದಲರ್ಗಣ್ಣ ಮಾಪ್ಪೊಳಪಿನಿಂ ಮೃದುಗೇಯದಿನೊಪ್ಪಲುಯ್ಯಲಾ
ಡುವ ಲಲಿತಾಂಗಿ ತನ್ನೆಡೆಗೆ ನೀಱರ ಚಿತ್ತಮನುಯ್ಯಲಾಡಿದಳ್ ೧೧೨

ಮರೆಮಾಡಿಕೊಂಡು, ತನ್ನ ಪ್ರಿಯಸಖನಾದ ಅರ್ಜುನನು ಸಂಗಡ ಬರಲು ನಾಗರಿಕ ವಿಟ ವಿದೂಷಕ ಪೀಠಮರ್ದಕರೊಡನೆ ಪುರವಿಹಾರಕ್ಕೆ ಹೊರಟನು. ೧೧೦. ಹೊಸ ಕನ್ನೈದಿಲೆಯೆಂಬ ಲಕ್ಷ್ಮಿಯನ್ನು ನಗಿಸಿ, ಮಲ್ಲಿಗೆಯೆಂಬ ಸುಂದರಿಯ ಜತೆಗೂಡಿ, ಪದ್ಮಿನೀ ಜಾತಿಯುವಳನ್ನು ತಮಾಷೆಮಾಡಿ ಗಾಬರಿಗೊಳಿಸಿ, ವಿನೋದವನ್ನು ಪಡೆದು, ಹಾಸ್ಯಗಾರನಂತೆ ವೇಶ್ಯೆಯರ ಸೌಭಾಗ್ಯವರ್ಧಕ ಘಂಟೆಯಂತೆ ನಾದಮಾಡುವ ಮನ್ಮಥನ ಬಿಲ್ಲಹೆದೆಯ ಟಂಕಾರದೊಡನೆಯೂ ವಿಟರ ಸ್ವೇಚ್ಛಾಲಾಪಧ್ವನಿಯೊಡನೆಯೂ ಕೂಡಿದ ಮಂದಮಾರುತವು ಬೀಸಿತು. ವ|| ಆ ಮಂದಮಾರುತವನ್ನು ಅಭಿನಂದಿಸಿ, ಕಣ್ಣುಗಳೆಂಬ ತುಂಬಿಗಳಿಗೆ ಹೂದೋಟವೆನಿಸಿದ ವೇಶ್ಯೆಯರ ಮನೆಗಳ ಬೀದಿಯಲ್ಲಿ ಬರುವಾಗ, ೧೧೧. ಲತೆಯಂತೆ ಕೋಮಲವಾಗಿರುವ ದೇಹವು ಸೊಗಸುತ್ತಲೂ ಮುಖಕಾಂತಿಯು ಪೂರ್ಣ ಚಂದ್ರನನ್ನು ತಿರಸ್ಕರಿಸುತ್ತಲೂ ಆಭರಣಗಳ ಹೊಳಪುಗಳೂ ಕಡೆಗಣ್ಣುಗಳ ಕಾಂತಿಯೂ ವಿಜೃಂಭಿಸುತ್ತಲೂ ಮನ್ಮಥನು ಬಿಲ್ಲಿನಲ್ಲಿ ಬಾಣವನ್ನು ತೊಟ್ಟುನಿಲ್ಲುತ್ತಲೂ ಇರುವಲ್ಲಿ ವಿಟರ ಒತ್ತಿಗೆ ಸಿದ್ಧವಾಗಿರುವ ವೇಶ್ಯಾತರುಣಿಯರು ಒಪ್ಪುತ್ತಿದ್ದರು. ವ|| ಅಲ್ಲಿ ೧೧೨. ಕ್ಷೀರಸಮುದ್ರವು, ಹವಳದಿಂದಲೂ ಕೊಳವು ಮೀನಿನಿಂದಲೂ ಪುಷ್ಪಭರಿತವಾದ ಮರವು ತುಂಬಿಗಳ ನಾದದಿಂದಲೂ ಒಪ್ಪುವಂತೆ, ಬೆಳುದಿಂಗಳು ಭೂಷಣಗಳ

---

೧. ಸುವಿಟಸ್ವೈರರವಾವೃತಂ (ಕಗ) ಸುವಿಟಸ್ವೇದಕಲಾರುತಂ (ಖ) ೨. ನಿಲ್ವಿನೆಗಮೊತ್ತನೆ (ಖ)

ವ|| ಅದಲ್ಲದೆಯುಂ

ಪದನಖಕಾಂತಿ ತಾರಗೆಯ ಕಾಂತಿಯನೇೞಿಸೆ ಸುಯ್ಯ [1]ಕಂಪೆರ
ಲ್ಗೊದವಿಸೆ ಕಂಪನಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚೆ ಗೇ
ಯದ ರುತಿ ಕಂತುಚಾಪ[2]ರುತಿಯೊಳ್ ತಡಮಾಗೆ ಮುಖೇಂದುವಿಂದುವಿಂ
ಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೊಲ್ ಪೊಳೆದುಯ್ಯಲಾಡಿದಳ್ ೧೧೩

ವ|| ಮತ್ತೊರ್ವಳ್

ಈ ಪೊಸಸುಗ್ಗಿ ರಂಜಿಸುವುದೀ ಪೊಸ [3]ಜವ್ವನೆಯಿಂದೆನಲ್ ಜಸಂ
ವ್ಯಾಪಿಸೆ[4]ಭಾವಮಂ ಮೆಱೆದು ಕಾಮಿನಿ ಕಾಮಭುಜಾಗ್ರಮಂ ಜಯ
ಶ್ರೀ ಪರಿದೇಱಲೇಱೆ ತಳಿರುಯ್ಯಲನಾ ಖಚರೀಜನಂಗಳೊಳ್
ರೂಪಿಡೆ ತನ್ನ [5]ರೂಪೊಲೆದು ಪಾಡಿದಳಚ್ಯುತನಂಕಮಾಲೆಯಂ ೧೧೪

ವ|| ಮುಂದೊಂದೆಡೆಯೊಳೊರ್ವಳ್

ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋ
ಹರಿ ತಳಿರ್ದೊಂಗಲಂ ತಳೆದ ಕೋಮಲವಲ್ಲರಿಯಂತೆ ರಕ್ತಪಂ
ಕರುಹಮನಾಂತ ಪಂಕಜನಿಯಂತೆ ನವೋದಿತಚಂದ್ರಬಿಂಬಮಂ
ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ ೧೧೫

ಕಾಂತಿಯಿಂದಲೂ ಕಮಲನೇತ್ರದ ಪ್ರತಿಪ್ರಕಾಶದಿಂದಲೂ ಮೃದುಗಾನದಿಂದಲೂ ಒಪ್ಪುತ್ತಿರಲು, ಲಲಿತಾಂಗಿಯೊಬ್ಬಳು ಲಾವಣ್ಯಯುತರ ಚಿತ್ತವನ್ನು ತನ್ನೆಡೆಗೆ ಸೆಳೆಯಲು ಉಯ್ಯಾಲೆಯನ್ನು ಆಡುತ್ತಿದ್ದಳು. ವ|| ಅದೂ ಅಲ್ಲದೆ, ೧೧೩. ಮನೋಹರೆಯೊಬ್ಬಳು ಅವಳ ಕಾಲುಗುರಿನ ಕಾಂತಿಯು ನಕ್ಷತ್ರಕಾಂತಿಯನ್ನು ಮೀರಿಸಿಯೂ ಉಸಿರಿನ ಸುಗಂಧ ಹೂವುಗಳಿಗೆ ಸುವಾಸನೆಯನ್ನೊದಗಿಸುತ್ತಲೂ ಕಣ್ಣುಗಳು ಬೆಳುದಿಂಗಳನ್ನು ಎದುರಿಸುತ್ತಲೂ ಗಾನಧ್ವನಿಯು ಕಾಮನ ಬಿಲ್ಲಿನ ಧ್ವನಿಯನ್ನು ಹೋಲುತ್ತಲೂ ಮುಖಚಂದ್ರನು ಚಂದ್ರನಿಗೆ ಎದಿರು ಬೀಳುತ್ತಲೂ ಇರುವಲ್ಲಿ ಮಿಂಚು ಹೊಳೆಯುವಂತೆ ಉಯ್ಯಾಲೆಯನ್ನು ಆಡಿದಳು. ೧೧೪. ಒಬ್ಬಳು ಕಾಮಿನಿಯು ಈ ನವಯುವತಿಯಿಂದ ಈ ಹೊಸ ವಸಂತಕಾಲವು ರಂಜಿಸುವುದು ಎಂಬಂತಿರಲು ಸುರಿಯುವ ಮದಧಾರೆಯು ಗಿರಿಝರಿಯಂತೆಯೂ, ಜಯಶ್ರೀಯು ಕಾಮನ ಭುಜಾಗ್ರವನ್ನು ಓಡಿಬಂದೇರುವಂತೆ ಆಗಲು, ತನ್ನ ರೂಪವು ಖೇಚರಿಯರಲ್ಲಿ ಪ್ರತಿಫಲಿಸುವಂತಾಗಲು ಚಿಗುರುಯ್ಯಾಲೆಯನ್ನೇರಿ ಶೃಂಗಾರಾದಿಭಾವಗಳು ಪ್ರಕಟವಾಗುವಂತೆ ಒಲೆದಾಡುತ್ತ ಕೃಷ್ಣನ ಕೀರ್ತಿಗಾನ ಮಾಲೆಯನ್ನು ಹಾಡಿದಳು. ವ|| ಮುಂದೆ ಒಂದು ಸ್ಥಳದಲ್ಲಿ ಒಬ್ಬಳು - ೧೧೫. ಮದ್ಯಪಾನ ಗೋಷ್ಠಿಯಲ್ಲಿ ಹೊಸ ಪದ್ಮರಾಗಮಣಿಯ ಪಾನಪಾತ್ರೆಯನ್ನು ಕಯ್ಯಲ್ಲಿ ಹಿಡಿದುಕೊಂಡಿರುವ ಮನೋಹರೆ

---

೧. ಕಂಪರಲ್ಗೊದವಿಸೆ (ಖ) ೨. ಶರದೊಳ್ (ಖ) ೩. ಜವ್ವನದಿಂದೆನಲ್ (ಕಗ) ೪. ಚಾಗಮಂ (ಕಗ) ೫. ರೂಪೊಲಿದು (ಕಗ)

ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತ
ನ್ನಧರದ ರಾಗದೊಳ್ ಪೊರೆದುದಂ [೧]ಮನದೊಳ್ ಬೆಱಗಾಗಿ ನೋಡುತುಂ
ಮಧುರಸಮಲ್ತು ಕುಂಕುಮರಸಂ ದಿಟವೆಂದು ಬೞಿಕ್ಕೆ ಶಂಕೆ ತ
ನ್ಮಧುರಸಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ ೧೧೬

ತನುಲತೆಗಂಕುರಂ ತಳಿರಲರ್ ಮಧುಸಂಗದೊಳಾಯ್ತು ಚೋದ್ಯಮೆಂ
ದೆನೆ ಮಧುಪಾನಜಾತಪುಳಕೇಕ್ಷಣಶೋಣಿಮಘರ್ಮಬಿಂದುಗಳ್
ತನಗೆಸೆಯಲ್ [೨]ಮದೋತ್ಸವದೆ ಕೋಗಿಲೆವೆಣ್ ಗೞಪಂ ನೆಗೞ್ಚುವಂ
ತನುವಿಪ ಸೊರ್ಕಿನಿಂ ಪಿಕನಿನಾದೆ ಪೆಱಳ್ [೩]ಗೞಪಂ ನೆಗೞ್ಚಿದಳ್ ೧೧೭

ಎಮ್ಮ ಕೆಲಂಗಳೊಳ್ ಮೆಱೆಯುತಿರ್ದಪುವೀಶ್ರುತಿಪೂರಕೈರವಂ
ತಮ್ಮ ಬೆಡಂಗನೆಂದು ಸೆಣಸುತ್ತವಱೊಳ್ [೪]ತೊಡರ್ದಿಂತಿವಲ್ತೆ ಕೆಂ
ಪಂ ಮುಳಿಸಿಂದವಾಂತುವೆನೆ ಕೆನ್ನೆವರಂ ನಿಮಿರ್ದಕ್ಷಿಗಳ್ಗೆ ರಾ
ಗಂ ಮಧುಸೇವೆಯಿಂ ನೆಗೞೆ ರಂಜಿಸಿದರ್ ಮಧುಮತ್ತಕಾಂತೆಯರ್ ೧೧೮

ಯೊಬ್ಬಳು-ಚಿಗುರಿನ ಗೊಂಚಲನ್ನು ಪಡೆದಿರುವ ಕೋಮಲವಾದ ಬಳ್ಳಿಯಂತೆಯೂ, ಕೆಂದಾವರೆ ಹೂವನ್ನು ಧರಿಸಿರುವ ಕಮಲಲತೆಯಂತೆಯೂ ಆಗತಾನೆ ಉದಿಸಿದ ಚಂದ್ರಮಂಡಲವನ್ನು ಧರಿಸಿರುವ ಪೂರ್ವದಿಗ್ವನಿತೆಯಂತೆಯೂ ಚೆನ್ನಾಗಿ ಕಾಣಿಸುತ್ತಿದ್ದಳು. ೧೧೬. ಚಂದ್ರಮುಖಿಯೊಬ್ಬಳು ಮದ್ಯವನ್ನು ಮೆಲ್ಲ ಮೆಲ್ಲಗೆ ರುಚಿ ನೋಡುತ್ತ ಕುಡಿಯುತ್ತ ಪಾತ್ರೆಯ ಮದ್ಯವನ್ನು ನೋಡಿದಳು. ಆಗ ಅವಳ ಕೆಂಪುತುಟಿಯ ಕಾಂತಿಯು ಮಧ್ಯದಲ್ಲಿ ಹರಡಿ ಅದು ಕೆಂಪಾಗಿ ಕಾಣಿಸಿತು. ಅವಳು ಬೆರಗಾಗಿ ಇದು ಮದ್ಯವಲ್ಲ ನಿಜವಾಗಿ ಕುಂಕುಮದ್ರವ ಎಂದು ಶಂಕಿಸಿದಳು. ಬಳಿಕ ಅದರ ರುಚಿಗಂಧಗಳನ್ನು ಪರೀಕ್ಷಿಸಿದಳು. ಶಂಕೆಯು ತೊಲಗಿತು. ಪ್ರೀತಿಯಿಂದ ಮದ್ಯವನ್ನು ಕುಡಿದಳು. ೧೧೭. ಮತ್ತೊಬ್ಬಳು ಕೋಗಿಲೆಯ ದನಿಯವಳು ದೇಹವೆಂಬ ಬಳ್ಳಿಗೆ ಮಧು (=೧. ವಸಂತ, ೨. ಮದ್ಯ) ಸಂಗದಿಂದ ಎಲೆ, ಮೊಳಕೆ, ಚಿಗುರು, ಹೂಗಳು ಉದಿಸಿದುವು, ಆಶ್ಚರ್ಯ ಎನ್ನುವಂತೆ ಮದ್ಯಪಾನದಿಂದ ತನಗೆ ರೋಮಾಂಚನವೂ ಕಣ್ಣಿನಲ್ಲಿ ಕೆಂಪೂ ಬೆವರುಹನಿಗಳೂ ಉಂಟಾಗಲು ಸೊಕ್ಕಿನಿಂದ ವಸಂತ ಮದೋತ್ಸವದಿಂದ ಹೆಣ್ಣು ಕೋಗಿಲೆಯು ಹಾಡುವಂತೆ ಹಾಡಿದಳು. ೧೧೮. ಕಿವಿಯ ಮೇಲೆ ನೈದಿಲೆ ಹೂವನ್ನು ಧರಿಸಿದ ಯುವತಿಯರು, ಮದ್ಯವನ್ನು ಹೆಚ್ಚಾಗಿ ಕುಡಿದರು. ಅದರಿಂದ ಮದವೇರಿ, ಕಣ್ಣುಗಳೂ ಕೆಂಪಾದವು. ಅದನ್ನು ನೋಡಿದರೆ ನಮ್ಮ ಪಕ್ಕದಲ್ಲೇ ಇದ್ದುಕೊಂಡು ಇವು ಬೆಡಗನ್ನು ಬೀರುತ್ತಿವೆಯೆಂದು ಸ್ಪರ್ಧೆಯಿಂದ ಕಿವಿಯ ಹತ್ತಿರದವರೆಗೂ ಹೋಗಿರುವ ಕಣ್ಣುಗಳು ಅವುಗಳ ಮೇಲೆ ಕೋಪಗೊಂಡು ಕೆಂಪಾಗಿದೆಯೋ ಎನ್ನುವಂತೆ ಆಯಿತು.

---

೧. ಮಧುವಂ (ಕಗ) ೨. ಮಧೂತ್ಸವದೆ ಕೋಗಿಲೆಗಳ್ಗೞಪಂ ತಗುಳ್ಚುತುಂ ತನುವಿನ (ಖ) ೩. ಮನಮಂ (ಖ) ೪. ತೊಡರ್ದಂತಿರಲ್ತೆ (ಕಗ) ತೊಡರ್ದಂತಿರಲ್ಕೆ (ಮೊಅ)

ತನುವಂ ಶೃಂಗಾರವೆಂಬಿಂಗಡಲ ನೊರೆಯೆ ಸುತ್ತಿರ್ದುದೆಂಬಂದದಿಂದಂ
ತನಗೊಪ್ಪಂಬೆತ್ತಿರಲ್ ಬೆಳ್ಪಸದನಮಮಳಜ್ಯೋತ್ಸ್ನೆಯೊಳ್ ಮಲ್ಲಿಕಾಗಂ
ಧ ನವಶ್ರೀಖಂಡಗಂಧ ಶ್ವಸಿತಪವನಗಂಧಾನುಮೇಯತ್ವನಿಂದೊ
ಯ್ಯನೆ ಸಂಕೇತಾಲಯಕ್ಕೆಯ್ದುವಳನಗಧರಂ ನೋಡಿದಂ ಸಸ್ಮಿತಾಸ್ಯಂ ೧೧೯

ವ॥ ಆಗಳೊರ್ವಳಿಚ್ಚೆಯಾಣ್ಮನೊಳ್ ಬೆಚ್ಚುಮನದಾಕೆ

ನಿನಗಿಂದಾವ ಭುಜಂಗನಂ ಕರೆವೆನೆಂಬಾ ಮಾತುಗೇಳ್ದಂಬುದ
ಧ್ವನಿಯಂ ಕೇಳ್ದ ಮರಾಳಿಯಂತೆ ಬೆದಱುತ್ತುಂ ದೂತಿಯಂ ಬೈದು [1]ತಾ
ಯನುವಿಂಗಂ ಮೊಗಸೋಲದಾವ ವಿಟರುಂ ಕೊಟ್ಟೊತ್ತೆಯಂ ಕೊಳ್ಳದಿ
ರ್ಪನೆಗಂ ಪ್ರೀತಿಯೆ ದೂತಿಯಾಗಿ [2]ಬರೆ ಬಂದಂ ಕಾಂತನಾ ಕಾಂತೆಗಂ ೧೨೦

ವ॥ ಅದಂ ನೋಡುತ್ತೆ ಬರಲೊರ್ವನನ್ಯಕಾಂತೆಯೊಳ್ ಕೈಕೊಂಡ ಪೊಲ್ಲಮೆಯಂ ಕಳೆಯಲ್ಕೆಂದು ತನ್ನ ನಲ್ಲಳ ಕಾಲ್ಗೆಱಗೆ

ಎಱಕಂ ಚಿತ್ತದೊಳಿಲ್ಲ ಕಾಲ್ಗೆಱಗಿ ನೀನೇಕಾಳಿಗೊಂಡಿರ್ಪೆ ಮಾ
ಣೆಱಗಿನ್ನಾ ಪೊಸವೇಂಟದಾಕೆಗೆನುತುಂ ಹೂಂಕಾರದಿಂ ಕಾಯ್ಪು ಕ
ಣ್ದೆಱೆಯಲ್ ವಾಮಪದಾಬ್ಜದಿಂದೊದೆಯೆ ನಲ್ಲಂಗಾದ ರೋಮಾಂಚದಿಂ
ಪೆಱಪಿಂಗಲ್ ಮುಳಿಸಾಕೆ ಪಕ್ಷ್ಮದೊಳೆ ಪಾಯ್ತರ್ಪಶ್ರುವಂ ತಾಳ್ದಿದಳ್ ೧೨೧

೧೧೯. ಒಬ್ಬಳು, ಅವಳ ದೇಹವನ್ನು ಶೃಂಗಾರವೆಂಬ ಕ್ಷೀರಸಾಗರದ ನೊರೆಯೇ ಆವರಿಸಿದೆಯೆನ್ನುವಂತೆ ಬಿಳಿಯ ಉಡಿಗೆ ತೊಡಿಗೆ ಲೇಪನಗಳಿಂದ ಅಲಂಕರಿಸಿಕೊಂಡು ನಿರ್ಮಲವಾದ ಬೆಳುದಿಂಗಳಲ್ಲಿ ಮೆಲ್ಲಗೆ ಸಂಕೇತಗೃಹಕ್ಕೆ ಹೋಗುತ್ತಿದ್ದಳು. ಬೆಳುದಿಂಗಳಲ್ಲಿ ಐಕ್ಯವಾಗಿದ್ದ ಅವಳು ಸಾಮಾನ್ಯರಿಗೆ ಯಾರಿಗೂ ಕಾಣಿಸುತ್ತಿರಲಿಲ್ಲ. ಮಲ್ಲಿಗೆ ಹೂವಿನ ಶ್ರೀಗಂಧದ ಅವಳ ಉಸಿರಿನ ಗಾಳಿಯ ಸುವಾಸನೆಗಳಿಂದ ಯುವತಿಯೆಂದು ತಿಳಿದು ಮುಗುಳುನಗೆಯುಳ್ಳವನಾಗಿ ಕೃಷ್ಣನು ನೋಡಿದನು. ವ॥ ಆಗ ತನಗೆ ಇಷ್ಟವಾದ ಪ್ರಿಯನಲ್ಲೇ ನೆಟ್ಟ ಮನಸ್ಸುಳ್ಳವಳೊಬ್ಬಳು - ೧೨೦. "ನಿನಗೆ ಈ ದಿನ ಯಾವ ವಿಟನನ್ನು ಕರೆಯಲಿ?" ಎಂಬ ಸೇವಕಿಯ ಮಾತನ್ನು ಕೇಳಿ, ಮೇಘಗರ್ಜನೆಯನ್ನು ಕೇಳಿದ ಹಂಸಿಯಂತೆ ಬೆದರುತ್ತ ಆ ದೂತಿಯನ್ನು ಬೈದಳು. ತಾಯಿಯ ಮಾತಿನಿಂದಲೂ ಸಮಾಧಾನಗೊಳ್ಳಲಿಲ್ಲ. ಬೇರೆ ವಿಟರು ಎಷ್ಟೆಷ್ಟು ಒತ್ತೆಯನ್ನು ಕೊಡಲು ಬಂದರೂ ತೆಗೆದುಕೊಳ್ಳಲಿಲ್ಲ. ಅವಳ ಶುದ್ಧವಾದ ಪ್ರೀತಿಯೆಂಬ ದೂತಿಯೇ ಕರೆತಂದಂತೆ ಪತಿಯಂತೆಯೇ ಇರುವ ಪ್ರಿಯನೇ ಬಂದು ಅವಳೊಡನೆ ಸೇರಿದನು. ವ॥ ಕೃಷ್ಣನು ಅದನ್ನು ನೋಡುತ್ತ ಬರುತ್ತಿರುವಾಗ, ಒಬ್ಬನು ತಾನು ಪರಸ್ತ್ರೀಯರನ್ನು ಕಾಮಿಸಿ, ಮಾಡಿದ ಅಪರಾಧವನ್ನು ಕಳೆದುಕೊಳ್ಳುವುದಕ್ಕಾಗಿ ತನ್ನ ಪತ್ನಿಯ ಕಾಲಿಗೆ ಬೀಳುತ್ತಿರುವುದನ್ನು ಕಂಡನು. ೧೨೧. ವ್ಯಭಿಚಾರ ಮಾಡಿದವನ ಹೆಂಡತಿಯು- "ನಿನ್ನ ಚಿತ್ತದಲ್ಲಿ ನನ್ನ ಮೇಲೆ ಪ್ರೀತಿಯಿಲ್ಲ. ಸುಮ್ಮನೆ ಕಾಲಿಗೆರಗಿ ನನ್ನನ್ನು

---

೧. ತಾಯನುವಕ್ಕಂ ಮೊಗಸೋಲದಾವ (ಕಗ) ತಾಯನುವಕ್ಕಿಂ ಮೊಗಸೋವದಾವ (ಖ)
೨. ತರೆ (ಕಗ)

ವ॥ ಆಕೆಯ ವಿವೇಕಮಂ [1]ವಿಚಾರಿಸುತ್ತುಂಬರೆ ಮುಂದೊಂದೆಡೆಯೊಳ್

ತೊಲಗೆ ಮನಸ್ತಮಂ ಕಿಡೆ ನಿಜೇಕ್ಷಣರಾಗದ ಸಂಜೆಗೆಂಪು ನಿ
ರ್ಮಳದರಹಾಸಚಂದ್ರಿಕೆಯುಮಂ ಕುಡೆ ಕಾಲ್ವಿಡಿದೋಪನೋಪಳಂ
ತಿಳಿಪುವುದುಂ ಪ್ರಸನ್ನತೆಯಿನೋಪಳ ವಕ್ತ್ರಹಿಮಾಂಶುಮಂಡಳಂ
ಬೆಳಗಿದುದುಣ್ಮಿ ಪೊಣ್ಮೆ ಜಘನದ್ರವಚಂದ್ರಶಿಲಾಂಬುನಿರ್ಝರಂ ೧೨೨

ವ॥ ಮತ್ತೊಂದು ಕೇಳೀಗೃಹದೊಳ್

ಶಕುನಿವ್ರಾತಾರವಂ ಮನ್ಮಥರಥಬಲವದ್ಧೀಂಕೃತಂ ಕಂಠನಾದಂ
ಮಕರಾಂಕಜ್ಯಾಲತಾಟಂಕೃತವತಿದೃಢಹಸ್ತಪ್ರಹಾರಸ್ವನಂ ದ
ರ್ಪಕಭೇರೀಭಾಂಕೃತಂ ತಾನೆನೆ ಯುವತಿರತಾರಂಭಕೋಲಾಹಲಧ್ವಾ
ನಕವಿಂತಾ ಕಂತುಸೇನಾಕಳಕಳದವೊಲಾಶ್ಚರ್ಯಮಂ ತಂದುದಾಗಳ್ ೧೨೩

ವ॥ ಆ ಮದನಕೇಳೀಸದನಸಮಕ್ಷದುಪವನದ್ರಾಕ್ಷಾಮಂಟಪದ ಮುಂದಣ ಪ್ರಾಂಗಣದೊಳ್

ಏಕೆ ವಂಚಿಸುತ್ತೀಯೆ ಬಿಡು, ಹೊಸದಾಗಿ ಪ್ರೇಮಿಸಿ ವಿವಾಹಗೊಂಡಿರುವವಳಿಗೆ ಎರಗು ಹೋಗು" ಎಂದು ಹೂಂಕರಿಸುತ್ತ ಕೋಪವು ಹೆಚ್ಚಿದುದರಿಂದ ಪತಿಯನ್ನು ತನ್ನ ಎಡಗಾಲಿನಿಂದ ಒದ್ದಳು. ಅವನಿಗೆ ನೋವಾಗುವ ಬದಲು ಅದರಿಂದ ರೋಮಾಂಚನವಾಯಿತು. ಅದನ್ನು ನೋಡಿ, ಸಂತೋಷದಿಂದ, ಅವಳ ಕೋಪವು ಹಿಮ್ಮೆಟ್ಟಿತು. ಹೊರಡುತ್ತಿದ್ದ ಕಣ್ಣೀರನ್ನು ಸುರಿಸದೆ, ರೆಪ್ಪೆಯಲ್ಲೇ ತಡೆದು ನಿಲ್ಲಿಸಿದಳು. ವ॥ ಆಕೆಯ ವಿವೇಕವನ್ನು ವಿಚಾರಮಾಡುತ್ತ ಬರುತ್ತಿರಲು ಮುಂದೆ ಒಂದು ಎಡೆಯಲ್ಲಿ ೧೨೨. ಪ್ರಿಯನೊಬ್ಬನು ತನ್ನ ಪ್ರಿಯೆಯ ಕಾಲನ್ನು ಹಿಡಿದುಕೊಂಡು, ಅವಳ ಸಿಟ್ಟನ್ನು ಹೋಗಲಾಡಿಸುವುದಕ್ಕಾಗಿ ಸರಿಯಾದ ಸಮಾಧಾನವನ್ನು ಹೇಳಿದನು. ಅದರಿಂದ ಅವಳ ಮನಸ್ಸಿನ ಕೋಪವೆಂಬ ಕತ್ತಲೆಯು ತೊಲಗಿ ಹೋಯಿತು. ಅವಳಿಗೆ ಕೋಪದಿಂದ ಆಗಿದ್ದ ಕಣ್ಣಿನ ಕೆಂಪೆಂಬ ಸಂಜೆಗೆಂಪೂ ಕಳೆದು ಹೋಯಿತು. ಆ ಪ್ರಿಯೆಯ ಮುಖಚಂದ್ರಮಂಡಲವು ಪ್ರಸನ್ನತೆಯಿಂದ ಹೊಳೆಯುತ್ತ ಮುಗುಳುನಗೆಯೆಂಬ ಬೆಳುದಿಂಗಳನ್ನು ಬೀರಿತು. ಅವಳ ಜಘನವೆಂಬ ಚಂದ್ರಕಾಂತಶಿಲೆಯಲ್ಲಿ ಸ್ವೇದದ್ರವ ಝರಿ ಉಕ್ಕಿ ಹರಿಯಿತು. ಮತ್ತೊಂದು ಕ್ರೀಡಾಗೃಹದಲ್ಲಿ ೧೨೩. ಪಕ್ಷಿಗಳ ಗುಂಪಿನ ಧ್ವನಿಯು ಮನ್ಮಥನ ರಥದ ಅಧಿಕ ಭೀಂಕಾರವಾಗಿಯೂ, ಕಂಠಧ್ವನಿಯು ಅವನ ಬಿಲ್ಲಿನ ಹೆದೆಯ ಟಂಕಾರವಾಗಿಯೂ ಬಹಳ ಗಟ್ಟಿಯಾಗಿ ಹೊಡೆಯುವ ಕೈಯ ಶಬ್ದವು ಅವನ ಭೇರಿಯ ಭಾಂಕಾರಶಬ್ದವಾಗಿಯೂ ಇರಲು ಯುವತಿಯರ ರತಿಕ್ರೀಡೆಯ ಆರಂಭದ ಗದ್ದಲವು ಆ ಮನ್ಮಥನ ಸೇನೆಯ ಕಲಕಲಧ್ವನಿಯಂತೆ ಆಶ್ಚರ್ಯವನ್ನುಂಟುಮಾಡಿತು. ವ॥ ಆ ಕಾಮಕ್ರೀಡೆಯ ಗೃಹದ ಎದುರಿನ ಉಪವನದ ದ್ರಾಕ್ಷಿಯ ಚಪ್ಪರದ ಮುಂದಿನ ಅಂಗಳದಲ್ಲಿ

---

೧. ಭಾವಿಸುತ್ತುಂ (ಖ)

ಪೊಡರ್ವುತ್ತುಂಗಸ್ತನಂ ಕೊಂಕಟೆದು ನಿಮಿರ್ವ ನೀಳಾಳಕಂ ಜೋಲ್ದ ಬಂಬ
ಲ್ಮುಡಿ ಬೆಳ್ಪೇಱಿರ್ದ ಬಿಂಬಾಧರಮಣಿ ನಸುಕೊಂಕಿರ್ದ ಕರ್ಣೋತ್ಪಲಂ ಕೆಂ
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಬೆಮರನೆಲರೊಳಂದಾರಿಸುತ್ತಿರ್ದಳೊರ್ವಳ್ ೧೨೪

ವ|| ಆ ಬೆಡಂಗಿಯಂ ಮನದೆಗೊಂಡು ನಡೆಯಲೊಂದು ಗೃಹವನೋಪಾಂತ ದೇಕಾಂತನಿಳಯದೊಳ್

ನೋಡುವರೊಳ್ ಮನಂಬಯಸುವಂತಿರೆ ನಲ್ಮೆ ತುಳುಂಕೆ ಬಿಂಕದಿಂ
ನೋಡುವುದೃದೆ ಮಾತನೊಸೆದಾಡುವರೊಳ್ ಬಗೆ ಬೆರ್ಚುದೋಱೆ [1]ಮಾ
ತಾಡುವುದಿತ್ತು ಕೂಡುವರೊಳಿಲ್ಲದ ಬೇಟಮನುಂಟುಮಾಡೆ ನೀಂ
ಕೂಡುವುದೆಂದು ಮುತ್ತಮುದಗುಂಟಣಿ ಪುತ್ರಿಗೆ ದೀಕ್ಷೆಯಿಕ್ಕಿದಳ್ ೧೨೫

ವ|| ಆ ಮಾತನಾಲಿಸುತುಂ ಬರೆ

ಮುಡಿ ಸೊಪ್ಪಾಗದು ನೀವಿ ಬಿರ್ಚದಧರಂ ಬೇಳ್ಪೇಱದೂರುದ್ವಯಂ
ಪೊಡರ್ದಾಕಂಪಿಸದಕ್ಷಿ ಕೆಂಪಡಸದೊರ್ವಂಗೋತು ನೀನನ್ಯರೊಳ್
ಕೊಡಗೂಸಿರ್ಪವೊಲಿರ್ಪೆ ನಿನ್ನೊಳಗುಗಂಡರ್ ಗಂಡರಿನ್ನೇನುಮಂ
ಕುಡರೆಂದೆಂದು ಕನಲ್ದು ತಾಯ್ ಮಗಳನೊರ್ವಳ್ ಪುರ್ವಿನಿಂ ಜರ್ವಿದಳ್ ೧೨೬

೧೨೪. ಅದಿರುವ ಉನ್ನತಸ್ತನವೂ ಕುಟಿಲತೆ (ಡೊಂಕು) ತಪ್ಪಿ ನೆಟ್ಟಗೆ ನೀಳವಾದ ಮುಂಗುರುಳೂ, ಜೋಲುತ್ತಿರುವ ಸಡಿಲವಾದ ಮುಡಿಯೂ ಬೆಳ್ಳಗಾಗಿರುವ ತೊಂಡೆ ತುಟಿಮಣಿಯೂ ಸ್ವಲ್ಪ ಬಾಗಿರುವ ಕಿವಿಯ ನೈದಿಲೆಯೂ ಕೆಂಪೇರಿದ ಆ ಚಂಚಲನೇತ್ರವೂ ನಡುಗುವ ದೇಹವೂ ರತಿಕ್ರೀಡೆಯ ಆಯಾಸದಿಂದ ಬೆಡಗನ್ನುಂಟುಮಾಡುತ್ತಿರಲು, ಒಬ್ಬ ಪ್ರಿಯೆ ತನ್ನ ಪ್ರಿಯನನ್ನು ಒರಗಿಕೊಂಡು ತನ್ನ ಮೈಯ ಬೆವರನ್ನು ಗಾಳಿಯಿಂದ ಆರಿಸುತ್ತಿದ್ದಳು. ವ|| ಆ ಬೆಡಗಿಯನ್ನು ಮನಸ್ಸಿಟ್ಟು ನೋಡಿ ನಡೆಯುತ್ತಿರುವಾಗ ಒಂದು ಮನೆಯ ಉಪವನದ, ಏಕಾಂತಗೃಹದಲ್ಲಿ ೧೨೫. ಒಬ್ಬಳು ಮುದಿ ಕುಂಟಣಿಯು ತನ್ನ ಮಗಳಿಗೆ "ನಿನ್ನನ್ನು ನೋಡುವ ವಿಟರಲ್ಲಿ ನಿನ್ನ ಮನಸ್ಸು ಆಸೆ ಪಡುತ್ತಿದೆಯೆನ್ನುವಂತೆ ನಲ್ಮೆಯು ತುಳುಕುತ್ತಿರಲು ಬೆಡಗಿನಿಂದ ನೋಡಬೇಕು. ಚೆನ್ನಾಗಿ ಪ್ರೀತಿಯ ಮಾತನಾಡುವವರಲ್ಲಿ ಹೆದರಿಕೆ ತೋರುವಂತೆ ಮಾತನಾಡಬೇಕು. ಹಣವನ್ನಿತ್ತು ನಿನ್ನನ್ನು ಕೂಡುವವರಲ್ಲಿ ಹೆಚ್ಚಾದ ಕಾಮಪೀಡೆಯನ್ನು ಉಂಟುಮಾಡುವಂತೆ ನೀನು ಕೂಡಬೇಕು" ಎಂದು ಉಪದೇಶವನ್ನು ಮಾಡಿದಳು. ವ|| ಆ ಮಾತನ್ನು ಕೇಳುತ್ತ ಬರಲು ೧೨೬. ಒಬ್ಬಳು ಕುಂಟಣಿ ತಾಯಿ ಮಗಳನ್ನು "ನಿನ್ನ ಕೂದಲು ಮುಡಿ ಸಡಿಲವಾಗಿಲ್ಲ, ನಿರಿಗಂಟು ಬಿಚ್ಚಿಲ್ಲ, ತೊಂಡೆದುಟಿಯು ಬೆಳ್ಳಗಾಗಿಲ್ಲ, ತೊಡೆಗಳು ಅದುರಿ ನಡುಗುತ್ತಿಲ್ಲ, ಕಣ್ಣು ಕೆಂಪೇರಿಲ್ಲ. ನೀನು ಒಬ್ಬನನ್ನೇ ಪ್ರೀತಿಸಿ, ಬೇರೆಯವರಲ್ಲಿ ಪ್ರೀತಿಯಿಲ್ಲದೆ ಕನ್ಯೆಯಂತೆ ನಡೆದುಕೊಳ್ಳುತ್ತೀಯೆ. ನಿನ್ನ ಗುಟ್ಟನ್ನು

---

೧. ಮಾತಾಡುವುದಿತ್ತುಮಾಡುವರೊಳಿಲ್ಲದ ಬೇಟಮನುಂಟುಮಾಡೆ (ಕಗ) ಮಾತಾಡು ವುದಿಂತು ಕೂಡುವರೊಳಿಲ್ಲದ ಬೇಟಮನುಂಟುಮಾಡಿ (ಖ)

ವ|| ಮತ್ತೊಂದೆಡೆಯೊಳೊರ್ವಂ ತನ್ನೋಪಳನಗಲ್ದು ಪೋಪಲ್ಲಿ

ಮದಿರಾಪಾನಕ್ಕೆ ಮೆಯ್ದಾರದೆ ಸುಟಿವೆಲರಂ ಪಾರದುದ್ಯಾನಮಂ ಸಾ
ರದೆ ಮಲ್ಲೀದಾಮಮಂ ಸೂಡದೆ ಹಿಮರುಚಿಯಂ ನೋಡದಾನಂದದಿಂ ಪಾ
ಡದೆ ಕೈಯ್ಗೆಯ್ವೊಂದಲಂಪಿಲ್ಲದೆ ಕೆಳದಿಯರೊಳ್ [1]ಸೊಲ್ಲದೇಕಾಂತದೊಳ್ ನಿ
ಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯಮಪ್ಪೊಂದುಪಾಯಂ ೧೨೭

ವ|| ಎಂದು ಬುದ್ಧಿವೇಳುತ್ತಿರ್ದಂ, ಆ ಪ್ರದೇಶಕ್ಕಮನತಿದೂರದೊಳತನುತಾಪಸಂತಪ್ತೆಯಾಗಿ

ಚರಿಯಿಸಿ ನಿಚ್ಚವಬ್ಜವನದೊಳ್ ವನದೊಳ್ ವನದಳ್ ಕಲಂಕಿದೆಂ
ಸುರಿವ ಮನೋಜಬಾಣತತಿಯಿಂ ಮತಿಯಿಂ ಧೃತಿಯಿಂದೆ ಕೆಟ್ಟೆನೀ
ಸುರುಚಿರಚಂದ್ರಿಕಾರುಚಿಕಳಾಪದ ತಾಪದ ಲೇಪದುಬ್ಬೆಗಂ
ಪಿರಿದೊಡಗೂಡು ಚಾರುತರನಂ ವರನಂ ಸ್ಮರನನ್ನನಂ ಸಖೀ ೧೨೮

ವ|| [2]ಎಂದೊರ್ವಳ್ ಸಖಿಗೆ ಪೇಳುತ್ತಿರ್ದಳ್, ಮತ್ತೊಂದೆಡೆಯೊಳ್

ಇರುಳ ರಥಾಂಗಿಯಂತಟಲುತುಂ ಪಗಲುತ್ಪಲಲಕ್ಷ್ಮಿಯಂತೆವೋಲ್
ಕೊರಗುತುಮಭ್ರಕಾಲದ ಮರಾಳಿಕೆಯಂದದೆ [3]ನೋಯುತುಂ ಭವ
ದ್ವಿರಹದೊಳಿರ್ಪ ವಲ್ಲಭೆಯನಾಟಿಸು ಬಂದೊಸೆದಕ್ಕಟಂತು ನಿ
ಷ್ಕರುಣೆಯುಮಿಂತು [4]ಕಲ್ಲೆರ್ದೆಯನಿಂತು ಸಗರ್ವನುಮಾಗಲಕ್ಕುಮೇ ೧೨೯

ಕಂಡ ವಿಟರು ಇನ್ನು ಏನನ್ನೂ ಕೊಡುವುದಿಲ್ಲ" ಎಂದು ಕೋಪಿಸಿ, ಹುಬ್ಬುಗಂಟು ಹಾಕಿಕೊಂಡು ಗದರಿಸಿದಳು. ವ|| ಮತ್ತೊಂದು ಕಡೆ ಒಬ್ಬನು ತನ್ನ ಪ್ರಿಯೆಯನ್ನು ಆಗಲಿ ಹೋಗುವಾಗ, ೧೨೭. "ನಾನು ಹಿಂದಿರುಗಿ ಬರುವವರೆಗೂ ನೀನು ಮದ್ಯವನ್ನು ಕುಡಿಯಬೇಡ. ಬೀಸುಗಾಳಿಯನ್ನು ನಿರೀಕ್ಷಿಸಬೇಡ. ಉದ್ಯಾನವನಕ್ಕೆ ಹೋಗಬೇಡ. ಮಲ್ಲಿಗೆ ಹೂದಂಡೆಯನ್ನು ಮುಡಿದುಕೊಳ್ಳಬೇಡ. ಚಂದ್ರನನ್ನು ನೋಡಬೇಡ. ಆನಂದದಿಂದ ಹಾಡಬೇಡ. ಸಿಂಗರಿಸಿಕೊಳ್ಳುವ ಆಸೆಬೇಡ. ಕೆಳದಿಯರಿಗೆ ಹೇಳದೆ ಏಕಾಂತದಲ್ಲಿ ನಿಲ್ಲಬೇಡ. ಇದು ನಿನಗೆ ಅಪಾಯವಿಲ್ಲದ ರಕ್ಷಣೆಯ ಉಪಾಯ". ವ|| ಎಂದು ಬುದ್ಧಿಯನ್ನು ಹೇಳುತ್ತಿದ್ದನು. ಆ ಪ್ರದೇಶಕ್ಕೆ ಸ್ವಲ್ಪ ದೂರದಲ್ಲಿ ಕಾಮತಾಪದಿಂದ ಸಂತಪ್ತೆಯಾಗಿ, ೧೨೮. "ಸಖೀ, ನಾನು ನಿತ್ಯವೂ ವನದಲ್ಲೂ ಕಮಲವನದಲ್ಲೂ ಉದ್ಯಾನವನದಲ್ಲೂ ಸರೋವರಗಳ ನೀರಿನಲ್ಲೂ ಸಂಚರಿಸಿ, ಸುರಿದ ಮನ್ಮಥ ಬಾಣದ ಹೊಡೆತದಿಂದ ಬುದ್ಧಿಯನ್ನು ಕಲಕಿಕೊಂಡೆನು, ಧೈರ್ಯಗೆಟ್ಟೆನು. ಈ ಬಹು ಮನೋಹರವಾದ ಚಂದ್ರಿಕೆಯ ಕಳೆಗಳ ಮತ್ತು ಭೂಷಣಗಳ ತಾಪದ ಲೇಪದ ಉದ್ವೇಗವು ಹೆಚ್ಚಾಗಿದೆ. ಮನ್ಮಥನಂತಹ ಸುಂದರತರನಾದ ವರನನ್ನು ಕರೆತಂದು ನನ್ನೊಡಗೂಡಿಸು" ವ|| ಎಂದು ಒಬ್ಬಳು ಸಖಿಗೆ ಹೇಳುತ್ತಿದ್ದಳು. ಮತ್ತೊಂದೆಡೆಯಲ್ಲಿ ೧೨೯. "ರಾತ್ರಿಯ ಕಾಲದಲ್ಲಿ ಗಂಡನನ್ನಗಲಿದ ಚಕ್ರವಾಕಿಯಂತೆ ಅಳಲುತ್ತಲೂ, ಹಗಲಿನ ನೈದಿಲೆಯ ಹೂವಿನಂತೆ ಕೊರಗುತ್ತಲೂ, ಮಳೆಗಾಲದ ಹಂಸಿಯಂತೆ ನೋಯುತ್ತಲೂ ನಿನ್ನ

೧. ಸಲ್ಲದೇಕಾಂತದೊಳ್ (ಖ) ೨. ಎಂದೊರ್ವಳಟ್ಟಿದೊಡಾಕೆ ಪೋಗಿ ಕೆಳದಿಯ ಕಾಂತಂಗಿಂತೆಂದಳ್ (ಖ) ೩. ನೋಡುತುಂ (ಕಗ) ೪. ಕಲ್ಲೆರ್ದೆಯುಮಿಂತು ಸಗರ್ವಮು (ಕಖ) ಕಲ್ಲೆರ್ದೆಯುಮಿಂತು ಸಗರ್ವನು (ಗ)

ವ॥ ಎಂದು ನುಡಿದೊಡಂಗೊಂಡು ಪೋದಳ್, ಆಗಳೊಂದು [1]ರಮಣೀಯಸ್ಥಾನದೊಳ್ ಪರಸ್ಪರ ಸ್ವೈರಾಲಾಪದಿಂದಿರ್ದ ವಿಟಜನದೊಳೊರ್ವಂ

ಇರದೋಪಂ ಕೋಪದಿಂ ಪೋದೊಡೆ ಪೆಱಗನುಲೇಪಂ ವಿಭೂಷಾಕಲಾಪಂ
[2]ವರಧೂಪಂ ಸುಪ್ರದೀಪಂ ಸೊಗಸದೊಗೆದ ಕೋಪಂ ಸಶೋಕಪ್ರಳಾಪಂ
ಸ್ಮರದೀಪಂ ಪೆಣ್ಣ ರೂಪಂ ತಳೆದುದೆನಿಪ ವೇಷಂ ಪ್ರಭಾವೇಶರೂಪಂ
ಪರಿತಾಪಂ ತೋಱಲಾ ಪೆಣ್ಣೊಲವತಿಲಲಿತಾ[3]ಲಾಪವಾ ವಿಪ್ರಲಾಪಂ ೧೩೦

ವ॥ ಎನೆ ಮತ್ತೊಂದೆಡೆಯೊಳೊರ್ವಂ ತನ್ನಿನಿಯಳಂ ನೆನೆದು

ಇರು ನೀಂ ಪೋದಪೆ ನಾಂ ಮೃಗಾಕ್ಷಿಯೆನೆ ಕೇಳ್ದಿನ್ನೋಪಳಾಕಂದಿಕುಂ
ದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್
ಪೊರೆದಾಲೋಕನವಾ ಬಳಲ್ಕ ತೆಱನಾ ಸುಯ್ಯೊಂದು ಪಾಂಗಾ [4]ಸ್ಮರ
ಜ್ವರಮಂ ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚತ್ತೊ ಮಚ್ಚಿತ್ತದೊಳ್ ೧೩೧

ವ॥ ಎಂಬುದುಂ ಮತ್ತೊರ್ವಂ ತನ್ನ ವಲ್ಲಭೆಯ ವಿಯೋಗವೇದನೆಯಂ ಭಾವಿಸಿ ನೋಡಿ

ಅಗಲಿಕೆಯಿಂದ ಕೃಶಳಾಗಿರುವ ನಿನ್ನ ಪ್ರಿಯೆಯನ್ನು, ಬಂದು, ಪ್ರೀತಿಯಿಂದ ಸಮಾಧಾನಗೊಳಿಸು. ಅಯ್ಯೋ! ನೀನು ಹೀಗೆ ನಿಷ್ಕರುಣಿಯೂ ಕಲ್ಲೆದೆಯವನೂ ಗರ್ವವುಳ್ಳವನೂ ಆಗಬಹುದೇ!" ವ॥ ಎಂದು ಒಬ್ಬಳು ಹೇಳಿ ಅವನನ್ನು ಸಂಗಡ ಕರೆದುಕೊಂಡು ಹೋದಳು. ಆಗ ಒಂದು ರಮಣೀಯವಾದ ಸ್ಥಾನದಲ್ಲಿ ಪರಸ್ಪರ ಸ್ವೇಚ್ಛೆಯಿಂದ ಮಾತನಾಡುತ್ತಿದ್ದ ವಿಟಜನರಲ್ಲಿ ಒಬ್ಬನು, ೧೩೦. "ತನ್ನ ಪ್ರಿಯನು ಕೋಪದಿಂದ ಹೊರಟು ಹೋದುದರಿಂದ ಅವನ ಪ್ರಿಯೆಗೆ ಗಂಧಾದಿಗಳ ಅನುಲೇಪವಾಗಲಿ, ಆಭರಣಗಳಾಗಲಿ, ಉತ್ತಮವಾದ ಧೂಪವಾಗಲಿ, ದೀಪವಾಗಲಿ ಸೊಗಸಲಿಲ್ಲ. ಕೋಪವುಂಟಾಯಿತು. ಶೋಕದಿಂದ ಹಲುಬಿದಳು. ಮನ್ಮಥನ ದೀಪವೇ ಹೆಣ್ಣಿನ ರೂಪವನ್ನು ಪಡೆದಿದೆಯೆನ್ನಿಸುವ ಅವಳ ವೇಶವೂ ಮನ್ಮಥಾವೇಶವೂ ಪರಿತಾಪಕರವಾಗಿದ್ದಿತು. ಅಲ್ಲದೆ ಆಕೆಯ ಪ್ರೀತಿಯೂ ಲಲಿತವಾದ ಮಾತೂ ವ್ಯರ್ಥಭಾಷಣವೂ ಹಾಗೆಯೇ ಅನುತಾಪಕರವಾಗಿದ್ದಿತು" ವ॥ ಎಂದನು. ಮತ್ತೊಂದು ಕಡೆ ಒಬ್ಬನು ತನ್ನ ಪ್ರೇಯಸಿಯನ್ನು ನೆನೆಸಿಕೊಂಡು, ೧೩೧. "ಮೃಗಾಕ್ಷೀ ನೀನಿರು ನಾನು ಹೋಗಿ ಬರುತ್ತೇನೆ" ಎನ್ನಲು ಅದನ್ನು ಕೇಳಿದ ನನ್ನ ಪ್ರಿಯೆಯ ಕಂದಿ ಕುಂದಿದ ರೂಪವೂ ಚಿಂತಿಸುವ ಆ ಅಂದವೂ ಸಂತೋಷವೂ ತಪ್ಪಿಹೋದ ಆ ಆಕಾರವೂ ಕಣ್ಣೀರಿನಿಂದ ಕೂಡಿದ ಆ ನೋಟವೂ ಬಳಲುವ ಆ ರೀತಿಯೂ ನಿಟ್ಟುಸಿರುಬಿಡುವ ಆ ಬಗೆಯೂ ಕಾಮಜ್ವರವನ್ನು ಪಡೆಯುವ ಆ ಭಂಗಿಯೂ ಮರೆಯದೆ ನನ್ನ ಚಿತ್ತದಲ್ಲಿ ಅದೆಷ್ಟು ದೃಢವಾಗಿ ಬೆಸುಗೆ ಹಾಕಿದಂತಿದೆಯೋ!" ವ॥ ಎನ್ನುತ್ತಲೂ ಮತ್ತೊಬ್ಬನು ತನ್ನ ಪ್ರಿಯೆಯ ವಿಯೋಗದ ವೇದನೆಯನ್ನು ನೆನೆದು ನೋಡಿ,

---

೧. ರಮಣೀಯಸ್ಥಾನದೊಳ್ (ಗ) ೨. ವರರೂಪಂ (ಕಗ) ೩. ಲಾಪವಾಜ್ಞಪ್ರಲಾಪಂ (ಖ) ೪. ಸ್ಮರಾತುರಮಂ (ಗ)

ನಿನಗೆಱಗಿರ್ದ ಮನಮನಿನ್ನೆಱಗಿತ್ತಲರಂಬು ನಲ್ಲ ನೀಂ
ಮುನಿದುಟಿದಂದು ಕೇಳ್ದುಟಿಯಲೀಗುಮೆ ಮನ್ಮಥನೆನ್ನನೆಂದು ಮಾ
ನಿನಿ ಜಿನುಗುತ್ತುಮುಂಗುಟದಿನುರ್ವರೆಯಂ ಬರೆದಾನತಾಸ್ಯೆ ಕ
ಣ್ಣನಿಗಳನಿಕ್ಕುವೊಂದು ತೆಱನಿಕ್ಕಿದುದೆನ್ನೊಡಲಂ ಸ್ಮರಾಗ್ನಿಯೊಳ್ ೧೩೨

ವ॥ ಎಂದು ನುಡಿದು ತನ್ನ ಮನದಟಲನೆಟ್ಟಿಱಿಸಿ ಪೆಱನೊರ್ವಂ ಬೆಚ್ಚನೆ ಸುಯ್ದು

ಸುರತಕ್ಕೆಂದೊಲ್ದು ಸೋಂಕಲ್ ಸತಿ ಮುಳಿದವೊಲಾನಿರ್ಪುದುಂ ತನ್ನ ಬೆನ್ನೊಳ್
ಪರೆದೊಪ್ಪಲ್ ಕೇಶಪಾಶಂ ಕಱಿಯ ಚವರಿಯಂ ಕಟ್ಟಿದೊಂದತ್ಯಪೂರ್ವ
ಸ್ಮರಚಾಪಶ್ರೀಯ ಚೆಲ್ವಂ ತಳೆದು ಪೆಱಗುಗೆಯ್ದಿರ್ದೊಡಾಂ ಸೋಂಕೆ ಸಾರಂ
ತಿರೆನುತ್ತುಂ ನೂಂಕಿ ಸುಯ್ದನ್ನಿನಿಯಳ ತೆಱನಿನ್ನುಂ ಮನಂಗೊಳ್ವುದೆನ್ನಂ ೧೩೩

ವ॥ ಎನೆ ಕೆಲದೊಳಿರ್ದ ಪೆಱನೊರ್ವಂ ತನ್ನ ಕನ್ನೆವೇಟದ ಚೆನ್ನೆಯಂ ನೆನೆದು

[1]ಕಿಱುವರೆಗಾಲದಿಂದುಟಿದೆನೋಪಳನಾನವಳಂದೆ ಗಂಡರಂ
[2]ಪಱಿವೊಱಿಸಾಗೆ ಮಾಡುವಳವಳ್ಗೆ ಕುಚಂ ಕಚಮೂರುಭಾರವ
ಳ್ಪಿಱಿದು ಪೊದಟ್ದು ಕೊರ್ವೆ [3]ನಿಲಲಿನ್ನೆಗವಾಕೆಯೊಳಿಂದ್ರಚಂದ್ರರೆಂ
ಬಱಿಕೆಯ ದೇವಕೋಟಿ ಮನುಜಾಕೃತಿಯಿಂದೊಡಗೂಡದಿರ್ಕುಮೇ ೧೩೪

೧೩೨. "ನಿನಗೆ ಎರಗಿದ (ಒಲಿದ) ನನ್ನ ಮನಸ್ಸಿನ ಮೇಲೆ ಇನ್ನು ಪುಷ್ಪಬಾಣವು ಎರಗಿತು. ನೀನು ಮುನಿಸಿಕೊಂಡು ನನ್ನನ್ನು ಬಿಟ್ಟು ಹೋದರೆ, ಮನ್ಮಥನು ನನ್ನನ್ನು ಜೀವಿಸಿರಲು ಬಿಡುವನೇ!" ಎಂದು ಗೊಣಗುತ್ತ ಕಾಲಿನ ಹೆಬ್ಬೆರಳಿನಿಂದ ನೆಲವನ್ನು ಕೆರೆಯುತ್ತ ಮುಖವನ್ನು ತಗ್ಗಿಸಿ ಕಣ್ಣೀರು ಸುರಿಸಿದ ಆ ರೀತಿಯು ನನ್ನನ್ನು ಕಾಮಾಗ್ನಿಯಲ್ಲಿ ತಳ್ಳಿತು. ವ॥ ಎಂದು ಹೇಳಿ, ತನ್ನ ಮನಸ್ಸಿನ ಅಳಲನ್ನು ತೋಡಿಕೊಂಡನು. ಮತ್ತೊಬ್ಬನು ಬಿಸಿಯ ನಿಟ್ಟುಸಿರನ್ನು ಬಿಟ್ಟು ೧೩೩. "ಸುರತಕ್ರೀಡೆಗಾಗಿ ಪ್ರೀತಿಯಿಂದ ಬಂದು, ನನ್ನ ಮೈ ಸೋಕಿದಾಗ ನಾನು ಕೋಪಿಸಿಕೊಂಡವನಂತೆ ಇದ್ದೆನು. ನನ್ನ ಪ್ರಿಯೆ ತನ್ನ ಬೆನ್ನಿನ ಮೇಲೆ ಕೂದಲರಾಶಿಯು ಕರಿಯ ಚಾಮರವನ್ನು ಕಟ್ಟಿದಂತಿರಲು ಮನ್ಮಥನ ಬಿಲ್ಲಿನಂತೆ ಬಾಗಿ ಹಿಂದೆ ನಿಂತಿದ್ದಳು. ಆಗ ನಾನು ಅವಳನ್ನು ಸೋಕಿದೆನು. ಅವಳು "ಹೋಗು; ಹಾಗಿರು" ಎನ್ನುತ್ತ ನನ್ನನ್ನು ನೂಕಿ ನಿಟ್ಟುಸಿರುಬಿಟ್ಟಳು. ನನ್ನ ಪ್ರಿಯೆಯ ಆ ಸ್ಥಿತಿಯು ಇನ್ನೂ ನನ್ನ ಮನಸ್ಸನ್ನು ಸೆಳೆಯುತ್ತಿದೆ. ನೋಯಿಸುತ್ತಿದೆ." ವ॥ ಎಂದನು. ಪಕ್ಕದಲ್ಲಿದ್ದ ಮತ್ತೊಬ್ಬನು ತಾನು ಕನ್ಯೆಯೊಬ್ಬಳನ್ನು ಕಾಮಿಸಿ ಪ್ರೀತಿಸಿದ್ದುದನ್ನೂ ಆ ಚೆನ್ನೆಯ ವಿಚಾರವನ್ನೂ ನೆನೆಸಿಕೊಂಡು, ೧೩೪. "ನಾನು ಆ ಪ್ರಿಯೆಯನ್ನು ಸ್ವಲ್ಪ ಕಡಿಮೆ ಅರ್ಧವರ್ಷದಿಂದ ನೋಡದೆ ಬಿಟ್ಟಿದ್ದೇನೆ. ಅವಳು ಆಗಲೇ ಪುರುಷರನ್ನು ರೀತಿಗೆಡಿಸುತ್ತಿದ್ದಳು, ಈ ವೇಳೆಗೆ ಕುಚವೂ ಕೂದಲರಾಶಿಯೂ ತೊಡೆಯೂ ಚೆನ್ನಾಗಿ ಬೆಳೆದು ಭಾರವಾಗಿ ಕೊಬ್ಬಿನಿಂತಿರುವ ಅವಳನ್ನು ನೋಡಿದರೆ ಇಂದ್ರ ಚಂದ್ರಾದಿದೇವತೆಗಳೂ ಮನುಷ್ಯರೂಪದಿಂದ ಬಂದು ಅವಳೊಡನೆ ಸೇರದಿರುವರೆ"

---

೧. ಕಿಱುವಡಿಗಾಲದಂದುಟಿದೆ (ಕಗ) ೨. ಪಱಿವೊಱಿನಾಗೆ (ಗ) ೩. ನಿಲವಿನ್ನೆಗಂ (ಕಖಗ)

ವ॥ ಎಂದು ನುಡಿದ ಪೂರ್ವಾನುರಾಗದ ನುಡಿಗಳಂ ಕೇಳ್ದು ಮತ್ತಲ್ಲಲ್ಲಿ ವಿಟವಿಟೀ ಭಾವಭಾಷಿತಂಗಳಂ ನೋಡುತ್ತುಮಾಲಿಸುತ್ತುಂ ಪೊಟ್ತುಗಳೆದು ಬಂದು ರಾಜಮಂದಿರಮಂ ಪೊಕ್ಕು ಅರವಿಂದನಾಭನರ್ಜುನನಂ ಕಳುಪಿ ಸಜ್ಜೆವನೆಗೆ ಬಿಜಯಂಗೆಯ್ದು ಸುಖದಿಂದೆ ರುಕ್ಮಿಣೀ ಸನಾಥನಾಗಿ ನಿಶೀಥಿನೀ ವಿರಾಮಸಮಯದೊಳ್

[1]ತಳರ್ದ ವಿಯೋಗಿನೀನಯನವಾಃಕಣಸಂಕುಳದಂತೆ ತಾರಕಾ
ವಳಿ ಮಸುಳ್ದತ್ತು ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲದಂ
ಚಳಮೆನೆ ಪೋಯ್ತು ಚಂದ್ರಿಕೆ ನಭೋವಧು ಸೂಡಿ ಬಿಸುಟ್ಟ ಮಾಲ್ಯಮಂ
ಡಳದವೊಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ ೧೩೫

ತೆರೆವೊಯ್ಲಿಂದೆಟ್ಟೆ ಕಾಸಾರದ ಪರಿಸರದೊಳ್ ನಿದ್ರೆಗೆಯ್ವಂಚೆವಿಂಡಂ
ದರಹಾಸಶ್ರೀಯನಂಭೋಜಿನಿಗೆ ಪಡೆದು ನೆಯ್ದಿಲ್ಗಳಿಂದುಳ್ಳಲರ್ವಂ
ಬುರುಹಕ್ಕೇಟ್ತರ್ಪ ಭೃಂಗಂಗಳಂ ಗಱಿಯೆಲರಿಂ ಕೊರ್ಬಿ ಚಾಂಡಾಲಗೇಯ
ಸ್ವರದೊಳ್ ತಳ್ಪೊಯ್ವುತಿಸ್ವೈರದೆ ಸುಟಿದುದು ವೈಭಾತಿಕಂ ಮಾತರಿಶ್ವಂ ೧೩೬

ರತಿನಾಟಕಾಭಿನಯಮಂ
ಕೃತಕೃತ್ಯಂ ಮಾಡಿ ರಮ್ಯಮಾಗಿರೆ ದೀಪ
ದ್ಯುತಿ ಯುವತಿಯರೊಳ್ ನಿದ್ರಾ
ವತಾರವಾದತ್ತು ಮೂಡವೆಳಗಪ್ಪಾಗಳ್ ೧೩೭

ವ॥ ಎಂದು ಹೇಳಿದ ಪೂರ್ವಾನುರಾಗದ ಮಾತುಗಳನ್ನು ಕೇಳಿ, ಮತ್ತೆ ಅಲ್ಲಲ್ಲಿ ವಿಟವಿಟಿಯರ ಸಂಬಂಧವಾದ ಮಾತುಗಳನ್ನು ನೋಡುತ್ತಲೂ ಕೇಳುತ್ತಲೂ ಹೊತ್ತುಗಳೆದು, ಬಂದು ಅರಮನೆಯನ್ನು ಸೇರಿ, ಕೃಷ್ಣನು ಅರ್ಜುನನ್ನು ಕಳುಹಿಸಿ, ಮಲಗುವ ಮನೆಗೆ ಬಿಜಯಮಾಡಿ' ಸುಖದಿಂದ ರುಕ್ಮಿಣಿಯೊಡಗೂಡಿದನು. ರಾತ್ರಿಯು ಮುಗಿಯುವ ಸಮಯದಲ್ಲಿ ೧೩೫. ವಿರಹಿಣಿಯಾದ ವನಿತೆಯ ಕಣ್ಣೀರಿನ ಹನಿಗಳಂತೆ ನಕ್ಷತ್ರಗಳು ಮಂಕಾದುವು. ರಾತ್ರಿಯ ಜತೆಯಲ್ಲೇ ಹಿಂದೆ ಹೋದ ಪಟ್ಟೆಯ ಬಟ್ಟೆಯ (ದುಕೂಲದ) ಸೆರಗಿನಂತೆ ಬೆಳುದಿಂಗಳೂ ಹೊರಟುಹೋಯಿತು. ಆಕಾಶಾಂಗನೆ ಮುಡಿದುಕೊಂಡಿದ್ದು ತೆಗೆದು ಬೀಸಾಡಿದ ಹೂದಂಡೆಯಂತೆ ಚಂದ್ರಮಂಡಲವು ಅಸ್ತಗಿರಿಯ ಶಿಖರದಲ್ಲಿ ಕಾಣಿಸುತ್ತಿದ್ದಿತು. ೧೩೬. ಬೆಳಗಾಗುವ ಸಮಯದ ಗಾಳಿಯು ಸರೋವರದ ದಡದಲ್ಲಿ ನಿದ್ರೆ ಮಾಡುತ್ತಿದ್ದ ಹಂಸಗಳನ್ನು ಸರೋವರದ ನೀರಿನ ಅಲೆಯ ಹೊಡೆತದಿಂದ ಎಬ್ಬಿಸಿತು. ಕಮಲಿನಿಗೆ ಮುಗುಳುನಗುವನ್ನೂ ಕಾಂತಿಯನ್ನೂ ಹೆಚ್ಚಿಸಿತು. ನೆಯ್ದಿಲೆಹೂಗಳನ್ನು ಬಿಟ್ಟು ಅರಳುವ ತಾವರೆಯ ಹೂಗಳಿಗೆ ಮುತ್ತಲು ಬರುವ ತುಂಬಿಗಳ ಗರಿಯ ಗಾಳಿಯಿಂದ ಕೊಬ್ಬಿತು. ಚಾಂಡಾಲಗಾನ ಸ್ವರದೊಡನೆ ಸೇರಿ, ಅತಿ ಸ್ವೇಚ್ಛೆಯಿಂದ ಬೀಸಿತು. ೧೩೭. ದಂಪತಿಗಳು ಮಲಗುವ ಮನೆಯ ದೀಪಗಳ ಕಾಂತಿಯು ರತಿನಾಟಕಾಭಿನಯವನ್ನು ಸಾರ್ಥಕಗೊಳಿಸಿ ಮನೋಹರವಾಗಿರುವಲ್ಲಿ, ಯುವತಿಯರಲ್ಲಿ ನಿದ್ದೆಯು ಅವತರಿಸಿತು.

---

೧. ತಳರ್ವ ವಿಯೋಗಿನೀಹೃದಯವಾಃಕಣದಂತೆ ಸುರುಳ್ವ (ಖ)

ದಿವಿಜಗಜಂ ಸಜ್ವರದಿಂ
[1]ದವೆೞ್ದುದೆನೆ ಕಾಣಲದ್ರಿಯಾ ದಂತಿಗೆ ಕ
[2]ಟ್ಟುವ ಚೆಮ್ಮೊಗ್ಗವಡಮೆನೆ ಚೆ
ಲ್ವುವೆತ್ತುದಂದುದಯ [3]ಸಮಯ ಸಂಧ್ಯಾರಾಗಂ ೧೩೮

ಮುರರಿಪು ಪಾರಿಜಾತಕುಜಮಂ ಕೊಳೆ ಬಿಲ್ವಿಡಿದಂದು ಸೋಲ್ತೆನಿಂ
ಪರಿಣತನಪ್ಪೆನಡ್ಡಣದೊಳೆಂದೊಸೆದರ್ಚಿಸಿ ಮೂಡವೆಟ್ಟದೊಳ್
ಗರುಡಿಯನಿಂದ್ರನಾಂತ ಪೊಸಮಾಣಿಕದಡ್ಡಣಮಿಂತಿದೆಂಬಿನಂ
ಕರಮೆಸೆದತ್ತು ಶೋಣರುಚಿಯಿಂದುದಯಾದ್ರಿಯೊಳರ್ಕಮಂಡಲಂ ೧೩೯

ಪರರಾಜೋದಗ್ರತೇಜಂ ಕಿಡೆ ರಿಪುಕುಮುದಂ ಕುಂದೆ ವಿದ್ವಿಟ್ತಮಂ ಪಿಂ
ಗೆ ರಥಾಂಗಂ ಲೀಲೆಯೊಳ್ ಕೂಡಿರೆ ಕರಕಲಿತಂ ಮಂಡಲಾಗ್ರಮಂ ಮನಂಗೊಂ
ಡಿರೆ ನಾನಾ ಪುಂಡರೀಕವ್ರಜಮಲರ್ದಿರೆ ಪಾದಂ ಜಗತ್ಸೇವ್ಯಮಾಗು
ತ್ತಿರೆ ಪೆಂಪಂ ತಾಳ್ದಿ ನಿತ್ಯಾಭ್ಯುದಯದಿನೆಸೆದಂ ಗೋಪಮಾರ್ತಂಡದೇವಂ ೧೪೦

ಪೂರ್ವದಿಕ್ಕು ಬೆಳ್ಳಗಾಗುವ ಸಮಯವಾಯಿತು. ೧೩೮. ಉದಯಾದ್ರಿಯು ಇಂದ್ರನ ಐರಾವತವು ಅದರ ಸೆಜ್ಜೆಯಿಂದ ಎದ್ದು ಬಂದಿತೆನ್ನುವಂತೆ ಕಾಣುತ್ತಿರಲು ಉದಯಕಾಲದ ಸಂಜೆಗೆಂಪು ಆ ಐರಾವತಕ್ಕೆ ಹಾಕಿರುವ ಕೆಂಪು ಮುಖವಾಡದಂತೆ ಚೆನ್ನಾಗಿ ಕಾಣಿಸುತ್ತಿದ್ದಿತು. ೧೩೯. ಉದಯಗಿರಿಯಲ್ಲಿ ಕೆಂಪಾದ ಕಾಂತಿಯಿಂದ ಹೊಳೆಯುತ್ತಿರುವ ಸೂರ್ಯಮಂಡಲವು - "ಕೃಷ್ಣನು ಪಾರಿಜಾತವೃಕ್ಷವನ್ನು ಕಿತ್ತುಕೊಳ್ಳಲು ಬಿಲ್ಲನ್ನು ಹಿಡಿದು ನನ್ನ ಮೇಲೆ ಬಂದಾಗ ಯುದ್ಧಕಲೆಯಲ್ಲಿ ಪಾಂಡಿತ್ಯವಿಲ್ಲದೆ ಇದ್ದುದರಿಂದ ಅವನಿಗೆ ಸೋತುಹೋದೆನು. ಇನ್ನು ಯುದ್ಧದಲ್ಲಿ ಗುರಾಣಿಯನ್ನು ಹಿಡಿಯುವುದರಲ್ಲಿ ಪರಿಣತನಾಗುತ್ತೇನೆ" ಎಂದು ಉದಯ ಗಿರಿಶಿಖರವೆಂಬ ಗರುಡಿಯನ್ನು ಪೂಜಿಸಿ ಅಲ್ಲಿ ಇಂದ್ರನು ಧರಿಸಿದ ಹೊಸದಾದ ಕೆಂಪುಮಣಿಯ ಗುರಾಣಿಯಂತೆ ಪ್ರಕಾಶಿಸಿತು. ೧೪೦. ಗೋಪಮಾರ್ತಾಂಡದೇವನು (= ೧. ಕಿರಣಗಳಿಗೆ ರಕ್ಷಕನಾದ ಸೂರ್ಯದೇವನೂ, ೨. ಗೋಪಾಲಕನೂ ಭೂ ಸ್ವರ್ಗಾದಿಲೋಕಪಾಲಕನೂ ಆದ ಕೃಷ್ಣನೆಂಬ ಸೂರ್ಯದೇವನೂ), ಪರ... ತೇಜಂಕಿಡೆ, (೧. ಬೇರೆಯವನಾದ ಚಂದ್ರನ ಅಧಿಕವಾದ ಕಾಂತಿಯು ಕೆಡುತ್ತಲೂ, ೨. ಶತ್ರುಗಳಾದ ರಾಜರ ಅತ್ಯಧಿಕವಾದ ತೇಜಸ್ಸು ನಾಶವಾಗುತ್ತಲೂ) ರಿಪುಕುಮುದವು (= ೧. ಶತ್ರುವಾದ ನೈದಿಲೆಯು, ೨. ಶತ್ರುಗಳ ಕುತ್ಸಿತಸಂತೋಷವೂ ಅವರ ಭೂಮಿಯ ಸಂತೋಷವೂ) ಕ್ಷೀಣವಾಗುತ್ತಲೂ, ವಿದ್ವಿಟ್‌ತಮವು (= ೧. ದ್ವೇಷಿಯಾದ ಕತ್ತಲೆಯು, ೨. ಶತ್ರುಗಳೆಂಬ ಕತ್ತಲೆಯು) ಹಿಂದೆ ಹೋಗುತ್ತಲೂ, ಈ ರಥಾಂಗವು ಲೀಲೆಯಿಂದ ಕೂಡಿರುತ್ತಲೂ (= ೧. ಚಕ್ರವಾಕ

---

೧. ವೆೞ್ದುದದೆ ಕಾಣಲಾದುದಾದಂತಿಯ ೨. (ಕಖಗ) ಟ್ಟಿದಕೆಮ್ಮೊಗ್ಗವಡಮೆನೆ (ಕಗ) ಕಟ್ಟುವಪವಳಾಲಾನಂ (ಖ) ೩. ಶೈಲ (ಕಗ)

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗ
ನ್ನಾಥವಿಜಯ ಮಹಾಪ್ರಬಂಧದೊಳ್
ರೈವತಕಾದ್ರಿವಿಭವತತ್ತಪೋವನವರ್ಣನೇಂದ್ರ
ಪ್ರಸ್ಥಪುರಪ್ರವೇಶ ಜರಾಸಂಧಹರಣ
ರಾತ್ರಿವಿಹಾರ ವರ್ಣನಂ
ಷೋಡಶಾಶ್ವಾಸಂ

ದಂಪತಿಗಳು ಸೇರುತ್ತಲೂ, ೨. ಕಯ್ಯಲ್ಲಿ ಚಕ್ರಾಯುಧವು ಲೀಲೆಯಿಂದ ಇರುತ್ತಲೂ) ಕರಕಲಿತವಾದ ಮಂಡಲಾಗ್ರವು (= ೧. ಕಿರಣಗಳಿಂದ ಪೂರ್ಣವಾದ ಮಂಡಲದ ಅಗ್ರವು, ೨. ಕಯ್ಯಲ್ಲಿರುವ ಕತ್ತಿಯ, ಮನೋಹರವಾಗಿರುತ್ತಲೂ, ನಾನಾ ಪುಂಡರೀಕವ್ರಜವು ಅರಳಿರುತ್ತಲೂ (= ೧. ಅನೇಕ (ಎಲ್ಲಾ) ಬೆಳ್ದಾವರೆಗಳೂ ಅರಳಿರುತ್ತಲೂ, ೨. ಶ್ವೇತಛತ್ರಿಗಳು, ಅರಳಿರುತ್ತಲೂ, ಪಾದವು ಜಗತ್ಸೇವ್ಯವಾಗಿಯೂ (೧. ಸೂರ್ಯನ ಕಿರಣವು (ಪ್ರಕಾಶವು) ಜಗತ್ತಿನಿಂದಲೇ ಭೋಗಿಸಲ್ಪಡುತ್ತಲೂ, ೨. ಪಾದವು ಪ್ರಪಂಚದಿಂದಲೇ ಸೇವಿಸಲ್ಪಡುತ್ತಲೂ) (ವಂದ್ಯ)ವಾಗಿ ಇರುತ್ತಲೂ, ಇರುವಲ್ಲಿ ಮಹಿಮೆಯನ್ನು ಪಡೆದು, ನಿರಂತರವಾದ ಅಭ್ಯುದಯದಿಂದ ಪ್ರಕಾಶಿಸುತ್ತಿದ್ದರು.

ಇದು ಕಮಲಭವಾಂಡಮಾಲಾ.... ಲಕ್ಷ್ಮೀಕಾಂತಶ್ರೀಪಾದ ಭಕ್ತಿಯುಕ್ತ ಸುಕವೀಂದ್ರರುದ್ರಪ್ರಣೀತವಾದ ಶ್ರೀಜಗನ್ನಾಥವಿಜಯ ಮಹಾಪ್ರಬಂಧದಲ್ಲಿ ರೈವತಾದ್ರಿ ವೈಭವ ಆ ಅದ್ರಿಯ ತಪೋವನ ವರ್ಣನೆ, ಇಂದ್ರಪ್ರಸ್ಥಪ್ರವೇಶ, ಜರಾಸಂಧ ವಧೆ, ರಾತ್ರೀವಿಹಾರವರ್ಣನೆಗಳ ಹದಿನಾರನೆಯ ಆಶ್ವಾಸ.

# ಸಪ್ತದಶಾಶ್ವಾಸಂ

ಶ್ರೀಜಾಯಾಪತಿ ಧರ್ಮಜ
ರಾಜಾವಸಥಕ್ಕೆ ಪೋಗಿ ಹರಿವಿಷ್ಟರದೊಳ್
ಪೂಜಾಸತ್ಕೃತನಿರ್ದಂ
ರಾಜಿಸೆ ನಿಜಮೂರ್ತಿ ತನ್ಮಹಾಸ್ಥಾಯಿಕೆಯೊಳ್ ೧

ಮಂಗಳಭೂಷಣಾಂಬರಧರಂ ಶುಭಮೂರ್ತಿ ಸದರ್ಭರತ್ನಮು
ದ್ರಾಂಗುಳಿ ಯಜ್ಞಸೂತ್ರನಿವಹಾಂಚಿತವಕ್ಷನಶೇಷವೇದವೇ
ದಾಂಗಪಯೋಧಿ ಬಿನ್ನವಿಸಿದಂ ದನುಜಾರಿಗೆ [1]ಧೌಮ್ಯನೊಪ್ಪೆ ದಂ
ತಂಗಳ ಕಾಂತಿಗಳ್ ನಿಜಸುಭಾಷಿತವಲ್ಲರಿ ಪೂತ ಮಾಟ್ಕೆಯಿಂ ೨

ಪಾವನಿಯೊಳ್ ಪೊಣರ್ದಂ ಮಗ
ಧಾವನಿಪಂ ಪೊಣರಲಂಜಿದಂ ನಿನಗದಱಿಂ
ದ್ಯಾವಾಪೃಥಿವೀಮೂರ್ತಿಗ
ದಾವಂ ಪ್ರಾದೇಶಿಕಂ ಪೊಣರ್ಕೆಗೆ ನೆಱೆವಂ ೩

ರಜದಿಂ ತಮದಿಂ ನೀಂ ಪ
ದ್ಮಜನೀಶ್ವರನಾಗಿ [2]ಪಡೆವ ಕಿಡಿಸುವ ಪದಕೀ
ತ್ರಿಜಗಮುಮಂ ಸತ್ತ್ವದಿನಂ
ಬುಜಾಕ್ಷ ರಕ್ಷಿಸುವ ಪೆಂಪಿದತಿಶಯಮಲ್ತೇ ೪

೧. ಶ್ರೀ ರುಕ್ಮಿಣೀಪತಿ ಕೃಷ್ಣನು ಧರ್ಮರಾಜನರಮನೆಗೆ ಹೋಗಿ, ಆ ಮಹಾಸಭೆಯ ಸಿಂಹಾಸನದಲ್ಲಿ ತನ್ನ ಮೂರ್ತಿಯು ಪ್ರಕಾಶಿಸುತ್ತಿರಲು, ಪೂಜೆಯಿಂದ ಸತ್ಕೃತನಾಗಿದ್ದನು. ೨. ಮಂಗಳ ಮೂರ್ತಿಯೂ, ಶುಭವಸ್ತ್ರಾಭರಣಧಾರಿಯೂ, ದರ್ಭಪವಿತ್ರ ಸಹಿತವಾದ ರತ್ನದ ಮುದ್ರೆಯುಂಗುರವನ್ನೂ ಎದೆಯ ಮೇಲೆ ಯಜ್ಞೋಪವೀತಗಳನ್ನೂ ಧರಿಸಿದವನೂ ಸಮಸ್ತವೇದವೇದಾಂಗಸಾಗರನೂ ಆದ ಧೌಮ್ಯಮುನಿ-ಆತನ ಸುಭಾಷಿತವೆಂಬ ಲತೆಯು ಹೂಬಿಟ್ಟಿತೆನ್ನುವಂತೆ ಹಲ್ಲುಗಳ ಹೊಳಪು ಒಪ್ಪುತ್ತಿರಲು ಕೃಷ್ಣನಿಗೆ ವಿಜ್ಞಾಪಿಸಿದನು. ೩. "ಮಗಧ ರಾಜನಾದ ಜರಾಸಂಧನು ಭೀಮನೊಡನೆ ಯುದ್ಧ ಮಾಡಿದನು. ನಿನ್ನೊಡನೆ ಮಾಡಲು ಅಂಜಿದನು. ಭೂಮ್ಯಾಕಾಶಪೂರ್ಣ ಮೂರ್ತಿಯಾದ ನಿನ್ನೊಡನೆ ಅಲ್ಪ ಪ್ರದೇಶದ ಯಾವನು ತಾನೆ ಯುದ್ಧಮಾಡಲು ಸಮರ್ಥನು? ೪. ಕಮಲಾಕ್ಷಾ! ನೀನು ರಜೋಗುಣದಿಂದ ಬ್ರಹ್ಮನಾಗಿ ಈ ಮೂರು ಲೋಕವನ್ನು ಸೃಷ್ಟಿಸುವ, ತಮೋಗುಣದಿಂದ ನಾಶಮಾಡುವ ಸ್ಥಾನಕ್ಕಿಂತಲೂ ಸತ್ವಗುಣದಿಂದ ವಿಷ್ಣುವಾಗಿ ಮೂರು ಲೋಕವನ್ನೂ

---

೧. ಧೌಮ್ಯನಂದು ದಂತಂಗಳ (ಕಗ) ಧೌಮ್ಯನೊಪ್ಪಿರಲ್ ಕಂಗಳ (ಖ) ಧೌಮ್ಯನೊಂದೆ ದಂತಂಗಳ (ಮೊಲಿ) ೨. ಪಡೆವ ಕಿಡಿಸುವುದರ್ಕೀ (ಕಗ) ಪಡೆವ ಕಿಡಿಸುವುದಕ್ಕೀ (ಖ) ಪಡೆದು ಕಿಡಿಸುವುದಿರ್ಕೀ (ಮೊಲಿ)

ಪರಮಾತಿಥಿ ನೀಂ ನಿನಗಾ
ದರದಿಂದಾತಿಥ್ಯಪೂಜೆಯಂ ಮೆಱೆವ ದಿನಂ
ದೊರೆಕೊಂಡುದೀ [೧]ನೃಪಂಗೇಂ
ಚರಿತಾರ್ಥನೊ ಸಾರ್ವಭೌಮರೊಳ್ ಯಮತನಯಂ ೫

ಉರ್ವೀಶಂ ಮಖಪರಿಕರ
ಸರ್ವಸ್ವವನಾಗುಮಾಡಿ [೨]ವನಜಾಕ್ಷ ಭವ
ದ್ದೋರ್ವಳದ ಬಳದಿನಲ್ಲದೆ
ನಿರ್ವಹಿಸದು ಯಾಗಮೆಂದು ಪಾರುತ್ತಿರ್ದಂ ೬

ವ॥ ಆ ಮಹಾಧ್ವರೋಚಿತರಚನಾವಿಶೇಷಮಂ ನಿರೀಕ್ಷಿಸುವುದೆಂದು ಪುಂಡರೀಕಾಕ್ಷನ ನೊಡಗೊಂಡುಯ್ದು

ವಿಮಲಸ್ವರ್ಣಮಯಂ ಕನನ್ಮಣಿಮಯಂ ಶೋಭಾಮಯಂ ತಾನೆನ
ಲ್ಕೆ ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ ಶಾಸ್ತ್ರದೃ
ಷ್ಟಮೆನಲ್ಮಾಡಿದ ಯಾಗದೇವಯಜನಪ್ರಾಗ್ವಂಶಪತ್ನೀವಿಚಿ
ತ್ರಮಹಾಶಾಲೆಗಳಂ ಸಮಸ್ತಜನಚೇತೋಹ್ಲಾದಿಯಂ ವೇದಿಯಂ ೭

ವ॥ ಆ ವೇದಿಯ ಯಥೋಚಿತಸ್ಥಾನಂಗಳೊಳ್ ಸುಕೃತವನಿತಾಪತ್ಯಮೆನಿಪಗಾರ್ಹಪತ್ಯಮುಮಂ ಸಮಸ್ತಮುನಿಜನಸ್ತವನೀಯಮೆನಿಪಾಹವನೀಯಮುಮಂ ಭವಾರ್ಣವವಾಡ

ರಕ್ಷಿಸುವ ಈ ಮಹಿಮೆಯು ಅತಿಶಯುವಲ್ಲವೇ? ೫. ಧರ್ಮರಾಜನು - ಪರಮಾತಿಥಿಯಾದ ನಿನಗೆ ಆತಿಥ್ಯ ಪೂಜೆಯನ್ನು ಮಾಡುವ ದಿನವು ಒದಗಿದೆ. ಚಕ್ರವರ್ತಿಗಳಲ್ಲಿ ಧರ್ಮರಾಜನು ಅದೆಷ್ಟು ಕೃತಕೃತ್ಯನೋ! ೬. ವನಜಾಕ್ಷಾ! ಧರ್ಮರಾಜನು ಯಾಗಕ್ಕೆ ಬೇಕಾದ ಸರ್ವಪರಿಕರಗಳನ್ನೂ ಸಿದ್ಧಪಡಿಸಿ, ನಿನ್ನ ಬಾಹುಶಕ್ತಿಯ ಸಹಾಯ ಬಲವಿಲ್ಲದೆ ಯಾಗವು ನಡೆಯದೆಂದು ನಿನ್ನನ್ನು ನಿರೀಕ್ಷಿಸುತ್ತಿದ್ದನು. ವ॥ ಆ ಮಹಾಯಾಗಕ್ಕೆ ಉಚಿತವಾದ ರಚನಾ ವಿಶೇಷವನ್ನು ನೀನು ನೋಡಬೇಕು." ಎಂದು ಹೇಳಿ ಕೃಷ್ಣನನ್ನು ಒಡನೆ ಕರೆದುಕೊಂಡು ಹೋದನು. ೭. ಮಯನು, ಆಶ್ಚರ್ಯಕರವಾಗಿರುವಂತೆ ಸುವರ್ಣಮಯವಾಗಿಯೂ ಹೊಳೆಯುವ ರತ್ನಮಯವಾಗಿಯೂ ಕಾಂತಿಮಯವಾಗಿಯೂ ಮಾಡಿದ ವಿಸ್ತಾರವಾದ ಸಭಾಮಂಟಪವನ್ನೂ ಶಾಸ್ತ್ರದಲ್ಲಿ ಹೇಳಿರುವಂತೆ ಯಾಗದೇವ ಪೂಜೆಗಳ ಗೃಹ ಪ್ರಾಗ್ವಂಶ (= ಯಜಮಾನನಿರುವ ಕೋಣೆ) ಯಜಮಾನನ ಪತ್ನಿಯಿರುವ ಕೋಣೆ ಮೊದಲಾದ ವಿಚಿತ್ರವಾದ ಉಪಗೃಹಗಳುಳ್ಳ ಮಹಾ ಯಾಗಶಾಲೆಗಳನ್ನೂ ಸಮಸ್ತರಿಗೂ ಚೇತೋಹಾರಿಯಾದ ಯಜ್ಞವೇದಿಕೆಯನ್ನೂ ತೋರಿಸಿದನು. ವ॥ ಆ ವೇದಿಕೆಯಲ್ಲಿ ಯಥೋಚಿತ ಸ್ಥಳಗಳಲ್ಲಿ ಪುಣ್ಯಶಾಲಿನಿಯಾದ ಗೃಹಿಣಿಗೆ ಮಗನೆನಿಸುವ ಗಾರ್ಹಪತ್ಯಾಗ್ನಿಯನ್ನೂ ಸಮಸ್ತ ಋಷಿಗಳ ಸ್ತೋತ್ರಪಾತ್ರನಾದ ಆಹವನೀಯಾಗ್ನಿಯನ್ನೂ

೧. ನೃಪಂಗೆನೆ ಚರಿತಾರ್ಥಂ (ಖ) ೨. ವನಜಾಕ್ಷಭುಜಾಗರ್ವದ ಬಲದಿಂದಲ್ಲದೆ (ಖ)

ಬಾಡಬಶುಕ್ಷಣಿಯೆನಿಪ ದಕ್ಷಿಣಾಗ್ನಿಯುಮಂ ಲೋಕೋತ್ತರವೆನಿಪುತ್ತರವೇದಿಯುಮಂ ವಿಶಿಷ್ಟ ವಿಷ್ಟರಾರ್ಘ್ಯಪ್ರಣೀತ ಸುಕ್ಸ್ರುವಾಕ್ಷತಸುಗಂಧ ನವಯವಾಮಳತಿಲಸಮಿದ್ದರ್ಭಾದಿವಿವಿಧ ಮಖಪರಿಕರಂಗಳುಮಂ ಬೇಱಿವೇಱಿ ತೋಱಿ

[1]ಆನಧ್ವರ್ಯು ಪರಾಶರ
ಸೂನು ಬ್ರಹ್ಮಂ ಮುನಿವ್ರಜಂ ಋತ್ವಿಕ್ಸಂ
ತಾನಕಮುದ್ಗಾತೃ [2]ಲಸ
ಜ್ಞ್ಞಾನಮುಖಂ ಹೋತೃ ಯಾಜ್ಞವಲ್ಕ್ಯಮುನೀಂದ್ರಂ ೮

ಅಕ್ಲೂಣವಾದೊಡಂ ಫಲ
ಮಕ್ಷಯವಾದಪುದೆ ಮಂತ್ರತಂತ್ರಕ್ರಮುವ
ಬ್ಜಾಕ್ಷ [3]ಭವತ್ಕಾರುಣ್ಯ ನಿ
ರೀಕ್ಷಣದಿಂದಲ್ಲದಕ್ಕುಮೇ ಯಜ್ಞಫಲಂ ೯

ಯಜ್ಞಾದಿಸುಕೃತಕಾರಣ
ಯಾಜ್ಞಾವನದಕ್ಷ ಯಜ್ಞಫಲದಾಯಕ ನಿ
ಮ್ಮಾಜ್ಞೆಯಿನಿನತನಯಸುತಂ
ಯಜ್ಞಮನೊಡರಿಸುಗುವಭಯಮಮಂ ದಯೆಗೆಯ್ಯಿಂ ೧೦

ವ|| ಎಂದು ಧೌಮ್ಯಂ ಬಿನ್ನವಿಸೆ ಧರ್ಮಪುತ್ರನ ವದನಶತಪತ್ರಮಂ ವನಜನೇತ್ರನತಿಪ್ರೀತಿಯಿಂ ನೋಡಿ

ಸಂಸಾರಸಾಗರದ ಬಡಬಾಗ್ನಿಯೆನಿಸಿದ ದಕ್ಷಿಣಾಗ್ನಿಯನ್ನೂ ಪ್ರತಿಷ್ಠಿಸುವ ಎಡೆಗಳನ್ನೂ ಲೋಕೋತ್ತರವಾದ ಉತ್ತರವೇದಿಯನ್ನೂ, ಯಜ್ಞವೇದಿಕೆಯ ಮೇಲೂ ಬೇರೆ ಕಡೆಯಲ್ಲೂ ಕುಳಿತುಕೊಳ್ಳುವವರಿಗೆ ಉಚಿತವಾದ ಪೀಠಗಳನ್ನೂ ಪೂಜಾದ್ರವ್ಯಗಳನ್ನೂ ಅರ್ಘ್ಯೋದಕ ಪ್ರಣೀತ ಸ್ರುಕ್, ಸ್ರುವ, ಅಕ್ಷತ, ಗಂಧ, ನವಯವ, ತಿಲ, ಸಮಿದ್ದರ್ಭಾದಿ ವಿಧವಿಧವಾದ ಯಜ್ಞಪರಿಕರಗಳನ್ನೂ ತೋರಿಸಿದನು. ೮. ಆ ಧೌಮ್ಯನು ನಾನೇ ಈ ಯಾಗದಲ್ಲಿ ಅಧ್ವರ್ಯು, ಪರಾಶರಪುತ್ರನಾದ ವ್ಯಾಸಮುನಿಬ್ರಹ್ಮ, ಮುನಿಗಳ ಸಮೂಹದಲ್ಲಿ ಸಾಮವೇದವನ್ನು ಅರಿತವರ ಗುಂಪೇ ಉದ್ಗಾತೃ, ಜ್ಞಾನಿಯಾದ ಯಾಜ್ಞವಲ್ಕ್ಯ ಮುನೀಂದ್ರನೇ ಹೋತೃ. ೯. "ಕಮಲಾಕ್ಷಾ! ಯಜ್ಞದ ಮಂತ್ರತಂತ್ರ ಕ್ರಮಾದಿಗಳಾವುದರಲ್ಲೂ ನ್ಯೂನತೆ ಯಿಲ್ಲದಿದ್ದರೂ ನಿನ್ನ ಕಾರುಣ್ಯನಿರೀಕ್ಷಣೆಯಿಂದಲ್ಲದೆ ಯಜ್ಞದ ಫಲವು ಅಕ್ಷಯವಾಗುವುದೆ! ೧೦. ಯಜ್ಞಾದಿ ಸುಕೃತಕಾರಣನೇ! ಯಜ್ಞಫಲದಾಯಕನೇ! ನಿಮ್ಮ ಆಜ್ಞೆಯಿಂದ ಯಮಧರ್ಮನ ಪುತ್ರನು ಯಜ್ಞವನ್ನು ಮಾಡುವನು, ಅಭಯವನ್ನು ದಯಪಾಲಿಸು ಎಂದು ವಿಜ್ಞಾಪಿಸಿದನು. ಪುಂಡರೀಕಾಕ್ಷನು ಧರ್ಮರಾಜನ ಮುಖಕಮಲವನ್ನು ನೋಡಿ

೧. ಆನಧ್ವರಿಯೆ (ಕಗ) ೨. ಲಸದ್ಧಾಮುಖಂ (ಕಗ) ೩. ನಿರೀಕ್ಷಣದಿಂದಕ್ಕುದಲ್ಲದೇ (ಖ)

ತಣಿವನ್ನಂ ಪಿತೃದೇವತಾಸಮುದಯಂ ಸ್ವರ್ಗಾಪವರ್ಗೈಕಕಾ
ರಣವಪ್ಪಗ್ಗದ ರಾಜಸೂಯಮನೊಡರ್ಚಿಂ ವಿಘ್ನಕಾರಿದ್ವಿಷ
ದ್ಗಣದಿಂ ಭೂತಗಣಕ್ಕೆ [1]ತುಷ್ಟಿವಡೆದಪ್ಪೆಂ ಶಾರ್ಙ್ಗಟಂಕಾರಘೋ
ಷಣಮಂ ಕೇಳ್ದೊಡೆ ದಕ್ಷನೇ ಕಿಡಿಸಲಾ ದಕ್ಷಾಧ್ವರಧ್ವಂಸಿಯುಂ ೧೧

ವ॥ ಎಂದು ಪೂಣ್ದುನುಡಿಯೆ ಶುಭಮುಹೂರ್ತದೊಳ್

ನವಮೇಘಧ್ವನಿಧೀರತೂರ್ಯನಿನದಂ ಭೋರೆಂಬಿನಂ ಮಂಗಳೋ
ತ್ಸವಶೃಂಗಾರಮನಪ್ಪುಕೆಯ್ದೆವಿನಂ ದೀಕ್ಷಾವ್ರತಂ ಸಪ್ತರಾ
ತ್ರವಿಧಾನಾಂತರದೊಳ್ ಷಡಗ್ನಿ ಪರಿತೋಷಂಬೆತ್ತು ಶಾಸ್ತ್ರಾಗಮೋ
ಕ್ತವಿದಾದತ್ತೆನೆ ರಾಜಸೂಯಮಖಮಂ ಬೇಳ್ದಂ ಮಹೀಪಾಲಕಂ ೧೨

ಕನಕಂ ಶೋಧಿಸೆ ದರ್ಪಣಂ ಬೆಳಗೆ ರತ್ನಂ ಶಾಣಕೋಲ್ಲೀಢಮಾ
ಗೆ ನಿತಾಂತಂ ವಿಮಲತ್ವಮಂ ತಳೆವವೋಲ್ ಧರ್ಮಾತ್ಮಜಂ ರಾಜಸೂ
ಯನಿಮಿತ್ತವ್ಯಯದಿಂದೆ ನಿರ್ಮಲತೆವೆತ್ತೇಂ ತೇಜದಿಂ ರಾಜಿಸಿ
ರ್ದನೊ ಚಿತ್ರಂ ನರಲೋಕದೊಳ್ ದಿನಮಣಿದ್ವೈರಾಜ್ಯಮಾಯ್ತೆಂಬಿನಂ ೧೩

೧೧. “ಪಿತೃದೇವತೆಗಳ ಸಮೂಹವು ತೃಪ್ತಿಪಡುವಂತೆ ಸ್ವರ್ಗಮೋಕ್ಷಗಳಿಗೆ ಮುಖ್ಯ ಕಾರಣವಾದ ಶ್ರೇಷ್ಠವಾದ ರಾಜಸೂಯಯಾಗವನ್ನು ನೀನು ಆರಂಭಿಸು. ವಿಘ್ನಕಾರಿಗಳಾದ ದ್ವೇಷಿಗಳ ಸಮೂಹದಿಂದ, ನಾನು ಭೂತಗಣಕ್ಕೆ ಸಂತುಷ್ಟಿಯನ್ನುಂಟುಮಾಡುವೆನು. ಶಾರ್ಙ್ಗ ಧನುಸ್ಸಿನ ಟಂಕಾರಘೋಷಣವನ್ನು ಕೇಳಿದರೆ, ದಕ್ಷಯಾಗವನ್ನು ಧ್ವಂಸಮಾಡಿದ ರುದ್ರನು ತಾನೆ ನಿನ್ನ ಯಜ್ಞವನ್ನು ಕೆಡಿಸಲು ದಕ್ಷನಾಗುವನೆ?” ವ॥ ಎಂದು ಪ್ರತಿಜ್ಞೆ ಮಾಡಿ ಹೇಳಿದನು. ಶುಭಮುಹೂರ್ತದಲ್ಲಿ ಧರ್ಮರಾಜನು ೧೨. ಹೊಸಮೋಡದ ಧ್ವನಿಯಂತೆ ಗಂಭೀರವಾದ ತೂರ್ಯನಾದವು ಭೋರೆನ್ನುತ್ತಿರಲು ಯಾಗಕಾರ್ಯದಲ್ಲಿ ಭಾಗಿಗಳೊಂದಿಗೆ ಮಂಗಳೋತ್ಸವಕ್ಕೆ ತಕ್ಕ ಶೃಂಗಾರವನ್ನು ಮಾಡಿಕೊಂಡನು. ದೀಕ್ಷಾವ್ರತವನ್ನು ಏಳುರಾತ್ರಿಗಳು ಕಳೆಯುವವರೆಗೂ ಆಚರಿಸಿದನು. ಅನಂತರ ಆರು ಅಗ್ನಿಗಳೂ ಪರಿತೋಷವನ್ನು ಪಡೆದವು. ಇದು ಶಾಸ್ತ್ರಾಗಮೋಕ್ತವಾಗಿದೆ ಎಂದು ತಿಳಿದವರು ಹೇಳುತ್ತಿರುವಲ್ಲಿ ಧರ್ಮರಾಜನು ರಾಜಸೂಯಯಾಗವನ್ನು ಮಾಡಿದನು. ೧೩. ಚಿನ್ನವು ಶೋಧಿಸಿದರೆ ಕನ್ನಡಿಯು ಬೆಳಗಿದರೆ ವಜ್ರವು ಸಾಣೆಹಿಡಿದರೆ ಪೂರ್ಣವಾಗಿ ನಿರ್ಮಲವಾಗಿ ಹೊಳೆಯುವಂತೆ ಧರ್ಮರಾಯನು ರಾಜಸೂಯಯಾಗಕ್ಕಾಗಿ ವ್ಯಯಮಾಡಿದುದರಿಂದ ನಿರ್ಮಲನಾಗಿ ಪ್ರಕಾಶಿಸಿದನು. ಭೂಲೋಕದಲ್ಲಿ ಇಬ್ಬರು ಸೂರ್ಯರು ಪ್ರಕಾಶಿಸುವರೋ

೧. ತೃಪ್ತಿವಡೆಯಿಪ್ಪೆಂ (ಖ)

ಪದೆದಿನಿಸಂ [1]ತಳರ್ಚುವ ತಳರ್ಚಿದುದಂ ಮೊಟಕಾಲ್ಗೆ ತರ್ಪ ತಂ
ದುದನುರದಿಂ ತಱುಂಬುವ ತಱುಂಬಿದುದಂ ಪೆಗಲಲ್ಲಿಗೆತ್ತುವೆ
ತ್ತಿದುದನೆ ನೆತ್ತಿಯೊಳ್ ತಳೆದು ಪೊಂಗಳ ಭಾರಮನುಯ್ವ ವಿಪ್ರವೃಂ
ದದ ಪಡಿಮಾತೆ [2]ಪೇಟಿದೆ ಯುಧಿಷ್ಠಿರರಾಜನ [3]ಚಾಗದೇಟ್ಗೆಯಂ ೧೪

ವ|| ಅಂತು ನಿರ್ವರ್ತಿತ ರಾಜಸೂಯನಾದ ಕೌಂತೇಯಂ ಗಾಂಗೇಯಂಗಭಿಮುಖನಾಗಿ

ದಿವಸೇಂದ್ರಾನ್ವಾಯ ಸೋಮಾನ್ವಯ ಯದುಕುಲರಾಜಾಧಿರಾಜನ್ಯಕಂ ವಾ
ಸವಲೀಲಾವಾಸಮೀ [4]ಯಿರ್ದಪುದೆ ನೆಗಟ್ಟ ರಾಜರ್ಷಿ ದೇವರ್ಷಿ ವಿಪ್ರ
ರ್ಷಿವಿತಾನಂ ಪುಣ್ಯಪುಂಜೋಪಮವಿದೆ ಶಿಶುಪಾಲಾದಿದೈತ್ಯವ್ರಜಂ ಭೈ
ರವರೂಪಾಡಂಬರಂ ಬಂದಿದೆ ನೆರೆದುದಶೇಷಂ ಪ್ರಪೂಜಾಭಿಲಾಷಂ ೧೫

ವ|| ಎನೆ

[5]ಏ ಪೆರ್ಚೋ ಯಮತನೂಜ ಸ
ಭಾಪೂಜೆಯೊಳಗ್ರಪೂಜೆ ಕೃಷ್ಣಂಗೆ ವಲಂ
ಶ್ರೀಪುರುಷೋತ್ತಮನಿರ್ದ ಸ
ಭಾಪಟಲದೊಳನ್ಯಪುರುಷನಾವಂ ಪೂಜ್ಯಂ ೧೬

ಎಂಬಂತೆ ಆಶ್ಚರ್ಯವೆನಿಸಿತು. ೧೪. ಧರ್ಮರಾಜನು ಬ್ರಾಹ್ಮಣರಿಗೆ ದಾನದಕ್ಷಿಣೆಯಾಗಿ ಕೊಟ್ಟ ಸುವರ್ಣನಾಣ್ಯಗಳಲ್ಲಿ ಅವರು ತಮಗೆ ಹೊರಲು ಸಾಧ್ಯವಾಗುವಷ್ಟನ್ನು ತೆಗೆದು ಗಂಟು ಕಟ್ಟಿ ಅದನ್ನು ಸ್ವಲ್ಪದೂರ ಸಾಗಿಸಿ, ಮೊಳಕಾಲಿನವರೆಗೆ ಎತ್ತಿದರು. ಬಳಿಕ ಕಷ್ಟದಿಂದ ಎದೆಗಿರಿಕಿದರು. ಸಾಧ್ಯವಾಗದೆ ಹೆಗಲಿಗೇರಿಸಿದರು. ಅಲ್ಲೂ ಧರಿಸಲಾರದೆ ಆ ಮೂಟೆಯನ್ನು ನೆತ್ತಿಯ ಮೇಲೆ ಹೊತ್ತು ನಡೆಯುತ್ತ ಪರಸ್ಪರ ಅವರು ಆಡುತ್ತಿದ್ದ ತಮ್ಮ ಭಾರದ, ದಾನದ ಮಾತುಗಳೇ ಧರ್ಮರಾಜನ ತ್ಯಾಗಾಧಿಕ್ಯವನ್ನು ಪ್ರಕಟಿಸುತ್ತಿದ್ದವು. ವ|| ಹಾಗೆ ರಾಜಸೂಯಯಾಗವನ್ನು ನೆರವೇರಿಸಿದ ಧರ್ಮರಾಜನು ಭೀಷ್ಮರ ಮುಖವನ್ನು ನೋಡಿ, ೧೫. "ಇಲ್ಲಿ ಸೂರ್ಯಚಂದ್ರವಂಶದ, ಯದುಕುಲದ, ರಾಜಾಧಿರಾಜರ ಸಮೂಹವು ಇಂದ್ರಲೀಲೆಗೆ ಆವಾಸವಾದುದಾಗಿ ನೆರೆದಿದೆ. ಪ್ರಸಿದ್ಧರಾದ ರಾಜಋಷಿ ಬ್ರಹ್ಮಋಷಿ ದೇವಋಷಿಗಳ ಸಂಘವು ಪುಣ್ಯದ ರಾಶಿಯಂತೆ ಇದೆ. ಶಿಶುಪಾಲನೇ ಮೊದಲಾದ ಸಮಸ್ತ ದೈತ್ಯಸಮೂಹವೂ ಭಯಂಕರವಾದ ರೂಪಾಡಂಬರವುಳ್ಳುದಾಗಿ ಅಗ್ರಪೂಜಾಭಿಲಾಷೆಯಿಂದ ನೆರೆದಿದೆ" ವ|| ಎಂದನು. ೧೬. "ಧರ್ಮಪುತ್ರಾ, ಏನು ಪೆಚ್ಚೋ ನಿನಗೆ! ಸಭಾಪೂಜೆಯಲ್ಲಿ ಅಗ್ರಪೂಜೆ ನಿಜವಾಗಿಯೂ ಕೃಷ್ಣನಿಗೇ. ಶ್ರೀಪುರುಷೋತ್ತಮ ಕೃಷ್ಣನಿರುವ ಸಭಾಮಂದಿರದಲ್ಲಿ ಅನ್ಯಪುರುಷನು ಯಾವನು ತಾನೆ ಪೂಜ್ಯನಾದಾನು?

---

೧. ತೆರಳ್ಚುವ ತೆರಳ್ಚಿದುದಂ (ಖ) ೨. ಪೇಟಿವೆ (ಕಗ) ೩. ಭಾಗ್ಯದೇಟ್ಗೆಯಂ (ಖ) ೪. ಯಿರ್ದಪುದೆನೆ ನೆಗಳ್ದೀ ದೇವರಾಜದೃಷೀವಿಪ್ರವಿತಾನಂ (ಖ) ೫. ಏಪಚ್ಚೇಂ ಯಮ ತನುಜ (ಕ) ಏಪೊರ್ಚ್ಚುಂ ಯಮತನುಜ (ಗ)

ಶ್ರುತಿಪತಿ ಗೋಪತಿ ಲಕ್ಷ್ಮೀ
ಪತಿ ಸತ್ವಮಯಂ ಜಗನ್ಮಯಂ ಜ್ಞಾನಮಯಂ
ಕ್ರತುಪುರುಷನಾದಿಪುರುಷಂ
ಶ್ರುತಿಪುರುಷನಿರಲ್ಕೆ ಮಿಕ್ಕ ಪುರುಷರಪೂಜ್ಯರ್ ೧೭

ವII ಎಂದು ಮಂದಾಕಿನೀನಂದನಂ ನುಡಿಯೆ ಕೇಳ್ದು ಶಿಶುಪಾಲಂ ದಕ್ಷಿಣದಿಕ್ಪಾಲಕನಂತೆ ಕೆರಳ್ದು ನಿಂದಿರ್ದು

ನೀರ್ಮಾನಿಸಂ ನದೀಜಂ
ನೀರ್ಮಾನಿಸನಬ್ಧಿಶಯನನದುಕಾರಣದಿಂ
ಧರ್ಮಜ ಕೇಳ್ ಭೀಷ್ಮರ ಸಹ
ಧರ್ಮದ ಕೆಳೆ ಕೊಂಡುಕೊನೆದುದೀ ಕೇಶವನಂ ೧೮

ಮೂರ್ಧಾಭಿಷಿಕ್ತರಿರೆ ಗೋ
ವರ್ಧನನಂ [1]ಪೂಜಿಸೆಂದನಜೆಯದೆ ಭೀಷ್ಮಂ
ವಾರ್ಧಕದಿಂ ಮತಿವಿಕಳಂ
ಸ್ವರ್ಧುನಿಯೊಳ್ ಪುಟ್ಟಿದುದಱಿನತಿಜಡನಲ್ತೇ ೧೯

ಜ್ಞಾನಿಗಳೊಳ್ ಯೋಗಿಗಳ
ಜ್ಞಾನಿಗಳೊಳ್ [2]ಗೋಪರಧಿಕರೀ ಯೋಗಿಗಳಿಂ
ದೀ ನಂದಗೋಪಪುತ್ರಂ
[3]ತಾನೆಂತೊ ಪವಿತ್ರನಗ್ರಪೂಜಾಪಾತ್ರಂ ೨೦

೧೭. ಶ್ರುತಿಪತಿಯೂ, ಗೋಭೂಸ್ವರ್ಗಪತಿಯೂ, ಲಕ್ಷ್ಮೀಪತಿಯೂ ಆಗಿ ಸತ್ತ್ವಗುಣಮಯನೂ ಜಗನ್ಮಯನೂ ಜ್ಞಾನಮಯನೂ, ಯಜ್ಞಪುರುಷನೂ, ಆದಿಪುರುಷನೂ ವೇದಪುರುಷನೂ ಆದ ಕೃಷ್ಣನಿರುವಾಗ ಮಿಕ್ಕ ಪುರುಷರು ಅಪೂಜ್ಯರು." ವII ಎಂದು ಗಂಗಾಪುತ್ರನಾದ ಭೀಷ್ಮನು ಹೇಳಿದನು. ಅದನ್ನು ಕೇಳಿ, ಶಿಶುಪಾಲನು ಯಮನಂತೆ ಕೆರಳಿ ನಿಂತು ಹೀಗೆಂದನು :- ೧೮. "ಭೀಷ್ಮನು ಜಲಮಾನುಷ, ಸಾಗರಶಯನನಾದ ಕೃಷ್ಣನೂ ಜಲಮಾನುಷನೇ ಆದುದರಿಂದ ಭೀಷ್ಮನ ಸಮಾನ ಗುಣದ ಗೆಳೆತನವು ಈ ಕೇಶವನನ್ನು ಕೊಂಡಾಡುತ್ತಿದೆ. ಧರ್ಮರಾಜಾ, ಕೇಳು. ೧೯. ಭೀಷ್ಮನು ಮೂರ್ಧಾಭಿಷಿಕ್ತರಾದ ಕ್ಷತ್ರಿಯರು ಇರುವಾಗ ಗೋಪಾಲನನ್ನು ಪೂಜಿಸು ಎಂದು ತಿಳಿವಳಿಕೆಯಿಲ್ಲದೆ ಹೇಳಿದನು. ಮುಪ್ಪಿನಿಂದ ಬುದ್ಧಿವಿಕಲ್ಪವಾಗುವುದು. ದೇವನದಿಯಲ್ಲಿ ಹುಟ್ಟಿದವನು. ಆದುದರಿಂದ ಅವನು ಅತಿಜಡನಲ್ಲವೆ! ೨೦. "ಜ್ಞಾನಿಗಳಲ್ಲಿ ಯೋಗಿಗಳೂ ಅಜ್ಞಾನಿಗಳಲ್ಲಿ ಗೋಪನೂ ಅಧಿಕರು. ಈ ಯೋಗಿಗಳಿಗಿಂತಲೂ ಈ ನಂದಗೋಪನ ಪುತ್ರನು ಅದು ಹೇಗೆ ಪವಿತ್ರನೂ ಅಗ್ರಪೂಜೆಗೆ ಅರ್ಹನೂ ಆಗುವನೋ!

---

೧. ಪೂಜಿಸೆಂದನಿಂದೀ (ಖ) ೨. ಗೋಪರಧಿಕರದುಕಾರಣದಿಂ (ಕಗ) ೩. ತಾನೇನೊ (ಕಗ)

ದೇವರ್ ನರದೇವರ್ ಭೂ
[೧]ದೇವರುಮೇಂ ಪೂರ್ವದೇವನಾಂ [೨]ನೆಗಟ್ದಿನ್ನಿಂ
ದೇವಾದಿಗಳಟಿದರೆನ
ಲ್ಕಾವಂ ಮಿಗಿಲಗ್ರಪೂಜೆಗಾನೆ [೩]ಸಮಗ್ರಂ ೨೧

[೪]ಒಲವಿಂದೀವೊಡೆ ಗೋವಂ
ಗಲಗೆ ಕೊಟಲ್ ಕೋಡಕಾಳೆ ಕೋಲುಡೆದೋಲ್ ಕಂ
ಬಳಿ ಕಲ್ಲಿ ಚೆಲ್ಲಿ ಪೀಲಿಯ
ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ ೨೨

ನವನೀತಚೋರನಕುಲೀ
ನವಧೂಸ್ತನದುಗ್ಧಪೃಥುಶರೀರಂ ಗೋಪೀ
ಯುವತಿಜನಜಾರನಾಚಾ
ರವಿದೂರನೆ ಪೂಜ್ಯನಾಗೆ ನಿನಗೆ ನಿಕಾರಂ ೨೩

ಅಬುಧನಕುಲೀನನೆನ್ನದೆ
ಕುಬುದ್ಧಿ ನೀಂ ಯಮಜ ಗೋಪನಂ ಪೂಜಿಸಲಾ
ವಿಬುಧಪಿತೃ [೫]ಸಮಿತಿ ತಣಿದಪು
ದೆ ಬೂದಿಯೊಳ್ ಬೇಳ್ದ ಹವಿವೊಲಕ್ಕುಂ ಯಜ್ಞಂ ೨೪

ವ|| ಎಂದು ದಮಘೋಷಪುತ್ರಂ ವಸುದೇವಪುತ್ರನಂ ನಿರಾಕರಿಸಿ ನುಡಿಯಲಾ ಮಾತಿಂಗಜಾತಶತ್ರುವೆನಿಸಿದ ಧರ್ಮಪುತ್ರಂ ಕನಲ್ದು

೨೧. "ದೇವತೆಗಳೂ ರಾಜರೂ ಬ್ರಾಹ್ಮಣರೂ ಹಾಗಿರಲಿ ನಾನು ಪೂರ್ವದೇವನು (= ೧. ರಾಕ್ಷಸ ೨. ಆದಿದೇವ) ಪ್ರಖ್ಯಾತನಾದ ನನ್ನಿಂದ ದೇವಾದಿಗಳು ನಾಶವಾದರೆಂದ ಮೇಲೆ, ಅಗ್ರಪೂಜೆಗೆ ನನಗಿಂತ ಮೇಲಾದವನು ಯಾರು? ನಾನೇ ಅರ್ಹನು. ೨೨. "ಪ್ರೀತಿಯಿಂದ ಕೊಡಲೇಬೇಕೆಂದರೆ ಈ ಗೊಲ್ಲನಿಗೆ ಕೊಳಲು, ಕೋಡಿನಕಹಳೆ, ಕೋಲು, ನಡುವಿನ ಚರ್ಮ, ಕಂಬಳಿ, ಕಲ್ಲಿ, ಕನ್ನಡಿ, ನವಿಲುಗರಿಯ ಕುಲಾವಿ ಇವುಗಳನ್ನು ಕೊಡಬಹುದು. ಅಗ್ರಪೂಜೆಯನ್ನು ಸಲ್ಲಿಸುವುದು ವಿರುದ್ಧ. ೨೩. "ಹೊಸಬೆಣ್ಣೆ ಕುಲಸ್ತ್ರೀಯಲ್ಲದವಳ ಸ್ತನ್ಯಪಾನ ಇವುಗಳಿಂದ ದಪ್ಪವಾದ ಮೈಯ್ಯುಳ್ಳವನೂ ಗೋಪಯುವತಿಯರ ಜಾರನೂ ಆಚಾರದೂರನೂ ನಿನಗೆ ಪೂಜ್ಯವಾದರೆ ನೀನು ಧಿಕ್ಕಾರಾರ್ಹನು ನಿಂದ್ಯನು. ೨೪. ಧರ್ಮಜಾ, ವಿದ್ವಾಂಸನಲ್ಲದವನೂ ಕುಲೀನನಲ್ಲದವನೂ ಆದ ಗೋಪನನ್ನು ನೀನು ಪೂಜಿಸಿದರೆ, ವಿದ್ವಾಂಸರಾದ ಆ ಪಿತೃಗಳ ಸಮೂಹವು ತೃಪ್ತಿಪಡುವುದೆ?! ನೀನು ಮಾಡಿದ ಯಜ್ಞವು ಬೂದಿಯಲ್ಲಿ ಮಾಡಿದ ಹೋಮದಂತಾಗುವುದು!" ವ|| ಈ ರೀತಿಯಲ್ಲಿ ದಮಘೋಷಸುತನಾದ ಶಿಶುಪಾಲನು ಕೃಷ್ಣನನ್ನು ದೂಷಿಸಿ ಮಾತನಾಡಿದನು. ಅಜಾತಶತ್ರುವೆನಿಸಿದ ಧರ್ಮರಾಯನು ಆ ಮಾತಿಗೆ

---

೧. ದೇವರೆನಲ್ (ಖ) ೨. ನೆಗಟ್ದಿಂ ಕೇಳ್ ದೇವಾದಿಗಳೇಟಿದರೆನಲಾವಂ (ಖ) ನೆಗಟ್ದಿ ನ್ನೀ ದೇವಾದಿಗಳೇಟಿದರೆನಲಾವಂ (ಗ) ೩. ಸಮರ್ಥಂ (ಖ) ೪. ಕುಲಕೆಂದೀವೊಡೆ (ಖ) ೫. ಸಮಿಧಿ (ಗ)

ಮೇರುಮಹಾದ್ರಿಯಿರ್ದೆಡೆಯೊಳದ್ರಿಕುಲಂ ಮೃಗರಾಜನಿರ್ದ ಕಾಂ
ತಾರಕದಂಬದೊಳ್ ಮೃಗಗಣಂ ಸುರವಾರಣವಿರ್ದ ತಾಣದೊಳ್
ವಾರಣರಾಜಿ ಕಲ್ಪತರುವಿರ್ದ ವನಾಂತರದೊಳ್ ತರುವ್ರಜಂ
ಶ್ರೀರಮಣೇಶನಿರ್ದ ಸಭೆಯೊಳ್ ಧರಣೀಶರದೊಂದು ಲೆಕ್ಕಮೇ ೨೫

ಆವನ ಪದಮಂ ಧ್ಯಾನಿಸಿ
ದೇವದ್ವಿಜರಾಜ [1]ಮುನಿಗಳಭಿನುತರಾದರ್
ಭಾವಿಸು ನೀಂ ದೈತೇಯಾ
ಶ್ರೀವರನಿಂದನ್ಯನರರದೇಂ ವಿಶ್ರುತರೇ ೨೬

ದೇವತ್ರಯಾದ್ಯನಪ್ಪಾ
ದೇವಜ್ಯೇಷ್ಠಂ ಸ್ವನಾಭಿಕಮಳಭವಂ ಮಾ
ದೇವಂ ದ್ವಿತೀಯನೆನಿಪೀ
ದೇವಂ ಶ್ರೀವಾಸುದೇವನರ್ಘ್ಯನಮೋಘಂ ೨೭

ಅಮಲಯದುವಂಶನಿರೆ ದು
ಷ್ಟಮನ ಮಹಾ [2]ವಂಶನೆಂಬೆ ನೀನೇತಱಿನ
ಗ್ಗಮೆ ಕಲ್ಪವೃಕ್ಷಮಿರೆ ಕ
ಳ್ಳಿ ಮಹಾವೃಕ್ಷಂ ಗಡನಿತಱಿಂದದು ಕಿರಿದೇ ೨೮

ಕೋಪಗೊಂಡು, ೨೫. "ಮೇರುಮಹಾದ್ರಿಯಿರುವೆಡೆಯಲ್ಲಿರುವ ಅನ್ಯಪರ್ವತಗಳೂ, ಸಿಂಹವಿರುವ ಕಾಡಿನಲ್ಲಿ ಇತರ ಮೃಗಗಳೂ, ಐರಾವತವು ಇರುವ ಕಡೆಯಲ್ಲಿ ಬೇರೆ ಆನೆಗಳೂ ಕಲ್ಪವೃಕ್ಷವಿರುವ ವನದಲ್ಲಿ ಬೇರೇ ಮರಗಳೂ, ಶ್ರೀರಮಣನಿರುವ ಸಭೆಯಲ್ಲಿ ಭೂಮೀಶರೂ ಲೆಕ್ಕಕ್ಕೆ ಬರುವರೆ?! ೨೬. "ದೈತೇಯಾ ನೀನು ಭಾವಿಸಿ ನೋಡು. ಯಾರ ಪಾದವನ್ನು ಧ್ಯಾನಿಸಿ ದೇವತೆಗಳೂ ದ್ವಿಜರಾಜರೂ ಮುನಿಗಳೂ ಸ್ತುತ್ಯರಾಗಿರುವರೋ ಆ ಶ್ರೀವರ ಕೃಷ್ಣನಿಗಿಂತಲೂ ಬೇರೆಯ ಮನುಜರು ಪ್ರಸಿದ್ಧರೇ ಪೂಜ್ಯರೇ? ೨೭. "ತ್ರಿಮೂರ್ತಿ ಗಳಲ್ಲಿ ಆದ್ಯನೂ, ದೇವಜ್ಯೇಷ್ಠನಾದ ಬ್ರಹ್ಮನನ್ನು ತನ್ನ ನಾಭಿಕಮಲದಲ್ಲಿ ಪಡೆದವನೂ ಮಹಾದೇವನನ್ನು ತ್ರಿಮೂರ್ತಿಗಳಲ್ಲಿ ಎರಡನೆಯವನೆನ್ನಿಸಿರುವನೂ ಆದ ದೇವ ಶ್ರೀ ವಾಸುದೇವನು ಸತ್ಯವಾಗಿಯೂ ಅಗ್ರಪೂಜ್ಯನು. ೨೮. "ದುಷ್ಟಮನಸ್ಸಿನವನೇ! ನಿರ್ಮಲನಾದ ಯದುವಂಶದ ಕೃಷ್ಣನಿರುವಾಗ ನೀನು ಯಾವುದರಿಂದ ಮಹಾವಂಶನೆಂದು ಹೇಳಿಕೊಳ್ಳುವೆ? ಮಹತ್ತ್ವವು ಅಷ್ಟು ಅಗ್ಗವೆ? ಕಲ್ಪವೃಕ್ಷವಿರುವಾಗ ಕಳ್ಳಿಗಿಡವು ಮಹಾವೃಕ್ಷವೆಂದು ಅಂಕಿತನಾಮವನ್ನು ಪಡೆದು ಹಿರಿದಾಗುವುದೆ?

---

೧. ಮುನಿಗಳಭಿಮತರಾದರ್ ಭಾವಿಸೆ ನೀಂ ದೈತೇಯಂ ಶ್ರೀವರನಿಂದ್ರಾದಿಮುನಿಗಳಿಂ ವಿಶ್ರುತನ್ಯೆ (ಕಗ) ೨. ವಂಶನೆಂದು ನೀನೇತಱಿನಗ್ಗಮೆ (ಕಗ) ವಂಶನೆಂಬೆ ನೀನೇತಱಿನೊಳ್ಳಮ (ಖ)

ಬೂದಿಯೆ ವಿಭೂತಿಯಾದಂ
ತಾದೈ ನೀಂ ಪೂರ್ವದೇವನಾ [1]ನಾಮದೆ ಪೆಂ
ಪಾದಪುದೆ ನಿನಗೆ ವಸ್ತುಗು
ಣೋದಯವಿಲ್ಲದೊಡೆ ನಾಮಧಾರಕನಲ್ತೇ ೨೯

ಹರಿಗಂ ನಿನಗಂ ಹರಿಗಂ
ಹರಿಣಂಗಂ [2]ಹರಿಗಮುಡುಗಮಂತರವೆಂತಂ
ತಿರೆ ಹಸ್ತಿಮಶಕಪರ್ವತ
ಪರಮಾಣುಸಮುದ್ರಶೀಕರಾಂತರಮಲ್ತೇ ೩೦

ವ॥ [3]ಎಂದು ಚೇದಿರಾಜನಂ ನುಡಿಯೆ

ಪಂಚಮಹಾಶಬ್ದಂ ದಿ
ಕ್ಪಂಚಯಮಮಂ ತೀವೆ ಯಮಜನಾಜ್ಞೆಯಿನಿತ್ತಂ
ಕಾಂಚನಭಾಜನದಿಂ ನ
ಕ್ತಂಚರರಿಪುಗಗ್ರಪೂಜೆಯಂ ಸಹದೇವಂ ೩೧

ವ॥ ಅದಂ ಕಂಡು

ದಾರುಣಕೋಪವಹ್ನಿ ವಿಕಟಭ್ರುಕಟೀಕೃತ ಧೂಮಲೇಖೆ ದಂ
ಷ್ಟ್ರಾರುಚಿವಿಸ್ಫುಲಿಂಗನಿವಹಂ ರಸನಾಶಿಖಿ ದಳ್ಳಿಸಲ್ ಜಗ
ನ್ಮಾರಣಹೋಮಕುಂಡಮೆನೆ ತುಂಡ[4]ಗುಹಾಂತರವುರ್ಬಿಸಲ್ಕೆ ದು
ರ್ವಾರಕಠೋರವಾಕ್ಚಟಚಟತ್ಕೃತಮುತ್ಕಟಮಾಯ್ತು ಚೈದ್ಯನಾ ೩೨

೨೯. "ಬೂದಿಯೇ ವಿಭೂತಿಯೆನಿಸಿದಂತೆ ನೀನು ಪೂರ್ವದೇವನೆಂದು ಹೆಸರಿನಿಂದ ಮಾತ್ರ ಆಗಿರುವೆ, ಆದ ಮಾತ್ರಕ್ಕೆ ಹಿರಿಮೆಯು ನಿನಗೆ ಬರುವುದೆ? ಪೂರ್ವದೇವನೆಂಬುದರ ಅನ್ವರ್ಥ ವಸ್ತುಗುಣವಿಲ್ಲದಿರುವುದರಿಂದ ನೀನು ಅರ್ಥವಿಲ್ಲದ ನಾಮವನ್ನು ಧರಿಸಿರುವವನಲ್ಲವೆ ೩೦. "ಹರಿಗೂ (ಕೃಷ್ಣನಿಗೂ) ನಿನಗೂ, ಸಿಂಹಕ್ಕೂ ಜಿಂಕೆಗೂ, ಕುದುರೆಗೂ ಉಡುವಿಗೂ, ಆನೆಗೂ ಸೊಳ್ಳೆಗೂ, ಪರ್ವತಕ್ಕೂ ಪರಮಾಣುವಿಗೂ, ಸಮುದ್ರಕ್ಕೂ ನೀರಿನ ಒಂದು ಕಣಕ್ಕೂ, ಎಷ್ಟು ಅಂತರವಿದೆಯೋ ಅಷ್ಟೇ ಅಂತರವಿದೆ" ವ॥ ಎಂದು ಚೈದ್ಯನಿಗೆ ಹೇಳಿದನು. ೩೧. ಪಂಚಮಹಾವಾದ್ಯಗಳ ಶಬ್ದವು ದಿಕ್ಕುಗಳ ಕೊನೆಯನ್ನು ತುಂಬುತ್ತಿರುವಲ್ಲಿ ಸಹದೇವನು ಧರ್ಮರಾಜನು ಆಜ್ಞಾಪಿಸಿದಂತೆ ಚಿನ್ನದ ತಟ್ಟೆಯಿಂದ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದನು. ೩೨. ಆಗ ಭಯಂಕರವೂ ವಿಶಾಲವೂ ವಕ್ರವೂ ಆದ ಹುಬ್ಬುಗಂಟೆಂಬ ಹೊಗೆಯೂ ಕೋರೆ ಹಲ್ಲಿನ ಹೊಳಪುಗಳೆಂಬ ಕಿಡಿಗಳೂ, ನಾಲಿಗೆಯೆಂಬ ಉರಿಯೂ ದಳ್ಳಿಸುತ್ತಿರಲು, ಮಾರಣ ಹೋಮಕುಂಡದಂತಿರುವ, ಶಿಶುಪಾಲನ ಬಾಯೆಂಬ ಗುಹೆಯು ಹೊರಡಿಸುತ್ತಿರುವ ನಿವಾರಿಸಲು ಕಷ್ಟವೆನಿಸುವ

---

೧. ನಾಮದ (ಖ) ೨. ಹರಿಗಮುಡುಗಮೊರೆಯಿಡಲೆಂತಂತರ (ಗ) ೩. ಎಂದು ಧರ್ಮರಾಜಂ ಚೇದಿ ರಾಜನಂ (ಕಖಗ) ೪. ಗುಹಾಂತರವರ್ಬಿಸಲ್ಕೆ (ಕಗ)

ನಿಂದಿಸಿ ಧರ್ಮಜಪ್ರಮುಖರಂ ಮುಖರಂ ಮುಖರಂದ್ರ ಘೋಷನಿಂ
ತೆಂದನದಿರ್ಪುವೆಂ ಪ್ರಬಳನಂ ಬಳನಂ ಬಳನಂ ಬಳಾರಿ ಗೆ
ಲ್ದಂದದಿನಾ ಕೃತಾಂತಶರಣಂ ಶರಣಂ ಶರಣಂ [೧]ಮುರಾರಿಗಾ
ರಿಂದರಿವೆಂ ವಿರೋಧಿಗಳಮಂ ಗಳಮಂಗಳಮಂ ನೆಗಲ್ಚುವೆಂ ೩೩

ಭುವನಾಪಹಾಸ್ಯಮೆನಲ
ರ್ಣವದೊಳ್ ನೀಂ ಮತ್ಸ್ಯನಾಗಲಾನಂದು ಸಮು
ದ್ಭವಿಸಿದೆನಪ್ಪೊಡದಂ ಗಾ
ಣವಿಕ್ಕಿ ಪಿಡಿದೆನ್ನ ಬಾಣಸಕ್ಕೊಪ್ಪಿಸೆನೇ ೩೪

ನೀನಾದಿಕೂರ್ಮನಾದಂ
ದಾನಱಿದೊಡೆ ಪಿಡಿದು ತಂದದಂ ಮತ್ಕ್ರೀಡೋ
ದ್ಯಾನಸರೋವರಸಲಿಲ
ಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರೆನೇ ೩೫

ನೀಂ ಪೆಸರ ಪಂದಿಯಾದಂ
ದಾಂ ಪುಟ್ಟಿದೆನಪ್ಪೊಡಂದೆ ಬೇಂಟೆಯ ನೆವದಿಂ
ದಂ ಪಿಡಿದು ತಂದು ಪಂದಿಗ
ಲಂಪಿಂ ಸಂಬರಮನಱಿಯಿಸದೆ ಮಾಣ್ದಪೆನೇ ೩೬

ನಗೆಗೆಡೆಯಾಗಿರೆ ಸಿಂಗದ
ಮೊಗಮಂ ಧರಿಯಿಸಿ ನಿಶಾಟನಂ ನೀಂ ಕೊಂದೈ
ಪಗರಣಿಗರಲ್ಲದುಳಿದರ್
ಮೊಗಮಂ [೨]ಪೆಱತೊಂದನೆಂತುಮೇಂ ಧರಿಯಿಪರೇ ೩೭

ಮಾತುಗಳೆಂಬ ಚಟಚ್ ಚಟಚ್ಚಾರವು ಉತ್ಕಟವಾಯಿತು. ೩೩. ವಾಚಾಳನಾದ ಅವನು ಧರ್ಮರಾಜನೇ ಮೊದಲಾದ ಪ್ರಮುಖರನ್ನು ನಿಂದಿಸಿ, ಕೂಗುತ್ತ- "ಬಲಾಸುರನನ್ನು ಇಂದ್ರನು ಗೆದ್ದಂತೆ ನಾನು ಪ್ರಬಲನಾದ ಬಲರಾಮನನ್ನು ನಡುಗಿಸುವೆನು. ಕೃಷ್ಣನಿಗೆ ಯಮನ ಮನೆಯೇ ಗತಿ, ಅವನಿಗೆ ಬೇರಾರು ರಕ್ಷಕರೆಂಬುದನ್ನು ಇಂದು ತಿಳಿಯುತ್ತೇನೆ. ಆ ವಿರೋಧಿಯ ಕತ್ತನ್ನೂ ಕತ್ತರಿಸುತ್ತೇನೆ. ವಿರೋಧಿಗಳ ಕತ್ತುಗಳನ್ನು ಬಿದಿರುಗಳವನ್ನಾಗಿಸು ವೆನು!" ಎಂದನು ೩೪. "ಪ್ರಪಂಚಕ್ಕೇ ಅಪಹಾಸ್ಯವೆನ್ನುವಂತೆ ನೀನು ಸಮುದ್ರದಲ್ಲಿ ಮೀನಾಗಿದ್ದೆಯಷ್ಟೆ ಕೃಷ್ಣಾ! ಆಗ ನಾನು ಹುಟ್ಟಿದ್ದೆನಾದರೆ ಆ ಮೀನನ್ನು ಗಾಳವನ್ನು ಹಾಕಿ ಹಿಡಿದು, ನನ್ನ ಅಡಿಗೆಯ ಮನೆಗೆ ಒಪ್ಪಿಸುತ್ತಿರಲಿಲ್ಲವೆ! ೩೫. "ನೀನು ಆದಿಕೂರ್ಮನಾದಾಗ ನಾನು ತಿಳಿದಿದ್ದರೆ ಅದನ್ನು ಹಿಡಿದುತಂದು, ನನ್ನ ಕ್ರೀಡೋದ್ಯಾನದ ಸರೋವರದ ನೀರಿನಲ್ಲಿ ಬಿಟ್ಟು ವಿನೋದಪಡಲು ತೊಡಗುತ್ತಿರಲಿಲ್ಲವೆ? ೩೬. "ನೀನು ಹೆಸರು ಪಡೆದ ಹಂದಿಯಾದಾಗ ನಾನು ಹುಟ್ಟಿದ್ದೆನಾದರೆ, ಆಗಲೇ ಬೇಟೆಯ ನೆವದಿಂದ ಆ ಹಂದಿಯನ್ನು ಹಿಡಿದು ತಂದು, ಸಂಬಾರವನ್ನು ಅರೆಯಿಸದೇ ಬಿಡುತ್ತಿದ್ದೆನೇ ೩೭. "ಹಾಸ್ಯಾಸ್ಪದವಾದ ಸಿಂಹಮುಖವನ್ನು ಧರಿಸಿ, ಹಿರಣ್ಯಕಶಿಪುವನ್ನು ಕೊಂದೆ. ಹಗರಣಿಗರಲ್ಲದೆ ಉಳಿದವರು

೧. ಮುರಾರಿಗಾನಿಂದರಿವೆಂ (ಕಗ) ೨. ಪೆಱತೊಂದನೆಂದುಮೇಂ (ಗ)

ಭೂಚಕ್ರದಾನಮಂ ವೈ
ರೋಚನನೊಳ್ ಬೇಡುವಂದು ನಿನ್ನೊಳ್ ತನುಸಂ
ಕೋಚಂ ಸಮನಿಸಿತುಚಿತಂ
ಯಾಚನೆಯೊಳ್ ನೆಗಬಿದಾರ್ಗೆ ತನುಸಂಕೋಚಂ ೩೮

ದ್ವಿಜನೇಗೆಯ್ದುಮವಧ್ಯಂ
ತ್ರಿ[1]ಜಗದೊಳಂ ನೆಗಬ್ದ ಜಾಮದಗ್ನ್ಯಾಕೃತಿಯಿಂ
ವಿಜಿಗೀಷು[2]ನೃಪರನಿಕ್ಕಿದೆ
ಭುಜಬಲಮೇಂ ಜಾತಿಬಲಮೆ ಮೆಚ್ಚುವರದನಾರ್ ೩೯

ಪಾಣ್ಬನೆಳೆದುಯ್ಯೆ ನಿನ್ನ ಕು
ಟುಂಬಿನಿಯ ಕಾದೆಯಿಲ್ಲ ರಾಮಾಕೃತಿಯಿಂ
ನೀಂ ಬಟಿಕ [3]ವಾಯುಪುತ್ರಕ
ನಿಂಬಜಿತೆಯ್ದಲ್ಕೆ ಪಗೆಯನಿಕ್ಕುವುದರಿದೇ ೪೦

ಕೋಗಿಲೆ [4]ಕಾಗೆ ಮುಂ ಪೊರೆದ ಕಾರಣದಿಂ ಪರಪುಟ್ಟನಾದವೋ
ಲಾಗದ ಜಾತಿ ಗೋವಳಿತಿ ರಕ್ಷಿಸೆ ನೀಂ ಪರ[5]ಪುಟ್ಟನಾದೆ ನೋ
ಡೀಗಳಿದರ್ಕೆ ನಿನ್ನ ತನುಕಾರ್ಷ್ಣ್ಯಮೇ ಸೂಚಕಮಲ್ಲವೇ ಮಹಾ
ಯಾಗದೊಳಗ್ರಪೂಜೆಗೆ ವಿಜಾತಿ [6]ಕರಾಗ್ರಮನೆಂತು ನೀಡುವೈ ೪೧

ಯಾರಾದರೂ ಹೀಗೆ ಬೇರೊಂದು ಮುಖವನ್ನು ಧರಿಸುವರೆ?! ೩೮. "ನೀನು ಬಲಿಚಕ್ರವರ್ತಿಯಲ್ಲಿ ಭೂಮಂಡಲ ದಾನವನ್ನು ಬೇಡುವಾಗ ದೇಹವನ್ನು ಕುಗ್ಗಿಸಿ, ಕುಳ್ಳನಾದೆ. ಅದು ಉಚಿತವಾದುದು. ಯಾಚನೆ ಮಾಡುವಾಗ ಯಾರಿಗೆ ತಾನೆ ದೇಹವು ಸಂಕುಚಿತವಾಗದಿರುವುದು! ೩೯. "ಬ್ರಾಹ್ಮಣನು ಏನು ತಪ್ಪನ್ನು ಮಾಡಿದರೂ ಮೂರು ಲೋಕದಲ್ಲೂ ಅವಧ್ಯನು. ಆದ್ದರಿಂದ ಪರಶುರಾಮಾಕೃತಿಯಿಂದ ತ್ರಿಲೋಕ ಪ್ರಸಿದ್ಧನಾಗಿ ಜಯಿಸಲಿಚ್ಛೆಯುಳ್ಳ ರಾಜರನ್ನು ಕೊಂದು ಹಾಕಿದೆ. ಜಾತಿಬಲವೇ ಭುಜಬಲವೇನು ಅದನ್ನು ಯಾರು ಮೆಚ್ಚುವರು?! ೪೦. "ನೀನು ರಾಮಾಕೃತಿಯನ್ನು ಧರಿಸಿದಾಗ ನಿನ್ನ ಪತ್ನಿಯನ್ನು ಜಾರ ರಾವಣನು ಎಳೆದುಕೊಂಡು ಹೋದರೂ ನೀನು ಅವಳನ್ನು ರಕ್ಷಿಸಲಾರದೆಹೋದೆ. ಆಮೇಲೆ ವಾಯುಪುತ್ರ ಹನುಮಂತನ ಆಶ್ರಯವನ್ನು ಪಡೆದು (ಲಂಕೆಗೆ) ಹೋಗಿ ಅವನನ್ನು ಕೊಲ್ಲುವುದು ದೊಡ್ಡ ಕೆಲಸವೆ? ೪೧. "ಕೋಗಿಲೆಯನ್ನು ಮೊದಲು ಕಾಗೆಯು ಕಾಪಾಡಿದುದರಿಂದ ಕೋಗಿಲೆ ಪರಪುಷ್ಟನಾದಂತೆ, ಆಗದ ಜಾತಿಯ ಗೊಲ್ಲಿತಿಯು ನಿನ್ನನ್ನು ರಕ್ಷಿಸಿದುದರಿಂದ ನೀನೂ ಪರಪುಷ್ಟನಾದೆ. ಅದಕ್ಕೆ ಈಗ ನಿನ್ನ ಮೈಕಪ್ಪೇ ಸೂಚಕವಲ್ಲವೆ? ನೋಡು. ಹೀಗಿರುವಲ್ಲಿ ವಿಜಾತೀಯನಾದ ನೀನು ಮಹಾಯಾಗದಲ್ಲಿ ಅಗ್ರಪೂಜೆಗೆ

೧. ಜಗದೊಳೇಂ (ಕಗ) ೨. ನೃಪರನಿಕ್ಕಿದೆ ಭುಜಬಲಮೇ ಜಾತಿಬಲರದಂ ಮೆಚ್ಚುವರೇ (ಕಗ) ೩. ವಾಯುಪುತ್ರಕನಿಂಬರಿಕೆಯಲ್ಕೆ (ಕಗ) ಪಾಯ್ದುತತ್ಪಲನಂಬರಿತೈದಲ್ಕೆ (ಖ) ೪. ಕಾಗೆಯಿಂ (ಕಖ) ೫. ಪುಟ್ಟನಾದೆಯಂತೀಗಳದರ್ಕೆ (ಖ) ೬. ಕರಾಗ್ರಮನೇಕೆ (ಕಗ)

ಸಾಸಿಗನೈ ಹರಿ ನೀಂ ಪೆ
ಣ್ಣೂಸಂ ವಧಿಯಿಸಿದೆ ಪಶುವನಟಿದೈ ಮತ್ತಾ
ದೋಸಕ್ಕೆ ಹೇಸದೀಗ ಮ
ಹಾಸಭೆಯೊಳಗಗ್ರಪೂಜೆಗಗ್ರಣಿಯಾದೈ ೪೨

ಅದಟಲೆದದೊಂದು ಬಂಡಿಯ
ನೊದೆದೈ ಬೇರ್ಕೊಳದ ಮತ್ತಿಯಂ ನೀಂ ಕಿಟ್ಟೆ
ಕುದುರೆಯನೋವದೆ ಸೀಳ್ದೈ
ಮುದುಗಟ್ಟೆಯನಿಟ್ಟು ಕೆಡಪಿದೈ ಬಲ್ಲಿದನೈ ೪೩

ಪಾವಂ ಪಿಡಿದನಿತಱೊಳೇಂ
ಪಾವಡಿಗರ್ ಸುಭಟರಪ್ಪರೇ ಜಗುನೆಯ ನೀ
ರ್ಪಾವಂ ಪಿಡಿದನಿತಱೊಳು
ರ್ವೀವಳಯಂ ಸುಭಟನೆನ್ನುಗುಮೇ ಹರಿ ನಿನ್ನಂ ೪೪

ಏಱುವವೊಲ್ ಪುತ್ತಂ ನೀ
ನೇಱೆ ಜರಾಸಂಧಭಯದೆ ಗಿರಿದುರ್ಗಮನಾ
ತೂಱಲತುದಿಯೊಳ್ ಕೇದಗೆ
ಯೇಱೆದ ಕೋಡಗದೊಲಿರ್ದ ತೆಱನಂ ಮಱೆದೈ ೪೫

ಕಾಲಯವನಂಗೆ ಗರುಡನ
ಗಾಳಿಯ ಜವದಿಂದಮೋಡಿ ಜಂಘಾಬಲಮಂ
ತ್ರೈಲೋಕ್ಯವಱಿಯೆ ತೋಱಿದೆ
ಕಾಳಗದೊಳ್ ತೋಱಲಾರ್ಪ ಬಾಹಾಬಲಮಂ ೪೬

ತುದಿಗೈಯನ್ನು ಹೇಗೆ ನೀಡಿದೆ?! ೪೨. "ಹರೀ! ನೀನು ಸಾಹಸಿಗನು. ಹೆಣ್ಣು ಕೂಸನ್ನು (ಪೂತನಿಯನ್ನು) ಕೊಂದೆ. ಪಶುವನ್ನು (ವೃಷಭಾಸುರನನ್ನು) ಸಂಹರಿಸಿದೆ. ಆ ಪಾಪಕ್ಕೂ ಅಂಜದೆ ಈಗ ಮಹಾಸಭೆಯಲ್ಲಿ ಅಗ್ರಪೂಜೆಗೆ ಅಗ್ರೇಸರನಾದೆ! ೪೩. ಹಳೆಯದಾದ ಒಂದು ಬಂಡಿಯನ್ನು ಪರಾಕ್ರಮದಿಂದ ಒದೆದೆ. ಬೇರು ಬೆಳೆಯದ ಒಂದು ಮತ್ತಿಯ ಗಿಡವನ್ನು ಕಿತ್ತೆ, ಕರುಣೆಯಿಲ್ಲದೆ ಕುದುರೆ (ಕೇಶಿ)ಯನ್ನು ಸೀಳಿದೆ. ಮುದಿಕತ್ತೆ (ಖರ)ಯನ್ನು ಎಸೆದು ಕೆಡವಿದೆ! ಬಲಿಷ್ಠನಯ್ಯಾ ನೀನು! ೪೪. "ಹಾವನ್ನು ಹಿಡಿದ ಮಾತ್ರದಿಂದಲೇ ಹಾವಾಡಿಗರು ಸುಭಟರಾಗುವರೆ? ಯಮುನಾನದಿಯ ನೀರು ಹಾವನ್ನು ಹಿಡಿದಷ್ಟ ರಿಂದಲೇ ಭೂಮಂಡಲವು ನಿನ್ನನ್ನು ಸುಭಟ ಎನ್ನುವುದೆ? ೪೫. "ಯುದ್ಧದಲ್ಲಿ ಭೀತರಾದವರು ಹುತ್ತವನ್ನೇರುವಂತೆ ನೀನು ಜರಾಸಂಧನ ಭಯದಿಂದ ಗಿರಿದುರ್ಗವನ್ನೇರಿ, ಅದರ ತುತ್ತ ತುದಿಯಲ್ಲಿದ್ದು ಕೇದಗೆ ಮೆಳೆಯನ್ನೇರಿದ ಕೋಡಗದಂತಾದೆ! ೪೬. ನೀನು ಕಾಲಯವನನಿಗೆ ಕಾಳಗದಲ್ಲಿ ತೋರಿಸಬೇಕಾಗಿದ್ದ ತೋಳಿನ ಬಲವನ್ನು ತೋರಿಸಲಾರದೆ, ಗರುಡ ವಾಯುಗಳಂತೆ ವೇಗದಿಂದ ಓಡಿ ಹೋಗಿ, ಮೂರು ಲೋಕವೂ ತಿಳಿಯುವಂತೆ ನಿನ್ನ ಜಂಘಾಬಲವನ್ನು ತೋರಿಸಿದೆ!"

ವ|| ಎಂದು ವಜ್ರಘೋಷಣನಿಷ್ಠುರಭೀಷಣಘೋಷದಿಂ ಚೇದಿನಾಥಂ ಜಗನ್ನಾಥನಂ ನಿರ್ದಾಟಿಸಿ ನುಡಿಯೆಯುಮಾ ಸಮಯದೊಳ್

ಸಮರಸ್ಥಾನವಿದಲ್ತು ಪಲ್ಲಣಿಸುವೀ ವಾಜಿವ್ರಜಂ ಪಣ್ಣುವೀ
ಸಮದೇಭಾವಳಿ ಪೂಡುವೀ ರಥಸಮೂಹಂ ಕೈದುಗೊಳ್ವೀ ಪದಾ
ತಮಿದೇಂ ಯಾದವಚೈದ್ಯಸೈನ್ಯಯುಗದೊಳ್ ಬೇಡೆಂದು [1]ಭೀಮಾರ್ಜುನ
ಪ್ರಮುಖರ್ ಮಾಣಿಸೆ ಸೈನ್ಯಮಿರ್ದುದುಭಯಂ ನಿರ್ವಾತವಾರಾಶಿವೋಲ್ ೪೭

ವ|| ಆಗಳ್

ದಶನಾಂಶುಜಾಲತತಿಯಿಂ
ಶಿಶುಪಾಲನ ಜೀವಪವನನಂ ತೆಗೆವಂತ
ಬ್ಧಿಶಯಂ ಸಕೋಪ [2]ಹಸಿತಾ
ಸ್ಯಶತಚ್ಛದನಾಗಿ ದಾಸವಂಗಿಂತೆಂದಂ ೪೮

[3]ಎನಗೆ ನಿಜಜನನಿ ಕೈಮುಗಿ
ದು ನೂಱುಸೂಳ್ವರಮುಪೇಂದ್ರ ಶಿಶುಪಾಲನ ಪೊ
ಲ್ಲನುಡಿಗೆ ಸೈರಿಪುದೆನಲಂ
ದಿನ ಮಾತಂ ಸಲಿಸಲಿನ್ನೆಗಂ ಸೈರಿಸಿದೆಂ ೪೯

ವ|| ಎಂದು ಸಿಡಿಲಿನ ಧ್ವನಿಯಂತೆ ಕಠೋರವೂ ಭಯಂಕರವೂ ಆದ ಕೂಗಿನಿಂದ ಶಿಶುಪಾಲನು ಕೃಷ್ಣನನ್ನು ಹಂಗಿಸಿ ಮಾತನಾಡುತ್ತಲು- ಆ ಸಮಯದಲ್ಲಿ ೪೭. "ಇದು ಯುದ್ಧಭೂಮಿಯಲ್ಲ. ಯದುಸೈನ್ಯ ಶಿಶುಪಾಲ ಸೈನ್ಯಗಳಲ್ಲಿ ಜೀನು ಹಾಕಿ ಕುದುರೆಗಳೂ ಸಿದ್ಧಪಡಿಸುವ ಆನೆಗಳೂ ಹೂಡುವ ರಥಗಳೂ ಆಯುಧವನ್ನು ಧರಿಸುವ ಕಾಲಾಳುಗಳೂ ಬೇಡ." ಎಂದು ಭೀಮಾರ್ಜುನರೇ ಮೊದಲಾದ ಪ್ರಮುಖರು ಹೇಳಿ, ತಪ್ಪಿಸಿದುದರಿಂದ ಎರಡು ಕಡೆಯ ಸೈನ್ಯವೂ ಗಾಳಿ ಬೀಸದ ಸಮುದ್ರದಂತೆ ಶಾಂತವಾಗಿದ್ದಿತು. ವ|| ಆಗ ೪೮. ಕೋಪಗೊಂಡ ಕೃಷ್ಣನು ನಗುತ್ತ ಕಮಲದಂತಿರುವ ಮುಖದಿಂದ ಶಿಶುಪಾಲನ ಪ್ರಾಣವಾಯುವನ್ನು ತೆಗೆಯುವ ಬಲೆಯಂತೆ ಹಲ್ಲುಗಳ ಕಾಂತಿಯನ್ನು ಬೀರುತ್ತ ಆ ಶಿಶುಪಾಲನಿಗೆ ಹೇಳಿದನು. ೪೯. "ನಿನ್ನ ತಾಯಿ ನನಗೆ ಕೈ ಮುಗಿದು, 'ಕೃಷ್ಣಾ, ಶಿಶುಪಾಲನ ಕೆಟ್ಟ ಮಾತುಗಳನ್ನು ನೂರು ಬಾರಿಗೂ ನೀನು ಸೈರಿಸಬೇಕೆಂದು' ಕೇಳಿಕೊಂಡಳು. ಅಂದಿನ ಆಕೆಯ ಮಾತನ್ನು ಸಲ್ಲಿಸುವುದಕ್ಕಾಗಿ ಇದುವರೆಗೂ ಸೈರಿಸಿದೆನು. ೫೦. ನೂರು ಬೈಗುಳಗಳು

---

೧. ಭೀಷ್ಮಾರ್ಜುನ (ಕಗ) ೨. ಹಸಿತಾಸ್ಯಶರಚ್ಛದನಾಗಿ (ಕಗ) ಹಸಿತಾಭ್ಯಸಿತಚ್ಛದನಾಗಿ (ಖ) ೩. ದನುಜ (ಖ)

ತೀವಿದುದು ಶಪನಶತಮಿಂ
ತೀವಿದುದದಱೊಡನೆ ಚೈದ್ಯ ನಿನ್ನಾಯುಷ್ಯಂ
ತೀವುಗುಮೀಗಳೆ ನಿನ್ನ ವ
ಧೂವರ್ಗದ ರೋದನಸ್ವನಂ ದಿಕ್ತಟದೊಳ್ ೫೦

ಮೊದಲೊಳ್ [1]ನಮ್ಮಿರ್ವಲಂ ಕಾದುವೊಡೆ ತಡೆವುದೇಕನ್ನೆಗಂ ದ್ವಂದ್ವಸಂಗ್ರಾ
ಮದ ಕಾಲಕ್ಷೇಪಮುಂ ದುಸ್ಸಹಮೆನಗೆ ಜಯೋತ್ಕಂಠೆ ಕೈಮೀಱಿದತ್ತೆ
ನ್ನಿದಿರೊಳ್ ಱೋಡಾಡಿದೀ ನಾಲಗೆಯುಡುಗದ ಮುನ್ನಂ ಭವನ್ಮಸ್ತಕಚ್ಛೇ
ದದಗುರ್ವಂ [2]ತೋರ್ಪೆನೆಂದರ್ಘ್ಯದ ತಳಿಗೆಗೆ ಕೈನೀಡಿದಂ ಕಂಜನಾಭಂ ೫೧

ಖರರೋಚಿರ್ಮಂಡಲಂ [3]ಬೇಱಿದೆ ಗಗನತಳಂ ಭಾಸ್ಕರಾಭಾಸಮೆಂಬಂ
ತಿರೆ ಕ್ರೂರ್ಯಂ ತೋರ್ಪ [4]ಚಕ್ರಂ ದ್ಯುತಿಬಳಿತ ದಿಕ್ಚಕ್ರಮುನ್ಮೂಲಿತೋಗ್ರಾ
ಸುರಚಕ್ರಂ ದೇವಕೀನಂದನನ ಕರಸರೋಜಾತದೊಳ್ ರಾಜಸೂಯಾ
ಧ್ವರ ಪೂಜಾಭಾಜನವ್ಯಾಜದೆ ನೆಲಸಿದುದಂತರ್ನಿಗೂಢಪ್ರಭಾವಂ ೫೨

ನೀಂ ಬಯಸಿದಗ್ರಪೂಜೆಯ
ಪೊಂಬರಿಯಣಮಿದೆ ನಿಶಾಟ ಕೊಳ್ಳೆಂದು ಸರೋ
ಜಾಂಬಕನಿಡೆ ಶಿಶುಪಾಲಶಿ
ರಂಬೆರಸಂಬರತಳಕ್ಕೆ ನೆಗುದದಮತ್ರಂ ೫೩

ತೀರಿದವು. ಇನ್ನು ನಿನ್ನ ಆಯುಷ್ಯವೂ ಅದರೊಡನೆ ತೀರಿತು. ಚೈದ್ಯಾ, ಈಗ ನಿನ್ನ ಪತ್ನಿಯರ ರೋದನ ಧ್ವನಿಯು, ಪಾಪ! ದಿಕ್ಕುಗಳ ದಡದಲ್ಲಿ ತುಂಬುವುದು! ೫೧. ಮೊದಲು ನಮ್ಮಿಬ್ಬರ ಸೈನ್ಯವು ಕಾದಲಿ ಎಂದು ತಡಮಾಡುವುದು ಬೇಡ. ಅಲ್ಲಿಯವರೆಗೆ ನಾವಿಬ್ಬರು ದ್ವಂದ್ವಯುದ್ಧವನ್ನು ಮಾಡುವುದರಿಂದ ಕಾಲಕಳೆಯುವುದೂ ಬೇಡ, ಕಾಲಕ್ಷೇಪವು ನನಗೆ ದುಸ್ಸಹವಾಗಿದೆ. ಜಯೋತ್ಸಾಹವು ಅತಿಯಾಯಿತು. ನನ್ನೆದುರಿಗೇ ಹೀಯ್ಯಾಳಿಸಿ, ಅಪಹಾಸ ಮಾಡಿದ ನಿನ್ನ ನಾಲಗೆಯು ೫೧. ಮುದುರಿಕೊಳ್ಳುವುದಕ್ಕಿಂತ ಮುಂಚೆಯೇ ನಿನ್ನ ತಲೆಯನ್ನು ಛೇದಿಸುವ ಭಯಂಕರತೆಯನ್ನು ತೋರಿಸುತ್ತೇನೆ". ಎಂದು, ಕೃಷ್ಣನು ಅರ್ಘ್ಯದ ತಟ್ಟೆಗೆ ಕೈ ನೀಡಿದನು. ೫೨. 'ತೀಕ್ಷ್ಣವಾದ ಸೂರ್ಯನ ಕಾಂತಿ ಮಂಡಲವೇ ಬೇರೆ. ಈ ಆಕಾಶದಲ್ಲಿರುವುದು ಸೂರ್ಯನಂತಿರುವ ಇನ್ನೊಂದು ವಸ್ತು!' ಎನ್ನುವಂತೆ ಕ್ರೌರ್ಯವನ್ನು ತೋರಿಸುವ ಕೃಷ್ಣನ ಚಕ್ರಾಯುಧವು ತನ್ನ ಕಾಂತಿಯಿಂದ ದಿಙ್ಮಂಡಲವನ್ನು ಕಬಳಿಸಿ ಬೇರುಸಹಿತವಾಗಿ ಕಿತ್ತೆಸೆದ ಉಗ್ರರಾಕ್ಷಸರ ಸಮೂಹವುಳ್ಳುದೂ ಆಗಿ ರಾಜಸೂಯ ಯಾಗದ ಪೂಜೆಯ ತಟ್ಟೆಯ ರೂಪದಿಂದ ಅಂತರ್ನಿಗೂಢ ಪ್ರಭಾವವುಳ್ಳುದಾಗಿ ಬಂದು, ದೇವಕೀನಂದನನ ಕರ ಸರೋಜದಲ್ಲಿ ನೆಲಸಿತು. ೫೩. ಕೃಷ್ಣನು- "ರಾಕ್ಷಸಾ! ನೀನು ಬಯಸಿದ ಅಗ್ರಪೂಜೆಯ ಹೊನ್ನಿನ ಹರಿವಾಣವು ಇದೇ ಅಲ್ಲವೆ! ತೆಗೆದುಕೋ". ಎಂದು (ಅದರಿಂದ) ಹೊಡೆದನು. ಆ ತಟ್ಟೆಯು ಶಿಶುಪಾಲನ ತಲೆಯನ್ನು ಕತ್ತರಿಸಿ ಧರಿಸಿ ಆಕಾಶಕ್ಕೆ

---

೧. ನಮ್ಮೀ ಬಲಂ (ಖ) ೨. ತೋರ್ಪೆನೆಂದಗ್ರದ (ಖ) ೩. ಬೇಱಿರೆ ಗಗನಗತಂಭಾಸುರಾಭಾಸ (ಖ) ೪. ಚಕ್ರದ್ಯುತಿಕಬಳಿತ (ಕಗ) ಚಕ್ರದ್ಯುತಿ ಪಸರಿಸೆ (ಖ)

ಮಕುಡಮಣಿ ಸೊಡರ್ಗಳೆನೆ ಮ
ಸ್ತಕಸಹಿತಮೆ ನೆಗೆದು ತಿರುಗುವಾ ಪರಿಯಣಮೇಂ
ಪ್ರಕಟಿಸಿದುದೊ ಕೃಷ್ಣನ ವಿಜ
ಯಕಾಂತೆಗಾಕಾಶಲಕ್ಷ್ಮಿ ನಿವಳಿಪ [೧]ತೆಱಮಂ ೫೪

ಶಿರವಾಕಾಶತಳಕ್ಕೆ ಪಾಜೆ ಗಳರಂಧ್ರೋದ್ದೇಶದಿಂ ಪಾಯ್ವನಿ
ರ್ಭರರಕ್ತೋನ್ಮುಖಧಾರೆ ವಾರಿಜಭವಾಂಡಕ್ಕೆಯ್ದಿ ತದ್ಬ್ರಹ್ಮವಿ
ಷ್ಟರಪದ್ಮಾರುಣನಾಳದಂಡಮೆನಿಸಿತ್ತಿತ್ತಟ್ಟೆ ಘೋಳಿಟ್ಟುಮು
ರ್ವರೆಯೊಳ್ ತೊಟ್ಟನೆ ಬೆಟ್ಟುಬೀಟ್ಟ ತೆಱದಿಂ ಬಿಟ್ಟಿತ್ತು ಚೇದೀಶನಾ ೫೫

ಬೆಂಬಲವಪ್ಪೆವಮ್ಮ ಶಿಶುಪಾಲಮಹೀಪತಿಗೆಂದು ಚಾತುರಂ
ಗಂ[೨]ಬೆರಸಣ್ಮೆನೊಳ್ಪೆಸೆವಿನಂ ಕಡುಬಿಂಕದೆ ವೇಣುಧಾರಿ ಸಾ
ಲ್ವಂ ಬಲಿಸೂನು ರುಕ್ಮಿ ರಣರಾಗದೆ ಬಿಲ್ವಿಡಿದೆರ್ದು ಕಂಡು [೩]ಬಿ
ಲ್ಲುಂ ಬೆಱಗಾದರೊರ್ಮೊದಲೆ ಪಾಱುವುದುಂ ಶಿಶುಪಾಲಮಸ್ತಕಂ ೫೬

ಕ್ರತುಪೂಜಾಮಣಿಪಾತ್ರದಿಂ ರಿಪುಶಿರೋವಿಚ್ಛೇದನಂಗೆಯ್ದನ
ಚ್ಯುತನಿಂ ಕೈದುಗೊಳಲ್ಕೆ ಜೀವಿಸುವನಾವಂ ಯಃಪಲಾಯಃಸಜೀ
ವತಿಯೆಂದೋಡುವ ತನ್ನ ಮೆಯ್ದುನನೆನಿಪ್ಪಾ ರುಕ್ಮಿಗಂ ಕ್ಷೇಮಧಾ
ವತಿಗಳ್ಗಂ ಶ್ರುತಿಪೂರಮಾಯ್ತು ಜಯಭೇರಿನಾದವಾ ಕೃಷ್ಣನಾ ೫೭

ಹಾರಿತು. ೫೪. ಶಿಶುಪಾಲನ ತಲೆಯ ಮೇಲಿದ್ದ ಕಿರೀಟದ ರತ್ನಗಳು ದೀಪಗಳಂತಿದ್ದು ಅದರೊಡನೆಯೇ ಆಕಾಶದಲ್ಲಿ ತಿರುಗುತ್ತಿರುವ ಆ ಹರಿವಾಣವು ಕೃಷ್ಣನ ವಿಜಯಕಾಂತೆಗೆ ಆಕಾಶಲಕ್ಷ್ಮಿಯು ನಿವಾಳಿಸುವ ಆರತಿಯಂತೆ ಎಷ್ಟು ಚೆನ್ನಾಗಿ ಹೊಳೆಯಿತೊ! ೫೫. ಶಿಶುಪಾಲನ ತಲೆಯು ಆಕಾಶಕ್ಕೆ ಹಾರುತ್ತಿರುವಲ್ಲಿ ಅವನ ಮುಂಡದ ಕತ್ತಿನ ರಂಧ್ರದಿಂದ ವೇಗವಾಗಿ ಮೇಲಕ್ಕೆ ಉಕ್ಕಿದ ರಕ್ತಧಾರೆಯು ಬ್ರಹ್ಮಾಂಡವನ್ನು ಮುಟ್ಟಿ, ಆ ಬ್ರಹ್ಮನ ಪೀಠ ಕಮಲದ ಕೆಂಪುನಾಳದಂತೆ ಕಾಣಿಸಿತು! ಬಳಿಕ ಮುಂಡವು ಘೋಳಿಟ್ಟು ಬೆಟ್ಟವು ಉರುಳುವಂತೆ ತಟ್ಟನೆ ಉರುಳಿ ಬಿದ್ದಿತು. ೫೬. ನಮ್ಮ ಶಿಶುಪಾಲರಾಜನಿಗೆ ಬೆಂಬಲವಾಗುತ್ತೇವೆ ಎಂದು ಚತುರಂಗಸೈನ್ಯದೊಡನೆ ಪರಾಕ್ರಮದಿಂದ ಉತ್ಸಾಹ ಗೊಂಡಿದ್ದವರಲ್ಲಿ ಹೆಚ್ಚು ಬಿಂಕದ ಕೊಳಲೂದುವ ಸಾಲ್ವರಾಜನೂ ಬಲಿಚಕ್ರವರ್ತಿಯ ಮಗನಾದ ಬಾಣಾಸುರನೂ ರುಕ್ಮಿಯೂ ಯುದ್ಧಾಸಕ್ತರಾಗಿ ಬಿಲ್ಲನ್ನು ಹಿಡಿದು ಎದ್ದು ನಿಂತಿದ್ದರು. ಶಿಶುಪಾಲನ ತಲೆಯು ಮೊದಲೇ ತಟ್ಟನೆ ಹಾರಿದುದನ್ನು ಕಂಡು, ಆಶ್ಚರ್ಯದಿಂದ ಗಾಬರಿಗೊಂಡರು. ೫೭. ಕೃಷ್ಣನು ಯಜ್ಞಪೂಜೆಯ ರತ್ನಪಾತ್ರೆಯಿಂದಲೇ ಶತ್ರುವಿನ ಶಿರಚ್ಛೇದವನ್ನು ಮಾಡಿದನು. ಇನ್ನು ಅವನು ಆಯುಧವನ್ನು ಧರಿಸಿದರೆ ಜೀವಿಸುವವನಾರು?! ಯಾವನು ಪಲಾಯನ ಮಾಡುತ್ತಾನೊ ಅವನು ಜೀವಿಸುತ್ತಾನೆ" ಎಂದು ಓಡಿ ಹೋಗುವ, ಕೃಷ್ಣನ ಮೈದುನನಾದ ರುಕ್ಮಿಗೂ ತಮ್ಮ ಕ್ಷೇಮಕ್ಕಾಗಿ ಓಡುವ

---

೧. ತೆಱದಿಂ (ಕಖಗ) ೨. ಬೆರಸಣ್ಮೆನೇರ್ಪೆಸೆವಿನಂ (ಕಗ) ೩. ಕಂಡು ಬಿಲ್ಲುಂಬೆರಗಾದ ದೊರ್ಮೊದಲೆ (ಕ) ಕಂಡುಬಿಲ್ಲುಂಬೆರಗಾದುದೊರ್ಮೊದಲೆ (ಗ) ಬಲ್ಪುಪಿಂಗಲ್ಬೆರಗಾದುದೊರ್ಮೊದಲೆ (ಖ)

ಧರೆಗಮರಾಧ್ವದಿಂ ಕೆಡೆವ ಚೈದ್ಯನ ಮೂರ್ಧದ ರತ್ನಭಾಃ ಪರಂ
ಪರೆ ಕುಡುಮಿಂಚಿನಂತೆಸೆಯೆ ನಾರದನೃತ್ಯಮೆ ಕೇಕಿನೃತ್ಯಮಾ
ಗಿರೆ ಜಯದುಂದುಭಿಧ್ವನಿ ಘನಧ್ವನಿಯಂ ಗೆಲೆ ಪುಷ್ಪವೃಷ್ಟಿಯಂ
ಸುರಿದುದು ಧರ್ಮಜಂ [೧]ಪುಳಕದಿಂ ಕಡವುಳ್ಳಲರ್ದಂತಿರಿರ್ಪಿನಂ ೫೮

ವ॥ ಆ ಮಹಾವಿಜಯೋತ್ಸವದೊಳಾ ಯಮತನೂಜಂ ಸಮಯೋಚಿತ ವಾಕ್ಯಪೂಜೆಯೊಳಂ ದಿವ್ಯಾಂಬರಾಭರಣಪೂಜೆಯೊಳಂ ರಾಜೀವನೇತ್ರನಂ ಪೂಜಿಸಿ ಗೀತವಾದ್ಯಾದಿ ಮಂಗಳಾಚಾರಮಂ [೨]ನೆಗಟುತ್ತುಂ ಮತ್ತಂ

ಶೌರಿ ಭವತ್ಪ್ರಸಾದಲವದಿಂದೆ ಮುಮುಕ್ಷುಗೆ ಮೋಕ್ಷಲಕ್ಷ್ಮಿ ಸಂ
ಸಾರಿಗೆ ರಾಜ್ಯಲಕ್ಷ್ಮಿ ದೊರೆಕೊಳ್ವುದೆನಲ್ ನಿನಗಾವ ವಸ್ತುವುಂ
ತೀರದುದಿಲ್ಲವಾದೊಡಮಿವಂ ಜನರಂಜನೆಗಿತ್ತೆನೆಂದು ದೈ
ತ್ಯಾರಿಗೆ ಕೊಟ್ಟನುತ್ತಮ ಗಜಾಶ್ವರಥಾದಿಪದಾರ್ಥಸಾರ್ಥಮಂ ೫೯

ವ॥ ಅಂತು ವಸ್ತುವಾಹನಂಗಳಂ ಮನಂಗೊಂಡು ಕೈಕೊಂಡು ಪರಿಪೂರ್ಣ ಮನೋರಥಂ ರಥಾರೂಢನಾಗಿ ವಿಹಗೇಂದ್ರಪತಾಕನಿಂದ್ರಪ್ರಸ್ಥದಿಂ ಪೊಱಮಟ್ಟು ಪೊಱವೊಟಲೊಳ್ ಪಾಂಡವರನೆಂತಾನುಂ ಬೀೞ್ಕೊಳಿಸಿ ನಿಲಿಸಿ

ಇತರರಿಗೂ ಕೃಷ್ಣನ ಜಯಭೇರಿಯ ಧ್ವನಿಯು ಕರ್ಣಾಭರಣವಾದಂತೆ ಕೇಳಿಸಿತು. ೫೮. ಆ ಸಮಯವು ಮಳೆಗಾಲದಂತಿದ್ದಿತು. ಆಕಾಶದಿಂದ ಭೂಮಿಗೆ ಬೀಳುತ್ತಿರುವ ಶಿಶುಪಾಲನ ಶಿರೋರತ್ನಗಳ ಕಾಂತಿ ಪರಂಪರೆಯೇ ಕುಡಿಮಿಂಚು, ನಾರದನ ನೃತ್ಯವೇ ನವಿಲಿನ ಕುಣಿತ, ಜಯಭೇರಿಯ ಧ್ವನಿಯೇ ಗುಡುಗಿನ ಧ್ವನಿ, ದೇವತೆಗಳು ಸುರಿಸಿದ ಪುಷ್ಪವೃಷ್ಟಿಯೇ ಒಳ್ಳೆಯ ಮಳೆ. ಧರ್ಮರಾಜನ ರೋಮಾಂಚನವೇ ಕಡಹದ ಮರದ ಹೂದುಂಬುವಿಕೆ ಆಗಿದ್ದಿತು. ವ॥ ಆ ಮಹಾ ವಿಜಯೋತ್ಸವದಲ್ಲಿ ಆ ಧರ್ಮರಾಜನು ಸಮಯೋಚಿತವಾದ ವಾಕ್ಯಪೂಜೆಯಿಂದಲೂ, ದಿವ್ಯಾಭರಣ ದಿವ್ಯಾಂಬರಾದಿಗಳ ಪೂಜೆಯಿಂದಲೂ ಕಮಲಲೋಚನ ಕೃಷ್ಣನನ್ನು ಅರ್ಚಿಸಿ, ಗೀತವಾದ್ಯಾದಿಗಳ ಮಂಗಳಾಚಾರವನ್ನು ನಡೆಸುತ್ತ ೫೯. "ಕೃಷ್ಣಾ! ನಿನ್ನ ಪ್ರಸಾದ ಲೇಶದಿಂದ ಮೋಕ್ಷವನ್ನು ಬಯಸುವವನಿಗೆ ಮೋಕ್ಷಲಕ್ಷ್ಮಿಯೂ ಸಂಸಾರಿಗೆ ರಾಜ್ಯಲಕ್ಷ್ಮಿಯೂ ಲಭಿಸುವುದೆನ್ನುವಾಗ ನಿನಗೆ ಅಲಭ್ಯವಾದುದು ಯಾವುದೂ ಇಲ್ಲ. ಆದರೂ ಜನರಂಜನೆಗಾಗಿ ಕೊಡುತ್ತಿದ್ದೇನೆ"- ಎಂದು ಆನೆ ಕುದುರೆ ತೇರು-ಮೊದಲಾದ ಪದಾರ್ಥಗಳನ್ನು ಕೃಷ್ಣನಿಗೆ ಅರ್ಪಿಸಿದನು. ವ॥ ಹಾಗೆ ಕೊಟ್ಟ ವಸ್ತು ವಾಹನಾದಿಗಳನ್ನು ಮನಸ್ಸಿಟ್ಟು ಸ್ವೀಕರಿಸಿ, ಪರಿಪೂರ್ಣ ಮನೋರಥನಾಗಿ ಆ ಗರುಡಧ್ವಜನು ರಥವನ್ನೇರಿ, ಇಂದ್ರಪ್ರಸ್ಥದಿಂದ ಹೊರಟು ಪಟ್ಟಣದ ಹೊರಭಾಗದಲ್ಲಿ ನಿಂತು, ಪಾಂಡವರನ್ನು ಹಿಂದಕ್ಕೆ ಹೋಗಲು ಹೇಳಿದನು. ೬೦. ತನ್ನ ಮುಂದೆ ಅಂತಃಪುರ ವನಿತೆಯರ ಸಮೂಹವೂ, ಹಿಂದೆ ಸಕಲ ಸಾಮ್ರಾಜ್ಯ

೧. ಪುಳಕದುಳ್ಳಲರ್ದಂ ಧರೆಯಂತಿರ್ರಿರ್ಪಿನಂ (ಖ) ೨. ನೆಗಟುತ್ತುಮಿರೆ (ಕಗ)

ಅವನೀನಾಥಪ್ರತಾನಂ ಪೆಱಗೆ ಸಕಲಸಾಮ್ರಾಜ್ಯಚಿಹ್ನೋತ್ಕರಂ ಮುಂ
ದವರೋಧಸ್ತ್ರೀಕದಂಬಂ ಕೆಲದೊಳತಿಬಲೋಚ್ಚಂಡಚಾತುರ್ವಲಂ ಸು
ತ್ತುವನೂನೋತ್ಸಾಹದಿಂದಂ [೧]ನಡೆಯೆ ನಡೆದು ರಮ್ಯಪ್ರದೇಶಂಗಳೊಳ್ ಬೀ
ಡುವಿಡುತ್ತುಂ ಬಂದು ಪೊಕ್ಕಂ ನಿಜಪುರವರಮಂ ಮಂಗಳಾಚಾರದಿಂದಂ ೬೦

ವ॥ ಅಂತು ಪೊಕ್ಕು ರಾಜಭವನದೊಳ್ ವನಮಾಲಿ ಲೀಲೆಯಿಂದಿರ್ದನನ್ನೆಗಂ

ಪರಿವ ಬಿಸಿಲ್ಗುದುರೆಗಳೊ
ಪ್ಪಿರೆ ದವಧೂಮಧ್ವಜಂಗಳೆಸೆದಿರೆ ಬೇಱೊಂ
ದರಸು [೨]ರವಿಗೆನೆ ನಿದಾಘದ
ಬರವೆಸೆದತ್ತೆಸೆವಿನಂ ಪ್ರತಾಪಂ ಜಗದೊಳ್ ೬೧

ಉರಿವರಿವನರಸುತನದೊಳ್
ಪಿರಿದು ಖಳರ್ ಗಟಿಪುವಂತಿರೆಲೆಯಿಕ್ಕಿದ ಪೆ
ರ್ಮರಗಳಿಡಿದಡವಿಯೊಳದೇಂ
ಕರೆದುವೊ ಸೀರುಡುಗಳುಡುಗದಿರುಳುಂ ಪಗಲುಂ ೬೨

[೩]ತಾಱಲ್ವಿರ್ದ ಮರಂಗಳ
ತೂಱಲ ತುದಿಗೋಡೊಳಿರದೆ ಬುರುಲೆಗಳಡ್ಡಂ
ಬಾಜೆದುವಳ್ಕಿರ್ದ ಪವ್ವನೆ
ಪಾಜೆ ಕುಳಿಲ್ ಪಾಱಿ ಪಥಿಕಜನಸಂತಾನಂ ೬೩

ಚಿಹ್ನೆಗಳನ್ನು ಧರಿಸಿದ ರಾಜಸಮೂಹವೂ ಪಕ್ಕಗಳಲ್ಲಿ ಅತಿಬಲದಿಂದ ಕೊಬ್ಬಿರುವ ಚತುರ್ಬಲವೂ ಅತ್ಯುತ್ಸಾಹದಿಂದ ಸುತ್ತಲೂ ಬರುತ್ತಿರಲು ನಡೆದು ರಮ್ಯಪ್ರದೇಶಗಳಲ್ಲಿ ಬೀಡು ಬಿಡುತ್ತ ಮುನ್ನಡೆದು ಬಂದು ಮಂಗಳಾಚರಣ ಪೂರ್ವಕವಾಗಿ ದ್ವಾರಕಾಪುರವನ್ನು ಹೊಕ್ಕನು. ವ॥ ಹಾಗೆ ಪ್ರವೇಶಿಸಿ, ಅರಮನೆಯಲ್ಲಿ ಆ ಕೃಷ್ಣನು ಲೀಲೆಯಿಂದ ಇದ್ದನು. ಆಗ ೬೧. ಸೂರ್ಯನಿಗೆ ಬೇರೊಂದು ದೊರೆತನವು ದೊರೆತಿದೆಯೆನ್ನುವಂತೆ, ಓಡುವ ಬಿಸಿಲ್ಗುದುರೆಗಳೂ ಕಾಡುಕಿಚ್ಚಿನ ಹೊಗೆಯೆಂಬ ಧ್ವಜಗಳೂ ಕಾಣುತ್ತಿರಲು ಬೇಸಗೆಯು ತನ್ನ ಪ್ರತಾಪವನ್ನು ಜಗತ್ತಿಗೆ ತೋರಿಸುತ್ತಾ ಬಂದಿತು. ೬೨. ಪ್ರತಾಪಶಾಲಿಯಾದ ರಾಜನ ಅರಸುತನದಲ್ಲಿ ಖಳರು ಹೆಚ್ಚಾಗಿ ಹರಟುವಂತೆ ಎಲೆಗಳು ತುಂಬಿರುವ ದೊಡ್ಡ ಮರಗಳ ಕಾಡಿನಲ್ಲಿ ಜೀರುಂಡೆಗಳು ಹಗಲು ರಾತ್ರೆ ಅದೇನು ಜೀರ್ಗರೆಯುತ್ತಿದ್ದವೊ! ೬೩. ಒಣಗಿದ ಮರಗಳು ಉರುಳಿ ಬೀಳಲಾಗಿ ಅವುಗಳ ತುದಿಗೊಂಬೆಗಳಲ್ಲಿದ್ದ ಬುರುಲೆ ಹಕ್ಕಿಗಳು ಹಾರಿ ಹೋದವು. ಆ ರಭಸಕ್ಕೆ ಅಳ್ಕಿದೆಯವರು ಹೆದರಿದರು. ಪಥಿಕರು ಆ ಮರಗಳ ಮೇಲೆ ಮರಕೋತಿಯಾಟವನ್ನಾಡಿದರು.

---

೧. ನಡೆಯೆ ಪಡೆಸು (ಕಗ) ೨. ರವಿಗೇಂ ನಿದಾಘದ (ಕಗ) ರವಿತನ್ನಿದಾಘದ (ಖ) ೩. ತಾಱಲುದಿರ್ದ (ಖ)

ಕೆಸರುರ್ಬುರ್ಬೆೞಿ ನೀರ್ಬೊಬ್ಬುಳಿಸಿ ಬುಳುಬುಳುಂದೇಂಕಿ ವೆಂಡೆಯ್ದಿ ಕಂಪಂ
ಮಸಗುತ್ತುಂ ಬತ್ತೆ ನೆರ್ಪಂಬಡೆದರೆಗೆಱೆಯೊಳ್ ಬೀಡೆವ್ವೋಗಿರ್ದ ತಣ್ಣೀ
ರೊಸರ್ದಾಣಂ ಬಾವಿಗಾದತ್ತಸಿದು ಪರಿವ ಪೆರ್ಬಳ್ಳದಿರ್ವಕ್ಕದೊಳ್ [1]ನೀ
ರ್ದೆಸೆಯೊಳ್ ಸೇರ್ದಾಲಿಸುತ್ತಿರ್ದುದು ಚಳಶಫರೀಕಾಲಕೂಟಂ ಬಕೋಟಂ ೬೪

[2]ಮಸಗಿರ್ದ ಲೋಹಿತಾಶ್ವ
ಪ್ರಸರಂ ಕಾಳ್ಗರಡಮೆಲ್ಲಮಂ ಮೇಯೆ ರಸಾ
ರಸಮಂ ಗೋಪತಿ ತವೆ ಕುಡಿ
ಯಿಸಿದಂ ನಿಜಗೋಸಹಸ್ರಮಂ ಬೇಸಗೆಯೊಳ್ ೬೫

ಕೆಱೆ ನೆಱೆ ನೀರ್ ತವುತರೆ [3]ಬಱೆ
ಗೆಱೆಯಾದುವು ತೊಱೆಗಳುರ್ಕುಗೆಟ್ಟೞಿತು ಬಯ
ಲ್ದೊಱೆಯಾದುವು ಬಾಂದೊಱೆ [4]ಬಿಸು
ದೊಱೆಯಾದುದು ಕಾಲವಶಮದೇನಾಗಿಸದೋ ೬೬

ತಿಳಿದೊದವೆ ಮುಂದೆ ಮುಂದಿದೆ
ಜಲವೆಂದೆಂದೆಯ್ದುತುಂ ಬಿಸಿಲ್ಗುದುರೆಯನಂ
ದಳವಟಿದುವು ಕಾಲ್ಗುಂದಿದು
ವೊಳವಾಯಿಂ ಕರಿಸೆಯುಗುಟ್ಟುವೆಯ್ದೆ ಮೃಗಂಗಳ್ ೬೭

೬೪. ಕೆರೆಗಳ ಕೆಸರು ಮೇಲಕ್ಕೆ ಉಬ್ಬಿತು. ನೀರ ಗುಳ್ಳೆಗಳು ಎದ್ದು ಬುಳುಬುಳನೆ ಶಬ್ದ ಮಾಡುತ್ತ ಮೇಲೆದ್ದು ಬೆಂಡಾಗಿ ವಾಸನೆಯನ್ನು ಹರಡುತ್ತ ಬತ್ತಿ ಹೋದವು. ಒಣಗಿದ ಒಳಗೆರೆಯ ಅರ್ಧದಲ್ಲಿ ಬಿರುಕುಗಳುಂಟಾದವು. ಆ ಬಿರುಕುಗಳಿರುವೆಡೆ ಕೆಳಗೆ ನೀರು ದೊರೆಯುವೆಡೆಗಳಲ್ಲಿ ಬಾವಿಗಳನ್ನು ತೋಡಿದರು. ಸಣ್ಣಗೆ ಹರಿಯುವಂತಾದ ದೊಡ್ಡಹಳ್ಳಗಳ, ನೀರಿನ ಎರಡುಪಕ್ಕಗಳಲ್ಲೂ ಬಕಪಕ್ಷಿಗಳು ಚಲಿಸುವ ಮೀನುಗಳಿಗೆ ಯಮುಸಮೂಹದಂತೆ ಕಾಯುತ್ತಿದ್ದವು. ೬೫. ಉದ್ರೇಕಗೊಂಡ ಸೂರ್ಯನ ಕೆಂಪುಕಿರಣಗಳೆಂಬ ಕುದುರೆಗಳ ಕಾಡಿನ ಕರಡದ ಹುಲ್ಲನ್ನೆಲ್ಲಾ ಮೇದು ಮುಗಿಸಿದವು. ಗೋಪತಿ (ಸೂರ್ಯ)ಯು ಆ ಬೇಸಗೆಯಲ್ಲಿ ತನ್ನ ಸಾವಿರಾರು ಕಿರಣಗಳೆಂಬ ಗೋವುಗಳಿಗೆ ಭೂಮಿಯ ನೀರು ಮುಗಿದುಹೋಗುವಂತೆ ಚೆನ್ನಾಗಿ ಕುಡಿಸಿದನು. ೬೬. ಕೆರೆಗಳ ನೀರೆಲ್ಲ ಬತ್ತಿಹೋಗಿ ಬರಿಯ ಕೆರೆಗಳಾದವು. ನದಿಗಳಲ್ಲಿ ಪ್ರವಾಹವೇ ಇಲ್ಲದಂತಾಗಿ ಬತ್ತಿ ಮಳಲ ಬಯಲುನದಿಗಳಾದವು. ಆಕಾಶಗಂಗೆಯು ಬಿಸಿಯ ತೊರೆಯಾಯಿತು. ಕಾಲಾಧಿಪತ್ಯವು ಏನನ್ನು ತಾನೆ ಮಾಡಿಸುವುದಿಲ್ಲ? ಆಗಿಸುವುದಿಲ್ಲ! ೬೭. ದೂರದಿಂದ ನೀರಿನಂತೆ ಕಾಣುವ ಬಿಸಿಲ್ಗುದುರೆಗಳನ್ನು ಮುಂದೆ ನೀರು ಇದೆಯೆಂದು ಮುಂದೆ ಮುಂದೆ ಬಹುದೂರ ನಡೆದ

---

೧. ಮಿತ್ತೆಸೆದೊಂದಂ ಜಾನಿಸುತ್ತಿರ್ದುವು (ಕಗ) ನಿಲ್ತೊತ್ತೆಸೆದೊಂದಂ ಜಾನಿಸುತ್ತಿರ್ದುವು (ಮೂಲ) ೨. ಮಸಗಿದುವುಲೋಹಿತಾನ (ಖ) ೩. ಬಱುಗಱೆಯಾದುವು (ಕಖಗ) ೪. ಬಿಸಿಲ್ದೊಱೆಯಾದುದು (ಕಗ)

ತೆಗಳಿಗೆವಿದ್ರೋಡಲುಂ ನಾ
ಲಗೆಗಿತ್ತರೆಬಱಿತ ಬಾಯುಮಟ್ಟಿರೆಗಣ್ಬೀ
ಡುಗಳುಂ ತಾಱುವ ತಾಳ್ಗಳು
ಮಗುರ್ವಿಸಲ್ ಕಾಡಕೋಣನೆಯ್ದಿದುದಜಿಲಂ ೬೮

ಬಿಸಿಲಟುರೆ ಬಿಱಿದ ಬಿದುವಿಂ
ನಸುದೋಱುವ ರಕ್ತಸಿಕ್ತಮುಕ್ತಾಫಲಮಂ
ರಸದಾಳಿಂಬದ ಬಿಟ್ಟಿಂ
ದೊಸೆದು ಕರ್ದುಂಕುವುದು ಶುಕಕುಳಂ ಮದಗಜದಾ ೬೯

ಎಸೆವೆಮ್ಮಮ್ಮಭಿನಾಮದೆ
ಪೆಸರ್ವೆತ್ತರ್ ದಿವಿಜಸತಿಯರೆನಲೆಮ್ಮೊಳ್ಪಿಂ
ನಸದಳಮೆಂದು ಬೆಡಂಗಂ
ಪಸರಿಸುವಂತಿರ್ದುವಲರ್ದ ಪೊಂದಾವರೆಗಳ್ ೭೦

ಉಱಿ ಕಾವ ಸೂರ್ಯರಶ್ಮಿಗೆ
ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ
ತುಱುಗಿರ್ದಾವರೆಗೊಂಬಂ
ಮುಱಿದು ನೆಟಲ್ಮಾಡಿಕೊಂಡು ನಡೆವರ್ ಪಥಿಕರ್ ೭೧

ಜಿಂಕೆಗಳು ಶಕ್ತಿಗುಂದಿದವು, ಕಾಲು ಸೋತುಹೋಯಿತು. ಬಾಯಿಂದ ಬೆರಣೆಯ ಬೆಂಕಿಯನ್ನು ಉಗುಳಿದವು. ೬೮. ಜೋಲುಬಿದ್ದ ಹೆಗಲು, ಮೈಯೂ, ನಾಲಗೆಯನ್ನು ನೀಡಿ ಅರ್ಧಬತ್ತಿದ ಬಾಯೂ ಹಳ್ಳಕ್ಕಿಳಿದ ಅರೆಗಣ್ಣುಗಳ ತೆರೆಯುವಿಕೆಯೂ ಒಣಗುವ ದವಡೆಗಳೂ ಆಗಿ ಭಯಂಕರವಾಗಿರುವ ಕಾಡುಕೋಣವು ಕೆಸರಿನಲ್ಲಿ ಬಿದ್ದಿತು. ೬೯. ಬಿಸಿಲು ಹೆಚ್ಚಾಗಿ ತಾಕಿ ಬಿರಿದ ಮದ್ದಾನೆಯ ಕುಂಭದ ಮಧ್ಯದಿಂದ ಸ್ವಲ್ಪ ಕಾಣಿಸುವ ರಕ್ತದಿಂದ ಒದ್ದೆಯಾದ ಮುತ್ತುಗಳನ್ನು ದಾಳಿಂಬದ ಬಿತ್ತಗಳೆಂದು ಭ್ರಮಿಸಿ ಆಸಕ್ತಿಯಿಂದ ಗಿಳಿಗಳು ಕಚ್ಚುತ್ತಿದ್ದವು. ೭೦. "ಪ್ರಸಿದ್ಧವಾದ (ಪದ್ಮಿನಿ, ನಳಿನಿ) ಮುಂತಾದ ನಮ್ಮನಮ್ಮ ಹೆಸರನ್ನು ಅಂಕಿತ ನಾಮವನ್ನಾಗಿ ಇಟ್ಟುಕೊಂಡು ದೇವಸತಿಯರು ಹೆಸರುಪಡೆದಿರುವರು" ಎನ್ನುವಾಗ ನಮ್ಮ ಮಹಿಮೆಯು ಅತಿಶಯವಾದುದಲ್ಲವೆ! ಎಂದು ಬೆಡಗನ್ನು ಪ್ರಕಟಿಸುವಂತೆ ಹೊಂದಾವರೆಗಳು ಅರಳಿದವು. ೭೧. ಹೆಚ್ಚಾಗಿ ಕಾಯುವ ಸೂರ್ಯಕಿರಣಗಳಿಗೆ ಮೊರೆಯಿಡಲಿ ಎಂದು ಎತ್ತಿಹಿಡಿದಿರುವ ಚಿಗುರು ಎನ್ನುವಂತೆ ದಾರಿಗರು ಒತ್ತಾಗಿರುವ ತಂಗಡಿ ಗಿಡದ ಕೊಂಬೆಯನ್ನು ಮುರಿದು ಕಯ್ಯಲ್ಲಿ ಹಿಡಿದು ಅದರಿಂದ ನೆಳಲನ್ನು ಮಾಡಿಕೊಂಡು ನಡೆಯುತ್ತಿದ್ದರು.

ಎಳನೇಸರೇಟಿ[1]ನಟನ
ಗ್ಗಳಗಣ್ಣುರಿಯಾಲಿಯೆನಿಸಿ ನೆಲಸಿತ್ತು ದವಾ
ನಳಭೀಷ್ಮಂ [2]ತಪ್ತಾಧ್ವಗ
ಕುಲವೇಷ್ಮಂ ಪ್ರಬಲಪಾರ್ಥಿವೋಷ್ಮಂ ಗ್ರೀಷ್ಮಂ ೭೨

ಒಲೆಗಲ್ವೋಲ್ಕಾಯ್ದುವೆಂಟುಂದಿಗಿಭದ ಬಿದುಗಳ್ ಕಾಯ್ದ ಕರ್ಬೊನ್ನ ಪೆರ್ಗಾ
ವಲಿವೋಲಾಯ್ತಾ ನೆಲಂ [3]ಸಿಂಪಳಿಯ ನೆರೆದವೊಲ್ಕಾಯ್ದು ಚುಯ್ಯೆಂದುವೇಟುಂ
ಕುಲಪಾರಾವಾರಮೀ ಬೇಸಗೆಯ ಬಿಸಿಲೊಳಿನ್ನೆಂದಿದೇಕಾರ್ಣವಂ ಭೂ
ತಲವಕ್ಕುಂ ಪೇಟಿನಲ್ ಪರ್ವಿದು[4]ದತಿಶಯದಗ್ಲಾನಿದಾಘಂ ನಿದಾಘಂ ೭೩

ಉರಿವರಿವ ಬಿಸಿಲ ಬೆಂಕಿಯ
ಭರದೆ ಮಟಲ್ದಿಂಟಿ ಕಾಯ್ದು ಸಿಡಿಯುತ್ತಿರೆ ಪಂ
ಕರುಹಭವಾಂಡದ ಹಂಚಿನ
ಹುರಿಗಡಲೆವೊಲೊಡೆದು ಪಾಱಿದುವು ಬೆಟ್ಟಂಗಳ್ ೭೪

ಅಳುರ್ವ ನಿದಾಘದಿಂ ತ್ರಿಭುವನಂ ನೆಱಿ ನಿರ್ಜಲಮಾನೊಡೀ ಕಮಂ
ಡಲುಜಲಸೇವೆಯಿಂ ತೃಷೆಯನಾಱಿಪೆನೆಂದರವಿಂದಜಂ ಕಮಂ
ಡಲುವಿನೊಳಂದು ಬಯ್ತು ಪಿಡಿದಾ ಜಲವಿಂದುಪಕಾರಿಯಾಯ್ತಲೇ
ತಿಳಿದೆನಿದೊಂದನೆಂದೊಡೆ ನಿದಾಘದ ದಾಹಮನೇನನೆಂದಪೆಂ ೭೫

೭೨. ಬಾಲಸೂರ್ಯನ ಏಳಿಗೆಯೇ ಈಶ್ವರನ ಪ್ರಬಲವಾದ ಹಣೆಗಣ್ಣಿನ ಉರಿಯ ಗುಡ್ಡೆಯೆಂಬಂತೆ ಮಾಡಿದುದೂ ಕಾಡುಗಿಚ್ಚಿನಂತೆ ಭಯಂಕರವೂ ತಾಪಗೊಂಡ ದಾರಿಗರಿಗೆ ವೇಷ್ಮವೂ ಭೂಮಿಯ ಕಾವನ್ನೂ ಹೆಚ್ಚಿಸಿದುದೂ ಆದ ಗ್ರೀಷ್ಮ ಕಾಲವು ಬಂದು ನೆಲಸಿತ್ತು. ೭೩. ಎಂಟುದಿಕ್ಕಿನ ಆನೆಗಳ ನೆತ್ತಿಯ ಮಧ್ಯವು, ಕಾಯ್ದ ಕಲ್ಲಿನೊಲೆಯಂತಾಯಿತು. ನೆಲವು ಕಾಯ್ದಕಬ್ಬಿಣದ ದೊಡ್ಡ ಕಾವಲಿಯಂತಾಯಿತು. ಸಪ್ತ ಸಮುದ್ರಗಳೂ ಕಾದ ಕಾವಲಿಯ ಮೇಲೆ ಚಿಮುಕಿಸಿದ ನೀರಿನಂತೆ ಭೂಮಿಗೆ ತಾಕಿ ಚೊಯ್ ಎಂದು ಶಬ್ದಮಾಡುತ್ತ ಇಂಗಿಹೋದವು. ಎಂದಿಗಾದರೂ ಈ ಭೂತಳದಲ್ಲಿ ಒಂದು ಸಮುದ್ರವಾದರೂ ಉಳಿದೀತೆ? ಹೇಳು ಎನ್ನುವಂತೆ ಅತಿಶಯವಾದ ಗ್ಲಾನಿಯನ್ನುಂಟು ಮಾಡುವ ಪಾಪಿಬೇಸಗೆಯು ಹಬ್ಬಿತು. ೭೪. ಉರಿಯನ್ನು ಹರಡುವ ಬಿಸಿಲಿನ ಬೆಂಕಿಯ, ರಭಸದಿಂದ ಮಳಲ ದಿಣ್ಣೆಗಳು ಕಾಯ್ದು ಸಿಡಿಯುತ್ತಿರುವಲ್ಲಿ ಬೆಟ್ಟಗಳು ಬ್ರಹ್ಮಾಂಡವೆಂಬ ಹುರಿಹಂಚಿನ ಹುರಿಗಡಲೆಯಂತೆ ಒಡೆದು ಹಾರಿದುವು. ೭೫. "ಆವರಿಸಿದ ಬೇಸಗೆಯಿಂದ ಮೂರುಲೋಕವೂ ನೀರಿಲ್ಲದಂತಾಯಿತು. ಈ ಕಮಂಡಲು ಜಲಸೇವನೆಯಿಂದ ಬಾಯಾರಿಕೆಯನ್ನು ಹೋಗಲಾಡಿಸಿಕೊಳ್ಳುವೆನು!" ಎಂದು ಬ್ರಹ್ಮನು ತನ್ನ ಕಮಂಡಲುವಿನಲ್ಲಿ ವಿಷ್ಣುಪಾದವನ್ನು ತೊಳೆಯುವಾಗ ಉಳಿಸಿಕೊಂಡಿದ್ದ ಆ ನೀರು ಇಂದು

---

೧. ವಿಟನಗ್ಗಳಗಣ್ಮುರಿಯಾಲಿ (ಖ) ೨. ತಪ್ತಾಧ್ವರ (ಖ) ೩. ಸಂಪಱೆಯ (ಕಖಗ) ಸಿಂಪಿಣಿಯ (ಮೂಲ) ೪. ಅತಿಶಯದಾಜ್ಞಾನಿದಾಘಂ (ಖ) ಅತಿಶಯದ್ಯಗ್ಲಾನಿದಾಘಂ (ಮೂಲ)

ಜಲನಿಧಿತಲ್ಪನುಂ ಜಲರುಹೋದರನುಂ ಜಲಜಾತ್ರನೇತ್ರನುಂ
ಜಲಧಿಸುತೇಶನುಂ ಜಲದವರ್ಣನುಮೆಂಬುದನೀ ನಿದಾಘಮಂ
ಕಳೆಯಲೆ ಪಣ್ಣಿಕೊಂಡನಸುರಾರಿವೊಲಾವನನಾಗತಜ್ಞನೆಂ
ದಿಳೆ ನುಡಿವಂತು ಪೆರ್ಬಿಸಿಲೊಳರ್ಬಿಸಿತುರ್ಬಿ ನಿದಾಘಮುರ್ಬಿಯೊಳ್ ೭೬

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮಗಿರಿಪುತ್ರಿಯಂ ಮುದದೊಳಪ್ಪಿ ಹಿಮಾಂಗದ ನಾಗಮಂಡನೌ
ಘಮನೊಸೆದಾಂತು [೧]ತಾಪಹರಮಪ್ಪುದನೀಶನುದರ್ಕದರ್ಶಿ ಮು
ನ್ನಮೆ ಸಮಕಟ್ಟಿಕೊಂಡನೆನೆ ಬೇಸಗೆ ಬೇಸಱಿಸಿತ್ತು ಲೋಕಮಂ ೭೭

ರವಿ ತುಹಿನಾದ್ರಿಯತ್ತೆಳಸಿಯುಂ ಮೃಗಮೊಂದು ಹಿಮಾಂಶುಬಿಂಬಮ
ಧ್ಯವನೆಡೆಗೊಂಡುಮನ್ಯಗತಿಶೂನ್ಯನಿಭಾನನನಾತ್ಮಜಾಠರಾಂ
ಬುವನೆ ನಿರಂತರಂ ತೆಗೆದು ಹಸ್ತದಿನೀಂಟಿಯುಮಂಗತಾಪಮಂ
ತವಿಕುಮೆ [೨]ರೌದ್ರಮೀ ಬಿಸಿಲೆನಲ್ ಬಿಸಿಲಟ್ಟೆದುದಧ್ವಗರ್ಕಳಂ ೭೮

ಉಪಕಾರಿಯಾಯಿತು. ಎಲಾ! ಇದೊಂದು ದಾರಿಯನ್ನು ಈಗ ತಿಳಿದುಕೊಂಡೆನು!" ಎನ್ನುವಾಗ ಆ ಬೇಸಿಗೆಯ ತಾಪವನ್ನು ಎಷ್ಟು ಹೇಳಲಿ? ೭೬. ಈ ಕ್ರೂರವಾದ ಬೇಸಿಗೆಯ ತಾಪವನ್ನು ಕಳೆಯುವುದಕ್ಕೆಂದೇ ಕೃಷ್ಣನು, ಜಲನಿಧಿಶಯನನೂ, ಜಲರುಹೋದರನೂ ಜಲಜಾತನೇತ್ರನೂ ಜಲಧಿಸುತೆಲಕ್ಷ್ಮಿಯ ಪತಿಯೂ ಜಲದ ವರ್ಣನೂ ಆಗಿರುವನು. ಕೃಷ್ಣನಂತೆ ಮುಂದಾಗುವುದನ್ನು (ಭವಿಷ್ಯವನ್ನು) ಯಾವನು ತಾನೆ ತಿಳಿಯಬಲ್ಲನು? ಎಂದು ಪ್ರಪಂಚವೇ ಹೇಳುವಂತೆ ಭೂಮಿಯಲ್ಲಿ ಬೇಸಗೆಯು ಉಬ್ಬಿ ಹೆಚ್ಚುಬಿಸಿಲಿನಿಂದ ತಾಪಗೊಳಿಸಿ ಲೋಕವನ್ನು ಬೊಬ್ಬಿಡಿಸಿತು. ೭೭. ಉತ್ತರಕಾಲದಲ್ಲಾಗುವುದನ್ನು ಅರಿತೇ ಬೇಸಗೆಯ ತಾಪವನ್ನು ಪರಿಹರಿಸಿಕೊಳ್ಳುವ ಉದ್ದೇಶದಿಂದ ಈಶ್ವರನು ಮುಂಚೆಯೇ ಹಿಮಕರನನ್ನು ತಲೆಯಲ್ಲಿಯೂ ಹಿಮಜಲದ ಗಂಗೆಯನ್ನು ಜಟೆಯಲ್ಲೂ ಧರಿಸಿದನು. ಹಿಮಗಿರಿಪುತ್ರಿ ಗೌರಿಯನ್ನು ಸಂತೋಷದಿಂದ ಅಪ್ಪಿದನು. ತಣ್ಣಗಿರುವ ದೇಹದ ನಾಗಗಳ ಆಭರಣವನ್ನೇ ಆಸಕ್ತಿಯಿಂದ ಧರಿಸಿದನು ಎಂದು ತಿಳಿದ ಜನರು ಹೇಳುವಷ್ಟು ಬೇಸರವನ್ನುಂಟುಮಾಡಿತು, ಆ ಬೇಸಿಗೆ! ಬೇಸಗೆಯ ತಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿಯೇ ಸೂರ್ಯನು ಹಿಮಗಿರಿಯ ಕಡೆಗೆ ಹೊರಟನು. ಜಿಂಕೆಯು ಹಿಮಕಿರಣನ ಮಂಡಲ ಮಧ್ಯವನ್ನೇ ಸೇರಿನಿಂತಿತು. ಗಜಮುಖನು ಬೇರೆಗತಿಯಿಲ್ಲದೆ ತನ್ನ ಉದರದ ನೀರನ್ನೇ ಸೊಂಡಿಲಿನಿಂದ ತೆಗೆದು ತೆಗೆದು ಕುಡಿದನು ಎಂದ ಬಳಿಕ ರೌದ್ರವಾದ ಆ ಬಿಸಿಲು ಪ್ರಯಾಣಿಕರನ್ನು ಎಷ್ಟು ತಾಪಗೊಳಿಸುತ್ತಿರಬೇಕೆಂಬುದನ್ನು ಹೇಳಬೇಕೆ!

---

೧. ತಾಪಹರಮಪ್ಪಿನಮೀಶನುದಗ್ರದರ್ಶಿ (ಖ) ೨. ರೌದ್ರಮೀ ಬಿಸಿಲುಮೆರ್ಬಿಸಿಪರ್ಬಿದು

ತರುಣಿಯರಲ್ಲಿಗಲ್ಲಿಗಱವಟ್ಟಿಗೆಯೊಳ್ ಕಡುಗೋಡುವೆತ್ತ ತ
ಣ್ಗರಗಮನೆತ್ತಿ ನೀರೆಱೆಯೆ ಸಾಲ್ವುದೆನಲ್ ನೆರೆದಾದಮೀಂಟುತುಂ
ಬರೆ ಬಿಸಿಲಟ್ಟೆ ಕೊಳ್ವಿಸಕದಿಂ ಬಸಿನೀರ ತಡಂಗದಂದದಿಂ
ದಿರೆ ಬಸಿಱತ್ತ ಬಾಯೊಣಗೆ ಪಾಂಥಜನಂ ನಡೆಯಿತ್ತು ಮಾರ್ಗದೊಳ್ ೭೯

ಬಿಸುಪಂ ಪಚ್ಚದ ಮುತ್ತೆ ಮುತ್ತೆ ಸರಸಶ್ರೀಖಂಡದಣ್ಪೆಯ್ದೆ ಖಂ
ಡಿಸೆ ಘರ್ಮಾಂಬುವನಾಂತ ಮಲ್ಲಿಗೆ ಕರಂ ತಮ್ಮಲ್ಲಿಗೊಳ್ಗಂಪನೆ
ಯ್ದಿಸೆ ಸಾರೋದಯಮಾಗೆ ಸಾರಘನಸಾರಂ ತಂಬುಲಂ ಚಪ್ಪರಂ
ಬಿಸಿಲಂ ಚಪ್ಪರಿಸಲ್ಕೆ ಭೋಗಿಜನಮಿರ್ಕುಂ ಭೋಗದಾಣಂಗಳೊಳ್ ೮೦

ಲತಿಕಾಮೂಲಪ್ರಸೂನಂ ಕನಕಕಲಶಮುಕ್ತಾಕ್ಷತಂ ದರ್ಪಣಾಗ್ರ
ದ್ಯುತಿಪುಂಜಂ ಮುಗ್ಧ[1]ಚಂದ್ರಾಮೃತಕಳಿಕೆಯೆನಲ್ ಕಾಂತಕಕ್ಷೋದ್ಭನೋರೋ
ಜತಟೀ ಚಂಚತ್ಕಪೋಲ ಸ್ಫುರಿತನಿಟಿಲ ಘರ್ಮಾಂಬು ಚೆಲ್ವಾಗೆ ಸೋಂಕಿಂ
ಸತಿಯರ್ ಕರ್ಪೂರಪಾಳೀಕೃತಸತಿಯರೆನಲ್ ನಲ್ಲರೊಳ್ [2]ತಣ್ಪಿದಂದರ್ ೮೧

ಅಸದಳದಿಂಪು ಕಂಪು ಕಡೆಯಾಣಿಯ ಪೊನ್ನ ಸರಕ್ಕೆ ಕೂಡಿದಂ
ತೆಸೆವುದಿದರ್ಕದೇನುರುವದೊರ್ಮಡಿನಿರ್ಮಡಿಬಂದೊಡಂ ಸುಧಾ
ರಸಮೆನೆ ತೀವಿದೊಳ್ಪಸದ ಮಾವಿನ ಪಣ್ಗಳನಿರ್ತಳಂಗಳಿಂ
ಪೊಸೆದೆರ್ದೆಯಾಱೆ ಪೀರ್ದಮರ್ದುವೀರ್ದವರಂ ನಗುಗುಂ ಜಗಜ್ಜನಂ ೮೨

೭೯. ತರುಣಿಯರು ಅಲ್ಲಲ್ಲೆ ಇರುವ ಅರವಟ್ಟಿಗೆಗಳಲ್ಲಿ ಬಹಳ ತಣ್ಣಗಿರುವ ಮಡಕೆಯ ನೀರನ್ನು ಪಥಿಕರಿಗೆ ಕುಡಿಯಲು ಕೊಟ್ಟರು. ಅವರು ಸಾಕೆನ್ನುವಷ್ಟು ಕುಡಿದು ಮುಂದೆ ಹೋಗಲು ದಾರಿಗರ ಹೊಟ್ಟೆಯಲ್ಲಿರುವ ನೀರು ಬಿಸಿಲಿನಿಂದ ಕಾಯ್ದು ಬಿಸಿನೀರಿನ ಕೆರೆಯಂತಾಯಿತು. ಇತ್ತ ಬಾಯಿ ಒಣಗಿತು. ಈ ಸ್ಥಿತಿಯಲ್ಲಿ ಪ್ರಯಾಣಿಕರು ದಾರಿಯಲ್ಲಿ ನಡೆಯಬೇಕಾಯಿತು. ೮೦. ಆ ಬೇಸಗೆಯಲ್ಲೂ ಭೋಗಿಗಳು ಭೋಗಶಾಲೆಗಳಲ್ಲಿ ಸುಖವಾಗಿದ್ದರು. ಆಭರಣಗಳ ಮುತ್ತೇ ಬಿಸಿಲಿನ ತಾಪವನ್ನು ಮುತ್ತಿತು. ಶ್ರೀಗಂಧ ರಸಲೇಪನವು ಬೆವರು ನೀರನ್ನು ಆರಿಸಿತು. ಮಲ್ಲಿಗೆ ಹೂಗಳೂ ಪಚ್ಚಕರ್ಪೂರ ತಾಂಬೂಲಗಳೂ ಅವರಿರುವಡೆಗೆ ಒಳ್ಳೆಯ ವಾಸನೆಯನ್ನು ಒದಗಿಸಿದವು. ಚಪ್ಪರವು ಬಿಸಿಲನ್ನು ಚಪ್ಪರಿಸಿತು. ೮೧. ಕಾಂತೆಯರು ತಮ್ಮ ನಲ್ಲರಿಗೆ ಪಚ್ಚಕರ್ಪೂರದ ಹಳಕುಗಳಿಂದ ನಿರ್ಮಿತರಾದ ವನಿತೆಯರಂತೆ ತಂಪನ್ನುಂಟುಮಾಡಿದರು. ಆ ನಲ್ಲೆಯರ ಕಂಕುಳಿನಲ್ಲಿ ಉದ್ಭವಿಸಿದ ಬೆವರು ಹನಿ ಬಳ್ಳಿಯ ಬುಡದಲ್ಲಿ ಅರಳಿದ ಹೂಗಳಂತೆಯೂ, ಚಿನ್ನದ ಕಲಶಗಳ ಮೇಲೆ ಎರಚಿದ ಅಕ್ಷತೆಯಂತೆಯೂ ಸ್ತನಗಳಲ್ಲಿಯೂ ಕನ್ನಡಿಯಲ್ಲಿ ಹರಡಿದ ಕಾಂತಿಪುಂಜದಂತೆ ಕಪೋಲದಲ್ಲಿಯೂ ಬಾಲಚಂದ್ರನ ಅಮೃತದ ಮೊಗ್ಗಿನಂತೆ ಹಣೆಯಲ್ಲಿಯೂ ರಂಜಿಸುತ್ತಿತ್ತು. ೮೨. ಆ ಕಾಲದಲ್ಲಿ ರಸಭರಿತವಾದ ಸಿಹಿಮಾವಿನ ಹಣ್ಣುಗಳನ್ನು ಕೆಲವರು ಎರಡು ಕಯ್ಗಗಳಲ್ಲೂ ಹಿಡಿದು ಅದುಮಿ ಹಿಸುಕಿ, ಅಪರಂಜಿ ಚಿನ್ನದ ರಸವೆ ಹೆಚ್ಚಾದ ಸಿಹಿಯನ್ನೂ ಸುವಾಸನೆಯನ್ನೂ ಪಡೆದು ಬರುತ್ತಿದೆಯೆನ್ನುವಂತೆ

೧. ಚಂದ್ರಾತಪಕಳಿಕೆಯೆನಲ್ (ಕಗ) ೨. ತಣ್ಪುವೆತ್ತರ್ (ಖ)

ವ|| ಅಂತು ನಿದಾಘಸಮಯಂ ಭೋಗಿಜನಮನೋಹರಮಾಗಿ ವರ್ತಿಸುತ್ತಿರ್ದುದು ಅತ್ತಲೊಂದು ಶೋಣಿತನಾಮನಗರದೊಳ್

ಬಲಿದೈತ್ಯೇಂದ್ರತನೂಜನೆಂಬೆಸಕದಿಂ ಭೂಭಾರಧೌರೇಯನೆಂ
ಬಳವಿಂ ಭೂರಿಭುಜಾಸಹಸ್ರಯುತನೆಂಬಾಟೋಪದಿಂ ನಿರ್ಜಿತಾ
ಖಿಳದಿಕ್ಪಾಲಕನೆಂಬ ಶೌರ್ಯದಿನವಂ ಗೌರೀಶರಕ್ಷಾನಿರ
ರ್ಗಳನೆಂಬುನ್ನತಿಯಿಂದಜೇಯನೆನಿಸಿರ್ಪಂ ಬಾಣದೈತ್ಯಾಧಿಪಂ ೮೩

ವಾರ್ಧಿಕ್ರೋಡಾವಗೂಢಂ ಹರಿ ಬಡಗೊರವಂ ನಂಟನೀ ಯಾಮಿನೀನಾ
ಥಾರ್ಧಪ್ರೋತ್ತಂಸನೆಂಬೊಂ [1]ಮುದುಪನಜನಿವಂ ಚೀಃ ಕೃಪಾಪಾತ್ರನಿಲ್ಲಿಂ
[2]ಸ್ವರ್ಧೌರೇಯರ್ಕಳಿಂದ್ರಾದಿಗಳೆ ದೊರೆಯೆ ತಾಮೆಂದು ಬಾಣಂ ಕರಂ ತಾಂ
ನಿರ್ಧೂತಾರಾತಿದೋರ್ಗರ್ವದ ಮದದೊದವಿಂ ನಿಚ್ಚಲುಂ ಪೆರ್ಚಿ ನಿಲ್ವಂ ೮೪

ವಾಸವನಾದಿಯಾಗೆರಡುತೋಳವರುಂ ಮೊದಲಾಗಿ ಕಾದುವರ್
ಸಾಸಿರತೋಳ್ಗಳುಳ್ಳೆನಗೆಕಾಳೆಗಮಿಲ್ಲಿನಿತೊಂದು ತೋಳ್ಗಳಂ
ದೇಸೆಗೆ ಪೊತ್ತೆನಲ್ಲದಿಜೀವಂತಿರೆ ಪೊತ್ತೆನೆ ಪೇಟಿಮೆಂದು ಬಾ
ಣಾಸುರನಿಂತು ತನ್ನೊಡನೆ ಕಾದುವರಿಲ್ಲದುದರ್ಕೆ ಚಿಂತಿಪಂ ೮೫

ಧಾರೆಯಾಗಿ ಹೊರ ಬರುವ ರಸವನ್ನು ಹೀರಿ ತೃಪ್ತಿಗೊಂಡು ಇದಕ್ಕೆ ಎರಡರಷ್ಟನ್ನು ಕುಡಿದರೂ, ಅಮೃತವು ಈ ರಸಕ್ಕೆ ಸಮವಾದ ಆನಂದವನ್ನುಂಟು ಮಾಡಲಾರದು ಆ ಅಮೃತವನ್ನೇಕೆ ಕುಡಿಯುವರೋ ಎಂದು ದೇವತೆಗಳನ್ನು ಜಗತ್ತಿನ ಜನರು ಹಾಸ್ಯ ಮಾಡಿದರು. ವ|| ಹಾಗೆ ಬೇಸಗೆಯ ಕಾಲವು ಭೋಗಿಜನಗಳಿಗೆ ಮನೋಹರವಾಗಿ ನಡೆಯುತ್ತಿದ್ದಿತು. ಆಗ ಅತ್ತ ಕಡೆ ಶೋಣಿತವೆಂಬ ಹೆಸರಿನ ನಗರದಲ್ಲಿ ೮೩. ಬಾಣಾಸುರನೆಂಬ ರಾಕ್ಷಸನು ತಾನು ಬಲಿಚಕ್ರವರ್ತಿಯ ಮಗ, ಭೂಭಾರವನ್ನು ವಹಿಸುವ ಸಮರ್ಥ, ಸಹಸ್ರಬಾಹುಗಳನ್ನು ಪಡೆದಿರುವವನು ಎಂಬ ಆಡಂಬರದಿಂದಲೂ ಸಮಸ್ತದಿಕ್ಪಾಲಕರನ್ನೂ ಜಯಿಸಿರುವೆನೆಂಬ ಶೌರ್ಯದಿಂದಲೂ ಈಶ್ವರನ ರಕ್ಷಣೆಯಿಂದಲೂ ತಾನು ಅಜೇಯನು ಎನ್ನಿಸಿಕೊಂಡಿದ್ದನು. ೮೪. ಹರಿಯು ಸಮುದ್ರದ ಎದೆಯಲ್ಲಿ ನಡುವೆ ಹುದುಗಿಕೊಂಡಿರುವನು. ಅರ್ಧಚಂದ್ರನನ್ನು ಶಿರೋಭೂಷಣವಾಗಿ ಧರಿಸಿರುವ ಬಡಗೊರವನು ಹರಿಗೆ ಬಂಧು ಬ್ರಹ್ಮನು ಮುದುಕನು, ಕೃಪಾಪಾತ್ರನು. ಇನ್ನು ಸ್ವರ್ಗಾದಿ ಲೋಕಪಾಲಕರು, ಇಂದ್ರಾದಿಗಳು ನನಗೆ ಸಮರೇ ಎನ್ನುತ್ತ ಶತ್ರುಗಳನ್ನೆಲ್ಲಾ ಧ್ವಂಸ ಮಾಡಿರುವ ಆ ಬಾಣನು ಬಾಹುಗರ್ವದ ಮದದ ಆಧಿಕ್ಯದಿಂದ ಸದಾ ಉಬ್ಬಿ ಕೊಬ್ಬಿರುವನು. ೮೫. ಇಂದ್ರನೇ ಮೊದಲಾದ ಎರಡು ತೋಳಿನವರು ಅನ್ಯೋನ್ಯವಾಗಿ ಕಾದುವರು. ಸಾವಿರ ತೋಳಿನವನಾದವನಿಗೆ ಯುದ್ಧ ಮಾಡುವುದಕ್ಕೆ ದೊರೆಯುವವರಾರು? ಯುದ್ಧವೇ ಇಲ್ಲ. ಈ ಸಾವಿರ ತೋಳುಗಳನ್ನು ಅಲಂಕಾರಕ್ಕಾಗಿ ಪಡೆದಿರುವೆನೇ ಹೊರತು

---

೧. ಮುದುಪನಜನವದ್ದಂ ಕೃಪಾಪಾತ್ರನಿಲ್ಲಿಂ (ಖ) ೨. ಸ್ವರ್ಧಾಧೌರೇಯರಿಂದ್ರಾದಿಗಳೆನಗೆ ತೃಣಪ್ರಾಯರಂದಿಂತು ಬಾಣಂ (ಖ)

ವ|| ಮತ್ತಮಾ ವೀರೋತ್ತಮನಾಹವದೋಹಳಂ ಹೃದಯಪರಿತಾಪಮಂ ನೆಗಟ್ಟೆ ತನ್ನೊಳಿಂತೆಂದಂ

ಧುರದೊಳ್ ವಜ್ರಮುಮುರ್ಚದೆನ್ನೊಡಲನುರ್ಚಲ್ತಕ್ಕಮೋಘಾಸ್ತ್ರಮು
ಳ್ಳರಿವೀರರ್ ದೊರೊಕೊಳ್ಗುಮೇ [1]ತರದಿನಸ್ತ್ರಾನೀಕವಿಂದುಳ್ಳೊಡಂ
ಬರಿದೆನ್ನಂಗದೊಳಾದ ಪುಣ್ಗಳ ಗುಹಾದ್ವಾರಂಗಳೊಳ್ ಪೊಕ್ಕು ಪು
ಲ್ಮರುಳಿತ್ತಂ ನುಸುಳ್ವುರ್ಚೆ [2]ಪೋಪಿನಗಮೆಂದಾಟೋಪದಿಂ ಕಾದುವೆಂ ೮೬

ಕದನಮೊಡರ್ಚದೇಜ ಸವಿಗಾಣದ ಬಲ್ಪೆನಗೇವುದಸ್ತ್ರಪಾ
ತದೆ ಕಡಿವೆತ್ತ ಬಾಹುವನಮಂ ರಿಪುವೆಚ್ಚಜೆದಿಟ್ಟಕೈದುವೆ
ನ್ನುದರದೊಳೆಯ್ದೆ [3]ತಳ್ತಿಡಿದಿರಲ್ ಯಮರಾಜನ ಶಸ್ತ್ರಕೋಟಿ ತೀ
ವಿದ ನಡೆಮುಂದಸೆಂಬಿನೆಗೆಮಿರ್ಪೆನದೆಂದೊ ಮಹಾಜಿರಂಗದೊಳ್ ೮೭

ಬಳವದರಾತಿಹೇತಿ [4]ಪರಿಖಂಡಿತದೋಃಪರಿಖಂಡಮೆಂಬ ಜೇ
ರ್ಕೊಳವಿಗಳಿಂದಮುಚ್ಚಳಿಪ ನೆತ್ತಜ ಕುಂಕುಮವಾರಿಯಂ ದಿಶಾ
[5]ಲಳನೆಯರತ್ತ ಸಿಂಪಿಸುತ್ತೆ ಸಿಂಪಿಣಿಯಾಡೆ ರಣೋರ್ವಿಯೆಂಬ ಪೂ
ಗೊಳನನದೆಂದೊ ವೀರರಸಪೂರದೆ ನಾಂ [6]ಕಡೆಗೋಡಿಪ್ಪೋಗಿಪೆಂ ೮೮

ಯುದ್ಧಕ್ಕಲ್ಲವೆನ್ನುವಂತಾಗಿದೆ ಎಂದು ಆ ವೀರೋತ್ತಮನು ಯುದ್ಧಾಪೇಕ್ಷೆಯಿಂದ ಹೃದಯ ತಾಪವುಂಟಾಗಲು ತನ್ನಲ್ಲಿ ತಾನೇ ಹೇಳಿಕೊಂಡನು. ೮೬. ಯುದ್ಧದಲ್ಲಿ ವಜ್ರಾಯುಧವೂ ನನ್ನ ದೇಹವನ್ನು ಭೇದಿಸುವುದಿಲ್ಲ. ಭೇದಿಸುವುದಕ್ಕೆ ತಕ್ಕ ಅಮೋಘವಾದ ಅಸ್ತ್ರಗಳನ್ನು ಧರಿಸಿದ ವೀರರು ಹೇಗೆ ತಾನೆ ಸಿಕ್ಕುವರು! ನನ್ನಲ್ಲಿ ಯಾವ ಬಗೆಯ ಅಸ್ತ್ರಗಳ ಸಮೂಹವೇ ಇದ್ದರೂ ವ್ಯರ್ಥವಾಗುತ್ತದೆ. ವೀರರಾರಾದರೂ ದೊರೆತು ನನ್ನ ಮೈಯಲ್ಲಿ ಅಸ್ತ್ರಗಳಿಂದ ಗಾಯಗಳನ್ನು ಮಾಡಬೇಕು. ಗುಹೆಗಳಂತಿರುವ ಆ ಗಾಯಗಳಲ್ಲಿ ಸಣ್ಣ ಮರುಳು, ಪಿಶಾಚಿ, ಭೂತಗಳು ಇತ್ತಕಡೆಯಿಂದ ಹೊಕ್ಕು ಮಾಂಸವನ್ನು ತಿಂದು ಅತ್ತಕಡೆಯಿಂದ ಹೊರಟು ಹೋಗಬೇಕು! ಹಾಗಾಗುವಂತೆ ನಾನು ಎಂದು ಆಡಂಬರದಿಂದ ಕಾದುವೆನೋ! ೮೭. "ಯುದ್ಧ ಮಾಡದಿರುವ ಮಿತ್ರ ಶತ್ರುವಿನ ಅಸ್ತ್ರಗಳ ಹೊಡೆತದಿಂದ ತೋಳುಗಳು ಕಡಿದು ಹೋಗಿ ಆಗುವ ಗಾಯಗಳ ರುಚಿಯನ್ನು ನೋಡದಿರುವ ನನಗೆ ನನ್ನ ಶಕ್ತಿ ಸಾಮರ್ಥ್ಯದಿಂದ ಆಗಬೇಕಾದುದೇನು! ನನ್ನ ಶತ್ರುವು ಪ್ರಯೋಗಿಸಿದ ಬಾಣಗಳೂ ಇರಿದ ಆಯುಧಗಳೂ ನನ್ನ ಉದರದೊಳಗೆ ಹೊಕ್ಕು ಪೂರ್ಣವಾಗಿ ತುಂಬಿ ಉದರವು ಯಮರಾಜನ ಕೋಟ್ಯಂತರ ಶಸ್ತ್ರಗಳು ತುಂಬಿದ ಚಲಿಸುವ ಪೆಟ್ಟಿಗೆಯಂತೆ ಆಗುವಂತೆ ನಾನು ಅದೆಂದು ಯುದ್ಧರಂಗದಲ್ಲಿರುವೆನೋ! ೮೮. ಬಲಿಷ್ಠನಾದ ಶತ್ರುವಿನ ಆಯುಧದಿಂದ ಕತ್ತರಿಸಲ್ಪಟ್ಟ ತೋಳು ತುಂಡುಗಳೆಂಬ ಜೀರ್ಕೊಳವೆಗಳಿಂದ ಮೇಲಕ್ಕೆ ಹೆಚ್ಚಾಗಿ ಹಾರುವ ರಕ್ತವೆಂಬ ಕೆಂಪು ಕುಂಕುಮ ದ್ರವವನ್ನು ದಿಗ್ವನಿತೆಯ ಕಡೆಗೆ ಚಿಮುತ್ತ ಚಲ್ಲಾಟವಾಡುತ್ತ,

೧. ತರದಿನಸ್ತ್ರಾನೀಕದಿಂದಂಧುರಂಪಿರಿದೆನ್ನಂಗದೊಳಾದ (ಕಗ) ೨. ಪೋಪೆನಗ (ಕಗ) ೩. ತಳ್ತಿಜೆದಿರಲ್ (ಕಗ) ೪. ಪರಿಖಂಡಿತ ಖಂಡಸಹಸ್ರಮೆಂಬ (ಕಗ) ೫. ಲಲನೆಯರೊತ್ತಿ (ಗಕ) ೬. ಕಡೆಗೋಡಿಯಾದಪೆಂ (ಕಗ)

ವ॥ ಎಂದು ಬಾಣಾಸುರಂ ಸಂಗ್ರಾಮಕಾಮನಾಗಿ ತನ್ನುಪವನದೊಳ್ ಸನ್ನಿಹಿತನಾಗಿರ್ಪ ದರ್ಪಕವಿರೋಧಿಯನಾರಾಧಿಸಿ ನಿಜಮಯೂರ ಧ್ವಜಪತನೋತ್ಪಾತವಾದಂದು ಮಹಾಹವಮಪ್ಪುದೆಂದು ವರಂಬಡೆದು ಬಂದೊಂದು ಸಮಯಮೊಡ್ಡೋಲಗಂಗೊಟ್ಟಿರ್ದಲ್ಲಿ ಕುಂಭಾಂಡನೆಂಬ ಮಹಾಮಾತ್ಯಂ ದೈತ್ಯಪತಿಯ ಮೊಗಮಂ ನೋಡಿ

ಮೃಡನೊಸೆದೀಯೆ ನೀಂ ಪಡೆದ [1]ವಸ್ತುವದಾವುದೊ ದೈತ್ಯರಾಜ ನೀಂ
ಗಡಮಮರತ್ವಮಂ ಪಡೆದ ವಿಶ್ವಜಗತ್ರಿತಯಾಧಿಪತ್ಯಮಂ
ಪಡೆದ ಮಹಾಸ್ತ್ರಮಂ ಪಡೆದ ತಂದೆಗೆ ಬಂಧನಮೋಕ್ಷಮಪ್ಪುದಂ
[2]ಪಡೆದ ದಿಟಕ್ಕೆ ಪೇೞೆನೆ ದರಸ್ಮಿತನಾಗಿ ಬಲೀಂದ್ರನಂದನಂ ೮೯

ಎನಗಮರತ್ವಮುಂ ತ್ರಿಭುವನಾಧಿಪತಿತ್ವಮುಮುತ್ತಮಾಸ್ತ್ರಮುಂ
ಜನಕನ ಬಂಧಮೋಕ್ಷಣಮುಮೇಗಹನಂ ರಣವೆಂಬ ವಸ್ತುವೊಂ
ದನೆ ಪಡೆಯಲ್ ಮನಂಬಯಸಿ ಪೂಜಿಸಿದೆಂ ಧೃತಕಾಲಕೂಟನಂ
ಮನಸಿಜಘಸ್ಮರಾಂಬಕಲಲಾಟನನುಗ್ರಫಣೀಂದ್ರ ಜೂಟನಂ ೯೦

ವರವಿತ್ತಂ ಶಂಭು ದೇವಾಸುರಸಮರದ ರಾಮಾಯಣೋಗ್ರಾಹವಾಡಂ
ಬರದಂತಪ್ಪೊಂದು ಸಂಗ್ರಾಮಮನೆನಗೆನುತುಂ ಪರ್ಚಿದುತ್ಸಾಹದಿಂದಂ
ಶಿರದಿಂ ಮುಯ್ಯುದ್ದಮಾಗುತ್ತಿರೆ ಪುಳಕಚಯಂ ಪೊಣ್ಮೆ ವಕ್ತ್ರಾಬ್ಜದಿಂ ವೀ
ರರಸಂ ತುಳ್ಕಾಡೆ ಬೇೞೊಂದೆಸಕದಿನೆಸೆದಂ ಬಾಣದೈತ್ಯಾಧಿನಾಥಂ ೯೧

ಯುದ್ಧರಂಗವೆಂಬ ಹೂವಿನ ಕೊಳವನ್ನು ನಾನು ಎಂದು ವೀರರಸಪ್ರವಾಹದಿಂದ ತುಂಬಿ ಕಡೆಗೂಡಿ ಹರಿಸುವೆನೋ!" ವ॥ ಎಂದು ಬಾಣಾಸುರನು ಯುದ್ಧವನ್ನು ಬಯಸುವವನಾಗಿ ತನ್ನ ಉಪವನದಲ್ಲಿ ಬಂದು ನೆಲಸಿರುವ ಕಾಮಾರಿಯಾದ ಈಶ್ವರನನ್ನು ಆರಾಧಿಸಿ ತನ್ನ ಮಯೂರ ಧ್ವಜವು ಬಿದ್ದು ಅಪಶಕುನ (ಅಪಾಯ ಸೂಚಕ)ವಾದಾಗ ತನಗೆ ಬೇಕಾದ ಮಹಾಯುದ್ಧವು ಆಗುವುದು" ಎಂಬ ವರವನ್ನು (ಆ ದೇವನಿಂದ) ಪಡೆದು ಬಂದು ಅಲ್ಲಿ ಇರುತ್ತಿದ್ದನು. ಅದೊಂದು ಸಮಯದಲ್ಲಿ ಒಡ್ಡೋಲಗದಲ್ಲಿ ಇರುವಾಗ ಕುಂಭಾಂಡನೆಂಬ ಮಹಾಮಂತ್ರಿಯು ದೈತ್ಯಪತಿಯ ಮುಖವನ್ನು ನೋಡಿ. ೮೯. ಈಶ್ವರನು ಪ್ರಸನ್ನನಾಗಿ ವರವನ್ನು ಕೊಟ್ಟನಲ್ಲವೆ! ಅದರಿಂದ ನೀನು ಪಡೆದ ವಸ್ತುವಾವುದು ದೈತ್ಯರಾಜಾ! ಅಮರತ್ವವನ್ನು ಪಡೆದೆಯಾ? ಜಗತ್ರಯಾಧಿಪತ್ಯವನ್ನು ಪಡೆದೆಯಾ? ಮಹಾಸ್ತ್ರವನ್ನು ಪಡೆದೆಯಾ? ನಿಜವಾಗಿ ನಿನ್ನ ತಂದೆಗೆ ಬಂದ ಮೋಕ್ಷವಾಗುವ ವರವನ್ನು ಪಡೆದಿದ್ದೀಯಾ? ಹೇಳು ಎಂದನು. ಅದಕ್ಕೆ ಬಲಿಪುತ್ರನಾದ ಬಾಣಾಸುರನು ಮುಗುಳುನಗೆ ನಗುತ್ತಾ ೯೦. ನನಗೆ ಅಮರತ್ವವೂ ತ್ರಿಲೋಕಾಧಿಪತಿತ್ವವೂ ಉತ್ತಮಾಸ್ತ್ರವೂ ಜನಕನ ಬಂಧ ಮೋಕ್ಷಣವೂ ಏನು ಗಹನವೇ ಲೆಕ್ಕವೇ! ಯುದ್ಧವೆಂಬ ವಸ್ತುವೊಂದನ್ನು ಪಡೆಯುವುದಕ್ಕಾಗಿಯೇ ಮನಃಪೂರ್ವಕವಾಗಿ ಬಯಸಿ ಕಾಲಕೂಟಧರನೂ ಮನ್ಮಥನನ್ನು ಕಬಳಿಸಿದ ಹಣೆಗಣ್ಣಿನವನೂ ಕ್ರೂರ ಸರ್ಪರಾಜಾಲಂಕೃತ ಜಟಾಜೂಟನೂ ಆದ ಶಿವನನ್ನು ಪೂಜಿಸಿದೆನು. ೯೧. ಶಂಭುವು ನನಗೆ ದೇವಾಸುರ ಯುದ್ಧ ರಾಮಾಯಣದ ಉಗ್ರ ಯುದ್ಧಗಳ ಆಡಂಬರವುಳ್ಳ ಒಂದು ಯುದ್ಧವನ್ನು ವರವಾಗಿಯೇ ಪಾಲಿಸಿದನು ಎಂದನು.

---

೧. ವಸ್ತುವದೇವುದೊ (ಖ) ೨. ಪಡೆಯದಿದೇಕೆ (ಖ)

ವ|| ಆ ದೈತ್ಯವಂಶಭೂಷಣಂಗುಷಾದೇವಿಯೆಂಬ ಕನ್ಯಾರತ್ನಮುಂಟದೆಂತೆಂದೊಡೆ

ಕುರುಳೊಳ್ ಕರ್ಪು ಕಟಾಕ್ಷದೊಳ್ ತರಳಭಾವಂ ಪುರ್ಬಿನೊಳ್ ವಿಭ್ರಮಂ
ಕೊರಲೊಳ್ ರೇಖೆ ಕಪೋಲದೊಳ್ ಪೊಳೆಪು ತೋಳೊಳ್ ಕೋಮಲತ್ವಂ ಪಯೋ
ಧರದೊಳ್ ತುಂಗತೆ ಮಧ್ಯದೊಳ್ ಕೃಶತೆ ಮೆಯ್ಯೊಳ್ ಮಾರ್ದವಂ ರಂಜಿಸು
ತ್ತಿರೆ [1]ಬಾಣಾತ್ಮಜೆಯೊಪ್ಪಿದಳ್ ಮದನತೇಜೋಮೂರ್ತಿಯೆಂಬಂದದಿಂ ೯೨

ಮದನನ ಕೈದು ಕೂರ್ಪನೊಳಕೊಂಡುದೊ ಕಾಮನ ಕಲ್ಪವಲ್ಲಿ ಪೂ
ತುದೊ ಕುಸುಮಾಸ್ತ್ರರಾಜನ ಜಯಧ್ವಜಪಟ್ಟಿಕೆ ಚಿತ್ರಿಸಿತ್ತೊ ಹೃ
ತ್ಸದನನ ಪುಷ್ಪಚಾಪಲತೆ [2]ಪೂಗಣೆವೊಯ್ದುದೊ ಕಂತುದಂತಿ ಪ
ಣ್ಣಿದುದೊ ದಿಟಕ್ಕೆನಲ್ ಬಲಿಸುತಾತ್ಮಜೆ ಯೌವನದಿಂದಮೊಪ್ಪಿದಳ್ ೯೩

ವ|| ಅನ್ನೆಗಮಾ ಶೋಣಿತಪುರೋಪಾಂತದ ಗೋಮತೀನದಿಯ ಪರಿಸರಪ್ರದೇಶದೊಳ್

ಕಳಹಂಸೌಘವಿಹಾರಹಾರಿ ಪುಳಿನಂ ಕಂಜಾತಕಿಂಜಲ್ಕಪಾ
ಟಳನೀರಂ ಕೊಳನುನ್ಮದಾಳಿಮಿಳಿತಂ ಪುಷ್ಪದ್ರುಮಂ ರತ್ನಮಾಂ
ಸಳಕೂಟಂ ಕೃತಕಾದ್ರಿ ದಂಪತಿಯುತಂ ವಲ್ಲೀಗೃಹಂ ಪುಷ್ಪಪೇ
ಶಳಗಂಧಂ ಪವನಂ [3]ಮನಂಗೊಳಿಸಲೆರ್ಕುಂ ಶೂಲಿಲೀಲಾವನಂ ೯೪

ಅತ್ಯುತ್ಸಾಹದಿಂದ ತಲೆಗಿಂತಲೂ ಭುಜವೇ ಉದ್ದವಾಗುತ್ತಲೂ ರೋಮಾಂಚನವು ಹೊಮ್ಮುತ್ತಲೂ, ಮುಖಕಮಲದಿಂದ ವೀರರಸವು ತುಳುಕುತ್ತಲೂ ಇರುವಲ್ಲಿ ಮೊದಲಿಗಿಂತಲೂ ಬೇರೆಯ ಬಗೆಯವನಾಗಿ ಆತನು ಪ್ರಕಾಶಿಸಿದನು. ವ|| ಆ ರಾಕ್ಷಸ ವಂಶಭೂಷಣನಿಗೆ ಉಷಾದೇವಿಯೆಂಬ ಕನ್ಯಾರತ್ನವಿದ್ದಳು. ಅವಳು ಹೇಗಿದ್ದಾಳೆಂದರೆ ೯೨. ಆ ಉಷಾದೇವಿಯ ಕುರುಳು ಕಪ್ಪಾಗಿದ್ದಿತು. ಕಡೆಗಣ್ಣ ನೋಟದಲ್ಲಿ ಸರಳ ಭಾವವು ತೋರುತ್ತಿದ್ದಿತು. ಹುಬ್ಬಿನಲ್ಲಿ ಬೆಡಗೂ ಕೊರಳಿನಲ್ಲಿ ಗೆರೆಯೂ ಕಾಣಿಸುತ್ತಿದ್ದಿತು. ಕೆನ್ನೆ ಕನ್ನಡಿಯಂತೆ ಹೊಳೆಯುತ್ತಿದ್ದಿತು. ತೋಳುಗಳು ಕೋಮಲವಾಗಿದ್ದವು. ಸ್ತನಗಳು ಉನ್ನತವಾಗಿದ್ದವು. ನಡುವು ಕೃಶವಾಗಿದ್ದಿತು. ಮೈ ಮೆದುವಾಗಿದ್ದಿತು. ಈ ಲಕ್ಷಣಗಳಿಂದ ಒಪ್ಪುವ ಆ ಬಾಣಪುತ್ರಿ ಮನ್ಮಥನ ತೇಜೋಮೂರ್ತಿಯಂತೆ ಪ್ರಕಾಶಿಸುತ್ತಿದ್ದಳು. ೯೩. ಮನ್ಮಥನ ಆಯುಧವೇ ಹರಿತವಾಯಿತೋ ಕಾಮನ ಕಲ್ಪಲತೆಯೇ ಹೂವನ್ನು ಪಡೆಯಿತೋ ಪುಷ್ಪಾಸ್ತ್ರರಾಜನ ಜಯಧ್ವಜದ ಪಟ್ಟಿಯೇ ಈ ರೀತಿಯಾಗಿ ಚಿತ್ರಿಸಲ್ಪಟ್ಟಿತೋ ಮನಸಿಜ ಕಾಮನ ಹೂಬಿಲ್ಲೆಂಬ ಬಳ್ಳಿಯೇ ಈ ಪುಷ್ಪಬಾಣವನ್ನು ಪಡೆಯಿತೋ ಮನ್ಮಥ ಆನೆಯೇ ಈ ಬಗೆಯಾಗಿ ಅಲಂಕೃತವಾಗಿ ಸಿದ್ಧವಾಯಿತೋ ಎನ್ನುವಂತೆ ನಿಜವಾಗಿಯೂ ಬಾಣಪುತ್ರಿಯು ಯೌವನದಿಂದ ಪ್ರಕಾಶಿಸಿದಳು. ವ|| ಅಷ್ಟರಲ್ಲಿ ಆ ಶೋಣಿತಪುರದ ಸಮೀಪದ ಗೋಮತೀ ನದಿಯ ಹತ್ತಿರದ ಪ್ರದೇಶದಲ್ಲಿ ೯೪. ಈಶ್ವರನ ಲೀಲಾವನವು ಕಲಹಂಸಗಳು ವಿಹರಿಸುತ್ತಿರುವ ಮಳಲುದಿಣ್ಣೆಗಳಿಂದಲೂ ಕಮಲಪುಷ್ಪದ ಕೇಸರಗಳಿಂದ

೧. ಬಾಣಾತ್ಮಜೆ ರಂಜಿಪಳ್ ಮದನ ತೇಜಂ ಮೂರ್ತಿಗೊಂಡಂದದಿಂ (ಕಗ)
೨. ಪೂಗಣೆವಾಯ್ದುದೊ (ಖ) ೩. ಮನಂಗೊಳಿಸುತಿರ್ಕುಂ (ಕಗ)

ಸುರಚೂಡಾರತ್ನ ಬಾಲಾತಪದೊಡನಮರೀನೇತ್ರಚಂದ್ರಾತಪಂ ತ
ಳ್ತಿರೆ ಚಂಚಚ್ಚಾಮರೌಘಾನಿಲದೊಡನೆ ಸಹಾಧ್ಯಾಯಿಮಂದಾನಿಲಂ ಕೂ
ಡಿರೆ ಸಂಗೀತಪ್ರಕೋಲಾಹಲದೊಡನೆ ಮರುದ್ವಂದಿಕೋಲಾಹಲಂ ಪೆ
ರ್ಚಿರೆ ಚೆಲ್ವಾದತ್ತುಮಾವಲ್ಲಭನ ವನಮಹೀಮಧ್ಯದಾಸ್ಥಾನರಂಗಂ ೯೫

ವಿಳಸದ್ದೇವವಧೂನಿಕಾಯರಸವದ್ಗೇಯಂ ಮರುದ್ವಾದ್ಯಮಂ
ಜುಳನಾದಂ ಸುರಲಾಸಿಕಾಲಲಿತ[1]ವಾಸ್ಯಪ್ರಸ್ಖಲನ್ಮೇಖಲಾ
ಕಳಮಂಜೀರಕಶಿಂಜಿತಂ ನೆಗಳ್ವಿನಂ ಗೌರೀಶ ಲೀಲಸಭಾ
ವಳಯಂ ಭೋರ್ಗರೆಯುತ್ತುಮಿರ್ದುದನದತ್ವೀಯೂಷವಾರಾಶಿವೋಲ್ ೯೬

ವ|| ತದನಂತರಂ

ಗಿರಿಜೆಯ ವೇಷಮಂ ತಳೆದುಮೇಶನ ಮುಂತಿರೆ ಚಿತ್ರಲೇಖೆ ತ
ತ್ಪುರಹರನಾಕೆಯಂ ಗಿರಿಜೆಯೆಂದು ಮನೋಮುದದಿಂ ನಿರೀಕ್ಷಿಸು
ತ್ತಿರಲದನಟ್ಟಿಜಿಂ ಗಿರಿಜೆ ಕಂಡು ನಿಜೇಶನ ಮುಗ್ಧಭಾವವ
ಲ್ಲರಿಗೆ [2]ನಿಜಾಪಹಾಸರುಚಿಯಿಂ ಪಡೆದಳ್ ಕುಸುಮಪ್ರತಾನಮಂ ೯೭

ವ|| ಅದಂ ಕಂಡು ಖಂಡೇಂದುಚೂಡಾಮಣಿಯ ಪಾರ್ಶ್ವದೊಳಿರ್ದ ಪಾರ್ಶ್ವವರ್ತಿಗಳಿಟ್ಟು

ಪಾದರಿ ಹೂವಿನ ಬಣ್ಣವುಳ್ಳ ನೀರಿನ ಕೊಳಗಳಿಂದಲೂ ಕೊಬ್ಬಿದ ತುಂಬಿಗಳು ಮುತ್ತುತ್ತಿರುವ ಹೂವಿನ ಮರಗಳಿಂದಲೂ ರತ್ನಖಚಿತವಾದ ಶಿಖರಗಳ ಕೃತಕ ಗಿರಿಗಳಿಂದಲೂ ದಂಪತಿಗಳಿರುವ ಲತಾಗೃಹಗಳಿಂದಲೂ ಮನೋಹರವಾದ ಸುಗಂಧಯುತವಾದ ಗಾಳಿಯಿಂದಲೂ ಚೆನ್ನಾಗಿದ್ದಿತು. ೯೫. ಉಮಾವಲ್ಲಭನ ಲೀಲಾವನದ ಮಧ್ಯದ ಆಸ್ಥಾನ ರಂಗವು-ದೇವತೆಗಳ ಶಿರೋರತ್ನಗಳ ಎಳೆಬಿಸಿಲಿನೊಡನೆ ದೇವವನಿತೆಯರ ನೇತ್ರ ಕಾಂತಿಯೆಂಬ ಬೆಳುದಿಂಗಳು ಚೆನ್ನಾಗಿ ಹೊಳೆಯುವ ಚಾಮರಗಳ ಗಾಳಿಯೊಡನೆ ಜೊತೆಗಾರ ಮಂದಮಾರುತವೂ ಸಂಗೀತ ಶಬ್ದದೊಡನೆ ದೇವಸ್ತುತಿಪಾಠಕರ ಕೋಲಾಹಲವೂ ಸೇರಿ ಹೆಚ್ಚುತ್ತಿರಲು ಚೆಲುವಾಗಿದ್ದಿತು. ೯೬. ಶೋಭಾನ್ವಿತರಾದ ದೇವವನಿತೆಯರ ಗಾನವೂ ದೇವತೆಗಳ ವಾದ್ಯಗಳ ಮನೋಹರ ಧ್ವನಿಯೂ ಅಪ್ಸರೆಯರ ನರ್ತನ ಲಲಿತವಾದ್ಯವೂ ಅವರ ನಡುವಿನಿಂದ ಜಾರುವ ವಡ್ಯಾಣದ ಗೆಜ್ಜೆಯ ಇಂಪಾದ ಶಬ್ದವೂ ಕಾಲುಬಳೆಗಳ ಝುಣತ್ಕಾರವೂ ಹೆಚ್ಚುತ್ತಿರಲು ಆ ಗೌರೀಲೀಲಾ ಸಭಾಮಂಡಲವು ಕ್ಷೀರಸಮುದ್ರದಂತೆ ಭೋರ್ಗರೆಯುತ್ತಿದ್ದಿತು. ವ|| ಆಮೇಲೆ ೯೭. ಪಾರ್ವತಿಗೆ ಬೇಕಾದವಳಾದ ಚಿತ್ರಲೇಖೆಯೆಂಬವಳು ವಿನೋದಕ್ಕಾಗಿ ಪಾರ್ವತಿಯ ವೇಷವನ್ನು ಧರಿಸಿ ಈಶ್ವರನ ಮುಂದೆ ನಿಂತಿದ್ದಳು. ಈಶ್ವರನು ಅವಳನ್ನು ಪಾರ್ವತಿಯೆಂದೇ ಭಾವಿಸಿ ಮನಸ್ಸಂತೋಷದಿಂದ ನೋಡುತ್ತಿದ್ದನು. ಅದನ್ನು ಅಕ್ಕರೆಯಿಂದ ನೋಡಿದ ಪಾರ್ವತಿಯು ತನ್ನ ಪತಿಯ ಮುಗ್ಧಭಾವವೆಂಬ ಬಳ್ಳಿಗೆ ತನ್ನ ಅಪಹಾಸನವೆಂಬ ಹೂವನ್ನು ಉಂಟುಮಾಡಿದಳು. ಹಾಸ್ಯಮಾಡಿ ನಕ್ಕಳು. ವ|| ಅದನ್ನು ಕಂಡ ಚಂದ್ರಶೇಖರನ

---

೧. ಲಾಸ್ಯಪ್ರೇಂಖಲಾಮೇಖಲಾ (ಗ) ೨. ನಿಜೋಪಹಾ ಸುರುಚಿಯಿಂ ಪಡೆದಳ್ ಕುಸುಮಾಸ್ತ್ರತಾನಮಂ (ಕಗ)

ಗಿರಿಸುತೆ ಚುನ್ನವಾಡಿ ನಗುತಿರ್ದಪಳೀಶನ ಮುಗ್ಧವೃತ್ತಿಗೀ
ಗಿರಿಜೆಗೆ ಮುಗ್ಧಭಾವಮನೊಡರ್ಚುವಮೆಂದಿರದೀಶಚಿಹ್ನಮಂ
ಧರಿಯಿಸಿ ನಿಂದರಂ ಪ್ರಮಥರೆಂದಱಿದದ್ರಿಜೆ ಸಸ್ಮಿತಾಸ್ಯೆಯಾ
ಗಿರಲೆಲೆ ದೇವಿ ಗೆಲ್ದಳೆನುತುಂ ನಲಿದಾಡಿದುದಪ್ಸರೋಗಣಂ ೯೮

ವ॥ ಅಂತುಮಲ್ಲದೆಯುಂ

ಬನದೊಳ್ ಮೆಱೆಯುತ್ತಿರ್ದಂ
ಬಿನದಮನೋರಂತನೇಕವಿಧದಿಂದಗನಂ
ದನೆಗಭವಂ ನಿತ್ಯಾನಂ
ದನನಾನಂದಸ್ವರೂಪನಾನಂದಮಯಂ ೯೯

ವ॥ ಆ ಸಮಯದೊಳ್ ಕತಿಪಯ ಸಖೀಜನಸಮನ್ವಿತೆಯಾಗಿ

ಕನ್ನೆಯಿನೀ ವನಕ್ಕೆ [೧]ಮಧುಲಕ್ಷ್ಮಿಯಿನಾಗದಲಕ್ಷ್ಮಿಯಾದುದೆಂ
ಬನ್ನೆವರಂ ವಿಳಾಸರಸದಿಂ ಪರಿವರ್ಧಿಸುತುಂ ವನಾಳಿಯಂ
ತನ್ನ ವನಾಂತರಾಂತರದ ಕೞ್ತಲೆಯಂ ಬೆದಱಟ್ಟುತುಂ ವಿಲೋ
ಲನ್ನಯನಾಂಶುವಿಂ ದನುಜನಂದನೆ ಬಂದಳದೊಂದು ಲೀಲೆಯಿಂ ೧೦೦

ವ॥ ಅಂತಾ ಪ್ರದೇಶದೊಳ್

ರಾಗದಿನಾಡುವೀ ಹರನ ರಾಗದ ಪೊಂಪುಳಿ ವಸ್ತ್ರದೊಂದು ರೂ
ಪಾಗಿಯೆ ನಿಂದುದೆಂಬರುಣವಸ್ತ್ರದಿನುಜ್ಜ್ವಲದೇಹವಂದು ಚೆ
ಲ್ವಾಗಿರೆ ಸಾಂಧ್ಯಮೇಘಪಟಳೀಪರಿವೇಷ್ಟಿತರಾಜತಾಚಳಾ
ಭೋಗಮೆನಲ್ ವಿರಾಜಿಸುವ ಶಂಕರನಂ ಹರಿಣಾಕ್ಷಿ ನೋಡಿದಳ್ ೧೦೧

ಪಾರ್ಶ್ವದಲ್ಲಿದ್ದವರು ಒಬ್ಬ ಪ್ರಮಥನಿಗೆ ಈಶ್ವರನ ೯೮. ವೇಷವನ್ನು ಹಾಕಿ ಈಶ್ವರನನ್ನು ಬೇರೆಡೆಯಲ್ಲಿ ನಿಲ್ಲಿಸಿ ಅವನ ಸ್ಥಾನದಲ್ಲಿ ನಿಲ್ಲಿಸಿದರು. ಪಾರ್ವತಿಯೂ ನೋಡುವಂತೆ ಮಾಡಿದರು. ಅವಳನ್ನು ಭ್ರಾಂತಿಗೊಳಿಸಿ ನಗಬೇಕೆಂದಿದ್ದರು. ಆದರೆ ಆ ವೇಷಧಾರಿಯನ್ನು ಪ್ರಮಥನೆಂದೇ ತಿಳಿದು ಮುಗುಳುನಗೆ ನಕ್ಕಳು. ಆಗ ಅಪ್ಸರೋಗಣವು ಪಾರ್ವತೀದೇವಿಯು ಗೆದ್ದಳೆಂದು ನಲಿದಾಡಿತು. ವ॥ ಅದೂ ಅಲ್ಲದೆ ೯೯. ನಿತ್ಯಾನಂದನೂ ಆನಂದಸ್ವರೂಪನೂ ಆನಂದಮಯನೂ ಆದ ಈಶ್ವರನು ಪಾರ್ವತಿಗೆ ಆ ವನದಲ್ಲಿ ಅನೇಕ ವಿಧದಿಂದ ವಿನೋದವನ್ನು ತೋರುತ್ತಿದ್ದನು. ವ॥ ಆ ಸಮಯದಲ್ಲಿ ಕೆಲವರು ಗೆಳತಿಯರೊಡನೆ (ಬಾಣಪುತ್ರಿ ಉಷೆ ಬಂದಳು.) ೧೦೦. ಈ ಕನ್ಯೆಯಿಂದ ಈ ವನಕ್ಕೆ ವಸಂತ ಲಕ್ಷ್ಮಿಯಿಂದಲೂ ಆಗದಷ್ಟು ಕ್ರಾಂತಿಯು ಆಯಿತು ಎನ್ನುವಷ್ಟು ಮಟ್ಟಿಗೆ ತನ್ನ ವಿಳಾಸರಸದಿಂದ ವರ್ಧಿಸಿ ಅವನ ಪ್ರಜ್ಞೆಯನ್ನೂ ಆ ವನದ ಕಳೆಯನ್ನೂ ಹೆಚ್ಚಿಸಿದಳು. ತನ್ನ ನೇತ್ರಕಾಂತಿಯಿಂದ ಒಳಗಿದ್ದ ಕತ್ತಲೆಯನ್ನು ಬೆದರಟ್ಟಿದಳು. ಹೀಗೆ ಲೀಲೆಯಿಂದಿದ್ದಳು. ವ॥ ಆ ಪ್ರದೇಶದಲ್ಲಿ ೧೦೧. ಪ್ರೀತ್ಯಾಸಕ್ತಿಗಳಿಂದ ಕ್ರೀಡಿಸುತ್ತಿದ್ದ ಈಶ್ವರನ ರಾಗದ ರೋಮಾಂಚನವೇ ವಸ್ತ್ರದ ರೂಪವನ್ನು ಪಡೆದು ಅವನ ಮೈಮೇಲೆ ನಿಂತಿದೆಯೆಂಬಂತೆ

೧. ಮಧುಲಕ್ಷ್ಮಿಯಿನಗ್ಗದ (ಕಗ)

ವ|| ಮತ್ತಮಲ್ಲಿ

ಶಿತಿಕಂಠಂ ತನಗಲ್ಕಱಿಂ ಮೆಱೆವ ನಾನಾಕ್ರೀಡೆಯಂ ಕೂಡೆ ನೋ
ಡುತುಮಾನಂದರಸಾಮೃತಾರ್ಣವದಳೋಲಾಡುತ್ತುಮಿರ್ದಾಕುಭೃ
ತ್ಸುತೆಯಂ ಭಕ್ತಜನೈಕಕಲ್ಪಲತೆಯಂ ವೃಂದಾರಕವ್ರಾತವಂ
ದಿತೆಯಂ ಕಂಡಸುರೇಂದ್ರಕನ್ಯೆ ಕೆಲದೊಳ್ ಕುಳ್ಳಿರ್ದಳುತ್ಸಾಹದಿಂ ೧೦೨

ವ|| ಅಂತುಮಾಕಾಂತೆಯಂತಿಕದೊಳ್ ಕುಳ್ಳಿರ್ದು

ಇಂತು ನಿಜಪ್ರಿಯಂ ಮೆಱೆವ ಲೀಲೆಯನೀಕ್ಷಿಸುವೊಂದು ಸೈಪನೆಂ
ದಾಂ ತಳೆದಪ್ಪೆನೆಂದುಷೆ ಮಹೇಶ್ವರಲೀಲೆಯನೀಕ್ಷಿಪದ್ರಿಜಾ
ಕಾಂತೆಯನೊಲ್ದು ನೋಡುವುದುಮಾಕೆಯ ನೋಡುವ ಪಾಂಗನೊಂದು ಪಾಂ
ಗಿಂ ತಿಳಿದಳ್ ತದದ್ರಿಸುತೆ ಕಾಂತೆ ವರಾರ್ಥಿನಿಯಾದಳೆಂಬುದಂ ೧೦೩

ವ|| ಅಂತು ಚಿತ್ತಜ್ಞೆ ಕುಭೃತ್ತನೂಜೆ ನಿರ್ನಿಮಿತ್ತ ಪ್ರಸಾದಾಭಿಮುಖಿಯಾಗಿ

ಅದಟಿಂದಾಕಾರದಿಂ ವೈಭವನೆನೆಣೆ ಸಮಂ ಸಾಟಿಯಲ್ತೀ ತ್ರಿಣೇತ್ರಂ
ಮದನಂ ದೇವೇಂದ್ರನೆಂಬಂತೆಸೆವಖಿಲಗುಣಾಲಂಕೃತಂ ಬಂದು ವೈಶಾ
ಖದ ಶುದ್ಧದ್ವಾದಶೀರಾತ್ರಿಯೊಳನುಭವಿಕ್ಕುಂ ಕನ್ನೆ ನಿನ್ನೊಳ್ ಮನೋ[1]ರಾ
ಗದಿನೊರ್ವಂ ಸ್ವಪ್ನದೊಳ್ ತತ್ಸುಭಗನೆ ನಿನಗಕ್ಕುಂ ವರಂ ಪೋಗಮೋಘಂ ೧೦೪

ಕೆಂಪು ಬಣ್ಣದ ವಸ್ತ್ರವನ್ನು ಧರಿಸಿ ಹೊಳೆಯುವ ಈಶ್ವರನು-ಸಂಧ್ಯಾಕಾಲದ ಮೋಡಗಳ ಗುಂಪಿನಿಂದ ಆವೃತವಾದ ಬೆಳ್ಳಿಯ ಬೆಟ್ಟದಂತೆ ಕಾಣಿಸುತ್ತಿದ್ದನು. ಆ ಹರಿಣಾಕ್ಷಿ ಉಷೆ ಶಿವನನ್ನು ನೋಡಿದಳು. ಮತ್ತೂ ಅಲ್ಲಿ ೧೦೨. ಈಶ್ವರನು ತನಗೆ ಅಕ್ಕರೆಯಿಂದ ತೋರಿಸುವ ನಾನಾ ಬಗೆಯ ಆಟಗಳನ್ನು ನೋಡುತ್ತ ಆನಂದ ರಸಸಾಗರದಲ್ಲಿ ಓಲಾಡುತ್ತಿರುವ, ಭಕ್ತ ಜನರಿಗೆ ಒಂದು ಕಲ್ಪವೃಕ್ಷವಲ್ಲಿಯಾಗಿರುವ ದೇವಸಮೂಹ ವಂದಿತೆಯಾದ ಪಾರ್ವತೀದೇವಿಯನ್ನು ನೋಡಿದ ಆ ಬಾಣಪುತ್ರಿ ಉಷೆ-ಅತ್ಯುತ್ಸಾಹದಿಂದ ಆ ದೇವಿಯ ಪಕ್ಕದಲ್ಲಿ ಕುಳಿತುಕೊಂಡಳು. ವ|| ಹಾಗೆ ಆ ಮಹಾದೇವಿಯ ಸಮೀಪದಲ್ಲಿ ಕುಳಿತುಕೊಂಡು ೧೦೩. ಮಹೇಶ್ವರನ ಲೀಲೆಯನ್ನು ಆಸಕ್ತಿಯಿಂದ ನೋಡುತ್ತಿದ್ದ ಪಾರ್ವತೀ ದೇವಿಯನ್ನು ಕಂಡ ಉಷೆಯು-ಹೀಗೆ ನನ್ನ ಪ್ರಿಯನು ತೋರಿಸುವ ಲೀಲೆಯನ್ನು ನಾನು ನೋಡುವ ಭಾಗ್ಯವನ್ನು ಎಂದು ಪಡೆಯುವೆನೋ ಎಂದುಕೊಂಡು ಪಾರ್ವತೀದೇವಿಯ ಮುಖವನ್ನು ಪ್ರೀತಿಯಿಂದ ನೋಡಿದಳು. ಆ ದೇವಿಯು ಉಷೆಯು ತನ್ನನ್ನು ನೋಡುತ್ತಿರುವ ರೀತಿಯಿಂದಲೇ ಅವಳು ವರನನ್ನು ಬಯಸುತ್ತಿರುವಳೆಂದು ತಿಳಿದುಕೊಂಡಳು. ವ|| ಚಿತ್ತಜ್ಞಳಾದ ಪಾರ್ವತೀದೇವಿ ನಿಷ್ಕಾರಣ ಪ್ರಸಾದಾಭಿಮುಖಿಯಾಗಿ ೧೦೪. "ಕನ್ನೇ! ಪರಾಕ್ರಮದಲ್ಲಿ ಈ ತ್ರಿಣೇತ್ರನೂ ರೂಪದಲ್ಲಿ ಮನ್ಮಥನೂ ವೈಭವದಲ್ಲಿ ದೇವೇಂದ್ರನೂ ಸಮಾನನಾಗಲಾರನು ಎನ್ನುವಂತೆ ಪ್ರಕಾಶಿಸುವ ಸಕಲ ಗುಣಾಲಂಕೃತನಾದ ಯುವಕನೊಬ್ಬನು ತಾನಾಗಿ ಕನಸಿನಲ್ಲಿ

---

೧. ರಾಗದೆ ನೋಡಲ್ ಸ್ವಪ್ನದಿಂತತ್ಸುಭಗನವನೆನಿಕ್ಕುಂ (ಕಗ)

ವ|| ಎಂದು ವರಂಗೊಟ್ಟು ಕಳುಪೆ

ಭುವನಾಂಬಿಕೆ ಕೊಟ್ಟೀ ವರ
ಮವಿತಥವೆಂಬೊಂದು ಚಿತ್ರಲೇಖೆಯ ನಿನದಂ
ಕಿವಿಗೆಯ್ದೆ ಮೇಘಲೇಖೆಯ
ರವಮಂ ಕೇಳ್ದೊಂದು ಸೋಗೆಯಂತುಷೆ ನಲಿದಳ್ ೧೦೫

ವ|| ಅಂತು ಸಂತೋಷದಿಂದುಷೆ ಪೊಟಿಲ್ಗೆ ವಂದು ತಂದೆಯ ರಾಜಮಂದಿರದೊಳಗಣ ತನ್ನ ಕನ್ನೆಮಾಡದೋವರಿಯೊಳೊಂದುದೆವಸಂ ಬೆಳ್ವಸದನಂಗೊಂಡು ಸುಖಸುಪ್ತೆಯಾಗಿರೆ

ಲಲಿತಾಕಾರಂ ವಿಲಾಸಂ ವಿಭವಮೆಸೆಯೆ ದಿಕ್ಚಕ್ರಮಂ ತೇಜದಿಂದಂ
ಬೆಳಗುತ್ತುಂ ಬಂದು ಬಾಣಾಸುರನರಮನೆಯಂ ಪೊಕ್ಕು ಹರ್ಮ್ಯಸ್ಥೆಯಾಗಿ
ರ್ದಳ ರೂಪಂ ಕಂಡು ಕನ್ಯಾವ್ರತವಟಿದಪುದೆಂದೊಲ್ಲದಂತೋಲ್ಮೆಯಂತೋ
ರ್ಪಳೊಳಾಗಳ್ ಕೂಡಿದಂ ಸ್ವಪ್ನದೊಳೆಸೆದನಿರುದ್ಧಂ ಮನೋರಾಗುರುದ್ಧಂ ೧೦೬

ವ|| ತದನಂತರಂ

ಚಪಲಾಪಾಂಗೆ ಕುಮಾರಕಂ ನೆರೆದು ತನ್ನೊಳ್ ಪೋಗೆ ಮಾಃಕೆತ್ತವೋ
ದಪೆ ಮದ್ವಲ್ಲಭಯೆತ್ತವೋದಪೆಯೆನುತ್ತೆಚ್ಚತ್ತದೇನಾರನೆಂ
ದಪೆಯೆಂದಾಳಿಯರಾಳಿಗೊಂಡು ನಗಲೇವೆಂ ಕೆಟ್ಟುದೀ ಕನ್ಯಕಾ
ತಪವೆಂದಾ ಕನಸೆಂದೊಡಂ ನನಸೆನುತ್ತಾಂತಳ್ ಮಹಾಚಿಂತೆಯಂ ೧೦೭

ಬಂದು ವೈಶಾಖ ಶುದ್ಧ ದ್ವಾದಶಿಯ ದಿನ ರಾತ್ರೆ ಪುನಃ ಪ್ರೀತಿಯಿಂದ ನಿನ್ನನ್ನು ಕೂಡಿ ಅನುಭವಿಸುವನು. ಆ ಸುಂದರನೇ ನಿಜವಾಗಿಯೂ ನಿನಗೆ ವರನಾಗುವನು, ಹೋಗು!" ವ|| ಎಂದು ವರವನ್ನು ಕೊಟ್ಟು ಕಳುಹಿಸಿದಳು. ೧೦೫. ಭುವನಾಂಬಿಕೆ ಕೊಟ್ಟ ಈ ವರವು ಸತ್ಯವಾದುದು ಎಂದು ಚಿತ್ರಲೇಖೆಯೂ ಹೇಳಿದಳು. ಆ ಮಾತು ಕಿವಿಗೆ ಬೀಳುತ್ತಲೂ ಉಷೆ ಗುಡುಗನ್ನು ಕೇಳಿದ ಗಂಡುನವಿಲಿನಂತೆ ನಲಿದಳು. ವ|| ಹಾಗೆ ಸಂತೋಷದಿಂದ ಪಟ್ಟಣಕ್ಕೆ ಬಂದು ತಂದೆಯ ಅರಮನೆಯೊಳಗಿನ ತನ್ನ ಕನ್ಯಾಸೌಧದ ಒಂದು ಕೋಣೆಯಲ್ಲಿ ಒಂದುದಿನ ಬಿಳಿಯ ಅಲಂಕಾರವನ್ನು ಮಾಡಿಕೊಂಡು ಸುಖದಿಂದ ನಿದ್ದೆ ಮಾಡುತ್ತಿದ್ದಳು. ೧೦೬. ಲಲಿತವಾದ ಆಕಾರ ವಿಲಾಸ ವೈಭವಗಳುಳ್ಳ ಅನಿರುದ್ಧನು, ತನ್ನ ತೇಜಸ್ಸಿನಿಂದ ದಿಙ್ಮಂಡಲವನ್ನು ಪ್ರಕಾಶಗೊಳಿಸುತ್ತ ಬಂದು ಬಾಣಾಸುರನ ಅರಮನೆಯನ್ನು ಹೊಕ್ಕನು. ಉಪ್ಪರಿಗೆಯ ಮೇಲಿದ್ದ ಉಷೆಯ ರೂಪವನ್ನು ಕಂಡು ಮನೋರಾಗದಿಂದ ಬದ್ಧನಾದನು. ಉಷೆಯು ನನ್ನ ಕನ್ಯಾವ್ರತಕ್ಕೆ ಭಂಗವಾಗುವುದು ಬೇಡ ಎಂದು ಒಲ್ಲದಂತೆ ಬಾಯಲ್ಲಿ ಹೇಳುತ್ತ ಪ್ರೀತಿಯನ್ನು ತೋರಿಸಿದ ಆಕೆಯೊಡನೆ ಸ್ವಪ್ನದಲ್ಲೇ ಅನುರಾಗದಿಂದ ಕೂಡಿದನು. ವ|| ಆಮೇಲೆ ೧೦೭. ಅನಿರುದ್ಧನು ತನ್ನೊಡನೆ ಸೇರಿ, ಅನಂತರ ಹೊರಡಲು ಉಷೆ "ಬಿಡು, ನಿಲ್ಲು ಎಲ್ಲಿ ಹೋಗುವೆ?" ಎಂದು ಹೇಳಿ, ಎಚ್ಚರಗೊಂಡಳು. "ಇದೇನು? ಯಾರಿಗೆ ಹೀಗೆ ಹೇಳುತ್ತಿದ್ದೀಯೆ?" ಎಂದು ಸಖಿಯರು ಹಾಸ್ಯ ಮಾಡಿ ನಕ್ಕರು. ಉಷೆ ಅದು ಕನಸಾದರೂ ನನಸು ಎಂದೇ ತಿಳಿದು ಏನು

ವ|| ಆ ಸಮಯದೊಳ್

ಇವಳೀ ರೂಪಿವಳೀ ವಿಳಾಸಮಿವಳೀ ಚಲ್ವೆಂದಿನಂತಲ್ಲವಿಂ
ದಿವಳಂದಂ ಪೊಸತಾದುದೀ ತರುಣಿಯೊಳ್ ರೋಮೋದ್ಗಮಂ ಸ್ವೇದಬಿಂ
ದುವಪಾಂಗಾರುಣಿಮಂ ಘನೋರುಬಲನಂ ಪೇೞೀತಱಿಂದಾಯ್ತೊ ಚಿ
ತ್ರವೆನುತ್ತುಂ ಸಖಿಯರ್ ನಿರೀಕ್ಷಿಸಿದರಾ ಸಂಭೋಗಚಿಹ್ನಾಂಗಿಯಂ ೧೦೮

ವ|| ಅಂತು ನೋಡುವ ಮೇಳದಾಳಿಯರ ಮೊಗಮಂ ನೋಡಿ

ಎನ್ನಭಿಮಾನವೆನ್ನ ಜಸವೆನ್ನ ಕುಲೋನ್ನತಿ ಕೆಟ್ಟುದೆನ್ನೊಳೊ
ರ್ವನ್ನೆರೆದೀಗ ಪೋದನಿದು ಲೋಕವಿರುದ್ಧಮೆನುತ್ತೆ ಕಣ್ಣನೀ
ರನ್ನಳಿನಾಕ್ಷಿ ಸೂಸೆ ಕನಸಿಂ ನೆರೆದಿಂತಿದು ದೋಷಮಲ್ತು ನೀಂ
ಕನ್ನೆ ಸುಬಾಷ್ಪೆಯಾಗಿರದಿರೆಂದುಷೆಯಂ ನುಡಿದರ್ ವಿದಗ್ಧೆಯರ್ ೧೦೯

ವ|| ಆಗಳಾ ಕುಂಭಾಂಡನ ಮಗಳಪ್ಪ ಚಿತ್ರಲೇಖೆಯೆಂಬ ಕೆಳದಿ

ನೆನೆ ನೀಂ ಚಿತ್ತದೊಳಾಂ ಜಲಕ್ಕನಱಿದೆಂ ಸರ್ವರ್ತುಕೋದ್ಯಾನದೊಳ್
ನಿನಗೇನೆಂದುಮೆಯೆಂದಳೆಂದ ತೆಱದಿಂದಾ ಮಾಸವಾ ಜೊನ್ನವಾ
ದಿನವಾ ರಾತ್ರಿಯುಮಾದುದಂತೆ ಕನಸಿಂ ನೀನೊರ್ವನೊಳ್ [1]ಕೂಡಿತಂ
ವನಜಾತಾನನೆ ಕಂಡೆ ತಪ್ಪುಗುಮೆ ಗೌರೀವಾಕ್ಯಮೀ ಲೋಕದೊಳ್ ೧೧೦

ಮಾಡಲಿ! ಕನ್ಯಾವ್ರತವು ಕೆಟ್ಟುಹೋಯಿತು ಎಂದುಕೊಳ್ಳುತ್ತ ಮಹಾ ಚಿಂತೆಯುಳ್ಳವಳಾದಳು. ವ|| ಆ ಸಮಯದಲ್ಲಿ ೧೦೮. ಅವಳ ಸಖಿಯರು- "ಇವಳ ರೂಪವೂ ವಿಳಾಸವೂ ಚೆಲುವೂ ಎಂದಿನಂತಿಲ್ಲ. ಇಂದು ಇವಳ ಅಂದವು ಹೊಸದಾಗಿದೆ. ಈ ಪರಿಯಲ್ಲಿ ರೋಮಾಂಚನವೂ ಬೆವರುಹನಿಯೂ ಕಡೆಗಣ್ಣಿನ ಕೆಂಪೂ ತೊಡೆಗಳ ನಡುಕವೂ ಹೇಗಾಯಿತು? ವಿಚಿತ್ರವಾಗಿದೆ." ಎನ್ನುತ್ತ ಸಂಭೋಗಚಿಹ್ನೆಯಿಂದ ಕೂಡಿರುವ ಆ ಉಷೆಯನ್ನು ಗಮನವಿಟ್ಟು ನೋಡಿದರು. ವ|| ಹಾಗೆ ನೋಡಿದ ತನ್ನ ಪ್ರಿಯಸಖಿಯರ ಮುಖವನ್ನು ನೋಡಿ, ೧೦೯. "ನನ್ನ ಅಭಿಮಾನವೂ ನನ್ನ ಯಶಸ್ಸೂ ನನ್ನ ಕುಲೋನ್ನತಿಯೂ ಕೆಟ್ಟುಹೋಯಿತು. ಯಾರೊ ಒಬ್ಬನು ನನ್ನೊಡನೆ ಸೇರಿದ್ದು ಹೊರಟು ಹೋದನು ಇದು ಲೋಕವಿರುದ್ಧ"- ಎನ್ನುತ್ತ ಕಣ್ಣೀರನ್ನು ಸುರಿಸಿದಳು. ವಿದ್ಯಾವತಿಯರಾದ ಸಖಿಯರು "ಕನಸ್ಸಿನಲ್ಲಿ ಸೇರಿದ ಇದು ದೋಷವಲ್ಲ. ನೀನು ಕನ್ಯೆಯೇ ಆಗಿದ್ದೀಯೆ. ಕಣ್ಣೀರು ಬಿಡಬೇಡ" ಎಂದು ಸಂತೈಸಿದರು. ವ|| ಆಗ ಆ ಕುಂಭಾಂಡನ ಮಗಳಾದ ಚಿತ್ರಲೇಖೆಯೆಂಬ ಗೆಳತಿ - ೧೧೦. "ನೀನು ನಿನ್ನ ಮನಸ್ಸಿನಲ್ಲಿ ಜ್ಞಾಪಿಸಿಕೊ! ನನಗೆ ತಟ್ಟನೆ ತಿಳಿಯಿತು. ಸರ್ವರ್ತುಕೋದ್ಯಾನದಲ್ಲಿ ಪಾರ್ವತೀದೇವಿಯು ನಿನಗೆ ಹೇಗೆ ಹೇಳಿದಳೋ ಹಾಗೆಯೇ ಅದೇ ಮಾಸ, ಶುಕ್ಲಪಕ್ಷ ಅದೇ ದ್ವಾದಶೀ ದಿನ ರಾತ್ರಿ ಆಗಿರುವಲ್ಲಿ, ನೀನು ಕನಸಿನಲ್ಲಿ ನಿನ್ನ ವರನಾಗುವವನೊಡನೆ ಕೂಡಿದುದನ್ನು ಕಂಡೆ, ಕಮಲಮುಖೀ,

---

೧. ಕೂಡಿದಂ (ಖ)

ಎನೆ ತತ್ಪ್ರಪಂಚಮಂ ಮಾ
ನಿನಿ ಮನದೊಳ್ ತಿಳಿದು ನೋಡಿ ಬಟಿಕಂ ನೆನೆದಳ್
ಕನಸಿಂ ನೆರೆದಾತನ ಯೌ
ವನ ರೂಪವಿಳಾಸವಿಭ್ರಮಂಗಳನೊಲವಿಂ ೧೧೧

ಕನಸಿಂ ನೆರೆದವನಂ ನೀಂ
ನೆನಸಿಂ ನೆರೆದಪ್ಪೆನೆಂದು ತರವೇಟ್ಟಪೆ ಕಾಂ
ತನನಘಟಿತಮಿದು ಬಗೆವೊಡೆ
ಕನಸಿನ ಬತ್ತಕ್ಕೆ ಗೋಣಿಯಾಂತವರೊಳರೇ ೧೧೨

ವ|| ಅಂತು ನೆನೆನೆನೆದಂಗಜದಹನಪರಿತಾಪದುಜ್ಜುಗಂ ಲಜ್ಜಾರಸಮನಟ್ಟಾಡಿಸೆ ಕನ್ನೆ ತನ್ನೊಳಾತನಂ ತಂದು ನೆರೆಪುವುದೆಂದು ಚಿತ್ರಲೇಖೆಗೆ ನುಡಿಯಲಾಕೆಯುಂ ಚರಹಸಿತ ವದನೆಯಾಗಿ

ಆರ ಮಗನಾರ ಮೊಮ್ಮನ
ದಾರೊಡವುಟ್ಟಿದನದಾರ ಗೋತ್ರದವಂ ಪೇ
ಬಾರೊಳಗೆಂದಱಿಯದೆ ರತ
ಚೋರನನಾನೆಂತು ತಂದು ನೆರೆಪುವೆನಬಲೇ ೧೧೩

ವ|| ಎಂಬುದುಮಳುಂಬಮಾದ ವೇದನೆಯಿಂದವಸ್ಥಾಂತರಮನೆಯ್ದುವ ರಮಣಿಯಂ ಕಂಡು ಕರುಣಾರಸಾರ್ದ್ರಹೃದಯೆಯಾಗಿ

ಈ ಲೋಕದಲ್ಲಿ ಗೌರಿಯ ವಾಕ್ಯವು ತಪ್ಪುವುದೆ?!" ೧೧೧. ಎಂದು ಚಿತ್ರಲೇಖೆಯು ಹೇಳಿ ಜ್ಞಾಪಿಸಿದಾಗ ಆ ಪ್ರಪಂಚವನ್ನು ಮನಸ್ಸಿನಲ್ಲೇ ನೋಡಿ, ಆಮೇಲೆ ಕನಸಿನಲ್ಲಿ ತನ್ನೊಡನೆ ಸೇರಿದ ವರನ ರೂಪ ಯೌವನ ವಿಳಾಸ ಭ್ರಮಗಳನ್ನು ಪ್ರೀತಿಯಿಂದ ಜ್ಞಾಪಿಸಿಕೊಂಡಳು. ವ|| ಹಾಗೆ ನೆನೆದು ನೆನೆದು, ಕಾಮದಹನನ ಪರಿತಾಪದ ಉದ್ಯೋಗವು ಲಜ್ಜಾ ರಸವನ್ನು ನಿಶ್ಶೇಷವಾಗಿಸಲು, ಆ ಉಷೆ ಆ ವರನನ್ನು ಕರೆತಂದು, ತನ್ನೊಡಗೂಡಿಸ ಬೇಕೆಂದು ಚಿತ್ರಲೇಖೆಗೆ ಹೇಳಿದಳು. ಆ ಚಿತ್ರಲೇಖೆ ಮುಗುಳುನಗೆ ನಗುತ್ತಾ, ೧೧೨. "ಕನಸಿನಲ್ಲಿ ನಿನ್ನೊಡನೆ ಸೇರಿದವನನ್ನು ನೀನು ನನಸಿನಲ್ಲೂ ನಿಜವಾಗಿ ಸೇರುವೆನೆಂದು ತಿಳಿದು, ಆತನನ್ನು ಕರೆತರಲು ಹೇಳುತ್ತೀಯೆ. ಆಲೋಚಿಸಿದರೆ ಇದು ಅಸಂಭವವಲ್ಲವೆ? ಕನಸಿನಲ್ಲಿ ಕಂಡ ಭತ್ತಕ್ಕೆ ಗೋಣಿಯ ಚೀಲವನ್ನು ಹಿಡಿಯುವರೆ? ೧೧೩. "ಅವನು ಯಾರ ಮಗ? ಯಾರ ಮೊಮ್ಮಗ? ಯಾರ ಸಹೋದರ? ಅದಾರ ಗೋತ್ರದವನು? ಯಾರೊಡನೆ ಇರತಕ್ಕವನು?" ಎಂಬುದನ್ನು ತಿಳಿಯದೆ ಆ ರತಿಚೋರನನ್ನು ಹೇಗೆ ತಂದು ಸೇರಿಸಲೇ? ಸಖೀ! ವ|| ಎನ್ನುತ್ತಲೂ ಅಧಿಕವಾದ ವೇದನೆಯಿಂದ ಬೇರೆ ಅವಸ್ಥೆಗೆ ಗುರಿಯಾಗುವ ಆ ರಮಣಿಯನ್ನು ನೋಡಿ ಕರುಣಾ ರಸಾರ್ದ್ರಹೃದಯೆಯಾಗಿ

ನರರಂ ಕಿನ್ನರರಂ ದನುಪ್ರಭವರಂ ದೈತೇಯರಂ ಯಕ್ಷರಂ
ಸುರರಂ ಕಿಂಪುರುಷರ್ಕಳಂ ಗರುಡರಂ ಗಂಧರ್ವರಂ ಸಿದ್ಧರಂ
ಬರೆದಾಂ ಸಪ್ತದಿನಕ್ಕೆ ಚಿತ್ರಪಟಮಂ ತಂದಪ್ಪೆನಂತಲ್ಲಿ ನೀಂ
ತರುಣೀ ನೋಡಿ ಬಟೆಕ್ಕೆ [1]ಪೇಟ ನಿಜದೊಳ್ ನಿನ್ನೋಪನಾರೆಂಬುದಂ ೧೧೪

ವ|| ಎಂದುಷಾದೇವಿಯ ಮನಮನಾಜಿಸಿ ಪೋಗಿ ಚಿತ್ರಲೇಖೆ ಚಿತ್ರಪಟಮಂ ಚಿತ್ರಲೇಖಮನಮರ್ಚ ತೀರ್ಚ

ಸೊಗಯಿಸುತಿರ್ಪ ಚಂದ್ರಿಕೆ ಚಕೋರಿಗೆ ವಾಸರಲಕ್ಷ್ಮಿ ಚಕ್ರವಾ
ಕಿಗೆ ಘನಲೇಖೆ ಚಾದಗೆಗೆ ಬರ್ಪವೊಲೊಪ್ಪಿರೆ ಚಿತ್ರಲೇಖೆ ಕ
ನ್ಯೆಗೆ ನಲವೇಜೆ ನಿರ್ವಹಣಲೇಖೆಯಲಕ್ತಕದಗ್ಗೆ ಪತ್ತಿ ಕೈ
ಯುಗುರ್ಗೆಸೆಯಲ್ ಸಚಿತ್ರಪಟಧಾರಿಣಿ ಬಂದಳತಿಪ್ರಮೋದದಿಂ ೧೧೫

*

ವಸುಧೆಗೆ ಕೌತುಕರಸಮಂ
ಪಸರಿಸುತುಂ ಚಿತ್ರಲೇಖೆ ಚಿತ್ರದ ಪಟಮಂ
ಪಸರಿದಳೊಡನೆ ಗಡಣಿಸಿ
ಪಸರಿಸುತಿರೆ ಬಾಣಸುತೆಯ ಕಣ್ಣುಂ ಮನಮುಂ ೧೧೬

ವ|| ಆಗಳ್

೧೧೪. "ತರುಣೀ! ನರರ, ಕಿನ್ನರರ, ದನುಜರ, ದೈತ್ಯರ, ಯಕ್ಷರ, ಸುರರ, ಕಿಂಪುರುಷರ, ಗರುಡರ, ಗಂಧರ್ವರ, ಸಿದ್ಧರ ಭಾವಚಿತ್ರಗಳನ್ನು ಬರೆದು ತಂದು ಇನ್ನು ಏಳು ದಿನಗಳಲ್ಲಿ ನಿನಗೆ ಕೊಡುತ್ತೇನೆ. ಆ ಚಿತ್ರಪಟಗಳನ್ನು ನೋಡಿ, ಅದರಲ್ಲಿರುವ ಯಾರು ನಿನ್ನ ಪ್ರಿಯನೆಂಬುದನ್ನು ಸರಿಯಾಗಿ ಗುರುತಿಸಿ ಹೇಳು." ವ|| ಎಂದು ಉಷಾದೇವಿಯ ಮನವನ್ನು ಸಂತೈಸಿ ಹೋಗಿ, ಚಿತ್ರಲೇಖೆ ಚಿತ್ರಬರೆಯುವ ಪಟಗಳಲ್ಲಿ ಚಿತ್ರಲೇಖನವನ್ನೂ ಪೂರೈಸಿದಳು. ಆಮೇಲೆ ೧೧೫. ಚಕೋರ ಪಕ್ಷಿಗೆ ಸೊಗಸಾದ ಚಂದ್ರಿಕೆಯೂ ಚಕ್ರವಾಕಿಗೆ ದಿನಲಕ್ಷ್ಮಿಯೂ ಚಾತಕ ಪಕ್ಷಿಗೆ ಮೇಘಮಾಲೆಯೂ ಬಂದೊದಗಿದಂತೆ, ಉಷಾದೇವಿಗೆ ತಾನು ತಂದುಕೊಡುವುದಾಗಿ ಹೇಳಿದ್ದ ಸರ್ವರ ಭಾವಚಿತ್ರಗಳನ್ನು ಬರೆದ ಪಟಗಳನ್ನು ತೆಗೆಸಿಕೊಂಡು ಚಿತ್ರಲೇಖೆಯು, ಚಿತ್ರರಚನೆಗೆ ಉಪಯುಕ್ತವಾದ ಅರಗಿನ ರಸವು ಅಲಂಕರಿಸಿಕೊಂಡಂತೆ ಕೈಉಗುರುಗಳಿಗಂಟಿಕೊಂಡಿರುವಂತೆಯೇ ಚಿತ್ರಪಟಗಳನ್ನು ಹೊತ್ತಿರುವ ಸೇವಕಿಯೊಡನೆ ಬಹು ಸಂತೋಷದಿಂದ ಉಷೆಯ ಹತ್ತಿರಕ್ಕೆ ಬಂದಳು. ೧೧೬. ಚಿತ್ರಲೇಖೆ ಭೂಮಿಗೇ ಕುತೂಹಲ ರಸವನ್ನು ಹರಡುತ್ತ, ತಾನು ತಂದ ಚಿತ್ರಪಟಗಳನ್ನು ಪಕ್ಕ ಪಕ್ಕದಲ್ಲಿ ಸೇರಿಸಿ, ಹರಡಿದಳು. ಉಷೆಯ ಕಣ್ಣೂ ಮನಸ್ಸೂ ಒಡನೆಯೇ ಆ ಚಿತ್ರಪಟಗಳ ಮೇಲೆ ಹರಡಿತು. ವ|| ಆಗ

೧. ಪೇಟನಿಬರೊಳ್ (ಕಗ)

* ಅಂತು ಬಂದು ನಿಜಾನುಚರಿಯ ಕೈಯೊಳಿರ್ದ ಚಿತ್ರಪಟಮಂ ಕಳೆದುಕೊಂಡು ಎಂಬ ವಚನವು (ಕಗ) ಪ್ರತಿಗಳಲ್ಲಿ ಹೆಚ್ಚಾಗಿದೆ.

ಇನಿಸಂ ಪೋಲೆ ಸಮಸ್ತ ಜಾತಿಗಳ ರೂಪಂ ಚಿತ್ರಿಸಲ್ ವಿಶ್ವಕ
ರ್ಮನ ಮಾಂಡವ್ಯನ ಚೀರಘಟ್ಟಿಯಳವಲ್ಲೆಂದಬ್ಜಜೆಂ ಚಿನ್ನಪೂ
ವಿನ ಚೆಂಬೊನ್ನ ಮಯೂಖಲೇಖೆಗಳನಂತಾ[1]ಚಿತ್ರನಿರ್ವಾಹರೇ
ಖೆ ನೆರಂಬೆತ್ತಿರೆ ನೋಡಿ ನೋಡಿ ತಲೆದೂಗಿತ್ತಂಗನಾಸಂಕುಲಂ ೧೧೭

[2]ಪಡೆದಳಿದರ್ಕೆ ಚೇತನವನೀ ವಧುವಲ್ಲದೊಡಿಂತೆ ಚಿತ್ರವಿಂ
ತೊಡನುಡಿವಂತೆ ನೋಟ್ಪವರ ಬೇಟ್ಪವರಂಗುಡುವಂತು [3]ಕೌತುಕಂ
ಬಡೆಗುಮೆ ಪೇಟಿಮೆಂದುಷೆ ನಿರೀಕ್ಷಿಸಿದಳ್ ನಿಜಲೋಚನಾಂಶು ತ
ಳ್ತಡರೆ ದುಕೂಲಕಾಂಡಪಟವಾದುದು ಚಿತ್ರಪಟಕ್ಕಿದೆಂಬಿನಂ ೧೧೮

ಲಲಿತರಗಳೆ

ಚಿತ್ರಲೇಖೆಯ ಬರೆದ ಚಿತ್ರಪಟದೊಳ್ ನೆರೆದ
ಬಹುವಿಧ್ಧತತಿಯಲ್ಲಿ ಮಹಿವಿನುತೆ ನೋಟ್ಪಲ್ಲಿ
ಸಾಧ್ಯರಂ ಧಿಕ್ಕರಿಸಿ ಸಿದ್ಧರನಧಃಕರಿಸಿ
ರಾಕ್ಷಸರನೀಕ್ಷಿಸದೆ ಯಕ್ಷರನಪೇಕ್ಷಿಸದೆ
ಗರುಡರಂ ಬಗೆಗೊಳ್ಳದುರಗರಂ ಕೈಕೊಳ್ಳ
ದಿವರಾದಿಯಾಗಿರ್ಪ ಭುವನಸಂಸ್ತುತರಪ್ಪ
ಖಚರಸಂತಾನದೊಳ್ ದ್ಯುಚರಪ್ರತಾನದೊಳ್

೧೧೭. ಇಷ್ಟು ಹೋಲುವಂತೆ ಸಮಸ್ತ ಜಾತಿಗಳ ರೂಪವನ್ನೂ ಚಿತ್ರಿಸುವುದಕ್ಕೆ ವಿಶ್ವಕರ್ಮಮಾಂಡವ್ಯರ ಚಿತ್ರ ಬರೆಯುವ ಪಟ ಮತ್ತು ಕಡ್ಡಿಗಳಿಗೆ ಸಾಧ್ಯವಲ್ಲ ಎಂದು, ಚಿನ್ನದ ಹೂವಿನ ಮತ್ತು ಅಪರಂಜಿಯ ಕಾಂತಿರೇಖೆಗಳಂತೆ ಚಿತ್ರದಲ್ಲಿ ರೇಖೆಗಳು ಇರಲು ಅಕ್ಕರೆಯಿಂದ ಅದನ್ನು ನೋಡಿ ನೋಡಿ ಅಂಗನೆಯರ ಸಮೂಹವೇ ತಲೆದೂಗಿತು. ೧೧೮. "ಇದಕ್ಕೆ ಈ ವಧು-ಚಿತ್ರಲೇಖೆ ಚೇತನವನ್ನು ಉಂಟು ಮಾಡಿದ್ದಾಳೆ. ಅಲ್ಲದಿದ್ದರೆ ಹೀಗೆ ಈ ಚಿತ್ರವು ನಮ್ಮೊಡನೆ ಮಾತನಾಡುವಂತೆಯೂ ನೋಡುವವರು ಬೇಡುವ ವರವನ್ನು ಕೊಡುವಂತೆಯೂ ಕುತೂಹಲವನ್ನು ಆಶ್ಚರ್ಯವನ್ನು ಉಂಟು ಮಾಡುತ್ತಿದ್ದಿತೇ! ಹೇಳಿ!" ಎಂದು, ಉಷೆ ತನ್ನ ಕಣ್ಣಿನ ಹೊಳಪು ಚಿತ್ರಪಟದ ಮೇಲೆ ದುಕೂಲದ ಕಾಂಡಪಟದಂತೆ ಹರಡುತ್ತಿರಲು ಚೆನ್ನಾಗಿ ನೋಡಿದಳು. (ಲಲಿತರಗಳೆ) ಚಿತ್ರಲೇಖೆಯು ಬರೆದ ಚಿತ್ರಪಟದಲ್ಲಿ ತುಂಬಿರುವ ಬಹು ಸಮವಾದ ರೂಪಗಳಲ್ಲಿ ಉಷೆಯು, - ಸಾಧ್ಯರನ್ನು ಧಿಕ್ಕರಿಸಿದಳು, ಸಿದ್ಧರನ್ನು ಕೀಳು ಮಾಡಿದಳು. ರಾಕ್ಷಸರನ್ನು ನೋಡಲೇ ಇಲ್ಲ. ಯಕ್ಷರನ್ನು ಇಚ್ಛಿಸಲಿಲ್ಲ. ಗರುಡರನ್ನು ಮನಸ್ಸಿಗೇ ತಂದುಕೊಳ್ಳಲಿಲ್ಲ. ಉರಗರನ್ನೂ ಹಿಡಿಯಲಿಲ್ಲ. ಲೋಕಸಂಸ್ತುತರಾದ ಖೇಚರ ದ್ಯುಚರ ಸಮೂಹದಲ್ಲಿ ತಾನು ಕನಸಿನಲ್ಲಿ ಕಂಡ, ತನ್ನ

೧. ಚಿತ್ರನಿರ್ಮಾಣರೇಖೆ (ಖ) ೨. ಪಡೆವಳಿವರ್ಕೆ (ಕ) ೩. ಕೌತುಕಂಬುಡುಗುಮೆ (ಕಗ)

ಕನಸಿನೊಳ್ ಕಂಡನಂ [1]ಮನಮನೀಟ್ಕೊಂಡನಂ
ಕಾಣದಜನಂ ಬೈದು ನಾಣಟೆದು ಬಿಸುಸುಯ್ದು
ಕಂಬನಿಯೊಳೋಲಾಡಿ ಬಂಬಳಮೊಗಂ ಬಾಡಿ
ನೋವಿಂ ಕರಂ ಬಳಲಲೋವಿದೇಕೆಂದಟಲ
ಲಿತ್ತಿತ್ತ ನೋಡರಸಿ ಚಿತ್ತೋತ್ಸವಂಬೆರಸಿ
ಭೂಭುವನಭೂಪರಂ ಶೋಭಿತಸುರೂಪರಂ
ನೀನೆಂದು ಪೇಟೆ ಸಖಿ [2]ತಾ ನೋಡಿ ಚಂದ್ರಮುಖಿ
ತತ್ಸಕಲಭೂಪರೊಳ್ ಹೃತ್ಸೇವ್ಯರೂಪರೊಳ್
ಚೋಳನಂ ಪಟಿಕೆಯ್ದು ಮಾಳವನನಿಟಿಕೆಯ್ದು
ಲಾಳನಂ ಜೋಡಾಡಿ ಗೌಳನಂ ಕೊಱಚಾಡಿ
ಪಾರಸಿಕನಂ ಪಟೆದು ಪಾರಿಯಾತ್ರನನುಟೆದು
ಹೂಣನಂ ಕೀೞ್ಪಡಿಸಿ ಬಾಣನಂ ಪಱಪಡಿಸಿ
ಮಗಧನಂ ಧಿಕ್ಕರಿಸಿ ಸಗರನಂ [3]ನ್ಯಕ್ಕರಿಸಿ
ಪಾಂಡ್ಯನಂ ಪರಿಹರಿಸಿ ಪಾಂಡವರನರವರಿಸಿ
ಕುರುಕುಳರನತಿಗಳೆದು ಮರುಪತಿಯನಸಕಳಿದು
ಪಲ್ಲವನನಲ್ಲೆಂದು ವೆಲ್ಲನಂ ಹೊಲ್ಲೆಂದು

ಮನಸ್ಸನ್ನು ಸೆಳೆದು ವಶಪಡಿಸಿಕೊಂಡ ವರನನ್ನು ಕಾಣದೆ ಬ್ರಹ್ಮನನ್ನು ಬೈದಳು, ನಾಚಿಕೆಯನ್ನು ಬಿಟ್ಟು ನಿಟ್ಟುಸಿರು ಬಿಟ್ಟಳು, ಕಣ್ಣೀರಿನಲ್ಲಿ ತೇಲಾಡಿದಳು, ಮುಖವು ಬಾಡಿ ಸೊಪ್ಪಾಯಿತು, ನೋವಿನಿಂದ ಹೆಚ್ಚಾಗಿ ಬಳಲಿದಳು. ಆಗ ಚಿತ್ರಲೇಖೆಯು "ರಾಣೀ-ಮನಸ್ಸಂತೋಷದಿಂದ ಇತ್ತಿತ್ತ ಭೂಲೋಕದ ರಾಜರಲ್ಲಿ ಸುರೂಪದಿಂದ ಶೋಭಿಸುವವರನ್ನು ನೋಡು" ಎಂದಳು. ಆ ಚಂದ್ರಮುಖಿ ಹಾಗೆಯೇ ಮನಮೋಹಕವಾಗಿರುವ ಸಕಲ ರಾಜರಲ್ಲಿ ಚೋಳರಾಜನನ್ನು ದೂಷಿಸಿದಳು, ಮಾಳವ ರಾಜನನ್ನು ಕೀಳೆಂದಳು, ಲಾಳನನ್ನು ಅಪಹಾಸ್ಯ ಮಾಡಿದಳು, ಗೌಳನನ್ನು ಎತ್ತಿಹಾಕಿದಂತೆ ಮಾಡಿದಳು, ಪಾರಸಿಕನನ್ನು ಹಳಿದಳು, ಹೂಣನನ್ನೂ ಪಾರಿಯಾತ್ರನನ್ನು ಬಿಟ್ಟಳು, ಬಾಣನನ್ನು ಹರಿದಂತೆ ಮಾಡಿದಳು, ಹೀಗೆಯೇ ಮಗಧರಾಜ, ಸಗರ, ಪಾಂಡ್ಯ, ಪಾಂಡವ, ಕೌರವ, ಪಲ್ಲವ, ಮರು, ವೆಲ್ಲ, ವಂಗ ರಾಜಕುಮಾರರನ್ನು ನೋಡಿ, ಅವರಾರಲ್ಲೂ ತನ್ನ ಪ್ರಿಯನನ್ನು ಹೋಲುವವರನ್ನೂ ಕಾಣದೆ ತಿರಸ್ಕರಿಸಿ, ರತಿಚೋರನ ಭೂವಿನುತಪ್ರಿಯನ ರೂಪವನ್ನೇ ಭಾವಿಸಿಕೊಂಡು ಮುಂದೆ ಮುಂದೆ ನೋಡುತ್ತ, ಸುಂದರರಾದ ಚಂದ್ರವಂಶದ ಯಾದವರಲ್ಲಿ ತನ್ನ ಪ್ರಿಯನನ್ನು ಸ್ವಲ್ಪಸ್ವಲ್ಪ ಹೋಲುವವರನ್ನು ನೋಡಿ, ಮನಸೋತಳು. ಅವರನ್ನೇ ಒಲವಿನಿಂದ ನೋಡುತ್ತ, ಪದ್ಮನಾಭನೂ ನೀಲಮೇಘಶ್ಯಾಮನೂ ಪೀತಾಂಬರಧಾರಿಯೂ ಪವಿತ್ರವಾದ ವನಮಾಲೆಯನ್ನು ಧರಿಸಿದವನೂ ಕೌಸ್ತುಭಧಾರಿಯೂ ಭೂಸ್ತುತವಿಳಾಸಿಯೂ ಗರುಡವಾಹನನೂ, ಪುಂಡರೀಕಾಕ್ಷನೂ, ದೇವಾದಿದೇವನೂ ಆದ ಶ್ರೀಕೃಷ್ಣನನ್ನು (ಚಿತ್ರದಲ್ಲಿ)

---

೧. ಮನಸಿನೊಳ್ಕೊಂಡನಂ (ಖ) ೨. ತಾನೊಸೆದು (ಕಗ) ೩. ದರವೆರಿಸಿ (ಕಖಗ)

ವಂಗನೊಳ್ ಬಗೆಯಿಲ್ಲದಂಗನೊಳ್ ಮನಮೊಲ್ಲ
ದತಿಚಾಟುಕಾಱನಂ ರತರತ್ನಚೋರನಂ
ಭೂವಿನುತರೂಪನಂ ಭಾವಿಸುತ್ತೋಪನಂ
ಬಂದು ಚೆಲ್ವಾದವರನಿಂದುಕುಲಯಾದವರ
ನಿನಿಯನಂ ಪೋಲ್ತವರನಿನಿಸು ಬಗೆಸೋಲ್ತವರ
ನೊಲವಿನಿಂ ನೋಡುತ್ತೆ ನಲವಿನಿಂ ಕೂಡುತ್ತೆ
ತಾಮರಸನಾಭನಂ ಶ್ಯಾಮಜಳದಾಭನಂ
ಪೀತಪಟಲೀಲನಂ ಪೂತವನಮಾಲನಂ
ಕೌಸ್ತುಭವಿಭಾಸಿಯಂ ಭೂಸ್ತುತವಿಳಾಸಿಯಂ
ಪತಗೇಂದ್ರಪತ್ರನಂ ಶತಪತ್ರನೇತ್ರನಂ
ದೇವಾದಿದೇವನಂ ಶ್ರೀವಾಸುದೇವನಂ
ಪ್ರಿಯಶಂಕೆಯಿಂ ತಂದು ನಯನಸುಖದಿಂ ನಿಂದು
ಕರಮಱ್ಕಱಿಂ ನೋಡಿ ಗುರುಬುದ್ಧಿಯಂ ಮಾಡಿ
ದನುಜಹರಪುತ್ರನಂ ಕನಕರುಚಿಗಾತ್ರನಂ
ಧೃತಮಕರಕೇತುವಂ [1]ನತಸೌಖ್ಯ ಹೇತುವಂ
ಕುಸುಮಕೋದಂಡನಂ ಪ್ರಸವಮಯಕಾಂಡನಂ
ಪ್ರೋದ್ಯತ್ಪ್ರಭಾವನಂ ಪ್ರದ್ಯುಮ್ನದೇವನಂ
ರೂಪಸಾದೃಶ್ಯದಿಂ[2]ದೋಪನೆ ಅವಶ್ಯದಿಂ
ದಿವನೆಂದು ರಾಗಿಸುತೆ ದಿವಿಜರಿಪು ರಾಜಸುತೆ
ರೋಮೋದ್ಗಮಂ ಪೊಣ್ಮೆ ಕಾಮಾಂಬು ಕೈಗಣ್ಮೆ
ಮತ್ತಂತೆ ನಡೆನೋಡಿ ಚಿತ್ತದೊಳ್ ತಡಮಾಡಿ

ತನ್ನ ಪ್ರಿಯನೆಂಬ ಶಂಕೆಯಿಂದ ನೋಡಿ, ನೇತ್ರಾನಂದದಿಂದ ಸುಖಿಸುತ್ತ ನಿಂತು, ಬಹಳ ಅಕ್ಕರೆಯಿಂದ ಚೆನ್ನಾಗಿ ನೋಡಿದಾಗ ಅವಳಿಗೆ ಅವನಲ್ಲಿ ಗುರುಬುದ್ಧಿಯುಂಟಾಯಿತು. ಬಳಿಕ ಕೃಷ್ಣನ ಪುತ್ರನೂ ಸುವರ್ಣಕಾಂತಿ ದೇಹನೂ ಮಕರಕೇತನನೂ ಸೌಖ್ಯಕಾರಣನೂ, ಕುಸುಮಧನುವೂ ಪುಷ್ಪಬಾಣನೂ ಶ್ಲಾಘ್ಯಪ್ರಭಾವನೂ ಆದ ಮನ್ಮಥನನ್ನು ನೋಡಿದಳು. ರೂಪಸಾದೃಶ್ಯದಿಂದ, ಇವನೇ ನಿಜವಾಗಿಯೂ ತನ್ನ ಪ್ರಿಯನೆಂದುಕೊಂಡಳು. ಅನುರಾಗದಿಂದ ಅವಳಿಗೆ ರೋಮಾಂಚನವಾಯಿತು. ಕಾಮರಸವು ಮಿತಿಮೀರಿತು. ಆದರೂ ಮತ್ತೆ ಮತ್ತೆ ಅವನನ್ನೇ ದೃಷ್ಟಿಸಿ ನೋಡುತ್ತ, ಮನವನ್ನು ಕನಸಿನಲ್ಲಿ ಅಧೀನಮಾಡಿದವನನ್ನು ಚೆನ್ನಾಗಿ ಜ್ಞಾಪಿಸಿಕೊಂಡಳು. ಆದರವನಿಗೆ ಮಕರಧ್ವಜವೂ, ಪುಷ್ಪಬಾಣವೂ, ಕಬ್ಬಿನಬಿಲ್ಲೂ, ಸುವರ್ಣಕಾಂತಿಯೂ ಇರಲಿಲ್ಲ. ಮನುಜ ಸಹಜವಾದ ರೂಪಲಕ್ಷಣ ಉಳ್ಳವನೂ ಅಜೇಯ ಪ್ರಭಾವನೂ ಆದವನು ಅವನು. ನನ್ನ ಕಾಂತನಾದ ಆತನು ಈ ಮನ್ಮಥನೋ ಅಲ್ಲವೋ ಎಂಬುದನ್ನು ತಪ್ಪದೆ ತಿಳಿಸು" ಎಂದು ಸಖಿಗೆ ಹೇಳಬೇಕೆಂದುಕೊಂಡು ಮತ್ತೆ ತಾನೇ ತನ್ನ ಅಂತರಂಗದಲ್ಲಿ ಚಿಂತಿಸಿದ ಆ ಉಷಾದೇವಿಯು

೧. ನುತಶೌರ್ಯಹೇತುವಂ (ಕಗ) ೨. ಓಪವನವಶ್ಯದಿಂ (ಕಗ)

ಕನಸಿನೊಳ್ ನೆರೆದಂಗೆ [1]ತನುಮನವನೊರೆದಂಗೆ
ಮಕರಕೇತನವಿಲ್ಲ ಮುಕುಲಮಾರ್ಗಣವಿಲ್ಲ
ತಪನೀಯರುಚಿಯಿಲ್ಲ ವಿಪುಲೇಕ್ಷು ಧನುವಿಲ್ಲ
ನಿಜದಿಂದವೆಸೆವನವನಜಿತಪ್ರಭಾವನವ
ನಾಕಾಂತನಪ್ಪಾತನೀ ಕಂತುವೆಂಬಾತ
ನಪ್ಪನಲ್ಲೆಂಬುದಂ ತಪ್ಪದಜಿಪೆಂಬುದಂ
ಚಿಂತಿಸಿ [2]ನಿಜಾಂತರಂ ಕಾಂತೆ ತದನಂತರಂ

*

ಕನಸಿಂದೆನ್ನೊಳ್ ರತಕ್ರೀಡೆಯನೊಡರಿಸಿದಾ [3]ಧೂರ್ತನೀಯಿರ್ದನೀಯಿ
ರ್ದನೆ ಪೋಗಾ ಕಂತುವಲ್ಲೀ[4]ವಿಮಲ ವಿಭವಮೀ ರೂಪಮೀ ತೇಜಮೀ ಯೌ
ವನಮೀ ಸೌಂದರ್ಯಮೀ ಸೌಷ್ಠವಮನೆನುತನಿರುದ್ಧಸ್ಫುರದ್ವಿದ್ಧಮಂ ಭೋಂ
ಕೆನೆ ಕಂಡಾ ಕನ್ನೆ ಲಜ್ಜಾಭಯರಸವಶದಿಂ ಸಂಚಲದ್ಗಾತ್ರೆಯಾದಳ್ ೧೧೯

ವ|| ಅದಲ್ಲದೆಯುಂ

ಪಿಡಿದಮರ್ದಪ್ಪಲೆಂದು ನಿಮಿರುತ್ತಿರೆ ದೋರ್ಲತೆಮೇಲೆವಾಯಲೆಂ
ದೊಡರಿಸೆ ದೇಹವಿನ್ನೆಗವದೇಕೆಯೊ ನಲ್ಲನೆ ರೂಪುದೋಱಿಯೆಂ
ದೊಡನುಡಿಯಲ್ಕೆ ತೇರಯಿಸೆ ನಾಲಗೆ ಪೆರ್ಚಿದಲಂಪಿನಿಂದಮಾ
ಗಡೆ ನೆರವಂತುಟಾಯ್ತುಷೆಗೆ [5]ನೋಟ್ಟುದುಮಂದನಿರುದ್ಧವಿದ್ಧಮಂ ೧೨೦

ವ|| ಅಂತಾ ಪೆರ್ಚಿದೌತ್ಸುಕ್ಯದಿಂ ಬಾಣಪುತ್ರಿ ಚಿತ್ರಲೇಖೆಯ ಮೊಗಮಂ ನೋಡಿ

ಆಮೇಲೆ ೧೧೯. "ಕನಸಿನಲ್ಲಿ ನನ್ನೊಡನೆ ರತಿಕ್ರೀಡೆಯನ್ನು ಮಾಡಿದ ಆ ಧೂರ್ತನು ಇದೊ ಇಲ್ಲೇ ಇದ್ದಾನೆ! ಇಲ್ಲೇ ಇದ್ದಾನೆ. ಹೋಗು; ಆ ಮನ್ಮಥನಲ್ಲಿ ಈ ವಿಭವವೂ ಈ ರೂಪವೂ ಈ ತೇಜಸ್ಸೂ ಈ ಯೌವ್ವನವೂ ಈ ಸೌಂದರ್ಯವೂ ಈ ಸೌಷ್ಠವವೂ ಉಂಟೇ?" ಎನ್ನುತ್ತ ಅನಿರುದ್ಧನ ಹೊಳೆಯುವ ಚಿತ್ರವನ್ನು ತಟ್ಟನೆ ಕಂಡ ಆ ಕನ್ಯೆ ಲಜ್ಜಾಭಯರಸವಶದಿಂದ ನಡುಗುವವಳಾದಳು. ವ|| ಅದೂ ಅಲ್ಲದೆ. ೧೨೦. ಆಗ ಅನಿರುದ್ಧನ ಚಿತ್ರವನ್ನು ನೋಡಿ ಉಷೆಗೆ ಅವನನ್ನು ಹಿಡಿದುಕೊಂಡು ದೃಢವಾಗಿ ಆಲಿಂಗಿಸಬೇಕೆಂದು ಬಳ್ಳಿತೋಳನ್ನು ಮುನ್ನೀಡುವಂತೆಯೂ ಮೇಲೆ ಬೀಳಬೇಕೆಂದು ದೇಹವನ್ನು ಮುನ್ನಡೆಯಿಸುವಂತೆಯೂ ಆಯಿತು. "ನಲ್ಲನೆ! ಇದುವರೆಗೆ, ಏಕೆ ನೀನು ನನಗೆ ಕಾಣಿಸದೆ ಇದ್ದೆ?" ಎಂದು ಕೇಳಬೇಕೆಂದು ಹೊರಟ ನಾಲಗೆಯು ಹಿಂಜರಿಯಲು ಹೆಚ್ಚಿದ ಆಸೆ ಸಂತೋಷಗಳಿಂದ ಅವನೊಡನೆ ಆಗಲೇ ನೆರೆಯುವಂತೆ ಆಯಿತು. ವ|| ಹಾಗೆ ಹೆಚ್ಚಿದ ಔತ್ಸುಕ್ಯದಿಂದ ಉಷೆ ಚಿತ್ರಲೇಖೆಯ ಮುಖವನ್ನು ನೋಡಿ,

---

೧. ತನುಮನದಧೀಶಂಗೆ (ಕಗ) ೨. ವಿರಂತರಂ (ಖ) ೩. ಧೂರ್ತನೇ ಈತನೇ ಇರ್ದನೆ (ಖ) ೪. ವಿಪುಲ (ಖ) * (ಕಖಗ) ಪುಸ್ತಕಗಳಲ್ಲಿಲ್ಲದ ಸ್ವಾಂತದ ನೆಗಟ್ಟಿಯಿಂದಿಂತೆಂದಳಟ್ಟಿಯಿಂ ಎಂಬೀ ಪಾದವು (ಮೊಅ) ಪ್ರತಿಯಲ್ಲಿ ಮದ್ರಾಸ್ ಪ್ರತಿಯಂತೆ ಹೆಚ್ಚಾಗಿ ಸೇರಿಸಲ್ಪಟ್ಟಿದೆ. ೫. ತನುವಂ ನಿಮಿಱುತ್ತಿರೆ ಮೇಲೆವಾಯಲೆಂದೊಡರಿಸೆ ಹಮ್ಮಿನ್ನಿನ್ನೆವರಮೇಕೆಯೊ (ಕಗ) ತನುಮುಂ ನಿಮಿಱುತ್ತಿರೆ ಮೇಲೆವಾಯಲೆಂದೊಡರಿಸಿ ಹಮ್ಮಿಂದುವರಮೇಕೆಯೊ (ಮೊಅ) ೬. ತೋರ್ಪು (ಮೊಅ)

ಇಂತುಟು ಕುಲವಿಂತುಟು ಪೆಸ
ರಿಂತುಟು [1]ರೂಪೆನ್ನ ವಲ್ಲಭಂಗೆಂಬಿನಿತಂ
ನೀಂ ತಿಳಿದೆ ಕೆಳದಿ ನಲ್ಲನ
ನೆಂತಾದೊಡಮಿಂದೆ ತಂದು ನೆರೆಪಲೆವೇಟ್ಕುಂ ೧೨೧

ವ|| ಎಂದು ನುಡಿಯೆ ಚಿತ್ರಲೇಖೆ ಮತ್ತಮಾಕೆಯನಟಲಿಸುವ ಬಗೆಯಿಂದಿಂತೆಂದಳ್

ಕಣ್ಪರಿಗೆಟ್ಟು ಕಾಮನಿಸೆ ನಾಂಟುವ ಪೂಗಣೆಯಿಂ ಬಟಲ್ದು ನೀಂ
ಬಂಬಳಬಾಡಿದಪ್ಪೆ ದೊರೆಕೊಳ್ಳದ ವಸ್ತುಗಿದೇಕವಸ್ಥೆಯಿಂ
ಮಾಣ್ಪೆಸಜಾಕ್ಷಿ ಮುನ್ನ ಕನಸಿಂದಮೆ ಕಂಡನನೀಗ ಚಿತ್ರದೊಳ್
ಕಾಣ್ಬುದೆ ಸಾಲ್ವುದಾರಜೆವರೆತ್ತಣ ಚೆನ್ನಿಗನಾವನೆಂಬುದಂ ೧೨೨

ವ|| ಎನೆ ಬಾಣನಂದನೆ

ಅಟಲಿಸವೇಡ ನೀನಜೆವೆ ಕಾದಲನಿರ್ದೆಡೆಯಂ ದಿಟಕ್ಕೆ ನೀಂ
ತೊಟಲದ ಪಟ್ಟಣಂ ಪುಗದ ನಂದನಮೆಯ್ದದ ರಾಜಮಂಡಲಂ
ಸುಟಿಯದ ಲೋಕಮಾವುದು ತಳಾಮಳಕಂ ನಿನಗಬ್ಜಜಾಂಡವಾ
ರುಟಿದವರಿಂತು ನಿನ್ನ ತೆಱದಿಂ ಪಡೆದರ್ ಬಹುರೂಪವಿದ್ಯೆಯಂ ೧೨೩

ವ|| ಎಂಬುದುಮದರ್ಕೆ ಸಂತೋಷಂಬಟ್ಟು ನಿನ್ನ ಕಾಂತನನಿಂದೀಗಳೆ ತಂದು ಕೂಡಿದಪೆನೆಂದಾಡಿಯಾ ಕನ್ನೆ ನೋಡೆ ನೆಲೆಮಾಡದ ಭೂಮಿಯಿಂದಾಕಾಶಕ್ಕೆ ನೆಗೆದು

೧೨೧. "ಕೆಳದೀ, ನನ್ನ ವಲ್ಲಭನ ನಾಮ ರೂಪ ಕುಲಾದಿಗಳನ್ನು ನೀನು ತಿಳಿದಿರುವೆ ಹೇಗಾದರೂ ಮಾಡಿ ಆ ನನ್ನ ನಲ್ಲನನ್ನು ಕರೆದುಕೊಂಡು ಬಂದು ನನ್ನೊಡನೆ ಸೇರಿಸಲೇಬೇಕು." ವ|| ಎಂದು ಹೇಳಲು ಚಿತ್ರಲೇಖೆ ಮತ್ತೆ ಉಷೆಯನ್ನು ಸ್ವಲ್ಪ ಅಳಲಿಸಬೇಕೆಂದು, ಅವಳಿಗೆ ಹೇಳಿದಳು. ೧೨೨. "ಕಮಲಾಕ್ಷಿ ಕಾಮನು ಹೊಡೆದ ಹೂಬಾಣವು ನಾಟಿದುದರಿಂದ ನೀನು ಕಂಗೆಟ್ಟು ಬಳಲಿ ಬಂಬಲು ಬಾಡುತ್ತಿದ್ದೀಯೆ. ದೊರೆಯದ ವಸ್ತುವಿಗಾಗಿ ಈ ಅವಸ್ಥೆಯೇಕೆ? ಬಿಡು. ಮುಂಚೆ ಕನಸಿನಿಂದ ಕಾಣಿಸಿಕೊಂಡನು. ಈಗ ಚಿತ್ರದಲ್ಲಿ ನೀನು ನೋಡುವುದೇ ಸಾಕು. ಆ ಚೆನ್ನಿಗನು ಯಾರು ಎಲ್ಲಿಯವನು ಎಂಬುದನ್ನು ಯಾರು ಬಲ್ಲರು?!" ವ|| ಎನ್ನಲು ಬಾಣನಂದನೆ ಉಷೆ ೧೨೩. "ಸುಮ್ಮನೆ ನನ್ನನ್ನು ಅಳಲಿಸಬೇಡ. ನನ್ನ ಪ್ರಿಯನಿರುವೆಡೆಯನ್ನು ನೀನು ನಿಜವಾಗಿಯೂ ತಿಳಿದಿರುವೆ. ಸತ್ಯವಾಗಿ ನೀನು ಸುತ್ತದ ಪಟ್ಟಣವೂ ಹೋಗದ ನಂದನವನವೂ ಹೋಗಿ ಸೇರದ ರಾಜಮಂಡಲವೂ ಸಂಚರಿಸದ ಲೋಕವೂ ಯಾವುದು? ನಿನಗೆ ಬ್ರಹ್ಮಾಂಡವು ಕರತಳಾಮಲಕವಾಗಿದೆ. ನಿನ್ನಂತೆ ಬೇರೆ ಯಾರು ತಾನೆ ಬಹುರೂಪ ವಿದ್ಯೆಯನ್ನು ಪಡೆದವರಿರುವರು?" ವ|| ಎಂದಳು. ಅದಕ್ಕೆ ಚಿತ್ರಲೇಖೆ ಸಂತೋಷಪಟ್ಟು "ನಿನ್ನ ಕಾಂತನನ್ನು ಇಂದು ಈಗಲೇ ಕರೆತಂದು ನಿನ್ನೊಡಗೂಡಿಸುತ್ತೇನೆ!" ಎಂದು ಹೇಳಿ,

---

೧. ಬಲವೆನ್ನ (ಖ)

ಮಿಳಿರಲ್ ಮೇಲುದಿನಂಚಳಂ ಪೊಡರಲುತ್ತುಂಗಸ್ತನದ್ವಂದ್ವಮು
ಚ್ಚಳಿಸಲ್ ಮೇಲೆ ವಿಲೋಚನಾಂಶು ನಿಮಿರಲ್ ನೀಳಾಳಕೌಘಂ ಕಿಡಲ್
ವಳಿಗಳ್ ಪಿಂತಲೆಯೊಳ್ ಬಟಲ್ದುಡಿಯಲುಂಗಲ್ ಕರ್ಣಪೂರಂ ವಿಯ
ತ್ತಳದೊಳ್ ಮಿಳ್ಳಿಸೆ ಚಿತ್ರಲೇಖೆ ನವವಿದ್ಯುಲ್ಲೇಖೆವೊಲ್ ಪಾರಿದಳ್ ೧೨೪

ವ॥ ಅಂತು ಪೋಗಿ ಮನೋವೇಗದಿಂ ದ್ವಾರಾವತಿಯನೆಯ್ದಿ ಕಮನೀಯ ಕೌಮುದಿಯೊಳೊಡ್ಡೋಲಗಂಗೊಟ್ಟುನಿಜರಾಜಾಲಯದೊಳಿರ್ದನಿರುದ್ಧಕುಮಾರನಂ ಕಂಡಾ ಕುಮಾರನುಂ ಸ್ವಪ್ನಸಂಭೋಗದೊಳ್ ಬಾಣಸುತೆಯ ರೂಪಾತಿಶಯಕ್ಕೆ ಕೂರ್ತು[1]ವಿರಹಾರ್ತನಾಗಿರ್ದ ಭಂಗಿಯನಿಂಗಿತದಿಂ ತಿಳಿದದೃಶ್ಯರೂಪದಿಂ ತಾರಾಪಥದಿಂದಿಳಿತಂದು ಮೆಲ್ಲನೆ ನುಡಿದೊಡಂಬಡಿಸಿ ನಿಜಾಂಶಪೀಠಮನೇಱಿಸಿ ವಿಯಚ್ಚರಲೀಲೆಯಿಂ ಚೆಚ್ಚರ ಮಗುಳೆವಂದನಿರುದ್ಧನಂ ಉಷಾದೇವಿಯೊಳ್ ಗಾಂಧರ್ವವಿವಾಹದಿಂ ನೆರಪಲ್ ವಧೂವರರ್ ಕೇಳೀಗೃಹಾಂತರದೊಳ್ ಅತಿಸ್ವೈರದಿಂದಿರ್ಪುದುಮದಂ ಕನ್ಯಾಧ್ಯಕ್ಷನಱಿದು ಬಾಣಾಸುರಂಗೆ ಪೇೞೆ

ಶರಧಿಪ್ರಸ್ಪರ್ಧಿಯಾದೀ ವಿಪುಲಪರಿಖೆಯಂ ದಾಂಟಿ ಮುಂ ದೇವದೈತ್ಯ
ರ್ಗರಿದಾದೀ ಕೋಂಟೆಯಂ ಪೊಕ್ಕತುಳ ಪೃಥುಳಮದ್ಬಾಹುಮಾಲಾರ್ಗಳಾತ್ಯು
ದ್ಧುರಮಾದೀ ರಾಜಗೇಹಾಂತರದುಷೆಯೊಳಿವಂ ಕೂಡಿದೀ ಕಾರ್ಯಯೋಗಂ
ಪಿರಿದೊಂದಾಶ್ಚರ್ಯಮೆಂದೆಂದಸುರಪತಿ ಮುಹುಃಕಂಪಕೋಟೀರನಾದಂ ೧೨೫

ಆ ಕನ್ಯೆ ನೋಡುತ್ತಿದ್ದಂತೆಯೇ ಅಂತಸ್ತಿನ ಉಪ್ಪರಿಗೆಯಿಂದ ಆಕಾಶಕ್ಕೆ ನೆಗೆದಳು. ೧೨೪. ಮೇಲುಹೊದಿಕೆಯ ಸೆರಗು ಚಲಿಸುತ್ತಲೂ, ಉನ್ನತ ಸ್ತನಗಳು ಅದಿರುತ್ತಲೂ ಕಣ್ಣಿನ ಹೊಳಪು ಮೇಲೆ ಹರಡುತ್ತಲೂ, ನೀಲಮುಂಗುರುಳುಗಳು ನೆಟ್ಟಗಾಗುತ್ತಲೂ, ತ್ರಿವಳಿಗಳು ಕೆಡುತ್ತಲೂ, ಬಿಚ್ಚುಮುಡಿ ಹಿಂದೆ ಬೆನ್ನಿನ ಮೇಲೆ ಚಲಿಸುತ್ತ ಕಿವಿಯ ಆಭರಣಗಳು ಆಕಾಶದಲ್ಲಿ ಮಿಂಚುತ್ತಲೂ, ಇರಲು ಚಿತ್ರಲೇಖೆ ಹೊಸಮಿಂಚಿನ ಬಳ್ಳಿಯಂತೆ ಹಾರಿದಳು. ವ॥ ಹಾಗೆ ಮನೋವೇಗದಿಂದ ಹೋಗಿ ದ್ವಾರಕಾಪುರವನ್ನು ಸೇರಿ ಮನೋಹರವಾದ ಬೆಳುದಿಂಗಳಿನಲ್ಲಿ ಸಭೆಯನ್ನು ನಡೆಸುತ್ತ ತನ್ನ ಅರಮನೆಯಲ್ಲಿದ್ದ ಅನಿರುದ್ಧಕುಮಾರನನ್ನು ಕಂಡಳು. ಆ ಕುಮಾರನೂ ಸ್ವಪ್ನಸಂಭೋಗದಲ್ಲಿ ಬಾಣಪುತ್ರಿಯ ರೂಪಾತಿಶಯಕ್ಕೆ ಬೆರಗಾಗಿ ಪ್ರೀತಿಸಿ, ವಿರಹಪೀಡಿತನಾಗಿರುವನೆಂಬುದನ್ನು ಇಂಗಿತದಿಂದಲೇ ತಿಳಿದಳು. ಅದೃಶ್ಯ ರೂಪದಿಂದ ಗಗನಮಾರ್ಗದಿಂದಲೇ ಇಳಿದು ಅವನೊಡನೆ ಮೆಲ್ಲಗೆ ಮಾತನಾಡಿ ಒಡಂಬಡಿಸಿ ತನ್ನ ಹೆಗಲಮೇಲೇರಿಸಿಕೊಂಡು ಆಕಾಶಗಾಮಿಗಳ ಲೀಲೆಯಿಂದ ಬೇಗ ಹಿಂದಿರುಗಿಬಂದು, ಅನಿರುದ್ಧನನ್ನು ಉಷಾದೇವಿಯೊಡನೆ ಗಾಂಧರ್ವವಿವಾಹದಿಂದ ಕೂಡಿಸಿದಳು. ಆ ವಧೂವರರು ಬಳಿಕ ಕೇಳೀಗೃಹಾಂತರದಲ್ಲಿ ಸ್ವೇಚ್ಛೆಯಿಂದ ಸುಖದಿಂದ ಇದ್ದರು. ಅದನ್ನು ಕನ್ಯಾಂತಃಪುರಾಧ್ಯಕ್ಷನು ತಿಳಿದು ಬಾಣಾಸುರನಿಗೆ ಹೇಳಿದನು. ೧೨೫. "ಸಾಗರದೊಡನೆ ಸ್ಪರ್ಧಿಸುವ ಈ ವಿಶಾಲವಾದ ಕಂದಕವನ್ನು ದಾಟಿ, ದೇವತೆಗಳಿಗೂ ರಾಕ್ಷಸರಿಗೂ ಅಸಾಧ್ಯವಾದ ಈ ಕೋಟೆಯನ್ನು ಹೊಕ್ಕು ಅಸಮಾನವೂ ಸ್ಥೂಲವೂ ಆದ ನನ್ನ ತೋಳುಗಳೆಂಬ ಅಗುಳಿಗಳಿಂದಲೂ ಘನವಾಗಿ ಸ್ಥಿರರಕ್ಷಿತವಾದ ಈ

೧. ವಿಷಯಾರ್ತನಾಗಿರ್ದ (ಕಗ)

ಅನ್ಯಾಯಂ ಕೊಡುಗೂಸಿನೊಳ್ ಕುಡದ ಮುನ್ನಂ ಬಂದು ಕೂಡಿರ್ಪುದಾ
[1]ಕನ್ಯಾಜಾರನನೀಗಳಿಂತೆಳೆದು ತನ್ನಿ ಪೋಗಿಮೆಂದಂದು ಹ
ಸ್ತನ್ಯಸ್ತಾಯುಧದೈತ್ಯವೀರಭಟರಂ ಬಾಣಾಸುರಂ ಪೇಟೆ ತ
ತ್ಸೈನ್ಯಂ ಸುತ್ತಿದುದೆಯ್ದೆ ಕೇಳಿಗೃಹಮಂ ಪ್ರೋತ್ತಾಳಕೋಳಾಹಳಂ ೧೨೬

ವ|| ಆಗಳ್

ಬೆಳರ್ವಾಯೊಳ್ ಬಾಯ್ ಘನೋರುದ್ವಯದೊಳುರುಘನೋರುದ್ವಯಂ ನೀಳ್ದ ತೋಳೊಳ್
ನಳಿತೋಳ್ಗಳ್ ಮುಯ್ವೊಳಾ ಮುಯ್ಯುರದೊಳುರಸಿಜಂ ತಳ್ತಿರಲ್ ತಳ್ತುಪಾಕೋ
ಮಳೆಯೊಳ್ [2]ನಾರೀವರಾತ್ಮಾಕೃತಿಯೆನೆ ಸುಖದಿಂದಿರ್ದು ದೈತೇಯಕೋಳಾ
ಹಳಮಂ ಕೇಳ್ದೊಪಳಪ್ಪಂ ಸಡಿಲಿಸಿ ನಡೆದಂ ಕಾದಲೇಕಾಂಗವೀರಂ ೧೨೭

ವ|| ಅದಂ ಕಂಡು

ಇನಿಯಂ ಕೋಮಲರೂಪನುಗ್ರತರರೂಪರ್ ದೈತ್ಯರಾತ್ಮೇಶನೊ
ಬ್ಬನನೇಕರ್ ದಿತಿಜರ್ ನಿರಾಯುಧನಧೀಶಂ ಸಂಗೃಹೀತಾಯುಧರ್
ದನುಜರ್ ಮತ್ಪ್ರಿಯನಿಂದು ದಾನವರನಾನಲ್ ಸಾಲ್ವನೆಂತೆಂದು ಕಾಂ
ತನನಾಳೋಕಿಸುತಿರ್ದಳೆಂದುಷೆ ಜಯಶ್ರೀ ನೋಡುತಿರ್ಪಂತೆವೋಲ್ ೧೨೮

ಅರಮನೆಯೊಳಗೆ ಕನ್ಯಾಗೃಹದಲ್ಲಿದ್ದ ಉಷೆಯೊಡನೆ ಅವನು ಸೇರಿದ ಈ ಕಾರ್ಯವು ಈ ಘಟನೆಯು ಅತ್ಯಾಶ್ಚರ್ಯ"ವೆಂದು ಬಾಣಾಸುರನು ಮತ್ತೆ ಮತ್ತೆ ತಲೆದೂಗಿ ಕಿರೀಟವನ್ನು ಅಲುಗಿಸಿದನು. ೧೨೬. ಅನ್ಯಾಯ! ನಾವು ಕನ್ಯಾದಾನ ಮಾಡುವುದಕ್ಕಿಂತ ಮುಂಚೆಯೇ ಕನ್ಯೆಯೊಡನೆ ಕೂಡಿರುವುದು, ಆ ಕನ್ಯಾಜಾರನನ್ನು ಈಗಲೇ ಎಳೆದು ತನ್ನಿ, ಹೋಗಿ" ಎಂದು ಆಯುಧಗಳನ್ನು ಕಯ್ಯಲ್ಲೇ ಹಿಡಿದು ಸಿದ್ಧರಾಗಿರುವ ರಾಕ್ಷಸ ವೀರಭಟರಿಗೆ ಬಾಣಾಸುರನು ಹೇಳಿದನು. ಆ ಸೈನ್ಯವು ಹೆಚ್ಚಾದ ತಾಳ ಕೋಲಾಹಲದಿಂದ ಉಷಾನಿರುದ್ಧರ ಕೇಳೀಗೃಹವನ್ನು ಪೂರ್ತಿಯಾಗಿ ಮುತ್ತಿತು. ವ|| ಆಗ ೧೨೭. ಕೋಮಲೆಯಾದ ಉಷೆಯೊಡನೆ ತುಟಿಯಲ್ಲಿ ತುಟಿಯೂ ಘನವಾದ ತೊಡೆಗಳಲ್ಲಿ ತೊಡೆಗಳೂ ನೀಳವಾದ ತೋಳುಗಳಲ್ಲಿ ಕೋಮಲವಾದ ತೋಳುಗಳೂ ಹೆಗಲಿನಲ್ಲಿ ಹೆಗಲೂ ಎದೆಯಲ್ಲಿ ಸ್ತನಗಳೂ ಬೆಸೆದಂತೆ ಸೇರಿರಲು, ಒಂದಾದ ವಧೂವರಾಕೃತಿಯಂತೆ ಆಗಿ ಸುಖದಿಂದ ಇದ್ದ ಅನಿರುದ್ಧನು, ರಾಕ್ಷಸರ ಕೋಲಾಹಲವನ್ನು ಕೇಳಿ, ಪ್ರಿಯೆಯ ಆಲಿಂಗನವನ್ನು ಸಡಿಲಿಸಿ ಎದ್ದು ಏಕಾಂಗವೀರನಾಗಿಯೇ ಕಾದಲು ನಡೆದನು. ವ|| ಅದನ್ನು ಕಂಡು ೧೨೮. ಉಷೆಯು ತನ್ನ ಪ್ರಿಯನು ಕೋಮಲರೂಪನು, ದೈತ್ಯರು ಉಗ್ರತರರೂಪರು, ತನ್ನ ಪತಿ ಒಬ್ಬನು-ರಾಕ್ಷಸರು ಅನೇಕರು, ತನ್ನ ಅಧೀಶನು ನಿರಾಯುಧನು ಆ ನಿಶಾಚರರು ಆಯುಧಧಾರಿಗಳು, ಹೀಗಿರುವಲ್ಲಿ ನನ್ನ ಪ್ರಿಯನು ದನುಜರನ್ನು ತಡೆದು ಪ್ರತಿಭಟಿಸಲು ಹೇಗೆ ಶಕ್ತನಾಗುವನೋ ಎಂದು ಆಲೋಚಿಸುತ್ತ ಕಾಂತನ ಮುಖವನ್ನು ಜಯಶ್ರೀಯೇ

---

೧. ಕನ್ಯಾಚೋರನ (ಕಗ) ೨. ಕೂಡಿರ್ದನಾತ್ಮಾಕೃತಿಯೆನೆ (ಕಗ)

ವ॥ ಆ ಸಮಯದೊಳ್ ರಣರಾಗದಿಂ ವಿಜೃಂಭಿಸುವ ತನ್ನ ಭುಜಬಲಮೆ ಬಲಮಾಗೆಯುಂ ಗೆಲ್ವೆನೆಂಬ ಮನೋರಥಮೆ ರಥಮಾಗೆಯುಂ ವಜ್ರೋಪಮಾನಮೆನಿಸುವ ತಳಪ್ರಹರಣಮೆ ನಿಜಪ್ರಹರಣಮಾಗೆಯುಮಿದಿರ್ಚಿ ಕಾದುವಲ್ಲಿ

ಹತಭುಜಗರ್ವಮಾಗಿ ದೆಸೆಗೆಟ್ಟನಿರುದ್ಧತಳಪ್ರಹಾರದಿಂ
ದಿತಿಜಭಟೌಘಮೋಡಿದುದಗುರ್ವಿಪ ಸಿಂಹತಳಪ್ರಹಾರದಿಂ
ಚ್ಯುತಮದವಾಗಿ ವಾರಣಘಟಾತತಿ ತಾರ್ಕ್ಷ್ಯತಳಪ್ರಹಾರದಿಂ
ಗತವಿಷವಾಗಿ ನಾಗಕುಲಮುತ್ಕಟಭೀತಿಯಿನೋಡುವಂತೆವೋಲ್ ೧೨೯

ವ॥ ತದನಂತರಂ

ಬಲಿಸೂನು ಸಹಸ್ರಭುಜಾ
ಬಳಗರ್ವದೆ ಷಷ್ಟಿಹಾಯನಂ ತುಂಗಗಜಂ
ಕಳಭಕ್ಕಿದಿರ್ಚಿದಂತಿರೆ
ಮುಳಿದು ಕುಮಾರಂಗಿದಿರ್ಚಿ ನಿಂದವಸರದೊಳ್ ೧೩೦

ರಸೆಯಿಂದಂ ತೇರ ಮೇಗಣ್ಕೊಗ್ಗೆದಸುರನ ಶಸ್ತ್ರಪ್ರಹಾರಂಗಳಂ ಬಂ
ಚಿಸುತುಂ ಬಾಹಾಸಹಸ್ರಾಟವಿಯೊಳವಿದು ದುರ್ಲಕ್ಷ್ಯನಾದಾಗಳಾ ರಾ
ಕ್ಷಸನೋವೋ ಗೆಲ್ದೆನೆಂದಾರ್ವುದುಮವನ ರಥಾಶ್ವಂಗಳಂ ಮುಷ್ಟಿಯಿಂ ಮ
ರ್ದಿಸುತುಂ ವಿದ್ಯಾಧರೇಂದ್ರಪ್ಲುತದಿನಿಳಿದನಾ ತೇರ ಮೇಲಿಂ ಕುಮಾರಂ ೧೩೧

ನೋಡುತ್ತಿರುವಂತೆ ನೋಡುತ್ತಿದ್ದಳು. ವ॥ ಆ ಸಮಯದಲ್ಲಿ ಯುದ್ಧಾಸಕ್ತಿಯಿಂದ ಉಬ್ಬುತ್ತಿರುವ ತನ್ನ ಬಾಹುಬಲವೇ ಬಲವೂ, ಜಯಿಸುವೆನೆಂಬ ಮನೋರಥವೇ ರಥವೂ, ವಜ್ರಾಯುಧ ಸಮಾನವಾದ ಕೈಯ ಹೊಡೆತವೇ ತನ್ನ ಆಯುಧವೂ ಆಗಿರಲು ಅನಿರುದ್ಧನು ದೈತ್ಯರನ್ನು ಎದುರಿಸಿ ಕಾದಿದನು. ೧೨೯. ಅನಿರುದ್ಧನ ಹಸ್ತಪ್ರಹಾರದಿಂದಲೇ ರಾಕ್ಷಸಭಟನ ಸಮೂಹವು ತನ್ನ ಭುಜಗರ್ವವನ್ನು ಕಳೆದುಕೊಂಡು ಭಯಂಕರ ಸಿಂಹದ ಪಂಜ (ಕೈ)ದ ಹೊಡೆತದಿಂದ ಆನೆಯ ಸಮೂಹವು ಮದವನ್ನು ಕಳೆದುಕೊಂಡೂ, ಗರುಡನ ರೆಕ್ಕೆಯ ಪ್ರಹಾರದಿಂದ ನಾಗಕುಲವು ವಿಷವನ್ನು ಕಳೆದುಕೊಂಡೂ ಓಡುವಂತೆ ಅತಿಭೀತಿಯಿಂದ ದಿಕ್ಕೆಟ್ಟು ಓಡಿಹೋಯಿತು. ವ॥ ಆಮೇಲೆ ೧೩೦. ಬಲಿಪುತ್ರನಾದ ಬಾಣಾಸುರನು ತನ್ನ ಸಾವಿರ ತೋಳುಗಳ ಬಲಗರ್ವದಿಂದ ಅರವತ್ತು ವರ್ಷ ವಯಸ್ಸಿನ ಸಲಗವು ಕಲಭವನ್ನು ಮೇಲೆ ಎದಿರಿಸಿ ನಿಲ್ಲುವಂತೆ ರೇಗಿ ಅನಿರುದ್ಧ ಕುಮಾರನನ್ನು ಎದುರಿಸಿನಿಂತನು. ೧೩೧. ಬಾಣಾಸುರನು ರಥದ ಮೇಲೆ ಇದ್ದು ಯುದ್ಧಮಾಡುತ್ತಿದ್ದನು. ಅನಿರುದ್ಧನು ಭೂಮಿಯ ಮೇಲಿಂದ ರಥದ ಮೇಲಿದ್ದ ಬಾಣನ ಸಾವಿರ ತೋಳುಗಳ ಗುಂಪಿನೊಳಕ್ಕೆ ಹಾರಿ ಅವಿತುಕೊಂಡನು. ಎದಿರುಗಡೆ ಕೆಳಗೆ ಅನಿರುದ್ಧನನ್ನು ಕಾಣದ ಬಾಣನು ಓಹೋ ನಾನು ಗೆದ್ದೆನು. ಎಂದು ಅಬ್ಬರಿಸಿದನು. ಆಗ ಅನಿರುದ್ಧನು ರಥದ ಕುದುರೆಗಳನ್ನು ಕೈಯಿಂದಲೇ ಮುಷ್ಟಿಯಿಂದ ಮರ್ದಿಸುತ್ತ ವಿದ್ಯಾಧರೇಂದ್ರರು ಹಾರುವಂತೆ ಹಾರಿ ತೇರಮೇಲಿಂದಿಳಿದನು.

ವ|| ಅಂತು ಮನ್ಮಥಸೂನು ಬಲಿಸೂನುವಂ ವಿರಥನಂ ಮಾಡೆ ರಣದೊಳೀತಂಗಭಿಮುಖನಾಗಿ [1]ಗೆಲ್ವುದರಿದೆಂದು ನಭೋಂತರಕ್ಕೆ ನೆಗೆದು ಅಂತರ್ಹಿತಮೂರ್ತಿಯಾಗಿ ಬಾಣಂ [2]ನಾಗಪಾಶದಿಂದನಿರುದ್ಧನಂ ನಿರುದ್ಧನಂ ಮಾಡೆ

ಮಾಯೆಯೊಳೆ ಗೆಲ್ದ ದಾನವ
ನಾಯಕನಂ ನಗುವ ಮದನಸುತನುಪಹಾಸ
ಚ್ಛಾಯೆ ಬೆಡಂಗಾಯ್ತು ಯಶ
ಶ್ರೀಯ ಮನೋಹರಸಿತಪ್ರಸಾಧನ ರುಚಿವೋಲ್ ೧೩೨

ವ|| ಇತ್ತಲನ್ನೆಗಂ ದ್ವಾರಾವತಿಯೊಳನಿರುದ್ಧನಂ ಕಾಣೆವೆಂಬ ಕಳಕಳದ ಸಂಭ್ರಮಂ ನೆಗಟೆ

ಸ್ಮರಸುತನಂತಃಪುರಸತಿ
ಯರ ಹಾಹಾವಿರುತಿ ಹೇಮಹರ್ಮ್ಯಾಗ್ರದೊಳು
ದ್ಧುರಮೊಗೆದತ್ತೊಗೆವಂತಿರೆ
[3]ಕುರರೀಕ್ರೇಂಕಾರಮರುಣಜಲಧರತತಿಯೊಳ್ ೧೩೩

ವ|| ಮತ್ತಂ

ಅನಿರುದ್ಧನಂತವುರದಂ
ಗನೆಯರ ರೋದನರವಂ ಸುಧಾಗೃಹತತಿಯೊಳ್
ಜನಿಯಿಸಿದುದು ಧವಳಾಂಬುಜ
ವನದೊಳ್ ಪೆಣ್ಣಂಚೆಯಿಂಚರಂ ಪೊಣ್ಮುವವೋಲ್ ೧೩೪

ವ|| ಹಾಗೆ ಮನ್ಮಥಕುಮಾರನು ಬಲಿಪುತ್ರನನ್ನು ರಥವಿಲ್ಲದವನನ್ನಾಗಿ ಮಾಡಿದುದರಿಂದ ಬಾಣನು ಈತನೊಡನೆ ಎದಿರಾಗಿ ಯುದ್ಧ ಮಾಡುವುದೂ ಗೆಲ್ಲುವುದೂ ಅಸಾಧ್ಯವೆಂದು ಅಂತರಿಕ್ಷಕ್ಕೆ ನೆಗೆದು ಅದೃಶ್ಯ ದೇಹನಾಗಿ ನಾಗಪಾಶದಿಂದ ಅನಿರುದ್ಧನನ್ನು ಬಂಧಿಸಿದನು. ೧೩೨. ಮಾಯೆಯಿಂದ ಗೆದ್ದ ರಾಕ್ಷಸ ನಾಯಕನನ್ನು ಹಾಸ್ಯಮಾಡಿ ನಗುತ್ತಿರುವ ಅನಿರುದ್ಧನ ಉಪಹಾಸದ ಕಾಂತಿಯು ಆತನ ಯಶಶ್ರೀಯ ಮನೋಹರವಾದ ನಗುವಿನ ಅಲಂಕಾರ ಕಾಂತಿಯಂತೆ ಬೆಡಗಾಯ್ತು ವ|| ಅತ್ತ ದ್ವಾರಾವತಿಯಲ್ಲಿ ಆಗ ಅನಿರುದ್ಧನು ಕಾಣಿಸುವುದಿಲ್ಲವೆಂಬ ಕಳಕಳದ ಸಂಭ್ರಮವು ಹೆಚ್ಚಾಯಿತು. ೧೩೩. ಸುವರ್ಣ ಸೌಧಾಗ್ರದಲ್ಲಿ ಅನಿರುದ್ಧನ ಅಂತಃಪುರದ ವನಿತೆಯರ ಹಾಹಾಕಾರ ಶಬ್ದವು ಸಂಜೆಗೆಂಪು ಹರಡಿದ ಮೇಘವನ್ನು ನೋಡಿದ ಕುರರಿಪಕ್ಷಿಗಳ ಕ್ರೇಂಕಾರವು ಹೆಚ್ಚುವಂತೆ ಹೆಚ್ಚಿತು. ೧೩೪. ಅನಿರುದ್ಧನ ಅಂತಃಪುರದ ಅಂಗನೆಯರ ರೋದನ ಧ್ವನಿ ಸುಧಾಗೃಹಗಳ ಗುಂಪಿನಲ್ಲೂ ಬೆಳ್ದಾವರೆಯ ವನದಲ್ಲಿ ಹೆಣ್ಣು ಹಂಸೆಗಳ ಇಂಪಾದ ಧ್ವನಿಯಂತೆ

---

೧. ನಿಲ್ವುದರಿದೆಂದು (ಕಗ) ೨. ನಾಗಾಭಾಣವರ್ಷದಿಂದನಿರುದ್ಧನಂ (ಕಗ) ೩. ಕರಂಕ್ರೇಂಕಾರಚಾರುಜಲಧರತತಿಯೊಳ್ (ಕ) ಗಿರಿಯಗ್ರಸ್ಥಲದೊಳೊಗೆವಜಲಧರತತಿಯೊಳ್ (ಗ) ಗಿರಿಯಗ್ರಸ್ಥಲದೊಳೊಳರ್ವಜಲಧರವಿರುತಂ (ಮೊಲ)

ಯಾದವರಿದೇನಿದೇಂ ಭಯ
ವಾದುದಿದೆತ್ತಣ ನಿನದವೆನುತೆ ತಳರ್ದರ್ ಗೇ
ಹೋದರದಿಂ ಬಹುಶೈಲಗು
ಹೋದರದಿಂ ತಳರ್ವ ಸಿಂಹಸಂತತಿಗಳವೋಲ್ ೧೩೫

ವ|| ಆ ಸಂಭ್ರಮಪರಂಪರೆಯೊಳ್ ಪರಮ[1]ಜ್ಞಾನರೂಪನಜ್ಞನಂತೆ ವಿಭ್ರಾಂತನಾಗಿರ್ದನಂತರಂ

ಅನಿರುದ್ಧವ್ಯಾಪ್ತಿಯಂ ನಾರದಮುನಿ [2]ತಿಳಿದೆಟ್ಟಿಂದವಷ್ಟಬ್ಧರತ್ನಾ
ಸನನಾದತ್ತಾರ್ಘ್ಯಪಾದ್ಯಂ ದಶನರುಚಿಸುಧಾಸಾರದಿಂ ಯಾದವೋದ್ವೇ
ಗನಿದಾಘಂ ಪಿಂಗೆ ವೃತ್ತಾಂತವನಱಿಪುವುದುಂ ನೋಡಿದಂ ತಿರ್ಯಗಾಲೋ
ಕನನುದ್ಯಚ್ಚಕ್ರಮಂ ಸಂಗರಪಿಶುನವಿದೆಂಬನ್ನೆಗಂ ವಾರಿಜಾಕ್ಷಂ ೧೩೬

ಇದು ಸಮಸ್ತಕಮಲಭವಾಂಡಮಾಲಾ ಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯ ಮಹಾಪ್ರಬಂಧದೊಳ್ ಶಿಶುಪಾಲವಧ
ನಿದಾಘಕಾಲವರ್ಣನ ಬಾಣಪುತ್ರೀಮದನಪುತ್ರ
ಸಂಯೋಗವರ್ಣನಂ ಸಪ್ತದಶಾಶ್ವಾಸಂ

ಉಂಟಾಯಿತು. ೧೩೫. ಯಾದವರು "ಇದೇನು ಇದೇನು ಭಯವೊದಗಿತು? ಇದು ಎತ್ತ ಕಡೆಯ ಶಬ್ದ?" ಎನ್ನುತ್ತ ಗುಹೆಗಳಿಂದ ಹೊರಹೊರಡುವ ಸಿಂಹಗಳಂತೆ ತಮ್ಮ ತಮ್ಮ ಮನೆಗಳೊಳಗಿನಿಂದ ಹೊರಹೊರಟರು. ವ|| ಆ ಸಂಭ್ರಮ ಪರಂಪರೆಯಲ್ಲಿ ಪರಮ ಜ್ಞಾನರೂಪನಾದ ಕೃಷ್ಣನು ಅಜ್ಞನಂತೆ ವಿಭ್ರಾಂತನಾಗಿದ್ದನು. ಅನಂತರ ೧೩೬. ಅನಿರುದ್ಧನ ಉದ್ಯೋಗವನ್ನು ತಿಳಿದು ನಾರದ ಮುನಿ ಕೃಷ್ಣನ ಹತ್ತಿರಕ್ಕೆ ಬಂದು, ಅರ್ಘ್ಯಪಾದ್ಯಾದಿಗಳಿಂದ ಸತ್ಕೃತನಾಗಿ ರತ್ನಪೀಠವನ್ನೊರಗಿಕೊಂಡು ಕುಳಿತು ತನ್ನ ಹಲ್ಲಿನ ಕಾಂತಿಯೆಂಬ ಅಮೃತವೃಷ್ಟಿಯಿಂದ ಯಾದವರ ಉದ್ವೇಗವೆಂಬ ಬೇಸಿಗೆಯ ತಾಪವು ತಪ್ಪುವಂತೆ ಆ ವೃತ್ತಾಂತವನ್ನು ತಿಳಿಸಿದನು. ಕಮಲಾಕ್ಷನು ಇದು ಯುದ್ಧಸೂಚಕವೆಂಬಂತೆ ಪಕ್ಕಕ್ಕೆ ತಿರುಗಿ ಹೊಳೆಯುವ ತನ್ನ ಚಕ್ರಾಯುಧವನ್ನು ನೋಡಿದನು. ಇದು ಸಮಸ್ತ ಕಮಲ ಭವಾಂಡಮಾಲಾ... ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತನಾದ ಸುಕವೀಂದ್ರ ರುದ್ರಭಟ್ಟನಿಂದ ಪ್ರಣೀತವಾದ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಶಿಶುಪಾಲವಧೆ, ಬೇಸಗೆಯ ಕಾಲದ ವರ್ಣನೆ, ಬಾಣಪುತ್ರಿ (ಉಷೆ)ಯ ಮದನ ಪುತ್ರ (ಅನಿರುದ್ಧ)ನ ಸಂಯೋಗ ವರ್ಣನೆಗಳ ಹದಿನೇಳನೆಯ ಆಶ್ವಾಸ.

---

೧. ಜ್ಞಾನರೂಪಂ ರೂಪಜ್ಞನಂತೆ (ಕಗ) ೨. ತಿಳಿಸಿದೆಟ್ಟಿಂದನಷ್ಟಬ್ಧರತ್ನಾಸನನಾದೇಯಾರ್ಘ್ಯಪಾದ್ಯಂ (ಕ) ತಿಳಿದೆಟ್ಟಿಂದವಷ್ಟಂಭ ರತ್ನಾಸನನಾಗೀರ್ಘ್ಯಪಾದ್ಯಂ (ಖ) ತಿಳಿದೆಟ್ಟಿಂದವಷ್ಟಂಭ ರತ್ನಾಸನನಾದೇಯಾರ್ಘ್ಯಪಾದ್ಯಂ (ಗ)

# ಅಷ್ಟಾದಶಾಶ್ವಾಸಂ

ಶ್ರೀಲೀಲಾಗೃಹತೋರಣ
ಬಾಲಾರುಣಕಿಸಲಯೌಘಮೆನೆ ವಕ್ಷದೊಳು
ನ್ಮೀಲಿಸೆ ಕೌಸ್ತುಭಮಣಿರು
ಗ್ಜಾಲಂ ವನಮಾಲಿ[೧] ಸಿಂಹಪೀಠದೊಳಿರ್ದಂ ೧

ಬಲಿಸುತನೊಳ್ ಸಹಸ್ರಭುಜನೊಳ್ ಹರಪಾಲಿತನೊಳ್ ಮಹಾಚತು
ರ್ಬಲಯುತನೊಳ್ ಜಿತಾಖಿಲಜಗತ್ತ್ರಯನೊಳ್ ರಣಕೇಳಿಕಾಮನೊಳ್
ಕಲಹಮೊಡರ್ಚಿತೆಂಬ ನಲವೇಱಿರೆ ತಾರ್ಕ್ಷ್ಯನನಾಗಳೇಱಿದಂ
ಹಲಧರಪುಷ್ಪಧನ್ವರೊಡನೇಱಿ ವಿಜೃಂಭಿಸೆ ತೂರ್ಯನಿಸ್ವನಂ ೨

ವ|| [೨]ಅಂತು ಸಮರೋಚಿತಪರಿಕರಸಮೇತಂ ಖಗೇಂದ್ರನನೇಱುವುದುಂ ದ್ವಾರಾವತಿಗೆ ಬಾಣನಗರಮೇಕಾದಶಸಹಸ್ರಯೋಜನಾಂತರದೊಳಿರ್ಪುದೆಂಬುದಂ ಬಗೆದು ನೋಡುತ್ತುಂ ವೈಹಾಯಸೋಡ್ಡಾಯನರಭಸೋದ್ದಾಮರನಾಗಿ

ಕ್ರಮಪಕ್ಷಕ್ಷೇಪವಿಕ್ಷೋಭದಿನಖಿಳಮಹೀಚಕ್ರಮಲ್ಲಾಡೆ ವಾರಾ
ಶಿ ಮರುನ್ಮಾರ್ಗಸ್ಥಳಕ್ಕಟ್ಟಳಿಸೆ ಕುಲಗಿರಿಶ್ರೇಣಿ ಕಿಱ್ತೇಱಿ ತಾರಾ
[೩]ಹಿಮರುಕ್ಚಂಡಾಂಶುಗಳ್ ಸಂಚಳಿಸೆ ತುಳುಕಿ ತಾರಾಧ್ವಗಂಗಾಜಲಂ ಸ
ಪ್ತಮವಾಯುಸ್ಕಂಧದತ್ತಲ್ ನೆಗೆದನಧರಿತ ಸ್ವರ್ಗದೇಶಂ ಖಗೇಶಂ ೩

೧. ಶ್ರೀದೇವಿಯ ಲೀಲಾಗೃಹದ ತೋರಣದ ಬಾಲಸೂರ್ಯಕಾಂತಿಯ ಚಿಗುರುಗಳ ಮಾಲೆಯೋ ಎನ್ನುವಂತೆ ತನ್ನ ಎದೆಯಲ್ಲಿ ಕೌಸ್ತುಭಮಣಿಯ ಕಾಂತಿಸಮೂಹವು ಕಾಣಿಸುತ್ತಿರಲು ವನಮಾಲಿ ಕೃಷ್ಣನು ಸಿಂಹಾಸನದಲ್ಲಿ ಮಂಡಿಸಿದ್ದನು. ೨. ಬಲಿ ಚಕ್ರವರ್ತಿಯ ಪುತ್ರನೂ, ಸಾವಿರತೋಳಿನವನೂ, ಈಶ್ವರನಿಂದ ರಕ್ಷಿತನೂ, ದೊಡ್ಡದಾದ ಚತುರಂಗಸೇನೆಯೊಡಗೂಡಿದವನೂ, ಮೂರುಲೋಕವನ್ನೂ ಪೂರ್ತಿಯಾಗಿ ಜಯಿಸಿದವನೂ ಯುದ್ಧಕ್ರೀಡೆಯಲ್ಲಿ ಅತ್ಯಾಶೆಯುಳ್ಳವನೂ ಆದ ಬಾಣಾಸುರನೊಡನೆ ಯುದ್ಧವು ಕೈಗಟ್ಟಿತು ಎಂಬ ಸಂತೋಷವು ಹೆಚ್ಚಿದುದರಿಂದ ಕೃಷ್ಣನು ಬಲರಾಮ ಮನ್ಮಥರೊಡನೆ, ಮಂಗಳವಾದ್ಯ ಧ್ವನಿಯು ಹೆಚ್ಚುತ್ತಿರುವಲ್ಲಿ ಗರುಡನನ್ನು ಏರಿದನು. ವ|| ಹಾಗೆ ಯುದ್ಧಕ್ಕೆ ಬೇಕಾದ ಪರಿಕರ ಸಮೇತನಾಗಿ ಗರುಡನನ್ನು ಏರಲು ದ್ವಾರಕಿಗೆ ಬಾಣನಗರವು ಹನ್ನೊಂದು ಸಾವಿರಯೋಜನ ದೂರದಲ್ಲಿ ಇದೆಯೆಂಬುದನ್ನು ಯೋಚಿಸಿ, ನೋಡುತ್ತ ಗರುಡನು ಆಕಾಶದಲ್ಲಿ ಮೇಲೆ ಹಾರುವ ರಭಸದಿಂದ ಅದ್ಭುತಾಡಂಬರನಾದನು. ೩. ಗರುಡನು ಸ್ವರ್ಗಲೋಕವೂ ಕೆಳಕ್ಕಾಗುವಂತೆ ಮಾಡಿ ಸಪ್ತಮವಾಯ ಸ್ಕಂಧಕ್ಕಿಂತ ಮೇಲೆ ನೆಗೆದುಹಾರುತ್ತಿದ್ದನು. ಆಗ ಅವನ ರೆಕ್ಕೆಗಳ ಬೀಸುವಿಕೆಯ ರಭಸದಿಂದ

---

೧. ಸಿಂಹಪೀಠದಿನೆಟ್ಟಿಂ(ಖ) ೨. ಅಂತು ಸಮುಚಿತಜ್ಞಾನಸಮೇತಂ (ಕಗ) ಅಂತು ಸಮುಚಿತಾಜ್ಞಾಸಮೇತಂ (ಮೊಅ) ೩. ಹಿಮಕೃಚ್ಚಂಡಾಂಶುಗಳ್ ಸಂಚಲಿಸುತುಮುರೆ (ಕಗ)

ವ|| ಅಂತತಿವೇಗದಿಂ ಪೋಗೆವೋಗೆ ಮುಂದೊಂದೆಡೆಯೊಳದೊಂದು ಪಿಶಂಗವರ್ಣಂ ನಿಜನಿಜಾಂಗವರ್ಣಮಂ ತಳ್ಪೊಯ್ಯಲಂತದನೇಕಕುಂಡಲಂ ಕಂಡು

ಅಂಬುಜನಾಭ ನಮ್ಮವಯವಂಗಳೊರ್ಮೆಯೆ ನಿನ್ನ ಯುದ್ಧರಾ
ಗಂ ಬಳಸಿತ್ತೊ ಕೌಸ್ತುಭವಿಭೂಷಣದೀಧಿತಿ ವೇಷ್ಟಿಸಿತ್ತೊ ಪೀ
ತಾಂಬರಕಾಂತಿ ಸುತ್ತಿದುದೊ ವಿಸ್ಮಯಮಾದಪುದೀಗಳಿತ್ತಣಿಂ
ಕೆಂಬೆಳಗಿಂತಿದಾವರಿಸಿದತ್ತೆನೆ ಕೇಳುತುಮಬ್ಜಲೋಚನಂ ೪

ವ|| ಅಂತೆಯ್ದೆ ಬಂದು ಮೇಘಮಾರ್ಗವ್ಯಾಪ್ತಮಾದ ಮಾರ್ಗನಿರೋಧಕ್ಷಮಾಶುಶುಕ್ಷಣಿಯಂ ಕಂಡು ಖಂಡಪರಶುವಿನಾಜ್ಞೆಯಿಂದಿರ್ದಾಹವನೀಯಾಭಿಧಾನಕ್ಕೆಡೆಯಾದ ಪಾವಕನೆಂಬುದಂ ದೇವವ್ರತಿಯ ಪೇಳ್ಕೆಯಿಂ ತಿಳಿದಿಲ್ಲಿಗೆ ತಕ್ಕುಪಾಯಮಂ ವೈನತೇಯ ನೀನೇ ಬಲ್ಲೆಯೆನೆ ವಿಹಂಗವಲ್ಲಭಂ

ಬಿದಿಪದ್ಮೋದರನಂಘ್ರಿಯಂ ತೊಳೆಯೆ ಮುನ್ನಂ ಪುಟ್ಟಬಂದೀ ಮರು
ನ್ನದಿ ಲೋಕತ್ರಿತಯಂಗಳಂ ಮುಳುಗಿಸಲ್ಕಂಡಂತದಂ ಶಂಭು ಜೂ
ಟದೊಳಾಂತಂ ತಲೆಮುಟ್ಟೆ ತಾಳ್ವದರಿದಲ್ತೆಂಬಂತೆ ತತ್ಸಿಂಧುಬಂ
ಧದ ನೀರೆಲ್ಲಮನೊಂದುಮುಕ್ಕುಳಿಗೊಳೆ ತಂದಾ ವಹ್ನಿಯಂ ತೂಳ್ದಿದಂ ೫

ವ|| ಆ ಪ್ರದೇಶದಿಂ ಕೇಶಿಸೂದನಂ ನಡೆವುದುಂ ಬ್ರಹ್ಮಪುತ್ತ್ರಂ ದ್ವಿತ್ರಿಯೋಜನಾಂತರದಲ್ಲಿ ನಿಲ್ಲಿಸಿ

ಭೂಮಂಡಲವೆಲ್ಲಾ ಅಲ್ಲಾಡಿತು. ಸಮುದ್ರವು ಆಕಾಶಕ್ಕೆ ಉಕ್ಕಿತು. ಕುಲಗಿರಿಗಳ ಸಾಲು ಕಿತ್ತೆದ್ದಿತು. ನಕ್ಷತ್ರಗಳೂ ಚಂದ್ರಸೂರ್ಯರೂ ಸಂಚಲಿಸಿದರು. ಆಕಾಶಗಂಗೆಯ ನೀರು ತುಳುಕಿತು. ವ|| ಹಾಗೆ ಅತಿವೇಗದಿಂದ ಹೋಗುತ್ತಿರಲು ಮುಂದೆ ಒಂದೆಡೆಯಲ್ಲಿ ಕೆಂಪುಬಣ್ಣವು ಬಲರಾಮಕೃಷ್ಣಾದಿಗಳ ಮೈಬಣ್ಣವನ್ನು ಪ್ರತಿಭಟಿಸಿ ಅವರನ್ನು ಮುಸುಕಿತು. ಅದನ್ನು ಕಂಡ ಬಲರಾಮನು, ೪. "ಕೃಷ್ಣಾ, ನಿನ್ನ ಯುದ್ಧರಾಗ (೧. ಆಸಕ್ತಿ, ೨. ಕೆಂಪು)ವೇ ನಮ್ಮ ಅವಯವಗಳನ್ನೆಲ್ಲಾ ಆವರಿಸಿತೋ ! ನಿನ್ನ ಕೌಸ್ತುಭಾಲಂಕಾರ ಕಾಂತಿಯು ಸುತ್ತಿಕೊಂಡಿತೊ! ಆಶ್ಚರ್ಯವಾಗುತ್ತಿದೆ! ಇದೆಲ್ಲಿಂದ ಈ ಕೆಂಪು ಬೆಳಕು ಆವರಿಸಿತು?" ಎಂದು ಕೇಳಿದನು. ಕೃಷ್ಣನು ವ|| ಹಾಗೆಯೇ ಮುಂದೆ ಬಂದು, ಮೇಘಮಾರ್ಗವನ್ನು ವ್ಯಾಪಿಸಿ ದಾರಿಯನ್ನು ತಡೆಯಲು ಸಾಮರ್ಥ್ಯವುಳ್ಳ, ಅಗ್ನಿಯನ್ನು ನೋಡಿದನು. ಈಶ್ವರನ ಆಜ್ಞೆಯಿಂದ ಆಹವನೀಯವೆಂಬ ಹೆಸರನ್ನು ಪಡೆದ ಆ ಅಗ್ನಿಯನ್ನು ದೇವವ್ರತಿಯ ಹೇಳಿಕೆಯಿಂದ ತಿಳಿದು, "ಈ ಸಂದರ್ಭಕ್ಕೆ ತಕ್ಕ ಉಪಾಯವನ್ನು, ವೈನತೇಯಾ, ನೀನೆ ಬಲ್ಲೆ" ಎಂದನು. ಗರುಡನು ೫. ಬ್ರಹ್ಮನು ಪದ್ಮನಾಭನ ಪಾದವನ್ನು ತೊಳೆಯಲು ಮುಂಚೆ ಹುಟ್ಟಿ ಬಂದ ಈ ದೇವ ಗಂಗಾನದಿಯು ಲೋಕತ್ರಯವನ್ನೂ ಮುಳುಗಿಸುವುದನ್ನು ಕಂಡು ಈಶ್ವರನು ತನ್ನ ಜಡೆಮುಡಿಯಲ್ಲಿ ಧರಿಸಿದುದು ಏನೂ ಅಸಾಧ್ಯವಾದ ಕೆಲಸವಲ್ಲ ಈಗ ಗರುಡನು ಮಾಡಿದ ಕೆಲಸವು ಅಸಾಧ್ಯವಾದುದು' ಎನ್ನುವಂತೆ ಆ ಗಂಗೆಯ ನೀರನ್ನೆಲ್ಲಾ ಬಾಯಿಮುಕ್ಕುಳಿಸಲು ತೆಗೆದುಕೊಳ್ಳುವಂತೆ ತೆಗೆದುಕೊಂಡು ಬಂದು ಅದರಿಂದ ಆ ಅಗ್ನಿಯನ್ನು ಆರಿಸಿದನು. ವ|| ಆ ಪ್ರದೇಶದಿಂದ ಕೇಶಿಸೂದನನು ಮುಂದೆ ನಡೆದನು.

ಇದಿರೊಳ್ ತೋರ್ಪುದಿದಲ್ತೆ ಶೋಣಿತಪುರಂ ನೋಡೀ ಪುರೋದ್ಯಾನದೇ
ಶದೊಳಿರ್ಪಂ ತ್ರಿಪುರಾರಿಯುಂ ಗುಹನುಮೆಂದುಂ ಬಾಣರಕ್ಷಾರ್ಥಮೆಂ
ಬುದುಮಂತಾ ತ್ರಿಪುರಾರಿಯಂ ಗುಹನುಮಂ ಪೋ ಗೆಲ್ವೆನೆಂದಾಜಿದ
ರ್ಪದ ಕೂರ್ಪೇಱಿರೆ ಬೇಱದೊಂದೆಸಕಮಂ ಕೈಕೊಂಡನಬ್ಜೋದರಂ ೬

ವ|| ತದನಂತರಂ

ಉದಿತಾಶಾಪ್ರತಿನಾದದಿಂ ದಿಗಧಿಪರ್ ಬಾಣಾಸುರಂಗಾಭಿಚಾ
ರದ ಮಂತ್ರಕ್ರಿಯೆಯಂ ನೆಗಲ್ಟುವವೊಲಿರ್ಪಂತಚ್ಯುತಂ ಯುದ್ಧಸ
ಮ್ಮದದಿಂ ಪೂರಿಸೆ ಪಾಂಚಜನ್ಯಮನಜಾಂಡಂ ತನ್ಮಹಾನಾದದಿಂ
ಪುದಿದಂತಚ್ಚರಿಯಂ ನಿಮಿರ್ಚಿದುದು ನಾದಗ್ರಂಥಿಯೆಂಬಂತೆವೋಲ್ ೭

ಉಡಿವಂತೆ ವಿಜಯವಲ್ಲರಿ
ಯಡರ್ಪು ತದ್ಧ್ವನಿ ಪಳಂಚಿ ಕೇಕಿಧ್ವಜವಂ
ದುಡಿದುದು ಸಹಸ್ರಭುಜವನ
ದುಡಿಪಕ್ಕಿದು ಸಂಚಕರಮೆನಲ್ ಬಲಿಸುತನಾ ೮

ತನ್ನಾದಹತಿಗೆ ಜೂಟದ
ಪನ್ನಗಪತಿ ಸುಗಿಯೆ ತುಳುಕೆ ಗಂಗಾಂಬು ಮಹೀ
ಭೃನ್ನಂದನೆ ಬೆದಱೆ ಹರಂ
ಗನ್ನೆಗಟ್ಟಿತ್ತಧಿಕಸಂಭ್ರಮಂ ತತ್‌ಕ್ಷಣದೊಳ್ ೯

ನಾರದನು ಬಾಣನಗರಿಗೆ ಮೂರು ಯೋಜನ ದೂರದಲ್ಲೇ ಅವನನ್ನು ನಿಲ್ಲಿಸಿ ೬. "ಇದಿರಿನಲ್ಲಿ ಕಾಣುತ್ತಿರುವ ಇದೇ ಶೋಣಿತಪುರವಲ್ಲವೆ! ನೋಡು ಈ ಪುರದ ಉದ್ಯಾನಪ್ರದೇಶದಲ್ಲಿ ಬಾಣರಕ್ಷಣೆಗಾಗಿ ತ್ರಿಪುರಾರಿಯೂ ಗುಹನೂ ಸರ್ವದಾ ಇರುವರು" ಎಂದು ಹೇಳಿದನು. ಆಗ ಕೃಷ್ಣನು. "ಇರಲಿ! ತ್ರಿಪುರಾರಿಯನ್ನೂ ಗುಹನನ್ನೂ ಗೆಲ್ಲುವೆನು' ಎಂದು ಯುದ್ಧದರ್ಪದ ಕ್ರೌರ್ಯವು ಹೆಚ್ಚಾಗಲು ಬೇರೆಯೊಂದು ಕಾರ್ಯವನ್ನು ನಡೆಸಿದನು. ವ|| ಆಮೇಲೆ, ೭. ಕೃಷ್ಣನು, ಯುದ್ಧದ ಸಂತೋಷದಿಂದ ಪಾಂಚಜನ್ಯ ಶಂಖವನ್ನು ಊದಿದನು. ಆ ಧ್ವನಿಯು ದಿಗಂತಗಳಿಗೆ ತಾಕಿ ಉಂಟಾದ ಪ್ರತಿಧ್ವನಿಯು ದಿಕ್ಪಾಲಕರು ಬಾಣಾಸುರನಿಗೆ ಮಾಡುವ ಅಭಿಚಾರದ ಮಂತ್ರದಂತೆ ಕೇಳಿಸಿತು. ಬ್ರಹ್ಮಾಂಡವು ಆ ಶಂಖನಾದದಿಂದ ತುಂಬಿ, ನಾದದ ಗಂಟೆಂಬಂತೆ ಆಶ್ಚರ್ಯವನ್ನು ಪ್ರಸರಿಸಿತು. ೮. ವಿಜಯಲತೆಯ ಆಶ್ರಯ ವೃಕ್ಷವು ತುಂಡಾಗುವಂತೆ, ಆ ಶಂಖಧ್ವನಿ ತಾಕಿದುದರಿಂದ ಬಾಣನ ಮಯೂರಧ್ವಜಸ್ತಂಭವು ಬಾಣಾಸುರನ ಸಾವಿರ ತೋಳುಗಳ ಛೇದನಕ್ಕೆ ಸಂಚಕಾರವೆನ್ನುವಂತೆ ಮುರಿದು ಬಿದ್ದಿತು. ೯. ಕೃಷ್ಣನ ಶಂಖದ ಆ ಧ್ವನಿಯ ಹೊಡೆತಕ್ಕೆ ಈಶ್ವರನ ಜಡೆಮುಡಿಯ ಸರ್ಪಗಳು ಹೆದರಿದವು, ಗಂಗೆಯ ನೀರು ತುಳುಕಿತು. ಪಾರ್ವತಿದೇವಿಯು ಬೆದರಿದಳು. ಆ ಕ್ಷಣದಲ್ಲೇ ಈಶ್ವರನಿಗೂ ಅಧಿಕವಾದ

ವ॥ ಆಗಳಾ ಮಹಾನಾದಮಂ ಪಾಂಚಜನ್ಯನಾದಮೆಂದಱಿದು ಶರ್ವಂ ಪಾರ್ವತೀಸುತನಿರ್ವಿಶೇಷನಪ್ಪ ಬಾಣಂಬರಂ ಯುದ್ಧಮೇವುದೀಯೆಡೆಯೊಳೆ ವಾರಿಜಾಕ್ಷನಂ ನಿವಾರಿಪೆನೆಂದು ಗಿರಿವ್ರಜನಾಮಪಾವಕಪುರಸ್ಸರನಂಗಿರನೆಂಬಗ್ನಿರಾಜನುಮನಲ್ಲಿಂ ಪಿಂತೆ ನಂದಿಪ್ರಮುಖನಿಖಿಲ ಪ್ರಮಥಯೂಥಮನಲ್ಲಿಂ ಪೆಱಗೆ ಭೈಷಜ್ಯಕಾದಿಜ್ವರಮುಮಂ ಬೆಸಸೆ

ಇದಿರಾಂತಂಗಿರನಗ್ನಿ ರಾಜನಭಿಜನ್ಯಸ್ಯಂದನಂ ಬಂದು ಕೋ
ಪದಿನಾತ್ಮೀಯಕರತ್ರಿಶೂಲದಿನಿಡಲ್ ತಚ್ಛೂಲಮಂ ಮುಟ್ಟಿವ
ರ್ಧ್ರದನಾಗಳ್ ಪೆಱಿಯಂಬಿನಿಂ ತಱಿದು ಕೃಷ್ಣಂ ಸ್ಥೂಲಕರ್ಣಾಗ್ರಬಾ
ಣದಿನೆಚ್ಚಾತನ ವಕ್ಷಮಂ ಮಡಿಪಿದಂ ಧೂಮಧ್ವಜಾಧೀಶನಂ ೧೦

ವ॥ ಅದಂ ಕಂಡು ಗಿರಿವ್ರಜಂ ಗುಹಾಂತರಮನೋಡಿ ಪುಗೆ ಬೞಿಕಂ

ಇಳೆಯಂ ಕಿೞ್ತೆತ್ತಿ ಪಾಱುಂಬಳೆದಿಱುಪುವ ಚಂದ್ರಾರ್ಕಬಿಂಬಂಗಳಂ ಸೂ
ೞಿೞೊಳೆ ತಾಳಂಗುಟ್ಟುವೇೞುಂ [1]ಕಡಲುಮನುರೆ ತುಳ್ಕಾಡುವಾಶಾಗಜೇಂದ್ರಾ
ವಳಿಯಂ ಕೈಜಂತ್ರದಿಂ [2]ಪೋರಿಸುವುಡುಗಣಮಂ ಮಾಲೆಯಂ [3]ಕೋವ ಹೇಮಾ
ಚಳಮಂ ಬಟ್ಟಾಡುವೀಶಪ್ರಮಥಸಮಿತಿ ಬಂದತ್ತು ಸಂರಂಭದಿಂದಂ ೧೧

ಸಂಭ್ರಮವುಂಟಾಯಿತು. ವ॥ ಆಗ ಆ ಮಹಾನಾದವನ್ನು ಪಾಂಚಜನ್ಯ ಶಂಖನಾದವೆಂದು ಅರಿತ ಈಶ್ವರನು "ಪಾರ್ವತೀ ಪುತ್ರನಾದ ಷಣ್ಮುಖನಂತಿರುವ ಬಾಣಾಸುರನವರೆಗೂ ಈ ಯುದ್ಧವು ಏಕೆ ಬೇಕು! ಈ ಸ್ಥಳದಲ್ಲೇ ಆ ಕಮಲನೇತ್ರ ಕೃಷ್ಣನನ್ನು ಹಿಂದಿರುಗಿಸುತ್ತೇನೆ; ತಡೆಯುತ್ತೇನೆ." ಎಂದು, ಗಿರಿವ್ರಜನೆಂಬ ಅಗ್ನಿಯನ್ನು ಮುಂದೆ ಬಿಟ್ಟುಕೊಂಡು ಅಂಗಿರನೆಂಬ ಅಗ್ನಿರಾಜನೂ ಅವನ ಹಿಂದೆ ನಂದಿಯೇ ಮೊದಲಾದ ಸಕಲ ಪ್ರಮಥಸಮೂಹವೂ ಅವರ ಹಿಂದೆ ಭೈಷಜ್ಜಕಾದಿಜ್ವರಸಮೂಹವೂ ಕೃಷ್ಣನ ಮೇಲೆ ಹೋಗಬೇಕೆಂದು ಅಪ್ಪಣೆ ಮಾಡಿದನು. ೧೦. ಯುದ್ಧರಂಗಾಭಿಮುಖವಾಗಿ ರಥದಲ್ಲಿ ಬಂದ ಅಗ್ನಿರಾಜನಾದ ಅಂಗಿರನು ಕೋಪದಿಂದ ತನ್ನ ಕೈಯ ತ್ರಿಶೂಲಾಯುಧದಿಂದ ಹೊಡೆದನು. ತನ್ನನ್ನು ತಾಕಲು ಬರುತ್ತಿರುವ ಆ ಶೂಲವನ್ನು ಚಂದ್ರಬಾಣದಿಂದ ಹೊಡೆದು ಕತ್ತರಿಸಿದ ಕೃಷ್ಣನು ತನ್ನ ಕಿವಿಯವರೆಗೂ ಸೆಳೆದ ದಪ್ಪವಾದ ಬಾಣವನ್ನು ಬಿಟ್ಟು ಅಂಗಿರನ ಎದೆಗೆ ನಾಟಿಸಿ, ಧೂಮಧ್ವಜನಾದ ಅವನನ್ನು ಸಾಯಿಸಿದನು. ವ॥ ಅದನ್ನು ಕಂಡ ಗಿರಿವ್ರಜನು ಓಡಿಹೋಗಿ ಗುಹೆಯೊಳಗೆ ಸೇರಿಕೊಂಡನು. ಆಮೇಲೆ ೧೧. ಭೂಮಿಯನ್ನೇ ಕಿತ್ತೆತ್ತಿ ಚಕ್ರದಂತೆ ತಿರುಗಿಸುವ ಚಂದ್ರಸೂರ್ಯಮಂಡಲಗಳನ್ನು ಪ್ರತಿಜ್ಞೆಮಾಡಿ ಹಿಡಿದು ತಾಳವನ್ನು ಹಾಕುವ, ಏಳುಸಮುದ್ರಗಳನ್ನು ಚೆನ್ನಾಗಿ ತುಳುಕಾಡುವ, ದಿಗ್ಗಜಗಳ ಸಮೂಹವನ್ನು ಕರಯಂತ್ರದಿಂದ ಹೋರಾಡಿಸುವ, ನಕ್ಷತ್ರಗಳನ್ನು ಮಾಲೆಯಾಗಿ ಕಟ್ಟುವ, ಮೇರುಗಿರಿಯನ್ನು ಹಿಡಿದ ಚೆಂಡಿನಂತೆ ಆಡುವ ಈಶ್ವರನ ಪ್ರಮಥ ಸಮೂಹವು ಸಡಗರದಿಂದ ಬಂದಿತು.

೧. ಕಡಲನುರಿಯೆ (ಗ) ೨. ಪೂರಿಸು (ಗ) ೩. ಕೊಂಡು (ಗ)

ವಿಕೃತಾಂಗರ್ ವಿಕೃತಾಯುಧರ್ ವಿಕೃತವೇಷರ್ ಪೂಣ್ಕೆಯಿಂ ದಾನವಾಂ
ತಕನೊಳ್ ತಳ್ತಿಱಿದೀಗಳೆಲ್ಲಿತನಿತೊಂದಾಳಾಪವಾ ವೀರವೃ
ತ್ತಕವಂತಪ್ಪೊದವೆಂಬಿನಂ ಪ್ರಮಥರಂಗೋಪಾಂಗಸಂಭಿನ್ನ ಸಾ
ಯಕಪತ್ರಂಗಳೆಱಂಕೆಯಾಗೆ [1]ದೆಸೆಬಿಟ್ಟುಂ ಪಾಱಿದರ್ ಬೇಗದಿಂ ೧೨

ವ|| ತದನಂತರಂ

ಜವದಿಂ ಬಂದುದು ದಳ್ಳಿಸುತ್ತುರಿವ ಮೆಯ್ಯುಂ ಧೂಮದುರ್ಬೆಂಬ ಜ
ರ್ಬುವ ಪುರ್ಬುಂ ಕುಡುದಾಡೆಗಳ್ ಪೊಳೆವ ಬಾಯುಂ ಕಣ್ಗೆಗುರ್ವಾಗೆ ಮೂ
ರಿವಿಡುತ್ತುಂ ತಿರುಗತ್ತುವಾಗುಟಿಸುತುಂ ರೌದ್ರಜ್ವರಂ ತಪ್ತಹೇ
ಮವಿಭೂಷಂ ತ್ರಿಶಿರಂ ತ್ರಿಪಾದವರುಣಾಕ್ಷಂ ರೂಕ್ಷರಕ್ಷಾಯುಧಂ ೧೩

ಜ್ವರನಾಟೋಪದೆ ಭಸ್ಮದಿಂದಿಡುವುದುಂ ಭಸ್ಮಂ ಬಳೋರಸ್ಸ್ಥಳಾಂ
ತರಮಂ ತಾಗಿ ಸಿಡಿಲ್ದು ಪೋಗಿ ಸುರಭೂಭೃತ್ಕೂಟಮಂ ತಾಗೆ ತ
ದ್ಗಿರಿಕೂಟಂ ಭುಗಿಲೆಂದು ಕೇಸುರಿಗಳಂ ಸೂಸುತ್ತೆ ಬಿಳ್ದತ್ತಿದೇಂ
ಜ್ವರಭಸ್ಮಾಹತಿ ವಜ್ರಿವಜ್ರಹತಿಯಿಂದತ್ಯಂತದುರ್ವಾರಮೋ ೧೪

ವ|| ಆಗಳ್

೧೨. ವಿಕಾರವಾದ ದೇಹವೂ, ವೇಷವೂ, ಆಯುಧವೂ ಉಳ್ಳ ಪ್ರಮಥರು ಪ್ರತಿಜ್ಞೆ ಮಾಡಿ ರಾಕ್ಷಸಾಂತಕ ಕೃಷ್ಣನೊಡನೆ ಪ್ರತಿಭಟಿಸಿ, ಯುದ್ಧ ಮಾಡಿ ಇರಿದರು. ಆಮೇಲೆ "ಅಷ್ಟೊಂದು ವೀರಭಾಷಣವೂ ವೀರವೃತ್ತಿಯೂ ಸಾಮರ್ಥ್ಯವೂ ಎಲ್ಲಿ! ಎಲ್ಲಿ ಹೋಯಿತು!" ಎನ್ನುವಂತೆ, ತಮ್ಮ ಅಂಗೋಪಾಂಗಗಳಲ್ಲಿ ನಾಟಿದ ಬಾಣಗಳ ಗರಿಗಳೇ ರೆಕ್ಕೆಯಾಗಲು ಬೇಗನೆ ದಿಕ್ಕೆಟ್ಟು ಹಾರಿದರು! ವ|| ಆಮೇಲೆ ೧೩. ಪುಟವಿಟ್ಟ ಚಿನ್ನದ ಆಭರಣಗಳುಳ್ಳುದೂ ಮೂರು ತಲೆಗಳೂ ಮೂರು ಕಾಲುಗಳೂ ಕೆಂಗಣ್ಣುಗಳೂ ಕ್ರೂರವಾದ ಸ್ವರಕ್ಷಣಾಯುಧಗಳೂ ಉಳ್ಳ ಭಯಂಕರ ರೌದ್ರಜ್ವರವು ದಳ್ಳೆಂದುರಿಯುವ ಮೈಯೂ, ಹೊಗೆಯ ಉಬ್ಬಿನಂತೆ ಗದರಿಸುವ ಹುಬ್ಬೂ, ಡೊಂಕಾದ ಕೋರೆಹಲ್ಲುಗಳೂ ಹೊಳೆಯುವ ಬಾಯೂ ಕಣ್ಣಿಗೆ ಭಯಂಕರವಾಗಿರುತ್ತಿರಲು ಆಚಳಿಸುತ್ತ ಉರಿಯನ್ನು ಕಾರುತ್ತ ತಿರುಗುತ್ತ ವೇಗದಿಂದ ಬಂದಿತು. ೧೪. ಜ್ವರನು ಆಡಂಬರದಿಂದ ಭಸ್ಮದಿಂದ ಹೊಡೆದನು. ಆ ಭಸ್ಮವು ಬಲರಾಮನ ಎದೆಗೆ ತಾಕಿ ಸಿಡಿದು ಹೋಗಿ, ಮೇರುಗಿರಿ ಶಿಖರವನ್ನು ತಾಕಿತು. ಆ ಶಿಖರವು ಭುಗ್ಗೆಂದು ಹತ್ತಿ ಕೆಂಪಾದ ಉರಿಗಳನ್ನು ಚೆಲ್ಲುತ್ತ ಬಿದ್ದು ಹೋಯಿತು. ಜ್ವರಭಸ್ಮದ ಹೊಡೆತವು ಇಂದ್ರನ ವಜ್ರದ ಹೊಡೆತಕ್ಕಿಂತಲೂ, ಹೆಚ್ಚು ದುರ್ವಾರ(ತಡೆಯಲಾಗದುದು)ವಾಯಿತೋ ಎನಿಸಿತು. ವ|| ಆಗ

೧. ದೆಸೆವಿಟ್ಟರ್ ಪಾಱಿದರ್ ಭೀತಿಯಿಂ (ಖ)

ಉರಿಯುತ್ತಿರ್ದಪೆನಾನೀ
ಜ್ವರಮೆನ್ನೊಳ್ ತಾಗೆ ಕೃಷ್ಣ ಕೃಷ್ಣ ಭಟಾಗ್ರೇ
ಸರ ಕೇಳೆಂಬ ನಿಜಾಗ್ರಜ
ನ ರವಂ ಕಿವಿಗೆಯ್ದೆ ಕರ್ಣಶೂಲಪ್ರಖ್ಯಂ ೧೫

ಎಲೆಲೆ ಬಿಡಸ್ಮದಗ್ರಜನನಿತ್ತಿದಿರಾಗಿದಿರಾಗೆನುತ್ತೆ ಮೂ
ದಲಿಸಿ ಗದಾಯುಧಂ ಕರೆಯೆ ಬಿಟ್ಟು ಹಲಾಯುಧನಂ ಹರಜ್ವರಂ
ಪ್ರಲಯಶಿಖಿಪ್ರಚಂಡವಿಡುತುಂ ಯಮಘಸ್ಮರಭಸ್ಮದಿಂದುರ
ಸ್ಸ್ಥಲಮನಡುರ್ತು ತಾಗಿದುದಜೇಯನನಕ್ಷಯನಂ ಮುರಾರಿಯಂ ೧೬

ವ॥ ಅಂತು ತಾಗಿದ ಮಹೇಶ್ವರಜ್ವರಮಂ ಕಂಡು ಕನಲ್ದು ಕಂಸಾರಿ ವೈಷ್ಣವಜ್ವರಮಂ ಬಿಡಲಾ ವೈಷ್ಣವಜ್ವರಂ ಮಹೇಶ್ವರಜ್ವರದೊಳ್ ಕಾದಿ ಪಿಡಿದು ತಂದು ಮುಂದಿಟಿಪೆ ದನುಜಾಂತಕನದಂ ಕೊಲಲುಜ್ಜುಗಂಗೆಯ್ದು

ಇದನಕಟ ಕೊಲ್ಲದಿರ್ ಕೊ
ಲ್ಲದಿರೆಂಬಶರೀರವಾಕ್ಯ [1]ಮಿಷದಿಂದುರೆ ಕೊ
ಲ್ಲದೆ ಕಾದಂ ಜ್ವರಮಂ ಲೋ
ಕದೆ ಕೃತಮಂ ಪರಮವಸ್ತುವಂ ವಿಭು ಕಿಡಿಸಂ ೧೭

ಪಿಂಗಾಕ್ಷಂ ನಿಜಕಿಂಕರಾಗ್ನಿ ಬಲತೇಜೋಭಂಗದಿಂ ಭ್ರೂಕುಟೀ
ಭಂಗಂ [2]ಸ್ವಪ್ರಮಥಾಪರಾಗದಿನಪಾಂಗಾರಾಗವಾತ್ಮಜ್ವರೋ
ಗ್ರಾಂಗಸ್ಪಂದನದಿಂ ಪೊದಲ್ದಧರಬಿಂಬಸ್ಪಂದನಂ ಪೆರ್ಚುವ
ನ್ನಂ ಗೋವರ್ಧನನೊಳ್ ಕಱುತ್ತಿಱಿವ ಕೋಪಾಟೋಪಮಂ ತಾಳ್ದಿದಂ ೧೮

೧೫. "ಕೃಷ್ಣ, ಕೃಷ್ಣಾ, ಭಟಾಗ್ರೇಸರಾ! ಕೇಳು. ಈ ಜ್ವರವು ನನಗೆ ತಾಕಿದುದರಿಂದ ನಾನು ಉರಿಯುತ್ತಿದ್ದೇನೆ ಎಂಬ ತನ್ನ ಅಗ್ರಜನ ಕೂಗು ಶೂಲದಂತೆ ಕಿವಿಗೆ ಬಿದ್ದಿತು. ೧೬. ಕೃಷ್ಣನು, "ಎಲೆಲೇ ನಮ್ಮ ಅಣ್ಣನನ್ನು ಬಿಡು. ಇತ್ತ ನನಗಿದಿರಾಗು." ಎನ್ನುತ್ತ ಮೂದಲಿಸಿ ಕರೆಯಲು, ಆ ಹರಜ್ವರವು ಬಲರಾಮನನ್ನು ಬಿಟ್ಟು, ಪ್ರಲಯಾಗ್ನಿಯಂತೆ ಪ್ರಚಂಡವಾಗಿ ಸರ್ವಭಕ್ಷಕ ಯಮನಂತೆ ಭಸ್ಮದಿಂದ, ಅಜೇಯನೂ ಅಕ್ಷಯನೂ ಆದ ಆ ಕೃಷ್ಣನ ಎದೆಗೆ ಹೊಡೆದು ಹರಡಿತು. ವ॥ ಹಾಗೆ ತಾಕಿದ ಮಹೇಶ್ವರಜ್ವರವನ್ನು ಕಂಡು ಕೋಪಗೊಂಡ ಕೃಷ್ಣನು ವೈಷ್ಣವಜ್ವರವನ್ನು ಅದರ ಮೇಲೆ ಬಿಟ್ಟನು. ಅದು ಮಹೇಶ್ವರ ಜ್ವರದೊಡನೆ ಕಾದಿ ಹಿಡಿದು ತಂದು ಕೃಷ್ಣನ ಮುಂದೆ ಇಳಿಸಿತು. ಕೃಷ್ಣನು ಅದನ್ನು ಕೊಲ್ಲಲು ಪ್ರಯತ್ನಿಸಿದನು. ಆಗ. ೧೭. "ಅಯ್ಯೋ ಇದನ್ನು ಕೊಲ್ಲದಿರು ಕೊಲ್ಲದಿರು" ಎಂಬ ಅಶರೀರವಾಣಿಯ ನೆಪದಿಂದ ಆ ಜ್ವರವನ್ನು ಕೊಲ್ಲದೆ ರಕ್ಷಿಸಿದನು. ಲೋಕದಲ್ಲಿ ಸಮರ್ಥನಾದವನು ತಾನೆ ಸೃಷ್ಟಿಸಿದ ಪರಮವಸ್ತುವನ್ನು ಕೆಡಿಸಲಾರನು. ೧೮. ಈಶ್ವರನು ತನ್ನ ಸೇವಕನಾದ ಅಗ್ನಿಯ ಬಲದ ತೇಜೋಭಂಗದಿಂದ ಹುಬ್ಬು ಗಂಟು ಹಾಕಿಕೊಂಡನು. ತನ್ನ ಪ್ರಮಥರು ಸೋತು ದಿಕ್ಕೆಟ್ಟೋಡಿದುದರಿಂದ ಕಡೆಗಣ್ಣನ್ನು ಕೆಂಪು ಮಾಡಿಕೊಂಡನು.

---

೧. ಮಿಷದಿಂ ಹರಿ (ಖಗ) ೨. ಸ್ವಪ್ರಮಥಾಸ್ತ್ರರಾಗದಿ (ಗ)

ವ|| ಅಂತಪ್ರಮೇಯಪ್ರತಿಘಮಮಂ ಕೈಕೊಂಡು

[1]ಧರೆಗಂ ವ್ಯೋಮಕ್ಕಮೆಂಟುಂದೆಸೆಗಮಡಸಿ ತೂಂಕಿಟ್ಟಪೋಲ್ ಭೂತಸೈನ್ಯಂ
ಬರೆ ಬಂದಂ ಲೋಕಮಂ ಸಂಹರಿಪ ಪದದೊಳಿಂತಪ್ಪ ರೌದ್ರಸ್ವರೂಪಂ
ಹರನೊಳ್ ಮುನ್ನಿಲ್ಲೆನಲ್ ತಾವರೆಯೆಲೆಯ ಪಯೋಬಿಂದುವೆಂಬಂತೆ ಶಂಕಾ
ಭರದಿಂ ಬ್ರಹ್ಮಾಂಡಭಾಂಡಂ ನಡುಗೆ ಸಮರಸಂರಂಭದಿಂ ಭೂತನಾಥಂ ೧೯

ತುಂಗವೃಷಧ್ವಜಂ ಮಿಳಿರ್ದು ಮಿಳ್ಳಿಸೆ [2]ಚೋದಿಸೆ ನಂದಿಕೇಶ್ವರಂ
ಸಿಂಗದ ಪಿಂಡು ಪೂಡಿರೆ ಘನಾಧ್ವಮನೀಂಟುವ ದಿಕ್ತಟಂಗಳಂ
ನುಂಗುವಜಾಂಡಮಂ ಗುಳಿಗೆಯಿಕ್ಕುವ ತಕ್ಕಿನೊಳಿಟ್ಟಿರಲ್ [3]ರಥಂ
ಪಿಂಗಳ[4]ನೇತ್ರನೆಯ್ದಿದನುಪೇಂದ್ರನನಪ್ರತಿಮಪ್ರತಾಪನಂ ೨೦

ವ|| ಅಂತೆಯ್ದಿ ವಿಜಯಾವಷ್ಟಂಭದಿಂ ವಿಜೃಂಭಿಸುವಂಭೋಜಾಕ್ಷನಂ ಕಂಡು

ಈ ಕಮಲಾಕ್ಷನಕ್ಷಯನಜೇಯನಚಿಂತ್ಯನದೆಂತು ಗೆಲ್ದಪೆಂ
ಪ್ರಾಕೃತರೂಪನಲ್ತೆನುತೆ ಧೂರ್ಜಟಿ ಕಂಪಿತಲೋಕಪಾಲಕಾ
ನೀಕಮನಾಶುನಿರ್ಜಿತವಿರೋಧಿಸಮೀಕಮನಸ್ತಲೋಕಲುಂ
ಟಾಕಮನಾನತಾಖಿಲದಿವೌಕಮನೇಜಿಸಿದಂ ಪಿನಾಕಮಂ ೨೧

ತನ್ನ ಜ್ವರಕ್ಕೆ ಆದ ಉಗ್ರಕಂಪನದಿಂದ ಅವನ ತುಟಿ ಅದುರಿತು. ಹೀಗೆ ಕ್ರಮವಾಗಿ ಹೆಚ್ಚಿದ ಕ್ರೋಧದಿಂದ ಮಾತ್ಸರ್ಯಯುತನಾಗಿ, ತಾನೇ ನೇರವಾಗಿ ಕೃಷ್ಣನ ಮೇಲೆ ಗುರಿಯಿಟ್ಟು ಯುದ್ಧಮಾಡಲು ಸಿದ್ಧನಾದನು. ವ|| ಹಾಗೆ ಮಿತಿಮೀರಿದ ಕೋಪವುಳ್ಳವನಾಗಿ, ೧೯. ಅವನ ಭೂತಸೈನ್ಯವು ಭೂಮ್ಯಾಕಾಶಗಳಿಗೂ ಎಂಟು ದಿಕ್ಕುಗಳಿಗೂ ಒತ್ತಾಗಿ ತುರುಕಿದಂತೆ ತುಂಬಿ, ಬಂದಿತು. ಪ್ರಳಯದಲ್ಲಿ ಲೋಕವನ್ನು ಸಂಹರಿಸುವಾಗಲೂ ಈಶ್ವರನಲ್ಲಿ ಇಂತಹ ರೌದ್ರ ಸ್ವರೂಪವು ಇರಲಿಲ್ಲ ಎಂಬಂತೆ, ಆ ಸೈನ್ಯದೊಡನೆ ಕೃಷ್ಣನ ಮೇಲೆ ಯುದ್ಧ ಮಾಡಬೇಕೆಂಬ ಅತ್ಯಾಸಕ್ತಿಯುಳ್ಳವನಾಗಿ ಸಡಗರದಿಂದ ಬಂದನು. ಆಗ ಬ್ರಹ್ಮಾಂಡ-ಭಾಂಡವು ತಾವರೆಯೆಲೆಯ ಮೇಲಿನ ನೀರು ಹನಿಯಂತೆ ನಡುಗಿತು. ೨೦. ನಂದೀಕೇಶ್ವರನು ಶಿವನ ರಥಕ್ಕೆ ಸಿಂಹಗಳನ್ನು ಹೂಡಿದ್ದನು. ವೃಷಧ್ವಜವು ರಥದ ಮೇಲೆ ಎತ್ತರದಲ್ಲಿ ಚಲಿಸುತ್ತ ಹೊಳೆಯುತ್ತಿರಲು, ವೇಗದಿಂದ ರಥವನ್ನು ನಡೆಸಿದನು. ರಥವು ಆಕಾಶವನ್ನೇ ಕುಡಿದುಬಿಡುವಂತೆ ದಿಕ್ಕುಗಳ ದಡಗಳನ್ನೂ ನುಂಗುವಂತೆ ಬ್ರಹ್ಮಾಂಡವನ್ನು ಗುಳಿಗೆಗಟ್ಟುವಂತೆ ಶಕ್ತಿಯುತವಾಗಿ ಬಂದಿತು. ಈಶ್ವರನು ಅಸಮಾನ ಪ್ರತಾಪವುಳ್ಳ ಕೃಷ್ಣನ ಮೇಲೆ ಏರಿ ಬಂದನು. ವ|| ಹಾಗೆ ಬಂದು ವಿಜಯದ ಆತ್ಮವಿಶ್ವಾಸ ಗರ್ವದಿಂದ ಉಬ್ಬುತ್ತಿರುವ ಕಮಲಾಕ್ಷ ಕೃಷ್ಣನನ್ನು ಕಂಡು. ೨೧. ಈಶ್ವರನು- "ಅಕ್ಷಯನೂ ಅಜೇಯನೂ ಅಚಿಂತ್ಯನೂ ಅಪ್ರಾಕೃತನೂ ಆದ ಈ ಕೃಷ್ಣನನ್ನು ಹೇಗೆ ಗೆಲ್ಲಲಿ?!" ಎನ್ನುತ್ತ-ಲೋಕಪಾಲಕರನ್ನು ನಡುಗಿಸಿದ ವಿರೋಧಿಗಳ ಯುದ್ಧದಲ್ಲಿ ತಟ್ಟನೆ ಜಯವನ್ನು

---

೧. ಧರೆಯಂ (ಗ) ೨. ಜೋಡಿಸೆ (ಗ) ೩. ಕರಂ (ಗ) ೪. ನೇತ್ರನೆಯ್ದದನುಜಾರಿಯನ ಪ್ರತಿಮಪ್ರತಾಪನಂ (ಗ)

ವ।। ಅಂತೇಱಿಸಿ ನೀವಿ ಜೇವೊಡೆಯೆ

ಭರದಿಂ ಗೋತ್ರಾದ್ರಿಗಳ್ ತೂಳಿಕೆಗಳ ತೆಱದಿಂ ಪಾಱೆ ಭೂಮಂಡಲಂ ಕೋ
ವರ ಚಕ್ರಾಕಾರದಿಂ ತಿಱ್ರನೆ ತಿರಿಯೆ ಸಮುದ್ರಂಗಳರ್ಘ್ಯಾಂಬುವೋಲ್ ತು
ಳ್ಕೆ ರವಿಶ್ವೇತಾಂಶುಬಿಂಬಂ ಧರಣಿಗೆ ಕಳಿವಣ್ ಗಾಳಿಯೊಳ್ ಬೀೞ್ವವೊಲ್ ಬೀ
ೞ್ದಿರೆ ಮೂಱುಂಲೋಕಮಂ ಪರ್ವಿದುದತಿಶಯದಿಂ ಶರ್ವಮೌರ್ವೀನಿನಾದಂ ೨೨

ಕಮಳಾಕ್ಷಂ ಜಯಲಕ್ಷ್ಮಿಯಂ ನಿಜಭುಜಾಗ್ರಕ್ಕೇಱಿಸುತ್ತುಂ ಭಯ
ಭ್ರಮಮಂ ಧಾರಿಣಿಗೇಱಿಸುತ್ತುಮತಿಶಂಕಾತಂಕಮಂ ಪದ್ಮಜಾ
ದ್ಯಮರರ್ಗೇಱಿಸುತುಂ ಪ್ರಕೋಪಭಯಮಂ ಕಾಮಾಂತಕಂಗೇಱಿಸು
ತ್ತಮರುತ್ತೇಱಿಸಿದಂ ಸ್ವಕೀಯಜಯವಲ್ಲೀ[1]ಶಾರ್ಙ್ಗವಂ ಶಾರ್ಙ್ಗವಂ ೨೩

ವ।। ಆ ಚಂಡಕೋದಂಡಮಂ ಸಮಾಸ್ಫಾಲಿತಂ ಮಾಡೆ

ವಸುಧಾಚಕ್ರಂ [2]ಜಲಾಂತರ್ವಿಘುವಿಲುಳಿತವಾಗಿರ್ಪಿನಂ ಮೇರೆಯಂ ಸ
ಪ್ತಸಮುದ್ರಂ ಮೀಱಲೆಂದಿರ್ಪಿನಮಖಿಳಮರುತ್ಸಂಚಯಂ ಸಂಚಳನ್ಮಾ
ನಸವಾಗುತ್ತಿರ್ಪಿನಂ ದಿಕ್ಕರಿಕುಲಮೊಱಲುತ್ತೋಡಲೆಂದಿರ್ಪಿನಂ ವ
ರ್ಧಿಸುತುಂ ಬ್ರಹ್ಮಾಂಡಮಂ ತೀವಿದುದಸುರಹರಜ್ಯಾಲತಾಘೋರಘೋಷಂ ೨೪

ಪೂರ್ಣವಾಗಿ ಪಡೆದ, ಲೋಕದ ದುಷ್ಟರನ್ನೂ ಕಳ್ಳರನ್ನೂ ನಾಶಗೊಳಿಸಿದ ಸಕಲ ದೇವತೆಗಳಿಂದಲೂ ವಂದಿತವಾದ ತನ್ನ ಪಿನಾಕ ಧನುಸ್ಸಿಗೆ ಹೆದೆಯನ್ನು ಏರಿಸಿದನು. ವ।। ಹಾಗೆ ಹೆದೆಯೇರಿಸಿ ನೀವಿ ಟಂಕಾರಗೊಳಿಸಲು ೨೨. ಕುಲಪರ್ವತಗಳು ತ್ವರೆಯಿಂದ ಹತ್ತಿಯಂತೆ ಹಾರಿದವು. ಭೂಮಂಡಲ ಕುಂಬಾರ ಚಕ್ರದಂತೆ ತಿರ್ರನೆ ತಿರುಗಿತು. ಸಮುದ್ರಗಳು ಅರ್ಘ್ಯಜಲದಂತೆ ತುಳುಕಿದುವು. ಶುಭ್ರಕಾಂತಿಯ ಸೂರ್ಯಮಂಡಲವು ಕಳಿತ ಹಣ್ಣು ಗಾಳಿಯಿಂದ ಭೂಮಿಗೆ ಬೀಳುವಂತೆ ಬಿದ್ದಿತು. ಹೀಗೆ ಈಶ್ವರನ ಬಿಲ್ಲಿನ ಹೆದೆಯ ಟಂಕಾರವು ಅತಿಶಯವಾಗಿ ಮೂರುಲೋಕಕ್ಕೂ ಹಬ್ಬಿತು. ೨೩. ಕಮಲಾಕ್ಷನು ಜಯಲಕ್ಷ್ಮಿಯನ್ನು ತನ್ನ ಭುಜಾಗ್ರಕ್ಕೂ, ಭಯಭ್ರಾಂತಿಯನ್ನು ಭೂಮಿಗೂ, ಅಶಂಕೆಯ ಆತಂಕವನ್ನು ಬ್ರಹ್ಮನೇ ಮೊದಲಾದ ದೇವತೆಗಳಿಗೂ, ಪ್ರಕೋಪ ಭಯವನ್ನು ಕಾಮವೈರಿಗೂ, ಏರಿಸುತ್ತ ಆ ಈಶ್ವರನ ಹತ್ತಿರ ಬರುತ್ತ ತನ್ನ ಶಾರ್ಙ್ಗವೆಂಬ ಬಿಲ್ಲಿಗೆ ಹೆದೆಯನ್ನೇರಿಸಿದನು. ವ।। ಆ ಉಗ್ರಧನುಸ್ಸನ್ನು ಚೆನ್ನಾಗಿ ಟಂಕಾರ ಮಾಡಿದನು. ೨೪. ರಾಕ್ಷಸಹರ ಕೃಷ್ಣನ ಹೆದೆಯ ಭಯಂಕರವಾದ ಶಬ್ದವು ಹೆಚ್ಚಿ ಬ್ರಹ್ಮಾಂಡವನ್ನೇ ತುಂಬಿತು. ಅದರ ಭಯದಿಂದ ಭೂಮಂಡಲವು ಜಲಾಂತರ್ಗತನಾಗಿದ್ದ ಚಂದ್ರನಂತೆ ಉರುಳಿ ನೀರಲ್ಲಿ ಅಡಗುವಂತಾಯಿತು. ಸಪ್ತಸಮುದ್ರಗಳೂ ಮೇರೆಯನ್ನು ಮೀರುವಂತೆಯೂ, ಸಮಸ್ತದೇವತೆಗಳೂ ಚಂಚಲಮನಸ್ಕರಾಗುವಂತೆಯೂ ದಿಗ್ಗಜಗಳ ಸಮೂಹವು ಒರಲುತ್ತ ಓಡಬೇಕೆಂದಿರುವಂತೆಯೂ ಆಯಿತು.

---

೧. ಭಾರ್ಗವಂ (ಕಖ) ೨. ಜಲಾಂತರ್ವಿದಿತವಿಲುಳಿತಾಕಾರವಾಗಿರ್ಪಿನಂ (ಕಗ)

ವ|| ತದನಂತರಂ

ಕಡುಮುಳಿದೊರ್ಬರೊರ್ಬರನಿಸುತ್ತಿರೆ ಭೀಕರಭೂರಿಭೀಂಕೃತಂ
ಗಡಣಿಸೆ ದಿಙ್ಮುಖಂ ಮುಖರವಪ್ಪಿನಮುತ್ಕಟಮಾಗಿ ಪಾಯ್ದು ಪಾ
ಯ್ದೊಡನೊಡನೊಂದನೊಂದು ಕಿಡಿಸೂಸೆ ಸಿಡಿಲ್ ಸಿಡಿಲಂ ಪಳಂಚುವಂ
ತಡಸಿ ಪಳಂಚುತಿರ್ದುವು ಪಿನಾಕಿಯ ಶಾರ್ಙ್ಗಿಯ ಬಾಣಮುರ್ವಿಯೊಳ್ ೨೫

ಧೀರರ್ ಶಂಕರಶಾರ್ಙ್ಗಿಗಳ್ ಪೊಣರೆ ತತ್ಸಂಘಟ್ಟದಿಂ ಭೂತಳಂ
ನೀರೊಳ್ ಪಾಸಿದದೊಂದು ಪೆರ್ಗಡಿತದಂತಳ್ಳಾಡಲದ್ರಿವ್ರಜಂ
ಬೇರಿಂ ಕಿಟ್ಟು ನಭೋನದೀಪುಳಿನಸಂದೋಹಂಬೊಲಿರ್ದತ್ತು ಮು
ನ್ನೀರುದ್ದಂ ನೆಗೆದಿಂದ್ರನಂದನಕೆ ಪೊಯ್ನೀರಾಯ್ತದೇಂ ರೌದ್ರಮೋ ೨೬

ಗೆಲ್ವಂ ತಾರ್ಕ್ಷ್ಯಪತಾಕನಂ ವೃಷಪತಾಕಂ ಹೋ ಲಲಾಟೇಕ್ಷನಂ
ಗೆಲ್ವಂ ಪಂಕರುಹಾಕ್ಷನಲ್ತು ಗಿರಿಜಾಧೀಶಂ ರಮಾಧೀಶನಂ
ಗೆಲ್ವಂ ನೋಡಿಮೆನುತ್ತುಮಿರ್ಬರಳವಂ ಕೈವೊಯ್ದು ಸಂವಾದಿಸಲ್
ಸಲ್ವರ್ ನಾಕಿಗಳೇಂ ಸಮಾನಬಲರೋ ಕಾಮಾರಿಕಂಸಾರಿಗಳ್ ೨೭

ಶ್ರೀಕಂಠನಿಸುವ ಕಣೆಗಳ್
ವೈಕುಂಠನನೆಯ್ದಿ ಮುಸುಱುತಿರ್ದುವು ರಣದೊಳ್
ಭೀಕರತರೌರ್ವಮಂ [1]ಮಕ
ರಾಕರವೀಚೀಕದಂಬಕಂ ಮುಸುಱುವವೊಲ್ ೨೮

ವ|| ಆಮೇಲೆ ೨೫. ಹೆಚ್ಚಾಗಿ ಸಿಟ್ಟುಗೊಂಡು ಒಬ್ಬರನ್ನೊಬ್ಬರು ಬಾಣಗಳಿಂದ ಹೊಡೆಯುತ್ತಿರುವ ಈಶ್ವರನ ಮತ್ತು ಕೃಷ್ಣನ ಬಾಣಗಳು ಭಯಂಕರವಾಗಿ ಹೆಚ್ಚಾದ ಭೀಂಕಾರ ಮಾಡುತ್ತಿರಲು ಅದು ತಾಕಿ ದಿಙ್ಮುಖಗಳಲ್ಲಿ ಪ್ರತಿಧ್ವನಿಯಾಗುವಂತೆ ಹಾರಿ ಹಾರಿ ಒಡನೊಡನೆ ಒಂದನ್ನೊಂದು ಕಿಡಿಗಳು ಹಾರುವಂತೆ, ಸಿಡಿಲು ಮತ್ತೊಂದು ಸಿಡಿಲನ್ನು ಹೊಡೆಯುವಂತೆ ಎದುರಿಸಿ ಹೊಡೆಯುತ್ತಿದ್ದವು. ೨೬. ಧೀರರಾದ ಶಂಕರ ಕೃಷ್ಣರು ಹೋರಾಡಲು ಅವರ ಬಾಣಗಳ ಪರಸ್ಪರ ಸಂಘಟನೆಯಿಂದ ಭೂತಲವು ನೀರಿನಲ್ಲಿ ಹಾಸಿದ ಒಂದು ದೊಡ್ಡ ಕಡತ (ಪುಸ್ತಕ)ದಂತೆ ಅಳ್ಳಾಡಿತು. ಗಿರಿಗಳು ಬೇರುಕಿತ್ತುಹೋಗಿ ಹಾರಿ ದೇವಗಂಗೆಯ ಮಳಲಿನ ರಾಶಿಯಂತೆಯಾದುವು. ಸಮುದ್ರವು ಮೇಲೆ ಹಾರಿ ಇಂದ್ರನ ನಂದನವನಕ್ಕೆ ಹುಯ್ಯುವ ನೀರಾಯಿತು. ಅವರ ಯುದ್ಧವು ಅದೆಷ್ಟು ಭಯಂಕರವಾದುದೋ! ೨೭. "ಗರುಡಧ್ವಜನನ್ನು ವೃಷಭಧ್ವಜನು ಗೆಲ್ಲುವನು. ಹೋ! ಶಿವನನ್ನೇ ಕಮಲಾಕ್ಷನು ಗೆಲ್ಲುವನು. ಅಲ್ಲ ಅಲ್ಲ! ಗಿರಿಜಾಧೀಶನೇ ರಮಾಧೀಶನನ್ನು ಗೆಲ್ಲುವನು, ನೋಡಿ." ಎನ್ನುತ್ತ ಇಬ್ಬರ ಶಕ್ತಿ ಸಾಮರ್ಥ್ಯಗಳನ್ನೂ ಹೊಗಳಿ ಚಪ್ಪಾಳೆ ತಟ್ಟುತ್ತಾ ದೇವತೆಗಳು ಮಾತನಾಡುತ್ತಿದ್ದರು. ಕಾಮಾರಿ ಕಂಸಾರಿಗಳು ಅದೆಷ್ಟು ಸಮಾನಬಲವುಳ್ಳವರೋ! ೨೮. ಆ ಯುದ್ಧದಲ್ಲಿ ಈಶ್ವರನು ಹೊಡೆಯುವ ಬಾಣಗಳು ಕೃಷ್ಣನನ್ನು ಸಮುದ್ರದ ಅಲೆಗಳ ಗುಂಪು ಭಯಂಕರತರವಾದ ಔರ್ವಾಗ್ನಿಯನ್ನು ಮುತ್ತುವಂತೆ

---

೧. ಮಕರಾಕರಶೀಕರಪೊಡರ್ಪಿನಿಂ (ಕಗ)

ತಕ್ಕಿನನೀಶನೆಚ್ಚ ತಿಮಿರೇಷುಗಿನೇಷುವನಗ್ನಿಮಿತ್ರಬಾ
ಣಕ್ಕಹಿಬಾಣಮಂ ಗಿರಿಪತತ್ರಿಗೆ ವಜ್ರಪತತ್ರಿಯಂ ಘನಾ
ಸ್ತ್ರಕ್ಕನಿಲಾಸ್ತ್ರಮಂ ಶಿಖಿಶರಕ್ಕೆ ಪಯಶ್ಶರಮಂ ಭುಜಂಗಕಾಂ
ಡಕ್ಕೆ ಖಗೇಶಕಾಂಡಮನಧೋಕ್ಷಜನೆಚ್ಚು ಪೊಡರ್ಪುದೋಱಿದಂ ೨೯

ವ|| ಅಂತುಮಲ್ಲದೆಯುಂ

ಪೆಱತೇನಿಂತಿದಕಾಲಕಾಲನಿಶೆ ಪರ್ಬಿತ್ತೆಂಬಿನಂ ನುಂಗಿ ನೇ
ಸಱನೆಂಟುಂದೆಸೆಯುಂ ಕಱಂಗೆ ತಮಮಂ ಭಿನ್ನಾಂಜನಚ್ಛಾಯೆಯಂ
ಕಱೆಯುತ್ತುಂ ಹರನಲ್ಲಿಗೆಯ್ದುದುಗುರ್ವಿಂ ವೈಷ್ಣವೋಗ್ರೇಷು ಬಾ
ಯ್ದೆಱೆದೆಟ್ಟಿಟ್ಟುವ ಕಾಳರಕ್ಕಸನವೋಲ್ ಭೀಂಕಾರಹೂಂಕಾರದಿಂ ೩೦

ವ|| ಅದಂ ಕಂಡು ಖಂಡಪರಶುವಖಂಡಿತೋಚ್ಚಂಡಕೋಪಮಂ ಕೈಕೊಂಡು

ಉರಿಗಣ್ಣಂ ಬಿರ್ಚಿದಂ ಬಿರ್ಚಿದನಿಷುಧಿಗೆ ಕೈನೀಡಿದಂ ನೀಡಿದಂ ನೋ
ಡಿರೆ ತೊಟ್ಟಂ ತೊಟ್ಟನೀ ಪಾಶುಪತಶರಮನೋಹೋ ಜಗಂ ಕೆಟ್ಟುದೆಂದಂ
ಬರದೊಳ್ ದೇವವ್ರಜಂಬಾಯ್ದೆಱೆಯೆ ತೆಱೆದು ಫಾಳಾಕ್ಷಮಂ [1]ದ್ವಿಟ್ಪುರೀಸಂ
ಹರಣಂಗೆಯ್ದಸ್ತ್ರಮಂ ತೊಟ್ಟಸಲೊಡರಿಸಿದಂ ಕೃಷ್ಣನಂ ಕೃಷ್ಣಕಂಠಂ ೩೧

ಮುತ್ತುತ್ತಿದ್ದವು. ೨೯. ಸಾಮರ್ಥ್ಯದಿಂದ ಈಶ್ವರನು ಹೊಡೆದ ಅಂಧಕಾರ ಬಾಣಕ್ಕೆ ಕೃಷ್ಣನು ಸೂರ್ಯಬಾಣವನ್ನೂ, ವಾಯುಬಾಣಕ್ಕೆ ಸರ್ಪಬಾಣವನ್ನೂ, ಗಿರಿಶರಕ್ಕೆ ವಜ್ರಶರವನ್ನೂ, ಮೇಘಾಸ್ತ್ರಕ್ಕೆ ವಾಯುವ್ಯಾಸ್ತ್ರವನ್ನೂ, ಅಗ್ನಿಬಾಣಕ್ಕೆ ಜಲಬಾಣವನ್ನೂ ಸರ್ಪಾಸ್ತ್ರಕ್ಕೆ ಗರುಡಾಸ್ತ್ರವನ್ನೂ ಪ್ರತಿಯಾಗಿ ಹೊಡೆದು ತನ್ನ ಪರಾಕ್ರಮವನ್ನು ತೋರಿಸಿದನು. ವ|| ಅದು ಅಲ್ಲದೆ ೩೦. ಬೇರೇನು! ಅಕಾಲದಲ್ಲಾದ ಪ್ರಳಯಕಾಲದ ರಾತ್ರಿಯೆ ಹಬ್ಬಿತು ಎನ್ನುವಂತೆ ಎಂಟು ದಿಕ್ಕೂ ಕಪ್ಪಾಗುವಂತೆ, ಸೂರ್ಯನನ್ನೂ ನುಂಗಿ ಕಣ್ಣುಕಪ್ಪಿನ ಬಣ್ಣದ ಕತ್ತಲೆಯನ್ನು ಸುರಿಸುತ್ತ ಕಪ್ಪಾದ ರಾಕ್ಷಸನಂತೆ ಭಯಂಕರವಾಗಿ ಉಗ್ರವಾದ ವೈಷ್ಣವಾಸ್ತ್ರವು ಬಾಯಿ ತೆರೆದುಕೊಂಡು ಅಟ್ಟಿಸಿಕೊಂಡು ಭೀಂಕಾರ ಹೂಂಕಾರದಿಂದ ಈಶ್ವರನ ಹತ್ತಿರಕ್ಕೆ ಬಂದಿತು. ವ|| ಅದನ್ನು ಕಂಡು ಈಶ್ವರನು ಉಚ್ಚಂಡವಾದ ಅಖಂಡಕೋಪವನ್ನು ಕೈಕೊಂಡು, ೩೧. ತನ್ನ ಉರಿಗಣ್ಣನ್ನು ತೆರೆದನು, ಉಬ್ಬಿದನು, ಬತ್ತಳಿಕೆಗೆ ಕೈ ನೀಡಿದನು. "ನೋಡಿ, ಓಹೋ ಈ ಪಾಶುಪತಶರವನ್ನು ತೊಟ್ಟನು. ಅಯ್ಯೋ ಜಗತ್ತು ಕೆಟ್ಟಿತು" ಎಂದು ಆಕಾಶದಲ್ಲಿ ದೇವಸಮೂಹವು ಬಾಯಿಬಿಡುತ್ತಿರಲು ಹಣೆಗಣ್ಣನ್ನು ತೆರೆದು, ದ್ವೇಷಿಗಳಾದ ತ್ರಿಪುರರ ಸಂಹಾರವನ್ನು ಮಾಡಿದ ಬಿಲ್ಲಿನಲ್ಲಿ ಪಾಶುಪತಶರವನ್ನು ಹೂಡಿ ಕೃಷ್ಣನನ್ನು ಹೊಡೆಯಲು ಉದ್ಯೋಗಿಸಿದನು.

---

೧. ತೋಱಿದಂ (ಖ)

ಕುಪಿತಂ ಪಾಶುಪತಾಸ್ತ್ರಮಂ ತುಡೆ ಮಹೇಶಂ ಶಾರ್ಙ್ಗಿ[೧]ಚಿತ್ತಜ್ಞನೀ
ತ್ರಿಪುರಧ್ವಂಸಕನಿಂದೆ ಮುಂದೆ ಜಯಮಂ ಕೈಕೊಳ್ವೆನೆಂದೇೞ್ಗೆ ಬ
ಲ್ಪು ಪೊಡರ್ಪೊಂದಿರೆ [೨]ಜೃಂಭಣಾಸ್ತ್ರದಿನದಂ ಕೈವೇಗದಿಂದೆಚ್ಚುಮಾ
ಧಿಪನಂ ಸ್ತಂಭಿಸಿ ತಾಳ್ದಿದಂ ಜಯಮನೇಂ ಕೃಷ್ಣಂ ಜಗದ್ವೀರನೋ ೩೨

ವ|| ಅಲ್ಲಿಂ ಬೞಿಯಂ

ಹರಿನೀಲೋದ್ಭಾಸಿ ಕೃಷ್ಣಂ ಕಱೆವ ಶರಗಣಾಸಾರಮಂ ಸಾರಧಾರಾ
ಧರವರ್ಷಂಗೆತ್ತು ತನ್ನೇಱಿದ ನವಿಲೊಲವಿಂ ಸೋಗೆಯಂ ಬಿರ್ಚುತುಂ ಸಂ
ಗರವೀರ ಶ್ರೀಗೆ ಚೆಲ್ವಂ ತಳೆದ ತೞಿಯನೆತ್ತಿರ್ಪವೋಲೊಪ್ಪೆ ಬಂದಂ
ಚಿರಕೋಪಶ್ರೀಯ ವಶ್ಯಂ ಪ್ರಕಟಿತಸಮರೋತ್ಸಾಹಲಾಸ್ಯಂ ಷಡಾಸ್ಯಂ ೩೩

ವ|| ಆ ಕುಮಾರನಂ ಕಂಡು ಕುಸುಮಕೋದಂಡನಾನುಂ [೩]ಕುಮಾರನೆಂದು ಹರಿಬಕ್ಕೆಯ್ದಿದಿರಾಂತು ನಿಲೆ ಶಕ್ತಿಧರಂ ನಿರೀಕ್ಷಿಸಿ

ಅನಿಮಿಷರ್ಗುಳ್ಳುದಂ ಕವರ್ದು ಭೂಪರನಾಳ್ವೆಸಕೆಯ್ಸಿಕೊಳ್ವಜ
ಯ್ಯನನತಿಧೀರನಂ ನೆಗೞ್ದ ತಾರಕವೀರನನೆನ್ನ ಪುಟ್ಟಿದೇ
ೞನೆಯ ದಿನಕ್ಕೆ ಕಣ್ದೆಱೆಯದರ್ಭಕನೆಂ ಗಡ ಕೊಂದೆನೆಂದೊಡಿ
ನ್ನನುಪಮಯೌವನಂಗೆನಗನಂಗನೆ ನೀನಿದಿರಾಂತು ನಿಂದಪೈ ೩೪

೩೨. ಈಶ್ವರನು ಕೋಪಗೊಂಡು ಪಾಶುಪತಾಸ್ತ್ರವನ್ನು ತೊಡಲು ಚಿತ್ತಜ್ಞನಾದ ಕೃಷ್ಣನು ಈ ತ್ರಿಪುರಾರಿಗಿಂತಲೂ ಮುಂಚೆ ಇಂದೇ ನಾನು ಜಯವನ್ನು ಪಡೆಯುತ್ತೇನೆ ಎಂದು ಶಕ್ತಿಯೂ ಹೊಳಪೂ ಇರುವ ಜೃಂಭಕಾಸ್ತ್ರದಿಂದ ಆ ಪಾಶುಪತಾಸ್ತ್ರವನ್ನು ಕೈಚಳಕದಿಂದ ಹೊಡೆದು ಉಮಾಪತಿಯಾದ ಈಶ್ವರನನ್ನು ಸ್ತಂಭಿಸಿ, ಜಯವನ್ನು ಪಡೆದನು. ಕೃಷ್ಣನು ಅದೆಷ್ಟು ಜಗದ್ವೀರನೋ! ವ|| ಅದಾದ ಬಳಿಕ ೩೩. ಇಂದ್ರನೀಲಮಣಿಯಂತೆ ಹೊಳೆಯುವ ಕೃಷ್ಣನು, ಕರೆಯುತ್ತಿರುವ ಬಾಣಸಮೂಹದ ಧಾರಾವೃಷ್ಟಿಯನ್ನೇ ಸಾರವಾದ ಮಳೆಯ ನೀರಿನ ವೃಷ್ಟಿಯೆಂದು ತಿಳಿದು ಷಣ್ಮುಖನ ವಾಹನವಾದ ನವಿಲು ಸಂತೋಷದಿಂದ ಗರಿಯನ್ನು ಬಿಚ್ಚಿತು. ಅದು ಯುದ್ಧವೀರಶ್ರೀಗೆ ಸುಂದರವಾದ ಛತ್ರಿಯನ್ನು ಎತ್ತಿರುವಂತೆ ಚೆನ್ನಾಗಿ ಕಾಣಿಸಿತು. ಕುಪಿತನಾದ ಷಣ್ಮುಖನು ತನ್ನ ಯುದ್ಧೋತ್ಸಾಹವನ್ನು ಪ್ರಕಟಿಸುತ್ತ ಯುದ್ಧಕ್ಕೆ ಬಂದನು. ವ|| ಆ ಕುಮಾರನನ್ನು ಕಂಡು ಮನ್ಮಥನು ನಾನೂ ಕುಮಾರನೇ ಎಂದುಕೊಂಡು ಯುದ್ಧಕಾರ್ಯಕ್ಕೆ ಉತ್ಸಾಹದಿಂದ ಬಂದು ಪ್ರತಿಭಟಿಸಿ ನಿಂತನು. ಷಣ್ಮುಖನು ಅವನನ್ನು ನೋಡಿ, ೩೪. "ಅನಂಗ, ದೇವತೆಗಳ ಸರ್ವಸ್ವವನ್ನೂ ದೋಚಿ ರಾಜರಿಂದ ಆಳುಗಳು ಮಾಡುವ ಕೆಲಸವನ್ನು ಮಾಡಿಸಿಕೊಂಡು ಅಜೇಯ ಧೀರ ಎಂದು ಪ್ರಖ್ಯಾತನಾಗಿದ್ದ ತಾರಕಾಸುರ ವೀರನನ್ನು ನಾನು ಹುಟ್ಟಿದ ಏಳನೆಯ

---

೧. ಚಿತ್ತಜ್ಞನಿಂ (ಕಗ) ೨. ಜೃಂಭಣಾಸ್ತ್ರದಿನಣಂ (ಕಗ) ೩. ಕುಮಾರನೆಂಬಹಂಮಿಕೆಯಿಂ ನಿಲೆ (ಖ)

ವ॥ ಎನೆ ಮಕರಕೇತನಂ ಮುಗುಳ್ನಗೆ ನಕ್ಕು

ಎಲೆ ಗಡ ಕಷ್ಟಮೀ ನಿಜಗುಣಸ್ತುತಿಯುಂ ಪರನಿಂದೆಯುಂ ನಿರಾ
ಕುಲಮಿದು ನಿನ್ನೊಳಪ್ಪುದುಚಿತಂ ಗುಹ ನೀಂ ನೆನೆ ನಿನ್ನ ಜನ್ಮದು
ರ್ವಿಲಸಿತಮಂ ದಿಟಂ ಪಲರ್ಗೆ ಪುಟ್ಟಿದ ಕಾರಣದಿಂದವಾನನಂ
ಪಲವೊಳವೊಲ್ದುದಂ [೧]ನುಡಿಯಲೆಂದೆನೆ ಕೇಳ್ದು ಕನಲ್ದು ಷಣ್ಮುಖಂ ೩೫

ಪಿಡಿವುದು ಕರ್ವುವಿಲ್ ತುಡುವುವೈದಲರಂಬಿವನೇಕೆ ನಚ್ಚಿ ನೀಂ
ತೊಡರ್ವೆ ರತಿಪ್ರಿಯೋಪ[೨]ಕರಣಂಗಳಿವೇವುವೊ ಕಾಳೆಗಕ್ಕೆ ನೀಂ
ಮೃಡನೊಳಿದಿರ್ಚಿ ರೂಪುಗಿಡುವಂದಿವು ಮಾಡಿದ ಮಾಟಮಾವುದಾರ್
ಸೆಡೆವರಿದರ್ಕನೇಕನಿಶಿತಾಯುಧಕೋವಿದರಪ್ಪ ಮದ್ವಿಧರ್ ೩೬

ವ॥ ಎನೆ ಕುಸುಮಾಯುಧಂ ಸಕ್ರೋಧನಾಗಿ

[೩]ಅರಲಂಬೀ ಕರ್ಬುವಿಲ್ಲೆಂದಿಟಿಪಿ ಗಳಪದಿರ್ ಕೆಮ್ಮನೀ ಕರ್ಬುವಿಲ್ಲಿಂ
ಗರಲಂಬಿಂಗಾ [೪]ಮಹೇಶಂ ಮನದೊಳಳುಕಿ ಸಮ್ಯಕ್ತಪೋನಿಷ್ಠೆಯಂ ಬಿ
ಟ್ಟರೆವೆಣ್ಣಾಗಿರ್ದುದಂ ನೀಂ ನೆನೆ ದಿಟಮಿದೆ[೫]ನಲ್ ಕೆಯ್ದುಗಳ್ ನಿರ್ಘೃಣಂಗಳ್
ನಿರವದ್ಯಂಗಳ್ ಜಗನ್ಮೋಹನಪಟುಗಳಿವರ್ಕಂಜದುದ್ವೃತ್ತನಾವಂ ೩೭

ದಿನದಲ್ಲೇ ಇನ್ನೂ ಕಣ್ಣುತೆರೆಯದ ಶಿಶುವಾಗಿದ್ದಾಗಲೇ ಕೊಂದೆನಲ್ಲವೇ! ಹೀಗಿರುವಾಗ ಈ ಅಸಮಾನ ಯೌವನವುಳ್ಳವನಾಗಿರುವ ನನಗೆ ನೀನು ಇದಿರೊಡ್ಡಿ ನಿಲ್ಲುವೆಯಾ?!" ವ॥ ಎನ್ನಲು ಮನ್ಮಥನು ಮುಗುಳುನಗೆ ನಕ್ಕು, ೩೫. "ಎಲೆ ಗುಹಾ! ಈ ಆತ್ಮಗುಣಸ್ತುತಿಯೂ ಪರನಿಂದೆಯೂ ಕಷ್ಟವಾದುದು. ಆದರೂ ನಿನ್ನಲ್ಲಿ ನಿರಾಕುಳವಾಗಿ ಅದು ಉಚಿತವೇ ಸರಿ. ನೀನು ನಿನ್ನ ಜನ್ಮದ ದುಸ್ಥಿತಿಯನ್ನು ಸ್ವಲ್ಪ ನೆನೆಸಿಕೋ. ನೀನು ಹಲವರಿಗೆ ಹುಟ್ಟಿದುದರಿಂದ ತೋರಿದ್ದನ್ನು ಹೇಳಲು ಮುಖಗಳೂ ನಿನಗೆ ಹಲವು ಆದುವು!" ಎಂದನು. ಅದನ್ನು ಕೇಳಿದ ಷಣ್ಮುಖನು ಕೋಪಗೊಂಡು, ೩೬. "ನೀನು ಹಿಡಿಯುವುದು ಕಬ್ಬಿನಬಿಲ್ಲು. ತೊಡುವುದು ಐದು ಹೂವಿನಬಾಣಗಳು. ಇವುಗಳನ್ನು ನೆಚ್ಚಿ ನೀನು ಯುದ್ಧಕ್ಕೆ ಸಿಕ್ಕಿಕೊಳ್ಳುವೆ?! ನೀನು ಈಶ್ವರನ ಸಂಗಡ ಎದುರಿಸಿ ಯುದ್ಧಕ್ಕೆ ಹೋಗಿ ರೂಪಗೆಟ್ಟಾಗ ಇವು ಏನು ಮಾಡಿದವು? ಹರಿತವಾದ ಆಯುಧಗಳನ್ನು ಉಪಯೋಗಿಸುವುದರಲ್ಲಿ ನಿಷ್ಣಾತರಾದ ನನ್ನಂತಹವರು ಯಾರು ತಾನೆ ಇದಕ್ಕೆ ಹೆದರುವರು!" ವ॥ ಎನ್ನಲು ಮನ್ಮಥನು ಕೋಪಗೊಂಡು, ೩೭. "ಹೂಬಾಣ, ಕಬ್ಬಿನಬಿಲ್ಲು ಎಂದು, ಕೀಳು ಮಾಡಿ ಸುಮ್ಮನೆ ಹರಟಬೇಡ. ಈ ಕಬ್ಬಿನಬಿಲ್ಲಿನ ಹೂಬಾಣಕ್ಕೆ ಆ ಮಹೇಶ್ವರನು ಮನಸ್ಸಿನಲ್ಲೇ ಹೆದರಿ ಆಚರಿಸುತ್ತಿದ್ದ ತಪೋನಿಷ್ಠೆಯನ್ನೂ ಬಿಟ್ಟು, ಅರ್ಧನಾರಿ ಯಾದುದನ್ನು ನೀನು ಜ್ಞಾಪಿಸಿಕೋ. ನಾನು ಹೇಳಿದ ಇದು ನಿಜವಾದುದಾಗಿರುವಾಗ ನನ್ನ ಆಯುಧಗಳು ದಯೆಯಿಲ್ಲದವು, ಸ್ತುತ್ಯವಾದವು, ಜಗನ್ಮೋಹನಪಟುಗಳು. ಇವಕ್ಕೆ

---

೧. ನುಡಿಯಲೇಕೆನೆ (ಖ) ೨. ಕರಣಂಗಳಿವೆಲ್ಲವು (ಖ) ೩. ಮರವಿಲ್ಲಂ (ಕ) ಅರಲಂಬುಂ (ಖಗ) ೪. ಮಹಾದೇವನುಮಜನಿಸಿ (ಕ) ೫. ದಲ್ ಕೈದುಗಳ್ ಪಂಚಶಸ್ತ್ರಂ (ಖ)

ವ|| ಎಂದು ನುಡಿದನಂತರಂ

ಸಿಡಿಲ ಮೞೆಯೆನಿಸಿ ಕಱೆದರ್
ಬಿಡದೆ ಸರಲ್ಮೞೆಯನೀಶ್ವರಾಚ್ಯುತತನಯರ್
ತೊಡರ್ದು ಸರಲ್ದೆಗೆವ ಸರ
ಲ್ದುಡುವ ಸರಲ್ ಬಿಡುವ ಬೇಗಮರಿದೆಂಬಿನೆಗಂ ೩೮

ವ|| ಆಗಳ್

ಒಂದಱೊಳೊಂದು ತಾಗಿದುವೆಱಂಕೆಯ ರೋಹಣನೀಲಶೈಲಯು
ಗ್ಮಂ ದಿಟಮೆಂಬಿನಂ ಗರುಡನುಂ ಗುಹಬರ್ಹಿಯುಮೆಯ್ದುತಾಗಿ ಕಾ
ಯ್ದಿಂದೊದೆವಂಘ್ರಿಯಿಂದಿಱಿವ ಚಂಚುವಿನೋವದೆ ಪೊಯ್ವೆಱಂಕೆಯಿಂ
ತಂದುವಗುರ್ವನೇಂ ಪಿರಿದೊ ತಾರ್ಕ್ಷ್ಯಮಯೂರರ ಯುದ್ಧಡಂಬರಂ ೩೯

ಸ್ಕಂದಂ ಬ್ರಹ್ಮಶಿರೋಸ್ತ್ರದಿಂದಿಸುವುದುಂ ಕಂಡತ್ತ ದೇವಾಳಿ ಪೋ
ಗಿಂದಿನ್ನೆತ್ತಣ ಕೃಷ್ಣನೆತ್ತಣ ಬಲಪ್ರದ್ಯುಮ್ನರೆಂಬನ್ನಮೆ
ಬ್ಬಂದಾ ಬ್ರಹ್ಮಶಿರಶ್ಶರಂ ಹರಿಭುಜಾಚಕ್ರಪ್ರಭಾಚಕ್ರದಿಂ
ಮಂದೀಭೂತಮಹತ್ತ್ವಮಾಯ್ತೆಡೆಯೊಳೇಂ ಚಕ್ರಂ ಪ್ರಭೋಚ್ಚಂಡಮೋ ೪೦

ವ|| ಅಲ್ಲಿಂ ಬೞಿಯಂ

ಅಂಜದ ಉದ್ವೃತ್ತನಾವನಿರುವನು!" ವ|| ಎಂದು ಹೇಳಿದನು. ೩೮. ಆ ಷಣ್ಮುಖ ಮನ್ಮಥರು, ಕದನಕ್ಕೆ ಆರಂಭಿಸಿದರು. ಅವರು ಬಾಣಗಳನ್ನು ಬತ್ತಳಿಕೆಯಿಂದ ತೆಗೆಯುವ, ಹೆದೆಯಲ್ಲಿ ಸೇರಿಸುವ ಬಿಡುವ ವೇಗವು ಅಸಾಧ್ಯವಾದುದೆನ್ನುವಂತೆ, ಬಾಣವೃಷ್ಟಿಯನ್ನು ಸಿಡಿಲಮಳೆಯೆನ್ನುವಂತೆ ಬಿಡದೆ ಕರೆದರು. ವ|| ಆಗ ೩೯. ನಿಜವಾಗಿಯೂ ರೆಕ್ಕೆಯನ್ನು ಪಡೆದ ರೋಹಣಗಿರಿ ನೀಲಗಿರಿಗಳೆರಡೂ ಒಂದರೊಡನೊಂದು ತಾಕಿದುವೆಂಬಂತೆ ಗರುಡನೂ ಷಣ್ಮುಖನ ನವಿಲೂ, ಎದಿರಾಗಿ ತಾಕಿದುವು. ಅವು ಒಂದನ್ನೊಂದು ಕಾಲುಗಳಿಂದ ಒದೆಯುವ, ಇರಿಯುವ, ಕೊಕ್ಕಿನಿಂದ ದಯೆಯಿಲ್ಲದೆ ಕಚ್ಚುವ, ರೆಕ್ಕೆಯಿಂದ ಹೊಡೆಯುವ ರೀತಿಯು ಭಯಂಕರವಾಗಿದ್ದಿತು. ಆ ಗರುಡ ಮಯೂರ ಯುದ್ಧವು ಅದೆಷ್ಟು ದೊಡ್ಡದೋ! ಆಡಂಬರವುಳ್ಳುದೋ! ೪೦. ಸ್ಕಂದನು ಬ್ರಹ್ಮಶಿರೋಸ್ತ್ರದಿಂದ ಹೊಡೆದನು. ಅದನ್ನು ಕಂಡ ದೇವತೆಗಳು ಹೋಗು! ಇನ್ನು ಎಲ್ಲಿಯ ಕೃಷ್ಣ! ಎಲ್ಲಿಯ ಬಲರಾಮ ಮನ್ಮಥರು? ಎಂದುಕೊಳ್ಳುವಂತೆ ಆಯಿತು; ಅಷ್ಟು ಭೀಕರವಾಗಿ ಬರುತ್ತಿದ್ದ ಬ್ರಹ್ಮಶಿರೋಸ್ತ್ರದ ಮಹತ್ತ್ವವನ್ನು ಕೃಷ್ಣನ ಭುಜಮಂಡಲದ ಕಾಂತಿಮಂಡಲಯುತವಾದ ಚಕ್ರವು ಮಧ್ಯದಲ್ಲೇ ತಡೆದು ಕುಂಠಿತಗೊಳಿಸಿತು. ಕೃಷ್ಣನ ಚಕ್ರವು ಅದೆಷ್ಟು ಉಚ್ಚಂಡ ಪ್ರಭೆಯುಳ್ಳುದೋ! ವ|| ಆದಾದ ಮೇಲೆ

ಜಗಮಂ ಕಾಲಾಗ್ನಿರುದ್ರಂ ಸುಡುವನಿದಱಿಂದೊತ್ತಿ ಬೈತಿಟ್ಟ ಕಿಚ್ಚಂ
ನೆಗೆದತ್ತೇಗೆಯ್ವವೆತ್ತಲ್ ಪುಗುವವೆನುತೆ ದೇವಾಳಿ ಗೋಳುಂಡೆಗೊಳ್ವಂ
ತು ಗುಹಂ ಕಾಯ್ದಿಟ್ಟುದಂ ಶಕ್ತಿಯನೆಡೆಯೊಳೆ ಕರ್ಗೊಳ್ಳಿವೊಲ್ ಬೀೞೆ ದರ್ಪಂ
ನೆಗಟಲ್ ಹುಂಕಾರದಿಂ ಚಪ್ಪರಿಸಿ ಕೆಡಪಿದಂ ಕೃಷ್ಣನಾಜ್ಞಾಸಮಗ್ರಂ ೪೧

ರವಿಯಂ ದೋರ್ದರ್ಪದಿಂದಂ ತುಡುಕಿ ಪಿಡಿದನೀ ಕೃಷ್ಣನೆಂಬೊಂದಗುರ್ವು
ರ್ಬುವಿನಂ ಸ್ಕಂದಂಗೆ ಚಕ್ರಂಗೊಳೆ ಹರಿ ಗಿರಿಜಾಕಾಂತೆ ನಗ್ನತ್ವದಿಂ ಕೌ
ಟವಿ ಬಂದಡ್ಡಂ ನಿಲಲ್ ಚೀಃ ಸುಡುಸುಡು ತೊಲಗೆಂದಾ ಮುರಧ್ವಂಸಿ ಪೇಸು
ತ್ತುವೆ ತಿರ್ಯಗ್ವಕ್ತ್ರನಾಗಿರ್ಪಿನಮುಪಸರಣಂಗೆಯ್ದನತ್ತಲ್ ಷಡಾಸ್ಯಂ ೪೨

ವ।। ಅನ್ನೆಗಮಾಗಳ್

ಭೇರೀರವದಿಂ ತೀವಿ ಪ
ಯೋರುಹಗರ್ಭಾಂಡಮೊಡೆಯೆ [1]ಸುರಿದಪ್ಪುದಸೃ
ಗ್ವಾರಿಯೆನೆ ನಭದೆ ರುಧಿರಾ
ಸಾರಂ ಸುರಿದತ್ತು ಬಾಣಗಮನೋದ್ಯಮದೊಳ್ ೪೩

ಅಸುರಬಲಭಾರದಿಂದೆ
ಣ್ದೆಸೆಯಾನೆಯ ನೆತ್ತಿ ಪೊತ್ತೆ ಪುಟ್ಟಿದ ಧೂಮ
ಪ್ರಸರಮಿದೆಂಬಿನೆಗಮುಗು
ರ್ವಿಸಿ ನೆಗೆದುವು ಧೂಮಕೇತುಗಳ್ ದೆಸೆದೆಸೆಯೊಳ್ ೪೪

೪೧. ಪ್ರಳಯ ಕಾಲದಲ್ಲಿ ಕಾಲಾಗ್ನಿರುದ್ರನು ಇದರಿಂದ ಜಗತ್ತನ್ನು ಸುಡುವನು. ಎಂದು ಅದುಮಿ ಬಚ್ಚಿಟ್ಟಿದ್ದ ಕಿಚ್ಚು ಈಗಲೇ ನೆಗೆಯಿತು, ಏನು ಮಾಡೋಣ! ಎಲ್ಲಿ ಹೋಗೋಣ?! ಎಂದು ದೇವತೆಗಳು ಗೋಳಾಡುತ್ತ ಗುಂಪುಸೇರುವಂತೆ ಗುಹನು ಕೋಪಗೊಂಡು ಹೊಡೆದ ಕೊಳ್ಳಿಯಂತಹ ಶಕ್ತ್ಯಾಯುಧವನ್ನು ದಾರಿಯ ಮಧ್ಯದಲ್ಲೇ ಆಜ್ಞಾಸಮರ್ಥ ಕೃಷ್ಣನು ಹುಂಕಾರದಿಂದ ಚಪ್ಪರಿಸಿ ಬೀಳಿಸಿದನು. ೪೨. 'ಈ ಕೃಷ್ಣನು ಸೂರ್ಯನನ್ನು ತನ್ನ ಭುಜ ದರ್ಪದಿಂದ ತಟ್ಟನೆ ಹಿಡಿದುಕೊಂಡನು' ಎಂಬ ಭಯಾತಿಶಯವಾಗುವಂತೆ ಕೃಷ್ಣನು ಷಣ್ಮುಖನನ್ನು ಹೊಡೆಯಲು ಚಕ್ರವನ್ನು ತೆಗೆದುಕೊಂಡನು. ಒಡನೆಯೇ ಪಾರ್ವತಿಯ ಸಖಿಯೊಬ್ಬಳು ನಗ್ನಳಾಗಿ ಬಂದು ಹೊಡೆಯದಂತೆ ಅಡ್ಡಲಾಗಿ ನಿಂತಳು. ಕೃಷ್ಣನು 'ಛೆಂಕಿ, ಸುಡು ಸುಡು, ತೊಲಗು' ಎನ್ನುತ್ತ ಹೇಸಿಕೆಯಿಂದ ತನ್ನ ಮುಖವನ್ನು ಪಕ್ಕಕ್ಕೆ ತಿರುಗಿಸಿಕೊಂಡನು. ಆಗ ಷಣ್ಮುಖನು ತಪ್ಪಿಸಿಕೊಂಡು ಅತ್ತ ಓಡಿದನು. ವ।। ಅಷ್ಟರಲ್ಲಿ ೪೩. ಬಾಣಾಸುರನು ಭೇರಿಯ ಶಬ್ದವಾಗುತ್ತಿರುವಲ್ಲಿ ಯುದ್ಧಕ್ಕಾಗಿ ಹೊರಟನು. ಆ ಭೇರಿಯ ಶಬ್ದವು ತಾಕಿ ಬ್ರಹ್ಮಾಂಡವು ಒಡೆದು ಸುರಿಯುತ್ತಿದೆಯೆನ್ನುವಂತೆ ಆಕಾಶದಿಂದ ರಕ್ತಧಾರೆಯ ಮಳೆಸುರಿಯಿತು. ೪೪. ಆ ರಾಕ್ಷಸನ ಸೇನೆಯ ಭಾರದ ಘರ್ಷಣೆಯಿಂದ ಎಂಟುದಿಕ್ಕಿನ ಆನೆಗಳು ನೆತ್ತಿಯು ಹತ್ತಿಕೊಂಡು ಹುಟ್ಟಿದ ಹೊಗೆಯೆನ್ನುವಂತೆ ದಿಕ್ಕು

೧. ಸುರಿವಘನಾಸೃ (ಖ)

ಸ್ತುತಿವಾದಮಲ್ತು ಫಣಿಪತಿ
ಪೃತನಾ ಭರದಿಂ ಪ್ರಭಗ್ನಫಣನಾದುದು ಸೂ
ನೃತಮೆಂದು ಸೂಚಿಪಂತ
ದ್ಭುತವಾದುದು ಬಾಣಗಮನದೊಳ್ ಭೂಕಂಪಂ ೪೫

ದಿವಮಂ ಜಕ್ಕುಲಿಪ ಪರೂ
ಥಧ್ವಜಯಂತಿಗಳ ಪೊಯ್ಲೊಳಭ್ರದಿನಿಂದಿಂ
ತವಿರಳಮಾಗುದಿರ್ದುವೆನ
ಲ್ಕವನಿಗೆ ನಕ್ಷತ್ರಪಾತವಾಯ್ತರಿಬಲದೊಳ್ ೪೬

ವಾರಣಸೈನ್ಯಶಿರಸ್ಸಿಂ
ದೂರಂ ಪ್ರತಿಕೂಲಮಾರುತಾಹತಿಯಿಂದು
ತ್ಸಾರಿತವಾಗಿರ್ದಪುದೆನೆ
ದಾರುಣಮಾದತ್ತು ಸುತ್ತಲುಂ ದಿಗ್ದಾಹಂ ೪೭

ನೆರೆದ ನಿಶಾಚರೇಂದ್ರಬಲದೊಂದು ಪದೋದ್ಧತಧೂಳಿಜಾಳದಿಂ
ಸುರನದಿ ಬತ್ತೆ ನಿತ್ತರಿಸದೊರ್ಮೊದಲಲ್ಲಿಯ ಬಾಳೆಮೀಂಗಳೀ
ಧರಣಿತಳಕ್ಕೆ ಬಿದ್ದಪುವು ಭೋಂಕನೆ ಪೇಟೆಮೆನಲ್ ದಿಗೀಶ್ವರೋ
ತ್ಕರನಯನಂಗಳುಳ್ಕೆ ಯಮರಾಧಿಪನಳ್ಕೆಯುಮುಳ್ಕರಾಜಿಗಳ್ ೪೮

ವ|| ಅಂತಪಜಯಕ್ಕಾಗರಮಾಗಿ ಬಾಣಂ ರಣಕ್ಷೋಣಿಯೊಳೊಡ್ಡಿ ನಿಲೆ

ದಿಕ್ಕುಗಳಲ್ಲೂ ಧೂಮಕೇತುಗಳು ಭಯಂಕರವಾಗಿ ಹಾರಿದವು. ೪೫. ಇದೇನೂ ಸ್ತುತಿಯ ಮಾತಲ್ಲ. ಬಾಣನ ಸೇನೆಯ ಭಾರದಿಂದ ಆದಿಶೇಷನ ಹೆಡೆಯು ಒಡೆದು ಹೋಯಿತು, ಇದು ನಿಜವಾದ ಮಾತು ಎಂಬುದನ್ನು ಸೂಚಿಸುವಂತೆ ಬಾಣನು ಸೇನೆಯೊಡನೆ ನಡೆಯುವಾಗ ಭೂಕಂಪವು ಅದ್ಭುತವಾಯಿತು. ೪೬. ಸ್ವರ್ಗವನ್ನೂ ಆಕಾಶವನ್ನೂ ಜಕ್ಕುಲಗುಳಿಯಿಡುವ ಬಾಣನ ರಥದ ಧ್ವಜಗಳ ಹೊಡೆತದಿಂದ ಈ ದಿನ ಆಕಾಶದಿಂದ ಹೀಗೆ ಒತ್ತಾಗಿ ಉದುರಿದವು ಎನ್ನುವಂತೆ ಸೇನೆಯ ಮೇಲೆ ಭೂಮಿಗೆ ನಕ್ಷತ್ರಗಳು ಬಿದ್ದುವು. ೪೭. ಸೈನ್ಯದ ಆನೆಗಳ ತಲೆಯ ಸಿಂಧೂರವು ಎದಿರುಗಾಳಿಯ ಹೊಡೆತದಿಂದ ಹಾರಿ ಹರಡಿತೆಂಬಂತೆ ಸುತ್ತಲೂ ದಿಕ್ಕುಗಳಲ್ಲಿ ಕೆಂಪಾದ ಬೆಂಕಿಯ ಉರಿಯುಂಟಾಯಿತು. ೪೮. ತುಂಬಿದ ರಾಕ್ಷಸೇಂದ್ರನ ಸೇನೆಯ ಕಾಲು ತುಳಿತದಿಂದ ಎದ್ದ ಧೂಳು ದೇವಗಂಗೆಗೆ ಬಿದ್ದು ನೀರು ಬತ್ತಿ ಹೋಯಿತು. ಆದುದರಿಂದ ಅಲ್ಲಿ ನಿಲ್ಲಲಾರದೆ ಗಂಗೆಯ ನೀರಿನಲ್ಲಿದ್ದ ಬಾಳೆಮೀನುಗಳು ಒಟ್ಟಿಗೆ ಭೂತಲಕ್ಕೆ ಬೀಳುತ್ತಿವೆಯೋ, ಹೇಳಿ' ಎನ್ನುವಂತೆ, ಉಲ್ಕೆಯ ಸಮೂಹಗಳು ದಿಕ್ಪಾಲರ ಕಣ್ಣು ಹೊಳೆಯುವಂತೆಯೂ ಇಂದ್ರನು ಭೀತನಾಗುವಂತೆಯೂ ಮಾಡಿ ಭೂಮಿಯ ಮೇಲೆ ಬಿದ್ದುವು. ವ|| ಹಾಗೆ ಅಪಜಯಕ್ಕೆ ಆಶ್ರಯವಾಗಿ, ಬಾಣಾಸುರನು, ಯುದ್ಧರಂಗದಲ್ಲಿ ಸಿದ್ಧನಾಗಿ ಪ್ರತಿಭಟಿಸಿ ನಿಂತನು.

ಇಸುವ ಧನುರ್ವಲಂ ಭರದಿನೆಯ್ದುವ ಪೇರಣಿ ಸಾರ್ವ ಕೊಂತವೊ
ಡ್ಡಿಸುವ ರಥಾಳಿ ನೂಂಕುವಿಭಸಂತತಿ ಪಾಯಿಸುವಶ್ವವೃಂದಮು
ರ್ವಿಸೆ ಕವಿತರ್ಪರಾತಿಚತುರಂಗಪತಾಕಿನಿಯಂ ಮುಕುಂದನೀ
ಕ್ಷಿಸಿ ಮುಳಿದೆಚ್ಚನಾ ಪಡೆಗೆ ಮಾರ್ಪಡೆಯಂ ಪಡೆವೈಂದ್ರಬಾಣಮಂ ೪೯

ಎನಿತು ಮದೇಭದೊಡ್ಡನಿತು ತೇರೆನಿತಾಳೆನಿತಶ್ವಪಾಂತುವಂ
ತನಿತೆ ಮದೇಭದೊಡ್ಡನಿತೆ ತೇರನಿತಾಳನಿತಶ್ವಮಸ್ತ್ರದಿಂ
ಜನಿಯಿಸಿ ಪೋರ್ದು ಮಾರ್ಪೊಣರ್ದು ತಳ್ತಿಱಿದೆಯ್ದಿ ಪಳಂಚಿ ಕಾದುತಿ
ರ್ಪಿನೆಗಮುಪೇಂದ್ರನಿತ್ತ ಬಲಿನಂದನನಂ ಗರಿಸನ್ನೆಗೆಯ್ದುದುಂ ೫೦

ತುರುಗಂಗಳ್ ಸಾಸಿರಂ ಪೂಡಿದ ಕರಡಿದೊಗಲ್ ತಳ್ತ ಪೊಂಗಾಲಿ ಕಂಗೊ
ಳ್ವರುವದ್ಘಂಟಾಪತಾನಂ ಪೊಳೆವ ನವಿಲ ಸಿಂಧಂ ಬೆಡಂಗಾದ ತೇರಂ
ಭರದಿಂ ಕುಂಭಾಂಡಸಂದಾರ್ದೆಸಗೆ ಭುಜಸಹಸ್ರಂಗಳೊಳ್ ಕೈದುವಂ ಸಾ
ಸಿರಮಂ ಕೈಕೊಂಡು ಬೀೞಲ್ವರಿವ ಗಿರಿಯೆನಲ್ ಬಂದು ದೈತ್ಯೇಂದ್ರನೆಂದಂ ೫೧

ಹರನರೆವೆಣ್ಣುಹಂ ವಟುಗಣಂ ಮರುಳಂ ನರನಾಂತು ಗೆಲ್ದು ನೀಂ
ಬರಿದಪೆ ಬೀರದೊಳ್ ದಿಟಕೆ ಬೀರಮದುಳ್ಳೊಡಿದಿರ್ಚಿ ನಿಲ್ [1]ನಿಶಾ
ಚರಪತಿಯಂ ಬಲೀಂದ್ರಸುತನಂ ಧೃತಬಾಹುಸಹಸ್ರನಂ ಮಹೀ
ಧರ ನಿನಗಾಂತೆನಿನ್ನಱಿಯಪ್ಪುದು ನಿನ್ನಯ ಬೀರದೇಳ್ಗೆಯಂ ೫೨

೪೯. ಬಾಣಗಳನ್ನು ಹೊಡೆಯುವ ಧನುರ್ಧಾರಿಗಳ ದೊಡ್ಡದಾದ ಕಾಲಾಳಿನ ಸೇನೆಯೂ, ಕುಂತಾಯುಧವನ್ನು ಗುರಿಯಿಟ್ಟು ಹೊಡೆಯುವ ರಥ ಸೈನ್ಯಸಮೂಹವೂ ಮುಂದೆ ನೂಕುವ ಆನೆಗಳ ಸಮೂಹವೂ, ಮೇಲೆ ಹಾರಿಸುವ ಕುದುರೆಗಳ ದಂಡೂ ಭಯಂಕರವಾಗಿರುವಂತೆ ಕವಿದು ಬರುತ್ತಿರುವ ಶತ್ರುವಿನ ನಾಲ್ಕು ಬಗೆಯ ಸೇನೆಯನ್ನೂ ಕೃಷ್ಣನು ನೋಡಿ, ರೇಗಿ, ಆ ಸೇನೆಗೆ ತಕ್ಕ ಪ್ರತಿಸೇನೆಯನ್ನು ಸೃಷ್ಟಿಸುವ ಶಕ್ತಿಯುಳ್ಳ ಐಂದ್ರಬಾಣವನ್ನು ಪ್ರಯೋಗಿಸಿದನು. ೫೦. ಬಾಣಾಸುರಸೇನೆಯಲ್ಲಿ ಎಷ್ಟು ಮದ್ದಾನೆಗಳಿವೆಯೋ ಎಷ್ಟು ಕುದುರೆಗಳಿವೆಯೋ ಎಷ್ಟು ರಥಗಳಿವೆಯೋ ಎಷ್ಟು ಕಾಲಾಳಿವೆಯೋ ಎಷ್ಟು ಅಸ್ತ್ರ ಶಸ್ತ್ರಗಳಿವೆಯೋ ಅಷ್ಟೇ ಆನೆ ಕುದುರೆ ರಥ ಕಾಲಾಳು ಅಸ್ತ್ರಶಸ್ತ್ರಗಳನ್ನು ಆ ಐಂದ್ರಾಸ್ತ್ರವು ಸೃಷ್ಟಿಸಿತು. ಅವು ಪ್ರತಿ ಸೇನೆಯೊಡನೆ ಅತಿ ಸಾಮರ್ಥ್ಯದಿಂದ ಹೋರಾಡಿ ಯುದ್ಧ ಮಾಡುತ್ತಿದ್ದವು. ಇತ್ತ ಕಡೆ ಕೃಷ್ಣನು ಬಾಣಾಸುರನನ್ನು ಬಾಣದ ಗರಿಯ ಸನ್ನೆಯಿಂದ ಕರೆದನು. ೫೧. ಆಗ ಬಾಣಾಸುರನು ಕರಡಿಯ ತೊಗಲನ್ನು ಹೊದಿಸಿದ ಸಾವಿರ ಕುದುರೆಗಳನ್ನು ಹೂಡಿದ, ಚಿನ್ನದ ಗಾಲಿಗಳು ಹೊಳೆಯುವ, ಧ್ವನಿ ಮಾಡುತ್ತಿರುವ ಘಂಟೆಗಳುಳ್ಳ ನವಿಲಿನ ಬಾವುಟವು ಪ್ರಕಾಶಿಸುತ್ತಿರುವ ಬೆಡಗಿನ ರಥವನ್ನು ಕುಂಭಾಂಡನೆಂಬ ಸಾರಥಿಯು ನಡೆಯಿಸುತ್ತಿರುವಲ್ಲಿ ಸಾವಿರ ಕೈಗಳಲ್ಲೂ ಸಾವಿರ ಆಯುಧಗಳನ್ನು ಹಿಡಿದುಕೊಂಡು ಬೀಳಲು ಬಿಟ್ಟಿರುವ ಗಿರಿಯಂತೆ ಬಂದು ಕೃಷ್ಣನಿಗೆ ಹೇಳಿದನು. ೫೨. ಹರನು ಅರೆ ಹೆಣ್ಣಿಗ, ಷಣ್ಮುಖನು ವಟು, ಪ್ರಮಥಗಣವು ಮರುಳು. ಅಂತಹವರನ್ನು ಎದುರಿಸಿ ಗೆದ್ದು ನೀನು ಪರಾಕ್ರಮದಿಂದ ಬಿರಿದು ಹೋಗುತ್ತಿದ್ದೀಯೆ. ನಿನ್ನಲ್ಲಿ ನಿಜವಾದ ಪರಾಕ್ರಮವಿದ್ದರೆ, ರಾಕ್ಷಸೇಶ್ವರನೂ

೧. ನಿಶಾಚರಪತಿಯೆಂ ಬಲೀಂದ್ರಸುತ ಬಾಹುಸಹಸ್ರಕಬಾಣನೆಂ (ಖ)

[1]ಆವ ಭವಂ ಬಂದುಂ ದೈ
ತ್ಯಾವಳಿಯಂ ಕಾಲನಿಲಯಮಮಂ ಪುಗಿಸುವ ಮಾ
ಯಾವಿಯೆ ಪೊಕ್ಕಪೆ ನೀನಮ
ರಾವತಿಯಂ [2]ದ್ವಾರವತಿಯನಿಂ ಪುಗಲಾರ್ಪೈ ೫೩

ವ|| ಎಂದ ಕಳಾಪಿಧ್ವಜನಾಳಾಪಮಂ ಕೇಳ್ದು

ಕೂರಂಬುಗಳಂ ನಿನ್ನೀ
ಪೇರುರದೊಳ್ ಪುಗಿಸಿ ನಿನ್ನುಮಂ ಸುರಗಣಸಂ
ಹಾರಕ ಯಮವದನಗುಹಾ
ದ್ವಾರಮನಾಂ ಪುಗಿಸಿ ಪುಗದಿರೆಂ ದ್ವಾರಕಿಯಂ ೫೪

ವ|| ಎಂದಪರಿಮಿತೋದಾರ ಧೀರವಚನದಿಂ ನುಡಿದು

ಅಂಬರಮುಂ ದೆಸೆಯುಂ ಬಿಡ
ದಂಬನೆ ಕಾರುತ್ತುಮಿರ್ದುವೆನೆ ಶಾರ್ಙ್ಗಿ ತಗು
ಳ್ವಂಬಿನ ಮಳೆಯಂ ಕರೆದಂ
ಬಿಂಬ[3]ದ್ಯುತಿವಿತತಿ ಮಣಿವಿನಂ ದಿನಮಣಿಯಾ ೫೫

ಅಯ್ನೂಱುಬಿಲ್ಲೊಳಂಬುಗ
ಳಯ್ನೂಱಿಸೊಗೆತರೆ ಸಹಸ್ರಭುಜನೆಚ್ಚಾಡಲ್
[4]ಕಯ್ನಿರಿದಾಡಿದನತ್ತಲ್
ಮೆಯ್ನವಿರ್ಗಳುಮೊಗೆಯೆ ನಾರದಂ ಸಂತಸದಿಂ ೫೬

ಬಲಿಪುತ್ರನೂ ಸಹಸ್ರಬಾಹುಗಳುಳ್ಳವನೂ ಆದ ನಾನು ನಿನಗೆ ಇದಿರಾಗಿದ್ದೇನೆ. ಕೃಷ್ಣ, ಇನ್ನು ನಿನ್ನ ಪರಾಕ್ರಮದ ಏಳಿಗೆಯನ್ನು ತಿಳಿಯಬಹುದು. ೫೩. ಯಾವ ಜನ್ಮದಲ್ಲಿ ಹುಟ್ಟಿದರೂ ನೀನು ರಾಕ್ಷಸಸಮೂಹವನ್ನು ಯಮಾಲಯಕ್ಕೆ ಹೊಗಿಸುವ ಮಾಯಾವಿಯೇ ಸರಿ, ಆದರೆ ಇನ್ನು ನೀನು ಅಮರಾವತಿಯನ್ನು ಹೊಗುವೆ, ದ್ವಾರಾವತಿಯನ್ನು ಸೇರಬಲ್ಲೆಯಾ!" ವ|| ಎಂದ ಮಯೂರಧ್ವಜ (ಬಾಣ)ನ ಭಾಷಣವನ್ನು ಕೇಳಿ ಕೃಷ್ಣನು ೫೪. "ಹರಿತವಾದ ಬಾಣಗಳನ್ನು ನಿನ್ನ ಈ ವಿಸ್ತಾರವಾದ ಎದೆಯಲ್ಲಿ ನಾಟಿಸಿ, ನಿನ್ನನ್ನು ಯಮನ ಬಾಯೆಂಬ ಗುಹಾದ್ವಾರವನ್ನು ಹೊಗಿಸಿ, ನಾನು ದ್ವಾರಕೆಗೆ ಹೋಗದೆ ಇರುವುದಿಲ್ಲ." ವ|| ಎಂದು ಪರಿಮಿತವೂ ಉದಾರವೂ ಆದ ಧೀರವಚನದಿಂದ ಹೇಳಿದನು. ೫೫. ಕೃಷ್ಣನು - ಆಕಾಶವೂ ದಿಕ್ಕುಗಳೂ ತಪ್ಪದೆ ಬಾಣಗಳನ್ನು ಕಕ್ಕುತ್ತಿವೆಯೋ ಎನ್ನುವಂತೆ ದಿಗಂತಗಳಿಗೂ ತಾಕುವಂತೆಯೂ ಸೂರ್ಯಮಂಡಲದ ಕಿರಣಸಮೂಹವು ಮಣಿಯುವಂತೆಯೂ ಬಾಣಗಳ ಮಳೆಯನ್ನು ಕರೆದನು. ೫೬. ಸಹಸ್ರಬಾಹುವಾದ ಬಾಣನು ತನ್ನ ಐದು ನೂರು ಬಿಲ್ಲುಗಳಿಂದಲೂ ಒಂದೊಂದು ಸಾರಿಯೂ ಐನೂರು ಐನೂರು ಬಾಣಗಳನ್ನು ಹೊಡೆದು ಇತ್ತ ಕಡೆ ಯುದ್ಧ ಮಾಡುತ್ತಿದ್ದನು. ಆಗ ನಾರದನು,

೧. ಆವವನಿಂ (ಖ) ೨. ದ್ವಾರವತಿಯನೇಂ (ಕ) ೩. ದ್ಯುತಿವಿರುತಿಮಣಿವಿನಂಬಿನ ಮಳೆಯಂ (ಕ) ೪. ಕಯ್ನಿರಿದಾಡುತ್ತಲ್ಮೆಯ್ನವಿರ್ಗಳುಮೊಗೆಯೆ (ಕ)

ಇಳೆಯೊಳ್ ಬಿಲ್ಬಲ್ಗೀತಂ [1]ಮಿಗಿಲಿವನ ಧನುರ್ದಂಡಟಂಕಾರಮಂ ಕೇ
ಳಲೆಬರ್ಕುಂ ಭೋರನೋರಂತಿರೆ ಸುರಿವ ಶರಾಸಾರಸಂತಾನಮಂ ಕಾ
ಣಲೆಬರ್ಕುಂ ಮಾಣದಂಬಂ ತುಡುವ ಬಿಡುವ ಕೈವೇಗಮಂ ಕಾಣನಭ್ರ
ಸ್ಥಳದೊಳ್ ನೋಟ್ಬಾ ಸಹಸ್ರಾಕ್ಷನುಮೆನೆ ಕರೆದಂ ಬಾಣಮಂ ಬಾಣದೈತ್ಯಂ ೫೭

[2]ಸರಲೊಂದನೊಂದು ಕಡಿದಂ
ಬರದಿಂ ಸುರಿದಿಳೆಯೊಳೊಪ್ಪಿ ಬೆಟ್ಟಾಗಿರಲಿ
ರ್ವರುಮೊಡನೊಡನೆಚ್ಚರ್ ಭುಜ
ಗ ರಿಪುಧ್ವಜರಮರಕೋಟಿ ಜೀಯೆಂಬಿನೆಗಂ ೫೮

ವಾರಣಬಾಣದಿಂ ಜ್ವಲನಬಾಣಮನಗ್ನಿಸಹಾಯಬಾಣದಿಂ
ನೀರದಬಾಣಮಂ ದಿವಿಜನಾಯಕಬಾಣದಿನದ್ರಿಬಾಣಮಂ
ಗಾರುಡಬಾಣದಿಂ ಭುಜಗಬಾಣಮನಂಬುಜಮಿತ್ರಬಾಣದಿಂ
ಘೋರತಮಿಸ್ರಬಾಣಮನುಪೇಂದ್ರನದಿರ್ಪೆ ಕನಲ್ದು ದಾನವಂ ೫೯

ಅಲಘುತರಭುಜದಿನುದಯಾ
ಚಲಾಸ್ತಗಿರಿಶಾಣ[3]ಯುಗಳದಿಂ ಮಸೆವಂತೀ
ಟ್ದಲಗಿನ ಕಕ್ಕಡೆಯಂ ಕದ
ನಲೋಲನಂತಂತೆ ತೂಗಿ ಕೃಷ್ಣನನಿಟ್ಟಂ ೬೦

ಅತ್ತ ಕಡೆ ರೋಮಾಂಚಿತಗಾತ್ರನಾಗಿ ಸಂತೋಷದಿಂದ ಕೈ ಹಿಸಿಕಿಕೊಂಡು ಚಪ್ಪಾಳೆ ತಟ್ಟುತ್ತಾ ಆಡಿದನು. ೫೭. ಭೂಮಿಯಲ್ಲಿ ಬಿಲ್ಲಿನ ಶಕ್ತಿಯಲ್ಲಿ ಈತನು ಮೇಲಾದವನು. ಈತನ ಬಿಲ್ಲಿನ ಟಂಕಾರವೂ ಕೇಳ ಬರುವುದು-ಭೋರೆಂದು ಚೆನ್ನಾಗಿ ಸುರಿಯುವ ಬಾಣಗಳ ಮಳೆ ಸುರಿಯುವುದನ್ನೂ ಕಾಣಬಹುದು. ಆದರೆ, ಬಿಡದೆ ಬಾಣಗಳನ್ನು ಬಿಲ್ಲಿನಲ್ಲಿ ತೊಡುವ ಬಿಡುವ ಕೈವೇಗವನ್ನು ಆಕಾಶ ಪ್ರದೇಶದಲ್ಲಿದ್ದು ನೋಡುವ ಆ ಸಹಸ್ರಾಕ್ಷನೂ ಕಾಣನು ಎನ್ನುವಂತೆ ಬಾಣಾಸುರನು ಬಾಣಗಳನ್ನು ಸುರಿಸಿದನು. ೫೮. ಬಾಣಾಸುರ ಶ್ರೀಕೃಷ್ಣರಿಬ್ಬರೂ ಪ್ರಯೋಗಿಸುವ ಬಾಣಗಳು ಒಂದನ್ನೊಂದು ಕಡಿದು ಆಕಾಶದಿಂದ ಭೂಮಿಗೆ ಸುರಿದವು. ಅದರಿಂದ ಭೂಮಿಯ ಮೇಲೆ ಒಂದು ಬಾಣಗಳ ಬೆಟ್ಟವೇ ಆದಂತಾಯಿತು. ಅದನ್ನು ನೋಡಿದ ದೇವತೆಗಳ ಸಮೂಹವು ಅಚ್ಚರಿಗೊಂಡಿತು. ೫೯. ಬಾಣಾಸುರನ ಅಗ್ನಿಬಾಣವನ್ನು ಕೃಷ್ಣನು ವಾರುಣ ಬಾಣದಿಂದಲೂ ಮೇಘಾಸ್ತ್ರವನ್ನು ವಾಯವ್ಯಾಸ್ತ್ರದಿಂದಲೂ ಅದ್ರಿಬಾಣವನ್ನು ಇಂದ್ರಬಾಣದಿಂದಲೂ ಸರ್ಪಶರವನ್ನು ಗರುಡ ಬಾಣದಿಂದಲೂ ಘೋರವಾದ ಅಂಧಕಾರ ಬಾಣವನ್ನು ಸೌರಬಾಣದಿಂದಲೂ ನಡುಗಿಸಿ, ಅಡಗಿಸಿದನು. ಬಾಣನು ಕೋಪಗೊಂಡನು. ೬೦. ಅವನು ಘನತರವಾದ ತೋಳುಗಳ ಬಲದಿಂದ ಕದನಲೋಲನಾದ ಬಾಣನು ಉದಯಾಸ್ತ ಗಿರಿಗಳೆಂಬ ಸಾಣೆಕಲ್ಲುಗಳಲ್ಲಿ ಮಸೆಯುವಂತೆ ಎಳೆದುಕೊಂಡ ಅಲಗಿನ ಖಡ್ಗವನ್ನು ತೂಗಿ ಕೃಷ್ಣನ ಮೇಲೆ ಹೊಡೆದನು.

---

೧. ಮಿಗಿಲೆನಿಸಿ (ಕ) ೨. ಸರಲೊಂದೊಂದಂಬರದಿಂ ಸುರಿದಿಳೆಯೊಳೊಟ್ಟಿ (ಕ) ಸರಲೊಂದೊಂದಂಬರದಿಂ ಸುರಿದಿಳೆಯೊಳಗೊಟ್ಟಿನೋಡಿ (ಮೊಲಿ) ೩. ಯುಗಳದಿಂದಂ ಸಮೆದಂದಲಗಿನ ಕಕ್ಕಡೆಯಿಂ ವಿಜಯಲೋಲನಿಂತಂತೆ (ಕ)

ಕಿಡಿಯಂ ಕೆಂಡಂಗಳಂ ಕೇಸುರಿಯನುಗುೞುತುಂ ಕ್ಷುದ್ರಘಂಟಾಟ್ಟನಾದಂ
ಪೊಡರ್ವನ್ನಂತೆಯ್ತರ್ಪುದುಂ ಶಕ್ತಿಯನವಯವದಿಂದೊಂದು ನೀಲಾಂಬುಜಾತಂ
ಬಿಡಿವಂತಬ್ಜಾಂಬಕಂ ಭೋಂಕನೆ ಪಿಡಿದದಱಿಂ ನಿನ್ನದಂ ನೀನೆ ಕೊಳ್ಳೆಂ
ದಿಡೆ ವಜ್ರಂ ಶೈಲಮಂ ನಾಂಟುವವೊಲಸುರನಂ ನಾಂಟಿ ಪೋದತ್ತದಾಗಳ್ ೬೧

ಶಕ್ತಿಯೆ ನಾಂಟಿ ಪೋದೆಡೆಯ ಮುಂತಣ ಪಿಂತಣ ಪುಣ್ಣ ಬಾಯ್ಗಳಿಂ
ರಕ್ತದ ಧಾರೆ ನೀಳ್ದೊಗೆದು ತಂದುದು ನಾಕಿಜನಕ್ಕೆ ವಿಸ್ಮಯಾ
ಸಕ್ತಿಯನಾ ನಿಶಾಚರನ ಕೋಪದ ದಳ್ಳುರಿ ನಾಂಟಿ ಪೋದ ತ
ಚ್ಛಕ್ತಿಗಮಿತ್ತಲಿಟ್ಟ ಹರಿಗಂ ಹರಿದೊರ್ಮೊದಲೆಯ್ದುವಂದದಿಂ ೬೨

ವ|| ಅಂತು ಶಕ್ತಿಪ್ರಹಾರದಿಂದಾದ ಹೃದಯದ್ವಾರದಿಂ ವೀರಗ್ರಹಪ್ರವೇಶವಾದಂತೆ ವಿಜೃಂಭಿಸುವ ಸಹಸ್ರಭುಜನಂ ಮುಳಿದು ನೋಡಿ

ಮುದಮಿಂದ್ರಂಗೊಳ್ಪು [1]ಮಾರಂಗಭಿಮತವನಿರುದ್ಧಂಗೆ ಕೈಸಾರ್ದುದಿಂದ
ಬ್ಜದಳಾಕ್ಷಂ ಬಾಣನಂ ಗೆಲ್ದಪನೆನುತೆ ಜಯಧ್ವಾನಮಂ ಮಾೞೆ ನಾಕಾ
ಸ್ಪದರಾ ಪ್ರಸ್ತಾವದುರ್ವಾಸಮಯದೆಸಕವಾ ಕಾಲದಾಟೋಪವಾ ಬೇ
ಗದವಷ್ಟಂಭಂ ಜಗದ್ಜೃಂಭುಕವೆನೆ ರಿಪುವಂ ಚಕ್ರದಿಂ ಕೃಷ್ಣನಿಟ್ಟಂ ೬೩

೬೧. ಕಿಡಿಯನ್ನೂ ಕೆಂಡವನ್ನೂ ಕೆಂಪಾದ ಉರಿಯನ್ನೂ ಉಗುಳುತ್ತ ಚಿಕ್ಕ ಗಂಟೆಗಳ ಬಲವಾದ ಶಬ್ದವು ಕೇಳಿಸುವಂತೆ ಬರುತ್ತಿರುವ ಆ ಶಕ್ತಿಯನ್ನು ಕೃಷ್ಣನು ತನ್ನ ಸಾಮರ್ಥ್ಯದಿಂದ ಲೀಲೆಗಾಗಿ ಹಿಡಿದುಕೊಳ್ಳುವ ಒಂದು ತಾವರೆಯ ಹೂವಿನಂತೆ ತಟ್ಟನೆ ಹಿಡಿದುಕೊಂಡು ಅದರಿಂದಲೇ 'ನಿನ್ನದನ್ನು ನೀನೇ ತೆಗೆದುಕೋ!' ಎಂದು ಹೊಡೆದನು. ವಜ್ರಾಯುಧವು ಪರ್ವತವನ್ನು ನಾಟುವಂತೆ ಅದು ಬಾಣನ ಹೃದಯವನ್ನು ನಾಟಿ ತೂರಿ ಬೆನ್ನಿನಿಂದ ಹೊರಕ್ಕೆ ಹೋಯಿತು. ೬೨. ಶಕ್ತಿಯು ನಾಟಿದ ಮತ್ತು ಮುಂದಕ್ಕೆ ದೇಹದಿಂದ ಹೊರಟು ಹೋದ ಎರಡು ಕಡೆಗಳಲ್ಲೂ ರಂಧ್ರವಾಗಿ ಗಾಯವಾಯಿತಲ್ಲವೆ? ಆ ಹುಣ್ಣಿನ ಬಾಯಿಗಳಿಂದ ನೀಳವಾದ ರಕ್ತದ ಸರಳಧಾರೆಯು ಒಂದು ಕೃಷ್ಣನ ಕಡೆಗೆ ಚಿಮ್ಮಿದಂತೆ ಬಂದಿತು. ಮತ್ತೊಂದು ಬೆನ್ನಿನಿಂದ ಹೊರಟು ಹೋದ ಶಕ್ತಿಯ ಹಿಂಬಯೇ ಹೋಯಿತು. ಅದು ನೋಡುತ್ತಿದ್ದ ದೇವತೆಗಳಿಗೆ ಆ ರಾಕ್ಷಸನ ಕೋಪದ ದಳ್ಳುರಿಯು ಅತ್ತ ನಾಟಿ ಹೋದ ಶಕ್ತಿಗೂ ಇತ್ತ ಅದನ್ನು ಹೊಡೆದ ಕೃಷ್ಣನಿಗೂ ಒಂದೇ ಕಾಲದಲ್ಲಿ ತಾಕುತ್ತಿರುವಂತೆ ಕಾಣಿಸಿ ಆಶ್ಚರ್ಯಾಸಕ್ತಿಗಳನ್ನುಂಟುಮಾಡಿತು. ವ|| ಹಾಗೆ ಶಕ್ತಿಯ ಹೊಡೆತದಿಂದ ಆದ ಎದೆಯ ರಂಧ್ರಗಳಿಂದ ವೀರಗ್ರಹವು ಮೈಹೊಕ್ಕಂತೆ ಉಬ್ಬಿ ಆಡಂಬರವನ್ನು ತೋರಿಸುತ್ತಿರುವ ಸಹಸ್ರಭುಜ ಬಾಣನನ್ನು ಕೃಷ್ಣನು ಕೋಪದಿಂದ ನೋಡಿ, ೬೩. 'ಇಂದ್ರನಿಗೆ ಸಂತೋಷವೂ ಮನ್ಮಥನಿಗೆ ಒಳ್ಳೆಯದೂ ಅನಿರುದ್ಧನಿಗೆ ಅಭಿಮತವೂ ಆಗುವುದು. ಇಂದು ಕಮಲದಳ ನೇತ್ರನು ಬಾಣನನ್ನು ಗೆಲ್ಲುತ್ತಾನೆ' ಎಂದು ದೇವಲೋಕವಾಸಿಗಳು ಜಯಕಾರವನ್ನು ಮಾಡುತ್ತಿರಲು, ಆ ಪ್ರಸ್ತಾಪದ ಆಧಿಕ್ಯವೂ ಆ ಸಮಯದ ಕಾರ್ಯವೂ ಆಟೋಪವೂ

---

೧. ನಾಕಕ್ಕಭಿ (ಖ)

ವ॥ ಅಂತಿಸಲೊಡಂ

ರವಿಯಂ ಮುಂ ನುಂಗಿ ಮತ್ತಂತುಗುಳ್ವುದು ಸಹಜಂ ರಾಹುಗಿಂದಂತುಟಲ್ತೀ
ರವಿಬಿಂಬಂ ರಾಹುಸಂದೋಹಮನುಗುಳ್ದಪುದಾಶ್ಚರ್ಯಮೆಂಬನ್ನೆಗಂ ಚ
ಕ್ರವಗುರ್ವಿಂ ಬಾಣಬಾಹಾವನಮನನಿತುಮಂ ಛೇದಿಸಲ್ ಬಿಟ್ಟ ತದ್ಬಾ
ಹುವಿತಾನಂ ಯುದ್ಧರಂಗಾರ್ಣವದ ತೆರೆಗಳೆಂಬಂತೆ ತಳ್ತಿರ್ದುದೆತ್ತಂ ೬೪

ವ॥ ಆಗಳ್ ಸಹಸ್ರಭುಜಭುಜಾಟವೀಸಮುಚ್ಚಾಟನದಿಂ ದುರ್ದರ್ಶನಮಾಗಿ ಬಂದ ಸುದರ್ಶನಮಂ ಮಗುಳೆ ನೆಗಪಿ ತದ್ರಿಪುಶಿರಶ್ಛೇದನಂಗೆಯ್ಯಲೆಂದಿರ್ದ ವಿಶ್ವರೂಪನ ಸಮೀಪಕ್ಕೆ ವಿರೂಪಾಕ್ಷನೆಯ್ತಂದು

ಉಡುಗುಡುಗು ಚಕ್ರಮಂ ನೀಂ
ಬಿಡದಿರ್ ಬಿಡದಿರ್ ಬಲೀಂದ್ರಸೂನುಗೆ ಮಾಣ್ ಮಾಣ್
ಪೊಡೆಯಲರ ಮನ್ನಿಸೆನ್ನಯ
ನುಡಿಯಂ ಗುಹನಿಂ ವಿಶೇಷವೆನಗೀ ಬಾಣಂ ೬೫

ದ್ವಯಭಾವಂ ನಮಗಿಲ್ಲ ಬಲ್ಲವರೆ ನಾನುಂ ನೀನುಮೀ ಮಾತ ನಿ
ಶ್ಚಯಮೆಂತೆಂದೆನಲೇಕಮೂರ್ತಿ ಮೊದಲೊಳ್ [1]ಸಂದತ್ತದಿನ್ನೇಕ ಮೂ
ರ್ತಿಯೆ ಮೂರ್ತಿತ್ರಯವಾಯ್ತದಲ್ಲದೆಯುಮಾ ತ್ರೈಮೂರ್ತಿಯೊಳ್ ಸತ್ವಮೂ
ರ್ತಿಯೆ ನೀಂ ರಕ್ಷಣವೃತ್ತಿ ನಿನ್ನದದಱಿಂದಂ ರಕ್ಷಿಸೀ ಬಾಣನಂ ೬೬

ಆ ವೇಗಾಡಂಬರವೂ ಗರ್ವವೂ ಜಗತ್ತಿಗೆ ಆಶ್ಚರ್ಯಕರ ಎನ್ನುವಂತೆ ಚಕ್ರದಿಂದ ಶತ್ರುವಾದ ಬಾಣನನ್ನು ಹೊಡೆದನು. ವ॥ ಹಾಗೆ ಹೊಡೆಯಲು ೬೪. 'ರಾಹುವು ಸೂರ್ಯನನ್ನು ಮೊದಲು ನುಂಗಿ ಆಮೇಲೆ ಉಗುಳುವುದು ಸಹಜ. ಈಗ ಹಾಗಲ್ಲ, ಈ ರವಿಬಿಂಬವೇ ರಾಹುಸಮೂಹವನ್ನು ಉಗುಳುತ್ತಿದೆ, ಆಶ್ಚರ್ಯ! ಎನ್ನುವಂತೆ ಚಕ್ರವು ಭಯಂಕರಾಕೃತಿಯಿಂದ ಬಾಣಾಸುರನ ತೋಳುಗಳ ವನವನ್ನಷ್ಟನ್ನೂ ಕತ್ತರಿಸಿತು. ಬಿದ್ದ ಆ ತೋಳುಗಳ ಗುಂಪು ಯುದ್ಧರಂಗ ಸಾಗರದ ತೆರೆಗಳೆಂಬಂತೆ ಒತ್ತಾಗಿ ಎಲ್ಲ ಕಡೆಗೂ ಹರಡಿತು. ವ॥ ಆಗ ಬಾಣಾಸುರನ ಸಹಸ್ರಭುಜಗಳೆಂಬ ಕಾಡನ್ನು ಕಿತ್ತು ನೋಡಲು ಕಷ್ಟವಾಗುವಂತೆ ಹೊಳೆಯುತ್ತ ಹಿಂದಕ್ಕೆ ಬಂದ ಸುದರ್ಶನಚಕ್ರವನ್ನು ಕೃಷ್ಣನು ಮತ್ತೆ ಎತ್ತಿ ಆ ಶತ್ರುವಿನ ಶಿರಶ್ಛೇದನವನ್ನು ಮಾಡಬೇಕೆಂದುಕೊಳ್ಳುವಷ್ಟರಲ್ಲಿ ಆ ವಿಶ್ವರೂಪನೆಡೆಗೆ ವಿರೂಪಾಕ್ಷನು ಬಂದು ಹೀಗೆಂದನು: ೬೫. "ನಿಲ್ಲಿಸು, ನಿಲ್ಲಿಸು ಚಕ್ರವನ್ನು! ಬಿಡಬೇಡ ಬಿಡಬೇಡ ಬಲಿಪುತ್ರನ ಮೇಲೆ! ಬಿಡು, ನಿವಾರಿಸು! ಪದ್ಮನಾಭಾ! ನನ್ನ ಮಾತನ್ನು ಮನ್ನಿಸು, ನನಗೆ ಈ ಬಾಣನು, ಷಣ್ಮುಖನಿಗಿಂತಲೂ ಹೆಚ್ಚು. ೬೬. ನಾವಿಬ್ಬರೂ, ಬೇರೆ ಬೇರೆ ಎಂಬ ಭಾವವು ನಮಗಿಲ್ಲ. ನಾನೂ ನೀನೂ ಇಬ್ಬರೂ ಇದನ್ನು ತಿಳಿದವರೇ, ಈ ಮಾತು ನಿಶ್ಚಯ. ಹೇಗೆಂದರೆ ಮೊದಲು ಏಕಮೂರ್ತಿಯೇ ಪ್ರಸಿದ್ಧವಾಗಿದ್ದಿತು. ಆ ಏಕಮೂರ್ತಿಯೆ ಬಳಿಕ ಮೂರ್ತಿತ್ರಯವಾಯಿತು. ಅಲ್ಲದೆಯೂ ಆ ತ್ರಿಮೂರ್ತಿಗಳಲ್ಲಿ

---

೧. ನಿನ್ನಂತೆ ನೀನೇಕ (ಕ) ಸಾದ್ಯಂತನಿಂನೇಕ (ಖ)

ವ॥ ಎಂಬುದುಂ

ಪರಮೇಶ ಭಕ್ತಜನಶಂ
ಕರ ಶಂಕರ ನಿನ್ನ ಮಾತನಾಂ ಮನ್ನಿಸಿದೆಂ
ತ್ವರಿತಂ ಚಕ್ರಮನುಪಸಂ
ಹರಿಸಿದೆನೀ ಬಾಣದೈತ್ಯನಂ ರಕ್ಷಿಸಿದೆಂ ೬೭

ವ॥ ಎಂದು ಬಾಲೇಂದುಜೂಟನಂ ಕೈಟಭಾರಿ ಮನ್ನಿಸಿ ಬೀೞ್ಕೊಂಡು ನಿಲೆ ಬಾಣಂ ಮಹಾಕಾಳನಾಮದಿಂ [೧]ಪ್ರಮಥ ಸಾರೂಪ್ಯಪದವಿಯಂ ಪಡೆದು ಮೃಡನೊಡನೆ ಕೈಲಾಸಕ್ಕೆ ಪೋಗಿತ್ತಲ್

ಕಮಲೇಕ್ಷಣಕಾಂತಿಗಳೆನೆ
ಕಮಲೇಕ್ಷಣನುರದೊಳಮಲಹಾರಂ ಪೊಳೆಯಲ್
ಸಮರಾವನಿಯಿಂ ತಳರ್ದಂ
ಸಮರಾವನಿಯುಕ್ತಮೆಸೆಯೆ ಸುರಪಟಹಚಯಂ ೬೮

ವ॥ ಅಂತು ಬಂದು ಬಾಣಾಸುರನ ಪೊೞಲಂ ಪೊಕ್ಕಲ್ಲಿ

ಬಲಭದ್ರಾಚ್ಯುತರೊಲವಿಂ
ಬಲಭದ್ರಾಚ್ಯುತಶರೀರಿಯಾಗೆಂದಾಶೀಃ
[೨]ಕುಲದಿಂ ನೆಗೞ್ದಿದರ್ ನಿಜ
ಕುಲಮಂಡನನಂ ಬಲೀಂದ್ರತನುಜಾಪ್ರಿಯನಂ ೬೯

ಸತ್ತ್ವಮೂರ್ತಿಯೇ ನೀನು. ರಕ್ಷಣಕಾರ್ಯ ನಿನ್ನದು, ಆದುದರಿಂದ ಈ ಬಾಣನನ್ನು ರಕ್ಷಿಸು." ವ॥ ಎಂದನು. ೬೭. ಕೃಷ್ಣನು-'ಪರಮೇಶ, ಭಕ್ತಜನಸುಖಕರ, ಶಂಕರ, ನಿನ್ನ ಮಾತನ್ನು ನಾನು ಮನ್ನಿಸಿದೆನು. ತಟ್ಟನೆ ಚಕ್ರವನ್ನು ಉಪಸಂಹರಿಸಿದೆನು. ಈ ಬಾಣಾಸುರನನ್ನು ರಕ್ಷಿಸಿದೆನು.' ವ॥ ಎಂದು ಬಾಲೇಂದುಶೇಖರನನ್ನು ಮನ್ನಿಸಿ ಬೀಳ್ಕೊಂಡನು. ಬಾಣನು ಮಹಾಕಾಳನೆಂಬ ಹೆಸರಿನಿಂದ ಪ್ರಮಥ ಸಾರೂಪ್ಯ ಪದವಿಯನ್ನು ಪಡೆದು ಈಶ್ವರನೊಡನೆ ಕೈಲಾಸಕ್ಕೆ ಹೋದನು. ಇತ್ತ ಕಡೆ ೬೮. ಲಕ್ಷ್ಮಿಯ ನೇತ್ರಗಳ ಕಾಂತಿಯೆನ್ನುವಂತೆ ಕಮಲನೇತ್ರ ಕೃಷ್ಣನ ಎದೆಯಲ್ಲಿ ನಿರ್ಮಲವಾದ ಹಾರವು ಹೊಳೆಯುತ್ತಿದ್ದಿತು. ಯುದ್ಧರಂಗಕ್ಕೆ ಉಚಿತವಾದ ದೇವಪಟಹ ಧ್ವನಿಯಾಗುತ್ತಿರುವಲ್ಲಿ ಕೃಷ್ಣನು ಯುದ್ಧರಂಗದಿಂದ ಹೊರಟು ನಡೆದನು. ವ॥ ಹಾಗೆ ಬಂದು ಬಾಣಾಸುರನ ಪಟ್ಟಣವನ್ನು ಪ್ರವೇಶಿಸಿದಾಗ ೬೯. ಬಲರಾಮ ಕೃಷ್ಣರು, ತಮ್ಮ ಕುಲಭೂಷಣನೂ ಬಲಿತನುಜೆಯಾದ ಉಷೆಯ ಪ್ರಿಯನೂ ಆದ ಅನಿರುದ್ಧನನ್ನು ಭದ್ರವಾದ ಮತ್ತು ಚ್ಯುತಿಯಿಲ್ಲದ ದೇಹವುಳ್ಳವನಾಗು ಎಂದು ಆಶೀರ್ವದಿಸಿ, ಅನುಗ್ರಹಿಸಿದರು.

---

೧. ಪ್ರಮಥನಾಗಿ ಸಾರೂಪ್ಯ ಪದವಿಯಂ (ಕ) ೨. ಕುಲಮಂ ನೆಗೞೆವಿರಾಜಿಪ (ಕ)

ವಿನತಾತ್ಮಜನಂ ಕಂಡಂ
ವಿನತಾತ್ಮಜನಿಂದೆ ನಾಗಪಾಶಂ ಬಿಡುತಂ
ದನಿರುದ್ಧನಾಗಿ [1]ಮುಂದಿ
ರ್ದನಿರುದ್ಧನನಾಗಳಕ್ಕಜಿಂ ಪ್ರದ್ಯುಮ್ನಂ ೭೦

ಪ್ರವೃದ್ಧ ಪಟಹಸ್ವನಂ ಮಧುರಗೀತನಾದಂ ಸುವಿ
ಪ್ರವೃದ್ಧ ಜನಮಂಗಳೋಕ್ತಿ ನೆಗಳ್ವಿಂತು ಕುಂಭಾಂಡನಿಂ
ವಿವಾಹಮುಷೆಗಂ ಝಷಧ್ವಜಸುತಂಗವಂದಪ್ಪುದುಂ
ವಿವಾಹನಸುರಾಂತಕಂ ತಳರ್ದನಾ ಪುರೋದ್ದೇಶದಿಂ ೭೧

ದ್ವಾರವತೀಪುರಕ್ಕನತಿದೂರದ ನಂದನದಲ್ಲಿ ನಿಂದು ದೈ
ತ್ಯಾರಿ ವಿಭೂತಿಯಿಂದೆ ಮದುವಕ್ಕಳನಿಂದಿದಿರ್ಗೊಳ್ವುದೆಂದು ನೀಂ
ಪೌರಜನಕ್ಕೆ ಪೋಗಿ ಮಕರಧ್ವಜ ಪೇಳೆನೆ ಬಂದು ಕಂಡನಾ
ದ್ವಾರಕಿಯಲ್ಲಿ ಮುತ್ತಿಜಿದು ಕಾದುವ ಸಾಲ್ವನನಾ ಝಷಧ್ವಜಂ ೭೨

ಯದುಸೈನ್ಯಾರಾತಿಸೈನ್ಯಾಹವ ಕಳಕಳವಂ ಮೀಱುವಾತ್ಮೀಯ ಕೋದಂ
ಡದ ಮೌರ್ವೀನಾದದಿಂ ಸಾಲ್ವನನಭಿಮುಖನಂ ಮಾಡಿ ಸಂರಂಭಣಂ ದೋ
ರ್ಮದವಸ್ತ್ರಪ್ರೌಢಿ ತಮ್ಮೊಳ್ ಸರಿದೊರೆ ಸಮನೆಂಬನ್ನೆಗಂ ಧರ್ಮಮಾಯಾ
ಕದನವ್ಯಾಪಾರದಿಂ ಶಂಬರರಿಪು ಪೊಣರ್ದಾ ಸಾಲ್ವನೊಳ್ [2]ಬೇಸೆಗೆಟ್ಟಂ ೭೩

೭೦. ಮನ್ಮಥನು ವಿನತೆಯ ಪುತ್ರ ಗರುಡನನ್ನು ಕಂಡನು. ಆ ಗರುಡನಿಂದ ನಾಗಪಾಶವಿಮೋಚಿತನಾಗಿ ಬಂಧನರಹಿತನಾಗಿ ವಿನೀತನಾಗಿ ಮುಂದೆ ಬಂದು ನಿಂತ ಅನಿರುದ್ಧನನ್ನು ಅಕ್ಕರೆಯಿಂದ ನೋಡಿದನು. ೭೧. ಬಲವಾದ ಪಟಹ ವಾದ್ಯಧ್ವನಿಯೂ ಮಧುರವಾದ ಸಂಗೀತನಾದವೂ ಸದ್ ಬ್ರಾಹ್ಮಣ ವೃದ್ಧ ಸಮೂಹದ ಆಶೀರ್ವಾದ ಮಂಗಳವಚನವೂ ಆಗುತ್ತಿರುವಲ್ಲಿ (ಬಾಣಾಸುರನ ಮಂತ್ರಿಯೂ ಸಾರಥಿಯೂ ಆದ) ಕುಂಭಾಂಡನು ನಿರ್ಣಯಿಸಿದಂತೆ ಉಷೆಗೂ ಅನಿರುದ್ಧನಿಗೂ ವಿವಾಹಮಂಗಳವು ನೆರವೇರಿತು. ಆಮೇಲೆ ಕೃಷ್ಣನು ವಿಶೇಷ ವಾಹನಗಳೊಡನೆ ಆ ಪಟ್ಟಣದಿಂದ ಹೊರಟು ನಡೆದನು. ೭೨. ದ್ವಾರವತೀಪುರಕ್ಕೆ ಸ್ವಲ್ಪ ದೂರದಲ್ಲೇ ಇದ್ದ ನಂದನವನದಲ್ಲಿ ನಿಂತು, ಕೃಷ್ಣನು-"ಮನ್ಮಥಾ, ನೀನು ಹೋಗಿ ಪುರಜನರಿಗೆ-ನೀವು ಇಂದು ಮದುಮಕ್ಕಳನ್ನು ವೈಭವದಿಂದ ಇದಿರುಗೊಳ್ಳಬೇಕು ಎಂದು ಹೇಳು ಎಂದನು. ಆಗಲಿ ಎಂದು ಅವನು ದ್ವಾರಕಿಗೆ ಬಂದನು. ಆ ವೇಳೆಗೇ ಬಂದು ಸಾಲ್ವರಾಜನು ಪಟ್ಟಣವನ್ನು ಮುತ್ತಿರುವುದನ್ನು ಕಂಡನು. ೭೩. ಮನ್ಮಥನು ಯದು ಶತ್ರುಸೇನೆಗಳ ಯುದ್ಧದ ಕೋಲಾಹಲವನ್ನು ಮೀರುವ ತನ್ನ ಬಿಲ್ಲಿನ ಹೆದೆಯ ಟಂಕಾರದಿಂದ ಸಾಲ್ವನನ್ನು ಎದುರಿಸಿ, ಸಡಗರವೂ ಬಾಹುಮದವೂ ಅಸ್ತ್ರಪ್ರೌಢಿಮೆಯೂ ತಮ್ಮಿಬ್ಬರಲ್ಲೂ ಸಮವಾಗಿದೆ ಎನ್ನುವಂತಿರಲು ಸಾಲ್ವನೊಡನೆ

೧. ಬಂದಿರ್ದನಿರುದ್ಧನ (ಖ) ೨. ಸೇದೆವಿಟ್ಟಂ (ಖ)

ವ|| ಆ ವೃತ್ತಾಂತಮನಱಿದುಗ್ರಸೇನನಟ್ಟಿದುದ್ಧವಂ ದ್ವಿತ್ರಿಯೋಜನಾಂತರದೊಳಿರ್ದ ಜನಾರ್ದನನಲ್ಲಿಗೆ ಬರ್ಪುದುಂ

ಉದ್ಧತರಿಪುಕೃತಭಂಗಮ
ನುದ್ಧವನಿಂಗಿತದಿನಱಿದುಮಱಿಯದ ತೆಱದಿಂ
ದುದ್ಭೂತಭ್ರುಕುಟಿಯಿನಂ
ದುದ್ಧುರತೇಜಂ ಮುರಾರಿ ಬೆಸಗೊಳಲಾಗಳ್ ೭೪

ನೀರದಪಥದಿಂ ಭೋಂಕನೆ
ನಾರದನಿಟೆತಂದು ತಾನೆ ಶೌರಿಗೆ ಪೇಟ್ದಂ
ವೈರಿಯ ಶೌರ್ಯಕಥಾರ್ಣವ
ಪೂರದ ಫೇನಾಂಶುವೆನಿಸೆ ರದನದ್ಯುತಿಗಳ್ ೭೫

ಆಳವಿಂದಂ ರಾವಣಂಗಂ ಪಿರಿಯರರಿಯರಾಗಿರ್ದಸಂಖ್ಯಾತರಕ್ಷಃ
ಖಳರಂ ಕೊಂದಿಕ್ಕಿ ವಿಕ್ರಾಂತದ ಪರಿಣತಿಯಂ ತಾಳ್ದಿದಂ ಕೃಷ್ಣನಿನ್ನೆ
ನ್ನೊಳಿದಿರ್ಚಲ್ ಯೋಗ್ಯನೆಂದದ್ಭುತಸಮರರಸಂ ಸಾಳ್ವನೆಟ್ಟಿಂದು [1]ಚಾತು
ರ್ವಲರುದ್ಧದ್ವಾರಕಂ ಶಂಬರಮಥನನುಮಂ ಗೆಲ್ದು ಮೆಯ್ವೆರ್ಚುತಿರ್ದಂ ೭೬

ಕುಲಧಾತ್ರೀಧರದೊಳ್ ಸುಮೇರು ಕಡಲೊಳ್ ದುಗ್ಧಾಬ್ಧಿ ಪದ್ಮಾಕರಾ
ವಳಿಯೊಳ್ ಮಾನಸವಷ್ಟದಿಕ್ಕರಿಗಳೊಳ್ ಶಕ್ರದ್ವಿಪಂ ರತ್ನಸಂ
ಕುಳದೊಳ್ ಕೌಸ್ತುಭಮಬ್ಜಜಾದ್ಯಮರರೊಳ್ ನೀಂ ದೇವ [2]ಪೆಂಪಿಂದಮ
ಗ್ಗಳನೆಂತಂತಸುರೇಂದ್ರರೊಳ್ ಮಿಗಿಲಿವಂ ಸಾಳ್ವಂ ಬಲಾಟೋಪದಿಂ ೭೭

ಧರ್ಮಯುದ್ಧ ಮಾಯಾಯುದ್ಧಕಾರ್ಯಗಳಿಂದ ಹೋರಾಡಿ ಸಾಳ್ವನಿಂದ ಸೋತನು. ವ|| ಆ ವೃತ್ತಾಂತವನ್ನು ತಿಳಿದ ಉಗ್ರಸೇನನು ಕಳುಹಿಸಿದ ಉದ್ಧವನು ಎರಡು ಮೂರು ಯೋಜನ ದೂರದಲ್ಲಿದ್ದ ಕೃಷ್ಣನ ಹತ್ತಿರಕ್ಕೆ ಬಂದನು. ೭೪. ಉದ್ಧವನ ಮುಖೇಂಗಿತದಿಂದಲೇ ಕೊಬ್ಬಿದ ಶತ್ರುವಿನಿಂದಾಗಿರುವ ಭಂಗವನ್ನು ತಿಳಿದ ಕೃಷ್ಣನು ತಿಳಿದರೂ ತಿಳಿಯದವನಂತೆ ಹುಬ್ಬುಗಂಟಿಕ್ಕಿಕೊಂಡು, ಉದ್ಧವನನ್ನು ಕೇಳಿದನು. ೭೫. ಆ ವೇಳೆಗೆ ಸರಿಯಾಗಿ ನಾರದಮುನಿಯು ತಟ್ಟನೆ ಆಕಾಶಮಾರ್ಗದಿಂದ ಬಂದಿಳಿದು, ತನ್ನ ಹಲ್ಲಿನ ಕಾಂತಿಯು ಶತ್ರು ಸಾಳ್ವನ ಕಥಾಸಾಗರದ ನೊರೆಯಂತೆ ಕಾಣಿಸುತ್ತಿರುವಲ್ಲಿ ತಾನೇ ಸಾಳ್ವನ ಕಥೆಯನ್ನು ಹೇಳಿದನು ೭೬. "ದೇವ, ಶಕ್ತಿಸಾಮರ್ಥ್ಯಗಳಲ್ಲಿ ರಾವಣನಿಗಿಂತ ಹಿರಿಯರಾದ ಅಸಂಖ್ಯಾತ ನೀಚರಾಕ್ಷಸರನ್ನು ಕೊಂದುಹಾಕಿ ಪರಾಕ್ರಮದ ಪ್ರೌಢಿಮೆಯನ್ನು ಪಡೆದಿರುವ ಕೃಷ್ಣನು ಇನ್ನು ನನ್ನನ್ನು ಎದುರಿಸಲು ಯೋಗ್ಯನೆಂದು, ಅದ್ಭುತಯುದ್ಧರಸವುಳ್ಳ ಸಾಳ್ವನು ಬಂದು, ಚತುರಂಗಸೈನ್ಯದಿಂದ ದ್ವಾರಕಿಯನ್ನು ಮುತ್ತಿ, ಮನ್ಮಥನನ್ನೂ ಗೆದ್ದು ದರ್ಪದಿಂದ ಉಬ್ಬುತ್ತಿರುವನು. ೭೭. ಕುಲಪರ್ವತಗಳಲ್ಲಿ ಸುಮೇರುವೂ ಸಾಗರಗಳಲ್ಲಿ ಕ್ಷೀರಸಾಗರವೂ ಸರೋವರಗಳಲ್ಲಿ ಮಾನಸಸರೋವರವೂ ಅಷ್ಟ (ಎಂಟು) ದಿಗ್ಗಜಗಳಲ್ಲಿ

---

೧. ಚಾತುರ್ವಲಯಯುದ್ಧಾಧಾರಕಂ (ಕ) ೨. ಪೆಂಪಗ್ಗಳಂ ತಳೆದಂತಂದಸುರೇಂದ್ರರೊಳ್ (ಕ)

ಅಕ್ಕಟಿದಾವ ದೋರ್ವಲಮೊ ವೇದಮನುಯ್ದು ಪಯೋಧಿಮಧ್ಯಮಂ
ಪೊಕ್ಕು ಪರಾಭವಂ ನೆಗಟ್ದೆ ದಾನವವೈರಿಯ ದೀನಮೀನರೂ
ಪಕ್ಕೆಡೆಯಪ್ಪನೆಂದು ದನುಜೋತ್ತಮನಂ ತಮನಂ ತೃಣಕ್ಕಮೇಂ
ಲೆಕ್ಕಿಪನೇ ಪರಾಕ್ರಮವದಂತುಟು ದಾನವಚಕ್ರವರ್ತಿಯಾ ೭೮

ರಾಕ್ಷಸವಂಶಮಂ ಪರಿಭವಕ್ಕೆಡೆಮಾಡಿದನೇನನೆಂಬೆನ
ಬ್ಜಾಕ್ಷನ ಮಾಯೆಯಿಂದೊಗೆದ ಪಂದಿಯ ಕೋಡೊಳೆ[1]ತೋಲ ಪಾಪೆಯಂ
ತಕ್ಷಮನಾಗಿ ನೇಲ್ದನವನೆಂದು ಪುರಂದರರೂಕ್ಷನಂ ಹಿರ
ಣ್ಯಾಕ್ಷನುಮಂ ತಿರಸ್ಕರಿಸುತಿರ್ಪನೆ ದರ್ಪದೆ ಸೌಭವಲ್ಲಭಂ ೭೯

ಪಗಲಿರುಳಗ್ನಿಯಿಂ ಜಲದಿನಾಯುಧದಿಂ ಸುರರಿಂ ಮನುಷ್ಯರಿಂ
ಗಗನದೊಳುರ್ವಿಯೊಳ್ [2]ಮರಣವೆಯ್ದದನುಂ ನರಸಿಂಹನೆಂಬನೊಂ
ದುಗುರ್ಗೊನೆಯಿಂದೆ [3]ಸೀಳ್ದು ಲಯಮೆಯ್ದಿದನೆಂದು ದಿಟಕ್ಕೆ ಸಿಗ್ಗುವಂ
ಬಗೆದಪನೇ ಹಿರಣ್ಯಕಶಿಪುಪ್ರಭುವಂ ದನುಜಾಧಿನಾಯಕಂ ೮೦

ಇಂದ್ರನ ಐರಾವತವೂ ರತ್ನಗಳ ಸಮೂಹದಲ್ಲಿ ಕೌಸ್ತುಭರತ್ನವೂ ಬ್ರಹ್ಮಾದಿ ದೇವ ಸಮೂಹದಲ್ಲಿ ನೀನೂ ಮಹಿಮೆಯಿಂದ ಹೇಗೆ ಶ್ರೇಷ್ಠರೋ ಹಾಗೆಯೇ ರಾಕ್ಷಸೇಂದ್ರರಲ್ಲಿ ಬಲಾಟೋಪದಲ್ಲಿ ಈ ಸಾಲ್ವನು ಶ್ರೇಷ್ಠನು, ೭೮. "ಅಕ್ಕಟಾ, ಇದಾವ ತೋಳ್ಬಲವೋ! ವೇದವನ್ನು ಎತ್ತಿಕೊಂಡು ಹೋಗಿ, ಸಮುದ್ರಮಧ್ಯದಲ್ಲಿ ಹೊಕ್ಕು ನಿನ್ನಿಂದ ಪರಾಭವ (ಅಪಜಯ)ವನ್ನು ಪಡೆದ ರಾಕ್ಷಸೋತ್ತಮನಾದ ತಮೋಸುರನನ್ನು, ರಾಕ್ಷಸದ್ವೇಷಿಯಾದ ವಿಷ್ಣುವಿನ, ದೀನವಾದ ಮೀನಿನ ರೂಪಕ್ಕೆ ಎದುರಾಗಿ ಸೋತನೆಂದು ಹುಲ್ಲಿಗಿಂತಲೂ ಕಡೆಯಾಗಿ ಸಾಲ್ವನು ಕಾಣುವನು. ಸಾಲ್ವಚಕ್ರವರ್ತಿಯ ಪರಾಕ್ರಮವು ಅಷ್ಟು ಮಟ್ಟಿನದು. ೭೯. "ಏನು ಹೇಳಲಿ; ಹಿರಣ್ಯಾಕ್ಷನು ರಾಕ್ಷಸವಂಶವನ್ನೇ ಅವಮಾನಕ್ಕೆ ಗುರಿಮಾಡಿದನು. ವಿಷ್ಣುವಿನ ಮಾಯೆಯಿಂದ ಉದಿಸಿದ ಹಂದಿಯ ಕೋರೆ ಹಲ್ಲಿನಿಂದ ತೊಗಲಿನ ಬೊಂಬೆ ಯಂತೆ ಅಶಕ್ತನಾಗಿ ದೇಹವನ್ನು ಸೀಳಿಸಿಕೊಂಡನು ಎಂದು ಇಂದ್ರನಿಗೂ ಭಯಂಕರನಾಗಿದ್ದ ಹಿರಣ್ಯಾಕ್ಷನನ್ನು ತಿರಸ್ಕರಿಸುತ್ತಿರುವನಲ್ಲಾ! ೮೦. "ಹಿರಣ್ಯಕಶಿಪುವು ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ ಜಲದಿಂದಾಗಲಿ ಆಯುಧದಿಂದಾಗಲಿ ದೇವತೆಗಳಿಂದಾಗಲಿ ಮನುಷ್ಯ ರಿಂದಾಗಲಿ ಗಗನದಲ್ಲಾಗಲಿ ಭೂಮಿಯಲ್ಲಾಗಲಿ ಮರಣವನ್ನು ಪಡೆಯದವನಾಗಿದ್ದೂ ನರಸಿಂಹನೆಂಬುವನ ಉಗುರಿನ ತುದಿಯಿಂದ ಹೊಟ್ಟೆಯನ್ನು ಸೀಳಿಸಿಕೊಂಡು ಸತ್ತನು" ಎಂದು ಆ ಹಿರಣ್ಯಕಶಿಪುವನ್ನು ರಾಕ್ಷಸನಾಯಕನಾದ ಸಾಲ್ವನು, ನಾಚಿಕೆಗೆಟ್ಟವನೆಂದು

---

೧. ಕೋಲಪಾಪೆಯಂತಕ್ಷಮನಾಗಿ ಗೆಲ್ದನವನೆಂದು (ಕ) ೨. ಮರಣವೆಯ್ದದನಂ (ಕಖ) ೩. ಸೀಳ್ದು ಲಯಮೆಯ್ದಿದನೆಂದು ದಿಟಕ್ಕೆ ಸಿಗ್ಗನೇಂ (ಕ) ಸೀಳ್ದ ತೆಱದಿಂ ಲಯಮೆಯ್ದುಪನೆಂದು ಸಿಗ್ಗಿನಿಂ (ಖ)

ಪಾಲಿಸಿದಂ ಗಡಂ ತ್ರಿಭುವನಂಗಳನೊಟ್ಟಱೆಯಿಂ ಸಮಸ್ತದಿ
ಕ್ಪಾಲರನಂಜಿಪಂ ಗಡದನಾನಱಿಯೆಂ ತುಷತೂಳಜಾಲದಿಂ
ದೇಳಿದವಪ್ಪ ವಾಮನನ ಕೈಯೊಳಗುರ್ವಿಸೆ ಕಟ್ಟುವೆತ್ತು ಪಾ
ತಾಳದೊಳಿರ್ಪನೆಂದು ಪೞಿವಂ ಬಲಿಯಂ ಬಲಿದರ್ಪಭಂಜನಂ ೮೧

ಗಂಡಿನ ಮಾತುಗಳ್ ಪಿರಿಯವಲ್ಲದೆ ಮಾಡಿದ ಸಾಸಮುಂಟೆ ದೋ
ರ್ದಂಡ [1]ಸಹಸ್ರಮಂ ಮುನಿಕುಮಾರಕನಾತ್ಮಕುಠಾರದಿಂ ಸಮಿ
ತ್ಕಾಂಡಮನಟ್ಟಿಯಿಂ ತಱಿವವೋಲ್ ತಱಿದೊಟ್ಟನೆ ತನ್ನ ತೋಳ್ಗಳೇ
ಭಂಡಮೆನುತ್ತೆ ಮಾಂಕರಿಪನಗ್ಗದ ಹೈಹಯನಂ ಸುರದ್ವಿಷಂ ೮೨

ಅವನಿಪಬಾಹುಪೀಠಜಯ[2]ಲಕ್ಷ್ಮಿಯನೀೞ್ದೞಿತಾರದಂತವೇ
ವುವೊ ಬೆಳೆದಾಲಬೀೞಲೊದವಲ್ಲದೆ ತೋಳ್ಗಳೆ ಬೀೞಲೊರ್ಬ ಮಾ
ನವನ ಸರಳ್ಗಳಿಂ ಪಱಿವುವೇವುವೊ ಪೇೞ್ ಸೋರೆಗಾಯ ಬಂಬಲ
ಲ್ಲವೆ ತಲೆಪತ್ತೆನುತ್ತೆ ದಶಕಂಠನನಂಡಲೆವಂ ನಿಶಾಚರಂ ೮೩

ಭಾವಿಸಿರುವನು! ೮೧. ಬಲಶಾಲಿಗಳ ದರ್ಪವನ್ನು ಭಂಜಿಸಿದ ಆ ಸಾಲ್ವನು- "ಬಲಿಚಕ್ರವರ್ತಿಯು, ಮೂರು ಲೋಕವನ್ನೂ ಪಾಲಿಸಿದನಲ್ಲವೇ? ಸಮಸ್ತ ದಿಕ್ಪಾಲಕರನ್ನೂ ಒಟ್ಟಿಗೆ ಅಂಜಿಸಿದನಲ್ಲವೆ? ಅದೊಂದನ್ನೂ ನಾನು ಅರಿಯೆನು. ಹತ್ತಿ ಹೊಟ್ಟುಗಳ ರಾಶಿಗಿಂತಲೂ ಹೀನವಾದ ವಾಮನನ ಕೈಯ್ಯಿಂದ ಭಯಂಕರವಾದ ರೀತಿಯಲ್ಲಿ ಕಟ್ಟಿಸಿಕೊಂಡು ಪಾತಾಳದಲ್ಲಿ ಇರುವನೆಂದು ಆ ಬಲಿಯನ್ನೂ ಹಳಿಯುವನು! ೮೨. ಪೌರುಷದ ಮಾತುಗಳು ದೊಡ್ಡವಾದುವೇ ಹೊರತು ಮಾಡಿದ ಸಾಹಸವೇನಾದರೂ ಉಂಟೇ?! ಮುನಿಕುಮಾರ ಪರಶುರಾಮನು ಆ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನೂ ತನ್ನ ಕೊಡಲಿಯಿಂದ ಸಮಿತ್ತುಗಳನ್ನು ಸುಲಭವಾಗಿ ಕತ್ತರಿಸುವಂತೆ ಕತ್ತರಿಸಿ ಒಟ್ಟಿದನಲ್ಲಾ. ಅವನ ತೋಳುಗಳಿಂದ ಏನು ಪ್ರಯೋಜನ! ಅವಕ್ಕೆ ಲೆಕ್ಕವೇ ಇಲ್ಲವಲ್ಲಾ!" ಎಂದು ಸಾಲ್ವನು ಹೇಹಯನ ಮಗನಾದ ಆ ಕಾರ್ತವೀರ್ಯನನ್ನು ಮಾಕರಿಸುವನು. ೮೩. "ಭೂಪಾಲರ ಬಾಹುಪೀಠದಲ್ಲಿರುವ ಜಯಲಕ್ಷ್ಮಿಯನ್ನು ವಶಪಡಿಸಿಕೊಂಡು ಎಳೆದು ತಾರದ ತೋಳುಗಳು ತೋಳುಗಳೇ? ಅವುಗಳಿಂದೇನು? ಅವು ಆಲದ ಮರದಲ್ಲಿ ಬೆಳೆದ ಬಿಳಲುಗಳಲ್ಲವೇ? ಒಬ್ಬ ಮನುಷ್ಯನ ಬಾಣಗಳಿಂದ ಕತ್ತರಿಸಲ್ಪಡುವವು ಏನು ಮಾಡಬಲ್ಲವು? ಅಲ್ಲದೆ ಒಬ್ಬನ ಬಾಣಗಳಿಂದ ಕಡಿಯಲ್ಪಟ್ಟ ರಾವಣನ ಹತ್ತುತಲೆಗಳು ಸೋರೆಕಾಯಿಗಳ ಗುಂಪಲ್ಲದೆ ನಿಜವಾದ ತಲೆಗಳೆ! ಎಂದು ದಶಕಂಠರಾವಣನನ್ನು ಆ ಸಾಲ್ವನು ಅಂಡಲೆಯುವನು.

---

೧. ಸಹಸ್ರದಿಂ ಮುನಿಕುಮಾರಕನಾತ್ಮಕುಠಾರದಿಂ (ಕ) ೨. ಲಕ್ಷ್ಮಿಯನೀಳ್ದೆಳೆವಾಗಳಂತವೇವುವೊ (ಖ)

ಇಳೆ ನಗುವಂತು ಬಾರದ ಭವಂಗಳುಮಂ ನೆಱೆ ಬಂದು ಗೋ
ವಳಿಗರ ಪಳ್ಳಿಯೊಳ್ ನೆಲಸಿದಾ ದನಗಾಹಿಯೆನಿಪ್ಪ ಕೃಷ್ಣನೇಂ
ತಳಿಗೆಯೊಳಿಟ್ಟು [೧]ಸಂಹರಿಸನೇ ಕಲಹಂಬರಮುಂಟೆ ತನ್ನ ದೋ
ರ್ಬಳದ ಪೊಡರ್ಪಿನುತ್ತೆ ಶಿಶುಪಾಲನನೇಳಿಸುವಂ ವೃಕಧ್ವಜಂ ೮೪

ಅತಿಭರದಿನವನಿ ಪಾತಾ
ಳತಳಕ್ಕಿೞಿದಪ್ಪುದೆಂದು [೨]ನೋೞ್ಪರ್ಗತಿವಿ
ಸ್ಮಿತವೆನಿಪ ಸೌಭಪುರದೊಳ್
ಚತುರ್ವಲಂ ಬರೆ ಸುರಾರಿ ಕಾದಲ್ ಬಂದಂ ೮೫

ಸುರಮಾರ್ಗಪರಿಭ್ರಮಣದಿ
ನರಿದೆನಿಕುಂ ತ್ರಿಪುರಮನಿತೆ ಬಹುರೂಪಗತಿ
ಸ್ಫುರಿತಂಸೌಭಪುರಂ ತ
ತ್ತುರವಾಹನನಾಗಿ ಕಾದೆ [೩]ಸಾಲ್ವನಜಯ್ಯಂ ೮೬

ವ॥ ಎಂದು ಸೌಭವಲ್ಲಭನಾಡಂಬರಮನಂಬುರುಹಗರ್ಭತನಯಂ ಪೇೞ್ದುಪೋಗೆ ಬಲ ಸಮೇತಮುದ್ಧವನೊಳ್ ಕಾರ್ಯಪರ್ಯಾಲೋಚನದಿಂ ಕಿೞಿದು ಬೇಗಮಿರ್ದು

೮೪. ಪ್ರಪಂಚವೇ ನಗುವಂತೆ ಬರಬಾರದ ಜನ್ಮಗಳಲ್ಲಿ ಬಂದುದಲ್ಲದೆ ಗೊಲ್ಲರ ಹಳ್ಳಿಯಲ್ಲಿ ನೆಲೆಸಿದ ದನಕಾಯುವವನು ಎನಿಸಿಕೊಂಡ ಕೃಷ್ಣನು ಪೂಜೆಯ ತಟ್ಟೆಯಿಂದ ಹೊಡೆದು ಕೊಲ್ಲಲಿಲ್ಲವೇ ಆ ಶಿಶುಪಾಲನನ್ನು! ಅವನೊಡನೆ ಯುದ್ಧದ ಆರಂಭವಾದರೂ ಆಯಿತೆ! ಅವನ ಪರಾಕ್ರಮದಿಂದ, ಎಂದು ವೃಕಧ್ವಜನಾದ ಸಾಲ್ವನು ಶಿಶುಪಾಲನನ್ನೂ ತಿರಸ್ಕರಿಸುವನು". ೮೫. ಅತಿಭಾರದಿಂದ ಭೂಮಿ ಪಾತಾಳಕ್ಕೆ ಇಳಿಯುತ್ತದೆ ಎಂದು ನೋಡುವವರಿಗೆ ಅತ್ಯಾಶ್ಚರ್ಯವೆನ್ನಿಸುವ ಸೌಭಪುರವನ್ನೇರಿದ ಚತುರ್ಬಲವೂ (ಆಕಾಶಮಾರ್ಗದಲ್ಲಿ) ಬಂದಿದೆ. ಅದರೊಡನೆ ದೇವವೈರಿ ಸಾಲ್ವನು ಕಾದಲು ಬಂದಿರುವನು ೮೬. ಆಕಾಶದಲ್ಲಿ ಸುತ್ತಾಡುವುದರಿಂದ ತ್ರಿಪುರದಲ್ಲಿ ಅಸಾಧ್ಯವಾದುದಾಗಿದ್ದಿತು. ನಾನಾವಿಧ ಗಮನದಿಂದ ಹಾರುವ ಸೌಭಪುರವೂ ತ್ರಿಪುರದಂತೆಯೇ ಇರುವುದು. ಆ ಪುರವನ್ನೇ ವಾಹನವಾಗಿ ಮಾಡಿಕೊಂಡು ಕಾದುವ ಸಾಲ್ವನು, ಅಜೇಯನು ವ॥ ಎಂದು ಸೌಭಪತಿಯ ಆಡಂಬರವನ್ನು ಬ್ರಹ್ಮಪುತ್ರನಾದ ನಾರದನು ಹೇಳಿ ಹೊರಟು ಹೋದನು. ಕೃಷ್ಣನು ಸೇನಾಸಮೇತನಾಗಿ ಅಲ್ಲೇ ಉದ್ಧವನೊಡನೆ ಕಾರ್ಯಪರ್ಯಾಲೋಚನೆಯಲ್ಲಿ

೧. ಸಂಹರಿಪನೇ (ಖ) ೨. ಕಾಮಗತಿವಿಸ್ಮೃತ ಮೇಘನಾದಪುರದಿಂ (ಖ)
೩. ಸಾಲನಜೇಯಂ

ಅರಿಯಂ ಕೊಲ್ವುದೆ ಕಜ್ಜಮೀ ಪದದೊಳೊಂದೀ ಯುದ್ಧವಂ ಯುದ್ಧವಂ
ಪರಮ[1]ಪ್ರೀತಿದವಂ ನೆಗಟ್ಚಿದನಿದಿರ್ಚಲ್ ಸಾಲ್ವನೊಳ್ ಸಾಲ್ವನೊಳ್
ಧುರಮಾದತ್ತೆನಗೆಂದು ಚಕ್ರರವಿರತ್ನಾಲೋಚನಂ ಲೋಚನಂ
ಮುರಿದುನ್ಮೀಲಿಸಿ ನೋಡಿದಂ [2]ದ್ಯುತಿವೃತಾಶಾಚಕ್ರಮಂ ಚಕ್ರಮಂ ೮೭

ವ॥ ಅನಂತರವಾ ಮುಹೂರ್ತಮೆ ವಿಜಯಕಾರಣಮುಹೂರ್ತಮಾಗೆ

ಗರುಡಾರೂಢನುಪೇಂದ್ರನೆಯ್ದಿ ಧನುವಂ ವಿಸ್ಫಾರಿತಂ ಮಾಡಿದಂ
ಪರಸೈನ್ಯಾಬ್ಧಿಯುಮಬ್ಧಿಯುಂ ಕದಡೆ ವಿದ್ವಿಡ್ಭಾಮಿನೀಗರ್ಭಮುಂ
ಧರಣೀಭೃತ್ಕುಲಕೂಟಮುಂ ಕಟಿಲೆ ದೈತ್ಯಾಧೀಶನುಂ ದಿಙ್ಮದ
ದ್ವಿರದವ್ರಾತಮುಮೆತ್ತಿಕಟ್ಟೆ ಮದಮಂ ಟಂಕಾರನಿರ್ಘೋಷದಿಂ ೮೮

[3]ಮೇಘಾಧ್ವಸ್ಥನಿಶಿಚರಬ
ಲೌಘದ ಭಟಕೋಟಿ ಕಱಿವ ಶಸ್ತ್ರಾಸ್ತ್ರ[4]ಚಯಂ
ಜ್ಯಾಘಾತಜಾತಪವನ
ವ್ಯಾಘಾತದೆ ಮಸುಳಲಸುರಹರನಿಸುತಿರ್ದಂ ೮೯

ಸ್ವಲ್ಪಕಾಲವಿದ್ದನು. ಅನಂತರ ೮೭. "ನನಗೆ ಪರಮಪ್ರೀತಿಯನ್ನುಂಟುಮಾಡುವ ಈ ಉದ್ಧವನು ಈ ಸಮಯದಲ್ಲಿ ಶತ್ರುವನ್ನು ಕೊಲ್ಲುವುದೇ ನಮ್ಮ ಕಾರ್ಯವೆಂದು ನಾನು ಎದುರಿಸಲು ತಕ್ಕವನಾದ ಸಾಲ್ವನ ಸಂಗಡ ನನಗೆ ಪ್ರೀತಿಕರವಾದ ಯುದ್ಧವನ್ನು ನಿಶ್ಚಯಿಸಿ ಹೇಳಿದ್ದಾನೆ. ಯುದ್ಧವಾಗುತ್ತದೆ." ಎಂದು ಕೃಷ್ಣನು ನಿಶ್ಚಯಿಸಿ ಸೂರ್ಯನಂತೆ ಹೊಳೆಯುವ ಶ್ರೇಷ್ಠವಾದ ಚಕ್ರವನ್ನು ಮನಸ್ಸಿಗೆ ತಂದುಕೊಂಡು, ತನ್ನ ಕಾಂತಿಯಿಂದ ದಿಙ್ಮಂಡಲವನ್ನು ಆವರಿಸಿರುವ ಚಕ್ರವನ್ನು ನೋಡಿದನು. ವ॥ ಅನಂತರ ಆ ಮುಹೂರ್ತವೇ ವಿಜಯಕ್ಕೆ ಕಾರಣವಾದ ಮುಹೂರ್ತವಾಗಲು ೮೮. ಕೃಷ್ಣನು ಗರುಡನನ್ನೇರಿ ಸಾಲ್ವನಿದ್ದೆಡೆಗೆ ಬಂದು, ಬಿಲ್ಲಿಗೆ ಹೆದೆಯೇರಿಸಿ, ಟಂಕಾರಧ್ವನಿಯಿಂದ ಶತ್ರುಸೇನಾಸಾಗರವೂ ಸಾಗರವೂ ಕದಡುವಂತೆ ಶತ್ರುವನಿತೆಯರ ಗರ್ಭವೂ ಪರ್ವತಗಳ ಶಿಖರಗಳೂ ಜಾರುವಂತೆ ದೈತ್ಯಾಧಿಪತಿಯೂ, ದಿಗ್ಗಜಗಳ ಸಮೂಹವೂ ಮದರಹಿತವಾಗುವಂತೆ ಚೆನ್ನಾಗಿ ಮಿಡಿದು ಜೇವೊಡೆದನು. ೮೯. ಮೇಘಮಾರ್ಗದಲ್ಲಿ ನಿಂತು ರಾಕ್ಷಸಸೇನೆಯ ಭಟಸಮೂಹವು ಸುರಿಸುವ ಶಸ್ತ್ರಾಸ್ತ್ರಗಳ ಸಮೂಹವು ತನ್ನ ಬಿಲ್ಲಿನ ಹೆದೆಯನ್ನು ಮಿಡಿಯುವುದರಿಂದ ಉದಿಸುವ ಗಾಳಿಯ ಹೊಡೆತದಿಂದಲೇ ಮಸುಳಿಸುವಂತೆ ಕೃಷ್ಣನು ಬಾಣಗಳನ್ನು ಹೊಡೆಯುತ್ತಿದ್ದನು.

---

೧. ಪ್ರೀತಿದವಂ ನೆಗಟ್ಚಿನಮಿದಿರ್ಚಲ್ ಸಾಲ್ವನೊಳ್ (ಕ) ೨. ದ್ಯುತಿಧೃತಾಶಾಚಕ್ರಮಂ (ಕ)
೩. ಮೇಘಾಧ್ವದೆ ಪರಬಲಶಬಲೌಘದ (ಕ) ೪. ಚಯವ್ಯಾಘಾತ ಜಾತಪವನಜ್ಯಾಘಾತದೆ (ಕ)

ಇದು ವಿಳಯಾಭ್ರಮಲ್ಲಿದು ನಿಶಾಚರನಾಕೃತಿ ಶಕ್ರಚಾಪವ
ಲ್ಲಿದು ಭುಜಕೃಷ್ಟಚಾಪಲತೆ ಪೆರ್ಮೊಟಿಗಲ್ಲಿದು ಗರ್ಜೆ ವೃಷ್ಟಿಯು
ಲ್ಲಿದು ಸರಿವಸ್ತ್ರಜಾಲವೆನಲರ್ಗಿಸುವಾಕೃತಿ ಪರ್ವುಗೊಂಡ ಬಿ
ಲ್ಲೊದವಿದ ಗರ್ಜಿತಂ ಸುರಿವ ಸಾಯಕವದ್ಭುತವಾಯ್ತು ಸಾಲ್ವನಾ ೯೦

ಮುನಿ ದೂಱೆ ಕೀಱೆ ಭರದಿಂ
ದನುಜೇಶ್ವರನಿಸುವ ಕೋಟಿಗಣಿತದ ಕಣೆಗಳ್
ಮೊನೆಯಿಂ ಪಿಳ್ಕುವರಂ ಸೌ
ವನೆ ಸೀಳ್ವಂತುರ್ಚಿಪೋದುವಚ್ಯುತನಿಷುಗಳ್ ೯೧

ಕದನಂ ಭೌಮನಿಕುಂಭಬಾಣದನುಜಪ್ರಖ್ಯಾತರಿಂದಾದ ಕಾ
ಲದೊಳೀ ಕೂರ್ಪು [1]ಮುರಾರಿಗಿಲ್ಲಱಿದೆವೀಗಳ್ ಶತ್ರುವೆಂತೆಂತು ಬ
ಲ್ಲಿದನಂತಂತೆ ಮುಕುಂದನೇಸು ಮಿಗಿಲೆಂದಿಂದ್ರಾದಿಗಳ್ ಕೀರ್ತಿಸಲ್
ಪುದಿದಂ ಸಾಲ್ವನನಸ್ತ್ರವಿದ್ಯೆಪರಮೆಂಬಂತಸ್ತ್ರದಿಂದಚ್ಯುತಂ ೯೨

ನಿಂದಿಸುವ ಗರುಡರಥನಂ
ನಿಂದಿಸುವಂದದೆ ವಿಚಿತ್ರತೂರ್ಯಂ ನಾನಾ
ಚ್ಛಂದದದೆ ಮೊಱಗೆ ಪುರಂ ಸ್ವ
ಚ್ಛಂದದದೆ [2]ಚರಿಯಿಸಿದುದಸುರನಿರೆ ದೆಸೆದೆಸೆಯೊಳ್ ೯೩

೯೦. ಆ ಸಾಲ್ವನ ಘನವಾದ, ಆಕಾರವೂ, ಅವನ ವಿಸ್ತಾರವಾದ ಬಿಲ್ಲೂ, ಗರ್ಜನೆಯೂ, ಸುರಿಸುವ ಬಾಣವೂ, (ಅನುಕ್ರಮವಾಗಿ) ಇದು ಪ್ರಳಯ ಕಾಲದ ಮೋಡವೇ! ಅಲ್ಲ, ನಿಶಾಚರನ ದೇಹ, ಇದು ಇಂದ್ರಚಾಪವೇ ಅಲ್ಲ ತೋಳಿನಿಂದ ಬಾಗಿಸಿದ ಬಿಲ್ಲು. ಇದು ಗುಡುಗೇ? ಅಲ್ಲ, ಗರ್ಜನೆ, ಇದೇನು ಮಳೆಯೆ? ಅಲ್ಲ ಕರೆಯುತ್ತಿರುವ ಶಸ್ತ್ರಾಸ್ತ್ರಗಳ ಸಮೂಹ ಎನ್ನುವಂತೆ ಅದ್ಭುತವಾಗಿದ್ದಿತು. ೯೧. ನಾರದಮುನಿ ದೂರಿದಂತೆಯೇ ಕೋಪಿಸಿ ಕೊಂಡು ಚೆನ್ನಾಗಿ ಊರಿ, ಚೀರಿ, ವೇಗದಿಂದ ಹೊಡೆಯುವ ಕೋಟಿ ಲೆಕ್ಕದ ಬಾಣಗಳನ್ನು ಕೃಷ್ಣನ ಬಾಣಗಳು ಮೊನೆಯಿಂದ ಪಿಳ್ಕಿನ (ಬಾಣದ ಹಿಡಿಯ ಹಿಂದಿನ ಕೊನೆಯ)ವರೆಗೂ ಸೌವ್ವೆಂದು ಶಬ್ದವಾಗುವಂತೆ ಸೀಳಿ ಆಚೆಗೆ ಹೋದುವು. ೯೨. ನರಕಾಸುರ ನಿಕುಂಭ ಬಾಣಾಸುರನೇ ಮೊದಲಾದ ಪ್ರಖ್ಯಾತರೊಡನೆ ಕದನವಾದಾಗ ಕೃಷ್ಣನಿಗೆ ಇಷ್ಟು ಕ್ರೌರ್ಯ ವಿರಲಿಲ್ಲ. ಈಗ ತಿಳಿದೆವು, ಶತ್ರುವು ಎಷ್ಟೆಷ್ಟು ಬಲಶಾಲಿಯೋ ಅಷ್ಟಷ್ಟೂ ಕೃಷ್ಣನ ಬಾಣದ ಹೊಡೆತವು ಹೆಚ್ಚಾಗುವುದು ಎಂದು ಇಂದ್ರನೇ ಮೊದಲಾದವರು ಕೀರ್ತಿಸುವಂತೆಯೂ ಕೃಷ್ಣನ ಅಸ್ತ್ರವಿದ್ಯೆಯು ಶ್ರೇಷ್ಠವೆಂದು ಹೊಗಳುವಂತೆಯೂ ಅಸ್ತ್ರಗಳಿಂದ, ಸಾಲ್ವನನ್ನು ಮುಚ್ಚಿದನು. ೯೩. ಒಂದೆಡೆ ನಿಂತು ಬಾಣಗಳನ್ನು ಹೊಡೆಯುವ ಕೃಷ್ಣನನ್ನು ನಿಂದಿಸುವಂತೆ ವಿಚಿತ್ರವಾದ ತೂರ್ಯವು ನಾನಾ ರೀತಿಯಲ್ಲಿ ನಾನಾ ರಾಗಗಳಲ್ಲಿ ಧ್ವನಿಮಾಡುತ್ತಿರುವಲ್ಲಿ ಸಾಲ್ವನ ಪುರವು ಅವನೊಡನೆಯೇ ಸ್ವೇಚ್ಛೆಯಿಂದ ದಿಕ್ಕುದಿಕ್ಕಿನಲ್ಲೂ ಸಂಚರಿಸಿತು.

---

೧. ಮುರಾರಿಗಿಲ್ಲರಿದೆ ದೈತೇಯೇಶನಂತಿರ್ಕೆ ಬಲ್ಲಿದನಂ ತುತ್ತೆ ಮುಕುಂದನೀಗ (ಕ)
೨. ಚರಿಯಿಸಿದುದಸುರನಿಸೆ ದೆಸೆದೆಸೆಯಂ (ಕ)

ಆನೀ ಮಾಯಾಪುರಕ್ಕೆಯ್ದಿತಿಜವದೆ ಸಮಂ ಬರ್ಪೆನೆಂದುಚ್ಚಲತ್ಸೇ
ನಾನೀಕಂ ಕ್ಷುಭ್ಯದಂಭೋನಿಧಿ ವಿಧುತಮಹೀಮಂಡಲಂ ಪಕ್ಷವಾತಂ
ಪೀನಂ ಮೆಯ್ವೆರ್ಚುವನ್ನಂ ಭ್ರಮಿಯಿಸಿ ಸೆಡೆದಂ ಡೀನ ಸಂಡೀನ ತಿರ್ಯ
ಗ್ಡೀನೋಡ್ಡೀನಾವಡೀನಪ್ರಕೃತಿಗರುಡನೇಂ ವಿಸ್ಮಯಂ ಸೌಭವೇಗಂ ೯೪

ಪರಿದುದು ಪಾಸುಂ ಪೊಕ್ಕುಂ
ತಿರುಗಿದುದು ಘರಟ್ಟದಂತೆ ಪರಿಧಿಯವೋಲಂ
ಬರಮಂ ಬಳಸಿದುದಿಳೆಯಂ
ತೆರೆಸುತ್ತಿದುದಡರೆ ಕೊರ್ವಿ ನಿಂದುದು ಸೌಭಂ ೯೫

ಇದಿರೊಳ್ ನಿಟ್ಟಿಸೆ ಪಿಂತೆ ಪಿಂತೆ ನಡೆನೋಡಲ್ ಪಾರ್ಶ್ವದೊಳ್ ಪಾರ್ಶ್ವದೇ
ಶದೊಳಾಳೋಕಿಸೆ ಮೇಗೆ ಮೇಗಡರೆ ಲಕ್ಷ್ಯಂಗೆಯ್ಯೆ ಭೂಮಂಡಲಾ
ಗ್ರದೊಳಂತಲ್ಲದೆ ಕೋಟರೂಪದೊಳದೃಶ್ಯಾಕಾರದೊಳ್ ನಿಂದು ತಂ
ದುದು ವಿಭ್ರಾಂತಿಯನಚ್ಯುತಂಗೆ ಧುರದೊಳ್ ಮಾಯಾಪುರಂ ಸಾಲ್ವನಾ ೯೬

ಎತ್ತಲ್ ರಿಪುಪುರಮಿರ್ದಪು
ದೆತ್ತಲ್ ಖಳನಿಸುವನೆತ್ತ ಮಾರ್ಗಣೆ ಕವಿದ
ತ್ತೆತ್ತ ನಿವಾರಿಪೆನೆಂಬೀ
ಚಿತ್ತಂ ಹರಿಗಾದುದೇಂ ಪ್ರತಾಪಿಯೊ ಸಾಲ್ವಂ ೯೭

೯೪. ಗರುಡನು - "ನಾನು ಈ ಮಾಯಾಪುರಕ್ಕೆ ವೇಗದಿಂದ ಸಮವಾಗುವೆನು" ಎಂದು ಸೇನೆಯನ್ನು ಮೇಲಕ್ಕೆ ಹಾರಿಸುವ, ಸಮುದ್ರವನ್ನು ಕಲಕುವ ಭೂಮಂಡಲವನ್ನು ಕಂಪನಗೊಳಿಸುವ, ರೆಕ್ಕೆಯ ಗಾಳಿಯು ಅತ್ಯಧಿಕವಾಗಿ ಹೆಚ್ಚುವವರೆಗೂ ಡೀನ, ಸಂಡೀನ, ತಿರ್ಯಗ್ಡೀನ, ಉಡ್ಡೀನ, ಅವಡೀನ ಎಂಬ ವಿವಿಧ ರೀತಿಯಲ್ಲಿ ಪುರವನ್ನು ಹಿಡಿಯಲು ಹಾರಿ ಸುತ್ತಿ ಸುತ್ತಿ ಸಾಕಾಗಿ ಸೆಡೆತುಕೊಂಡನು, ಹಿಡಿಯಲಾಗಲಿಲ್ಲ. ಸೌಭಪುರದ ವೇಗವು ವಿಸ್ಮಯಕರವಲ್ಲವೆ? ೯೫. ಸೌಭಪುರವು ಆಕಾಶದಲ್ಲಿ ಪರಿಧಿಯಂತೆ ಸುತ್ತಿತು, ಅಲ್ಲೂ ಭೂಮಿಯ ಮೇಲ್ಗಡೆಯೂ ಉದ್ದವಾಗಿಯೂ ಅಡ್ಡಲಾಗಿಯೂ ಬೀಸುವ ಕಲ್ಲಿನಂತೆಯೂ ತೆರೆಯಂತೆಯೂ ಸುತ್ತಿ ಸಂಚರಿಸಿ ಕೊಬ್ಬೇರಿ ನಿಂತಿತು. ೯೬. ಅದು ಇದಿರಿಗಿದೆಯೆಂದು ನೋಡಿದರೆ ಹಿಂದೆಯೂ ಹಿಂದೆ ನೋಡಿದರೆ ಆಗಲೇ ಪಕ್ಕದಲ್ಲೂ ಆ ಪಕ್ಕವನ್ನು ನೋಡುವಷ್ಟರಲ್ಲಿ ಮತ್ತೊಂದು ಪಕ್ಕದಲ್ಲೂ, ಆ ಮತ್ತೊಂದು ಪಾರ್ಶ್ವವನ್ನು ನೋಡಿದರೆ ಮೇಲುಗಡೆಯೂ, ಮೇಲುಗಡೆಯನ್ನು ನೋಡುವಷ್ಟರಲ್ಲಿ ಭೂಮಂಡಲದ ಕಡೆಯಲ್ಲೂ ಇರುವಂತೆ ಕಾಣಿಸಿಕೊಳ್ಳುತ್ತ ಕೋಟಿರೂಪದಲ್ಲಿ ಅದೃಶ್ಯವಾದ ಆಕಾರದಲ್ಲಿರುತ್ತ ಆ ಮಾಯಾಪುರವು ಕೃಷ್ಣನಿಗೆ ಯುದ್ಧದಲ್ಲಿ ವಿಭ್ರಾಂತಿಯನ್ನುಂಟುಮಾಡಿತು. ೯೭. ಶತ್ರುವಿನ ಆ ಪಟ್ಟಣವು ಎತ್ತ ಕಡೆ ಇದೆ? ಆ ನೀಚನು ಎಲ್ಲಿಂದ ನಮಗೆ ಬಾಣವನ್ನು ಹೊಡೆಯುವನು?! ನಾವು ಹೊಡೆಯುವ ಪ್ರತಿಬಾಣವು ಯಾವುದಕ್ಕೆ ಯಾರಿಗೆ ತಾಕುತ್ತದೆ? ನಮ್ಮ ಕಡೆಗೆ ಬರುವುದನ್ನು ಎಲ್ಲಿ ತಡೆಯಬೇಕು? ಎಂದು ಕೃಷ್ಣನಿಗೆ ಶಂಕೆಯುಂಟಾಯಿತು.

ಕವಿವಸ್ತ್ರ ಪರಂಪರೆಯಂ
ತ್ರಿವಿಕ್ರಮಂ ಖಡ್ಗದಿಂ ನಿವಾರಿಸುತಿರ್ದಂ
ಭವಮೋಹಪರಂಪರೆಯಂ
ವಿವೇಕದಿಂ ಪೊರ್ದಲೀಯದನಘನ ತೆಱದಿಂ ೯೮

ವ|| ಅಂತಿರ್ದು ಕಿಱಿದಾನುಂ ಬೇಗದಿಂ

ಕುಪಥಭ್ರಾಂತನನಾಗಳು
ಮುಪನಿಷದುಕ್ತಿಯೊಳೆ ನಿಲಿಪವೋಲ್ ಸತ್ಪಥದೊಳ್
ರಿಪುಪುರಮಂ ಸ್ತಂಭಿಸಿದಂ
ದ್ಯುಪಥದೊಳಸುರಾಂತಕಂ ನಿಜಾಜ್ಞಾಬಲದಿಂ ೯೯

ಇವನಿನ್ನುಂ ಮೆಱೆದಪ್ಪನೆನ್ನಿದಿರೊಳಾತ್ಮಶ್ರೀಯನೆಂದಾರ್ಜಿನಿಂ
ದವೆರಟ್ಟಿಲ್ಲದಿನಬ್ಜನಾಭನಿಸೆ ಕೋಟಾಟ್ಟಾಳದಿಂ ಭಿನ್ನದಂ
ಡವರಾತಿಸ್ಫುರಿತಾತಪತ್ರಯುಗಳಂ [೧]ಬಿಟ್ಟತ್ತು ತದ್ದೈತ್ಯರಾ
ಜವಧೂಮೌಕ್ತಿಕಕರ್ಣಪತ್ರಯುಗಳಂ ಬೀೞ್ವಂತೆ ಭೂಭಾಗದೊಳ್ ೧೦೦

ಮೇಗೆತ್ತಿದ ಬೆಳ್ಗೊಡೆಗಳ್
ಪೋಗಲೊಡಂ ರೌದ್ರರಸದ ಮುಚ್ಚುಳ್ ಪೋದಂ
ತಾಗೆ ಕಡುಮುಳಿದು ದಾನವ
ನಾಗಳ್ [೨]ದಿವ್ಯಾಸ್ತ್ರಮಂ ಪ್ರಯೋಗಿಸುತಿರ್ದಂ ೧೦೧

ಸಾಲ್ವನು ಅದೆಷ್ಟು ಪ್ರತಾಪಿಯೋ! ೯೮. ಪಾಪರಹಿತರಾದ ಸಜ್ಜನರು ಸಂಸಾರಮೋಹ ಪರಂಪರೆಯನ್ನು ತಮ್ಮೆಡೆಗೆ ಬಾರದಂತೆ ವಿವೇಕದಿಂದ ನಿವಾರಿಸಿಕೊಳ್ಳುವಂತೆ, ಕೃಷ್ಣನು, ಸಾಲ್ವನ ಕಡೆಯಿಂದ ಬರುವ ಅಸ್ತ್ರ ಶಸ್ತ್ರ ಪರಂಪರೆಯನ್ನು ತನ್ನ ಕತ್ತಿಯಿಂದ ನಿವಾರಣೆ ಮಾಡಿಕೊಳ್ಳುತ್ತಿದ್ದನು. ವ|| ಹಾಗಿದ್ದು ಸ್ವಲ್ಪ ಬೇಗ-೯೯. ಭ್ರಾಂತಿಯಿಂದ ಕುಮಾರ್ಗದಲ್ಲಿ ಗಮಿಸಲಿರುವವನನ್ನು ಉಪನಿಷದ್ವಾಕ್ಯಗಳಿಂದ ತಪ್ಪಿಸಿ ಸನ್ಮಾರ್ಗದಲ್ಲಿ ನಿಲ್ಲಿಸುವಂತೆ, ಅಸುರಾಂತಕನು ತನ್ನ ಆಜ್ಞಾ ಬಲದಿಂದ ಶತ್ರುವಿನ ಸೌಭಪುರವನ್ನು ಸ್ವರ್ಗಮಾರ್ಗದಲ್ಲೇ ಸ್ತಂಭಿಸಿದನು. ೧೦೦. ಇವನು ಇನ್ನೂ ನನ್ನೆದುರಿನಲ್ಲಿ ಆತ್ಮಶ್ರೀಯನ್ನೇ ಪ್ರಕಟಿಸುವನು ಎಂದುಕೊಂಡು ಕೃಷ್ಣನು, ಸಾಮರ್ಥ್ಯದಿಂದ ಎರಡು ಭಲ್ಲೆಗಳಿಂದ ಹೊಡೆದನು. ಅದರಿಂದ ಆ ಪುರದ ಕೋಟೆಯ ಅಟ್ಟಳೆಯ ಮೇಲಿನಿಂದ ಶತ್ರುವಿನ ಹೊಳೆಯುವ ಶ್ವೇತಛತ್ರಿಗಳ ಕಾವು ತುಂಡಾಯಿತು. ಆಗ ಆ ರಾಕ್ಷಸನ ರಾಣಿಯ ಮುತ್ತಿನ ಎರಡು ಓಲೆಗಳೇ ಬೀಳುವಂತೆ ಕೊಡೆಗಳು ಭೂಮಿಯ ಮೇಲೆ ಬಿದ್ದವು. ೧೦೧. ಮೇಲೆತ್ತಿದ್ದ ಬಿಳಿಯ ಕೊಡೆಗಳು ಹೋದುದರಿಂದ ತನ್ನ ರೌದ್ರರಸದ ಮುಚ್ಚಳವೇ ಹೋದಂತೆ ಆಗಿ, ರಾಕ್ಷಸನು ಹೆಚ್ಚಾಗಿ

---

೧. ಬಿರ್ದತ್ತು (ಕ) ೨. ದಿವ್ಯಾಸ್ತ್ರದಿಂ (ಕ)

ದಿತಿಸುತನಸ್ತೋತ್ರಕರಮಂ
ಪತಿಕಾರಾಸ್ತ್ರಂಗಳಿಂ ನಿವಾರಿಸಿದಂ ಶ್ರೀ
ಪತಿ ತನ್ನ ನಾಮಕೀರ್ತನ
ತತಿಯಿಂ ವೈಷ್ಣವರಪಾಯಮಂ ಪಿಂಗಿಪವೋಲ್ ೧೦೨

ವ|| ತದನಂತರಂ

ಸುರವಿಧ್ವಂಸಿಯ ಬಿಲ್ಲನೊಂದೆ ಶರದಿಂ ಗಾತ್ರತ್ರಮಂ ಕೃಷ್ಣನಾ
ರ್ದೆರಡಂಬಿಂ ತಱಿದಿಕ್ಕಿ ಮತ್ತವನ ತೋಳೊಳ್ ಭಾಳದೊಳ್ ಮೌಳಿಯೊಳ್
ಕರದೊಳ್ ಕಂಧರದೊಳ್ ಮಹೋದರದೊ[೧]ಳುದ್ಯದ್ವಕ್ಷದೊಳ್ ಕಕ್ಷದೊಳ್
ಬರಿಯೊಳ್ ನೇತ್ರದೊಳೆಯ್ದೆ ತೆತ್ತಿಸಿದನತ್ಯಾಭೀಳಬಾಣಂಗಳಂ ೧೦೩

ಗಱಿಗಡಿದಾಳ್ವಂಬುಗಳಿಂ
ದೊಱೆವ ನವವ್ರಣದಿನಸುರನಾಟೋಪಂ ಕ
ಣ್ದೆಱೆದತ್ತು ಗಂಡಗರ್ವಂ
ಗಱಿವೊಯ್ದುದು ರೌದ್ರರಸಮೆ ಪಲ್ಲವಿಸಿದವೋಲ್ ೧೦೪

ವ|| ಅಂತು ರಣರಸಾಟೋಪದಿಂ [೨]ಪೆಱತೊಂದು ಚಾಪಮಂ ಪಿಡಿಯಲ್ ಸಾಲ್ವ ಸಾಲ್ವನಂ ನೋಡಿ

[೩]ಬಿನದಂ ಸುದರ್ಶನಂ ಸಾ
ಲ್ವನ ತಲೆಗೆಂದಾಯ್ತು ಸಫಲಮಕ್ಕಿಂದು ಸುದ
ರ್ಶನಜನ್ಮಮವನ ತಲೆಗೊಂ
ಡೆನುತೆ ಸುದರ್ಶನಮನಸುರಮಥನಂ ಪಿಡಿದಂ ೧೦೫

ಸಿಟ್ಟುಗೊಂಡು ದಿವ್ಯಾಸ್ತ್ರವನ್ನು ಪ್ರಯೋಗಿಸುತ್ತಿದ್ದನು. ೧೦೨. ಕೃಷ್ಣನು ತನ್ನ ನಾಮ ಸಂಕೀರ್ತನೆಗಳಿಂದ ವಿಷ್ಣುಭಕ್ತರ ಸಂಕಷ್ಟಗಳನ್ನು ಹಿಂದಟ್ಟಿಸುವಂತೆ ಆ ದೈತ್ಯನ ಅಸ್ತ್ರ ಸಮೂಹವನ್ನು ಪ್ರತೀಕಾರಾಸ್ತ್ರಗಳಿಂದ ನಿವಾರಿಸಿದನು. ವ|| ಆಮೇಲೆ ೧೦೩. ಕೃಷ್ಣನು ಸುರಧ್ವಂಸಿ ಸಾಲ್ವನ ಬಿಲ್ಲನ್ನು ಒಂದೇ ಬಾಣದಿಂದಲೂ, ಗರ್ಜಿಸಿ, ಅವನ ಶರೀರವನ್ನು ಎರಡು ಬಾಣಗಳಿಂದಲೂ ಕತ್ತರಿಸಿ ಹಾಕಿ, ಮತ್ತೆ ಅವನ ತೋಳಿನಲ್ಲೂ ಹಣೆಯಲ್ಲೂ ತಲೆಯಲ್ಲೂ ಕೈಯಲ್ಲೂ ಕತ್ತಿನಲ್ಲೂ ದೊಡ್ಡ ಹೊಟ್ಟೆಯಲ್ಲೂ ಉನ್ನತವಾದ ಎದೆಯಲ್ಲೂ ಕೌಂಕುಳಿನಲ್ಲೂ ಪಕ್ಕೆಯಲ್ಲೂ ಕಣ್ಣಿನಲ್ಲೂ ಅತಿ ಭಯಂಕರವಾದ ಬಾಣಗಳನ್ನು ನಾಟಿಸಿದನು. ೧೦೪. ಗರಿಯವರೆಗೂ ನಾಟಿಕೊಂಡ ಬಾಣಗಳಿಂದ ಸುರಿಯುವ ಹೊಸ ಗಾಯಗಳಿಂದ ಆ ರಾಕ್ಷಸನ ಆಟೋಪವು ಕಣ್ಣನ್ನು ತೆರೆಯಿತು. ರೌದ್ರರಸವೇ ಚಿಗುರಿದಂತೆ ಪೌರುಷ ಗರ್ವವು ಗರಿಗಟ್ಟಿತು. ವ|| ಹಾಗೆ ರಣರಸಾಡಂಬರದಿಂದ ಬೇರೊಂದು ಬಿಲ್ಲನ್ನು ಹಿಡಿಯಲು ಸಿದ್ಧನಾಗಲು ಸಾಲ್ವನನ್ನು ನೋಡಿ, ಸುದರ್ಶನಚಕ್ರವು ಇದುವರೆಗೆ ವಿನೋದಾರ್ಥವಾಗಿತ್ತು. ಅದು ಸಾಲ್ವನ ತಲೆಗೆ ಕಾದಿತ್ತು, ಅವನ ತಲೆಯನ್ನು ತೆಗೆದು ೧೦೫. ಈ ಸುದರ್ಶನ ಚಕ್ರದ ಜನ್ಮವು ಇಂದು ಸಫಲವಾಗಲಿ ಎನ್ನುತ್ತ ಕೃಷ್ಣನು ತನ್ನ

---

೧. ಉದ್ಯದ್ವಕ್ಷದೊಳ್ ಪಕ್ಷದೊಳ್ ಪರಿಲೋಲಾಕ್ಷದೊಳೆಯ್ದೆ (ಖ) ೨. ಪೆರತುಚಾಪಮಂ (ಕ) ೩. ನೆನೆದು ಸುದರ್ಶನಮಂ ಸಾಲ್ವನ ತಲೆಗೊಂದಾಯ್ತು ಸಫಲವಕ್ಕೆಂದು ಸುದರ್ಶನಜನ್ಮನವನ ತಲೆಗೊಂಬಿನೆಗ ಸುದರ್ಶನಮನಸುರಮಥನಂ ಪಿಡಿದಂ (ಕ)

ಪಿಡಿದು ಹರಿ ತಿರುಪಿದಂ [1]ಕೂ
ರ್ಪಿಡಿದ ಸುದರ್ಶನಮನದಱ ಮಾರ್ಪೊಳೆಪುಗಳೊಳ್
[2]ತೊಡಮಾಗಿರೆ ರವಿಬಿಂಬಂ
ತಡವಾಗಿರದರಿಯನಿಕ್ಕಿ ಗೆಲ್ವುಜ್ಜುಗದಿಂ ೧೦೬

ಮುನಿದಾತಂ ಕೃಷ್ಣನಾ ಕೃಷ್ಣನ ಭುಜಗತಮುಂ ಚಕ್ರವಾ ಚಕ್ರದಿಂ ಸಾ
ಲ್ವನ ಮೂರ್ಧಚ್ಛೇದವಾಚ್ಛೇದಮನತಿಮುದದಿಂ ನೋಡುವಂ ನಾವುಮೆಮ್ಮಿಂ
ದಿನಿತಾನುಂ ಧನ್ಯರಾರೆಂದಮರರೊಸೆವಿನಂ ಕೃಷ್ಣಚಕ್ರಾಹತಂ ಸಾ
ಲ್ವನ ಮೂರ್ಧಂ ಪಾಱೆದತ್ಯುಜ್ಜ್ವಲಮಣಿಮಕುಟಂ ಕುಂಡಲೋದ್ಭಾಸಿ ಗಂಡಂ ೧೦೭

ವ|| ಅಲ್ಲಿಂ ಬಟಿಯಂ

ಪೊಱಮುಯ್ವಂ ತಾಗೆ ಬಿಲ್ಲಂ ತೆಗೆದೆಟಿದು ಸರೋಜಾಕ್ಷನೆಚ್ಚಗ್ನಿಬಾಣಂ
ಕಱಿಯುತ್ತುಂ ಕೆಂಡಮುಂ ಕೇಸುರಿಯನುಗುಟುತುಂ ತ್ರ್ಯಂಬಕಂ ಭಾಳನೇತ್ರಂ
ದೆಱೆದಂತಟ್ಟಿತ್ತು ಮುಟ್ಟಿತ್ತಳುರ್ದುದುರಿಪಿದತ್ತಾ ಪುರೀಚಕ್ರಮಂ ಪೋ
ಗಜೆದೆಂ ಕಾಲಾಗ್ನಿರುದ್ರಾಕೃತಿದಳಿತಜಗಂಗಚ್ಯುತಂಗೇನಸಾಧ್ಯಂ ೧೦೮

ವ|| ಆ ಪ್ರಸ್ತಾವದೊಳ್

ಸುದರ್ಶನವೆಂಬ ಚಕ್ರವನ್ನು ಕೈಗೆತ್ತಿಕೊಂಡನು. ೧೦೬. ಕೃಷ್ಣನು ಹರಿತವಾದ ಆ ಸುದರ್ಶನಚಕ್ರವನ್ನು ತಿರುಗಿಸಿದನು. ಆಗ ಸೂರ್ಯಮಂಡಲವು ಆ ಚಕ್ರದ ಪ್ರತಿಬಿಂಬದ ಹೊಳಪಿಗೆ ಸಮವಾಗಿ ಕಾಣಿಸುತ್ತಿದ್ದಿತು. ಆ ಸ್ಥಿತಿಯಲ್ಲಿದ್ದ ಚಕ್ರದಿಂದ ತಡಮಾಡದೆ ಶತ್ರುವನ್ನು ಹೊಡೆದು ಗೆಲ್ಲುವುದಕ್ಕೆ ಶ್ರೀಕೃಷ್ಣನು ಉದ್ಯೋಗಿಸಿದನು. ೧೦೭. ಕೋಪಗೊಂಡವನು ಕೃಷ್ಣನು, ಆ ಕೃಷ್ಣನ ತೋಳಿನಲ್ಲಿರುವುದು ಚಕ್ರ, ಆ ಚಕ್ರದಿಂದ ಸಾಲ್ವನ ಶಿರಶ್ಛೇದನವಾಗುವುದು. ಆ ಶಿರಶ್ಛೇದನವನ್ನು ಅತಿ ಸಂತೋಷದಿಂದ ನೋಡುವವರು ನಾವು, ನಮಗಿಂತ ಧನ್ಯರಾರಿರುವರು! ಎಂದು ದೇವತೆಗಳು ಸಂತೋಷಪಡುತ್ತಿರುವಲ್ಲಿ, ಕೃಷ್ಣನ ಚಕ್ರದಿಂದ ಭೇದಿಸಲ್ಪಟ್ಟ ಹೊಳೆಯುವ ರತ್ನಕಿರೀಟವುಳ್ಳುದೂ ಕರ್ಣಾಭರಣದಿಂದ ಹೊಳೆಯುವ ಕೆನ್ನೆಗಳುಳ್ಳುದೂ ಆದ ಸಾಲ್ವನ ತಲೆಯು ಹಾರಿತು. ವ|| ಅದಾದ ಬಳಿಕ ೧೦೮. ಕೃಷ್ಣನು ತನ್ನ ಬಿಲ್ಲನ್ನು ಹೊರ ಹೆಗಲಿಗೆ ತಾಕುವಂತೆ ಪೂರ್ತಿಯಾಗಿ ಸೆಳೆದು, ಪ್ರಯೋಗಿಸಿದ ಆಗ್ನೇಯಾಸ್ತ್ರವು ಕೆಂಡವನ್ನು ಸುರಿಸುತ್ತ ಕೆಂಪಾದ ಉರಿಯನ್ನು ಉಗುಳುತ್ತಾ ಈಶ್ವರನು ತನ್ನ ಹಣೆಗಣ್ಣನ್ನು ತೆರೆದನೆಂಬಂತೆ ಅಟ್ಟಿತು, ಮುಟ್ಟಿತು, ಆವರಿಸಿತು. ಆ ಪುರ ಮಂಡಲವನ್ನೇ ಉರಿಸಿ ಬಿಟ್ಟಿತು. ಹೋಗು! ಆಶ್ಚರ್ಯ ಪಡಬೇಕಾಗಿಲ್ಲ, ಈಗ ಜ್ಞಾಪಕಕ್ಕೆ ಬಂದಿತು, ತಿಳಿಯಿತು, ಪ್ರಳಯಕಾಲಾಗ್ನಿರುದ್ರರೂಪದಿಂದ ಜಗತ್ತನ್ನೇ ಒಡೆದು ನಾಶಮಾಡಿದ ಅಚ್ಯುತನಿಗೆ ಇದೇನಸಾಧ್ಯವೆ? ವ|| ಆ ಸಮಯದಲ್ಲಿ

---

೧. ಮಾರ್ಪಿಡಿದು (ಕ) ೨. ತಡಮಾಗಿರೆ (ಕ)

ಎಮಗಮರತ್ವವಿಂದು ದೃಢವಾದುದು ಭೂಭರವಿಂದು ಪೋಯ್ತು ವಾ
ಸವಪದವಿಂದು ಸಂದುದು ಮುರಾಂತಕನೊಳ್ ದನುಜಾಂತಕತ್ವವಿಂ
ದವಿತಥಮಾಯ್ತು ನಾರದನ [1]ಕಣ್ಬಸವೋಡಿದುದಿಂದೆನುತ್ತುಮು
ತ್ಸವಪಟಹಸ್ವನಂ ನೆಗಟೆ ಪೂಮಟೆಯಂ ಸುರರೊಲ್ದು ಸೂಸಿದರ್ ೧೦೯

ವ|| ಅಂತು ವಿಜಯಮಂಗಳಂ ನೆಗಟೆ ಪರಿಪೂರ್ಣಮನೋರಥನಾಗಿ

ಸ್ಮರರಾಜ್ಯಶ್ರೀಸಖೀಸಂಕುಲಮೆನೆ ವನಿತಾಸಂಕುಲಂ ಬಂದು ಸೂಸು
ತ್ತಿರೆ ಶೇಷಾನೀಕಮಂ ದುಂದುಭಿಯ ರುತಿ ಸುಧಾಂಭೋಧಿಘೋಷಂಬೊಲುಣ್ಮು
ತ್ತಿರೆ ನಾನಾತೋರಣೋದ್ಯದ್ಧ್ವಜಸಮಿತಿ ಪುರಶ್ರೀಯಲಂಕಾರದಂತೊ
ಪ್ಪಿರೆ ಪೊಕ್ಕಂ ದ್ವಾರಕಾಮಧ್ಯದ ನೃಪಗೃಹಮಂ ಶ್ರೀಜಗನ್ನಾಥದೇವಂ ೧೧೦

ಪದಿನಾಲ್ಕುಂ [2]ಜಗಮಲ್ಲಿಗಲ್ಲಿಗೆಸೆವೀ ಬ್ರಹ್ಮಾಂಡ ಲಕ್ಷಂಗಳಂ
ಗದೊಳೊಪ್ಪಿರ್ಪುವು ಹೇಮಕೀಲಘಟಿತಶ್ರೀಖಂಡಮಂ ತಂದು [3]ಪೂ
ಸಿದೊಡಾ ಪೊನ್ನರಜಂಗಳಿರ್ಪವೊಲೆನಿಪ್ಪಾ ವಿಷ್ಣು ತನ್ನಂಶದಂ
ಶದೆ ಪುಟ್ಟಿರ್ದ ಕಥಾಂಶದಂಶದ ಮಹತ್ತ್ವಾಂಶಾಂಶಮಿಂತೀ ಸ್ತವಂ ೧೧೧

೧೦೯. ದೇವತೆಗಳು, "ನಮಗೆ ಅಮರತ್ವವು (= ಮರಣವಿಲ್ಲದಿರುವಿಕೆ) ಇಂದು ದೃಢವಾಯಿತು. ಭೂಮಿಯ ಭಾರವು ಇಂದು ಹೋಯಿತು. ಇಂದ್ರಪದವಿ ಇಂದು ಸಂದಿತು. ಕೃಷ್ಣನಲ್ಲಿ ದನುಜಾಂತಕತ್ತ್ವವು ಇಂದು ಸತ್ಯವಾಯಿತು, ನಾರದನ ಕಣ್ಣಿನ ಆಸೆ ತೀರಿತು ಎನ್ನುತ್ತಾ ಸಂತೋಷದ ಪಟಹಧ್ವನಿಯಾಗುತ್ತಿರುವಲ್ಲಿ ಪ್ರೀತ್ಯಾಸಕ್ತಿಗಳಿಂದ ಹೂವಿನ ಮಳೆಯನ್ನು ಸುರಿಸಿದರು. ವ|| ಹಾಗೆ ವಿಜಯಮಂಗಳವು ಬೆಳೆಯಲು ಕೃಷ್ಣನು ಪರಿಪೂರ್ಣಮನೋರಥನಾಗಿ ೧೧೦. ಮನ್ಮಥರಾಜ್ಯಶ್ರೀಯ ಸಖಿಯರ ಸಮೂಹದಂತೆ ಇರುವ ವನಿತೆಯರ ಸಮೂಹವು ಬಂದು ತನ್ನ ಮೇಲೆ ಅಕ್ಷತೆಯ ಸಮೂಹವನ್ನು ತಳಿಯುತ್ತಲೂ ದುಂದುಭಿಯ ನಾದವು ಕ್ಷೀರಸಮುದ್ರದ ಮೊರೆತದಂತೆ ಉಂಟಾಗುತ್ತಲೂ, ನಾನಾ ಬಗೆಯ ಹೊಳೆಯುವ ಉತ್ತಮವಾದ ತೋರಣಗಳೂ ಧ್ವಜಗಳೂ ಪುರಶ್ರೀಯ ಅಲಂಕಾರದಂತೆ ಒಪ್ಪುತ್ತಲೂ ಇರುವಲ್ಲಿ ಶ್ರೀಜಗನ್ನಾಥದೇವ ಕೃಷ್ಣನು ಬಂದು ದ್ವಾರಕಾಪುರ ಮಧ್ಯದ ತನ್ನ ಅರಮನೆಯನ್ನು ಪ್ರವೇಶಿಸಿದನು. ೧೧೧. ಹದಿನಾಲ್ಕುಲೋಕಗಳೂ ಅವುಗಳಲ್ಲೊಂದೊಂದರಲ್ಲೂ ಇರುವ ಲಕ್ಷ ಬ್ರಹ್ಮಾಂಡಗಳೂ ಆ ವಿಷ್ಣುವಿನ ಅಂಗದಲ್ಲಿ ಸುವರ್ಣಾದ್ರಿಯ ಗಂಧದ ಕೊರಡನ್ನಾಗಲಿ ಚಿನ್ನದ ಕೈಪಿಡಿಯುಳ್ಳ ಗಂಧದ ಕೊರಡನ್ನಾಗಲಿ, ತೇಯ್ದು ಅಥವಾ ಚಿನ್ನದ ಅರೆಗುಂಡಿನಿಂದ ಅರೆದುತಂದ ಶ್ರೀಗಂಧವನ್ನು ಮೈಗೆ ಲೇಪಿಸಿದರೆ ಶ್ರೀಗಂಧದಲ್ಲಿ ಇರುವ ಸುವರ್ಣರಜದಂತೆ ಇವೆ ಎನ್ನಿಸುವ ಆ ಮಹಾ ವಿಷ್ಣುವು ತನ್ನ ಅಂಶಾಂಶದಿಂದ ಕೃಷ್ಣನಾಗಿ ಅವತರಿಸಿದನು. ಆ ಕೃಷ್ಣನ ಕಥೆಯ ಅನೇಕಾಂಶಗಳಲ್ಲಿ ಮಹತ್ತ್ವವುಳ್ಳ ಈ ಜಗನ್ನಾಥಸ್ತುತಿಯು ಒಂದು ಅಂಶವಾಗಿದೆ.

---

೧. ಕಣ್ಣಸಮಾಡಿ (ಖ) ೨. ಜಗಮಲ್ಲಿಗಲ್ಲೆಸೆವಿನಂ ಬ್ರಹ್ಮಾಂಡ (ಖ) ೩. ಪೂಸಿದೊಡಾತ್ಮಾಂಗದ ತೋರ್ಕೆಯಂತಿರೆಸದಿರ್ಪಾ ವಿಷ್ಣು (ಕ)

ಕುರುಪಾಂಡೂದ್ಭವ ಭಾರತಾಹವನಿಯುಕ್ತಾಷ್ಟಾದಶಾಕ್ಷೌಹಿಣೀ
ಧುರಮೇಂ ಗಣ್ಯಮೆ ಬೇಱಿ ಕೃಷ್ಣನೆ ವಿಪಕ್ಷಾಕ್ಷೌಹಿಣೀಲಕ್ಷಮಂ
ಧುರದೊಳ್ ಮರ್ದಿಸೆ ಭೂಭರಂ ತೊಲಗಿತೆಂಬೀ ಕಾವ್ಯಮಂ ಪೇೞ್ವ ಕೇ
ಳ್ವರೊಳಜ್ಞಾನಭರಂ ಕಿಡಲ್ ಸುಖಭರಂ ಕೈಕೊಳ್ಗುವಾತ್ಯಂತಿಕಂ ೧೧೨

ಬಾಡಿದ ಕೆಯ್ಗೆ ಕೊಳ್ಗೆ ಮಳೆ ಸಸ್ಯಕುಲಂ ಸತತಂ ಸುಭಿಕ್ಷಮಂ
ಮಾಡುಗೆ ಗೋಧನಾಳಿ ಕೊಡವಾಲ್ಗಱೆಗೋಪರನಂಗರಾಗದೊಳ್
ಕೂಡುಗೆ ರುದ್ರಭಟ್ಟಕೃತಿ ವೈಷ್ಣವಕಾವ್ಯರಸಾರ್ಣವಂ ತುಳುಂ
ಕಾಡುಗೆ ಭೂಮಿನಿಲ್ವಿನಮಹರ್ಪತಿನಿಲ್ವಿನಮಿಂದುನಿಲ್ವಿನಂ ೧೧೩

ಇದು ಸಮಸ್ತಕಮಲಭವಾಂಡಮಾಲಾಘಟೀಘಟಿತಾರಘಟ್ಟ ಘಟನಾಸ್ವತಂತ್ರ
ನಿಜಸ್ವರೂಪನಿರೂಪಣಚಕಿತಸಕಲಾಮ್ನಾಯತಂತ್ರ ಲಕ್ಷ್ಮೀಕಾಂತ
ಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥ
ವಿಜಯ ಮಹಾಪ್ರಬಂಧದೊಳ್ ಅಂಧಕರಿಪುಸ್ಕಂದಯುದ್ಧ
ಬಾಣಾಸುರಸಹಸ್ರಭುಜಚ್ಛೇದನ ರಿಪುಭ್ರಮಣ ಪುರ
ಸ್ತಂಭನ ಸಾಲ್ವವಧ ದ್ವಾರಾವತೀಪ್ರವೇಶವರ್ಣನಂ
ಅಷ್ಟಾದಶಾಶಾಶ್ವಾಸಂ

## ಸಂಪೂರ್ಣಂ

೧೧೨. ಕೌರವಪಾಂಡವರಿಗಾದ ಭಾರತಯುದ್ಧದಲ್ಲಿ ನಿಯುಕ್ತವಾದ ಹದಿನೆಂಟು ಅಕ್ಷೌಹಿಣೀ ಸೇನೆಯ ಯುದ್ಧವು ಅದೇನು ಗಣ್ಯ? ಕೃಷ್ಣನೊಬ್ಬನೇ ಶತ್ರುಪಕ್ಷದ ಲಕ್ಷ ಅಕ್ಷೌಹಿಣೀ ಸೈನ್ಯವನ್ನು ಯುದ್ಧದಲ್ಲಿ ಮರ್ದಿಸಿದುದರಿಂದ ಭೂಭಾರವು ತೊಲಗಿತು ಎಂದು ತಿಳಿಸುವ ಈ ಕಾವ್ಯವನ್ನು ಹೇಳುವವರಲ್ಲೂ ಕೇಳುವವರಲ್ಲೂ ಅಜ್ಞಾನದ ಭಾವವು ಕಳೆದುಹೋಗುವುದು. ಅತಿಯಾದ ಸುಖವು ಬಂದು ನೆಲೆಸುವುದು. ೧೧೩. ಬಾಡಿದ ಹೊಲಗದ್ದೆ ಮೊದಲಾದ ಕ್ಷೇತ್ರಗಳಿಗೆ ಮಳೆಸುರಿಯಲಿ. ಸಸ್ಯಸಮೂಹವು ಸಂತತವಾಗಿ ಸುಭಿಕ್ಷವನ್ನು ಮಾಡಲಿ. ಗೋಧನಗಳು ಕೊಡಗಟ್ಟಲೆ ಹಾಲನ್ನು ಕರೆಯಲಿ. ಪ್ರಿಯರು ಕಾಮಾನುರಾಗದಿಂದ ಕೂಡಲಿ. ರುದ್ರಭಟ್ಟನ ಕೃತಿಯಾದ ಈ ವೈಷ್ಣವ ಕಾವ್ಯರಸಸಾಗರವು ಭೂಮಿಯಿರುವವರೆಗೂ ಚಂದ್ರಸೂರ್ಯರಿರುವವರೆಗೂ ತುಳುಕಾಡಲಿ.

ಇದು ಸಮಸ್ತ ಕಮಲ ಭವಾಂಡ ಮಾಲಾ.... ಲಕ್ಷ್ಮೀಕಾಂತ ಶ್ರೀಪಾದಭಕ್ತಿಯುಕ್ತನಾದ ಸುಕವೀಂದ್ರ ರುದ್ರಪ್ರಣೀತವಾದ ಶ್ರೀಜಗನ್ನಾಥ ವಿಜಯ ಮಹಾಪ್ರಬಂಧದಲ್ಲಿ ಈಶ್ವರಷಣ್ಮುಖರೊಡನೆ ಯುದ್ಧ, ಬಾಣಾಸುರನ ಸಾವಿರ ತೋಳುಗಳ ಛೇದನ, ಶತ್ರುವಿನ ಭ್ರಮಿಸುವ ಪುರದ ಸ್ತಂಭನ, ಸಾಲ್ವವಧ, ದ್ವಾರಾವತೀ ಪ್ರವೇಶದ ವರ್ಣನೆಗಳ

**ಹದಿನೆಂಟನೆಯ ಆಶ್ವಾಸ ಸಂಪೂರ್ಣ**

****

# ಅನುಬಂಧ

೧. ಅದಿತಿ ಕಶ್ಯಪರಿಗೆ ವರುಣನ ಶಾಪ (ಅ॥ ೧- ಪದ್ಯ ೭೫) ಮತ್ತು ಗೋ ಸಂಬಂಧದ ತೋಟ- (೧ನೇ ಅ. ೭೬ನೇ ಪದ್ಯ)

ಪಶ್ಚಿಮ ದಿಗಧಿಪತಿಯೂ ಸಮುದ್ರರಾಜನೂ ಆದ ವರುಣದೇವನಲ್ಲಿ, ಹೆಚ್ಚಾಗಿ ಹಾಲನ್ನು ಕರೆಯುವ ಹಸುಗಳು ಅನೇಕವಾಗಿದ್ದುವು. ಅದನ್ನು ತಿಳಿದ ದೇವತೆಗಳ ಮಾತಾಪಿತೃಗಳಾದ ಅದಿತಿ ಕಶ್ಯಪರು ವರುಣನನ್ನು ಕೇಳದೆಯೇ ಕೆಲವು ಉತ್ತಮ ಹಸುಗಳನ್ನು ತಮ್ಮ ಸೇವಕರನ್ನೂ ಕೆಲವರು ಮಕ್ಕಳನ್ನೂ ಕಳುಹಿಸಿ ತರಿಸಿಕೊಂಡರು. ತರಲು ಹೋಗಿದ್ದವರೂ ವರುಣನನ್ನಾಗಲಿ, ಅವನ ಗೋರಕ್ಷರನ್ನಾಗಲಿ ಕೇಳದೆಯೇ ಹಸುಗಳನ್ನು ಹಿಡಿದುಕೊಂಡರು. ರಕ್ಷಕರು ತಡೆ ಮಾಡಲು ಬಂದರೂ ಲಕ್ಷಿಸದೆ ಅವರನ್ನೂ ಧಿಕ್ಕರಿಸಿದರು. ಹಸುಗಳನ್ನು ಅಟ್ಟಿಕೊಂಡೇ ಹೋದರು. ಸೇವಕರು ವರುಣನೆಡೆಗೆ ಹೋಗಿ ವಿಚಾರವನ್ನು ತಿಳಿಸಿ, ತಮಗಾದ ಅವಮಾನಕ್ಕಾಗಿ ದುಃಖಿಸಿದರು.

ಆಗ್ರಹಗೊಂಡ ವರುಣನು-"ನನ್ನನ್ನು ಕೇಳದೆಯೇ ಹಸುಗಳನ್ನು ಅಪಹರಿಸಲು ಕಳುಹಿಸಿದವರು ದ್ವಾಪರಯುಗದಲ್ಲಿ ಗೋಪಾಲಾಧ್ಯಕ್ಷರಾಗಿ ಉದಿಸಲಿ. ಹಸುಗಳನ್ನು ಹಿಡಿದುಕೊಂಡು ಹೋದವರೂ ಅವರ ಸಂಬಂಧಿಗಳೂ ಗೋಪಾಲರಾಗಿ ಜನಿಸಲಿ" ಎಂದು ಶಪಿಸಿದನು. ಆ ಶಾಪದಿಂದ ಅದಿತಿದೇವಿಯು ಗೋಕುಲದಲ್ಲಿ ಯಶೋದಾದೇವಿಯಾಗಿಯೂ ಕಶ್ಯಪರು ನಂದಗೋಪನಾಗಿಯೂ ಉದಿಸಿದರು. ಶಾಪಗ್ರಸ್ತರಾದ ಇತರರು ಗೋಪ ಗೋಪಿಯರಾಗಿ ಜನಿಸಿದರು.

೨. ತುಡುಕಿದ ದೋಷಿಯನಲ್ಲದೆ ಪಿಡಿಯದು ಘಟಸರ್ಪಂ (= ನಿರಪರಾಧಿಯನ್ನು ಘಟಸರ್ಪವು ಕಚ್ಚದು) ಜಗನ್ನಾಥ ವಿಜಯ (ಅ. ೧-ಪ ೧೨)

ಪೂರ್ವಕಾಲದಲ್ಲಿ ರಾಜರೂ, ನ್ಯಾಯಾಧೀಶರೂ ಕಳವು ಕೊಲೆ ಮೊದಲಾದ ಮಹಾಪರಾಧಗಳನ್ನು ಮಾಡಿದವರಾರೆಂಬುದನ್ನು ಕಂಡು ಹಿಡಿಯಲು ಅನೇಕ ಉಪಾಯಗಳನ್ನು ಅನುಸರಿಸುತ್ತಿದ್ದರು. ಅವುಗಳಲ್ಲಿ ಘಟಸರ್ಪದ ಉಪಾಯವು ಒಂದಾಗಿದೆ.

ಗಡಿಗೆ ಮಡಿಕೆಗಳಲ್ಲಿ ದೊಡ್ಡ ದೊಡ್ಡ ನಾಗರಹಾವುಗಳನ್ನು (ಹಾವಾಡಿಗರು ಬಿದಿರು ಬುಟ್ಟಿಯಲ್ಲಿಡುವಂತೆ) ಇಟ್ಟು ಸಾಕಿಸುತ್ತಿದ್ದರು. ದೇಶದಲ್ಲಿ ಮಹಾಪರಾಧಗಳು ನಡೆದಾಗ, ಅಪರಾಧಿಗಳಲ್ಲದವರನ್ನು ಸಂಶಯದಿಂದ ಆಪಾದಿತರನ್ನಾಗಿ ಬಂಧಿಸುವುದು ವಾಡಿಕೆಯಷ್ಟೆ. ಅಪಾದಿತರೆಲ್ಲರೂ ಹಾವಿರುವ ಗಡಿಗೆ ಅಥವಾ ಮಡಕೆಯೊಳಕ್ಕೆ ಕಯ್ಯನ್ನು ಹಾಕಿ ಹಾವನ್ನು ಮುಟ್ಟಬೇಕಾಗಿದ್ದಿತು. ನಿರಪರಾಧಿಗಳಾದವರು-ಧೈರ್ಯದಿಂದ ಕಯ್ಯನ್ನು ನೀಡಿದರೂ ಸರ್ಪವು ಅವರನ್ನು ಕಚ್ಚದೆ ಇರುತ್ತಿದ್ದಿತಂತೆ. ನಿಜವಾಗಿ ಅಪರಾಧಿಯಾದವನು-ಸರ್ಪವು ತನ್ನನ್ನು ಕಚ್ಚುವುದರಿಂದ ಕಚ್ಚಿಸಿಕೊಂಡು ಸಾಯುವುದಕ್ಕಿಂತ ಸೆರೆಯಲ್ಲಿ ಜೀವಿಸುವುದೇ ಒಳ್ಳೆಯದೆಂದು ಕೊಂಡು ತಪ್ಪನ್ನು ಒಪ್ಪಿಕೊಂಡೇ ಬಿಡಬಹುದಾಗಿದ್ದಿತು. ಘಟ ಎಂದರೆ - ಮಡಕೆ, ಗಡಿಗೆ, ಎಂದರ್ಥ. ಅದರಲ್ಲಿರುವ ಸರ್ಪಕ್ಕೆ ಘಟಸರ್ಪವೆಂಬುದು ಅನ್ವರ್ಥ-ಘಟದಲ್ಲಿಡುತ್ತಿದ್ದ ಸರ್ಪವು ದೊಡ್ಡದಾಗಿರುತ್ತಿದ್ದುದರಿಂದ- ಬರಬರುತ್ತ ಜನರು ದೊಡ್ಡ ಸರ್ಪವನ್ನೆಲ್ಲಾ ಘಟಸರ್ಪವೆಂದು ಹೇಳುವುದು ವಾಡಿಕೆಯಾಗಿದೆ. ಘಟಸರ್ಪದ ವಿಚಾರವನ್ನು ನಂಬದವರು-ಹಳ್ಳಿಗಳಲ್ಲಿ ಸಣ್ಣ ಕಳ್ಳತನ ನಡೆದಾಗ ಸಂಶಯಗ್ರಸ್ತರನ್ನೆಲ್ಲಾ ಮಂತ್ರಿಸಿದ ತೆಂಗಿನಕಾಯನ್ನು ಮುಟ್ಟಿಸುವುದನ್ನು ಗಮನಿಸಬಹುದು.

# ಶಬ್ದಕೋಶ

ಅ-ವಿಷ್ಣು, 'ಅ' ಎಂಬ ಅಕ್ಷರ, ಆಕಾರ
ಅಂಕ-೧ ಚಿಹ್ನೆ, ಗುರುತು, ೨ ತೊಡೆ
ಅಂಕವಣಿ-೧ ಜೀನು, ೨ ಅಂಬಾರಿ
ಅಂತ-ಕೊನೆ, ಕಡೆ
ಅಂತರೀಪ-ನೀರಿನೊಳಗಡೆಯಿರುವ ಜಲಾಶಯದ ದಡ
ಅಂಶ-ಭಾಗ, ಪಾಲು,
ಅಂಶು-ಕಿರಣ, ಕಾಂತಿ
ಅಂಶುಕ-ಬಟ್ಟೆ, ಉಡುಪು, ವಸ್ತ್ರ
ಅಂಶುಮಾಲಿ-ಸೂರ್ಯ
ಅಂಸ-ಹೆಗಲು, ಭುಜದ ಮೇಲುಭಾಗ
ಅಕಲಂಕ-ದೋಷವಿಲ್ಲದ, ನಿರ್ಮಲ, ಪರಿಶುದ್ಧ
ಅಕಾಂಡ-ಅಕಾಲ, ಅನಿರೀಕ್ಷಿತ
ಅಕಿಂಚನ-ಬಡವ, ಅತಿದರಿದ್ರ
ಅಕೀರ್ತಿ-ಕೆಟ್ಟಹೆಸರು, ಅಪಯಶಸ್ಸು
ಅಕುಟಿಲ-ವಂಚನೆಯಿಲ್ಲದ, ವಕ್ರವಿಲ್ಲದ, ನೇರವಾದ
ಅಕೃತಕ-ಸಹಜ, ಸ್ವಾಭಾವಿಕ
ಅಕೃತ್ಯ-ಕೆಟ್ಟ ಕೆಲಸ, ಮಾಡಬಾರದ ಕೆಲಸ
ಅಕ್ಕಜ-೧ ಆಶ್ಚರ್ಯ, ೨ ಮತ್ಸರ, ಹೊಟ್ಟೆಯ ಕಿಚ್ಚು,
ಅಕ್ಕರ-ಅಕ್ಷರ, ಲಿಪಿ, ಪ್ರೀತಿ
ಅಕ್ಕಿಸು-ಜೀರ್ಣಿಸು, ಕರಗಿಸು
ಅಕ್ಕಾಡು-ಅಡ್ಡಾಡು, ನಿಶ್ಶೇಷವಾಗು
ಅಟ್ಕು-ಅಕ್ಕು-ಭಯಪಡು, ಜೀರ್ಣವಾಗು
ಅಕ್ಕು-ಅಕ್ಕುಂ-ಆಗುವುದು
ಅಕ್ಕುಳಿಸು-ಹೊಟ್ಟೆಯನ್ನು ಒಳಕ್ಕೆ ಸೇದಿಕೊ, ವಿಲಾಸದಿಂದ ಬಾಗು, ಹೆದರು, ಹಿಂಜರಿ
ಅಕ್ರೂರ-೧ ಶಾಂತವಾದ, ಕ್ರೂರವಲ್ಲದ, ೨ ಕೃಷ್ಣನಲ್ಲಿ ಭಕ್ತಿಯುಳ್ಳ ಕಂಸನ ಮಂತ್ರಿ
ಅಕ್ಷ-೧ ಅಚ್ಚು ೨ ಬಂಡಿಯ ಅಚ್ಚು ೩ ಜಪಮಾಲೆಯ ಮಣಿ
ಅಕ್ಷತ-೧ ಸಂಪೂರ್ಣ, ಅಖಂಡ, ಪುಡಿಯಾಗದ ೨ ಮಂತ್ರಾಕ್ಷತೆ, ಸೇಸೆ
ಅಕ್ಷಮ-ಅಸಮರ್ಥ
ಅಕ್ಷುಭಿತ-ಪ್ರಶಾಂತವಾದ, ಗಲಿಬಿಲಿಯಿಲ್ಲದ
ಅಕ್ಷೂಣ-ಕೊರತೆ (ಕಡಿಮೆ)ಯಿಲ್ಲದ
ಅಕ್ಷೌಹಿಣಿ-ಅನೇಕಲಕ್ಷಸಂಖ್ಯೆಯ ಆನೆ ಕುದುರೆ, ರಥ, ಕಾಲಾಳುಗಳ ದೊಡ್ಡದಾದ ಚತುರಂಗ ಸೈನ್ಯ
ಅಖಿಲ-ಸಮಸ್ತ, ಎಲ್ಲಾ, ಸಂಪೂರ್ಣ
ಅಗ-೧ ಚಲಿಸದ, ೨ ಮರ, ೩ ಪರ್ವತ (ಬೆಟ್ಟ)
ಅಗಜಾತೆ-ಪಾರ್ವತಿ
ಅಗಡು-ಹೀನ, ತುಚ್ಛ, ಕೆಟ್ಟ
ಅಗಮ್ಯ-ಪಡೆಯಲಾಗದ, ದೊರೆಯದ, ಸೇರಲಾಗದ
ಅಗರ-ಅಗ್ರಹಾರ
ಅಗರು-ಅಗುರು-ಸುಗಂಧದ್ರವ್ಯಭೇದ
ಅಗವಡು-ಸೆರೆಸಿಕ್ಕು, ಸಿಕ್ಕಿಬೀಳು
ಅಗಾರ-ಮನೆ, ಸ್ಥಳ
ಅಗಿ-೧ ಹೆದರು, ೨ ತೋಡು, ೩ ಹಲ್ಲಿನಿಂದ ಆಹಾರವನ್ನು ಬಾಯಲ್ಲಿ ನುರುಗಿಸು, ೪ ಕಚ್ಚು
ಅಗುಂತಿ-ಅಗುಂದಲೆ-ಅತಿಶಯ, ಹೆಚ್ಚಾಗಿರುವಿಕೆ
ಅಗುರ್ಬು-ಅಗುರ್ವು-೧ ಹೆದರಿಕೆ ೨. ಭಯಂಕರಾಕೃತಿ
ಅಗುರ್ವಿಸು-ಹೆದರಿಸು, ಭಯಂಕರವಾಗಿರು, ೨ ಅತಿಶಯವಾಗಿರು
ಅಗೆ-೧ ಮೊಳಕೆ, ೨ ತೋಡು
ಅಗೋಚರ-೧ ಕಣ್ಣಿಗೆ ಕಾಣದ, ೨ ಕಾಣದ, ೩ ಆಶ್ಚರ್ಯಕರ
ಅಗ್ಗ-ಅಗ್ರ-ಶ್ರೇಷ್ಠ ; ಅಗ್ಗ-ಅರ್ಘ-ಬೆಲೆ, ಪೂಜೆ
ಅಗ್ಗ (ಕ)-ಸುಲಭವಾದ ಬೆಲೆಗೆ ಹೆಚ್ಚಾಗಿ ದೊರೆಯುವುದು
ಅಗ್ಗವಣಿ-ಅಗ್ರೋದಕ, ಪೂಜೆಗಾಗಿ ತರುವ ಮೀಸಲು ನೀರು
ಅಗ್ಗಳಿಕೆ-ದೊಡ್ಡತನ, ಹೆಮ್ಮೆ, ಗೌರವ

ಅಗ್ಗಿ-ಅಗ್ನಿ
ಅಗ್ನಿನೇತ್ರ-ಈಶ್ವರ
ಅಗ್ರ-೧ ತುದಿ, ೨ ಶಿಖರ, ೩ ಮೊದಲು, ಮುಖ್ಯ, ೪ ಉತ್ತಮ
ಅಗ್ರಜನ್ಮ-ಬ್ರಾಹ್ಮಣ
ಅಗ್ರಜೆ-ಅಕ್ಕ
ಅಗ್ರಣಿ-ಮುಂದಾಳು, ಶ್ರೇಷ್ಠ
ಅಗ್ರಹಾರ-ರಾಜರೂ ಧನಿಕರೂ-ಶ್ರೋತ್ರಿಯರಿಗೆ ಕೊಟ್ಟ ಉಂಬಳಿಯ ಗ್ರಾಮ
ಅಘಟನ, ಅಘಟಿತ, ಅಘಟಮಾನ } ಆಗಬಾರದ ಅಸಾಧ್ಯವಾದ ಸಂಭವಿಸದ,
ಅಘ-ಪಾಪ
ಅಘಮರ್ಷಣ-೧ ಪಾಪನಾಶಕ, ೨ ಪಾಪನಾಶಕ ಸ್ನಾನ, ಸ್ನಾನ ಮಂತ್ರ
ಅಂಗಜ-೧ ಮನ್ಮಥ ೨ ಮಗ
ಅಂಗಚಿತ್ತ-ಉಡುಗೊರೆ, ಬಹುಮಾನ
ಅಂಗವಿಸು-ಅಂಗೈಸು-೧ ಒಟ್ಟಾಗಿ ಸೇರು-೨ ಹಿಡಿ
ಅಂಗಾರ-ಮಸಿ, ಇದ್ದಿಲು
ಅಂಗೀಕರಿಸು-ಸ್ವೀಕರಿಸು, ತೆಗೆದುಕೋ
ಅಂಗುಲಿ-ಅಂಗುಳಿ-ಬೆರಳು
ಅಂಗುಳೀಯಕ-ಉಂಗುರ
ಅಂಘ್ರಿ-ಪಾದ, ಅಂಘ್ರಿಪ-ಮರ
ಅಚರ-ಸ್ಥಿರ, ಚಲಿಸದ ಪರ್ವತ
ಅಚಲ-ಸ್ಥಿರ, ಚಲಿಸದ ಪರ್ವತ
ಅಚಿರ-ಶಾಶ್ವತವಲ್ಲದ
ಅಚೇತನ-೧ ಬೋಧವಿಲ್ಲದ, ಜೀವವಿಲ್ಲದ ೨ ತ್ರಾಣವಿಲ್ಲದ
ಅಚ್ಚರಸಿ-ಅಪ್ಸರಸ್ತ್ರೀ
ಅಚ್ಚಿ-ಅಕ್ಷಿ-ಕಣ್ಣು
ಅಚ್ಚಿಗ-ಅಚ್ಚೆಗ-ಗಾಬರಿ, ಕೇಡು, ವ್ಯಥೆ
ಅಚ್ಚರಿ-ಅಚ್ಚೊತ್ತು
ಅಚ್ಚು, ಅಚ್ಚುಕ-ಸಲಿಗೆ, ಸ್ನೇಹ, ಪ್ರೀತಿ
ಅಚ್ಚುಳಾಯ್ತ-ಸೇವಕ, ಊಳಿಗದವ
ಅಚ್ಛೋದ-ತಿಳಿನೀರು
ಅಚ್ಯುತ- ೧ ನಾಶವಿಲ್ಲದ, ೨ ವಿಷ್ಣು (ಕೃಷ್ಣ) ೩ ಜಾರದಿರುವ
ಅಜ-೧ ಜನನವಿಲ್ಲದ ೨ ಬ್ರಹ್ಮ ೩ ಆಡು
ಅಜಗರ-ಹೆಬ್ಬಾವು
ಅಂಚಲ-ಸೆರಗು
ಅಂಚೆ-ಹಂಸಪಕ್ಷಿ
ಅಂಜನ-ಕಾಡಿಗೆ, ಕಣ್ಣುಕಪ್ಪು, ಪಶ್ಚಿಮ ದಿಗ್ಗಜ
ಅಂಜಲಿ-ಮುಗಿದ ಕೈ; ಬೊಗಸೆ
ಅಟನ-ಸಂಚಾರ
ಅಟ್ಟಟ್ಟಿ-ದೂತತನ
ಅಟ್ಟುಳಿ-೧ ಸಮೂಹ, ೨ ಪೀಡೆ, ೩ ಬೇಟೆಯ ಮೃಗ
ಅಟ್ಟೆ-ತಲೆಯಿಲದ ದೇಹ, ಮುಂಡ
ಅಡಗು-೧ ಮಾಂಸ, ೨ ಮರೆಯಾಗು
ಅಡರ್ಪು-೧ ಏರಿಕೆ ೨ ಆಶ್ರಯ
ಅಡ್ಡಣ-ಗುರಾಣಿ
ಅಣಕ-೧ ನಕಲಿ, ೨ ಕುಚೋದ್ಯ, ೩ ಪೀಡೆ
ಅಣಲ್-ಬಾಯಿಯ ಒಳಭಾಗ, ದವಡೆ
ಅಂಡಲೆ-ಪೀಡಿಸು, ಕಾಡು, ಪೀಡೆ, ಕಾಟ
ಅಣ್ಪು-ಲೇಪನ
ಅಣ್ಮು-ಸಾಮರ್ಥ್ಯ, ಪೌರುಷ, ಸಾಮರ್ಥ್ಯವನ್ನು ತೋರಿಸು
ಅದಟ-ಪರಾಕ್ರಮಿ, ಎದೆಗಾರ
ಅದಟು-೧ ಪರಾಕ್ರಮ, ೨ ಧೈರ್ಯ, ೩ ಹೆಮ್ಮೆ
ಅದವಳಲ್-ಮರುಕ, ವ್ಯಥೆ
ಅಧೋಕ್ಷಜ-ವಿಷ್ಣು, ಕೃಷ್ಣ
ಅಧ್ವರ್ಯು-ಯಜುರ್ವೇದಜ್ಞನಾಗಿ ಯಜ್ಞದಲ್ಲಿ ಋತ್ವಿಕ್ಕಾಗಿರುವವನು
ಅಧ್ಯಾತ್ಮ-೧ ಪರಮಾತ್ಮ ೨ ಆತ್ಮಕ್ಕೆ ಸಂಬಂಧಿಸಿದ
ಅಧ್ವ-ದಾರಿ, ಮಾರ್ಗ
ಅಧ್ವರ-ಯಜ್ಞ
ಅಧ್ವಾನ-೧ ದಾರಿ, ೨ ಮಾರ್ಗ, ೩ ಕಾಡು, ೪ ಕೃಷ್ಣ, ೫ ನಿಶ್ಶಬ್ದ
ಅನಘ-೧ ಪಾಪವಿಲ್ಲದ, ೨ ತಪ್ಪಿಲ್ಲದ
ಅನಂಗ-೧ ದೇಹವಿಲ್ಲದ, ೨ ಮನ್ಮಥ
ಅನಡ್-ಅನಡ್ವಾಹ-ಹೋರಿ, ಎತ್ತು
ಅನರ್ಘ-೧ ಅನರ್ಘ್ಯ-ಅಮೌಲ್ಯವಾದ, ೨ ಉತ್ತಮವಾದ
ಅನಲ-ಅಗ್ನಿ

ಅನವದ್ಯ-೧ ದೋಷವಿಲ್ಲದ,
೨ ಅತ್ಯುತ್ತಮವಾದ
ಅನಾಮಯ-ರೋಗವಿಲ್ಲದ, ಆರೋಗ್ಯ
ಅನಾಮಿಕ-ಹೆಸರಿಲ್ಲದ
ಅನಾಮಿಕೆ-೧ ಉಂಗುರ (ಪವಿತ್ರ)ದ ಬೆರಳು
೨ ಹೆಸರಿಲ್ಲದ
ಅನಿಮಿಷ-೧ ಕಣ್ಣಿನ ಎವೆಯಿಲ್ಲದ, ದೇವತೆ
೨ ಮೀನು
ಅನಿರುದ್ಧ-೧ ಮನ್ಮಥನ ಪುತ್ರ, ೨
ತಡೆಯಿಲ್ಲದ
ಅನುಬಂಧ-ಸೇರಿಕೆ, ಪರಿಶಿಷ್ಟ
ಅನೇಕಪ-ಆನೆ
ಅನ್ಯಭೃತ-೧ ಕೋಗಿಲೆ ೨ ಬೇರೆಯವರಿಂದ
ಪೋಷಿತವಾದ
ಅಂತರ್ವತ್ನಿ-ಗರ್ಭಿಣಿ
ಅಪಕರ್ಷ-ಕಡಿಮೆಯಾಗುವಿಕೆ
ಅಪವರ್ಗ-ಮೋಕ್ಷ
ಅಪವರಕ-ಮಲಗುವ ಮನೆ
ಅಪಸವ್ಯ-ಬಲಭಾಗ
ಅಪೇತ-ಕಳೆದುಹೋದ
ಅಬ್ಬೆ-ತಾಯಿ
ಅಬ್ರಹ್ಮಣ್ಯ-ಬ್ರಾಹ್ಮಣರಿಗೆ ತೊಂದರೆ
ಯಾಗುತ್ತಿದೆಯೆಂದು ಮಾಡುವ
ಅಭಿಖ್ಯೆ-ಹೆಸರು
ಅಭಿಮಂತ್ರಣ-ಆಮಂತ್ರಣ, ಕರೆಯುವಿಕೆ,
ಮಂತ್ರಿಸುವಿಕೆ
ಅಭಿಷ್ಟುತಿ-ಹೊಗಳಿಕೆ, ಸ್ತೋತ್ರ
ಅಭಿಸಾರಿಕೆ-ಪ್ರಿಯನನ್ನು ಸೇರಲು
ಹೊರಟವಳು
ಅಭ್ಯಂತರ-೧ ಒಳಗಿನ, ೨ ಅಡ್ಡಿ, ತಡೆ
ಅಭ್ಯಾಗತ-೧ ಎದುರಿಗೆ ಬಂದ, ಅತಿಥಿ
ಅಭ್ಯುತ್ಥಾನ-ಅಭಿವೃದ್ಧಿ , ಏಳಿಗೆ,
ಗೌರವಾರ್ಥವಾಗಿ ಇದಿರು
ಗೊಂಡೇಳುವಿಕೆ
ಅಭ್ರ-೧ ಮೇಘ, ೨ ಆಕಾಶ
ಅಭ್ರಂಕಷ-ಮೇಘವನ್ನು ಮುಟ್ಟುವ
ಅಮರ್-ಅಮರು ೧ ಸೇರು, ಹೊಂದಿ
ಕೊಳ್ಳು, ಒಪ್ಪು, ೨ ಬಿಗಿಯಾಗು

ಅಮೃತಕರ-ಅಮೃತಾಂಶು-ಚಂದ್ರ
ಅಂಬಕ-ಕಣ್ಣು
ಅಂಬುಜಭವ-ಬ್ರಹ್ಮ
ಅಂಬುಜಮಿತ್ರ-ಸೂರ್ಯ
ಅಂಬುಜೋದರ-ಬ್ರಹ್ಮ
ಅಯುತ-೧ ಹತ್ತು ಸಾವಿರ ೨ ಸೇರದ
ಅರ-ಧರ್ಮ
ಅರಗುಲಿ-ಧರ್ಮದ್ರೋಹಿ
ಅರಾತಿ-ಶತ್ರು
ಅರಿಮೆ-ತಿಳಿವಳಿಕೆ
ಅರಿಯಮೆ-ಅಜ್ಞಾನ
ಅರಿಲ್-ನಕ್ಷತ್ರ
ಅರೆಯಟ್ಟು-೧ ಬೆನ್ನಟ್ಟು, ೨ ಬೆನ್ನಟ್ಟಿ ಓಡಿಸು.
ಅರ್ಘ್ಯ-೧ ಪೂಜಾದ್ರವ್ಯ, ೨ ಪೂಜೆಗಾಗಿ
ಉಪಯೋಗಿಸುವ ನೀರು, ೩ ಪೂಜ್ಯರಿಗೆ
ಕೈತೊಳೆಯಲು ಕೊಡುವ ನೀರು
ಅಲಗೆವಾರ-ಅಲಗೆಹುಲ್ಲಿನ ಜಾತಿ
ಅಲಂಪು-೧ ಚೆಲುವು, ೨ ಸುಖ, ೩ ಆಸೆ,
೪ ಹೆಚ್ಚಿಕೆ, ೫ ಸಂತೋಷ
ಅಲರ್-ಹೂ, ಹೂವರಳುವಿಕೆ
ಅಲರಂಬ-ಮನ್ಮಥ
ಅಲಿಕ-ಅಳಿಕ-ಹಣೆ
ಅಲೀಕ-ಅಳೀಕ-೧ ಸುಳ್ಳು ೨ ಅಪ್ರಿಯವಾದುದು
ಅವಕೀರ್ಣ-ಚೆದರಿದ, ಹರಡಿದ
ಅವಗಡ-೧ ವಿಪತ್ತು, ತೊಂದರೆ
೨ ಅಪಾಯ, ೩ ಸಾಹಸ
ಅವಚ್ಛನ್ನ-ಮುಚ್ಚಲ್ಪಟ್ಟ
ಅವಷ್ಟಂಭ-೧ ಹೊಂದಿರುವಿಕೆ, ೨
ಆತ್ಮಗೌರವ, ಗರ್ವ, ೩ ಕುಂಭ,
ಆಧಾರ
ಅಳ್ಕರ್-ಅಕ್ಕರೆ-ಪ್ರೀತಿ, ಪ್ರೇಮ, ಪ್ರೀತಿಸು
ಅಳ್ಕಾಡು-೧ ಪೂರ್ತಿಯಾಗಿ ನಾಶವಾಗು
೨ ಹೆದರು, ಭಯದಿಂದ ನಡುಗು
ಆ-೧ ಇಂದ, ೨ ವರೆಗೆ, ಉದಾ:
೧ ಆ ಜನ್ಮಶುದ್ಧ, ೨ ಆಕರ್ಣಾಂತ
ಬಾಣವನ್ನು ಸೆಳೆದು
ಆಕೂತ-ಇಚ್ಛೆ-ಉದ್ದೇಶ
ಆಖಂಡಲ-ಇಂದ್ರ

ಆಖ್ಯೆ-ಹೆಸರು, ಪ್ರಸಿದ್ಧಿ
ಆಙ್ಕೆ-ಅಂಕೆ-ಹಿಡಿಯುವಿಕೆ, ಧರಿಸುವಿಕೆ
ಅಂಕೆಗೊಳ್-ಪ್ರತಿಭಟಿಸು
ಆದರ್ಪಿಸು-೧ ನೋಯಿಸು, ೨ ಗರ್ವ ಭಂಗಮಾಡು
ಆರ್ಪು-ಬಲ, ಪರಾಕ್ರಮ, ಶೌರ್ಯ, ಸಾಮರ್ಥ್ಯ, ಸಾಹಸ
ಆರಘಟ್ಟ-ರಾಟೆ, ರಾಟಳ
ಆಲವಟ್ಟ-ಬೀಸಣಿಗೆ
ಆಲಾನ-ಆನೆಯನ್ನು ಕಟ್ಟುವ ಕಂಭ
ಆವಸಥ-ಮನೆ
ಆಶೀವಿಷ-ಸರ್ಪ
ಆಶು-ಬೇಗನೆ
ಆಶುಶುಕ್ಷಣಿ-ಅಗ್ನಿ, ಬೆಂಕಿ
ಇಂ-೧ ಇನಿದು, ೨ ಇನ್ನೂ, ಇನ್ನು.
ಇಕ್ಕುಳಿಗೊಳ್-ವಶಪಡಿಸಿಕೊ, ಸ್ವಾಧೀನಪಡಿಸಿಕೊ, ಹಿಡಿದುಕೊ,
ಇಂಗೋಲ್-ಕಬ್ಬು
ಇಂಗೋಲ್ವಿಲ್ಲ-ಮನ್ಮಥ
ಇಂಡೆ-೧ ರಾಶಿ, ೨ ತುಂಡು
ಇಂದು-೧ ಚಂದ್ರ, ೨ ಈ ದಿನ
ಇಂಬು-ಆಶ್ರಯ
ಇಹತ್ರ-ಈ ಲೋಕ, ಈ ಲೋಕದಲ್ಲಿ
ಈ-ಕೊಡು
ಈಂಟು-ಕುಡಿ
ಉಕ್ಕೆವ-ಉತ್ಸವ, ಸಮಾರಂಭ
ಉಕ್ಷ-ಎತ್ತು, ಹೋರಿ
ಉಗಿ-೧ ಹೆದರು, ೨ ಉಗುಳು, ೩ ಹಬೆ
ಉಜ್ಜುಗ-ಉದ್ಯೋಗ
ಉಂಡಿಗೆ-ಮುದ್ರೆ, ನಿರಾತಂಕವಾಗಿ ಹೋಗಿಬರುವಂತೆ ಅಧಿಕಾರಿಗಳು ಜನರಿಗೆ ಕೊಡುವ ಪತ್ರ
ಉತ್ಪಥ-೧ ತಪ್ಪುದಾರಿ, ೨ ಆಕಾಶಮಾರ್ಗ
ಉದಂತ-ವರ್ತಮಾನ, ಸಮಾಚಾರ
ಉದ್ಗ್ರೀವ-ಕೊರಳನ್ನು ಎತ್ತಿದ,
ಉದ್ಗಾತೃ-ಯಜ್ಞದ ಪುರೋಹಿತರಲ್ಲಿ ಸಾಮವೇದವನ್ನು ಅರಿತ ಶ್ರೋತ್ರಿಯ
ಉದ್ಯತ್-ಹುಟ್ಟುವ, ಹೊಳೆಯುವ
ಉನ್ಮೇಷ-ಕಣ್ಣು ತೆರೆಯುವಿಕೆ
ಉಪಚಯ-೧ ವೃದ್ಧಿ, ೨ ಕೂಡಿಸುವಿಕೆ, ೩ ರಾಶಿ
ಉಪಪ್ಲವ-೧ ಪೀಡೆ, ದುರದೃಷ್ಟ, ೩ (ಸೂರ್ಯಚಂದ್ರರಿಗಾಗುವ) ಗ್ರಹಣ
ಉಱಚಿಲ್ಲಿ-ಎದೆಗೆ ಕಟ್ಟಿಕೊಂಡ ಕನ್ನಡಿ
ಉಲ್ಲೋಲ-೧ ದೊಡ್ಡ ಅಲೆ ೨ ರಭಸದಲ್ಲಿ ಓಲಾಡುವಿಕೆ
ಉಳ್ಕು-ಪ್ರಕಾಶಿಸು
ಊಣೆಯ-ನ್ಯೂನತೆ, ಕೊರತೆ
ಊರ್ಮಿ-ಅಲೆ
ಊರ್ವ-ಬಡಬಾಗ್ನಿ
ಋತ್ವಿಕ್-ಋತ್ವಿಕ್ಕು-ಯಜ್ಞದ ಪುರೋಹಿತ
ಏಕ್ಕತುಳ-೧ ಸಮಾನತೆ, ೨ ಸಂಪೂರ್ಣಶಕ್ತಿ
ಎಡೆವಾಯ್- ನಡುವೆ ಬಂದು ಬೀಳು, ಅಪ್ಪಿತಪ್ಪಿ ಬರು
ಎಣೆವಕ್ಕಿ-ಚಕ್ರವಾಕ ಪಕ್ಷಿ
ಎಮ-ಒಪ್ಪಿಗೆಯನ್ನು ಸೂಚಿಸುವ ಅವ್ಯಯ
ಎರಕೆ-ಎರಂಕೆ-ರೆಕ್ಕೆ
ಎರಲೆ-ಎರಳೆ-ಜಿಂಕೆ
ಎರೆಯ-ಸ್ವಾಮಿ, ಪತಿ
ಏಂ-ಏನು
ಏಕಕುಂಡಲ-ಬಲರಾಮ
ಏಣ-ಜಿಂಕೆ
ಐಕಿಲ್-ಹಿಮ
ಐವಡಿ-ಐಮಡಿ-ಐದರಷ್ಟು
ಒಟ್ಟೈಸು-೧ ಸೇರಿಸು, ಕೂಡಿಸು, ೨ ರಾಶಿ ಮಾಡು, ೩ ಒಂದಾಗು, ೪ ಜಯಿಸು, ಸ್ಪರ್ಧಿಸು ಎದುರಿಸು
ಒಡ್ಡಣ-೧ ರಾಶಿ, ಸಮೂಹ, ೨ ಸಭೆ, ೩ ಸೈನ್ಯ, ಒಡ್ಯಾಣ, ಡಾಬು
ಒತ್ತಂಬ-ಬಲಾತ್ಕಾರ
ಒಳ್ಕು-೧ ಹರಿ, ಪ್ರವಹಿಸು, ೨ ಪ್ರವಾಹ
ಒಳ್ಗು-೧ ಸಮೂಹ, ರಾಶಿ, ೨ ಸೇರು, ಕೂಡು
ಓಜೆ-೧ ಸಾಲು, ಪಜ್ತೆ, ಕ್ರಮ, ನಿಯಮ ೨ ಬೆಡಗು, ಸೊಗಸು, ಅಂದ, ೩ ಸಮೂಹ, ರಾಶಿ, ೪ ಯೋಗ್ಯತೆ
ಓಪ-೧ ಓವ, ಪ್ರಿಯ, ೨ ರಕ್ಷಿಸುವವ

ಔಡು-ಕೆಳತುಟಿ
ಔರ್ವ-ಬಡಬಾಗ್ನಿ
ಕಂ-ನೀರು
ಕಕ್ಕಡೆ-ಭರ್ಜಿ, ಕಠಾರಿ
ಕಕ್ಷ್ಯೆ-೧ ಕೋಣೆ, ೨ ಒಳಗಿನ ಅಂಗಳ, ೩ ವಿಭಾಗ, ತರಗತಿ
ಕಂಕಣ-೧ ಕೈಬಳೆ, ೨ ನೀರಹನಿ
ಕಂಗನೆ-ಹೆಚ್ಚಾಗಿ
ಕಚ-ತಲೆಗೂದಲು, ಕೇಶ
ಕಚ್ಛಪ-ಆಮೆ
ಕಂಜ-ತಾವರೆ
ಕಟಕ-೧ ಸೈನ್ಯ ೨ ಬಳೆ, ೩ ಪರ್ವತದ ತಪ್ಪಲು ೪ ಸಮೂಹ, ಸೇನಾ ನಿವೇಶ,
ಕಟಕಿ-ನಿಂದಾಸ್ತುತಿ, ವ್ಯಂಗ್ಯವಾದ ಹೊಗಳಿಕೆ
ಕಟಾಹ-ಕೊಪ್ಪರಿಗೆ
ಕಟಿ-ಸೊಂಟ, ನಡು
ಕಡಂಗು-೧ ಔತ್ಸುಕ್ಯಗೊಳ್ಳು, ೨ ಪ್ರಯತ್ನಿಸು
ಕಡತ-ಬರೆಯಲು ಕಾಗದದಂತೆ ಹಿಂದೆ ಉಪಯೋಗಿಸುತ್ತಿದ್ದ ಮಸಿಯನ್ನು ಬಳಿದ ಬಟ್ಟೆ
ಕಡೆ-೧ ರಂಗವಲ್ಲಿ, ೨ ಕೊನೆ, (ಮೊಸರನ್ನು) ಕಡೆಯುವುದು ೩ ಮಥನ
ಕಂಡಪಡ-ಕಾಂಡಪಟ-ಪರದೆ, ತೆರೆ
ಕಂಧರ-ಪರ್ವತ
ಕತಿಪಯ-ಕೆಲವು
ಕದಪು-ಕೆನ್ನೆ
ಕದಳಿಕೆ-ಧ್ವಜ, ಬಾವುಟ
ಕದಂಪು-ಕೆನ್ನೆ
ಕನಲ್ಕೆ-ಸಿಟ್ಟು, ಕೋಪ
ಕಂದರ-ಗುಹೆ
ಕಂದುಕ-ಚೆಂಡು
ಕರಟ(ಸಂ)-ಆನೆಯ ಕಪೋಲ
ಕರಭ-ಆನೆಯ ಮರಿ
ಕರುತ್ತು-೧ ಮತ್ಸರಿಸಿ, ೨ ಗುರಿಯಿಟ್ಟು
ಕುರುವಿಡು-ಎರಕಹೊಯ್ಯು
ಕರೆಗಣ್ಮು-ದಡಮೀರು
ಕರೆಗೊರಲ-ಶಿವ
ಕರೇಣು-ಹೆಣ್ಣಾನೆ
ಕಲಂಬ-ಬಾಣ
ಕಲ್ಲೋಲ-ದೊಡ್ಡ ಅಲೆ (ತೆರೆ)
ಕವುಂಗು-ಕೌಂಗು-ಅಡಕೆಯ ಮರ
ಕಷ-ಒರೆಗಲ್ಲು
ಕಷಣ-ಉಜ್ಜುವಿಕೆ, ತಿಕ್ಕುವಿಕೆ
ಕಳತ್ರ-ಹೆಂಡತಿ
ಕಾ-ರಕ್ಷಿಸು, ಕಾಪಾಡು
ಕಾಕಪಕ್ಷ-೧ ಕಾಗೆಯ ರೆಕ್ಕೆ ೨ ಬಾಲಕರಿಗೆ ಬಿಡುವ ಒಂದು ಬಗೆಯ ಜುಟ್ಟು
ಕಾಂಡ-ಬಾಣ
ಕಾದಲ್-೧ ಪ್ರೇಮ ೨ ಯುದ್ಧ ಮಾಡಲು, ಜಗಳವಾಡಲು
ಕಾದಲ್ಮೆ-ಪ್ರೇಮ
ಕಾದಲ-ಪ್ರಿಯ
ಕಾದಲೆ-ಪ್ರಿಯೆ
ಕಾಪು-ಕಾಹು-ರಕ್ಷಣೆ, ಕಾವಲು
ಕಾಮ-೧ ಇಚ್ಛೆ, ಅಪೇಕ್ಷೆ ೨ ಪ್ರೇಮ, ಪ್ರೀತಿ, ೩ ಮನ್ಮಥ ೪ ಮೂರನೆಯ ಪುರುಷಾರ್ಥವಾದ ಪ್ರಪಂಚದ ಸುಖಭೋಗ
ಕಾಯಜ-ಕಾಯಜನ್ಮ-ಕಾಯಜಾತ, ಮನ್ಮಥ, ಕಾಮ
ಕಾವಣ-ಚಪ್ಪರ
ಕಾಹುರ-೧ ಗಾಬರಿ, ತಳವಳ, ೨ ಉದ್ವೇಗ
ಕಾಳಜಿ-೧ ಎಚ್ಚರ, ಜಾಗ್ರತೆ, ೨ ದಾಕ್ಷಿಣ್ಯ
ಕಾಳ್ಗೆಡೆ, ಕಾಳುಗೆಡೆ-ಕೆಟ್ಟ ಮಾತನ್ನಾಡು, ನಿಂದಿಸು, ೨ ಹಾಳು ಮಾಡು
ಕಿಂಕರ-ಸೇವಕ, ಭಕ್ತ
ಕಿಂಶುಕ-ಮುತ್ತುಗದ (ಗಿಡ) ಮರ
ಕಿತ್ತಡಿ-ಋಷಿ, ಯೋಗಿ
ಕಿನಿಸು-ಕೋಪ, ಕೋಪಿಸು
ಕಿಮುಳ್ಚು-ಕಿವುಚು
ಕಿಸುರ್-೧ ಸಿಟ್ಟು, ೨ ಜಗಳ, ೩ ಅಸಹ್ಯ
ಕಿಳಿರ್-ಕುದುರೆಯ ಕೂಗು, ೨ ಕೆನೆತ ಉದಾ-ಕಿಳಿರ್ವ ಹಯಂಗಳ್
ಕೀನಾಶ-೧ ಮಾಂಸಾಹಾರಿ, ೨ ನಿಋತಿ ರಾಕ್ಷಸ, ೩ ಯಮ, ೪ ಬಡವ, ದೀನ
ಕೀರ-ಗಿಳಿ

ಕೀರು-೧ ಅರಚು, ಚೀರು, ೨ ಸಿಟ್ಟುಗೊಳ್ಳು
ಇ ಗೀರು
ಕೀಲ-ಕೀಲಕ-ಕೀಲು, ಚಿಲಕ, ಅಗುಳಿಗೂಟ
ಕೀಲಾರ-ಕ್ಷೀರಾಗಾರ-೧ ಹಾಲುಮಾರುವ
ಮನೆ ೨ ಕ್ಷೀರಸಮುದ್ರ
ಕೀಸು-ಕಳವು ಮಾಡು, ನುಣುಪು ಮಾಡು
ಕು-೧ ಕೆಟ್ಟ, ಹೀನ, ಹಾಳು, ೨ ಭೂಮಿ
ಕುಕಿಲ್-೧ ಕೋಗಿಲೆಯ ಕೂಗು
೨ ಕೋಗಿಲೆಯಂತೆ ಕೂಗು
ಕುಕ್ಕುಟ-ಕೋಳಿ
ಕುಜ-೧ ಮರ, ೨ ಅಂಗಾರಕಗ್ರಹ
ಕುಂಚಿತ-ಮುರುಟಿದ, ಮುದುರಿದ, ಬಗ್ಗಿದ
ಕುಂಜರ-ಆನೆ, ಶ್ರೇಷ್ಠ, ಉತ್ತಮ
ಕುಟೀರ-ಗುಡಿಸಲು, ಪರ್ಣಶಾಲೆ
ಕುಟ್ಟಿಮ-ನೆಲಗಟ್ಟು
ಕುಟ್ಮಲ-ಮೊಗ್ಗು; ಮುಗುಳು
ಕುಠಾರಧರ-ಪರಶುರಾಮ
ಕುಡು-೧ ಕೊಡು, ೨ ಡೊಂಕಾದ
(ಉದಾ: ಕುಡುಗೋಲ್)
ಕುಡುವಿಲ್ಲ-ಮನ್ಮಥ
ಕುತ್ತ-೧ ರೋಗ, ೨ ದೋಷ
ಕುತ್ತು-೧ ಹೊಡಿ, ಬಡಿ, ಆಯುಧದಿಂದ
ಇರಿ, ೨ ಬಗ್ಗಿಸು, ತಗ್ಗಿಸು
ಕುನುಂಗು-೧ ಕುಗ್ಗು, ಬಗ್ಗು, ೨ ಹಿಂಜರಿ,
ಇ ಮುದುರು
ಕುಂದಣ-ಕುಂದನ-ಶುದ್ಧವಾದ ಚಿನ್ನ
ಕುಂದು-೧ ಕ್ಷೀಣವಾಗು, ಕಡಿಮೆಯಾಗು
೨ ಕೊರತೆ
ಕುಂಭೀರ-ಕುಂಭೀಲ-ಮೊಸಳೆ
ಕುರವ-ದ್ವೀಪ
ಕುರವಕ-ಗೋರಂಟೆಗಿಡ, ಮದರಂಗಿ ಗಿಡ
ಕುರುಳ್-ಕುರುಳ್-೧ ಮುಂಗುರುಳು
ಕೂದಲು, ೨ ಬೆರಣೆ
ಕುಲಾಯ-ಹಕ್ಕಿಯ ಗೂಡು
ಕುಲಾಲ-ಕುಂಬಾರ
ಕುಲಿಶ-ವಜ್ರಾಯುಧ
ಕುಲೀನ-೧ ಒಳ್ಳೆಯ ಕುಲದಲ್ಲಿ
ಹುಟ್ಟಿದವನು, ೨ ಸಭ್ಯ
ಕುವರ-ಕುಮಾರ-ಮಗ
ಕುವಲಯ-೧ ನೈದಿಲೆ, ೨ ಭೂಮಂಡಲ
ಕುಶ-೧ ದರ್ಬೆಹುಲ್ಲು, ೨ ನೀರು, ಇ,
ರಾಮನ ಮಗ, ೪ ಒಂದು ದ್ವೀಪ
ಕುಸುಮ-ಹೂ
ಕುಸುಮಾಯುಧ-ಮನ್ಮಥ
ಕೃಚ್ಛ್ರ-೧ ಕಷ್ಟ, ಆಪತ್ತು, ೨ ಕಠಿನವಾದ
ಒಂದು ವ್ರತ
ಕೃತ-೧ ಮಾಡಿದ, ೨ ಕಾರ್ಯ, ಕೆಲಸ,
ಇ ಮೊದಲನೆಯ ಯುಗ
ಕೃತಕ-ಮನುಷ್ಯನಿಂದ ಮಾಡಲ್ಪಟ್ಟ,
ಸಹಜವಲ್ಲದ, ನಿಜವಲ್ಲದ
ಕೃತಕೃತ್ಯ, ಕೃತಾರ್ಥ-ಮಾಡಬೇಕಾದುದನ್ನು
ಮಾಡಿ ಮುಗಿಸಿದವನು, ಧನ್ಯ
ಕೃತಘ್ನ-ಮಾಡಿಸಿಕೊಂಡ ಉಪಕಾರವನ್ನು
ನೆನೆಯದವನು
ಕೃತಾಂತ-ಯಮ
ಕೃತಿ-೧ ಕವಿತೆ, ಗ್ರಂಥ, ೨ ನಿಪುಣ, ಚತುರ
ಇ ಕಾರ್ಯ
ಕೃತಿಪತಿ-೧ ಕಾವ್ಯದ ನಾಯಕ, ೨ ಕಾವ್ಯವನ್ನು
ಬರೆದವನು
ಕೃತ್ತಿ-ಚರ್ಮ, ತೊಗಲು
ಕೃತ್ಸ್ನ-ಸಂಪೂರ್ಣ, ಎಲ್ಲಾ
ಕೃಪಾಣ-ಕತ್ತಿ
ಕೃಪಾನಿಧಿ, ಕೃಪಾಳು-ಹೆಚ್ಚಾದ ಕೃಪೆ
(ದಯೆ)ಯುಳ್ಳವನು
ಕೃಪೆ-ದಯೆ
ಕೃಶಾನು-ಅಗ್ನಿ
ಕೆಕ್ಕರಿಸು-ಕೆಂಪಾಗು
ಕೆಕ್ಕೆ-ಕೆನ್ನೆ
ಕೆಂಗರಿಗೋಲ್-ಕೆಂಪಾದ ಗರಿಗಳುಳ್ಳ ಬಾಣ
ಕೆಚ್ಚು-೧ ಶೌರ್ಯ, ಬಲ, ಧೈರ್ಯ,
ಗರ್ವ ೨ ಮರದಲ್ಲಿ ಗಟ್ಟಿಯಾಗಿರುವ
ಒಳಭಾಗ, ಚೇಗು
ಕೆನ್ನಂ-ಚೆನ್ನಾಗಿ, ಬಹಳವಾಗಿ
ಕೆನ್ನೀರ್-೧ ಕೆಂಪಾದ ನೀರು, ೨ ರಕ್ತ
ಕೆನ್ನೆ-ಕಪೋಲ, ಗಲ್ಲ
ಕೆಮ್ಮನೆ, ಕೆಮ್ಮಗೆ-ಸುಮ್ಮನೆ, ನಿಷ್ಕಾರಣವಾಗಿ

ಕೇಕರ-ಕುಡಿನೋಟ, ಓರೆ ನೋಟ
ಕೇಣ-೧ ಮತ್ಸರ, ಸಿಟ್ಟು, ೨ ಹಟ ೩ ದುರಾಸೆ
ಕೇರು-ಗೋಡೆ, ೨ ಮೊರದಲ್ಲಿ ಧಾನ್ಯದ ಹೊಟ್ಟನ್ನು ಹೋಗಿಸುವುದು
ಕೇಲಿ-ಕೇಳಿ, ವಿನೋದ, ಆಟ, ಕ್ರೀಡೆ
ಕೇವಣಿಸು-ರತ್ನವನ್ನು ಚಿನ್ನ ಬೆಳ್ಳಿಗಳ, ಆಭರಣಗಳಿಗೆ ಮೆಟ್ಟು, ಕೆತ್ತು
ಕೈತವ-ಮೋಸ
ಕೈವಾರ-ಸ್ತುತಿ, ಹೊಗಳಿಕೆ
ಕೊಂಡುಕೊನೆ-ಹೊಗಳು, ಕೊಂಡಾಡು
ಕೊರಚಾಡು-ಮರ್ಮೋದ್ಘಾಟನ ಮಾಡು, ನಿಂದಿಸು
ಕೊಸಗು-ಬೆಟ್ಟದಾವರೆ
ಕೋಟರ-ಮರದ ಪೊಟರೆ
ಕೋಟೀರ-ಕಿರೀಟ
ಕೋಡು-ಶೀತವಾಗಿರು ೨ ಹೆದರು
೩ ಶಿಖರ, ೪ ಕೊಂಬು ೫ ಭಯ ೬ ದಾನ
ಕೋದಂಡ-ಬಿಲ್ಲು
ಕೋರತು-ಮೊಗ್ಗು
ಕೋರಯಿಸು-ಕಣ್ಣನ್ನು (ಹೊಳೆದು) ಚುಚ್ಚು
ಕೋಲ್-೧ ಬಾಣ ೨ ಕೋಲು
ಕೋಲ-೧ ಹಂದಿ ೨ ತೆಪ್ಪ
ಕೋಳ್ಮೃಗ-ಭಯಂಕರವಾದ ಮೃಗ
ಕೌಕ್ಷೇಯಕ-ಕತ್ತಿ
ಕೌಟವಿ-ಬೆತ್ತಲೆಯಾದ ಹೆಂಗಸು
ಕೌಣಪ-ರಾಕ್ಷಸ
ಕೌತುಕ, ಕೌತೂಹಲ } ೧ ಇಚ್ಛೆ, ಕುತೂಹಲ, ೨ ಆಶ್ಚರ್ಯ, ೩ ಆನಂದ, ಆಹ್ಲಾದ
ಕೌಮುದಿ-ಬೆಳುದಿಂಗಳು
ಕೌವರೆ-ಬೆಳುದಿಂಗಳು
ಕೌವರೆ-ಸಂಭ್ರಮ, ಸಡಗರ
ಕೌಶೇಯ-ರೇಷ್ಮೆಯ ವಸ್ತ್ರ
ಕೌಸ್ತುಭ-ವಿಷ್ಣು (ಕೃಷ್ಣನ) ವಿನ ಎದೆಯ ಮೇಲಿರುವ ರತ್ನ
ಕೌಳುಡೆ-ತಲೆ (ಗಿಂ)ದಿಂಬು
ಕ್ರೋಡ-೧ ಎದೆ, ೨ ಹಂದಿ
ಕ್ಲಿನ್ನ-ಒದ್ದೆಯಾದ
ಕ್ಷೇಳ-ವಿಷ
ಕ್ಷ್ವೇಡ-ವಿಷ
ಖ-ಆಕಾಶ
ಖಗ-೧ ಸೂರ್ಯ, ೨ ಹಕ್ಕಿ, ೩ ಬಾಣ
ಖಚರ-೧ ಸೂರ್ಯ ೨ ಹಕ್ಕಿ, ೩ ಗಂಧರ್ವ
ಗ-ಹೋಗುವ, ಚಲಿಸುವ
ಗಂಗಾಳ-ತಟ್ಟೆ
ಗಟ್ಟಿವಳ್ತಿ-ಸುಗಂಧವನ್ನು ಮಾರ ತಕ್ಕವಳು
ಗಿರು-ಪರಿಭಾವಿಸು, (ಭಾವ) ಗೆತ್ತು-ತಿಳಿದು
ಗಿಲನ-ನುಂಗುವುದು
ಗೀಷ್ಪತಿ-ಗುರು, ಬೃಹಸ್ಪತಿ
ಗುಂಜತ್-ಝೇಂಕರಿಸುವ 'ಗುಯ್' ಎಂದು ಶಬ್ದ ಮಾಡುವ
ಗುಣಕರುಗೊಳ್-ಮೆಚ್ಚು, ಪ್ರೀತಿಸು
ಗೂಹನ-ಅಡಗಿಸುವಿಕೆ, ಮರೆ ಮಾಡುವಿಕೆ
ಗೊಡ್ಡಾಟ-ತೊಂದರೆ ಪಡುವ ಆಟ ತೊಡಕಾದ ಕಾರ್ಯರೂಪವಾದ ಆಟ ಜ. ವಿ. ೧೯-೫೯
ಗೋ-೧ ಹಸು, ೨ ಭೂಮಿ, ೩ ಸ್ವರ್ಗ, ೪ಕಿರಣ, ೫ ವಾಕ್ಕು, ೬ ನೀರು, ೭ ಕಣ್ಣು
ಗೋತ್ರ-೧ ವಂಶ, ಕುಲ, ೨ ಪರ್ವತ, ೩ಕರುಹಟ್ಟಿ ಗೋಪ-ಗೋಪಾಲ-ಈ ಮೇಲಿನವುಗಳ ರಕ್ಷಕ
ಗೋವರ್ಧನ-ಬೃಂದಾವನದ ಒಂದು ಗಿರಿ
ಗೋಸ್ತನಿ-ದ್ರಾಕ್ಷಿ
ಗ್ರಾವ-ಕಲ್ಲು ೨ ಪರ್ವತ
ಗ್ರೈವೇಯಕ-ಕೊರಳ ಹಾರ
ಘಟ-ಗಡಿಗೆ ಮೊದಲಾದ ಮಣ್ಣು ಪಾತ್ರೆ ೨ ದೇಹ, ೩ ಆನೆಯ ಹಿಂಡು
ಘಟನ, ಘಟನೆ-೧ ಕೂಡುವಿಕೆ, ಸೇರುವಿಕೆ ೨ ಆಗುವಿಕೆ, ಸಂಭವಿಸುವಿಕೆ,
ಘಟಸರ್ಪ-ಮಡಕೆ, ಗಡಿಗೆಗಳಲ್ಲಿ ಬುಟ್ಟಿಯಲ್ಲಿಡುವಂತೆ ಇಟ್ಟು ಸಾಕಿದ ನಾಗರಹಾವು, ಸರ್ಪ
ಘಟೀ-ಘಟಗಳ ಗುಂಪು (ಸಾಲು)
ಘನೋಪಲ-ಆಲಿಕಲ್ಲು
ಘರಟ್ಟ-ಬೀಸುವ ಕಲ್ಲು

ಘರ್ಮಾಂಬು-ಬೆವರುನೀರು
ಘಸಣಿ-ಗಸಣಿ-ಆತಂಕ, ಚಿಂತೆ, ವ್ಯಸನ
ಘೃಣಿ-ಕಿರಣ, ಕಾಂತಿ, ಪ್ರಕಾಶ
ಘೋಷ-ದೊಡ್ಡ ಶಬ್ದ, ಕೂಗು, ಗೊಲ್ಲರಹಳ್ಳಿ
ಚಕಿತ-ಹೆದರಿದ
ಚಕ್ಕಂದ-ಹರಟೆ, ವಿನೋದದ ಮಾತು
ಚಂಚು-ಕೊಕ್ಕು
ಚಟ-ಅಭ್ಯಾಸದಿಂದ ಬಂದ ಅಭಿರುಚಿ; ದುರಭ್ಯಾಸ, ಚಾಳಿ
ಚಟ್ಟ-ಛಾತ್ರ-ವಿದ್ಯಾರ್ಥಿ
ಚಣ-ಸಮರ್ಥ, ನಿಪುಣ
ಚಂಡಿಕೆ-ಜುಟ್ಟು
ಚಂದ್ರಕಿ-ನವಿಲುಗರಿ
ಚಮೂ-ಸೇನೆ, ಚಮೂಪತಿ-ಸೇನಾಪತಿ
ಚೆಲ್ಲ-ಸರಸ; ಹೆಚ್ಚಿನ ಆನಂದ; ವಿನೋದ; ಸುಖ; ಹರ್ಷ
ಚೆಲ್ಲಗಾರ್ತಿ-ರಸಿಕಳು; ವಿನೋದಿನಿ
ಚಾಟು-೧ ಮರುಳುಗೊಳಿಸುವ, ಕೊಂಡಾಟದ, ಉಬ್ಬಿಸುವ ಮಾತು ೨ ಪ್ರಿಯೋಕ್ತಿ
ಚೂಣಿ-ಸೈನ್ಯದ ಮುಂಭಾಗ
ಚೊಕ್ಕೆಯ-೧ ಉಪಾಯ, ೨ ನೈಪುಣ್ಯ; ಯುದ್ಧ ನೈಪುಣ್ಯ
ಛಡಾಳಿಸು-ಉದ್ರೇಕಗೊಳ್ಳು; ರಭಸ ಹೆಚ್ಚು; ರೇಗು; ಪ್ರಜ್ವಲಿಸು
ಛನ್ನ-ಮುಸುಕಿದ
ಛವಿ-೧ ಬಣ್ಣ, ೨ ಸೌಂದರ್ಯ
ಛಾತ್ರ-ವಿದ್ಯಾರ್ಥಿ
ಜಕ್ಕ-ಚಕ್ರ, ಜಕ್ಕವಕ್ಕಿ-ಚಕ್ರವಾಕ
ಜಕ್ಕಂದೊಳಲಿ-ಕೋಣ
ಜಟಮಟಿಸು-ಸಡಗರ ಪಡು
ಜಡಿ-೧ ಹೆದರಿಸು, ಗದರಿಸು, ಗರ್ಜಿಸು; ೨ ಬೀಸು ೩ ಝಳಪಿಸು
ಜಂಭ-ಒಬ್ಬ ರಾಕ್ಷಸ
ಜಂಭಾರಿ-ಜಂಭಭೇದಿ-ಇಂದ್ರ
ಜಾಲ್ಮ-ನೀಚ
ಜಾಳಿಗೆ-ಹೆಣೆದ ಚೀಲ ೨ ಹಣದ ಚೀಲ ೩ ಬಲೆ
ಜಾಳಿಸು-ಅಲುಗಾಡಿಸು ೨ ಅಲಕ್ಷಿಸು
ಜಿಘಾಂಸು-ಕೊಲ್ಲುವ ಇಚ್ಛೆಯುಳ್ಳವ ೨ ವೈರಿ
ಜೀವಾತು-ಪ್ರಾಣವನ್ನುಳಿಸುವ ಔಷಧಿ; ಸಂಜೀವನ ೨ ಜೀವಸತ್ತ್ವ
ಜೆಂಕಿಸು-೧ ಜಂಕಿಸು-ಹೆದರಿಸು, ನಿಂದಿಸು ೨ ಕಿರಿಚು
ಜೋಡೆ-ಜಾರಿಣಿ
ಝಟಿತಿ-ಬೇಗ
ಝಷ-ಮೀನು
ಝಷಕೇತನ-ಝಷಧ್ವಜ-ಮನ್ಮಥ
ಟಂಕ-೧ ಕಲ್ಲುಳಿ, ೨ ಮುದ್ರೆ ಹೊಡೆದಿರುವ ನಾಣ್ಯ
ಟೆಕ್ಕೆ-ಟೆಕ್ಕೆಯ-ಧ್ವಜ, ಬಾವುಟ
ಟೊಣೆ-ಮೋಸ ಮಾಡು
ಡಂಬರ-೧ ಪ್ರಖ್ಯಾತ, ೨ ಆಡಂಬರ, ೩ ಹೆಮ್ಮೆ ಗರ್ವ, ೪ ಗುಂಪು, ಸಮೂಹ
ಡಾಮರ (ಸಂ) - ೧ ಭಯಂಕರ, ಅದ್ಭುತ ೨ ದಂಗೆ, ಗಲಭೆ, ೩ ಅಕಸ್ಮಾತ್ತಾದ ಅದ್ಭುತ ಘಟನೆ, ವಿಪತ್ತು
ಡಿಂಗರ-ಡಿಂಗರಿಗ-ಸೇವಕ, ದಾಸ
ಡಿಂಡಿಮ-ಸಣ್ಣ ಡೋಲು
ಡಿಂಡೀರ-ಸಮುದ್ರದ ನೊರೆ, ಬುರುಗು
ಡಿಳ್ಳ-ದಿಗಿಲು, ಭಯ
ಡೀನ-೧ ಮೇಲೆ ಹಾರಿಕೆ, ೨ ಹಕ್ಕಿಯ ಹಾರಾಟ
ಢಾಲ-ಡಾಲು-ಗುರಾಣಿ
ತಕ್ಕಯಿಸು-ತಕ್ಕೈಸು-ತಕ್ಕಿಸು-ಅಪ್ಪಿಕೊಳ್ಳು, ಆಲಿಂಗಿಸು
ತಕ್ಕೂರ್ಮೆ-೧ ಯೋಗ್ಯತೆ ೨ ಉಚಿತ, ಯೋಗ್ಯ
ತಣ್ಮಲೆ-ವ್ಯಾಪಿಸು
ತತ-೧ ವಿಸ್ತಾರಿಸಿದ, ವ್ಯಾಪಿಸಿದ, ೨ ವೀಣೆಯೇ ಮೊದಲಾದ ತಂತಿಯ ವಾದ್ಯ
ತತಿ-ಸಮೂಹ, ಗುಂಪು; ಹಿಂಡು, ಸಾಲು
ತತ್ತರ-೧ ನಡುಕ ೨ ಕಳವಳ; ಗಾಬರಿ
ತತ್ತುಕ-ಹುಡುಗ, ಒಡನಾಡಿಯಾದ ಹುಡುಗ
ತತ್ತ್ವ-ನಿಜಸ್ಥಿತಿ, ಸತ್ಯಸ್ಥಿತಿ, ೨ ಸಿದ್ಧಾಂತ ೩ ಪರಮಾತ್ಮ
ತತ್ಪರ-೧ ಅದರಲ್ಲೇ ಆಸಕ್ತನಾದವ; ಅದನ್ನೇ ಅವಲಂಬಿಸಿರುವವ, ೨ ಅದಾದನಂತರ
ತಥ್ಯ-ಸತ್ಯ
ತದೀಯ-ಅದರ; ಅವಳ; ಅವನ; ಅವರ

ತನತು-ತನತ್ತು-ತನ್ನದು
ತನು-೧ ತೆಳ್ಳಗಿರುವ, ಕೃಶವಾದ, ಸಣ್ಣ,
೨ ದೇಹ
ತನುತ್ರ-ಕವಚ, ಅಂಗಿ
ತನೂರುಹ-ರೋಮ
ತಂತು-೧ ನೂಲು, ಎಳೆ, ೨ ಸಂತತಿ
ತಂತುವಾಯ-೧ ನೇಯ್ಗೆಯವನು ೨
ಜೇಡರ ಹುಳು
ತಂತ್ರ-೧ ಉಪಾಯ, ಯುಕ್ತಿ, ೨ ಕ್ರಮ
೩ ಅಧೀನತೆ ೪ ಸೈನ್ಯ ೫ ಶಾಸ್ತ್ರ,
ಶಾಸ್ತ್ರಗ್ರಂಥ ೬ ಆಡಳಿತ ೭ ಮಂತ್ರ
ಶಾಸ್ತ್ರ ೮ ನೆಯ್ಗೆ; ನೂಲು; ಮಗ್ಗ
ತಂದಲ್-೧ ಹನಿಮಳೆ, ೨ ಸೋನೆ,
೩ ಪ್ರವಾಹ
ತಮಂಗ-ತವಂಗ-ಅಟ್ಟಳೆ
ತಂಬುಲ-ತಾಂಬೂಲ-ಎಲೆಯಡಕೆ, ವೀಳೆಯ
ತರಂಗ-ಅಲೆ
ತರಂಗಿಣೀ-ನದಿ
ತರಣ-ದಾಟುವಿಕೆ, ಪಾರಾಗುವಿಕೆ
ತರಣಿ-೧ ಸೂರ್ಯ ೨ ಹಡಗು, ದೋಣಿ
ತರಹರ-ತಾಳ್ಮೆ, ಸಹನೆ, ತಡೆಯುವಿಕೆ
ತರಹರಿಸು-ಸಹಿಸು, ತಾಳಿಕೊಳ್ಳು
ತರಳ-೧ ಎಳೆಯ ಮಗು, ಹುಡುಗ,
೨ ಚಂಚಲ,
ತರಿ-ದೋಣಿ, ಓಡ, (ಧಾತುವಾದರೆ)
ಹೊಡಿ, ಕತ್ತರಿಸು, ತುಂಡುಮಾಡು
ತರ್ಕ-೧ ಶಾಸ್ತ್ರಗಳಲ್ಲೊಂದು, ೨ ವಾದ, ಚರ್ಚೆ,
ಊಹೆ
ತಲ್ಪ-೧ ಹಾಸಿಗೆ ೨ ಮಂಚ ೩ ಹೆಂಡತಿ
೪ ಮಾಳಿಗೆ
ತಲ್ಲಜ-ಉತ್ತಮ, ಶ್ರೇಷ್ಠ, ಚೆನ್ನಾದ
ತಲ್ಲಣ-ತಲ್ಲಳ-೧ ಹೆದರಿಕೆ, ಗಾಬರಿ,
ಗಲಿಬಿಲಿ, ೨ ತವಕ
ತವಗ-ತವಂಗ-ನಾಟ್ಯರಂಗ
ತವದೊಣೆ-ಅಕ್ಷಯ ತೂಣೀರ, ಬರಿದಾಗದ
ಬತ್ತಳಿಕೆ
ತವರಾಜ-ಉತ್ತಮವಾದ ಒಂದು ಬಗೆಯ
ಸಕ್ಕರೆ
ತವಿಲ್-೧ ನಾಶ ೨ ಬಡತನ, ೩ ಕಷ್ಟ
ತವು-೧ ಕಡಿಮೆಯಾಗು ೨ ನಾಶವಾಗು
೩ ಕ್ಷಯಿಸು
ತವೆ-೧ ಚೆನ್ನಾಗಿ ೨ ಹೆಚ್ಚಾಗಿ, ೩
ಸಂಪೂರ್ಣವಾಗಿ
ತಳತಂತ್ರ-ಕೈಕೆಳಗಿನ ಮುಖ್ಯ ಸೈನ್ಯ
ತಳಪಟ-ಅಸ್ತವ್ಯಸ್ತ, ಬಯಲು
ತಳಮಳ-ಗಾಬರಿ, ಕಳವಳ, ಗಲಿಬಿಲಿ
ತಳರ್-ಚಲಿಸು, ಹೊರಡು, ಅಲ್ಲಾಡು
ತಳರ್ಚು-ಹೊರಡಿಸು
ತಳಿಗೆ-ಹರಿವಾಣ, ತಟ್ಟೆ
ತಳಿರ್-ಚಿಗುರು
ತಳೆ-೧ ಧರಿಸು, ಪಡೆ, ೨ (ನಾ) ಕೊಡೆ, ಛತ್ರಿ
ತಳ್ಕೆ-ಆಲಿಂಗನ ; ಅಪ್ಪುಗೆ
ತಾರು-ಒಣಗು, ಕೃಶವಾಗು, ಬತ್ತು
ತಿರು-ಬಿಲ್ಲಿನ ಹೆದೆ (ಹುರಿ)
ತೀವು-ತುಂಬು
ತೀರಮೆ-ಪೂರ್ಣವಾಗುವಿಕೆ
ತೂಪಿರಿ-ಥೂ ಉಫ್ ಎಂದು ದೃಷ್ಟಿ
ಪೀಡಾಪರಿಹಾರಕ್ಕಾಗಿ ಊದು
ತೆಲ್ಲಯಿಸು-ತೆಲ್ಲೈಸು-ಮಂದವಾಗು,
ದಟ್ಟವಾಗು,
ಅಧಿಕವಾಗು, ತ್ರಾಣಗೊಳ್ಳು
ತೋಟಿ-ಸ್ಪರ್ಧೆ
ತೊಂಡುತೊಳಸು-ಸ್ವೇಚ್ಛಾಚಾರದ
ತೊಡಕು-ಮೊಂಡತನ
ತೊನೆ-ಓಲಾಡು, ತೂಗಾಡು, ಜೋಲಾಡು
ದಕ್ಷಿಣಾವರ್ತ-ಪ್ರದಕ್ಷಿಣಾಕಾರವಾಗಿ
ಸುತ್ತುವಿಕೆ,
ಸುತ್ತುವ ಸುಳಿ
ದಂಡಿಗೆ-ಪಲ್ಲಕ್ಕಿ, ವೀಣಾದಂಡ, ವೀಣೆ
ದಂಡಧಾರ-ಯಮ
ದಂತಚ್ಛದ-ತುಟಿ (ಅಧರ)
ದಂತಾವ(ಲ)ಳ-ಆನೆ
ದಾಂಗುಡಿ-ನೀಳವಾದ ಕುಡಿ, ಹಗ್ಗದಂತೆ
ನೀಳವಾಗಿ ಡೊಂಕು ಡೊಂಕಾಗಿ
ಹಬ್ಬಿದ ಬಳ್ಳಿಯ ಕುಡಿ
ದಿಟ್ಟಿಸು-ನೋಡು

ದಿಂಡುಗೆಡೆ-ಬಾಳೆಯ ದಿಂಡಿನಂತೆ ನೆಲದ ಮೇಲೆಬೀಳು, ಹಾಗೆ ಬಿದ್ದು ವಂದಿಸು
ದುರ್ಘಟ-ಆಗಲು (ಮಾಡಲು) ಕಷ್ಟವಾದ
ದುರ್ದಿನ-ಮೋಡವು ಮುಸುಕಿ ಸೂರ್ಯನು ಕಾಣಿಸದ ದಿನ
ದುಹಿತೃ-ಮಗಳು
ದೂದವಿ-ದೂತಿ
ದೂಸಿಗ-ಜವಳಿಯ ವ್ಯಾಪಾರಿ
ದೊಂದುಳಿ-ಸಮೂಹ
ಧಾಮ-೧ ಕಾಂತಿ; ಮನೆ ೩ ದೇಹ, ೪ ವೈಭವ
ಧಾಮನಿಧಿ-ಸೂರ್ಯ
ಧೀವರ-೧ ವಿಶೇಷ ಬುದ್ಧಿಶಾಲಿ ೨ ಬೆಸ್ತರವನು ಅಂಬಿಗ
ಧುನಿ-ನದಿ
ಧುರ-ಯುದ್ಧ
ಧುರೀಣ-ಕರ್ತವ್ಯನಿರ್ವಾಹಕ
ಧೂರ್ಜಟಿ-ಶಿವ
ನಕ್ತ-ರಾತ್ರಿ
ನಕ್ತಂಚರ-ರಾಕ್ಷಸ
ನಗ-ಪರ್ವತ, ೨ ಮರ (ಕನ್ನಡವಾದರೆ) ಒಡವೆ
ನಗವೈರಿ-ಇಂದ್ರ
ನದಿಪು-ನಂದಿಸು, ಆರಿಸು
ನನ್ನಿ-೧ ಸತ್ಯ, ೨ ಪ್ರೀತಿ
ನರ್ಮ-ವಿನೋದ, ಪರಿಹಾಸ; ಆಟ
ನಲಿನಿ-ತಾವರೆ
ನವಾಯಿ-೧ ಅಸಾಧಾರಣಸೌಂದರ್ಯ ೨ ಠೀವಿ ೩ ಹೊಸದು
ನಹಿ-ಇಲ್ಲ, ಅಲ್ಲ
ನಾಗ-ಸರ್ಪ ೨ ಆನೆ
ನಾಡೆ-ಚೆನ್ನಾಗಿ, ವಿಶೇಷವಾಗಿ, ಹೆಚ್ಚಾಗಿ
ನಾಣ್-ನಾಚಿಕೆ, ಸಂಕೋಚ, ಲಜ್ಜೆ
ನಾರಾಚ-ಬಾಣ
ನಾರಿ-೧ ಬಿಲ್ಲಿನ ಹಗ್ಗ ೨ ಸ್ತ್ರೀ
ನಿಕರ-೧ ಸಮೂಹ, ಗುಂಪು
ನಿಕಾಯ-ಸಮೂಹ, ಗುಂಪು ೨ ಮನೆ
ನಿಕಾರ-ನಿಂದೆ, ಅಪಮಾನ
ನಿಕುಂಜ-ಲತಾಗೃಹ, ಗಿಡಬಳ್ಳಿಗಳ ಪೊದೆ
ನಿಗೂಹನ-ಮುಚ್ಚುವಿಕೆ
ನಿಚ್ಚಟ-ನಿಷ್ಕಪಟ
ನಿಟಿಲ-ಹಣೆ
ನಿಟ್ಟೈಯ್ದೆ, ನಿಟ್ಟೈದೆ-ದೀರ್ಘಸುಮಂಗಲಿ
ನಿಟ್ಟಿಸು-ನೋಡು
ನಿಧನ-ಮರಣ, ಸಾವು
ನಿಮಿತ್ತ-೧ ಕಾರಣ ೨ ಗುರಿ, ಉದ್ದೇಶ ೩ ಶಕುನ
ನಿಮಿರ್-ನಿಮಿರು-ಚಾಚು, ಹರಡು, ೨ ನೆಟ್ಟಗಾಗು
ನಿಮಿರ್ಚು-ನೆಟ್ಟಗೆ ಮಾಡು, ಪ್ರಸರಿಸು
ನಿಮ್ನಗೆ-ನದಿ
ನಿಯತಿ-ವಿಧಿ, ಅದೃಷ್ಟ
ನಿರಯ-ನರಕ
ನಿರಸನ-೧ ಹೋಗಲಾಡಿಸುವಿಕೆ ೨ ತ್ಯಜಿಸುವಿಕೆ ೩ ಅಲ್ಲಗಳೆಯುವಿಕೆ ೪ ನಾಶ
ನಿರಾಮಯ-ರೋಗವಿಲ್ಲದ
ನಿರ್ಯಾತನ-೧ ದಾನ ೨ ಹಿಂದಕ್ಕೆ ಕೊಡುವಿಕೆ, ೩ ಮುಯ್ಯಿ
ನಿರ್ವರ್ತನ-ಮಾಡಿ ಮುಗಿಸುವಿಕೆ
ನಿಷೇವಣ-ಪೂಜೆ, ಸೇವೆ, ೨ ಕಾದಿರುವಿಕೆ
ನೀವಿ-ಸ್ತ್ರೀಯರ ಉಡಿಗೆಯ ನಿರಿಗಂಟು
ನೇವರಿಸು-ಕಯ್ಯಿಂದ ಮೆತ್ತಗೆ ಸವರು, ಸರಿಮಾಡು, ನಯಮಾಡು
ನೋಂಪಿ-ವ್ರತ
ಪಕ್ಕಣ-ಬೇಡರ ವಸತಿ
ಪಕ್ಕರಕ್ಕೆ-ಪಕ್ಷರಕ್ಷಾ (ಸಂ) - ಆನೆ ಕುದುರೆಗಳಿಗೆ ಬೆನ್ನಿನ ಮೇಲೆ ಹಾಕುವ ಕವಚ
ಪಕ್ಕರೆ-ಕವಚ, ಜೀನು
ಪಕ್ಕಾಗು-ಗುರಿಯಾಗು
ಪಜ್ಜಳ-ಪ್ರಕಾಶ, ಹೊಳಪು
ಪಂಚ-೧ ವಿಸ್ತಾರವಾದ, ಅಗಲವಾದ, ೨ ಐದು
ಪಂಚಬಾಣ-ಮನ್ಮಥ
ಪಂಚಮುಖಿ-೧ ಶಿವ ೨ ಸಿಂಹ
ಪಟಲ-ಬುಟ್ಟಿ ೨ ಸಮೂಹ ೩ ಮುಚ್ಚಳ ೪ ಮುಸುಕು
ಪಟವಾಸ-೧ ಪರಿಮಳದ ಪುಡಿ ೨ ಡೇರೆ
ಪಟೀರ-ಶ್ರೀಗಂಧ
ಪಟ್ಟಿಸ-ಒಂದು ಆಯುಧ

ಪಡಲಿಗೆ-ಗೆರಸಿ, ಹೂವಿಡುವ ಅಗಲವಾದ ಬುಟ್ಟಿ
ಪಡಿಗ-ಪೀಕದಾನಿ
ಪಡ್ಡಳಿ-ಕಣಿಗಿಲೆ
ಪತತ್ರಿ-೧ ಹಕ್ಕಿ ೨ ಬಾಣ
ಪತಂಗ-೧ ಹಕ್ಕಿ ೨ ಸೂರ್ಯ, ೩ ಚಿಟ್ಟೆ ೪ ಬಾಣ
ಪತಿತ-ಕೆಳಕ್ಕೆ ಬಿದ್ದುದು, ಬಿದ್ದವ
ಪತ್ರ (ಸಂ) ೧ ವಾಹನ, ರೆಕ್ಕೆ ೨ ಬರೆದ ಕಾಗದ ೩ ಎಲೆ ೪ ಕತ್ತಿಯ ಅಲಗು
ಪದೆ-೧ ಆಶೆಪಡು, ಇಚ್ಛಿಸು ೨ ಪ್ರೀತಿಸು ೩ ಆಶೆ, ಬಯಕೆ
ಪಂದೆ-ಹೇಡಿ
ಪರಭೃತ-ಪರಪುಷ್ಟ-೧ ಕೋಗಿಲೆ ೨ ಬೇರೆ ಯವರಿಂದ ಪೋಷಿತವಾದವ
ಪರಮೆ-ತುಂಬಿ
ಪರಶ್ವಥ-ಕೊಡಲಿ
ಪರಾಭೂತ-ಸೋತವ
ಪರಾಯಣ-ಆಸಕ್ತ
ಪರಾರ್ಥ್ಯ-ಅತಿ ಶ್ರೇಷ್ಠ
ಪರಿಕಲ್ಪಿತ-ನಿಶ್ಚಯಿಸಿದ
ಪರಿಜೆ-ದೇಹ, ಮೈ
ಪರಿಣಾಹ-ವಿಶಾಲತೆ
ಪರಿಪಾಟಿ-ಅನುಕ್ರಮ, ರೀತಿ, ಕ್ರಮ
ಪರಿಮರಿ-ಸಡಗರ
ಪರಿರಂಭ-ಆಲಿಂಗನ
ಪರಿವಿಡಿ-ಕ್ರಮ
ಪರ್ಚು-ಗುಟ್ಟುಮಾತನ್ನಾಡು, ಪಿಸುಮಾತನಾಡು
ಪವಮಾನ-ವಾಯು, ಗಾಳಿ
ಪಸದನ-ಪ್ರಸಾಧನ-ಅಲಂಕಾರ
ಪಾರಾಯಣ-ಪವಿತ್ರ ಗ್ರಂಥವನ್ನು ವಿಶ್ವಾಸದಿಂದ ಓದುವುದು
ಪಾರುಂಬಳೆ-ಚಕ್ರ
ಪಾಷಂಡ-ವೇದವಿರುದ್ಧವಾದ ಆಚರಣೆ ಯುಳ್ಳವ, ಸಾಧುವಿನಂತೆ ನಟಿಸುವ ವಂಚಕ
ಪಾಸುಂಪೊಕ್ಕು-ಹಾಸುಹೊಕ್ಕು, ಓತ ಪ್ರೋತ, ಉದ್ದವಾಗಿಯೂ ಅಡ್ಡವಾಗಿಯೂ ಇರುವ
ಪಿಂಗಾಕ್ಷ-ಪಿಂಗಲೋಚನ-ದುರ್ಯೋಧನ
ಪಿಧಾನ-ಮುಚ್ಚುವಿಕೆ, ಮುಚ್ಚಳ
ಪಿಳ್ಕು-ಪಿಳುಕು-ಬಾಣದ ಹಿಡಿ
ಪುಗಲ್-೧ ಹೊಗಬೇಡ, ಪ್ರವೇಶಿಸಬೇಡ, ೨ ಕೋಗಿಲೆಯ ದನಿ
ಪುಂಜಿಕೆ-ಸಮೂಹ
ಪುತ್ರಿಕೆ-೧ ಬೊಂಬೆ ೨ ಮಗಳು
ಪುರುಷಕಾರ-ಪುರುಷಪ್ರಯತ್ನ
ಪುಲಕಿತ-ರೋಮಾಂಚನವನ್ನು ಪಡೆದ
ಪುಷ್ಪಲಾವಿ-ಹೂಮಾರುವವಳು
ಪುರೋಧ-ಪುರೋಧಸ-ಪುರೋಹಿತ
ಪೆರ್ಮೆ-ಹಿರಿಮೆ; ಹೆಮ್ಮೆ
ಪೊಡರ್ಪು-೧ ತೇಜಸ್ಸು ೨ ಪರಾಕ್ರಮ
ಪೊದಳ್ಕೆ-೧ ಪ್ರಸಿದ್ಧಿ ೨ ಹೊರಹೊಮ್ಮುವಿಕೆ
ಪೌಲಸ್ತ್ಯ-ಕುಬೇರ
ಪ್ರತಿಘಾ-ಕೋಪ, ಸಿಟ್ಟು
ಬುಲ್ಲಯಿಸು-ಬುಲ್ಲವಿಸು-ಉಬ್ಬು, ಉಬ್ಬಿಸು
ಭುಜಗರಿಪು, ಭುಜಂಗರಿಪು-೧ ಗರುಡ ೨ ನವಿಲು
ಭು(ಜಂ)ಜಗರಿಪುಧ್ವಜ-೧ ಕೃಷ್ಣ, ವಿಷ್ಣು ೨ ಷಣ್ಮುಖ
ಭ್ರಮರ-ದುಂಬಿ
ಭ್ರಮರಕ-೧ ಮುಂಗುರುಳು
ಮಧು-೧ ವಸಂತಋತು, ೨ ಮದ್ಯ ೩ ಮಕರಂದ, ಹೂವಿನ ರಸ, ೪ ಜೇನುತುಪ್ಪ ೫ ಸಿಹಿ
ಮಜ್ಜನ-ಸ್ನಾನ
ಮಂಜರಿ-ಹೂವಿನ, ಚಿಗುರಿನ, ಹಣ್ಣು ಅಥವಾ ಕಾಯಿಯ ಗೊಂಚಲು; ಮುತ್ತು, ಹವಳ ಮೊದಲಾದ ರತ್ನಗಳ ಗೊಂಚಲು ಅಥವಾ ಗುಂಪು
ಮಡಲ್-೧ ಮಡಲು-ಹಬ್ಬು, ವಿಸ್ತರಿಸು ಕವಲೊಡೆ ೨ ಪೊದರು ೩ ತೆಂಗಿನ ಸೋಗೆ
ಮಡಿ-೧ ಶುದ್ಧ, ಪವಿತ್ರ, ನಿರ್ಮಲ ೨ ಶುದ್ಧ ವಸ್ತ್ರ ೩ ಉಡಿ; (ಧಾತುವಾದರೆ)-ಸಾಯಿ; (ಸಂಖ್ಯಾವಾಚಕಗಳ ಜತೆ

ಸೇರಿದಾಗ) ಸರ್ತಿ, ಆವೃತ್ತಿ
ಮಣಿ-(ನಾಮ) ರತ್ನ, ಗಾಜಿನಮಣಿ, ಶ್ರೇಷ್ಠ (ಧಾತುವಾದರೆ) ನಮಿಸು, ಬಾಗು
ಮಂಡಲ-೧ ಸಮೂಹ, ಸಂಘ, ಕೂಟ ೨ ದುಂಡಾದುದು, ದುಂಡು, ಗುಂಡು
ಮಂಡಳಿಸು-ಗುಂಪುಸೇರು, ವೃತ್ತಾಕಾರವಾಗಿ ಕೂರು
ಮತ್ತವಾರಣ-೧ ಮದ್ದಾನೆ ೨ ಮನೆಯ ಮುಂದಿನ ಜಗಲಿ
ಮದಿರೆ-ಕಳ್ಳು, ಮದ್ಯ
ಮಧುಕರ, ಮಧುವ್ರತ-ದುಂಬಿ
ಮಧುಪ-ದುಂಬಿ, ೨ ಮದ್ಯಪಾಯಿ
ಮಧುಪರ್ಕ-ಮದುವೆಯಲ್ಲಿ ಮಣೆಯ ಮೇಲೆ ಕುಳಿತ ವರನಿಗೂ, ಮನೆಗೆ ಬಂದ ಗೌರವಸ್ಥರಾದ ಅತಿಥಿ ವೃದ್ಧ ರಿಗೂ ಕೊಡುವ, ಜೇನುತುಪ್ಪ, ದ್ರಾಕ್ಷಿ, ಬಾಳೆಹಣ್ಣು ಮೊದಲಾದು ವನ್ನು ಸೇರಿಸಿ ಮಾಡಿದ ರಸಾಯನ
ಮನದನ್ನ-ಪ್ರಿಯ
ಮನದನ್ನೆ-ಪ್ರಿಯೆ
ಮನಸ್ವಿ-೧ ಚತುರ ೨ ಜ್ಞಾನಿ ೩ ತನ್ನಿಷ್ಟ ಬಂದಂತೆ ನಡೆಯುವವ
ಮನೀಷಾ-ಮನೀಷೆ, ಬುದ್ಧಿ, ಜ್ಞಾನ
ಮನೀಷಿ-ವಿದ್ವಾಂಸ, ಜ್ಞಾನಿ
ಮನೋಜ-ಮನ್ಮಥ
ಮನೋಜ್ಞ- ಮನೋಹರ, ಆನಂದದಾಯಕ
ಮನ್ದಾಕಿನಿ - ಗಂಗಾನದಿ
ಮನ್ಯು-೧ ಕೋಪ ೨ ದುಃಖ, ೩ ಯಜ್ಞ
ಮಮ್ಮಲ-ವಿಶೇಷವಾಗಿ, ಬಹಳ
ಮಯ-ಒಬ್ಬ ರಾಕ್ಷಸ, ದೈತ್ಯ ಶಿಲ್ಪಿ
ಮಯೂಖ-ಕಿರಣ, ಲಾವಣ್ಯ, ಹೊಳಪು
ಮಯೂರ-ನವಿಲು
ಮಯೂರವಾಹನ-ಮಯೂರಧ್ವಜ-ಷಣ್ಮುಖ
ಮರಕತ-ಪಚ್ಚೆ
ಮರಂದ-ಮಕರಂದ
ಮರಲ್-ಮರಲು; (ನಾಮ) ಹೂವು (ಧಾತು), ೧ ಅರಳು, ೨ ಹಿಂದಿರುಗು
ಮರಾಲ-ಮರಾಳ, ಹಂಸ
ಮರೀಚಿಕೆ-ಬಿಸಿಲ್ಗುದುರೆ
ಮರ್ಕಟ-ಕಪಿ
ಮಲೀಪುಸ-ಮಲಿನ, ಮಾಸಿದ
ಮಲ್ಲಳಿ-ಸುತ್ತ ತಿರುಗುವಿಕೆ, ೨ ಗಾಬರಿ ೩ ತುಂಬಿ ೪ ಗುಂಪು
ಮಸಕ-ಉದ್ರೇಕ, ಕೋಪ, ರಭಸ, ಉತ್ಸಾಹ
ಮಸಗು-೧ ವಿಜೃಂಭಿಸು, ವಿಸ್ತರಿಸು ೨ ಉದ್ರೇಕಗೊಳ್ಳು, ೩ ಪ್ರಕಟಿಸು, ೪ ತಿಕ್ಕು
ಮಸೃಣ-ಮೆದು, ನುಣುಪು ೨ ಕೋಮಲ ೩ ಹೊಳೆಯುವ
ಮಾ-ಲಕ್ಷ್ಮಿ
ಮಾಕಂದ-ಮಾವು
ಮಾಕರಿಸು = ಮಾಂಕರಿಸು-೧ ಅವಮಾನಪಡಿಸು ೨ ತಿರಸ್ಕರಿಸು
ಮಾಗಧ-ಮಗಧ ದೇಶದ ದೊರೆ, ಜರಾಸಂಧ, ೨ ರಾಜವಂಶವನ್ನು ಸಭೆಯಲ್ಲಿ ಹೊಗಳುವವ
ಮಾಟ-೧ (ಮಾಡು ಧಾತುವಿನ ಭಾವನಾಮ) ಮಾಡುವಿಕೆ, ಕೆಲಸ ೨ ರಚನೆ, ರೀತಿ ೩ ಉಪದ್ರವಕಾರಕವಾದ ಮಂತ್ರತಂತ್ರ ಕಾರ್ಯ
ಮಾಡ-ಮಹಡಿಯ ಮನೆ
ಮಾತಂಗ-ಆನೆ
ಮಾತುಲುಂಗ-ಮಾದಳದ ಹಣ್ಣು
ಮಾದ್ರೇಯ-ಮಾದ್ರಿಯ ಮಗ = ನಕುಲ ಮತ್ತು ಸಹದೇವ
ಮಾಮಸಕ-೧ ಅತ್ಯುತ್ಸಾಹ ೨ ಅತಿ ತ್ವರೆ, ೩ ಅತಿ ರೋಷ
ಮಾಯಾ = ಮಾಯೆ - ೧ ಲಕ್ಷ್ಮಿ ೨ ಸಂಪತ್ತು ೩ ಅಜ್ಞಾನ, ಭ್ರಮೆ ೪ ಕಪಟ ೫ ಮೋಸ ೬ ಇಂದ್ರಜಾಲ ೭ ದೇವರ ಲೀಲೆ ೮ ಪ್ರಕೃತಿ ೯ ದುರ್ಗಿ ೧೦ ಮಮತೆ
ಮಾಯ್ದು-ಸೊಕ್ಕಿದ, ಗರ್ವಿತ
ಮಾರಮಣ-ವಿಷ್ಣು
ಮಾಲತಿ-ಜಾಜಿ
ಮಾಸದಿಕೆ-ಮಾಸದಿರುವಿಕೆ

ಮಾಸರ-ಹೆಚ್ಚು, ಅಧಿಕ
ಮೂರ್ಧಾಭಿಷೇಕ-ಮೂರ್ಧಾಭಿಷೇಚನ-ಪಟ್ಟಾಭಿಷೇಕ
ಮೇಖಲೆ-ಒಡ್ಯಾಣ, ಡಾಬು
ಮೇಚಕ-೧ ನವಿಲುಗರಿ, ೨ ಹೆಚ್ಚು ಕಪ್ಪು
ಮೇಳಾಪ-ಕೂಟ, ಮೇಳ
ಮೇಲುದು - ಮೇಲುಡಿಗೆ, ಹೊದಿಕೆ, ಸೆರಗು
ಮೊಗ್ಗರ-೧ ರಾಶಿ, ಗುಂಪು ೨ ಸೈನ್ಯ
ಮೊಗ್ಗು - (ನಾ) ೧ ಹೂವಿನ ಮುಗುಳು ೨ ಸಾಧ್ಯ, ವಶ
ಮೊರೆ-೧ ಕೂಗು, ಗರ್ಜಿಸು ೨ ಅಳು ೩ (ತುಂಬಿ) ಝೇಂಕರಿಸು ೪ ನಂಟು, ಸಂಬಂಧ ೫ ನ್ಯಾಯ, ಧರ್ಮ
ಮೋಘ-ಪ್ರಯೋಜನವಿಲ್ಲದ, ವ್ಯರ್ಥ
ಮೋಚನ-ಬಿಡುಗಡೆ
ಮೋಡಿ-೧ ಹಾವಭಾವದ ಬೆಡಗು ೨ ಒಂದು ವಿಧವಾದ ಯುಕ್ತಿ ೩ ರೀತಿ
ಯಜ್ಞಪುರುಷ-೧ ವಿಷ್ಣು ೨ ಅಗ್ನಿ ದೇವ
ಯಾತುಧಾನ-ರಾಕ್ಷಸ
ಯುಗಪತ್-ಒಟ್ಟಿಗೇ, ಒಂದೇ ಸಾರಿ
ಯೂಥ-೧ ಹಿಂಡು, ಗುಂಪು ೨ ಸೈನ್ಯ
ಯೋಗ-೧ ಸಂಬಂಧ, ಕೂಡಿಕೆ ೨ ಅದೃಷ್ಟ ೩ ಏಕಾಗ್ರತೆ, ಧ್ಯಾನ ೪ ರೀತಿ, ಕ್ರಮ
ಯೋಷಾ, ಯೋಷೆ-ಸ್ತ್ರೀ, ವನಿತೆ
ರಂಹ-ಮೇಘ
ರಘೂದ್ವಹ-ಶ್ರೀರಾಮ
ರಜಕ-ಅಗಸ
ರಜನಿ-ರಾತ್ರಿ
ರಜನೀಪತಿ-ರಜನೀಕರ-ರಜನೀನಾಥ-ಚಂದ್ರ
ರಣರಣಕ-ಪ್ರಿಯರ ಅಗಲಿಕೆಯ ಕರಕರೆ
ರಣಾಜಿರ-ಯುದ್ಧರಂಗ
ರತಿ-೧ ಸಂತೋಷ, ೨ ಪ್ರೇಮ ೩ ಮನ್ಮಥನ ಪತ್ನಿ ೪ ಆಶೆ, ಆಸಕ್ತಿ
ರಥಾಂಗ-೧ ಚಕ್ರ ೨ ಚಕ್ರವಾಕ
ರಸನೆ-ರಸನಾ-ನಾಲಗೆ
ರಸಾ, ರಸೆ-ಭೂಮಿ
ರಾಜನ್ಯ-ಕ್ಷತ್ರಿಯ
ರಾದ್ಧಾಂತ-ಸಿದ್ಧಾಂತ
ರಾಮಾ-ಸುಂದರಿ
ರಾಸ-ಒಂದು ಬಗೆಯ ನೃತ್ಯ
ರಾಸಕ್ರೀಡೆ-ಶ್ರೀಕೃಷ್ಣ ಗೋಪಿಯರ ನೃತ್ಯ
ರಾಸಭ-ಕತ್ತೆ
ರಿಕ್ಕಟ-ಮೌನ
ರಿಕ್ತ-ಬರಿದಾದ, ಬಡವ
ರುಕ್ಮ-ಚಿನ್ನ
ರುಂದ್ರ-ವಿಸ್ತಾರವಾದ, ದೊಡ್ಡ
ರೋಲಂಬ-ತುಂಬಿ
ರೋಹಣ-೧ ಒಂದು ಪರ್ವತ ೨ ಏರುವಿಕೆ
ರೌಪ್ಯ-ಬೆಳ್ಳಿ
ರೌಹಿಣೇಯ-ಬಲರಾಮ
ಲಕುಮಿ, ಲಕ್ಷ್ಮೀ (ಸಂ)-ಶ್ರೀದೇವಿ
ಲಕ್ಷ್ಮೀಕಾಂತ, ಲಕ್ಷ್ಮೀವಲ್ಲಭ, ಲಕ್ಷ್ಮೀವರ-ವಿಷ್ಣು
ಲಗ್ನ-೧ ಕೂಡಿದ, ಸೇರಿದ ೨ ಶುಭಮುಹೂರ್ತ, ೩ ಮದುವೆ
ಲತಾಂಕ-ಹೂ
ಲಂಬಿಸು-೧ ಜೋಲಾಡು ೨ ಉದ್ದವಾಗು, ಉದ್ದವಾಗಿ ಮಾಡು
ಲಂಬೋದರ-ವಿನಾಯಕ
ಲೀಲಾಯಿತ-ಆಟದಂತೆ ಮಾಡಿದ, ನಡೆಸಿದ
ಲುಬ್ಧಕ-ಬೇಡರವನು, ಬೇಟೆಗಾರ
ಲುಲಾಯ-ಕೋಣ
ಲೋಕೋಕ್ತಿ-೧ ಜನರ ಮಾತು ೨ ಗಾದೆ ನುಡಿಗಟ್ಟು
ಲೋಲ-೧ ಆಸಕ್ತ ೨ ಚಂಚಲ ೩ ತೂಗಾಡುವ
ವಕ್ರೋಕ್ತಿ-೧ ಕೊಂಕು ನುಡಿ, ೨ ಕಾವ್ಯದ ಒಂದು ಅಲಂಕಾರ, ೩ ವ್ಯಂಗ್ಯ
ವಕ್ಷೋಜ-ಸ್ತನ
ವದಾನ್ಯ-ಉದಾರಿ, ದಾನಿ ೨ ವಾಕ್ಚಾತುರ್ಯವುಳ್ಳವ ೩ ನಯವಾಗಿ ಮಾತನಾಡುವವ
ವನಮಾಲಿ-ವಿಷ್ಣು, ಕೃಷ್ಣ
ವನೌಕಸ-೧ ವನವಾಸಿ ೨ ಕಪಿ
ವರವರ್ಣಿ (ನೀ)-ನೀಲಸುಂದರಿ
ವರೂಥ-ರಥ
ವರೂಥಿನೀ-ಸೈನ್ಯ
ವಲೀಮುಖ-ಕೋತಿ

ವಲ್ಲಕೀ-ವೀಣೆ
ವಲ್ಲರೀ-೧ ಬಳ್ಳಿ ೨ ಗೊಂಚಲು
ವಾಘೆ-ಕಡಿವಾಣ
ವಾತಾಯನ-ಗವಾಕ್ಷ, ಕಿಟಕಿ
ವಾತಾಶನ-೧ ಗಾಳಿಯ ಆಹಾರವುಳ್ಳವ ೨ ಸರ್ಪ
ವಾಮನ-೧ ಕುಳ್ಳ ೨ ವಿಷ್ಣುವಿನ ಕುಳ್ಳಾದ ಒಂದು ಅವತಾರ ೩ ದಕ್ಷಿಣದಿಗ್ಗಜ
ವಾಯ-೧ ನೆಪ, ನೆವ ೨ ಸುಳ್ಳು, ಮೋಸ
ವಾಯನ-ಬಾಗಿನ ೨ ಕಾಣಿಕೆ
ವಾರ-೧ ದಿನ ೨ ಗುಂಪು ೩ ತಡೆ ೪ ಆವೃತ್ತಿ, ಸರ್ತಿ
ವಾರನಾರಿ(ರೀ)-ವೇಶ್ಯೆ
ವಾಸಂತಿ (ತೀ)-೧ ಒಂದು ಬಗೆಯ ಮಲ್ಲಿಗೆ ೨ ವಾಸಂತಿಕಾಂತೆ
ವಾಸವ-ದೇವೇಂದ್ರ
ವಾಸುದೇವ-ಕೃಷ್ಣ
ವಾಹ-೧ ಕುದುರೆ ೨ ಬಂಡಿ ೩ ವಾಹನ
ವಾಹಿನಿ (ನೀ) ೧ ಸೈನ್ಯ ೨ ನದಿ
ವಿ-೧ ಹಕ್ಕಿ ೨ ಶಬ್ದಗಳ ಹಿಂದೆ ಸೇರುವ ಒಂದು ಉಪಸರ್ಗ-ಉದಾ. ವಿಶೇಷ, ವಿರುದ್ಧ, ವಿಗತ, ವಿರೂಪ, ವಿಲಕ್ಷಣ ಇತ್ಯಾದಿ
ವಿಕೀರ್ಣ-೧ ಚೆಲ್ಲಿದ ೨ ಹರಡಿದ ೩ ಒಡೆದ, ತುಂಡಾದ
ವಿಕ್ರಮ-೧ ಪರಾಕ್ರಮ, ಶೌರ್ಯ, ಬಲ, ೨ ಹೆಜ್ಜೆ, ಅಡಿ ೩ ಒಂದು ಸಂವತ್ಸರದ ಹೆಸರು
ವಿಗಡ, ವಿಶಂತುಟ,
ವಿಕಟ-೧ ದೊಡ್ಡ, ಘನವಾದ, ೨ ದುಷ್ಟ, ಕೆಡುಕ, ಕ್ರೂರಿ
ವಿಗರ್ಹಣ-ನಿಂದೆ
ವಿಗುರ್ವಣೆ, ವಿಗುರ್ಬಣೆ-ಭಯಂಕರವಾದ ಕಾರ್ಯ, ಆಕೃತಿ, ಮಾಯೆಯ ನಿರ್ಮಾಣ
ವಿಜಾತಿ-೧ ಬೇರೆಯ ಜಾತಿ ೨ ಪಕ್ಷಿ ಜಾತಿ ೩ ಕೀಳುಜಾತಿ
ವಿಜಿಗೀಷು-ಜಯಪಡೆಯಲು ಇಚ್ಛೆಯುಳ್ಳವನು
ವಿಟಪ-ಕೊಂಬೆ
ವಿಟಪಿ (ಪೀ)-ಮರ
ವಿಟಾಳ-ಮಲಿನತೆ, ಹೊಲೆ
ವಿಡಂಬ (-ನೆ, -ನಾ) ೧ ನಟನೆ ೨ ವಂಚನೆ ೩ ಗಾಬರಿಗೊಳಿಸುವಿಕೆ ಹಾಸ್ಯ (ನಕಲಿ) ಮಾಡುವಿಕೆ
ವಿಡಾಯ, ವಿಡಾಯಿ-೧ ಆಡಂಬರ ೨ ದೊಡ್ಡತನ ೩ ಸಾಮರ್ಥ್ಯ
ವಿತತ-ವಿಶಾಲ (ಅಗಲ)ವಾದ
ವಿತತಿ-೧ ಸಮೂಹ, ಗುಂಪು ೨ ವಿಸ್ತಾರ
ವಿತರಣ-೧ ದಾನ ೨ ಬಿಟ್ಟು ಕೊಡುವಿಕೆ ೩ ದಾಟುವಿಕೆ
ವಿತರ್ಕ-೧ ವಾದ, ಚರ್ಚೆ, ವಿಮರ್ಶೆ ೨ ಊಹೆ ೩ ಸಂದೇಹ
ವಿತಾನ-೧ ಸಮೂಹ, ೨ ಹರಡುವಿಕೆ ೩ ಬಟ್ಟೆಯ ಮೇಲ್ಕಟ್ಟು ೪ ಯಜ್ಞ
ವಿತ್ತ-ದ್ರವ್ಯ ೨ ತಿಳಿದ, ಪ್ರಸಿದ್ಧವಾದ ೩ ಸಂಪತ್ತು
ವಿದಗ್ಧ-೧ ವಿದ್ವಾಂಸ, ನಿಪುಣ ೨ ಅತಿಯಾಗಿ ಸುಟ್ಟ
ವಿದಗ್ಧೆ-ವಿದುಷೀ, ಚತುರೆ
ವಿದಲಿ (ಳಿ) ತ-೧ ಸೀಳಿದ ೨ ಅರಳಿದ ೩ ಬಿರಿದ
ವಿದಾರಣ (ಣೆ)-೧ ಸೀಳುವಿಕೆ ೨ ಯುದ್ಧ ೩ ಕೊಲೆ
ವಿದಿತ-೧ ತಿಳಿದ ೨ ಪ್ರಸಿದ್ಧವಾದ ೩ ಜ್ಞಾನ
ವಿದ್ಧ- ಕೊರೆದ, ತೂತುಮಾಡಿದ ೨ ಗಾಯಗೊಂಡ
ವಿದ್ರುತ-೧ ಕರಗಿದ ೨ ಪಲಾಯನ ಮಾಡಿದ ೩ ಹರಿಯುವಿಕೆ
ವಿದ್ರುಮ-೧ ಹವಳ ೨ ಚಿಗುರು
ವಿಧಾಯಕ-೧ ಏರ್ಪಡಿಸುವವ ೨ ರಚನಾತ್ಮಕವಾದ ೩ ಆಳುವವ ; ಮುಖಂಡ
ವಿಧಿ-೧ ಕ್ರಮ ೨ ನಿಯಮ ೩ ಬ್ರಹ್ಮ ೪ ಅದೃಷ್ಟ
ವಿಧು-೧ ವಿಷ್ಣು ೨ ಚಂದ್ರವಧುಂತುದ-ರಾಹು ೨ ಕೇತು
ವಿನತಾತ್ಮಜ (ಪುತ್ರ) - ಗರುಡ
ವಿನತಿ-೧ ನಮ್ರತೆ ೨ ನಮಿಸುವಿಕೆ
ವಿನೀತ-೧ ಸುಶಿಕ್ಷಿತ ೨ ನಮ್ರತೆಯುಳ್ಳವ ೩ ಸುಂದರ

ವಿನುತಾ, ವಿನತೆ-ಕಶ್ಯಪರ ಪತ್ನಿ = ಗರುಡನ ತಾಯಿ
ವಿನ್ಯಾಸ-೧ ಇಡುವಿಕೆ ೨ ರಚನೆ ೩ ಅಂಗಾಭಿನಯ ೪ ಈಡು, ಒತ್ತೆ
ವಿಪನ್ನ-೧ ಕಷ್ಟಕ್ಕೆ (ಆಪತ್ತಿಗೆ) ಒಳಗಾದವ ೨ ನಾಶಗೊಳಿಸಲ್ಪಟ್ಟ
ವಿಪಶ್ಚಿತ್-೧ ವಿದ್ವಾಂಸ ೨ ಬುದ್ಧಿವಂತ
ವಿಪ್ರಕೃತ-ನೋಯಿಸಿದ, ಪೀಡಿಸಿದ, ವಂಚಿಸಿದ, ಅವಮಾನಿಸಿದ
ವಿಪ್ರಕೃಷ್ಟ-ದೂರದ ೨ ವಿಸ್ತರಿಸಿದ
ವಿಪ್ರಲಬ್ಧ-೧ ವಂಚಿತನಾದವ ೨ ನೋಯಿಸಲ್ಪಟ್ಟ ೩ ಆಶಾಭಂಗವನ್ನು ಪಡೆದ
ವಿಪ್ರಲಂಭ-೧ ಮೋಸ, ವಂಚನೆ ೨ ಜಗಳ ೩ ಪ್ರಿಯರ ಅಗಲಿಕೆ ೪ ಶೃಂಗಾರ ರಸದ ಒಂದು ಭೇದ
ವಿಪ್ರಲಾಪ-೧ ವ್ಯರ್ಥವಾದ ಹರಟೆ ೨ ವಿರೋಧೋಕ್ತಿ
ವಿಪ್ಲವ-೧ ಪ್ರಳಯ ೨ ತೇಲುವಿಕೆ ೩ ಹೊಡೆದಾಟ, ತಂಟೆ, ಉಪದ್ರವ ೪ ಕ್ರಾಂತಿ
ವಿಭಾಕರ-ಸೂರ್ಯ
ವಿಭಾವಸು-ಸೂರ್ಯ
ವಿಭೂತಿ-೧ ಐಶ್ವರ್ಯ ೨ ಮಹಿಮೆ ೩ ಅತಿಮಾನುಷ ಶಕ್ತಿ ೪ ಪರಾಕ್ರಮ ೫ ಭಸ್ಮ
ವಿಭ್ರಮ-೧ ಪ್ರೇಮಚೇಷ್ಟೆ ೨ ಗಾಬರಿ ೩ ಶೋಭೆ, ೪ ತಿರುಗಾಟ, ಅಲೆತ ಸಡಗರದಲ್ಲಿ, ೫ ವನಿತೆಯರು ಆಭರಣಗಳನ್ನು ಸ್ಥಾನಪಲ್ಲಟಮಾಡಿ ಧರಿಸುವುದು.
ವಿರಂಚ-ವಿರಿಂಚಿ-ಬ್ರಹ್ಮ
ವಿರಹ-ಪ್ರಿಯರ, ಆಪ್ತರ ಅಗಲಿಕೆ
ವಿರಾಟ್ಪುರುಷ-ಪರಮಾತ್ಮ
ವಿರುತ = ವಿರುತಿ-೧ ಕೂಗು, ಅರಚುವಿಕೆ ೨ ಹಕ್ಕಿಗಳ ಕೂಗು ೩ ಝೇಂಕಾರ
ವಿರೋಚನ-೧ ಹೊಳೆಯುವ ೨ ಸೂರ್ಯ ೩ ಅಗ್ನಿ ೪ ಬಲಿಚಕ್ರವರ್ತಿಯ ತಂದೆ
ವಿಲಾಪ-೧ ಅಳುವಿಕೆ ೨ ಕೂಗು ೩ ಪ್ರಲಾಪ
ವಿಲುಳಿತ-೧ ತೊನೆದಾಡುವ ೨ ಅಸ್ತವ್ಯಸ್ತವಾದ, ಕೆದರಿದ
ವಿಲೂನ-ತುಂಡಾದ
ವಿಲೋಭನ-೧ ಮರುಳುಗೊಳಿಸುವಿಕೆ ೨ ಆಸೆ ಹುಟ್ಟಿಸುವಿಕೆ
ವಿಲೋಮ-ಪ್ರತಿಕೂಲ, ಹಿಂದುಮುಂದು
ವಿವಿಸ್ವಂತ-ಸೂರ್ಯ
ವಿಶಂಕೆ-೧ ಸಂಶಯ, ೨ ಹೆದರಿಕೆ
ವಿಶಸನ-ಕೊಲ್ಲುವಿಕೆ, ಕೊಲೆ
ವಿಶಿಖ-೧ ಬಾಣ ೨ ಜುಟ್ಟಿಲ್ಲದ
ವಿಶೀರ್ಣ-೧ ಚೂರುಚೂರಾದ ೨ ಗಾಯಗೊಂಡ ೩ ನಷ್ಟವಾದ
ವಿಶೃಂಖಲ-೧ ಬಂಧನವಿಲ್ಲದ, ೨ ಇಷ್ಟಬಂದಂತೆ ನಡೆಯುವ
ವಿಶ್ವ-೧ ಸಮಸ್ತ ೨ ಪ್ರಪಂಚ ೩ ವಿಷ್ಣು
ವಿಶ್ವಕರ್ಮ-೧ ಬ್ರಹ್ಮ ೨ ದೇವಶಿಲ್ಪಿ
ವಿಶ್ವಂಭರೆ-ಭೂಮಿ
ವಿಷ್ವರಶ್ರವ-ವಿಷ್ಣು, ಕೃಷ್ಣ
ವಿಸ್ಯಮರ-ಹರಿಯುವ, ಪ್ರವಹಿಸುವ
ವಿಸ್ಮಯ-ಅದ್ಭುತ, ಆಶ್ಚರ್ಯ, ಬೆರಗು
ವಿಸ್ಮರಣ-ಮರೆವು, ನೆನಪಿಲ್ಲದಿರುವಿಕೆ
ವಿಸ್ಮೃತಿ-ಮರೆವು, ನೆನಪಿಲ್ಲದಿರುವಿಕೆ
ವಿಹ್ವಲ-ಕಳವಳಗೊಂಡ, ಗಾಬರಿಗೊಂಡ ೨ ದುಃಖಿತ
ವೀಚಿ-ಅಲೆ
ವೀಜನ-೧ ಬೀಸಣಿಗೆ ೨ ಬೀಸುವಿಕೆ
ವೃಜಿನ-೧ ಪಾಪ ೨ ಡೊಂಕು ೩ ಕೆಟ್ಟ
ವೃಂತ-ತೊಟ್ಟು
ವೇಣು-ಕೊಳಲು ೨ ಬಿದಿರು
ವೇದಗರ್ಭ-ಬ್ರಹ್ಮ
ವೇಪಥು-ನಡುಕ, ಕಂಪನ
ವೈಸಿ (ಶಿ)ಕ-ಮೋಸ, ಠಕ್ಕು, ಕಪಟ
ವ್ಯಗ್ರ-೧ ಅತ್ಯಾಸಕ್ತ ೨ ತಳಮಳ (ಗಾಬರಿ) ಗೊಂಡವ ೩ ಏಕಾಗ್ರತೆಯಿಲ್ಲದ
ವ್ಯಾಘಾತ-೧ ಅಡ್ಡಿ, ತೊಂದರೆ ವಿರೋಧ ೩ ಹೊಡೆತ
ವ್ಯಾಜ-೧ ನೆವ, ನೆಪ, ೨ ಸುಳ್ಳು, ಠಕ್ಕು
ವ್ಯಾಧ-ಬೇಡರವನು ೨ ಕೆಟ್ಟವನು
ವ್ಯುತ್ಕ್ರಮ(ಣ)-೧ ಉಲ್ಲಂಘನೆ ೨ ವಿರುದ್ಧಕ್ರಮ

ವ್ಯೂಹ-೧ ಗುಂಪು ೨ ಸೈನ್ಯ ೩ ಸೈನ್ಯ ವ್ಯವಸ್ಥೆ
ವ್ಯೋಮಕೇಶ-ಶಿವ
ವ್ರಾತ-ಸಮೂಹ, ಗುಂಪು
ವ್ರೀಡಾ, ವ್ರೀಡೆ-ಲಜ್ಜೆ, ನಾಚಿಕೆ
ವ್ರೀಹಿ-ಬತ್ತ
ಶಕಟ-ಬಂಡಿ, ಕೃಷ್ಣನು ಕೊಂದ ಒಬ್ಬ ರಾಕ್ಷಸ
ಶಕ್ರ-ಇಂದ್ರ
ಶಕ್ರಚಾಪ-ಮಳೆಬಿಲ್ಲು (ಕಾಮನಬಿಲ್ಲು)
ಶಂಬರಾರಿ-ಮನ್ಮಥ
ಶರಧಿ-೧ ಸಮುದ್ರ ೨ ಬತ್ತಳಿಕೆ
ಶರಭ-ಸಿಂಹಕ್ಕಿಂತ ಹೆಚ್ಚುಬಲವುಳ್ಳ ಎಂಟುಕಾಲಿನ ಕ್ರೂರಮೃಗ
ಶಶಿಕಾಂತ-ಚಂದ್ರಕಾಂತಶಿಲೆ
ಶರ್ವರಿ (ರೀ)-ರಾತ್ರಿ
ಶಾಡ್ವಲ-೧ ಹಸಿ(ರು)ಹುಲ್ಲಿನಿಂದ ತುಂಬಿದ ೨ ಹಸಿರು ಹುಲ್ಲಿನಿಂದ ತುಂಬಿದ ಬಯಲು
ಶಾರ್ಙ್ಗ-ವಿಷ್ಣುವಿನ ಬಿಲ್ಲು
ಶಾಲೀನ-ವಿನಯವುಳ್ಳ
ಶಾಸನ-ಹೇಳುವಿಕೆ, ಹೊಗಳುವಿಕೆ
ಶಿಲೀಮುಖ-೧ ಬಾಣ ೨ ತುಂಬಿ
ಶಿಲೋಚ್ಚಯ-ಪರ್ವತ, ಬೆಟ್ಟ
ಶೀರ್ಷಕ = ಸೀಸಕ -೧ ರುಮಾಲು, ಮುಂಡಾಸು ೨ ಶಿರಸ್ತ್ರಾಣ
ಶುಂಭತ್-೧ ಹೊಳೆಯುವ, ೨ ಗ್ಲಾನಿಗೊಳಿಸುವ ೩ ಸಿಡಿಯುವ
ಶೋಣಿತ-ರಕ್ತ ೨ ಕೆಂಪು
ಶ್ರಯಣೀಯ-ಆಶ್ರಯಿಸತಕ್ಕ
ಶ್ರವ = ಶ್ರವಣ-೧ ಕೇಳುವಿಕೆ ೨ ಕಿವಿ
ಶ್ರಾಂತ-ಬಳಲಿದ, ಆಯಾಸಗೊಂಡ
ಶ್ರಿತ-ಆಶ್ರಯವನ್ನು ಪಡೆದವ, ೨ ಗೌರವ ಕೊಟ್ಟವ, ಸೇವಕ, ಆಶ್ರಿತ
ಶ್ಲಿಷ್ಟ-ಆಲಿಂಗಿತ ೨ ಕೂಡಿದ, ಶ್ಲೇಷಾ(ರ್ಥ)ಲಂಕಾರದಿಂದ ಕೂಡಿದ
ಶ್ರೀ-೧ ಲಕ್ಷ್ಮಿ ೨ಸಂಪತ್ತು, ಐಶ್ವರ್ಯ ೩ ಕಾಂತಿ ೪ ಅಭಿವೃದ್ಧಿ ೫ ಕೀರ್ತಿ ೬ ಶುಭ ೭ ವಿಜಯ ೮ ಕ್ಷೇಮ ೯ ವಿಷ
ಶ್ರೀಕಂಠ-ಶಿವ
ಶ್ರೀಕರ-ಶ್ರೀಯನ್ನುಂಟುಮಾಡುವ, ಶುಭಕರ
ಶ್ರೀಕಾಂತ-ವಿಷ್ಣು
ಶ್ರೀಖಂಡ-ಶ್ರೀಗಂಧ
ಶ್ರೀದ-೧ ಸಂಪತ್ತನ್ನು ಕೊಡುವ ೨ ಕುಬೇರ
ಶ್ರೀನಂದನ-ಮನ್ಮಥ
ಶ್ರೀನಿವಾಸ-೧ ಸಂಪತ್ತಿಗೆ ನೆಲೆಯಾದ ೨ ವಿಷ್ಣು
ಶ್ರೀಮತ್-ಶ್ರೀಯುತ
ಶ್ರೀವತ್ಸ-ವಿಷ್ಣುವಿನ ಎದೆಯ ಮೇಲಿರುವ
ಶ್ರೀವತ್ಸಲಾಂಛನ-ವಿಷ್ಣು, ಕೃಷ್ಣ
ಶ್ರುತ-೧ ಕೇಳಿದ, ತಿಳಿದ ೨ ಜ್ಞಾನ ೩ ಶಾಸ್ತ್ರವೇದ
ಶ್ರೋತ್ರಿಯ-ಶ್ರುತಿ (ವೇದ)ಯನ್ನು ಅರಿತು ಅದರಂತೆ ಕರ್ಮಾಚರಣೆಯುಳ್ಳ ಬ್ರಾಹ್ಮಣ
ಶ್ರೌತ-ಶ್ರುತಿಸಂಬಂಧವಾದ
ಶ್ವೇತವಾಹನ-ಬಿಳಿಯ ವಾಹನವುಳ್ಳವನು, ಅರ್ಜುನ
ಷಟ್-ಆರು
ಷಟ್‌ಪದ-ತುಂಬಿ
ಷಂಡ-೧ ಗುಂಪು, ಸಮೂಹ ೨ ನಪುಂಸಕ
ಷಾಣ್ಮಾತುರ-ಷಡಾನನ, ಕುಮಾರಸ್ವಾಮಿ
ಷೋಡಶ-೧ ಹದಿನಾರು ೨ ಹದಿನಾರನೆಯ
ಸಂ-ಹೆಚ್ಚಾಗಿ, ಚೆನ್ನಾಗಿ, ಪೂರ್ಣವಾಗಿ ಎಂಬ ಅರ್ಥವುಳ್ಳ ಸಂಸ್ಕೃತದ ಉಪ ಸರ್ಗಾವ್ಯಯ ಉದಾ: ಸಂಶುದ್ಧ, ಸಂಪೂರ್ಣ, ಸಂಯೋಗ,
ಸಂಯುಕ್ತ ಸಂಯಮಿ-ಯೋಗಿ, ಇಂದ್ರಿಯಗಳನ್ನು ನಿಗ್ರಹಿಸಿದವನು.
ಸಂವ್ಯಾನ-ಉತ್ತರೀಯ, ಮೇಲುಹೊದಿಕೆ
ಸಂಹನನ-೧ ದೇಹ ೨ ಕೊಲ್ಲುವಿಕೆ, ಹೊಡೆಯುವಿಕೆ
ಸಕ್ಕದ-(ತದ್ಭವ ಶಬ್ದ) ಸಂಸ್ಕೃತ
ಸಕ್ಕಿ-ಸಾಕ್ಷಿ
ಸಗಾಢ = ಸಗಾಡಿಕೆ - ಪ್ರಾಬಲ್ಯ ೨ ವೇಗ, ರಭಸ ೩ ಶೌರ್ಯ, ಸಾಹಸ
ಸಂಕ್ರಂದನ = ಇಂದ್ರ ೨ ಬೊಬ್ಬೆ, ಅಳುವಿಕೆ
ಸಂಚು-೧ ತಂತ್ರ, ಯುಕ್ತಿ, ರೋಸ ೩ ಕೌಶಲ
ಸತ್-೧ ಇರುವ ೨ ಒಳ್ಳೆಯ ೩ ಸತ್ಯ
ಸತೀರ್ಥ್ಯ-ಸಹಪಾಠಿ, ಸಂಗಡ ವಿದ್ಯಾಭ್ಯಾಸ ಮಾಡುವವ

ಸನ್ನಿಕೃಷ್ಟ-೧ ಪಕ್ಕದಲ್ಲಿ (ಹತ್ತಿರ) ಇರುವ ೨ ನೆರೆಹೊರೆ
ಸಮವಾಯ-೧ ಅನೇಕ ವಸ್ತುಗಳು ಒಂದಾಗಿ ಕೂಡಿರುವ ಸ್ಥಿತಿ ೨ ಸಮೂಹ
ಸಮಾಧಿ-೧ ಧ್ಯಾನ ೨ ಚಿತ್ತೈಕಾಗ್ರತೆ ೩ ಅಷ್ಟಾಂಗ ಯೋಗದ ಕಡೆಯ ಸ್ಥಿತಿ ೪ ಗೋರಿ
ಸಮಾರಂಭ-೧ ಉತ್ಸವ ೨ ಪ್ರಾರಂಭ ೩ ವಿಜೃಂಭಣೆ
ಸಮೀಕ-ಯುದ್ಧ, ಕಾಳಗ
ಸಾಚಿ-ಓರೆ, ವಕ್ರ
ಸಿಂಪಿಗ, ಚಿಪ್ಪಿಗ-ಬಟ್ಟೆಯನ್ನು ಹೊಲಿಯುವವ
ಸೀರ-ನೇಗಿಲು
ಸೀರಪಾಣಿ-ಬಲರಾಮ
ಸೀರುಂಬುಳಾಡು-ಚುಮುಕಿಸು, ಎರಚಾಡು
ಸೂಳಯ್ಸು, ಸೂಳಯಿಸು-ಘೋಷಿಸು, ಗಟ್ಟಿಯಾಗಿ ಶಬ್ದಮಾಡು, ವಾದ್ಯಬಾರಿಸು
ಸೈಪು-ಪುಣ್ಯ
ಸೈರಿಭ-ಕಾಡುಕೋಣ
ಸೈವರಿ-ನೇರವಾಗಿ (ನೆಟ್ಟಗೆ) ಓಡು,ಚಲಿಸು
ಸೋಗೆ-ಗಂಡುನವಿಲು
ಸೋಪಾನ-ಮೆಟ್ಟಿಲು
ಸೌಜನ್ಯ-೧ ಔದಾರ್ಯ, ಒಳ್ಳೆಯತನ ೩ ದಯಾಲುತೆ
ಸೌದಾಮಿನಿ (ನೀ)-ಮಿಂಚು
ಸೌಮಿಲ್ಲದ-ಕಂಚುಕಿ (ರಾಣಿ ವಾಸದ ವೃದ್ಧ ಸೇವಕ)
ಸೌರಭೇಯಿ (ಯೀ) ಹಸು-ಆಕಳು
ಸ್ಫುರಣ-೧ ನಡುಗು (ಅದಿರು) ವಿಕೆ ೨ ಹಾರುವಿಕೆ ೩ ಹೊಡೆಯುವಿಕೆ ೪ ಕಂಪನ ೫ ಮಿಂಚುವಿಕೆ, ಹೊಳೆಯುವಿಕೆ ೬ ಮನಸ್ಸಿಗೆ ತೋರುವಿಕೆ
ಸ್ಮೇರ-೧ ಮುಗುಳ್ನಗುವ, ಮೆಲ್ಲಗೆ ನಗುವ ೨ ಅರಳಿದ
ಸ್ವಚ್ಛಂದ-ತಡೆಯಿಲ್ಲದೆ ಮನಸ್ಸು ಬಂದಂತೆ ನಡೆಯುವ, ಸ್ವೇಚ್ಛಾಚಾರದ, ಸ್ವತಂತ್ರದ
ಸ್ವಸ್ತಿ-ಶುಭವಚನ, ಆಶೀರ್ವಾದ, ಕ್ಷೇಮ
ಹಗರಣ-೧ ಹರಟೆ ೨ ಜಗಳ, ಕಲಹ ೩ ತಿರುಳಿಲ್ಲದ ಮಾತು
ಹದಿಟೆ-(ಪ್ರತಿಷ್ಠಾ. ಸಂ) ನೆಲೆಗೊಳಿಸುವಿಕೆ
ಹಯಗ್ರೀವ-೧ ವಿಷ್ಣುವಿನ ಒಂದು ಅವತಾರ ೨ ಕೃಷ್ಣನೊಡನೆ ಯುದ್ಧಮಾಡಿದ ಒಬ್ಬ ರಾಕ್ಷಸ
ಹರಿ (ಸಂಸ್ಕೃತನಾಮವಾಚಕವಾದರೆ)-
೧ ಕೃಷ್ಣ, ವಿಷ್ಣು ೨ ಬ್ರಹ್ಮ ೩ ಇಂದ್ರ ೪ ಚಂದ್ರ ೫ ಸೂರ್ಯ ೬ ಕಿರಣ ೭ ಕುದುರೆ ೮ ಗಿಳಿ ೯ ಕಪಿ ೧೦ ಕಪ್ಪೆ ೧೧ ವಾಯು ೧೨ ಹಾವು ೧೩ ಯಮ
ಹರಿ (ಧಾತುವಾದರೆ)-೧ ಓಡು, ಓಡಿ ಹೋಗು ೨ (ನೀರು) ಪ್ರವಹಿಸು ೩ (ಬಟ್ಟೆ ಕಾಗದಗಳನ್ನು) ಸೀಳು, ತುಂಡುಮಾಡು
ಹರಿಗೆ-ಗುರಾಣಿ
ಹರಿಣ-ಜಿಂಕೆ, ಹುಲ್ಲೆ
ಹರಿತ್-ದಿಕ್ಕು ೨ ಹಸುರುಬಣ್ಣ
ಹರಿಬ-೧ ಕೂಟ ೨ ಕೆಲಸ ೩ ಕಾರ್ಯ ಸಂಬಂಧ
ಹರಿಸ = ಹರ್ಷ-ಸಂತೋಷ
ಹರಿಹಯ-ಇಂದ್ರ
ಹರ್ಮ್ಯ-೧ ಉಪ್ಪರಿಗೆ, ೨ ಅರಮನೆ
ಹಲ-ನೇಗಿಲು
ಹಲಧರ-ಬಲರಾಮ
ಹಲಾಯುಧ - ಬಲರಾಮ
ಹಲ್ಲಣ-ಜೀನು
ಹಳಚಿಕೆ-ಹೊಳಪು, ಪ್ರಕಾಶ
ಹೆಕ್ಕಳಿಸು-ಹರ್ಷಭರಿತವಾಗು, ಹಿಗ್ಗು
ಹೇಮ-ಚಿನ್ನ
ಹೇಯ-೧ ತ್ಯಾಜ್ಯ, ಬಿಡಬೇಕಾದುದು ೨ ಅಸಹ್ಯ
ಹೋತಾ-ಹೋತಾರ-ಹೋತೃ-ಯಜ್ಞದಲ್ಲಿ ಹೋಮ ಮಾಡುವವನು, ಆಹುತಿ ಕೊಡುವವ
ಹ್ಲಾದಿನೀ-೧ ನದಿ ೨ ಮಿಂಚು ೩ ವಜ್ರಾಯುಧ
ಹ್ಲಾದ-ಆಹ್ಲಾದ, ಸಂತೋಷ

